ಪರಿಶುದ್ಧ ಮಾನವತಾ ಆಶಯ ಮಾತ್ರದಿಂದ ಪ್ರೇರಿತವಾದ ಗತಿಶೀಲ ಲೋಕದೃಷ್ಟಿಯನ್ನು
ಈ ವೈಚಾರಿಕ ಕೃತಿಗಳು ಮನವರಿಕೆ ಮಾಡಿಕೊಡುವಂಥ ಸತ್ತ್ವದಿಂದ ಕೂಡಿರುತ್ತವೆ




ರೂ. 35




ರೂ. 27




ರೂ. 40




ರೂ. 45




ರೂ. 180




ರೂ. 25




ರೂ. 25




ರೂ. 25




ರೂ. 18

ನವಕರ್ನಾಟಕ
ಮಳಿಗೆಗಳಲ್ಲಿ ಹಾಗೂ ಇತರ
ಪ್ರಮುಖ ಪುಸ್ತಕ
ವ್ಯಾಪಾರಿಗಳಲ್ಲಿ ಲಭ್ಯ




ರೂ. 25

## ಡಿ. ವಿ. ಕೆ. ಮೂರ್ತಿ

ಪ್ರಕಾಶಕರು

ಕೃಷ್ಣಮೂರ್ತಿಪುರಂ, ಮೈಸೂರು-570 004

ದೂರವಾಣಿ: 2331484




ಸಂಪುಟ-೬ ಸಂಚಿಕೆ-೬ ಜನವರಿ ೨೦೦೫



**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com

# ಸಂಪಾದಕೀಯ

ಇದು ನಮ್ಮ ಐದನೆಯ ವಿಶೇಷಾಂಕ. ನಮ್ಮ ಮುಂದಿರುವ ಅನೇಕ ಪ್ರಮುಖ ವಿಷಯಗಳ ಬಗ್ಗೆ ಗಂಭೀರ ಚರ್ಚೆ ನಡೆಯಬೇಕೆಂಬ ಆಶಯವನ್ನು ಹೊತ್ತು ಈ ಬಾರಿಯೂ ಕೆಲವು ವಿಶಿಷ್ಟ ಪ್ರಯತ್ನಗಳನ್ನು ನಡೆಸಲಾಗಿದೆ. ಓದುಗರು ಮತ್ತು ಲೇಖಕರನ್ನು ಭಿನ್ನವೆಂದು ಎಣಿಸದೆ ಎಲ್ಲರೂ ಎರಡೂ ಪಾತ್ರಗಳನ್ನು ನಿರ್ವಹಿಸುವಂತಿರಬೇಕೆಂಬ ನಮ್ಮ ಉದ್ದೇಶವನ್ನು ಮುಂದುವರಿಸಿದ್ದೇವೆಂಬ ಭಾವನೆ ನಮ್ಮದು. ಉನ್ನತ ಪೀಠದಲ್ಲಿ ಕುಳಿತು ಬೋಧನೆ ಮಾಡುವಂತಹ ಲೇಖಕರು ಸಮಸ್ತರೊಡನೆ ಬೆರೆತು ಕ್ರಿಯೆಯಲ್ಲಿ ಪಾಲ್ಗೊಳ್ಳುವುದಿಲ್ಲವಾದ್ದರಿಂದ ಅವರ ಅನಿಸಿಕೆಗಳು ಹಲವೊಮ್ಮೆ ಪ್ರಸ್ತುತತೆಯನ್ನು ಕಳೆದುಕೊಂಡುಬಿಡುತ್ತವೆ. ವಿಶ್ಲೇಷಣೆಗಿಂತಲೂ ಅಲ್ಲಿ ಅಧಿಕಾರಯುತ ವಾಣಿಗೆ ಹೆಚ್ಚಿನ ಪ್ರಾಶಸ್ತ್ಯ. ಓದುಗರು ಯಾವಾಗಲೂ ಇಂತಹ ಧೀಮಂತರಿಂದ ನಡೆಸಲ್ಪಡುತ್ತಿರಬೇಕೆಂಬ ಮಾತು ಅಪಥ್ಯಕರ. ತಾವೇ ಸ್ವತಃ ಯಾವುದೇ ಸನ್ನಿವೇಶವನ್ನು ತಾರ್ಕಿಕವಾಗಿ ಮತ್ತು ಮಾನವತೆಯ ನೆಲೆಯಲ್ಲಿ ನಿಂತು ಅರ್ಥೈಸಲು ಸಮರ್ಥರಾಗುವುದು ನಮ್ಮ ಓದುಗರಿಂದ ನಮಗಿರುವ ನಿರೀಕ್ಷೆ. ನಮ್ಮ ಓದುಗರೇ ನಮ್ಮ ಲೇಖಕರು ಹಾಗೂ ವಿಮರ್ಶಕರು ಮತ್ತು ನಮ್ಮ ಲೇಖಕರು ಇತರರ ಲೇಖನಗಳ ಬಗ್ಗೆ ಉಪೇಕ್ಷೆ ಬೆಳೆಸಿಕೊಳ್ಳುವಂಥವರಲ್ಲ; ಅವರೂ ಓದುಗರೇ. ಆರು ವರ್ಷಗಳಿಂದ 'ಹೊಸತು' ಈ ನಿಟ್ಟಿನಲ್ಲಿ ಕೆಲಸ ಮಾಡುತ್ತಾ ಬಂದಿದೆ. ಈ ವರ್ಷದ ವಿಶೇಷ ಸಂಚಿಕೆಯು ತನ್ನ ದಿಕ್ಕನ್ನು ಬದಲಾಯಿಸದೆ ಇನ್ನೂ ನಾಲ್ಕು ಹೆಜ್ಜೆ ಮುಂದೆ ಸರಿದಿದೆಯೆಂಬ ನಂಬಿಕೆ ಸರಿಯಾದರೆ ಅದೇ ನಮ್ಮ ಹೆಗ್ಗಳಿಕೆ. ಇದನ್ನು ನಾವೆಲ್ಲಾ ಒಟ್ಟಿಗೆ ಸಾಧಿಸುತ್ತಿರುವುದು. ಆದ್ದರಿಂದ ಪರಸ್ಪರ ಶುಭ ಹಾಗೂ ಯಶಸ್ಸನ್ನು ಕೋರುವುದು ಸಮಂಜಸವೆನಿಸುತ್ತದೆ. ಹೊಸ ವರ್ಷವನ್ನು ಚೈತನ್ಯದಾಯಕವಾಗಿರುವಂತೆ ಮಾಡಲು ಒಟ್ಟಿಗೆ ಶ್ರಮಿಸೋಣವೆಂಬುದು ನಮ್ಮ ಧ್ಯೇಯ ವಾಕ್ಯವಾಗಿರಲಿ. ಈ ಸಂಚಿಕೆಯ ಲೇಖಕರಿಗೆ, ಓದುಗರಿಗೆ, ಜಾಹಿರಾತುದಾರರಿಗೆ ಮತ್ತು ನವಕರ್ನಾಟಕದ ಎಲ್ಲ ಶ್ರಮಿಕ ಬಂಧುಗಳಿಗೆ 'ಹೊಸತು' ತನ್ನ ಕೃತಜ್ಞತೆಯನ್ನು ಸಲ್ಲಿಸುತ್ತದೆ.

*  *  *

ವರ್ಷ ಕಳೆಯುತ್ತಿದ್ದಂತೆ ಆರು ದಶಕಗಳ ಕಾಲ ಸಂಗೀತ ಸಾಮ್ರಾಜ್ಯದಲ್ಲಿ ಅನಿಶವಾಗಿ ನಾದತನುವನ್ನು ಅನುಭವಿಸಿ ಇತರರಿಗೂ ಮಹತ್ತರ ಅನುಭವ ನೀಡುತ್ತಿದ್ದ ಎಂ. ಎಸ್. ಸುಬ್ಬುಲಕ್ಷ್ಮಿಯವರು ಅಸ್ತಮಿಸಿದರು. ಅವರು ವೆಂಕಟೇಶ ಸುಪ್ರಭಾತ, ಭಜ ಗೋವಿಂದಂ, ಮೀರಾ ಭಜನೆ ಇತ್ಯಾದಿಗಳನ್ನು ಹಾಡಿ ಸಕಲರ ಮನವನ್ನೂ ತಣಿಸುತ್ತಿದ್ದರೆಂಬುದನ್ನು ನಮ್ಮ ಪತ್ರಿಕೆಗಳು ಅತಿಯಾಗಿ ಶ್ಲಾಘಿಸಿವೆ. ಅದಷ್ಟೇ ಆಗಿದ್ದಿದ್ದರೆ ಅವರೂ ನೂರರಲ್ಲಿ ಒಬ್ಬರಾಗಿಬಿಡುತ್ತಿದ್ದರು. ರಾಮಭಕ್ತಿ ಸಾಮ್ರಾಜ್ಯದಲ್ಲಿ ವಿಹರಿಸಲು ಸರ್ವಥಾ ಅಶಕ್ತರಾದ ಅಯೋಧ್ಯಾ ವೀರರ ನಮ್ಮ ನಾಡಿನಲ್ಲಿ ಶ್ರೀ ರಾಮನ ಕೀರ್ತಿಯನ್ನು ಎತ್ತಿಹಿಡಿಯುವವರೆಲ್ಲಾ ಅದ್ವಾನಿ – ಉಮಾ ಭಾರತಿ ಜೊತೆ ಸಮೀಕರಿಸಿಕೊಳ್ಳಬೇಕಾಗಿಲ್ಲವೆಂಬುದರ ಪ್ರತೀಕವಾಗಿ ಉಳಿದದ್ದು ಸುಬ್ಬುಲಕ್ಷ್ಮಿಯವರ ಒಂದು ಸಾಧನೆ. ವೈಜಯಂತಿ ಮಾಲಾ ಅಂಥವರಿಗೆ ಅದು ಸಾಧ್ಯವಾಗಿಲ್ಲ. ಗಂಡ ಸದಾಶಿವ ನಿಜಕ್ಕೂ ಸದಾ ಶಿವ (ಅಂದರೆ ಶುಭ) ತರುವಂತಹ ವ್ಯಕ್ತಿತ್ವವನ್ನು ಹೊಂದಿರದೆ ಒಂದು ರೀತಿಯ ಅಪ್ರಕಟಿತ ಸರದಾರನಾಗಿದ್ದಾಗ್ಲೂ, ಸುಬ್ಬುಲಕ್ಷ್ಮಿಯವರು ಸಹನೆಯ ಮುದ್ದೆಯಾಗಿ, ಮೌನ ಸಾಧ್ವೀಮಣಿಯಾಗಿ, ಅತ್ಯದ್ಭುತ ಶಾಂತಿಯ ಚಿಲುಮೆಯಾಗಿ ಕಂಗೊಳಿಸಿದ್ದು ಒಂದು ದೊಡ್ಡ ವಿಶೇಷ. ಆಕೆಯ ಮನಸ್ಸಿನಲ್ಲಿ ಅವರ ಸನ್ನಿವೇಶ ಕುರಿತಂತೆ ಎಂತೆಂತಹ ಭಾವನೆಗಳು ಹಾದುಹೋಗಿದ್ದುವೋ ಹೇಳಬರುವುದಿಲ್ಲ. ನಾದ ಸುಧಾರಸದ ಅನುಸಂಧಾನದಲ್ಲಿ ತಲ್ಲೀನರಾಗಿ ಸದಾಶಿವರಂಥವರನ್ನು ತಣಿಸಲು ಅವರು ಶಕ್ತರಾದರೇನೋ ಎನಿಸುತ್ತದೆ. ಅವರಿಗಿಂತ ವಿದ್ವತ್ತಿನಲ್ಲಿ ಹಿರಿಯರಾದವರು ಅನೇಕರಿದ್ದಾರೆ. ಅವರ ಹಿನ್ನೆಲೆಗಿಂತಲೂ ಹೆಚ್ಚು ಕಠಿಣವಾದ ಹಿನ್ನೆಲೆಯಿಂದ ಬಂದು ಸಂಗೀತ ಶಿಖರಕ್ಕೇರಿರುವ ಪಟ್ಟಮ್ಮಾಳ್ ಅವರಂತಹವರೂ ಇದ್ದಾರೆ. ಆದರೆ ಜನಮನದಲ್ಲಿ ಎಂ. ಎಸ್. ಅವರು ಗೆದ್ದುಕೊಂಡ ಸ್ಥಾನ ಅಪ್ರತಿಮವಾದುದು. ಅವರು



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨



ಬೇರೆಯ ಭಾಷೆಯನ್ನು ಬಿಟ್ಟು ಕೇವಲ ಕನ್ನಡದ ಹಾಡುಗಳನ್ನು ಮಾತ್ರವೇ ಹಾಡಲಿಲ್ಲವೆಂದು ಉಗ್ರರಾದವರು ಸಹ ಎಂ. ಎಸ್. ಗತಿಸಿದಾಗ ಪರಿತಪಿಸಿದ್ದಾರೆಂದು ಭಾವಿಸಬಹುದು. ಸುಬ್ಬುಲಕ್ಷ್ಮಿಯವರಿಗೆ 'ಹೊಸತು' ತನ್ನ ನಮ್ರ ಗೌರವವನ್ನು ಸೂಚಿಸುತ್ತದೆ.

* * *

ತಾವು ಆರಾಧಿಸುತ್ತಿದ್ದ ಕಂಚಿ ಸ್ವಾಮಿಗಳ ಸ್ಥಾನದಲ್ಲಿ ಈಗ ಇತಿಹಾಸಪುರುಷನಾಗಿರುವ ಜಯೇಂದ್ರ ಪಡೆದಿರುವ ಪ್ರಚಾರವನ್ನು ಎಂ. ಎಸ್. ಅವರು ಕಡೆಯ ದಿನಗಳಲ್ಲಿ ಕೇಳಿ ಕೇವಲ ಅಶೂರರಾಗಿದ್ದಿರಬೇಕು. ಆದರೆ ಸ್ವಾಮಿಗಳ ಶಿಷ್ಯವೃಂದ ಪುಟಗಟ್ಟಲೆ ಜಾಹಿರಾತುಗಳನ್ನು ನೀಡಿ ಕಂಚಿ ಮಠದ ಸಾಧನೆಗಳನ್ನು ವಿವರಿಸಿ ಹೇಳುತ್ತಿದ್ದಾರೆ. ಆಸ್ಪತ್ರೆ, ಶಾಲೆ, ಕಾಲೇಜು ಇತ್ಯಾದಿಗಳನ್ನು ಎಷ್ಟು ಭಾರಿ ಪ್ರಮಾಣದಲ್ಲಿ ಕಂಚಿ ಮಠವು ಸ್ಥಾಪಿಸಿದೆಯೆಂಬ ಯಾದಿಯನ್ನು ನೀಡಲಾಗಿದೆ. ಈ ಅಬ್ಬರದ ಪ್ರಚಾರ ಬೇಕಿರಲಿಲ್ಲ, ಏಕೆಂದರೆ ಅದನ್ನೆಲ್ಲಾ ಇಲ್ಲವೆಂದು ಯಾರೂ ಆಗ್ರಹಿಸಿರಲಿಲ್ಲ. – ಅವನ್ನೆಲ್ಲಾ ಮಾಡಿದ್ದು ಶಂಕರರಾಮನ ಕೊಲೆಗೆ ನೀಡಿದ್ದರೆನ್ನಲಾದ ಕುಮ್ಮಕ್ಕನ್ನು ಸಮರ್ಥಿಸಲು ಸಾಮಗ್ರಿಯಾಗುತ್ತದೆಯೆ? ಈ ಶಂಕರರಾಮನ ಪೂರ್ವಾಶ್ರಮವನ್ನು ಇನ್ನೂ ವಿವರವಾಗಿ ತಿಳಿಯಬೇಕಾಗಿದೆ. ಶೈವಮಠದಲ್ಲಿದ್ದ ಅಧಿಕಾರಿಯೊಬ್ಬನನ್ನು ವೈಷ್ಣವ ದೇವಾಲಯದ ನೇತಾರರು ತಮ್ಮಲ್ಲಿ ಸೇರಿಸಿಕೊಂಡಿದ್ದು ಹೇಗೆ? ಅಲ್ಲಿ ಸೇರಿಕೊಂಡು ಪತ್ರಗಳನ್ನು ಬರೆದು ಖ್ಯಾತಿ ಪಡೆಯುತ್ತಿದ್ದ ಶಂಕರರಾಮನಿಗೆ ವರದರಾಜ ಪೆರುಮಾಳ್‌ದು ಬೆಂಬಲ ಎಷ್ಟರಮಟ್ಟಿಗಿತ್ತು? ಇದು ಕೇವಲ ಪತ್ರ ಪ್ರಮಾದದಿಂದಾದ ಪರಿಣಾಮವೋ ಸಂಪತ್ತಿನ ಶೇಖರಣೆಗೆ ಸಂಬಂಧಿಸಿದ ಪ್ರಶ್ನೆಯೋ ಎಂಬ ಕುತೂಹಲ ಸದ್ಯಕ್ಕೆ ತಣಿಯುವಂಥದಲ್ಲ. ಜಯೇಂದ್ರರು ನಡಿಗೆಯಲ್ಲಿ ಮೂರು ಸಾವಿರ ಹಳ್ಳಿ-ಪಟ್ಟಣಗಳನ್ನು ಸುತ್ತಿ ಹತ್ತು ಲಕ್ಷ ಕಿಲೋಮೀಟರಿಗೂ ಹೆಚ್ಚು ದೂರವನ್ನು ಕ್ರಮಿಸಿದ್ದರೆಂದು ಜಾಹಿರಾತೊಂದರಲ್ಲಿ ಕಂಚಿ ಶಿಷ್ಯರು ಪ್ರಕಟಿಸಿದ್ದಾರೆ. ಹಾಗೆ ಕಾಲುನಡಿಗೆ ಮಾಡಿದ್ದು ಹತ್ಯೆಯ ಸಂಚಿನಲ್ಲಿ ಭಾಗಿಯಾಗುವುದಕ್ಕೆ ಅರ್ಹತೆ ನೀಡುವುದಾದರೆ ಚಾರಣ ಕೈಗೊಳ್ಳುವವರನ್ನೆಲ್ಲಾ ಅನುಮಾನದಿಂದ ನೋಡಬೇಕಾದೀತು! ಪ್ರತಿದಿನ ಇಪ್ಪತ್ತು ಕಿಲೋಮೀಟರಿನಂತೆ ನಲವತ್ತು ವರ್ಷ ನಡೆದರೂ ಮೂರು ಲಕ್ಷ ಕಿ.ಮೀ. ಮೀರಲಾಗುವುದಿಲ್ಲವೆಂಬ ಸರಳ ಲೆಕ್ಕವನ್ನೂ ತಿಳಿಯದ ಶಿಷ್ಯರನ್ನು ಹೊಂದಿರುವ ಸ್ವಾಮಿಗಳೇ ಧನ್ಯರು! ಹೊಸ ವರ್ಷದಲ್ಲಿ ಸ್ವಾಮಿಗಳಿಗೆ ಜಾಮೀನು ಸಿಗುತ್ತದೇನೋ ಕಾದು ನೋಡೋಣ. ಆಗ ಅವರು ಬೇರೆ ಸಂಚುಗಳಲ್ಲಿ ತೊಡಗುತ್ತಾರೋ ಅಥವಾ ಪಾದಯಾತ್ರೆ ಕೈಗೊಳ್ಳುತ್ತಾರೋ ತಿಳಿಯುತ್ತದೆ.

* * *

'ಸ್ವಾಮಿಗಳು ಏನು ಮಾಡಿದ್ದರೂ ಅವರು ದೈವಾಂಶಸಂಭೂತರೇ' ಎಂದು ಗಟ್ಟಿಯಾಗಿ ಕೂಗುತ್ತಾ ಮುಖ ಮತ್ತಿತರ ಅಂಗಗಳನ್ನು ಕೆಂಪಾಗಿಸಿಕೊಳ್ಳುವ ಅದ್ವಾನಿಯವರು ಸ್ವತಃ ತಾವೂ ಭಗವಂತನಿಂದ ನೇಮಕಾತಿ ಪಡೆದಿರುವರೆಂಬ ಗೂಢಸತ್ಯವನ್ನು ಹೊರಗೆಡಹಿದ್ದಾರೆ. ನಮ್ಮ ದೇಶವನ್ನು ಮುನ್ನಡೆಸಲು ದೇವರು ಅವರ ಪಕ್ಷವನ್ನು ಆಯ್ಕೆ ಮಾಡಿದ್ದೆಂದು ಅದ್ವಾನಿ ಹೇಳಿದ್ದಾರೆ. ದೇವರು ಇಷ್ಟು ಕ್ರೂರಿ ಮತ್ತು ಅಜ್ಞಾನಿಯೆಂದು ತಿಳಿದಿರಲಿಲ್ಲ, ಅವನು ಆ ಗುಣಗಳನ್ನು ಹೊಂದಿಲ್ಲದಿದ್ದರೆ ದ್ವೇಷದ ಖನಿಗಳನ್ನೇಕೆ ಆಯ್ಕೆ ಮಾಡಿ ನಮ್ಮ ದೇಶಕ್ಕೆ ಪಿಡುಗಿನ ಬೆಂಕಿ ಸುರಿಸಬೇಕಾಗಿತ್ತು! ಹಿಂದೆ ಬ್ರಿಟಿಷರು ದೈವೇಚ್ಛೆಯಂತೆ ''ಭಾರ ಹೊರುವ ಬಿಳಿಯರ ಜವಾಬ್ದಾರಿ''ಯನ್ನು ತಮ್ಮದಾಗಿಸಿಕೊಂಡಿದ್ದರು; ಈಗ ಅದ್ವಾನಿಯವರ ಸರದಿ. ಹಿಂದುತ್ವದಿಂದ ದೇವತ್ವಕ್ಕೆ ಜಿಗಿದಿರುವ ಇವರ ನೇಹಿಗ ಕಲ್ಯಾಣ ಸಿಂಗ್ ಕೂಡ ದೇವರ ಆಪ್ತನಾಗಿದ್ದಾನೆ. ಅಯೋಧ್ಯೆಯಲ್ಲಿ ಮಸೀದಿಯನ್ನು ಉರುಳಿಸಿದ್ದು ಸ್ವತಃ ದೇವರೇ ಅಂತೆ! ಅವನಿಗೆ ಇನ್ನಾವ ಪ್ರಯೋಜನಕಾರಿ ಉದ್ಯೋಗವೂ ಇರಲಿಲ್ಲವೇನೋ, ಏನು ಮಾಡುವುದು? ಹಿಂದೆ ವಿಶ್ವ ಫುಟ್ಬಾಲ್ ಪಂದ್ಯಾವಳಿಯೊಂದರಲ್ಲಿ ಗೋಲು ಹೊಡೆದಿದ್ದ ಮರಡೋನಾ ಚೆಂಡನ್ನು ಕೈಯ್ಯಿಂದ ಮುಟ್ಟಿದ್ದನೆಂಬ ಆಪಾದನೆ ಇದ್ದಾಗ ಉತ್ತರವಾಗಿ ಅವನೆಂದಿದ್ದ: ''ಅದು ದೇವರ ಕೈ'' ಎಂದು. ಅದ್ವಾನಿ – ಕಲ್ಯಾಣರು ಬಹುಶಃ ದೇವರ ಬೆಂಬಲ ಪಡೆದದ್ದು ಬುಷ್ ಪ್ರೇರಣೆಯಿಂದಲೇ ಇರಬೇಕು. ಏಕೆಂದರೆ ಮೊದಲಿನಿಂದಲೂ ''ದೇವರು ನನ್ನ ಕಡೆ'' ಎಂದು ಆತ ಹೇಳುತ್ತಲೇ ಬಂದಿದ್ದಾನೆ. ನಮ್ಮ ದೇಶದ ಜನ ಹಿಂದೆ ಇಟ್ಟಿಗೆಯ ಮೋಹದಲ್ಲಿ ಸಿಲುಕಿದ್ದಂತೆ ಈಗ ದೇವರ ಪ್ರಭೆಯಿಂದ ವಂಚಿತರಾಗುತ್ತಾರೆಂದು ಅದ್ವಾನಿ ಭಾವಿಸಿದ್ದಾರೆ. ಅಂತಹ ಗೊಂದಲಕ್ಕೆ ಅವಕಾಶವಿಲ್ಲವೆಂಬುದನ್ನು ಭಾರತದ ನಾಗರಿಕರು ಸಾಬೀತುಪಡಿಸಬೇಕಾಗಿದೆ.

ಇನ್ನು ಮುಂದೆ ಅವರ ಪಕ್ಷ ಚುನಾವಣೆಯಲ್ಲಿ ಸೋತರೆ ಅದ್ವಾನಿಯವರು ಹತಾಶರೂ ಅಧೀರರೂ ಆಗಬೇಕಾಗಿಲ್ಲ, ಏಕೆಂದರೆ ಅವರ ಮಾರ್ಗದರ್ಶಿ ಬುಷ್, ಸೋತವರು ಹೇಗೆ ಗೆದ್ದವರಾಗಬಹುದೆಂಬುದನ್ನು ಪ್ರಾಯೋಗಿಕವಾಗಿ ಸೆರ್ಬಿಯ, ಜಾರ್ಜಿಯ ಮತ್ತು ಉಕ್ರೈನಿನಲ್ಲಿ ತೋರಿಸಿಕೊಟ್ಟಿದ್ದಾನೆ. ಅವನನ್ನು ನಂಬಿ ಕೆಟ್ಟವರಿಲ್ಲ, ಲಕ್ಷಗಟ್ಟಲೆ ಡಾಲರುಗಳನ್ನು ಹರಿಬಿಟ್ಟು ಸೋತವರು ಗೆಲ್ಲುವಂತೆ ಮಾಡುವುದನ್ನು ಬುಷ್ ಸಿದ್ಧಿಸಿಕೊಂಡಿದ್ದಾನೆ. ಇರಾಕಿನಲ್ಲಿ ಮಾಡಿದಂತೆ ಸೈನ್ಯ ತಂದು, ಒಂದು ಲಕ್ಷಕ್ಕೂ ಹೆಚ್ಚು ನಾಗರಿಕರನ್ನು ಕೊಂದು, ''ಪ್ರಜಾಪ್ರಭುತ್ವ'' ಸ್ಥಾಪಿಸುವುದು ಒಂದು ಕ್ರಮ; ಚುನಾವಣೆಯಲ್ಲಿ ಸೋತವರನ್ನು ಗೆಲ್ಲಿಸಲು ಜನರ ಹುಚ್ಚು ಹೊಳೆಯನ್ನು ಕೃತಕವಾಗಿ ನಿರ್ಮಿಸುವುದು ಇನ್ನೊಂದು ಕ್ರಮ. ಈ ಬಾರಿ ಉಕ್ರೈನಿನಲ್ಲಿ ಸುಮಾರು ಏಳು ಕೋಟಿ ಡಾಲರುಗಳನ್ನು ಅಮೆರಿಕಾ ಹಂಚಿತೆಂದು ಹೇಳಲಾಗಿದೆ. ಬಹಿರಂಗವಾಗಿಲ್ಲದಿರುವುದು ಇನ್ನಷ್ಟು ಕೋಟಿಗಳಿರುತ್ತವೆ. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಇತಿಹಾಸ ಪ್ರಾಧ್ಯಾಪಕನಾಗಿರುವ ಮಾರ್ಕ್ ಆಲ್‌ಮಂಡ್ ಅಧಿಕೃತವಾಗಿ ಇದನ್ನು ಪ್ರಕಟಿಸಿದ್ದಾನೆ. ಈತ ಹೇಳುವುದನ್ನು ನಂಬಬೇಕು; ಏಕೆಂದರೆ, ಒಂದು ದಶಕದ ಹಿಂದೆ ಗೊರ್ಬಚೇವ್ – ಯೆಲ್ಟ್ಸಿನ್ ಎಂಬ ಪಾತಕಿಗಳು ಸೋವಿಯೆತ್ ಒಕ್ಕೂಟವನ್ನು ನಾಶಗೊಳಿಸಲು ಹೊರಟಾಗ ಅವರ ಬೆಂಬಲಕ್ಕೆಂದು ಅಮೆರಿಕಾದ ಗೂಢಚಾರ ಸಂಸ್ಥೆಯಿಂದ ನೇರವಾಗಿ ಹಣ ಪಡೆದು ಅದನ್ನು ಸೋವಿಯೆತ್ ನಾಡಿನ ''ಬುದ್ಧಿಜೀವಿ – ಪ್ರಜಾ ಪ್ರಭುತ್ವವಾದಿ''ಗಳ ಜೇಬಿಗೆ ತುಂಬಿದ್ದವನು ಈತ. ಅಂದು ತಾನು ಇದರಲ್ಲಿ ಭಾಗಿಯಾಗಿದ್ದುದನ್ನು ಸ್ವತಃ ತಾನೇ ಒಂದು ಲೇಖನದಲ್ಲಿ ಬರೆದು ಉಪಕರಿಸಿದ್ದಾನೆ ಈ ಆಲ್ಮಂಡ್. ಅಮೆರಿಕಾದ ಕೋಟ್ಯಾಧಿಪತಿ ಜಾರ್ಜ್ ಸೋರಸ್ ಎಂಬಾತ ''ಮುಕ್ತ ಸಮಾಜದ ಪ್ರತಿಷ್ಠಾನ''ವೆಂಬ ಸಂಸ್ಥೆಯನ್ನು ಸ್ಥಾಪಿಸಿ ಅದರ ಮುಖಾಂತರ ಅಮೆರಿಕಾ, ಸ್ವೀಡನ್, ಮತ್ತಿತರ ರಾಷ್ಟ್ರಗಳಿಂದ ಸೋವಿಯೆತ್ ಒಕ್ಕೂಟದೊಳಕ್ಕೆ ಡಾಲರುಗಳನ್ನು ತುಂಬಿಸಿದ್ದನಂತೆ. ಇದೆಲ್ಲಾ ನಮಗೆ ಬಹಳ ಪ್ರಸ್ತುತ. ಏಕೆಂದರೆ ಸೋತರೂ ಗೆಲ್ಲುವ ಮಹಾನ್ ''ಪ್ರಜಾಪ್ರಭುತ್ವವಾದಿಗಳು'' ನಮ್ಮ ದೇಶದಲ್ಲಿ ದೇವರ ಕೃಪೆಯಲ್ಲಿ ಬೆಳೆಯುತ್ತಿರುವ ಸೂಚನೆ ನೀಡಿದ್ದಾರೆ. ಅಲ್ಲದೆ, ಗುಮಾನಿ ಹುಟ್ಟಿಸುವ ನೂರಾರು ''ಸರ್ಕಾರೇತರ ಸೇವಾಸಂಸ್ಥೆಗಳು'' ನಮ್ಮ ದೇಶದಲ್ಲಿ ಹಣಬೆಗಳಂತೆ ಹುಟ್ಟಿಕೊಂಡಿವೆ. ಅವುಗಳಲ್ಲಿ ಕೆಲವಾದರೂ ಡಾಲರುಗಳ ಹಂಚಿಕೆಯ ಪಟ್ಟಿಯಲ್ಲಿವೆ. ಅವುಗಳ ರಾಜವೈಭವವನ್ನು ಖುದ್ದಾಗಿ ಕಾಣಲು ಸಾಧ್ಯವಿದೆ. ಅಮೆರಿಕಾಕ್ಕೆ ಅಧೀನವಾಗಿರುವಂತಹ ಪ್ರಭುತ್ವವನ್ನು ಪ್ರಜಾಪ್ರಭುತ್ವವೆಂದು ವ್ಯಾಖ್ಯಾನಿಸುವ ದುರಂತ ನಮ್ಮ ದೇಶದಲ್ಲಿ ಸಂಭವಿಸಬೇಕೆ? ಅದ್ವಾನಿಯವರ ಪಕ್ಷವೂ ಸೇರಿದಂತೆ ಎಲ್ಲ ರಾಜಕೀಯ ಪಕ್ಷಗಳೂ ಈ ಬಗ್ಗೆ ತಮ್ಮ ನಿಲುವನ್ನು ಘೋಷಿಸಬೇಕು. ಅಂತೆಯೇ, ಅಮೆರಿಕಾದ ಡಾಲರುಗಳನ್ನು ಪಡೆದು ನಮಗೆ ಸ್ವಾತಂತ್ರ್ಯ, ಸಂಸ್ಕೃತಿ, ಪ್ರಜಾಪ್ರಭುತ್ವ, ಭಯೋತ್ಪಾದನೆ ಮುಂತಾದುವುಗಳ ಮಂತ್ರ ಹೇಳಿಕೊಡುತ್ತಿರುವ ಬುದ್ಧಿಜೀವಿಗಳು ಮತ್ತು ಸಾಂಸ್ಕೃತಿಕ ರಾಯಭಾರಿಗಳೂ ಉತ್ತರಿಸಬೇಕು.

ಅಮೆರಿಕಾ ಹಣ ಸುರಿಸಿ ತಲೆಗಳನ್ನು ಕೊಂಡುಕೊಳ್ಳುವುದರಲ್ಲಿ ನೈಪುಣ್ಯ ಸಾಧಿಸಿರುವುದಕ್ಕೆ ಹತ್ತಾರು ನಿದರ್ಶನಗಳಿವೆ. ಅಫ್ಘಾನಿಸ್ತಾನ ಮತ್ತು ಇರಾಕ್‌ನಲ್ಲಿ ಅದರ ಪರಿಣಾಮ ಎದ್ದುಕಾಣುತ್ತಿದೆ. ಆದರೆ ವೆನಿಜ಼ೂಲಾದಂತಹ ದೇಶದಲ್ಲಿ



ಓದುಗರಿಗೆ, ಲೇಖಕರಿಗೆ,
ಜಾಹಿರಾತುದಾರರಿಗೆ, ಹಿತೈಷಿಗಳಿಗೆ
'ಹೊಸತು' ಬಳಗದ
ಹಾಗೂ
ನವಕರ್ನಾಟಕ ಪ್ರಕಾಶನದ
ಹೊಸವರ್ಷದ ಶುಭಾಶಯಗಳು



ಅಮೆರಿಕಾ ಮೂಗಿನಲ್ಲಿ ರಕ್ತ ಸುರಿಸಿಕೊಂಡು ಹಿಂದಿರುಗಿ ಈಗ ಮತ್ತೆ ಮಲ್ಲಯುದ್ಧಕ್ಕೆ ತಯಾರಿ ನಡೆಸುತ್ತಿದೆ. ಎರಡು ವರ್ಷಗಳಲ್ಲಿ ಎರಡು ಬಾರಿ ವೆನಿಝೂಲಾದ ಜನರು ಅಮೆರಿಕಾಕ್ಕೆ ಒದ್ದು ತರುಬಿದ್ದಾರೆ. ಮೊದಲ ಬಾರಿ ಮಿಲಿಟರಿ ಕ್ಷಿಪ್ರ ಕಾರ್ಯಾಚರಣೆಯನ್ನು ಯೋಜಿಸಿದಾಗ ಜನ ಶವೇಜ್ ಪರವಾಗಿ ಬೀದಿಗೆ ಬಂದು ನಿಂತರು. ಎರಡನೆಯ ಬಾರಿ ಇನ್ನೂ ಹೆಚ್ಚಿನ ಹಣ ಹರಿಸಿ ತೈಲೋದ್ಯಮದಲ್ಲಿ ಮುಷ್ಕರಗಳನ್ನು ಸಂಯೋಜಿಸಿ ಬಿಕ್ಕಟ್ಟು ನಿರ್ಮಿಸಲಾಯಿತು. ಜನರಿಂದ ಸಹಿ ಸಂಗ್ರಹ ಮಾಡಿ ಜನಾದೇಶ ಪಡೆಯಬೇಕೆಂಬ ಒತ್ತಡ ತರಲಾಯಿತು. ನಗರಗಳಲ್ಲಿ ಲಕ್ಷಗಟ್ಟಲೆ ಜನ ಶವೇಜ್ ವಿರುದ್ಧ ವಿಷ ಕಾರಿದರು. ಹಾಗೆ ಮಾಡಲು ಅವರಿಗೆ ಹೆಂಡ ಮತ್ತು ಹಣವನ್ನು ವಾಷಿಂಗ್‌ಟನ್ನಿನ ಶ್ವೇತಭವನವೇ ಸರಬರಾಜು ಮಾಡಿತ್ತು. ಆದರೆ ಜನಾದೇಶವನ್ನು ದೊಡ್ಡ ಅಂತರದಿಂದ ಪಡೆದ ಶವೇಜ್ ತಮ್ಮ ದೇಶದ ಸ್ವಾವಲಂಬನೆಯ ಪ್ರಕ್ರಿಯೆಯನ್ನು ಚುರುಕುಗೊಳಿಸುತ್ತಿದ್ದಾರೆ. ನಗರಗಳಲ್ಲಿ ಸ್ವಲ್ಪ ವಿರೋಧ ವ್ಯಕ್ತವಾಗಿದ್ದರೂ ಗ್ರಾಮಾಂತರ ಪ್ರದೇಶಗಳಲ್ಲಿ ಶವೇಜ್‌ಗೆ ಜನ ಅತ್ಯಧಿಕ ಪ್ರಮಾಣದಲ್ಲಿ ಬೆಂಬಲ ಸೂಚಿಸಿದುದರ ಗುಟ್ಟೇನು ಎಂಬುದನ್ನು ನಮ್ಮ ದೇಶದ ರಾಜಕೀಯ ಪಕ್ಷಗಳು ತಿಳಿದುಕೊಳ್ಳಬೇಕು. ಜಾಗತೀಕರಣವೆಂದರೆ ಅಸಹ್ಯವೆನಿಸುವ ಪರಿಸ್ಥಿತಿ ನಮ್ಮದಾದರೆ ವೆನಿಝೂಲಾದ ಹಳ್ಳಿಗಳಲ್ಲಿ ಹಾಗೂ ಕೊಳಚೆ ಪ್ರದೇಶಗಳಲ್ಲಿ ಜಾಗತೀಕರಣಕ್ಕೆ ಬೇರೊಂದು ಅರ್ಥ ಬಂದಿದೆ. ಕ್ಯೂಬಾದ ವೈದ್ಯರು ಔಷಧಿ ಮತ್ತು ವೈದ್ಯಕೀಯ ಸಾಧನಗಳೊಂದಿಗೆ ಅಲ್ಲೆಲ್ಲಾ ಉಚಿತವಾಗಿ ಉನ್ನತಮಟ್ಟದ ಸೌಲಭ್ಯ ಒದಗಿಸಿಕೊಟ್ಟಿದ್ದಾರೆ. ಹಾಗೆಯೇ ಶಿಕ್ಷಣ, ಆಹಾರ, ಉದ್ಯೋಗ ಮುಂತಾದುವನ್ನು ಕಲ್ಪಿಸಲು ಶವೇಜ್ ಸರ್ಕಾರ ಹಿಂದೆಂದೂ ಇಲ್ಲದಷ್ಟು ಉತ್ಸಾಹ ಮತ್ತು ನಿಷ್ಠೆ ತೋರಿಸುತ್ತಿದೆ. ದೇಶದ ತೈಲದ ಮಾರಾಟದಿಂದ ಬರುವ ಹಣದ ಬಹುಭಾಗವನ್ನು ಇದಕ್ಕೆ ವ್ಯಯಮಾಡಲಾಗುತ್ತಿದೆ. ಶವೇಜ್ ವಿರೋಧಿಗಳು ಈ ಕಾರ್ಯಕ್ರಮವನ್ನು ''ಹಣದ ಪೋಲು ಮಾಡುವಿಕೆ'' ಎಂದು ಜರಿದಿದ್ದಾರೆ. ಇಂತಹ ಕೆಲಸಕ್ಕೆ ದೇಶದ ಸಂಪತ್ತನ್ನೆಲ್ಲಾ ವಿನಿಯೋಗಿಸಿದರೆ ಅದರಿಂದ ಆರ್ಥಿಕ ಹಾನಿಯುಂಟಾಗುತ್ತದೆಂದು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ವೆನಿಝೂಲಾಕ್ಕೆ ಎಚ್ಚರ ನೀಡಿದೆ. (ನಮ್ಮ ದೇಶದ ಮೊಂಟೇಕ್ ಸಿಂಗ್ ಅಹ್ಲುವಾಲಿಯ ಗ್ರಾಮೀಣ ಉದ್ಯೋಗ ಯೋಜನೆಯ ಬಗ್ಗೆ ಇಂಥದೇ ಅಭಿಪ್ರಾಯ ಹೊಂದಿರುವುದು ಆಕಸ್ಮಿಕವೇನಲ್ಲ). ಇದಾವುದರಿಂದಲೂ ವಿಚಲಿತರಾಗದೆ ಶವೇಜ್ ತಮ್ಮ ಬಹುಮುಖೀ ರಚನಾತ್ಮಕ ಕಾರ್ಯವನ್ನು ಇನ್ನೂ ತ್ವರಿತಗೊಳಿಸುತ್ತಿದ್ದಾರೆ. ಅಮೆರಿಕಾದ ಹಣವು ಜನಗಳ ಪ್ರಜ್ಞೆಯನ್ನು ಕೊಂಡುಕೊಳ್ಳಲು ಸಾಧ್ಯವಾಗದೇ ಹೋಗಿರುವುದು ಆ ಕಾರಣಕ್ಕೆ. ಇಡೀ ದೇಶದಲ್ಲಿ ವಿದ್ಯುತ್ ಸಂಚಾರವಾದಂತೆ ಕ್ರಿಯಾತ್ಮಕ ಚಟುವಟಿಕೆಗಳು ಹೆಚ್ಚಿವೆ, ಹೊಸ ಹುಮ್ಮಸ್ಸು ಹೊಮ್ಮಿದೆ, ಸ್ವಾಭಿಮಾನ ಪರಾಕಾಷ್ಠೆಯನ್ನು ಮುಟ್ಟಿದೆ. ಅಭಿವೃದ್ಧಿ ಹೊಂದುತ್ತಿರುವ ದೇಶಗಳಿಗೆ ಮಾದರಿಯಾಗಬೇಕಾದ್ದು ಇದು, ಅಮೆರಿಕಾ ಪ್ರಣೀತ ಜಾಗತೀಕರಣವಲ್ಲ.

ಈ ಹಿನ್ನೆಲೆಯಲ್ಲಿ ನೋಡಿದಾಗ ನಮ್ಮ ಕೇಂದ್ರ ಸರ್ಕಾರವು ಇತ್ತೀಚೆಗೆ ಸಂಸತ್ತಿನಲ್ಲಿ ಮಂಡಿಸಿರುವ ಗ್ರಾಮೀಣ ಉದ್ಯೋಗ ಮಸೂದೆಯು ತೀರಾ ಸಪ್ಪೆಯಾಗಿದೆ, ಆತ್ಮಘಾತುಕವಾಗಿದೆ. ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ಘೋಷಿಸಲಾಗಿದ್ದ ಆಶಯವನ್ನು ದೃಷ್ಟಿಯಲ್ಲಿಟ್ಟುಕೊಂಡರೆ ಇದರಲ್ಲಿ ವಂಚನೆಯೂ ಇದೆ, ಏಕೆಂದರೆ ಅಲ್ಲಿ ಉಲ್ಲೇಖವಾಗಿದ್ದ ಅಂಶಗಳು ಈಗಿನ ಮಸೂದೆಯಲ್ಲಿ ಮಾಯವಾಗಿವೆ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಪೂರ್ಣಪ್ರಮಾಣದ ಉದ್ಯೋಗವೆಂಬುದು ಒಂದು ಮರೀಚಿಕೆ. ಅದಕ್ಕೆ ಒಂದು ''ನಿರುದ್ಯೋಗಿಗಳ ಸೈನ್ಯ''ವನ್ನು ಬೆಳೆಸಿ ಪೋಷಿಸುವುದು ಅವಶ್ಯಕ. ನಮ್ಮ ಸಾಮಾಜಿಕ-ರಾಜಕೀಯ ಸಂದರ್ಭ ಸಹ ಪೂರ್ಣಪ್ರಮಾಣದ ಉದ್ಯೋಗ ಕಲ್ಪನೆಯಿಂದ ಗುಣಾತ್ಮಕವಾಗಿ ಬದಲಾಗಿಬಿಡುತ್ತದೆ. ಆದ್ದರಿಂದ ಮನಮೋಹನ್ – ಚಿದಂಬರಂ ಪ್ರಣಾಲಿಕೆಗೆ ಗ್ರಾಮಾಂತರ ಉದ್ಯೋಗದ ನಿರ್ಮಿತಿಯು ಕಡಿಮೆ ಮಟ್ಟದಲ್ಲೇ ಇರಬೇಕಾದ್ದು ಅನಿವಾರ್ಯ. ನಿರುದ್ಯೋಗಿಗಳು ಒಂದಷ್ಟು ಜನ ಇಲ್ಲದಿದ್ದರೆ ಗ್ರಾಮಾಂತರದಲ್ಲಿ ಭೂಮಾಲಿಕರು ದಿನನಿತ್ಯ ಕೊಡಬೇಕಾಗುವ ಕೂಲಿ ಹೆಚ್ಚುತ್ತದೆ, ಕಡಿಮೆ ಕೂಲಿಗೆ ಆಳುಗಳು ಸಿಗುವುದಿಲ್ಲ. ನಗರದ ಕಾರ್ಖಾನೆಗಳ ಮಾಲಿಕರಂತೆ ಗ್ರಾಮದ ಭೂಮಾಲಿಕರು ಕೂಡ ಕಡಿಮೆ ಕೂಲಿ ಕೊಟ್ಟು ಉತ್ಪಾದನೆ ಹೆಚ್ಚಿಸಿಕೊಳ್ಳುವ ಹುನ್ನಾರದಲ್ಲಿರುತ್ತಾರೆ. ಅವರ ಲಾಭಾಂಶದ ಹೆಚ್ಚಳವು ಜನಸಮುದಾಯದ ಒಟ್ಟು ಹಿತಕ್ಕಿಂತ ಹೆಚ್ಚಿನ ಆದ್ಯತೆ ಪಡೆಯುತ್ತದೆ. ದೇಶದ ದೃಷ್ಟಿಯಿಂದ ಇದು ಅನಿಷ್ಟವಾದರೂ ಆಡಳಿತ ಸೂತ್ರವನ್ನು ತನ್ನಲ್ಲಿರಿಸಿಕೊಂಡಿರುವ ಆಳುವ ವರ್ಗವು ಅದಕ್ಕೆ ಕುಮ್ಮಕ್ಕು ನೀಡುತ್ತದೆ. ವಿರೋಧ ಪಕ್ಷವಾದ ಅದ್ವಾನಿ ಪಕ್ಷವು ಗ್ರಾಮಾಂತರ ಉದ್ಯೋಗ ಮಸೂದೆಯನ್ನು ಸಮಗ್ರಗೊಳಿಸಬೇಕೆಂದು ದೇಶವ್ಯಾಪೀ ಹೋರಾಟವನ್ನು ಹಮ್ಮಿಕೊಳ್ಳದಿರುವುದರ ಸೂಕ್ಷ್ಮ ಇದರಲ್ಲಿದೆ. ಆಡಳಿತಾರೂಢ ಪಕ್ಷದ ಹೊರಗೂ ಆಳುವ ವರ್ಗ ವಿಸ್ತರಿಸಿಕೊಂಡಿರುವುದು ಇದರಿಂದ ಸ್ಪಷ್ಟವಾಗುತ್ತದೆ.

ಉದ್ಯೋಗದ ಹೆಚ್ಚಳದಿಂದ ಜೇಬುಗಳಲ್ಲಿ ಹಣ ತುಂಬುವುದು ಮಾತ್ರವಲ್ಲ, ಅಗತ್ಯವಾದ ಸಾರಭೂತ ಕೆಲಸಗಳೂ ಗ್ರಾಮಾಂತರ ಪ್ರದೇಶಗಳಲ್ಲಿ ನಿರಂತರವಾಗಿ ನಡೆಯುತ್ತಿರುತ್ತವೆ. ಕೂಲಿ ಪಡೆದವರು ಗ್ರಾಹಕರ ಬಣಕ್ಕೆ ಹೊಸದಾಗಿ ಸೇರ್ಪಡೆಗೊಳ್ಳುವುದರಿಂದ ಮಾರುಕಟ್ಟೆಯಲ್ಲಿ ವ್ಯವಹಾರ ಹೆಚ್ಚುತ್ತದೆ, ದೇಶದ ಉತ್ಪಾದನೆಗೆ ಆಸರೆ ದೊರೆಯುತ್ತದೆ; ಮತ್ತು ಆ ಉತ್ಪಾದನೆಯ ಹೆಚ್ಚಳಕ್ಕಾಗಿ ಇನ್ನಷ್ಟು ಮಂದಿ ಉದ್ಯೋಗ ಪಡೆಯುತ್ತಾರೆ. ಅಂದರೆ, ಇಡೀ ದೇಶದಲ್ಲಿ ಆರ್ಥಿಕ ಮತ್ತು ಉತ್ಪಾದನಾ ಚಟುವಟಿಕೆಗಳು ಹೊಸ ಮಜಲನ್ನು ಮುಟ್ಟುತ್ತವೆ. ''ಚಲನಶೀಲ ಆರ್ಥಿಕತೆ'' ಎಂದರೆ ಅದು. ಆದರೆ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯಂತಹವು ಪ್ರಚೋದಿಸುವ ಬಂಡವಾಳಶಾಹಿ ಪ್ರಕ್ರಿಯೆಗೆ ಇದು ಬೇಡವಾಗಿದೆ; ಏಕೆಂದರೆ, ಸ್ವಾವಲಂಬನೆ ಸಾಧಿಸಿದ ಯಾವ ದೇಶವೂ ಅದರ ಹಿಡಿತದಲ್ಲಿ ಉಳಿಯುವುದಿಲ್ಲ.

ಗ್ರಾಮಾಂತರ ಪ್ರದೇಶಗಳಲ್ಲಿ ಎಂತಹ ಉದ್ಯೋಗಕ್ಕೆ ಚಾಲನೆ ನೀಡಬೇಕೆಂಬುದರ ಬಗ್ಗೆ ಪ್ರಸ್ತುತ ಮಸೂದೆಯು ಸಾಕಷ್ಟು ಸಮರ್ಪಕ ಉತ್ತರ ಕೊಟ್ಟಿಲ್ಲ. ರಸ್ತೆ, ಕೆರೆ ಇತ್ಯಾದಿಗಳಷ್ಟೇ ಉದ್ಯೋಗದ ತಾಣಗಳಾಗಬಾರದು. ಚಿಕ್ಕಚಿಕ್ಕ ಉತ್ಪಾದನಾ ಘಟಕಗಳು ವಿಧವಿಧವಾದ ಕ್ಷೇತ್ರಗಳಲ್ಲಿ ಹೆಚ್ಚಾಗಬೇಕು. ಆಗ ಸಾರ್ವಜನಿಕ ಔದ್ಯಮಿಕ ವಿಭಾಗಗಳು ಆರ್ಥಿಕ ವಲಯದಲ್ಲಿ ಮೂಲಭೂತ ಅಡಿಪಾಯವಾಗಿ ವೃದ್ಧಿಹೊಂದುತ್ತವೆ. ನಮ್ಮ ಮೊಂಟೇಕ್ ಸಿಂಗ್ ಮತ್ತು ಅವರ ಬಂಧುಗಳಿಗೆ ಇದು ಬೇಕಾಗಿಲ್ಲದಿರುವುದು ಗ್ರಾಮಾಂತರ ಉದ್ಯೋಗ ಮಸೂದೆಯು ಪೇಲವವಾಗಿರಲು ಒಂದು ಕಾರಣ. ಇನ್ನೊಂದು ಕಾರಣ ನೀಡಲಾಗುತ್ತಿದೆ : ಅದು ಹಣಕಾಸಿನ ಕೊರತೆ. ಗ್ರಾಮೀಣ ಉದ್ಯೋಗಕ್ಕೆ ಪುಷ್ಟಿ ನೀಡಲು ಮುಂದಾದರೆ ಕ್ರಮೇಣ ಅದನ್ನು ಪಟ್ಟಣ ಮತ್ತು ನಗರಗಳಿಗೂ ವಿಸ್ತರಿಸಬೇಕಾಗುತ್ತದೆ. ದೇಶದಲ್ಲಿ ನಿರುದ್ಯೋಗಿಗಳಿಗೆಲ್ಲಾ ಉದ್ಯೋಗ ಒದಗಿಸಿ ಕೂಲಿ ಕೊಡಬೇಕಾದರೆ ಎಷ್ಟು ಹಣ ಬೇಕಾಗುತ್ತದೆಂಬ ಲೆಕ್ಕ ಸರಿಯಾಗಿ ಹೇಳಲು ಸಹ ನಮ್ಮ ಯೋಜನಾ ಪರಿಣತರಿಗೆ ಸಾಧ್ಯವಾಗಿಲ್ಲ. ಒಂದು ಅಂದಾಜು ೨೦,೦೦೦ ಕೋಟಿ ರೂಪಾಯಿಯಾದರೆ ಇನ್ನೊಂದು ಅದನ್ನು ೪೦,೦೦೦ಕ್ಕೆ ಹೆಚ್ಚಿಸುತ್ತದೆ. ಒಂದು ಲಕ್ಷ ಕೋಟಿಯೂ ಸಾಲುವುದಿಲ್ಲವೆಂದು ಮತ್ತೊಂದು ಅಂದಾಜು ಹೇಳುತ್ತದೆ. ಇಷ್ಟೊಂದು ಹಣ ಎಲ್ಲಿಂದ ತರುವುದು ? ಇದು ಸರ್ಕಾರದ ಮತ್ತು ಯೋಜನಾ ಆಯೋಗದ ಪ್ರಶ್ನೆ. ಸರ್ವೋಚ್ಚ ನ್ಯಾಯಾಲಯದ ಒಂದು ಆದೇಶದಂತೆ ನದಿಗಳ ಜೋಡಣೆಗೆ ನಾವು ೫೬೦ ಲಕ್ಷ ಕೋಟಿ ರೂಪಾಯಿಗಳನ್ನು ಖರ್ಚು ಮಾಡಲು ತುದಿಗಾಲ ಮೇಲೆ ನಿಂತಿದ್ದೇವೆ. ಆ ನ್ಯಾಯಾಲಯಕ್ಕೆ ಅಂತಹ ಆದೇಶ ನೀಡುವ ಹಕ್ಕು ಎಲ್ಲಿಯದೆಂಬುದು ಬೇರೆ ಪ್ರಶ್ನೆ. ಆದರೆ ಅಷ್ಟು ಹಣ ಕೂಡಿಸಲು ನಾವು ಹೆಣಗಲಿದ್ದೇವೆ. ಆದರೆ ೪೦,೦೦೦ ಕೋಟಿಯನ್ನು ಉದ್ಯೋಗ ನಿರ್ಮಿತಿಗೆ ಕೂಡಿಸಲಾರೆವು. ನದೀ ಜೋಡಣೆಯಲ್ಲಿ ಭ್ರಷ್ಟಾಚಾರದ ಮೂಲಕ ಎಷ್ಟೊಂದು ಅಧಿಕಾರಿಗಳಿಗೆ, ಕಂಟ್ರಾಕ್ಟುದಾರರಿಗೆ ಮತ್ತು ಮಂತ್ರಿಮಹೋದಯರಿಗೆ ಅಪಾರ ಹಣ ದೋಚಲು ಅವಕಾಶವಿದೆಯೋ ಅಷ್ಟು ಗ್ರಾಮಾಂತರ ಉದ್ಯೋಗ ನಿರ್ಮಿತಿಯಿಂದ ದಕ್ಕುವುದಿಲ್ಲ. ಆದರೂ ಅದರ ಬಗ್ಗೆ ಸಾರ್ವಜನಿಕರು ಎಚ್ಚರದಿಂದಿದ್ದು ಮಧ್ಯವರ್ತಿ ನುಂಗಣ್ಣಗಳಿಗೆ ಆಸ್ಪದವಿರದಂತೆ ನೋಡಿಕೊಳ್ಳಬೇಕು. ಉದ್ಯೋಗ ನಿರ್ಮಿತಿಯು ಹೊಂಡಕ್ಕೆ ಸುರಿಯುವ ಹಣವಲ್ಲ, ಅದು ಉತ್ಪಾದನೆಗಾಗಿ ತೊಡಗಿಸುವ ಬಂಡವಾಳ. ಆದ್ದರಿಂದ ಅದನ್ನು ವ್ಯರ್ಥವೆಂದೋ ದಾನವೆಂದೋ ಬಗೆಯುವುದು ಸರಿಯಲ್ಲ. ಸಾರ್ವಜನಿಕ ಬ್ಯಾಂಕುಗಳಿಂದ ಸಾಲ ಪಡೆದು ಅದನ್ನು ಹಿಂದಿರುಗಿಸಿಲ್ಲದ ತಿಮಿಂಗಿಲಗಳು ನಮ್ಮಲ್ಲಿ ಎಷ್ಟಿವೆ ? ಅದೇ ಒಂದು ಲಕ್ಷ ಕೋಟಿಯನ್ನು ಮುಟ್ಟಿದೆ. ಅದರಲ್ಲಿ ಅರ್ಧ ಸಾಕು ಗ್ರಾಮಾಂತರ ಉದ್ಯೋಗ ನಿರ್ಮಿತಿಗೆ. ಇನ್ನು ಘೋಷಿತ ತೆರಿಗೆ ಪಾವತಿಯಾಗದಿರುವುದು, ತೆರಿಗೆಯನ್ನು ಸರಿಯಾಗಿ ಘೋಷಿಸದೆ ತಪ್ಪಿಸಿಕೊಂಡಿರುವುದು, ಕೆಲಸಕ್ಕೆ ಬಾರದ ಸಮಾರಂಭಗಳಿಗೆ ಖರ್ಚು ಮಾಡುವುದು, ಇಂಥವನ್ನೆಲ್ಲಾ ಲೆಕ್ಕಕ್ಕೆ ತೆಗೆದುಕೊಂಡರೆ ೪೦,೦೦೦ ಕೋಟಿ ನಮ್ಮ ದೇಶಕ್ಕೆ ಹೊರಲಾರದಷ್ಟು ಅಗಾಧವೇನೂ ಅಲ್ಲ. ಹೊಸ ಸಮಾಜದತ್ತ ಮುನ್ನಡೆಯಲು ಇದೊಂದು ಪಕ್ವವಾದ ಕಾರ್ಯಕ್ರಮ. ಅಲ್ಲದೆ, ವೆನಿಝೂಲಾ ಅದನ್ನು ಮಾಡಬಲ್ಲುದಾದರೆ ಭಾರತಕ್ಕೇಕೆ ಸಾಧ್ಯವಾಗುವುದಿಲ್ಲ? ಈ ವರ್ಷದಲ್ಲಿ ನಮ್ಮ ದೇಶವು ಮಹತ್ವದ ಈ ಸವಾಲನ್ನು ಸ್ವೀಕರಿಸಬೇಕು, ದೇಶದ ಸಾರ್ವಭೌಮತ್ವ ಮತ್ತು ಸ್ವಾವಲಂಬನೆಯನ್ನು ಸಾಧಿಸಬೇಕು. ಇದು ಭಗವಂತ ಮಾಡುವ ಕೆಲಸವಲ್ಲ, ನಾವು ಜೀವಂತರು ಮಾಡಬೇಕಾದ ಕರ್ತವ್ಯ.



# ಪರಿವಿಡಿ

# ಪರಿವಿಡಿ



















ಮುಖಚಿತ್ರ : ರೌದ್ರಾವತಾರ (ಕಂಪ್ಯೂಟರ್ ಚಿತ್ರ)

ಕಲೆ : ಎಂ. ಎಸ್. ಶಶಿಧರ್

ಛಾಯಾಚಿತ್ರ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಒಳಚಿತ್ರಗಳು : ಸೃಜನ್, ಹರಿಣಿ, ಸ್ಯಾಮ್, ಶ್ರೀಹರಿ, ರವಿಕುಮಾರ್ ಅಜ್ಜೀಪುರ, ಸುರೇಶ್ ವಗ್ಗಾ

ಕಚೇರಿ ಸಹಕಾರ : ಜಿ. ವಿ. ತೇಜೋವತಿ







### ಅವಾಸ್ತವಿಕ ಸಲಹೆ

ಡಿಸೆಂಬರ್ ೨೦೦೪ರ 'ಹೊಸತು'ವಿನಲ್ಲಿ ಕಂಚಿಶ್ರೀಗಳ ಬಂಧನ ಕುರಿತು ಬರೆದಿರುವ 'ಈ ತಿಂಗಳು' ಓದಿ ದಿಗ್ಭ್ರಾಂತನಾದೆ. ಯಾವುದೇ ರೀತಿಯಿಂದ ನೋಡಿದರೂ ನನಗೆ ಅಲ್ಲಿ ಮೊದಲ ಪ್ಯಾರಾದಲ್ಲಿರುವ ವಾದ ಸಮರ್ಥನೀಯವಲ್ಲ ಎನ್ನಿಸಿದೆ.

ಹಿಂದೆ ಆದ ತಪ್ಪುಗಳು ಇಂದು ಆಗಿರುವ ತಪ್ಪಿಗೆ ಸಮರ್ಥನೆಯಲ್ಲ. ಇಷ್ಟಕ್ಕೂ ಜಯಲಲಿತಾ ಸಹ ಜೈಲಿನಲ್ಲಿದ್ದರು ಎಂಬುದನ್ನು ಮರೆಯಬಾರದು. ಉಮಾ ಭಾರತಿ, ಲಾಲು ಅವರ ಮೇಲಿದ್ದ ಆರೋಪಗಳೇ ಬೇರೆ. ಕಂಚಿಶ್ರೀಗಳ ಮೇಲೆ ಇರುವುದು ಕೊಲೆ ಮೊಕದ್ದಮೆ. ಇವರಿಗೆ ಮಠದಲ್ಲೇ ಬಂಧನದ ವ್ಯವಸ್ಥೆ ಮಾಡಬೇಕೆಂಬ ಸಲಹೆ ಅವಾಸ್ತವಿಕ-ಅತಾತ್ವಿಕವಾದುದು.

ಈ ದೇಶದಲ್ಲಿ ಇಂದಿರಾ ಗಾಂಧಿಯಂಥ ಜನಬೆಂಬಲದ ನಾಯಕಿಯನ್ನು ಜೈಲಿಗೆ ಕಳಿಸಲಾಗಿತ್ತು. ಒಂದು ವೇಳೆ ರಾಜಕಾರಣಿಗಳಿಗೆ ರಕ್ಷಣೆ ಸಿಗುತ್ತಿದೆಯೆಂಬುದನ್ನು ನಂಬಿದರೂ ಕೊಲೆ ಮೊಕದ್ದಮೆಗೆ ಈಡಾದ ರಾಜಕಾರಣಿಗಳನ್ನು ಜೈಲಿಗೆ ಕಳಿಸಿದ ಅನೇಕ ಉದಾಹರಣೆಗಳಿವೆಯೆಂಬುದನ್ನು ಮರೆಯಬಾರದು.

ಬೆಂಗಳೂರು **ಸಹದರ್ಶಿ**

'ಹೊಸತು' ಡಿಸೆಂಬರ್ ಸಂಚಿಕೆಯಲ್ಲಿ ಬಿ. ವಿ. ಕಕ್ಕಿಲ್ಲಾಯರ 'ವೈಜ್ಞಾನಿಕ ಸಮಾಜವಾದ'ವನ್ನು ವಿಮರ್ಶಿಸುತ್ತಾ ಆರ್. ಡಿ. ಹಳಿಂಗಳಿಯವರು 'ಭಾರತೀಯ ತತ್ವಶಾಸ್ತ್ರ ಪರಂಪರೆಯಲ್ಲಿ ಶಂಕರಾಚಾರ್ಯರ ಪಾತ್ರವನ್ನು ಭೌತವಾದಿ ದೃಷ್ಟಿಕೋನದಿಂದ ವಿಶ್ಲೇಷಿಸಿ ಅವರನ್ನು ಕಾಲ ಬಾಹಿರ ಮತ್ತು ಕಂದಾಚಾರ ಶಕ್ತಿಗಳಿಂದ ಮುಕ್ತಗೊಳಿಸುವ ಆವಶ್ಯಕತೆಯಿದೆ. ಈ ದಿಶೆಯತ್ತ ಬಿ. ವಿ. ಕಕ್ಕಿಲ್ಲಾಯರು ಇನ್ನಷ್ಟು ಬೆಳಕನ್ನು ಹರಿಸಬಹುದಿತ್ತು' ಎಂದಿದ್ದಾರೆ.

ಅಂದರೆ, ಶಂಕರಾಚಾರ್ಯರ 'ಬ್ರಹ್ಮ ಸತ್ಯಂ ಜಗನ್ ಮಿಥ್ಯಾ' ಸಿದ್ಧಾಂತವನ್ನು ಮತ್ತು 'ಮಾಯಾವಾದ'ವನ್ನು ಭೌತವಾದಿ ನೆಲೆಯಿಂದ ವ್ಯಾಖ್ಯಾನಿಸಿ ಸಮರ್ಥಿಸುವುದು ಸಾಧ್ಯ ಮತ್ತು ಆ ಮೂಲಕ ಶಂಕರಾಚಾರ್ಯರನ್ನು ಪ್ರಸ್ತುತಪಡಿಸುವುದು ಅವಶ್ಯ ಎಂಬುದು ಈ ವಿಮರ್ಶಕರ ಅಭಿಪ್ರಾಯವಿರುವಂತಿದೆ. ಒಂದು ವೇಳೆ ಹೀಗೆ ಮಾಡುವುದು ಸಾಧ್ಯವಿದ್ದರೆ ಸ್ವತಃ ಹಳಿಂಗಳಿಯವರು ಅಂತಹ ಒಂದು ಪ್ರಯೋಗ ಮಾಡಿ ತೋರಿಸಬಹುದು.

ನಮಗೆ ತೋರುವುದೇನೆಂದರೆ, 'ಭಾರತೀಯ ದರ್ಶನಶಾಸ್ತ್ರಗಳ ಇತಿಹಾಸ'ದಲ್ಲಿ (ನೋಡಿ : ಭಾರತೀಯ ದರ್ಶನಗಳು, ಜನಪ್ರಿಯ ಪ್ರವೇಶಿಕೆ, ಮೂಲ ಡಾ|| ದೇವಿಪ್ರಸಾದ ಚಟ್ಟೋಪಾಧ್ಯಾಯ, ಕನ್ನಡಾನುವಾದ ಬಿ. ವಿ. ಕಕ್ಕಿಲ್ಲಾಯ; ಅಧ್ಯಾಯ : ಅದ್ವೈತ ವೇದಾಂತ) ಶಂಕರಾಚಾರ್ಯರ ಸಿದ್ಧಾಂತದ ಪ್ರಕಾರ 'ಬ್ರಹ್ಮನ್' ಅಥವಾ 'ಸತ್ಯ' ಎಂಬುದು ಶುದ್ಧ ಪ್ರಜ್ಞೆಯ ರೂಪದಲ್ಲಿರುವ ಆತ್ಮ ಹೊರತು ಮತ್ತೇನಲ್ಲ. ಬ್ರಹ್ಮ ಒಂದನ್ನುಳಿದು ಬೇರಾವುದೂ ಸತ್ಯವಲ್ಲ. ವ್ಯಾವಹಾರಿಕ (ಅಂದರೆ ಭೌತಿಕ) ಜಗತ್ತಿನ ಇಡೀ ಸಂರಚನೆಯೇ ಅಸತ್ಯ, ಅವಾಸ್ತವಿಕ, ಅರ್ಥಾತ್ ಮಾಯೆ. ಹೀಗಿರುವುದರಿಂದ ಎಲ್ಲ ಛಾಯೆಗಳ ಭೌತವಾದಗಳನ್ನು ಖಂಡತುಂಡವಾಗಿ ಖಂಡಿಸಿ 'ಭಾವನಾವಾದ' ಒಂದೇ ಸತ್ಯವೆಂದು ಪ್ರತಿಪಾದಿಸಿದ ಶಾಂಕರ ಸಿದ್ಧಾಂತವನ್ನು ಭೌತವಾದಿ ನೆಲೆಯಿಂದ ವ್ಯಾಖ್ಯಾನಿಸ ಹೊರಡುವುದು ಮತ್ತು ಶಂಕರಾಚಾರ್ಯರನ್ನು ಪ್ರಸ್ತುತಪಡಿಸಲೆತ್ನಿಸುವುದು ವ್ಯರ್ಥಸಾಹಸವಾದೀತು. ತತ್ತ್ವ ಪ್ರತಿಪಾದನೆಯೇನಿದ್ದರೂ ಅದು ಶಾಂಕರ ಸಿದ್ಧಾಂತದ ಮೂಲಕವೇ ನಡೆಯಬೇಕೆಂಬ ಹಟವಾದರೂ ಏಕೆ?

ಬೆಂಗಳೂರು **ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**




### ಯಾಸರ್ ಅರಾಫತ್

ಚಿಕ್ಕದಾದರೂ ಅತ್ಯಂತ ಚೊಕ್ಕವಾಗಿ ಪ್ಯಾಲಸ್ಟೈನ್ ಮತ್ತು ಯಾಸರ್ ಅರಾಫತ್‌ರವರ ಬಗ್ಗೆ ಬರೆದಿರುವ ಲೇಖನ ಮನಮುಟ್ಟುವಂತಿದೆ. ಅಬ್ರಾಹಂನ ಸಂತತಿಯವರಾದ ಅರಬರು ಹಾಗೂ ಇಸಾಕರ ಪೀಳಿಗೆಯವರಾದ ಯಹೂದಿಯರು ಒಟ್ಟಾಗಿ ಬಾಳುವುದನ್ನು ಬಿಟ್ಟು ಶಕುನಿಯ ಸಕಲ ರಾಜತಾಂತ್ರಿಕತೆಯನ್ನು ಮೈಗೂಡಿಸಿಕೊಂಡಿರುವ ಅಮೇರಿಕದವರ ಕುಮ್ಮಕ್ಕಿನಿಂದ ಪ್ಯಾಲಸ್ಟೈನ್ ಜನರನ್ನು ತಮ್ಮ ನಾಡಿನಲ್ಲೇ ಕೊಲೆಗೈಯುತ್ತಿರುವ ಇಸ್ರೇಲ್‌ನೊಂದಿಗೆ ಸತತ ಹೋರಾಟ ಮಾಡಿದ ಯಾಸರ್ ಅರಾಫತ್ ಅಪ್ರತಿಮ ಹೋರಾಟಗಾರ. ಒಂದು ಕಾಲಕ್ಕೆ ಇಂದಿನ ಇಸ್ರೇಲ್ ಸಂಪೂರ್ಣ ಪ್ಯಾಲಸ್ಟೈನ್ ಆಗಿತ್ತು ಎಂಬುದನ್ನು ಕ್ರೌರ್ಯದಿಂದ ಮರೆಮಾಚಿದ ದುಷ್ಟಶಕ್ತಿಗಳ ವಿರುದ್ಧ ಅತ್ಯಂತ ಕಠಿಣ ಹೋರಾಟದಲ್ಲಿ ನಿರತರಾಗಿ ಹೆಚ್ಚು ಕಡಿಮೆ ಗೆಲುವನ್ನು ಸಾಧಿಸುವಲ್ಲಿ ಸಫಲರಾದ ಈ ವೀರನಾಯಕನ ಕೊನೆಯ ದಿನಗಳು ಅತ್ಯಂತ ದಾರುಣವಾಗಿದ್ದಿತು. ಪ್ಯಾಲಸ್ಟೈನ್ ಜನತೆ ತಮ್ಮ ನಾಡಿನಲ್ಲಿ ಯಾವುದೇ ರಕ್ತಪಾತವಿಲ್ಲದೆ ಸ್ವತಂತ್ರವಾಗಿ ಬಾಳುವಂತಾದರೆ ಯಾಸರ್ ಅರಾಫತ್ ನಡೆಸಿದ ಹೋರಾಟಕ್ಕೆ ಸಿಕ್ಕ ಪ್ರತಿಫಲವಾದೀತು. ಈ ದಿಕ್ಕಿನಲ್ಲಿ ಅಮೆರಿಕ ಮತ್ತು ಇಸ್ರೇಲ್ ಮಾನವರಾಗಬೇಕಾಗಿದೆ.

ಬೆಂಗಳೂರು **ನರೇಂದ್ರ ಸಿರಕಜೆ**

### ಸಂಚಿಕೆ ಸಮೀಕ್ಷೆ

ಪ್ರೊ|| ಬರಗೂರು ರಾಮಚಂದ್ರಪ್ಪ ಅವರ 'ಭಾಷಿಕ ಮೂಲಭೂತವಾದಿಗಳ ಬೋನಿನಲ್ಲಿ ಕನ್ನಡ' ಉತ್ತಮ ಬರಹ ಆಗಿತ್ತು. ಅವರು ಹೇಳುಂತೆ ''ಕನ್ನಡ ಭಾಷೆಯನ್ನು ಕೇವಲ ಅಭಿಮಾನದ ಪ್ರಶ್ನೆಯಾಗಿ ನೋಡಬಾರದು, ಅನ್ನದ ಪ್ರಶ್ನೆಯಾಗಿ ಪರಿಭಾವಿಸಬೇಕು.'' ಕನ್ನಡ ಭಾಷೆ ಹೇಗೆ ಅಭಿವೃದ್ಧಿ ಹೊಂದಲು ಏನು ಮಾಡಬೇಕು ಎಂಬ ಸುಂದರ ಬರಹ ತುಂಬಾ ಇಷ್ಟವಾಯಿತು. ಎಸ್. ಸುಬ್ರಹ್ಮಣ್ಯ ಅವರ 'ಉಗುರಿನ ಮೇಲೊಂದು ಸುತ್ತು' ಓದಿ ನಗು ಜೊತೆ ಸಂತಸ ಕೂಡ ಆಯಿತು. ಉಗುರಿನ ಮಹತ್ವ ಏನು? ಎಂದೂ ತಿಳಿಯಿತು. ಉಗುರಿಗೆ ಸ್ವಲ್ಪ ಗಾಯವಾದರೂ ಎಷ್ಟು ನೋವು ಅನುಭವಿಸಬೇಕು ಎಂಬ ಕಲ್ಪನೆ ಈ ಬರಹದಿಂದ ತಿಳಿಯುತ್ತದೆ. ಮಂಜು ಶೆಟ್ಟರ್ ಅವರ ಕವನ 'ಬುದ್ಧನಿರಲಿಲ್ಲ' ತುಂಬಾ ಚೆನ್ನಾಗಿತ್ತು. ಬಿಂಡಿಗನವಿಲೆ ಭಗವಾನ್ ಅವರ 'ಅಂದಿನ ಸಿನಿಮಾ' ಓದಿ ನನ್ನ ಬಾಲ್ಯದ 'ಕಪ್ಪು ಬಿಳುಪು' ಚಿತ್ರಗಳ ನೆನಪು ಬಂದಿತು. 'ಕಪ್ಪು ಬಿಳುಪು' ಚಿತ್ರಗಳಲ್ಲಿನ ಸೊಬಗು, ಅಭಿನಯ ಈಗ ಬರುವ ಚಿತ್ರಗಳಲ್ಲಿ ಇಲ್ಲವಾಗಿದೆ.

ಶಿವಮೊಗ್ಗ **ಪಿ. ಗೋವಿಂದರಾವ್**

ಬರಗೂರರ ಲೇಖನ ಅತ್ಯುತ್ತಮ ಚಿಂತನಾ ಬರಹವಾಗಿ ಮೂಡಿಬಂದಿದೆ. ಕನ್ನಡದ ನೆಲ, ಜಲದ ಬಗ್ಗೆ ಕಾಳಜಿಯನ್ನು ಹೊಂದಿದ್ದೇವೆಂದು ತಿಳಿದಿರುವ ಕೆಲವರು ತಮಗೆ ಅರಿವಿದ್ದೋ ಅರಿವಿಲ್ಲದೆಯೋ ಸ್ವಹಿತವನ್ನು ಮನಸ್ಸಲ್ಲಿ ಇರಿಸಿಕೊಂಡಿರುವ ವಿಷಯ ಈಗಾಗಲೇ ಚಿತ್ರರಂಗದ ಬಿಕ್ಕಟ್ಟಿನ ಹಿನ್ನೆಲೆಯಲ್ಲಿ ವಿವಾದವನ್ನು ಸೃಷ್ಟಿಸಿದೆ. ಇಂತಹವರಿಂದ ಕನ್ನಡದ ಏಳಿಗೆಯನ್ನು ಹೇಗೆ ನಿರೀಕ್ಷಿಸಬಹುದು?

ಮೈಸೂರು **ಕೊ. ಸು. ನರಸಿಂಹಮೂರ್ತಿ**

ಅಯ್ಯಪ್ಪ ಹೂಗಾರ್‌ರ 'ಸರಕಾರಿ ಉದ್ಯಮಗಳ ನಷ್ಟಕ್ಕೆ ಕಾರಣಗಳನ್ನು ಹುಡುಕುತ್ತಾ' ಎಂಬ ಲೇಖನ ನಿಜಕ್ಕೂ ಅರ್ಥಪೂರ್ಣವಾಗಿದೆ. ಇದರಲ್ಲಿ ದೇಶದ ಬೆನ್ನೆಲುಬುಗಳೆಂದು ಪರಿಗಣಿಸಲಾದ ಸರಕಾರಿ ಉದ್ದಿಮೆಗಳು ಒಮ್ಮೆಲೇ ನಷ್ಟದ ಬಾಬುಗಳಾಗಿ ಬದಲಾದದ್ದು ಹೇಗೆ ಮತ್ತು ಖಾಸಗೀಕರಣಕ್ಕೆ ಭದ್ರವಾದ ಬುನಾದಿ ಹಾಕಿಕೊಡುವ ಹುನ್ನಾರಕ್ಕೆ ಯಾರು ಹೊಣೆ ಎಂಬುದರ ಬಗ್ಗೆ ತುಂಬಾ ಉತ್ತಮವಾಗಿ ಅರಿವು ಮೂಡಿಸಿದ್ದಾರೆ.

ಮೈಸೂರು **ಶೋಭಾ ಧರ್ಮೇಶ್**

ಆಂಧ್ರದ ಭಾರಿ ಭೂಮಾಲಿಕರಾಗಿದ್ದ ಶ್ರೀ ಪಿ. ವಿ. ನರಸಿಂಹ ರಾವ್ ನಮ್ಮ ಪ್ರಧಾನಿಯಾಗಿ ಉದಾರೀಕರಣದ ರೂವಾರಿಯಾದರು, ಅಯೋಧ್ಯೆಯಲ್ಲಿ ಮಸೀದಿ ಉರುಳಿಸಿದಾಗ ನಿರಾಳವಾಗಿದ್ದರು, ಹಲವು ಆಪಾದನೆಗಳನ್ನು ಎದುರಿಸಿದರು. ಖ್ಯಾತ ವಿದ್ವಾಂಸರೆಂಬ ಖ್ಯಾತಿ ಅವರದಾಗಿತ್ತು. ಎನ್ನಲಾಗಿದೆ. ಡಿಸೆಂಬರ್ ೨೩ರಂದು ಕೊನೆಯುಸಿರೆಳೆದ ಅವರನ್ನು 'ಹೊಸತು' ಸದಾ ನೆನಪಿಸಿಕೊಳ್ಳುತ್ತದೆ.

– ಸಂಪಾದಕ



# ಕರ್ನಾಟಕದ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ









''ಕರ್ನಾಟಕದ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ'' ಕುರಿತಂತೆ ಒಂದು ಮೌಲಿಕ ಚರ್ಚೆ ನಡೆಯಬೇಕೆಂಬ ಉದ್ದೇಶದಿಂದ 'ಹೊಸತು' ಒಂದು ಯೋಜನೆ ರೂಪಿಸಿದೆ. ನಾಡಿನ ಹಲವು ಚಿಂತಕರಿಗೆ ಒಂದು ಪ್ರಶ್ನಾವಳಿಯನ್ನು ಕಳಿಸಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಲು ಅವರನ್ನು ಕೇಳಿಕೊಳ್ಳಲಾಗಿತ್ತು. ಪ್ರಶ್ನಾವಳಿ ಹೀಗಿದೆ:

೧. ಸಂಸ್ಕೃತಿಗಳ ರೂಪಣ, ಸ್ವೀಕಾರ, ನಿರಾಕರಣೆ ಮತ್ತು ಪರಿವರ್ತನೆ (ಸ್ಥಿತ್ಯಂತರ)ಗಳ ಹಿಂದೆ ಇರುವ ಒತ್ತಡಗಳು ಯಾವ ಬಗೆಯವು? ಇಂಥ ಒತ್ತಡಗಳ ಬಗ್ಗೆ ಕ್ರಿಯಾಶೀಲವಾದ ನಿಲುವು ತಳೆಯದ ಸಂಸ್ಕೃತಿ ಚಿಂತನೆ ಎಷ್ಟರ ಮಟ್ಟಿಗೆ ಉಪಯುಕ್ತ?

೨. ಇತ್ತೀಚೆಗೆ, ಕನ್ನಡ ಸಾಹಿತ್ಯ ವಿಮರ್ಶೆಯು ಸಂಸ್ಕೃತಿ ವಿಮರ್ಶೆಯ ಕಡೆಗೆ ಹೊರಳಿಕೊಳ್ಳುತ್ತಿದೆಯೇ? ಇಂಥ ಬದಲಾವಣೆಯ ಹಿಂದಿನ ತಾತ್ವಿಕತೆ ಮತ್ತು ವಿಶ್ಲೇಷಣೆಯ ವಿಧಾನಗಳು ಹೇಗಿರಬೇಕು?

೩. ವಿಭಿನ್ನ ಪರಿಸರದಲ್ಲಿ ರೂಪಿತವಾದ ''ಸಂಸ್ಕೃತಿ ಸಿದ್ಧಾಂತ''ಗಳಿಗೆ ಮುಖಾಮುಖಿಯಾಗುವಾಗ ಇರಬೇಕಾದ ಮುಕ್ತತೆ ಮತ್ತು ಎಚ್ಚರಗಳು ಯಾವ ಬಗೆಯವು?

೪. ಗ್ರಾಮ-ನಗರ, ಪೂರ್ವ-ಪಶ್ಚಿಮ, ಸ್ಥಳೀಯ-ವಿಶ್ವಾತ್ಮಕ, ಶಿಷ್ಟ-ಜಾನಪದ, ಸ್ವ-ಅನ್ಯ ಮುಂತಾದ ಬೈನರಿ ವೈವಿಧ್ಯಗಳ ಬಗ್ಗೆ ಸಂಸ್ಕೃತಿಯ ಗತಿಶೀಲ ನೆಲೆಯಲ್ಲಿ ನಿಮ್ಮ ನಿಲುವೇನು?

೫. ಸಂಸ್ಕೃತಿ ಚಿಂತಕರ ಸಿದ್ಧಾಂತಗಳಿಗೂ ಜನಸಮುದಾಯಗಳ ವಾಸ್ತವ ಜೀವನವಿಧಾನಗಳಿಗೂ ಅಂತರವಿದೆ ಎನ್ನಿಸುತ್ತಿದೆಯೇ? ಇದರಿಂದ ಉಂಟಾಗುವ ಬಿಕ್ಕಟ್ಟುಗಳೇನು?

ಪತ್ರಿಕೆಗೆ ಬಂದ ಪ್ರತಿಕ್ರಿಯೆಗಳನ್ನು ಇಲ್ಲಿ ದಾಖಲು ಮಾಡಲಾಗಿದೆ. ತಮ್ಮ ಅಭಿಪ್ರಾಯಗಳನ್ನು ಬರೆದು ಕಳಿಸಿದ ಎಲ್ಲ ಚಿಂತಕರಿಗೂ 'ಹೊಸತು' ಕೃತಜ್ಞತೆ ಸಲ್ಲಿಸುತ್ತದೆ. ಇಡೀ ಯೋಜನೆಗೆ ಒಂದು ಸ್ವರೂಪವನ್ನು ಕೊಡುವುದಲ್ಲದೆ ಪ್ರಶ್ನಾವಳಿಯನ್ನು ಸಿದ್ಧಗೊಳಿಸುವುದರಲ್ಲೂ ಸಹಕಾರ ನೀಡಿರುವ ಶ್ರೀ ರಾಮಲಿಂಗಪ್ಪ ಟಿ. ಬೇಗೂರು, ಡಾ॥ ಎಚ್. ಎಸ್. ರಾಘವೇಂದ್ರ ರಾವ್ ಮತ್ತು ಪ್ರೊ॥ ಬರಗೂರು ರಾಮಚಂದ್ರಪ್ಪ ಅವರಿಗೆ 'ಹೊಸತು' ತನ್ನ ಕೃತಜ್ಞತೆಯನ್ನು ಸೂಚಿಸುತ್ತದೆ.

– ಸಂಪಾದಕ

## *ಸಂಸ್ಕೃತಿ ಚಿಂತನೆ: ಪ್ರಶ್ನೆಗಳಿಗೆ ಉತ್ತರ*

ಜಿ. ರಾಜಶೇಖರ

೧. ಸಂಸ್ಕೃತಿ ವಂಶವಾಹಿಯಾಗಿ ಹರಿದುಬರುವಂತಹದ್ದಲ್ಲ; ಅದು ರಕ್ತಜನ್ಯವೂ ಅಲ್ಲ. ಜನಾಂಗ ದ್ವೇಷದ ಸಿದ್ಧಾಂತಗಳು ಮತ್ತು ಹಿಂದುತ್ವದ ವಿಕೃತ ವಾದ ಮಾತ್ರ ಸಂಸ್ಕೃತಿ ಕುರಿತು ಹಾಗೆ ಭಾವಿಸುತ್ತವೆ. ಸಂಸ್ಕೃತಿ, ಸಾಮಾಜಿಕ ಬದುಕಿನ ಪ್ರತಿಫಲನ; ಸಂವಹನವಿಲ್ಲದೆ ಸಂಸ್ಕೃತಿಯೂ ಇಲ್ಲ. ಸಂಸ್ಕೃತಿಯನ್ನು ಸಾಮಾಜಿಕ ವ್ಯವಸ್ಥೆಯಿಂದ ಬೇರ್ಪಡಿಸಿ ನೋಡುವುದೂ ಸಾಧ್ಯವಿಲ್ಲ. ಎಲ್ಲ ಸಮಾಜಗಳೂ ಅಧಿಕಾರದ ಸಂರಚನೆಗಳಾಗಿರುವುದರಿಂದ, ಸಮಾಜದ ಯಜಮಾನಿಕೆಯ ಶಕ್ತಿಗಳು ಯಾವ ಸ್ವರೂಪದವು ಎಂಬುದರ ಮೇಲೆ ಆ ಸಮಾಜದ ಸಂಸ್ಕೃತಿ ರೂಪಿತವಾಗುತ್ತದೆ. ಆಸ್ತಿಯ ಹಂಚಿಕೆ, ವರ್ಗಗಳ ಅಸ್ತಿತ್ವ, ಶ್ರೇಣೀಕರಣ ವ್ಯವಸ್ಥೆ ಇವುಗಳನ್ನು ಮರೆತ ಸಂಸ್ಕೃತಿ ವಿಶ್ಲೇಷಣೆ, ಸಂಸ್ಕೃತಿಯನ್ನು ಕೇವಲ ಸೊಗಸಾದ ನೃತ್ಯ, ಸಂಗೀತ, ನಾಟಕ, ಕಾಂತಾಸಮ್ಮಿತಿಯ ಸಾಹಿತ್ಯ ಅಥವಾ ರುಚಿಕಟ್ಟಾದ ಊಟದ ಮಟ್ಟಕ್ಕೆ ಇಳಿಸಿಬಿಡುತ್ತದೆ. ಹೆಚ್ಚೆಂದರೆ ಇದು ನಮ್ಮ ಮಧ್ಯಮ ವರ್ಗದವರ ಡ್ರಾಯಿಂಗ್‌ರೂಮ್ ಸಂಸ್ಕೃತಿ. ಆದರೆ ಈ ನಾಡಿನ ಸಂಸ್ಕೃತಿಯ ನಿಜದ ನೆಲೆಗಳು ಚಿಂತನೆ,.ಇಲ್ಲಿನ ಜಾತಿ ಪದ್ಧತಿ, ಅಸಮಾನತೆ, ಲಿಂಗತಾರತಮ್ಯ ಮುಂತಾದ ಲಾಗಾಯ್ತಿನಿಂದ ರೂಢಿಯಲ್ಲಿರುವ ಆಚರಣೆಗಳನ್ನೂ ಸಮಕಾಲೀನ ಹಿಂದುತ್ವ ಚಳವಳಿಯಂತಹ ಅನಿಷ್ಟಗಳನ್ನೂ ಒಳಗೊಳ್ಳುವುದು ಅನಿವಾರ್ಯವಾಗಿದೆ. ಎಲ್ಲ ಕಾಲಗಳಲ್ಲೂ ಆಳುವ ವಿಚಾರಗಳು ಎಂದು ಮನ್ನಣೆ ಪಡೆದುಕೊಂಡಿರುವ ವಿಚಾರಗಳು ವಾಸ್ತವದಲ್ಲಿ ಆಳುವವರ್ಗದ ವಿಚಾರಗಳೇ ಆಗಿವೆ ಎಂಬ ಮಾರ್ಕ್ಸ್‌ನ ಮಾತು ಸಹ ಸಂಸ್ಕೃತಿಗೂ ಅಧಿಕಾರ, ಯಜಮಾನಿಕೆ ಮತ್ತು ಪ್ರಭುತ್ವಗಳ ಸಂರಚನೆಗೂ ಇರುವ ಸಂಬಂಧವನ್ನೇ ಧ್ವನಿಸುತ್ತದೆ. ಆದರೆ ಮಾರ್ಕ್ಸ್ ಈ ಸಂಬಂಧವನ್ನು ಜಡವೆಂದಾಗಲೀ ಸ್ಥಿರವೆಂದಾಗಲೀ ಭಾವಿಸಿರಲಿಲ್ಲ. ಪ್ರತಿಯೊಂದು ಚಾರಿತ್ರಿಕ ಬೆಳವಣಿಗೆಯೂ, ತನ್ನ ಪ್ರತಿರೋಧವನ್ನು ತಾನೇ ಹುಟ್ಟುಹಾಕುವುದರ ವಿಪರ್ಯಾಸ ಮತ್ತು ತನ್ಮೂಲಕ ಚರಿತ್ರೆಯ ಗತಿಗೆ ಒದಗಿಬರುವ ಚಲನಶೀಲತೆ ಮತ್ತು ಪರಿವರ್ತನಶೀಲತೆಯ ಬಗ್ಗೆ ಕೂಡ ಮಾರ್ಕ್ಸ್ ವಿಶ್ಲೇಷಿಸಿದ. ಸಂಸ್ಕೃತಿ ಮತ್ತು ಪ್ರಭುತ್ವದ ನಡುವಿನ ಸಂಬಂಧಗಳ ಕುರಿತು ನಾವು ಯೋಚಿಸುವಾಗ, ಪ್ರಭುತ್ವದ ವಿರುದ್ಧ ಪ್ರತಿರೋಧ ದನಿಗಳನ್ನೂ ನಾವು ಕೇಳಿಸಿಕೊಳ್ಳಬೇಕು.

೨. ಕನ್ನಡ ಸಾಹಿತ್ಯ ವಿಮರ್ಶೆ ಮಾತ್ರವಲ್ಲ, ಕನ್ನಡ ಸಾಹಿತ್ಯವೇ ಕನ್ನಡ ಸಂಸ್ಕೃತಿಯ ವಿಮರ್ಶೆಯಾಗಿದೆ. 'ಕರ್ನಾಟಕ'ವನ್ನು ಮೊತ್ತ ಮೊದಲು ನಿರ್ವಚಿಸಿದ ನೃಪತುಂಗ ಅದನ್ನು ಒಂದು ರಾಜಮನೆತನದ ಜೊತೆ ಗುರುತಿಸಲಿಲ್ಲ; ಬೇರೆ ಯಾವುದೇ ಅಧಿಕಾರದ ಲಾಂಛನದ ಜೊತೆಗೂ ಅದನ್ನು ಇಡಲಿಲ್ಲ. ಕಾವೇರಿಯಿಂದ ಗೋದಾವರಿವರೆಗಿನ ಪ್ರದೇಶದ ಜನರು, ''ಕನ್ನಡದಲ್ಲಿ ಭಾವಿಸುವವರು'' ಎಂದು ಆತ ನಿರ್ವಚಿಸಿದ. ನಮ್ಮ ವಚನಕಾರರು ಶ್ರೇಷ್ಠಕವಿಗಳೂ, ಚಿಂತಕರೂ,

# ಕರ್ನಾಟಕದ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ



ಸುಧಾರಕರೂ ಆಗಿದ್ದುದರ ಜೊತೆ ''ಕನ್ನಡದಲ್ಲಿ ಭಾವಿಸಿದ'' ಕನ್ನಡ ಸಂಸ್ಕೃತಿಯ ವಿಮರ್ಶಕರೂ ಆಗಿದ್ದರು. ನಮ್ಮ ಕಾಲಕ್ಕೆ ಬಂದರೆ, ನವೋದಯ ಚಳವಳಿಯಿಂದ ಹಿಡಿದು ಇಂದಿನವರೆಗೆ ಕನ್ನಡದ ಗಣ್ಯ ಲೇಖಕರೆಲ್ಲ ಸಂಸ್ಕೃತಿ ವಿಮರ್ಶಕರೂ ಹೌದು. ಎಲ್ಲರೂ ತಮ್ಮ ಬರವಣಿಗೆಯ ಕಸುಬಿನ ಜೊತೆ, ನಾಡಿನ ಸಾರ್ವಜನಿಕ ಬದುಕಿನಲ್ಲಿ ತೀವ್ರ ಆಸಕ್ತಿ ತಳೆದ public intellectuals ಆಗಿದ್ದರು. ಡಿ.ವಿ.ಜಿ., ಮಾಸ್ತಿ , ಕಾರಂತ, ಶ್ರೀರಂಗ ಮುಂತಾದವರಿಂದ ಹಿಡಿದು ದೇವನೂರು ಮಹಾದೇವರವರೆಗೆ ಕನ್ನಡದ ಬಹುತೇಕ ಎಲ್ಲ ಮುಖ್ಯ ಲೇಖಕರೂ ಸಂಸ್ಕೃತಿ ವಿಮರ್ಶಕರೇ ಆಗಿದ್ದವರು. ಹಾಗಾಗಿ ಕನ್ನಡ ಸಾಹಿತ್ಯ ವಿಮರ್ಶೆಯೂ ಸಂಸ್ಕೃತಿ ವಿಮರ್ಶೆಯಾಗುವುದು ಅನಿವಾರ್ಯವಾಯಿತು.

೩. 'ವಿಭಿನ್ನ ಪರಿಸರದಲ್ಲಿ ರೂಪಿತವಾಗಿರುವ ಸಂಸ್ಕೃತಿ ಸಿದ್ಧಾಂತಗಳ ಮುಖಾಮುಖಿ' ಎಂದು ನೀವು ಹೇಳಿದರೂ ನಿಮ್ಮ ಮನಸ್ಸಿನಲ್ಲಿ ಇರುವುದು ಇಂಗ್ಲಿಷ್‌ಪ್ರಣೀತ ಪಶ್ಚಿಮದ ಸಿದ್ಧಾಂತಗಳು ಮತ್ತು ಅದಕ್ಕೆ ಎದುರಾದ ನಮ್ಮ ದೇಶೀಯ ಸಿದ್ಧಾಂತಗಳು ಎಂಬುದು ಸ್ಪಷ್ಟ. ಈ ಮುಖಾಮುಖಿಯಲ್ಲಿ ಮುಕ್ತ ಮನಸ್ಸು ಮತ್ತು ಎಚ್ಚರ ಎರಡೂ ಅವಶ್ಯ. ಪಶ್ಚಿಮದ ಸಂಸ್ಕೃತಿ ಸಿದ್ಧಾಂತಗಳನ್ನು ಪಶ್ಚಿಮದ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿಗಳಿಂದ ಬೇರ್ಪಡಿಸುವುದು ಸಾಧ್ಯವಿಲ್ಲ. ವಸಾಹತುಶಾಹಿ, ಆಳುವವರ ದೃಷ್ಟಿಕೋನದಿಂದ, ತಾನು ಆಳಿದ ಪ್ರತಿಯೊಂದು ದೇಶದ ಸಂಸ್ಕೃತಿಯನ್ನೂ ಅಳೆಯಿತು, ತೂಗಿತು, ವರ್ಗೀಕರಿಸಿತು, ಲೇಬಲ್ಲು ಹಚ್ಚಿ ಬೆಲೆ ಕಟ್ಟಿತು. ಈ ಜ್ಞಾನ ಆಳುವುದಕ್ಕೆ ಅವರಿಗೆ ಅವಶ್ಯವಾಗಿತ್ತು. ಜ್ಞಾನವನ್ನು, ಆಳುವ ಆಶಯದಿಂದ ನಾವು ಬಿಡುಗಡೆಗೊಳಿಸದೆ ಇದ್ದರೆ ನಾವು, ಒಂದೋ ನಮ್ಮನ್ನು ಆಳಿದ ಬಿಳಿಯರು ಬಿಟ್ಟುಹೋದ ಅಂಗಿ ಚಲ್ಲಣಗಳನ್ನು ತೊಟ್ಟುಕೊಂಡ ನಕಲಿ ಸಾಹೇಬರಾಗುತ್ತೇವೆ ; ಅಥವಾ ನಮ್ಮದೇ ಸಮಾಜದ ದಲಿತರನ್ನು, ಆದಿವಾಸಿಗಳನ್ನು ಮತ್ತು ಬಡಜನರನ್ನು ಮೆಟ್ಟಿ ತುಳಿಯುವ ಬೂಟು ಕಾಲಿನ ಸಾಹೇಬರಾಗುತ್ತೇವೆ. ಈಗಾಗಲೇ ಹಾಗಾಗಿರುವುದಕ್ಕೆ ಉದಾಹರಣೆಗಳಿವೆ. ನರ್ಮದಾ ನದಿ ಯೋಜನೆಯಲ್ಲಿ ನಿರ್ವಸಿತರಾದ ಆದಿವಾಸಿಗಳು ಮತ್ತು ಬಡರೈತರ ಬಗ್ಗೆ ನಮ್ಮ ಧೋರಣೆ, ಬ್ರಿಟಿಷರು ಒಟ್ಟು ಭಾರತೀಯರ ಬಗ್ಗೆ ತಳೆದ ಧೋರಣೆಗಿಂತ ಯಾವ ರೀತಿಯಲ್ಲೂ ಭಿನ್ನವಲ್ಲ.

೪. ಸಂಸ್ಕೃತಿಯ ವೈವಿಧ್ಯ ಕೇವಲ ಎರಡೇ ಕಂಪಾರ್ಟುಮೆಂಟುಗಳಲ್ಲಿ ತೂರಿಸಲು ಆಗದಷ್ಟು ಅಪಾರವಾಗಿದೆ. ಹಾಗೆಯೇ ನೀವು ಬೈನರಿ ಎಂದು ಗುರುತಿಸುವ ವೈವಿಧ್ಯಗಳು ಬದಲಾಗದ, ರೂಪಾಂತರಗೊಳ್ಳದ ಸ್ಥಿರರಚನೆಗಳೇನೂ ಅಲ್ಲ. ನಮ್ಮ ಗ್ರಾಮಗಳು ನಗರಾಭಿಮುಖವಾಗಿರುವಂತೆಯೇ ನಮ್ಮ ನಗರಗಳಲ್ಲಿ ಗ್ರಾಮ ಜೀವನದ ಅಂಶಗಳನ್ನು ಗುರುತಿಸಬಹುದು. ಒಂದು ಇನ್ನೊಂದರಲ್ಲಿ ಬೆರೆತುಹೋಗಿರುವ, ಒಂದು ಇನ್ನೊಂದರ ಛದ್ಮವೇಷವಾಗುವ ಈ ಪ್ರಕ್ರಿಯೆ ನೀವು ಹೆಸರಿಸಿರುವ ಇತರ ಬೈನರಿ ವೈವಿಧ್ಯಗಳಲ್ಲಿಯೂ ಗುರುತಿಸಬಹುದಾಗಿದೆ. ನಾನು ಈ ವ್ಯತ್ಯಾಸಗಳನ್ನು ಅಷ್ಟು ಮುಖ್ಯವೆಂದು ಪರಿಗಣಿಸುವುದಿಲ್ಲ, ಅವುಗಳ ನಡುವೆ ನಾವು ಆಯ್ಕೆ ಮಾಡಬೇಕಾದ ಜರೂರು ಇದೆ ಎಂದೂ ನನಗೆ ಅನ್ನಿಸುವುದಿಲ್ಲ. ಅವು ಇವೆ ಅಷ್ಟೆ. ಆದರೆ ಮನುಷ್ಯನ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ಮತ್ತು ಬದುಕಿನ ಸಾಧ್ಯತೆಗಳ ಕುರಿತು, ಈಗ ವಿಶ್ವಾದ್ಯಂತ ಅಂಗೀಕೃತವಾಗಿರುವ ಪರಿಕಲ್ಪನೆಗಳ ವಿರುದ್ಧ ಹೋಗುವ ಯಾವುದೇ ಆಚರಣೆ, ಕಟ್ಟುಪಾಡು ಯಾ ಅಧಿಕಾರದ ಸಂರಚನೆಯನ್ನೂ ನಾವು ವಿರೋಧಿಸಲೇಬೇಕು. ಅವು ಸ್ಥಳೀಯ, ಜಾನಪದೀಯ, ಗ್ರಾಮಸಮುದಾಯ ಅಥವಾ ಪೂರ್ವದ ಆಚರಣೆಗಳೇ ಆದರೂ ನಾವು ಅವನ್ನು ವಿರೋಧಿಸಬೇಕು. ಸಂಸ್ಕೃತಿ ಎನ್ನುವುದು ಯಾರ ಸೆರೆಮನೆಯೂ ಆಗಕೂಡದು. ಈ ವಿಷಯದಲ್ಲಿ ನಾನು ತತ್ವಜ್ಞಾನಿ ಥಿಯೋಡೊರ್ ಅಡಾರ್ನೊ ಹೇಳಿದ "The highest form of morality is not to feel at home at one's own home" ಎಂಬ ಮಾತನ್ನು ನೂರಕ್ಕೆ ನೂರು ಬೆಂಬಲಿಸುತ್ತೇನೆ.

೫. ಎಷ್ಟು ಬಗೆಯ ಸಂಸ್ಕೃತಿ ಚಿಂತಕರಿದ್ದಾರೋ ಅಷ್ಟು ಬಗೆಯ ಸಿದ್ಧಾಂತಗಳೂ ಇವೆ. ಹಾಗಾಗಿ ನೀವು ನಿರ್ದಿಷ್ಟವಾಗಿ ಇಂತಹವರ ಚಿಂತನೆ ಎಂದು ಹೇಳದೆ ಇದ್ದರೆ ನಿಮ್ಮ ಪ್ರಶ್ನೆಗೆ ಉತ್ತರಿಸುವುದು ಕಷ್ಟ. ಹಿಂದುತ್ವ ಸಿದ್ಧಾಂತದ ಮೂಲ ಪ್ರತಿಪಾದಕರಾಗಿದ್ದ ಸಾವರ್ಕರ್, ಗೊಲ್ವಾಲ್‌ಕರ್ ಮತ್ತು ಹೆಡಗೇವಾರ್ ಕೂಡ ''ಸಂಸ್ಕೃತಿ ಚಿಂತಕರು'' ಎಂದೇ ನಾನು

## ಕರ್ನಾಟಕದ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ



ಭಾವಿಸುತ್ತೇನೆ. ತಮ್ಮ ಸಂಸ್ಕೃತಿ ಚಿಂತನೆ ಮುಖಾಂತರ, ಅವರು ಈ ದೇಶದ ಬಹುರೂಪಿ, ಬಹುವಚನಿ ಮತ್ತು ಬಹುಮತಗಳ ಸಂಸ್ಕೃತಿಯ ಅಸ್ತಿತ್ವವನ್ನೇ ಅಲ್ಲಗಳೆದರು. ಹಾಗೆಯೇ ನಮ್ಮ ದೇಶೀಯವಾದಿಗಳು ಕೂಡ ಒಂದು ಅರ್ಥದಲ್ಲಿ ಈ ದೇಶದ ಸಂಸ್ಕೃತಿಯ ಬಹು ಮುಖವನ್ನು ಅಲ್ಲಗಳೆಯುವ ಮೂಲಭೂತವಾದಿಗಳು. ಅವರೂ ಸಹ ಗತಕಾಲದ ಒಂದು ರಮ್ಯ ಕಲ್ಪನೆಗೆ ಜೋತು ಬಿದ್ದಿದ್ದಾರೆ ಮತ್ತು ಕಾಲ ಅಲ್ಲಿಂದ ಮುಂದೆ ಚಲಿಸದೆ ಸ್ಥಗಿತ ಗೊಂಡಿದೆ ಎಂದು ಭ್ರಮಿಸಿದ್ದಾರೆ. ಸಂಸ್ಕೃತಿಯ ಚಲನಶೀಲತೆ, ಪರಿವರ್ತನಶೀಲತೆಗಳನ್ನು ಗುರುತಿಸದ ಎಲ್ಲ ಸಂಸ್ಕೃತಿ ಸಿದ್ಧಾಂತಗಳೂ ಅವಾಸ್ತವ. ಗತಕಾಲದ ಸಂಸ್ಕೃತಿ ಎನ್ನುವುದು ಕೂಡ ವರ್ತಮಾನ ದಲ್ಲಿ, ನಾವು ನಮ್ಮ ಸದ್ಯದ ಅಗತ್ಯಗಳಿಗೆ ಬೇಕಾದಂತೆ ಮತ್ತು ಸದ್ಯದ ನಮ್ಮ ನಿಲುವಿಗೆ ತಕ್ಕಂತೆ ರೂಪಿಸಿಕೊಂಡ ಒಡವೆ. ಹಾಗಾಗಿ ಸಂಸ್ಕೃತಿಯ ವಾರಸುದಾರಿಕೆ ಎನ್ನುವುದೇ ಒಂದು ಭ್ರಮೆ; ಅದು ಒಂದು ರಾಜಕೀಯ ಸಿದ್ಧಾಂತವಾದಾಗಲಂತೂ ಅತ್ಯಂತ ಅಪಾಯಕಾರಿ.


ಜಿ. ರಾಜಶೇಖರ, ಎಲ್.ಐ.ಸಿ ಆಫ್ ಇಂಡಿಯ, ಡಿವಿಜನಲ್ ಆಫೀಸು

'ಜೀವನಕೃಷ್ಣ', ಅಜ್ಜರಕಾಡು, ಉಡುಪಿ - ೫೭೬ ೧೦೧


## ಸಂಸ್ಕೃತಿ – ವಾಸ್ತವ ಜೀವನವಿಧಾನ

ಡಾ|| ಕೆ. ವಿ. ನಾರಾಯಣ

೧. ಸಂಸ್ಕೃತಿ ಚಿಂತನೆ ನಿರ್ವಾತದಲ್ಲಿ ನಡೆಯುವುದಿಲ್ಲ. ಹಾಗೆಯೇ ಅದು ಶುದ್ಧ ಬೌದ್ಧಿಕ ಚಟುವಟಿಕೆಯೂ ಅಲ್ಲ. ನಿರಂತರವಾಗಿ ನಡೆಯುತ್ತಿರುವ ಪಲ್ಲಟಗಳನ್ನು, ಪರ್ಯಾಯಗಳನ್ನು ಗುರುತಿಸುತ್ತಲೇ ಅವುಗಳ ಬಗೆಗೆ ಒಂದು ಮೌಲ್ಯಾತ್ಮಕ ನಿಲುವನ್ನು ಸಂಸ್ಕೃತಿ ಚಿಂತಕರು ತಳೆಯಬೇಕಾಗುತ್ತದೆ. ಆದರೆ ಈ ನಿರ್ಧಾರಗಳಿಗೆ ನಿರ್ದೇಶನ ಎಲ್ಲಿಂದ ಬರುತ್ತದೆ ಎನ್ನುವುದು ಮುಖ್ಯ. ಪಲ್ಲಟಗಳಿಗೆ ಕಾರಣವಾಗುವ ಮೂಲಗಳೇ ಅವುಗಳ ಬಗೆಗೆ ನಮ್ಮ ನಿರ್ಣಯಗಳನ್ನು ನಿರ್ದೇಶಿಸುತ್ತಿದ್ದರೆ ಆಗ ಅದರ ಬಗೆಗೆ ನಾವು ಎಚ್ಚರಿಕೆಯಿಂದ ಇರಬೇಕಾಗುತ್ತದೆ. ಜಾಗತಿಕ ನೆಲೆಗಳಲ್ಲಿ ವೈಚಾರಿಕ ಜಾಲಗಳು ಹರಡಿ ಕೊಳ್ಳುತ್ತಿರುವ ಇಂದಿನ ದಿನಮಾನಗಳಲ್ಲಿ ಈ ಬಗ್ಗೆ ಹೆಚ್ಚು ಎಚ್ಚರದಿಂದ ಇರುವುದು ಎಂದಿಗಿಂತ ಹೆಚ್ಚು ಅಗತ್ಯವಾಗಿದೆ. ಮಾಹಿತಿಯ ಮಹಾಪೂರದಲ್ಲಿ ಮಾಹಿತಿ, ತಿಳುವಳಿಕೆ ಮತ್ತು ವಿವೇಕಗಳ ನಡುವಣ ಗಡಿಗೆರೆಗಳು ಅಳಿಸಿಹೋಗುತ್ತಿವೆ. ತಂತ್ರಜ್ಞಾನದ ಮೋಹ ಈಗ ಉಂಟುಮಾಡುತ್ತಿರುವ ಒತ್ತಡಕ್ಕಿಂತ ಬಲವಾದ ಒತ್ತಡ ಇನ್ನೊಂದಿಲ್ಲ. ಮೆದುಳು ಗಳನ್ನು ವಸಾಹತುಗಳನ್ನಾಗಿ ಮಾಡಿಕೊಳ್ಳುವ ಸಾಮರ್ಥ್ಯ ಅದಕ್ಕಿದೆ. ಯಾವುದೇ ತಾತ್ವಿಕ ಒತ್ತಡಕ್ಕಿಂತ ಇದು ಹೆಚ್ಚು ಭಯಾನಕವಾಗಿ ನನಗೆ ತೋರುತ್ತಿದೆ.

೨. ಕನ್ನಡ ಸಾಹಿತ್ಯ ವಿಮರ್ಶೆಯ ಮುಖ್ಯಧಾರೆ ಯಾವಾಗಲೂ ಸಂಸ್ಕೃತಿನಿಷ್ಠ ಪ್ರಶ್ನೆಗಳನ್ನೇ ಅವಲಂಬಿಸಿ ಬೆಳೆದಿದೆ. ಶುದ್ಧ ಸಾಹಿತ್ಯ ವಿಮರ್ಶೆ ಎಂಬುದೂ ಇದೆ. ಆದರೆ ಅದರ ನಿರುಪಯುಕ್ತತೆ ಈಗಾಗಲೇ ಸಾಬೀತಾಗಿದೆ. ಅದೀಗ ಜಾಡಿಗೆ ಬಿದ್ದ ಪಿಎಚ್.ಡಿ. ಥೀಸಿಸ್‌ಗಳಲ್ಲಿ ಉಸಿರೆಳೆಯುತ್ತಿದೆ; ಕೆಲವು ಕಡೆ ಸಾಹಿತ್ಯಾಧ್ಯಯನದ ಕೋರ್ಸುಗಳಲ್ಲಿ ಅದು ಚಲಾವಣೆಯಲ್ಲಿ ಇದ್ದೀತು. ಕಳೆದ ಏಳೆಂಟು ದಶಕಗಳ ಸಾಹಿತ್ಯ ವಿಮರ್ಶಾ ಚಟುವಟಿಕೆಗಳ ಹಿಂದೆ ಇದ್ದ ಮುಖ್ಯ ಪ್ರೇರಣೆಗಳು ಸಾಂಸ್ಕೃತಿಕ ನೆಲೆಯಿಂದಲೇ ಬಂದಿವೆ. ಅಥವಾ ಆ ಚಟುವಟಿಕೆಗಳ ಸ್ವರೂಪವನ್ನು ಸಂಸ್ಕೃತಿನಿಷ್ಠ ನೆಲೆಯಿಂದ ಗ್ರಹಿಸುವ ಯತ್ನಗಳು ನಡೆದಿವೆ. ಕಳೆದ ಒಂದೆರಡು ದಶಕಗಳಲ್ಲಿ ನಮ್ಮ ಚರ್ಚೆಯ ಪರಿಕರ, ಪರಿಭಾಷೆಗಳು ಬದಲಾಗಿವೆ. ಅಲ್ಲದೆ ಸಂಸ್ಕೃತಿನಿಷ್ಠ ನೆಲೆಯ ಬಗ್ಗೆ ವಿಮರ್ಶಕರು ಸ್ವತಃ ಜಾಗೃತರಾಗಿದ್ದಾರೆ. ಹಿಂದಿನವರು ಹಾಗೆ ತಾವೇ ಜಾಗೃತರಾಗಿರದಿದ್ದರೂ ಅವರ ಚರ್ಚೆಗಳು ಮಾತ್ರ ಸಂಸ್ಕೃತಿನಿಷ್ಠವೇ ಆಗಿದ್ದವೆಂಬುದು ನನ್ನ ಗ್ರಹಿಕೆ. ಹಾಗಿಲ್ಲದ ಚರ್ಚೆಗಳು ಕೇವಲ ಬೌದ್ಧಿಕ ಆಸಕ್ತಿಗಳಾಗಿ ಮಾತ್ರ ಈಗ ಉಳಿದಿವೆ.

ಸಂಸ್ಕೃತಿನಿಷ್ಠ ವಿಮರ್ಶೆಯು ಸಾಹಿತ್ಯ ಕೃತಿಗಳನ್ನು ಅಧ್ಯಯನಕ್ಕೆ ಅಗತ್ಯವಾದ ಮಾಹಿತಿ ಆಕರಗಳು ಎಂದು ಭಾವಿಸಬಹುದು. ಇಲ್ಲವೇ ಸಂಸ್ಕೃತಿಯ ಸಂಕೀರ್ಣ ಸ್ವರೂಪವನ್ನು ತಿಳಿಯಲು ಒಳನೋಟ ನೀಡುವ ಮೂಲವೆಂದೂ ತಿಳಿಯಬಹುದು. ಅಥವಾ ಸಾಂಸ್ಕೃತಿಕ ವಾಗ್ವಾದಕ್ಕೆ ಅಗತ್ಯವಾದ ನಿದರ್ಶನವೆಂದೂ ಪರಿಗಣಿಸಬಹುದು. ಇವೆಲ್ಲವೂ ಕನ್ನಡದಲ್ಲಿ ಸದ್ಯ ಜಾರಿಯಲ್ಲಿರುವ ವಿಧಾನಗಳೇ ಆಗಿವೆ. ಆಸಕ್ತಿಗೆ ಅನುಗುಣವಾಗಿ ವಿಶ್ಲೇಷಣೆಯ ವಿಧಾನಗಳೂ ಬದಲಾಗುತ್ತವೆ.

೩. ವಿಭಿನ್ನ ಪರಿಸರ ಎನ್ನುವಾಗ ನಾವು ಬಳಸುತ್ತಿರುವ ಸಂಸ್ಕೃತಿ ಸಿದ್ಧಾಂತಗಳು ನಮ್ಮ ಕಾಲದೇಶಗಳ ಅಗತ್ಯಕ್ಕೆ ತಕ್ಕಂತೆ ರೂಪುಗೊಂಡಿವೆಯೋ ಇಲ್ಲವೋ ಎಂಬ ಕಡೆಗೆ ಗಮನ ಹರಿಸುತ್ತಿಲ್ಲ ಎನ್ನುವ ವಿಚಾರವಿದ್ದಂತಿದೆ. ಈ ಚರ್ಚೆಯೂ ಕೂಡ ನಮ್ಮಲ್ಲಿ ಬಹುದಿನಗಳಿಂದ ನಡೆಯುತ್ತಿದೆ. ನಮ್ಮ ಪರಿಸರದಲ್ಲೇ ರೂಪುಗೊಂಡಿದ್ದರೂ ಭಿನ್ನ ಕಾಲದ ಚಿಂತನೆಗಳನ್ನು ಇನ್ನೊಂದು ಕಾಲದ ಸಾಹಿತ್ಯ ಕೃತಿಗಳ ವಿಶ್ಲೇಷಣೆಯಲ್ಲಿ ಬಳಸುವುದರ ವಿರುದ್ಧವೂ ಟೀಕೆಗಳು ಬಂದಿವೆ. ಅದೇನೇ ಇರಲಿ, ಈ ವಾಗ್ವಾದವು ಮುಖ್ಯವಾಗಿ ಸಾಹಿತ್ಯ ಕೃತಿಗಳನ್ನು ಕುರಿತ ಅಧ್ಯಯನದ ಉದ್ದೇಶವನ್ನೇ ವ್ಯಾಖ್ಯಾನಿಸಲು ಒತ್ತಾಯಿಸುತ್ತಿವೆ. ಅಧ್ಯಯನಕಾರರು ಸಾಹಿತ್ಯ ಕೃತಿಗಳನ್ನು ಅವುಗಳ ಅನನ್ಯತೆಯ ನೆಲೆಯಲ್ಲಿ ಗ್ರಹಿಸುತ್ತಾರೋ ಅಥವಾ ಅವು ಒಂದು ಸಂಸ್ಕೃತಿಯ ಸದ್ಯದ ಉಪಲಬ್ಧ ಸಂಗತಿಗಳು ಎಂದು ತಿಳಿಯುತ್ತಾರೋ ಎಂಬುದು ಮೊದಲು ನಿರ್ಧಾರವಾಗಬೇಕು. ಮೊದಲ ನೆಲೆಯವರಾದರೆ ಅವರು ಸಹಜವಾಗಿಯೇ ತಮ್ಮ ವಿಶ್ಲೇಷಣೆಯಲ್ಲಿ "ಅನ್ಯ ಕಾಲ ದೇಶ"ದ ಮಾದರಿಗಳನ್ನು ನಿರಾಕರಿಸುತ್ತಾರೆ. ಎರಡನೆಯ ನೆಲೆಯವರಾದರೆ ಅವರ ಉದ್ದೇಶವೇ ಸಂಸ್ಕೃತಿಯ ಚಲನಶೀಲ ನೆಲೆಗಳನ್ನು ತಿಳಿಯುವುದೇ ಆಗಿರುವುದರಿಂದ ಅದಕ್ಕನುಗುಣವಾಗಿ ಅವರು ಯೋಗ್ಯ ಪರಿಕರ ಗಳನ್ನು, ಅವು ಯಾವ ಕಾಲದೇಶದ್ದಾಗಿರಲೀ ಅವುಗಳನ್ನು ಪಡೆದುಕೊಳ್ಳುತ್ತಾರೆ. ಆದರೆ ಮುಖ್ಯ ಪ್ರಶ್ನೆ ಇರುವುದು ಪರಿಕರಗಳಲ್ಲಿ ಅಲ್ಲ, ಅವುಗಳ ಹಿಂದಿನ ತಾತ್ವಿಕತೆಯಲ್ಲಿ. ತಾತ್ವಿಕತೆಯನ್ನು ಬಿಟ್ಟುಕೊಟ್ಟ ಪರಿಕರಗಳು ಇರುವುದು ಸಾಧ್ಯವೇ ಎಂದರೆ ಸಾಧ್ಯ ಎಂಬುದು ನನ್ನ ಉತ್ತರ. ಆದರೆ ಇಲ್ಲಿ ಅಧ್ಯಯನಕಾರರ ಜವಾಬ್ದಾರಿ ಹೆಚ್ಚಿರುತ್ತದೆ. ಆದರೆ ತಾತ್ವಿಕತೆಯೊಡನೆ ಪರಿಕರಗಳನ್ನು ನಾವೇ ರೂಪಿಸುವಷ್ಟು ಪ್ರಬುದ್ಧ ಚಿಂತನಾಕ್ರಮಗಳನ್ನು ರೂಪಿಸಿಕೊಳ್ಳುವುದು ಸಾಧ್ಯವಾದರೆ ಅದಕ್ಕಿಂತ ಉತ್ತಮವಾದ ದಾರಿ ಇನ್ನೊಂದು ಇರಲಾರದು. ಆದರೆ ನಮ್ಮ ಮಾನವಿಕ ಶಾಸ್ತ್ರಗಳಲ್ಲಿ, ಸಮಾಜಶಾಸ್ತ್ರಗಳಲ್ಲಿ ಈ ಎಚ್ಚರ ಇನ್ನೂ ಮೂಡಿಲ್ಲದಿರುವುದು ಕಣ್ಣಿಗೆ ರಾಚುವಂತಿದೆ.

೪. ಬೈನರಿ ಗ್ರಹಿಕೆ ಇಲ್ಲವೇ ಚಿಂತನೆ ತಂತಾನೇ ಪರಮವೂ ಅಲ್ಲ. ಹಾಗೆಂದು ಅದು ತ್ಯಾಜ್ಯವೆಂದೂ ಹೇಳಬರುವುದಿಲ್ಲ. ನನ್ನ ಮಟ್ಟಿಗೆ ಸಮಸ್ಯೆ ಇರುವುದು ಹೀಗೆ: ಬೈನರಿ ಗ್ರಹಿಕೆಯಲ್ಲಿ ನಾವು ಮುಖಾಮುಖಿಯಾಗಿಸುವ ಎರಡು ಸಂಗತಿಗಳ ನಡುವೆ ಯಾವ ಬಗೆಯ ಸಂಬಂಧವಿದೆಯೆಂದು ತಿಳಿಯುತ್ತೇವೆ ಎಂಬುದು ಮುಖ್ಯ. ಬಹುಪಾಲು ಬೈನರಿ ಗ್ರಹಿಕೆಗಳಲ್ಲಿ ಜೋಡಿಯಾಗುವ ಎರಡು ಸಂಗತಿಗಳಲ್ಲಿ ಒಂದು ಸ್ಥಿರ, ಪ್ರಧಾನ ಅಥವಾ ಮೌಲ್ಯಾತ್ಮಕ ಹೆಚ್ಚಳವನ್ನು ಪಡೆದಿದೆ ಎಂದು ತಿಳಿಯುವ ಪ್ರವೃತ್ತಿ ಇದೆ. ಜಾಗತಿಕ-ಸ್ಥಳೀಯ ಎಂಬ ಜೋಡಿಯನ್ನೇ ನೋಡೋಣ. ಇಲ್ಲಿ ಜಾಗತಿಕವಾದುದು ಸ್ಥಿರವೆಂದೂ ಸ್ಥಳೀಯವಾದುದು ಚಲನಶೀಲವೆಂದೂ ಭಾವಿಸುತ್ತೇವೆ. ಶಿಷ್ಟ-ಜಾನಪದ ಜೋಡಿಯಲ್ಲೂ ಇದೇ ನೆಲೆ ಇರುವುದನ್ನು ಗುರುತಿಸಬಹುದು. ಅಲ್ಲದೆ ಅಧ್ಯಯನಕಾರರು ಈ ಬೈನರಿ ಜೋಡಿಗಳಲ್ಲಿ ತಾವು ಯಾವುದರ ಪರ ಎಂಬುದನ್ನೂ ಹಿಂಜರಿಕೆ ಇಲ್ಲದೆ ಸ್ಪಷ್ಟಪಡಿಸಿ ಕೊಳ್ಳುವುದರಿಂದ ಅವರ ಗ್ರಹಿಕೆಗಳು ಅಷ್ಟರ ಮಟ್ಟಿಗೆ 'ನಿರುದ್ದಿಷ್ಟ' ವಾಗುವುದಿಲ್ಲ. ಅಧ್ಯಯನಗಳು ನಿರುದ್ದಿಷ್ಟವಾಗಬೇಕಿಲ್ಲವಲ್ಲ ಎಂಬ ವಾದವನ್ನು ಮುಂದಿಡುವುದಾದರೆ ಅದು ನಮ್ಮನ್ನು ಬೇರೆ ಚರ್ಚೆಯ ಕಡೆಗೆ ಎಳೆದೊಯ್ಯುತ್ತದೆ. ಆದರೆ ಇಂದಿನ ಡಿಜಿಟಲ್ ಚಿಂತನೆಯ ಕಾಲದಲ್ಲಿ ಬೈನರಿ ಗ್ರಹಿಕೆಗಳನ್ನು ಅಷ್ಟು ಸುಲಭವಾಗಿ ಗುಡಿಸಿಹಾಕಲು ಬರುವುದಿಲ್ಲ. ಅಲ್ಲದೆ ಇದಕ್ಕೆ ಪರ್ಯಾಯವಾಗಿ ಚಿಂತಿಸುವವರು ನೀಡುವ ಮಾದರಿಗಳು ಕೂಡ ಬೈನರಿ ಗ್ರಹಿಕೆಗಳನ್ನು ಹೇಗೆ ಉತ್ತಮಗೊಳಿಸಬಹುದು ಎಂಬ ಕಡೆಗೆ ಗಮನ ಹರಿಸಿವೆ. ಎರಡು ತುದಿಗಳ ನಡುವೆ ಒಂದು ಗ್ರೇ ಏರಿಯಾ ಇರುತ್ತದೆ; ಅದೂ ಕೂಡ ನಮ್ಮ ಚಿಂತನೆಯಲ್ಲಿ ಜಾಗ ಪಡೆಯಬೇಕು ಎನ್ನುವುದು ಅಂತಹ ಪರ್ಯಾಯ ಗ್ರಹಿಕೆಗಳಲ್ಲಿ ಒಂದು. ಇಲ್ಲಿಯೂ ಬೈನರಿ ಗ್ರಹಿಕೆಯನ್ನು ನಿರಾಕರಿಸಲಾಗಿಲ್ಲವಲ್ಲ.

೫. ಇದೊಂದು ನೈತಿಕ ನೆಲೆಯ ಪ್ರಶ್ನೆಯೆಂಬಂತೆ ತೋರುತ್ತದೆ. ಸಂಸ್ಕೃತಿ ಚಿಂತಕರು ತಮ್ಮ ಸಿದ್ಧಾಂತಗಳನ್ನು ಜನರ ವಾಸ್ತವ ಜೀವನವಿಧಾನಗಳ ಮೂಲಕವೇ ಪಡೆಯ ಬೇಕಷ್ಟೆ. ಹಾಗಿಲ್ಲದಿದ್ದಲ್ಲಿ ಅವರ ಸಿದ್ಧಾಂತಗಳಿಗೆ ಏನು ಬೆಲೆಯಿದೆ? ಆದರೆ ಜೀವನ ವಿಧಾನಗಳ ನೆಲೆಗಟ್ಟನ್ನು ಗ್ರಹಿಸುವಲ್ಲಿ, ಅದರಿಂದ ಅಗತ್ಯವಾದ ತಾತ್ವಿಕ ಒಳನೋಟ ಗಳನ್ನು ಪಡೆಯಲು ಆಗದಿದ್ದಲ್ಲಿ ಅದು ಚಿಂತಕರ ಅಸಾಮರ್ಥ್ಯವೆಂದು ತಿಳಿಯ ಬೇಕಾಗುತ್ತದೆ. ಆದರೆ ಸಮುದಾಯಗಳನ್ನು ತಮ್ಮ ಚಿಂತನೆಗೆ ವಸ್ತುಸಾಮಗ್ರಿಗಳನ್ನಾಗಿ ಬಳಸಿ ತಾವು ಅದರಿಂದ ಹೊರಗೆ ಉಳಿಯುವ ಚಿಂತಕರ ಬಗ್ಗೆ ಮೇಲಿನ ಪ್ರಶ್ನೆ ಇದೆಯಾದರೆ ಆಗ ಅದು ನಮ್ಮ ಬೌದ್ಧಿಕ ಕ್ಷೇತ್ರಕ್ಕೆ ಎಂದಿನಿಂದಲೂ ಅಂಟಿದ ದ್ವಿಧಾಭಾವದ ಮುಂದುವರಿಕೆ ಎಂದು ತಿಳಿಯಬೇಕಾಗುತ್ತದೆ.


ಡಾ|| ಕೆ. ವಿ. ನಾರಾಯಣ, ಕನ್ನಡ ವಿಶ್ವವಿದ್ಯಾಲಯ

ಹಂಪಿ, ವಿದ್ಯಾರಣ್ಯ - ೫೮೩ ೨೭೬



## ಕರ್ನಾಟಕದ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ

ಡಾ|| ಮೊಗಳ್ಳಿ ಗಣೇಶ್

**ಪ್ರಶ್ನೆ ಒಂದರ ಟಿಪ್ಪಣಿ**

ಪ್ರತಿಯೊಂದು ಸಮುದಾಯವೂ ನಿರಂತರವಾಗಿ ಅಸ್ತಿತ್ವದ ಹುಡುಕಾಟದಲ್ಲಿ ತೊಡಗಿರುತ್ತದೆ. ಆ ಕಾರಣವಾಗಿ ತನ್ನ ಸಂಸ್ಕೃತಿ ಮತ್ತು ಪರಿಸರದ ಒಳಗೆ ಹಲವಾರು ಮಾರ್ಪಾಟುಗಳನ್ನು ಮಾಡಿಕೊಳ್ಳುವುದು ಅನಿವಾರ್ಯ. ಕಾಲದ ಬೇರೆಬೇರೆ ಅವಸ್ಥೆಗಳು ಪರಂಪರೆಯ ಧಾರೆಯಲ್ಲಿ ರೂಪಾಂತರಗಳನ್ನು ನಿರ್ಮಿಸುತ್ತಲೇ ಗತಕಾಲದ ಅನುಭವಗಳನ್ನು ಆಧುನಿಕತೆಯ ಜೊತೆಗೆ ಅನುಸಂಧಾನಗೊಳಿಸುತ್ತಿರುತ್ತವೆ. ಗತಕಾಲವನ್ನು ನಿರಾಕರಿಸುವ ಯಾವ ಸಂಸ್ಕೃತಿಗಳೂ ಉಳಿಯಲಾರವು. ಆದರೆ ಸಂಸ್ಕೃತಿಯ ಸೃಜನಶೀಲ ಸ್ವಭಾವ ಎಂಥದೆಂದರೆ ಅದು ಅತ್ಯಾಧುನಿಕ ಸ್ಥಿತಿಯನ್ನೂ ಗತಕಾಲದ ರೂಪಕ್ಕೆ ಅಳವಡಿಸಬಲ್ಲದು; ಅಂತೆಯೇ ಆದಿಮ ಅವಸ್ಥೆಯನ್ನೇ ಹೊಸ ಜಗತ್ತಿನ ಸ್ವರೂಪದಲ್ಲೂ ಬಿಂಬಿಸಬಲ್ಲದು. ಅಂದರೆ, ಸಂಸ್ಕೃತಿಯ ಪ್ರವೃತ್ತಿಯೇ ನಿರಂತರವಾಗಿ ಗತಕಾಲವನ್ನೂ ಹೊಸ ಕಾಲವನ್ನೂ ಇರುವ ಕಾಲದ ಜೊತೆಗೆ ಸಂಯೋಗಿಸುತ್ತಿರುತ್ತದೆ. ಇದು ಸಂಸ್ಕೃತಿಗಳ ಸ್ವಯಂ ಒತ್ತಡ. ಇಂತಹ ಒತ್ತಡ ಕೂಡ ನಿಸರ್ಗದ ಸಾವಯವ ಸಂಬಂಧಗಳ ಕಾರಣವಾಗಿ ಉಂಟಾಗಿರುತ್ತದೆ. ಅಲ್ಲದೆ ಮೇಲ್ಪದರದಲ್ಲಿ ನಾಗರಿಕತೆಗಳ ಭೌತಿಕ ರೂಪಾಂತರವೂ ಸಂಸ್ಕೃತಿಗಳ ಮೇಲೆ ಹಲವಾರು ಒತ್ತಡಗಳನ್ನು ಬೀರಬಲ್ಲದು. ಸಂಸ್ಕೃತಿಗಳು ಯಾವತ್ತೂ ನಾಗರಿಕತೆಗಳ ವೇಗದ ಜೊತೆ ಸ್ಪರ್ಧಿಸಲಾರವು. ನಾಗರಿಕತೆ ಆ ಮಟ್ಟಿಗೆ ಸಂಸ್ಕೃತಿಗಳ ಮೇಲೆ ವ್ಯವಸ್ಥೆಯ ಯಾಜಮಾನ್ಯವನ್ನು ಬೇರೆಬೇರೆ ಅವತಾರಗಳಲ್ಲಿ – ಅಂದರೆ ಧರ್ಮ, ವಿಜ್ಞಾನ, ತಂತ್ರಜ್ಞಾನ, ರಾಜಕಾರಣಗಳ ಮೂಲಕ – ಹೇರಬಲ್ಲದು. ಹೀಗಾಗಿಯೇ ವಸಾಹತುಶಾಹಿ ಕೂಡ ನಾಗರಿಕತೆಯ ಮುಖವಾಣಿಯಲ್ಲೇ ನಮ್ಮ ಸಂಸ್ಕೃತಿಗಳ ಒಳಕ್ಕೆ ಪ್ರವೇಶ ಮಾಡಿದ್ದು. 'ನಾಗರಿಕತೆ' ಎನ್ನುವ ಅವಸ್ಥೆಯು ಹೆಚ್ಚು ಪ್ರಭುತ್ವ ಕೇಂದ್ರಿತವಾಗಿದ್ದು ಅದು ಸಂಸ್ಕೃತಿಯ ಸ್ಥಾನವನ್ನು ಸದಾ ನುಂಗುವಂತಿರುತ್ತದೆ. ಸಂಸ್ಕೃತಿಗಳ ಬಹುಪಾಲು ಎಲ್ಲ ವಿಸ್ಮೃತ ಸ್ಥಿತಿಯು ನಾಗರಿಕತೆಯ ಆಕ್ರಮಣದಿಂದಲೇ ಉಂಟಾಗುತ್ತಿರುತ್ತದೆ. ನಾಗರಿಕತೆಗಳ ಮೇಲಾಟವು ಜಗತ್ತಿನ ಉದ್ದಕ್ಕೂ ಎಲ್ಲ ಬಗೆಯ ಸ್ಥಳೀಯ ಸಂಸ್ಕೃತಿಗಳ ಮೇಲೆ ಒತ್ತಡ ಹೇರುವಂತೆಯೇ ಭವಿಷ್ಯದ ಮೇಲೂ ತನ್ನ ಪ್ರಭಾವವನ್ನು ಬೀರುತ್ತದೆ.

ಜೊತೆಗೆ ನಾಗರಿಕತೆಗಳ ಆವಿಷ್ಕಾರ ರೂಪದಲ್ಲಿ ವಿಕಾಸವಾಗಿ ಬಂದು ಎದುರಾಗುವ ಆಧುನಿಕತೆಯ ಕನಸುಗಳು, ಭ್ರಮೆಗಳು, ವಿಮುಕ್ತಿಯ ಆಶಯಗಳು ಕೂಡ ಸಂಸ್ಕೃತಿಯ ಮೇಲೆ ಅನಿವಾರ್ಯ ಸ್ಥಿತ್ಯಂತರದ ಸವಾಲುಗಳನ್ನು ಒಡ್ಡುತ್ತವೆ. ಆಧುನಿಕತೆಯ ಜೊತೆಗೆ ಅನುಸಂಧಾನಗೊಳ್ಳದೆ ಸಂಸ್ಕೃತಿಗಳಿಗೆ ಅನ್ಯಮಾರ್ಗವೇ ಇಲ್ಲ. ಗಮನಿಸಬೇಕಾದ ಮತ್ತೊಂದು ಪ್ರಮುಖ ಸಂಗತಿ ಎಂದರೆ, ದಾಸ್ಯವನ್ನು ಹೇರುವ ಊಳಿಗಮಾನ್ಯ ಪ್ರಭುತ್ವದ ಸಂಕೋಲೆಯಿಂದ ಬಿಡಿಸಿಕೊಳ್ಳುವ ಒತ್ತಡದಿಂದಲೂ ಸಂಸ್ಕೃತಿಗಳು ತಮ್ಮ ಪೂರ್ವಚಹರೆಗಳನ್ನು ಕಳೆದುಕೊಳ್ಳಲು ತುದಿಗಾಲಲ್ಲಿ ನಿಂತಿರುತ್ತವೆ. ಸಂಸ್ಕೃತಿಗೆ ಯಾವ ಅಧಿಕಾರವೂ ಅಸ್ತಿತ್ವವೂ ಇಲ್ಲ ಎಂದು ನಿಚ್ಚಳವಾಗಿ ಸಮುದಾಯಗಳಿಗೆ ಮನವರಿಕೆ ಆದಾಗಲೂ ಅವು ತಮ್ಮ ಸಾಂಸ್ಕೃತಿಕ ಮೌಲ್ಯಗಳನ್ನು ಪರಿಷ್ಕರಿಸಿಕೊಳ್ಳುತ್ತವೆ. ಹಳೆಯ ಯುಗದ ಸಂಸ್ಕೃತಿಗಳು ದಣಿದಾಗಲೂ ಕೂಡ ಅವು ಹೊಸ ಯುಗದ ಬೌದ್ಧಿಕ ಪ್ರತಿರೋಧವನ್ನು ತುಂಬಿಕೊಳ್ಳುತ್ತವೆ. ತಳ ಸಮುದಾಯಗಳು ಪ್ರತಿಯೊಂದು ಚಾರಿತ್ರಿಕ ಪಲ್ಲಟದಲ್ಲೂ ತನಗೆ ಬೇಕಾದ ಮೌಲ್ಯಗಳ ಜೊತೆ ಅನುಸಂಧಾನಗೊಂಡಿವೆ. ಬಸವಣ್ಣನ ವಚನ ಚಳವಳಿ ಯಲ್ಲಾಗಲಿ ಭಕ್ತಿ ಪಂಥ ಚಳವಳಿಯಲ್ಲಾಗಲಿ, ಮಲೆಮಾದೇಶ್ವರ ಜುಂಜಪ್ಪ ಸಿರಿ ಕಾವ್ಯಗಳ ಸಾಂಸ್ಕೃತಿಕ ವೀರರ ದೇಶೀ ಚಳವಳಿಯ ಕಾಲದಲ್ಲಾಗಲಿ ; ಕೊನೆಗೆ ವಸಾಹತುಶಾಹಿ ವ್ಯವಸ್ಥೆ ಯಲ್ಲೂ ಮತ್ತು ಬಾಬಾಸಾಹೇಬ್ ಅಂಬೇಡ್ಕರ್ ಅವರ ಬೌದ್ಧಧರ್ಮ ಮತಾಂತರದ ಪ್ರಕ್ರಿಯೆಯಲ್ಲಾಗಲಿ ಅಂತಹ ಸಮುದಾಯಗಳು ತಮ್ಮ ಸಾಂಸ್ಕೃತಿಕ ನೀತಿಯನ್ನೂ ಪ್ರತಿರೋಧ ಶಕ್ತಿಯನ್ನೂ ಪುನರುಜ್ಜೀವನಗೊಳಿಸಿಕೊಂಡಿವೆ. ಈ ಪ್ರಕ್ರಿಯೆಯು ಅತ್ಯಂತ ಸೋಕ್ಷ್ಮವಾದದ್ದು ಹಾಗೆಯೇ ದೀರ್ಘಕಾಲೀನವಾದುದು. ಇಂತಹ ವಿಕಾಸವನ್ನು ಅಖಂಡವಾಗಿ ಗ್ರಹಿಸದೆ ಹೋದರೆ ಹುಸಿ ಸಂಸ್ಕೃತಿ ಚಿಂತನೆಗಳು ಬೌದ್ಧಿಕ ಪರಂಪರೆಯನ್ನು ಅಪವ್ಯಾಖ್ಯಾನಕ್ಕೆ ಒಳಪಡಿಸುತ್ತವೆ. ಸಂಸ್ಕೃತಿ ಚಿಂತನೆಯನ್ನು ಕನ್ನಡ ಸಾಹಿತ್ಯದ ಪರಿಕರಗಳಿಂದ ಪರಿಶೀಲಿಸುತ್ತಿರುವ ಸದ್ಯದ ಎಷ್ಟೋ ವಿದ್ವಾಂಸರು ಸಂಸ್ಕೃತಿ ವಿಕಾಸದ ಬಗ್ಗೆ ಬಹಳ ಮುಗ್ಧರು. ಡಾರ್ವಿನ್ನನ ಜೀವ ವಿಕಾಸದ ಸಿದ್ಧಾಂತಕ್ಕೂ ಈ.ಬಿ. ಟೇಲರನ ಸಂಸ್ಕೃತಿ ವಿಕಾಸದ ವಿವೇಕಕ್ಕೂ ಕಾರ್ಲ್ ಮಾರ್ಕ್ಸ್‌ನ ಸಾಮಾಜಿಕ ವ್ಯವಸ್ಥೆಯ ವಿಕಾಸ ತತ್ವಕ್ಕೂ ಅವಿನಾಭಾವ ಸಂಬಂಧವಿದೆ. ಜೀವ ವಿಕಾಸದ ಒತ್ತಡದಂತೆಯೇ ಸಂಸ್ಕೃತಿಗಳು ಬಹುರೂಪವಾಗಿ ವಿಸ್ತರಿಸಿರುವುದು. ಹಾಗೆಯೇ ಇವೆರಡರ ಅಪಮೌಲ್ಯಗಳಿಂದಲೇ ಶೋಷಣೆಯ ಜಾಲ ವ್ಯವಸ್ಥಿತವಾಗಿ ನಾಗರಿಕತೆ ಮತ್ತು ಧರ್ಮಗಳ ಮೂಲಕ ಆಗಿರುವುದು. ಇಂತಹ ಸ್ಥಿತಿಯಲ್ಲಿ ಸಂಸ್ಕೃತಿಗಳು ಸಮಷ್ಟಿಯಾದ ಭಾವನೆಗಳ ಅಪೇಕ್ಷೆಗೆ ಪೂರಕವಾಗಿಯೇ ಬದಲಾವಣೆಗೆ ಹೊಂದಾಣಿಕೆ ಮಾಡಿಕೊಳ್ಳುತ್ತವೆ. ಜೀವಜಾಲದ ವೈವಿಧ್ಯತೆಯ ಹೊಂದಾಣಿಕೆಯಂತೆಯೇ ಸಂಸ್ಕೃತಿಗಳು ಹೊಂದಾಣಿಕೆ ಸ್ವಭಾವಕ್ಕೆ ಬದ್ಧವಾಗಿರುತ್ತವೆ. ಇಂತಹ ಹಿನ್ನೆಲೆಗಳನ್ನು ಗ್ರಹಿಸಿಯೆ ಸದ್ಯದ ಕನ್ನಡ ಸಂಸ್ಕೃತಿ ಚಿಂತನೆಯು ಸಾಗಬೇಕಾಗಿದೆ.

**ಎರಡನೇ ಪ್ರಶ್ನೆಯ ಟಿಪ್ಪಣಿ**

ಸದ್ಯದ ಕನ್ನಡ ಸಾಹಿತ್ಯ ವಿಮರ್ಶೆಯು ಸಂಸ್ಕೃತಿ ವಿಮರ್ಶೆಯಾಗಿ ಮಾರ್ಪಡುತ್ತದೆ ಎಂಬುದು ವಾಸ್ತವವೇ ಆಗಿದ್ದರೂ, ಮಾನವಶಾಸ್ತ್ರಜ್ಞರು ರೂಪಿಸುವಂತಹ ಸಂಸ್ಕೃತಿ ವಿಮರ್ಶೆ ಅದಾಗಿಲ್ಲ. ಪಶ್ಚಿಮದ ಮಾನವಶಾಸ್ತ್ರದ ಪ್ರಾಥಮಿಕ ವ್ಯಾಖ್ಯೆ ಮತ್ತು ಸಿದ್ಧಾಂತಗಳನ್ನು ಅನುಸರಿಸಿ ನಡೆದಿರುವ ಈವರೆಗಿನ ಅನೇಕ ಸಂಸ್ಕೃತಿ ವಿಮರ್ಶೆಗಳು ಮೇಲ್ಪದರದವು. ಹಾಗೆಯೇ ಪಶ್ಚಿಮದ ಸಂಸ್ಕೃತಿ ಅಧ್ಯಯನದ ತಿಳುವಳಿಕೆಯು ನಮ್ಮ ಸಂಸ್ಕೃತಿ ಚಿಂತನೆಗೆ ನೇರವಾಗಿ ಸಂಬಂಧಿಸಲಾರದು. ಮಾನವಶಾಸ್ತ್ರೀಯ ವಿಮರ್ಶಾ ಕ್ರಮಗಳಿಗೂ ಸಾಹಿತ್ಯ ವಿಮರ್ಶೆಯ ಪರಿಕರಗಳಿಗೂ ವ್ಯತ್ಯಾಸವಿದೆ. ಸಂಸ್ಕೃತಿ ವಿಮರ್ಶೆ ಅಖಂಡವಾದದ್ದು. ಹಾಗೆಯೇ ಅಖಂಡವಾದದ್ದನ್ನು ಬಹು ಅನನ್ಯತೆಯಲ್ಲಿ ವಿಶ್ಲೇಷಿಸಿ ಮನುಷ್ಯನ ವಿರಾಟ್ ಕಥನವನ್ನು ನಿರ್ವಚಿಸುವಂತಹದ್ದು. ಸಾಹಿತ್ಯ ವಿಮರ್ಶೆ ಅಖಂಡ ಸಂವೇದನೆಯ ಒಂದು ನೆಲೆಯನ್ನು ತನ್ನ ಕಾಲದ ಜೊತೆ ಅಗತ್ಯಕ್ಕನುಗುಣವಾಗಿ ಅನುಸಂಧಾನ ಮಾಡುವಂಥದು. ಸಂಸ್ಕೃತಿ ವಿಶ್ಲೇಷಣೆಯು ಚರಿತ್ರೆಯನ್ನೇ ಪುನರ್ರಚಿಸಿ ಬಿಡಬಲ್ಲದು. ಸಾಹಿತ್ಯ ವಿಮರ್ಶೆಗೆ ದಟ್ಟವಾದ ವ್ಯಷ್ಟಿ ಸ್ವಭಾವ ಇದ್ದರೆ ಸಂಸ್ಕೃತಿ ವಿಮರ್ಶೆಗೆ ಸಮಷ್ಟಿ ಸ್ಮೃತಿ ಲೋಕದ ಅವಕಾಶವಿರುತ್ತದೆ. ಹೀಗಾಗಿ ಸದ್ಯದ ಕನ್ನಡ ವಿಮರ್ಶಾ ಪರಿಸರವು ಸಂಸ್ಕೃತಿ ವಿಮರ್ಶೆಯ ಹಾದಿಯಲ್ಲಿರುವುದು ಖಚಿತವಾಗಿದೆ.

ಯಾವುದೇ ಸಂಸ್ಕೃತಿ ವಿಕಾಸಕ್ಕೂ ನಿರ್ದಿಷ್ಟ ಬದ್ಧತೆಗಳಿಲ್ಲವಾದ್ದರಿಂದ ಸಂಸ್ಕೃತಿಯ ವಿಮರ್ಶೆಗೂ ನಿರ್ದಿಷ್ಟ ತಾತ್ವಿಕ ಚೌಕಟ್ಟನ್ನು ನಿರ್ಮಿಸಿಕೊಳ್ಳಬೇಕಾದ್ದಿಲ್ಲ. ಎಲ್ಲ ಬಗೆಯ ಜೀವ ವಿಕಾಸವೂ ಅನಂತವಾದುದೇ. ಈ ಅನಂತತೆಯು ಮನುಷ್ಯನ ಸಾಂಸ್ಕೃತಿಕ ಪ್ರವೃತ್ತಿಯನ್ನು ವಿಕಾಸಕ್ಕೆ ಒಳಪಡಿಸುತ್ತಲೇ ಇರುತ್ತದೆ. ಹೀಗಾಗಿ ತಾತ್ವಿಕ ಬದ್ಧತೆಯಿಂದ ಪೂರ್ವ ತೀರ್ಮಾನಗಳಿಂದ ಸಂಸ್ಕೃತಿ ವಿಮರ್ಶೆಯನ್ನು ರೂಪಿಸಬೇಕಾಗಿಲ್ಲ. ಸ್ವತಃ ಸಂಸ್ಕೃತಿ ವಿಮರ್ಶೆಯೇ ಎಲ್ಲ ಚೌಕಟ್ಟುಗಳನ್ನು ಮುರಿಯುವಂತದ್ದು. ಹಾಗೂ ಏಕಾಕಾರದ ಸಂಸ್ಕೃತಿಗಳ ಯಾಜಮಾನ್ಯವನ್ನು ನಿರಾಕರಿಸುವಂತದ್ದು. ಧರ್ಮದ ಅಧಿಕಾರವನ್ನು ನಾಗರಿಕತೆಗಳ ಹುಸಿ ವೈಭವಗಳನ್ನು ಯಾವ ಸಂಸ್ಕೃತಿ ವಿಮರ್ಶೆಯೂ ಮಾನ್ಯ ಮಾಡಲಾರದು. ಆ ಮಟ್ಟಿಗೆ ನಮ್ಮ ಕಾಲದ ಸಂಸ್ಕೃತಿ ವಿಮರ್ಶೆಯು ಮಾನವೀಯ ಸಂಬಂಧಗಳನ್ನು ಪುನರ್‌ಸೃಷ್ಟಿಸುವ ಆಶಯಕ್ಕೆ ಒಳಪಡಬೇಕಾಗುತ್ತದೆ. ಇಂತಲ್ಲಿ ವಿಶ್ಲೇಷಣೆಯ ವಿಧಾನಗಳು ಅಖಂಡ ಮಾನವತ್ವದ ಧ್ಯಾನದಲ್ಲೇ ಸಾಗಬೇಕು. ಗಾಂಧಿ ಮತ್ತು ಅಂಬೇಡ್ಕರ್ ಇಬ್ಬರ ವಿಶ್ಲೇಷಣೆಗಳಲ್ಲಿ ಇಂತಹ ಆಶಯ ಗಾಢವಾಗಿ ಧ್ವನಿತವಾಗಿದೆ.

**ಮೂರನೇ ಪ್ರಶ್ನೆಯ ಟಿಪ್ಪಣಿ**

ಸಂಸ್ಕೃತಿಗಳ ವಿಕಾಸದ ಆದಿಮ ಸ್ಥಿತಿಯಲ್ಲಿ ಸಾಮ್ಯ ಗುಣ ಸಾರ್ವತ್ರಿಕವಾಗಿತ್ತು.



ತದನಂತರ ಈ ಸಾಮ್ಯ ಸ್ವಭಾವವು ಪ್ರಾದೇಶಿಕ ಅನನ್ಯತೆಗಳಿಂದ ಭಿನ್ನ ವಲಯಗಳನ್ನು ನಿರ್ಮಿಸಿಕೊಂಡಿತು. ಹೀಗಾಗಿ ಏಕಕಾಲಕ್ಕೆ ಸಂಸ್ಕೃತಿಗಳು ಅಖಂಡವಾಗಿಯೂ ಇರಬಲ್ಲವು. ಅಂತೆಯೇ ಪ್ರಾದೇಶಿಕ ಭಿನ್ನತೆಯಲ್ಲೂ ಅಸ್ತಿತ್ವ ರೂಪಿಸಿಕೊಳ್ಳಬಲ್ಲವು. ಸಂಸ್ಕೃತಿ ಎಂದರೆ ಮೂಲತಃ ಅಸ್ತಿತ್ವದ ಜ್ಞಾನ ವ್ಯವಸ್ಥೆ. ಈ ಜ್ಞಾನ ವ್ಯವಸ್ಥೆಯು ಹಲವಾರು ಮೂಲಗಳಿಂದ ತನಗೆ ಬೇಕಾದ್ದನ್ನು ಅನ್ವಯಿಸಿ ಸಂಯೋಗಿಸಿಕೊಳ್ಳಬಲ್ಲದು. ಹೀಗಾಗಿ, ಸಂಸ್ಕೃತಿ ಸಿದ್ಧಾಂತಗಳು ಕೂಡ ವ್ಯಾಪಕವಾದ ಸಂಬಂಧಗಳನ್ನೇ ವಿಸ್ತರಿಸಬೇಕು. ಸಂಸ್ಕೃತಿಗಳ ಅನುಭವದ ಬೇರಿನಿಂದ ರೂಪಿತವಾದ ಸಿದ್ಧಾಂತಗಳು ವಿಲಕ್ಷಣವಾದ ಸಾಮ್ಯಧ್ವನಿಯನ್ನು ಅಂತರ್ಗತಿಸಿಕೊಂಡಿರುತ್ತವೆ. ಮಾನವೀಯತೆಯ ದಾಹದಿಂದ ನಿರ್ವಚನಗೊಳ್ಳುವ ಎಲ್ಲ ಬಗೆಯ ಬೌದ್ಧಿಕ ಕಥನವೂ ನಮ್ಮ ಅಸ್ತಿತ್ವದ ಸಂವರ್ಧನೆಗೆ ಬೇಕು. ಜ್ಞಾನಕ್ಕೆ ಯಾವುದೇ ಬಗೆಯ ಗಡಿಯೂ ಇಲ್ಲ ಸೂತಕವೂ ಇಲ್ಲ. ಆದರೆ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಪ್ರಾಮಾಣಿಕವಾಗಿರಬೇಕು. ನಾವು ಮುಖಾಮುಖಿಯಾಗುವ ಕ್ರಮವೇ ಸಾಮಾಜಿಕ ಸಂಬಂಧಗಳ ಸಮಷ್ಟಿ ಮೌಲ್ಯಗಳು ಪುನರ್‌ಸೃಷ್ಟಿಯಾಗುವಂತಿರಬೇಕು. ಸಿದ್ಧಾಂತಗಳು ಕೂಡ ಯಾಜಮಾನ್ಯ ಸ್ಥಾಪಿಸಬಲ್ಲ ಅಪಾಯವಿರುತ್ತದೆ. ಸಂಸ್ಕೃತಿಗಳ ಸ್ಥಾನೀಯ ಹಾಗೂ ಜನಾಂಗೀಯ ಭಾವನೆಗಳು ಅಳತೆ ತಪ್ಪದಂತೆ ಅನಾವರಣಗೊಳ್ಳಬೇಕು. ಪಶ್ಚಿಮದ ಸಿದ್ಧಾಂತಗಳು ಸಂಸ್ಕೃತಿಗಳ ಪರಕಾಯ ಪ್ರವೇಶದಿಂದಲೇ ಮಾನವಿಕ ಶಾಸ್ತ್ರಗಳನ್ನು ವಿಸ್ತರಿಸಿರುವುದು. ನಮ್ಮ ದೇಶದ ಮಾನವಿಕ ಶಾಸ್ತ್ರಗಳು ವಸಾಹತುಶಾಹಿ ಜ್ಞಾನಕ್ರಮಗಳ ನಕಲಿನಂತೆ ಆರಂಭಗೊಂಡದ್ದರಿಂದ ಸ್ವತಃ ನಮ್ಮದೇ ಎನ್ನಬಹುದಾದ ಸ್ವೋಪಜ್ಞ ಸಿದ್ಧಾಂತಗಳು ಅಧ್ಯಯನ ವಿಧಾನಗಳು ಸಾಧ್ಯವಾಗಲಿಲ್ಲ. ಇಂತಹ ಸ್ಥಿತಿಯಿಂದ ಬಿಡಿಸಿಕೊಂಡು ರೂಪಿತವಾಗುತ್ತಿರುವ ಈ ಕಾಲದ ಸೈದ್ಧಾಂತಿಕ ಮುಖಾಮುಖಿಯು ಏಕಕಾಲಕ್ಕೆ ವಿಶ್ವಾತ್ಮಕವಾಗಿಯೂ ಪ್ರಾದೇಶಿಕವಾಗಿಯೂ ಇರಬೇಕಾಗುತ್ತದೆ. ನಮ್ಮ ಅಸ್ತಿತ್ವವನ್ನು ಪುನರುಜ್ಜೀವನಗೊಳಿಸಿಕೊಳ್ಳುವ ದಾರಿಯಲ್ಲಿ ನಾವು ಬೆಳೆದ ಬೇರುಗಳಿಂದಲೇ ಜಗತ್ತಿನ ತುದಿಯನ್ನು ಮುಟ್ಟಬೇಕಾಗುತ್ತದೆ.

**ನಾಲ್ಕನೇ ಪ್ರಶ್ನೆಯ ಟಿಪ್ಪಣಿ**

ಸಂಸ್ಕೃತಿಯ ಗತಿಶೀಲತೆಯಲ್ಲಿ ವೈರುಧ್ಯಗಳು ಅನಿವಾರ್ಯ. ಈ ವೈರುಧ್ಯಗಳು ನಿಸರ್ಗದ ಪರಿಣಾಮ; ಅಂತೆಯೇ ಅಸ್ತಿತ್ವದ ಯಾವುದೇ ಸ್ಥಿತಿಯು ವಿಕಾಸವಾಗುವುದೇ ಇಂತಹ ವೈರುಧ್ಯದ ಆಕರ್ಷಣೆ-ವಿಕರ್ಷಣೆಯ ಅಂತರ್‌ಸಂಬಂಧಗಳಿಂದ. ಹೀಗೆ ಎರಡು ವಿರುದ್ಧ ದಿಕ್ಕಿನಂತೆ ಕಾಣುವ ವೈರುಧ್ಯಗಳು ಸೃಷ್ಟಿಯ ಪರವೇ ವಿನಾ ವಿನಾಶದ ನೆಲೆಯವಲ್ಲ. ಒಂದು ವೈರುಧ್ಯವು ಮತ್ತೊಂದು ವೈರುಧ್ಯದ ವಿರುದ್ಧ ನಿರಂತರವಾಗಿ ಕ್ರಿಯಾಶೀಲವಾಗಿರುವಂತೆಯೇ ಇನ್ನೊಂದು ವೈರುಧ್ಯವು ತನ್ನ ಎದುರು ನಿಂತಿರುವ ಸ್ಥಿತಿಗೆ ಮತ್ತೊಂದು ದಿಕ್ಕಿನಿಂದ ಸೃಜನಶೀಲವಾಗಿರುತ್ತದೆ. ಇವೆರಡೂ ಸೇರಿ ಮೂರನೆ ಸ್ಥಿತಿಯನ್ನು ವೃದ್ಧಿಸುತ್ತಿರುತ್ತವೆ. ಘರ್ಷಣೆ, ಆಕರ್ಷಣೆಗಳೆರಡೂ ಇದ್ದಾಗ ಕಳೆದುಹೋಗ ಬೇಕಾದದ್ದು ಅನಿವಾರ್ಯವಾಗಿ ಕಳೆದೇ ಹೋಗಬೇಕು. ಅಂತೆಯೇ ಸೇರ್ಪಡೆ ಆಗಬೇಕಾದದ್ದು ಬಂದು ಸೇರಲೇಬೇಕು. ವೈರುಧ್ಯಗಳಿಂದಲೇ ಸಂಸ್ಕೃತಿಗಳು ಪುನರ್ ಸೃಷ್ಟಿಗೂ ಪರ್ಯಾಯಕ್ಕೂ ತೊಡಗುವುದು. ಹೀಗೆ ಎದುರಾಗುವ ವೈರುಧ್ಯಗಳು ಮನುಷ್ಯನ ಪ್ರವೃತ್ತಿ ಕೂಡ. ವೈರುಧ್ಯಗಳು ಸಂಸ್ಕೃತಿಯ ವಿಕಾಸಕ್ಕೆ ಬೇಕಾದ ಒತ್ತಡಗಳನ್ನು ನಿರ್ಮಿಸುತ್ತವೆ. ಸಂಸ್ಕೃತಿಗಳು ಈ ವೈರುಧ್ಯಗಳಿಂದ ಸೀಳಿಕೊಳ್ಳುತ್ತಿರುತ್ತವೆ. ಹೀಗೆ ಸೀಳಿಕೊಳ್ಳುವುದೇ ಬಹುರೂಪಿ ಪರಂಪರೆಗಳಿಗೆ ದಾರಿ ಮಾಡುವುದು. ಒಂದು ವೇಳೆ ನಾಗರಿಕತೆಗಳು ಇಂತಹ ವೈರುಧ್ಯಗಳನ್ನು ಎದುರುಹಾಕಿಕೊಳ್ಳದಿದ್ದರೆ ಅವುಗಳಿಗೆ ಸಾಂಸ್ಕೃತಿಕ ಪ್ರತಿರೋಧ ಶಕ್ತಿಯೇ ಇಲ್ಲವಾಗಿಬಿಡುತ್ತಿತ್ತು. ವೈರುಧ್ಯವಿದ್ದಲ್ಲೆಲ್ಲ ಅಸ್ತಿತ್ವದ ಒತ್ತಡವೂ ಜಾಗ್ರತವಾಗುತ್ತದೆ. ಶಿಷ್ಟ ಪರಂಪರೆಗೂ ಜಾನಪದ ಪರಂಪರೆಗೂ ಇರುವ ಅನೇಕ ಜೋಡಿ ವೈರುಧ್ಯಗಳು ಎರಡೂ ಪರಂಪರೆಗಳನ್ನು ಜೀವಂತವಾಗಿಟ್ಟಿರುವಂತೆಯೇ ಕಾಲಕ್ಕನುಸಾರವಾಗಿ ಹಲವಾರು ಬದಲಾವಣೆಗಳನ್ನು ರೂಢಿಸಿಕೊಳ್ಳಲು ಸಾಧ್ಯವಾಗಿದೆ.

ವೈರುಧ್ಯ ಪ್ರವೃತ್ತಿ ನಿಸರ್ಗ ಮತ್ತು ಸಂಸ್ಕೃತಿ ಎರಡಕ್ಕೂ ಸಮನಾಗಿದೆ. ವೈರುಧ್ಯವೇ ನಮ್ಮ ಸಂಸ್ಕೃತಿಗಳ ಸೃಜನಶೀಲತೆಯನ್ನು ವಿಸ್ತರಿಸಿರುವುದು. ಮೌಖಿಕ ಪರಂಪರೆಯು ಅಸಾಧ್ಯ ಕ್ರಮಗಳಲ್ಲಿ ಬೇರು ಬಿಡಲು ವೈರುಧ್ಯದ ಒತ್ತಡ ಕೂಡ ಕಾರಣವಾಗಿದೆ. ಸಂಸ್ಕೃತಿಯು ವಿಕಾಸವಾಗುತ್ತ ಸಾಗುವ ಹಾದಿಯಲ್ಲಿ ಇಂತಹ ವೈರುಧ್ಯಗಳನ್ನು ಅರ್ಥೈಸುವ ಕ್ರಮದಲ್ಲಿ ನಾವು ಎಚ್ಚರಿಕೆ ವಹಿಸಬೇಕು. ಒಂದೊಂದು ವೈರುಧ್ಯದ ನೆಲೆಯನ್ನು ಸಕಾರಾತ್ಮಕವಾಗಿ ಕಟ್ಟುವ ಕಡೆಗೆ ನಮ್ಮ ಧ್ಯಾನವಿರಬೇಕು. ವೈರುಧ್ಯಗಳು ಒಂದನ್ನೊಂದು ನುಂಗುವ ವ್ಯವಸ್ಥೆಗಳಲ್ಲ. ಧರ್ಮವು ಸಂಸ್ಕೃತಿಯ ಇಂತಹ ವೈರುಧ್ಯಗಳನ್ನು ವಿಕಾರಗೊಳಿಸಿ ತನ್ನ ಅನುಕೂಲಕ್ಕೆ ತಕ್ಕಂತೆ ಅಪವ್ಯಾಖ್ಯಾನ ಮಾಡುತ್ತಿರುತ್ತದೆ. ಇಂತಹ ವೈರುಧ್ಯದ ಮಧ್ಯೆ ಧಾರ್ಮಿಕ ಯಾಜಮಾನ್ಯವು ಅತ್ಯಂತ ಅಪಾಯಕಾರಿಯಾದುದು. ಅದು ಸಂಸ್ಕೃತಿಯ ಗತಿಶೀಲತೆಯನ್ನು ವಕ್ರಗೊಳಿಸಬಲ್ಲದು. ಹೀಗಾಗಿಯೇ ಜಗತ್ತಿನ ಉದ್ದಕ್ಕೂ ಎಲ್ಲ ತಳ ಸಂಸ್ಕೃತಿಗಳು ನಾಗರಿಕತೆಯ ಅಸ್ತ್ರಗಳಿಂದಲೂ ಧರ್ಮಗಳ ದರ್ಪದಿಂದಲೂ ಅನೇಕ ಬಗೆಯ ಸವಾಲುಗಳಿಗೆ ಒಳಗಾದದ್ದು. ಇಂತಹ ಸ್ಥಿತಿಯಲ್ಲೇ ವೈರುಧ್ಯಗಳು ಕೂಡ ಒಂದನ್ನೊಂದು ಆಳುವಂತೆ ಮಾರ್ಪಾಟಾದುದು. ಆದರೆ ಇಂತಹ ಆಳುವ ಕ್ರಿಯೆ ಸಂಸ್ಕೃತಿಗಳ ಆಳದಲ್ಲಿ ಬಹಳ ಕಾಲ ನಿಲ್ಲಲಾರದು. ವೈರುಧ್ಯಗಳನ್ನು ಆಧುನಿಕ ಯುಗ ತನಗೆ ಬೇಕಾದ ರೀತಿಯಲ್ಲಿ ದುರುಪಯೋಗ ಮಾಡಿಕೊಳ್ಳಬಲ್ಲದು. ವೈರುಧ್ಯಗಳ ನಡುವೆ ವಿಜ್ಞಾನ, ತಂತ್ರಜ್ಞಾನ, ರಾಜಕಾರಣಗಳು ಸೇರಿ ತಾರತಮ್ಯಕ್ಕೆ ಅವಕಾಶ ಮಾಡಿದರೆ ಸಂಸ್ಕೃತಿಗಳೇ ವಿಸ್ಮೃತಿಗೆ ಸರಿಯುತ್ತವೆ. ವೈರುಧ್ಯಗಳ ಮಧ್ಯೆ ಬಂದು ಸೇರಿಕೊಳ್ಳುವ ಇಂತಹ ವ್ಯವಸ್ಥೆಗಳ ಬಗ್ಗೆ ನಮ್ಮ ಎಚ್ಚರ ವಿಶೇಷವಾಗಿ ಇರಬೇಕಾಗುತ್ತದೆ. ಸಂಸ್ಕೃತಿಗಳ ಸಹಜ ವಿಕಾಸಕ್ಕೆ ವೈರುಧ್ಯಗಳು ಅನಿವಾರ್ಯವಾದರೂ ಅವುಗಳ ನಡುವೆ ಬೆಳೆವ ತಾರತಮ್ಯಗಳನ್ನು ನಿಯಂತ್ರಿಸುವ ಮಾನವೀಯ ವ್ಯವಸ್ಥೆ ಸಮಾಜದ ಎಲ್ಲ ಹಂತಗಳಲ್ಲೂ ಕ್ರಿಯಾಶೀಲವಿರಬೇಕು. ವೈರುಧ್ಯಗಳು ಗತಿ ಮೀರಿ ಘಟಿಸಿದಾಗ ವಿಸ್ಮೃತಿ ತಂತಾನೆ ಎದುರಾಗುತ್ತದೆ. ನಗರ-ಗ್ರಾಮ, ಮಾರ್ಗ-ದೇಶಿ, ಪೂರ್ವ-ಪಶ್ಚಿಮ ತರದ ವೈರುಧ್ಯಗಳು ಸಂಪತ್ತಿನ ಯಾಜಮಾನ್ಯದಿಂದ, ಮೇಲರಿಮೆಯ ಸ್ವಭಾವದಿಂದ, ಧಾರ್ಮಿಕ ತಾರತಮ್ಯಗಳಿಂದ, ಅಭಿವೃದ್ಧಿಯ ವಕ್ರ ವಿಂಗಡಣೆಯಿಂದ, ಕೆಲವು ನೈಸರ್ಗಿಕ ಭಿನ್ನತೆಗಳಿಂದ ಉಂಟಾಗುತ್ತವೆ. ಜೊತೆಗೆ ನಾಗರಿಕತೆಯು ವಿಕಾಸವಾಗುವ ಕ್ರಮದಲ್ಲಿ ತನಗೆ ಅನುಕೂಲವಾಗುವಂತೆ ವರ್ಗ, ವರ್ಣ, ಲಿಂಗ ತಾರತಮ್ಯದ ವ್ಯವಸ್ಥೆಯನ್ನು ಸ್ಥಾಪಿಸಿಕೊಂಡಿದ್ದರಿಂದಲೂ ಈ ಬಗೆಯ ವೈರುಧ್ಯಗಳು ನಿರ್ಮಾಣವಾಗಿವೆ. ನಾಗರಿಕತೆಯ ಜೊತೆಗೆ ಒಪ್ಪಂದ ಮಾಡಿಕೊಳ್ಳುವ ಪ್ರತಿಯೊಂದು ವ್ಯವಸ್ಥೆಯೂ – ತಂತ್ರಜ್ಞಾನ, ವಿಜ್ಞಾನ, ರಾಜಕಾರಣಗಳೆಲ್ಲವೂ ಇಂತಹ ಹೊಸ ಬಗೆಯ ವೈರುಧ್ಯಗಳನ್ನು ಮುಖಾಮುಖಿಗೆ ಒಳಪಡಿಸುತ್ತಲೇ ಇರುತ್ತವೆ.

ಯಾವುದೇ ಸಂಸ್ಕೃತಿಯು ಇಂತಹ ದ್ವಂದ್ವ ಸಂಘರ್ಷದಲ್ಲೇ ತನ್ನ ಗತಿಶೀಲತೆಯನ್ನು ಕಾಯ್ದುಕೊಳ್ಳಬೇಕು. ಈ ಗತಿಶೀಲತೆಯು ಯಾವತ್ತೂ ಒಳಿತಿನ ಕ್ರಮದಲ್ಲೇ ಸಾಗುತ್ತದೆಂದು ಹೇಳಲಾಗದು. ರೂಪ ವಿರೂಪಗಳ ಜೋಡಿ ಪಯಣದಲ್ಲೇ ಸಂಸ್ಕೃತಿಗಳು ಕಾಲಕಾಲದ ಆವಿಷ್ಕಾರ ಮತ್ತು ತಿರಸ್ಕಾರಗಳಿಗೆ ಒಳಪಡುತ್ತವೆ. ಆವಿಷ್ಕಾರಗಳಿಗೆ ಸಂಸ್ಕೃತಿಯನ್ನು ಅರ್ಥಪೂರ್ಣವಾಗಿ ಸಂಯೋಗಿಸುತ್ತ ತಿರಸ್ಕಾರಗಳಿಗೆ ಸಕಾರಾತ್ಮಕವಾದ ಪರ್ಯಾಯವನ್ನು ನಿರ್ಮಿಸುವ ರೀತಿಯಲ್ಲಿ ಆಲೋಚಿಸಬೇಕಾಗುತ್ತದೆ.

**ಐದನೇ ಪ್ರಶ್ನೆಯ ಟಿಪ್ಪಣಿ**

ಯಾವುದೇ ಸಂಸ್ಕೃತಿ ಚಿಂತಕರ ಸಿದ್ಧಾಂತಗಳು ಬೌದ್ಧಿಕ ನೆಲೆಯವು. ಬೌದ್ಧಿಕವಾದ ಯಾವುದೇ ಜ್ಞಾನ ಕ್ರಮವು ಸಮುದಾಯಗಳ ಜೊತೆ ತತ್‌ಕ್ಷಣಕ್ಕೆ ಸಂಪರ್ಕ ಹೊಂದಲಾರವು. ದಿಢೀರ್ ಸಂಬಂಧ ಜ್ಞಾನದ ಸೂಕ್ಷ್ಮ ಅಭಿವ್ಯಕ್ತಿಗೆ ಸಾಧ್ಯವಾಗದು. ಸಮುದಾಯಗಳ ಜೀವನವಿಧಾನವನ್ನೇ ಕೇಂದ್ರವಾಗಿಟ್ಟುಕೊಂಡು ರೂಪಿಸುವ ಸಿದ್ಧಾಂತಗಳ ಪರಿಭಾಷೆಯೇ ಸಂಕೀರ್ಣವಾದುದು. ಬೌದ್ಧಿಕವಾದ ಯಾವುದೇ ಅಭಿವ್ಯಕ್ತಿಯು ಸಮುದಾಯಗಳ ಜೊತೆ ನಿರ್ದಿಷ್ಟ ದೂರವನ್ನು ಹಿಂದಿನಿಂದಲೂ ಕಾಯ್ದುಕೊಂಡು ಬಂದಿದೆ. ಜ್ಞಾನ ವ್ಯವಸ್ಥೆಯ ವಿಕಾಸದ ಕ್ರಮವೇ ಇಂತದಾಗಿದ್ದು ಸಿದ್ಧಾಂತಗಳೆಲ್ಲವೂ ಒಂದು ರೀತಿಯಲ್ಲಿ ಸಾಮಾಜಿಕ ಸಂಪರ್ಕದ ಆಚೆ ನಿಂತೇ ಮಾತನಾಡುತ್ತಿರುತ್ತವೆ. ಹೀಗಾಗಿ ಸಮುದಾಯಗಳಿಗೂ ಅವರ ಸಂಸ್ಕೃತಿಯ ರೀತಿನೀತಿಗಳಿಂದಲೇ ತೀರ್ಮಾನವಾದ ಸಿದ್ಧಾಂತಗಳಿಗೂ ಅಂತರವಿರುತ್ತದೆ. ಈ ಅಂತರ ವಿಪರೀತವಾದಾಗ ಸಂಸ್ಕೃತಿಯ ಯಾವುದೇ ಸಿದ್ಧಾಂತಗಳಿಂದಲೂ ಸಮುದಾಯಕ್ಕೆ ಉಪಯೋಗವಾಗದು. ಸಮುದಾಯದ ಕೇಂದ್ರ ನಾಡಿಯನ್ನು ಹಿಡಿದೇ ಸಿದ್ಧಾಂತಗಳನ್ನು ರೂಪಿಸಬೇಕು. ಸಮುದಾಯದ ಹಿತಕ್ಕಾಗದ ಯಾವುದೇ ಸಿದ್ಧಾಂತವು ಒಣ ಪಾಂಡಿತ್ಯವನ್ನು ಮಾತ್ರ ಮುಂದುವರಿಸುತ್ತದೆ. ಎಷ್ಟೋ ಬಾರಿ ಬೌದ್ಧಿಕ ಗರ್ವ ಕೂಡ ಸಿದ್ಧಾಂತಗಳಲ್ಲಿ ಸೇರಿಕೊಂಡು ವೈಯಕ್ತಿಕ ನಿಲುವುಗಳನ್ನೇ ಸತ್ಯವೆಂದು ಬಿಂಬಿಸುವ ಹಠ ಮಾಡುವ ಅಪಾಯವೂ ಇರುತ್ತದೆ. ಓರಿಯಂಟಲ್ ಮನೋಧರ್ಮದ ಸಂಸ್ಕೃತಿ ಚಿಂತನೆಗಳಾಗಲಿ ಆ ಬಗೆಯ ಸಿದ್ಧಾಂತಗಳಾಗಲಿ ಕನ್ನಡ ಸಂಸ್ಕೃತಿ, ಸಾಹಿತ್ಯ, ಚರಿತ್ರೆ ಮುಂತಾದ ಜ್ಞಾನ ಶಾಖೆಗಳ ಮೇಲೆ ಕೆಟ್ಟ ಪರಿಣಾಮ ಉಂಟುಮಾಡಬಲ್ಲವು. ಅಲ್ಲದೆ



ಜನಾಂಗೀಯ ನಿಲುವಿನಿಂದ ಮತೀಯ ಮೂಢತೆಯಿಂದ ಧಾರ್ಮಿಕ ಯಾಜಮಾನ್ಯದಿಂದ ಜೊತೆಗೆ ಆಧುನಿಕ ಯುಗದ ಪ್ರಭುತ್ವ ಕೇಂದ್ರಿತ ಜ್ಞಾನ ಶಾಖೆಗಳಿಂದ ಸಂಸ್ಕೃತಿ ಚಿಂತನೆಯ ಹೆಸರಿನಲ್ಲಿ ಅಜ್ಞಾನವೇ ವ್ಯಾಪಿಸಿಕೊಳ್ಳುವ ಅಪಾಯವಿರುತ್ತದೆ.

ಸಂಸ್ಕೃತಿಯ ಬೇರಿನಿಂದ ರೂಪಗೊಂಡ ಸಿದ್ಧಾಂತಗಳನ್ನು ಮರಳಿ ಸಮುದಾಯಗಳ ಜೀವನಕ್ರಮಕ್ಕೆ ಅನ್ವಯಾಂತರಗೊಳಿಸುವ ಕ್ರಮಗಳ ಬಗ್ಗೆ ಈತನಕ ಎಲ್ಲಿಯೂ ವಿಶೇಷ ಗಮನ ಕೊಟ್ಟಂತಿಲ್ಲ. ಜ್ಞಾನದ ಎಲ್ಲ ಕ್ರಮಗಳನ್ನು ಸಾಮಾಜೀಕರಣಗೊಳಿಸುವ ಯತ್ನಗಳು ಈಗಲಾದರೂ ಪರಿಣಾಮಕಾರಿಯಾಗಿ ಆಗಬೇಕು. ಬುದ್ಧಿಜೀವಿಗಳು, ಸಂಸ್ಕೃತಿ ಚಿಂತಕರು, ದಾರ್ಶನಿಕರು, ಸಾಹಿತಿ ಕಲಾವಿದರು ಮತ್ತು ಹೋರಾಟಗಾರರು ಕೂಡಿಯೇ ಸಮುದಾಯಗಳ ಬದುಕಿಗೆ ಹೊಂದುವಂತಹ ಬೌದ್ಧಿಕ ಅಭಿವ್ಯಕ್ತಿ ಮಾರ್ಗವೊಂದನ್ನು ಕಂಡುಕೊಳ್ಳಬೇಕು. ಯಾವುದೇ ಜನಪರ ಸಿದ್ಧಾಂತವು ಮೊದಲು ಕಠಿಣ ಬೌದ್ಧಿಕ ತರ್ಕದಲ್ಲೇ ಆರಂಭವಾಗುವುದು. ಕಾರ್ಲ್ ಮಾರ್ಕ್ಸ್ ಅಥವಾ ಅಂಬೇಡ್ಕರ್ ಇಬ್ಬರ ಚಿಂತನೆಗಳು ಅತ್ಯಂತ ಕಠಿಣವೇ. ಆದರೆ ಅವರ ವಿಚಾರಗಳು ಹೋರಾಟದ ಹಾದಿಯಲ್ಲಿ ಜನತೆಯ ಬದುಕಿನ ಜೊತೆ ಸೇರಿಕೊಂಡವು. ನಮ್ಮ ಎಲ್ಲ ಬಗೆಯ ಸಾಮಾಜಿಕ, ರಾಜಕೀಯ, ಸಾಹಿತ್ಯಿಕ ಮತ್ತು ಸಂಸ್ಕೃತಿ ಚಿಂತನೆಗಳು ಹೋರಾಟದ ಸಂಪರ್ಕಗಳಿಂದಲೇ ಜನತೆಯ ಬದುಕಿಗೆ ಬರಬೇಕಾದ ಇಕ್ಕಟ್ಟಿದೆ. ಹಾಗೆಯೇ ನಮ್ಮ ಬಹುಪಾಲು ಎಲ್ಲ ತಳ ಸಮುದಾಯಗಳು ಲಿಖಿತ ಪರಂಪರೆಯ ಬೌದ್ಧಿಕ ಅಭಿವ್ಯಕ್ತಿಯ ಜೊತೆಗೆ ತಕ್ಕ ಸಂಬಂಧವನ್ನೇ ಈತನಕ ಮಾಡಿಲ್ಲ. ಬೌದ್ಧಿಕ ಜ್ಞಾನ ಶಾಖೆಯ ಎಲ್ಲ ಸಿದ್ಧಾಂತಗಳು ನೇರವಾಗಿ ಜನತೆಗೆ ಸಂಪರ್ಕಗೊಳ್ಳಲಾರವು ಎಂಬುದು ನಿಜವಿದ್ದರೂ ಅವನ್ನು ಸೃಜನಶೀಲವಾದ ಭಾಷೆಯಲ್ಲಿ ಸಂಸ್ಕೃತಿಯ ನುಡಿಗಟ್ಟುಗಳಿಂದಲೇ ನಿರ್ಮಿಸಿದಾಗ ಅವು ಜನತೆಯ ಭಾಗವಾಗಬಲ್ಲವು. ಜೊತೆಗೆ ಸಂಸ್ಕೃತಿ ಸಿದ್ಧಾಂತಗಳು ಸಮುದಾಯಗಳ ಆತ್ಮಕಥನವನ್ನು ನಿರ್ವಚಿಸುವಂತಿರಬೇಕು. ಕನ್ನಡ ಪರಂಪರೆಯ ಬಹುರೂಪಿ ಸಾಂಸ್ಕೃತಿಕ ಅನನ್ಯತೆಗಳನ್ನೆಲ್ಲ ಅಖಂಡವಾಗಿ ಸಂಯೋಗಿಸುತ್ತಲೇ ಸಂಸ್ಕೃತಿಗಳ ಪುನರುಜ್ಜೀವನಕ್ಕೆ ಬೇಕಾದಂತಹ ಬೌದ್ಧಿಕ, ಸೈದ್ಧಾಂತಿಕ ಭಿತ್ತಿಯನ್ನೂ ಬಲಗೊಳಿಸುವಂತಹ ಸಾಧ್ಯತೆಗಳ ಕಡೆಗೆ ಆಲೋಚಿಸಬೇಕಾದ್ದಿದೆ.

**ಡಾ|| ಮೊಗಳ್ಳಿ ಗಣೇಶ್**, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ - ೫೮೩ ೨೭೬

## ಯಾವುದು ಕ್ರಿಯಾಶೀಲವಾದ ನಿಲುವು ?

*ವಿಕ್ರಮ ವಿಸಾಜಿ*

೧. ಶಿಕ್ಷಣ, ಆಧುನಿಕತೆ, ತಂತ್ರಜ್ಞಾನ ಮತ್ತು ಈಗ ಇವುಗಳನ್ನು ಹೊಸ ಕ್ರಮದಲ್ಲಿ ನಿರೂಪಿಸುತ್ತಿರುವ ಜಾಗತೀಕರಣ, ಹಲವು ಸಂಸ್ಕೃತಿಗಳು ಪಡೆದುಕೊಳ್ಳುತ್ತಿರುವ ವಿವಿಧ ವಿನ್ಯಾಸಗಳ ಹಿಂದಿನ ಒತ್ತಡಗಳಾಗಿವೆ. ಇವು ಸಂಸ್ಕೃತಿಗಳ ಜೊತೆ ಹೊಂದಿರುವ ಸಂಬಂಧ ಅತ್ಯಂತ ಸಂಕೀರ್ಣ ಮತ್ತು ಗೋಜಲಾದದ್ದು. ಒಂದು ಸಂಸ್ಕೃತಿಯ ಜನ ಇದನ್ನು ವಿಮೋಚನೆಯೆಂದು ಭಾವಿಸಿದರೆ, ಇನ್ನೊಂದು ಸಂಸ್ಕೃತಿಯ ಜನ ಇದನ್ನು ಅವನತಿಯ ಪ್ರತೀಕವೆಂದು ನಂಬಿದ್ದಾರೆ. ಅಂದರೆ ಒಂದು ಸಂಸ್ಕೃತಿ ಎಲ್ಲವನ್ನೂ ಸ್ವಾಗತಿಸುತ್ತಿದೆ, ಇನ್ನೊಂದು ಎಲ್ಲವನ್ನೂ ನಿರಾಕರಿಸುತ್ತಿದೆ ಎಂದು ಕೂಡ ಭಾವಿಸಬೇಕಾಗಿಲ್ಲ. ಅವು ಅವಮಾನ ಮತ್ತು ಭಯದ ಸ್ಥಿತಿಯಲ್ಲಿ ತಮಗೆ ಬೇಕಾದದ್ದನ್ನು ಪಡೆಯುವ ಮತ್ತು ಬೇಡವಾದದ್ದನ್ನು ನಿರಾಕರಿಸುವ ರಾಜಕಾರಣ ಮಾಡುತ್ತಿವೆ. ಈ ರಾಜಕಾರಣವನ್ನು ಮೀರಿ ಕೂಡ ಸಂಸ್ಕೃತಿ ತನ್ನ ಸ್ಥಿತ್ಯಂತರಗಳನ್ನು ಕಾಣಿಸುತ್ತಿದೆ.

ಇಂಥ ಒತ್ತಡಗಳ ಬಗ್ಗೆ ಕ್ರಿಯಾಶೀಲವಾದ ನಿಲುವು ತಳೆಯದ ಸಂಸ್ಕೃತಿ ಚಿಂತನೆ ಅನೈತಿಕವಾದುದು ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ ಈಗ ಗೊಂದಲ ಇದ್ದದ್ದು ಯಾವುದು 'ಕ್ರಿಯಾಶೀಲ ನಿಲುವು' ಎನ್ನುವುದರ ಕುರಿತು. ಹುಸಿ ವ್ಯವಸ್ಥೆಯನ್ನು ಒಡೆಯುವುದು ಚಿಂತನೆಗಳ ಒಂದು ಹಂತ. ಆರೋಗ್ಯಪೂರ್ಣ ಪರ್ಯಾಯಗಳನ್ನು ಸೂಚಿಸುವುದು ಇನ್ನೊಂದು ಹಂತ. ಸಂಸ್ಕೃತಿ ಚಿಂತನೆಗಳು ಭ್ರಮೆಗಳನ್ನು ಕಳಚುವಲ್ಲಿ ಎಷ್ಟು ಉತ್ಸುಕವಾಗಿವೆಯೊ, ಪರ್ಯಾಯಗಳನ್ನು ಸೂಚಿಸುವಲ್ಲಿ ಅಷ್ಟು ಉತ್ಸುಕವಾಗಿಲ್ಲ. ಪರ್ಯಾಯಗಳನ್ನು ಕಾಣಿಸುವಲ್ಲಿಯೇ 'ಸಂಸ್ಕೃತಿ ಚಿಂತನೆ'ಗಳ ಕ್ರಿಯಾಶೀಲವಾದ ನಿಲುವುಗಳು ಅಡಗಿರುತ್ತವೆ. ತಮ್ಮ ಕಾಲದಲ್ಲಿ ಗಾಂಧಿ, ಅಂಬೇಡ್ಕರ, ಲೋಹಿಯಾ ಇಂಥ ನಿಲುವುಗಳನ್ನು ತಳೆದಿದ್ದರು.

೨. ಹಿಂದಿನಿಂದಲೂ ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಸಂಸ್ಕೃತಿ ವಿಮರ್ಶೆಯ ಎಳೆಗಳು ದಟ್ಟವಾಗಿಯೇ ಇವೆ. ಈಗ ಇದರ ಚಲನೆ ಹೆಚ್ಚು ಖಚಿತ ಮತ್ತು ಸಾಂದ್ರವಾಗಿದೆ.

ಸಾಹಿತ್ಯ ಕೃತಿಗಳು ತಮ್ಮ ಸಂಸ್ಕೃತಿಯ ಅರ್ಥಪೂರ್ಣತೆ ಮತ್ತು ನರಕವನ್ನು ಹಲಬಗೆಯಲ್ಲಿ ಒಳಗುಮಾಡಿಕೊಳ್ಳುತ್ತವೆ. ರಚನೆ, ಶೈಲಿ, ಛಂದಸ್ಸು ಇದಕ್ಕೂ ಮಿಕ್ಕಿ ಇದರ ಕಾಣ್ಕೆಗಳಿರುವುದುಂಟು. ಕೃತಿಯ ಮಹತ್ವ ಅದರ ಸ್ಥಳೀಯ ಸಾಂಸ್ಕೃತಿಕ ಸಂಬಂಧಗಳಲ್ಲಿರುತ್ತದೆ. ಅಂದರೆ, ಕೃತಿಯ ಸಾಂಸ್ಕೃತಿಕ ವಿವರಗಳಲ್ಲಿ ಅಥವಾ ಸಂಸ್ಕೃತಿಯೊಂದಿಗಿನ ಕರುಳುಬಳ್ಳಿಯ ಸಂಬಂಧದಲ್ಲಿಯೇ ಅದರ ದರ್ಶನಗಳಿವೆ. ಸಂಸ್ಕೃತಿಯ ಸೂಕ್ಷ್ಮತೆಗಳನ್ನರಿಯುತ್ತಾ, ಕೃತಿಯ ಒಳವಿವರಗಳು ಸಂಸ್ಕೃತಿಯೊಂದಿಗೆ ನಡೆಸಿರಬಹುದಾದ ನೈತಿಕ ಅನುಸಂಧಾನವನ್ನು ವಿಶ್ಲೇಷಿಸುವುದು ಸರಿಯಾದ ಕ್ರಮ ಎನಿಸುವುದು. ಜತೆಗೆ ಬರಹದ ರಾಜಕಾರಣ ಮತ್ತು ಮೊದಲೇ ಹೇಳಿದಂತೆ ನೈತಿಕತೆಯನ್ನು ಹೆಚ್ಚೆಚ್ಚು ಚರ್ಚೆಗೆ ಒಡ್ಡಬೇಕು. ರಾಜಕಾರಣ ಬದುಕಿನ ಭೌತಿಕ ನೆಲೆಗಳನ್ನು ಗಮನಕ್ಕೆ ತೆಗೆದುಕೊಂಡರೆ, ನೈತಿಕತೆ ರಾಜಕಾರಣ ಸೇರಿದಂತೆ ಎಲ್ಲವನ್ನೂ ಮಾನವೀಯ ಅಧ್ಯಾತ್ಮದ ನೆಲೆಯಲ್ಲಿ ಗ್ರಹಿಸುತ್ತದೆ. ಈ ಎರಡರ ಕಾಣ್ಕೆಯನ್ನು ಬರಹಗಾರ ಎಷ್ಟರಮಟ್ಟಿಗೆ ಉನ್ನತೀಕರಿಸಿದ್ದಾನೆ ಎಂಬುದನ್ನು ಸಂಸ್ಕೃತಿ ವಿಮರ್ಶೆ ತನ್ನ ತಾತ್ವಿಕ ಹಾದಿಯಾಗಿಸಿಕೊಳ್ಳಬೇಕು. ಕನ್ನಡದಲ್ಲಿ ಸಂಸ್ಕೃತಿ ವಿಮರ್ಶೆ ಇಂಥ ತಿರುವುಗಳನ್ನು ಪಡೆದುಕೊಳ್ಳುತ್ತಿದೆ.

೩. ಯುರೋಪಿನಲ್ಲಿ ರೂಪುಗೊಂಡ 'ಸಂಸ್ಕೃತಿ ಸಿದ್ಧಾಂತ'ಗಳ ಹಿಂದಿರುವ ಒತ್ತಾಸೆಗಳೇ ಬೇರೆ. ಇವುಗಳನ್ನು ಇನ್ನೊಂದು ಪರಿಸರದ ಅಧ್ಯಯನಕ್ಕೆ ಬಳಸಿದಾಗ ತೊಡಕುಗಳುಂಟಾದದ್ದೆ ಹೆಚ್ಚು. ಹೀಗಾಗಿ ಇವುಗಳಿಂದ ಅರಿವನ್ನು ಪಡೆದುಕೊಂಡು ಕೂಡ ದೂರವನ್ನು ಕಾಯ್ದುಕೊಳ್ಳುವುದು ಅಗತ್ಯ. ಜಾನಪದಕ್ಕೆ ಸಂಬಂಧಿಸಿದಂತೆ ಫಿನ್‌ಲ್ಯಾಂಡಿನ ಸಿದ್ಧಾಂತಗಳು ಇಲ್ಲಿನ ಜನಪದ ತಜ್ಞರನ್ನು ಹೇಗೆ ವಂಚಿಸಿದವು ನೋಡಿ. ಈ ನೆಲದ ಜಾನಪದದ ಅಂತಸ್ಸತ್ವವನ್ನು ಅರಿಯಲು ಬೇರೆ ಕ್ರಮಗಳೇ ಬೇಕೆನಿಸುತ್ತದೆ. ಇದು ಸಾಹಿತ್ಯದ ಕುರಿತು ಕೂಡ ನಿಜ, ಸಮುದಾಯಗಳ ಅಧ್ಯಯನದ ಕುರಿತು ಕೂಡ



ನಿಜ. ಆದರೆ ಫಿನ್‌ಲ್ಯಾಂಡಿನ ಮಾದರಿಗಳಿಗೆ ಎಷ್ಟು ಒಗ್ಗಿಹೋಗಿದ್ದೇವೆಂದರೆ ಇಂದಿಗೂ ಸಹ ಸ್ಥಳೀಯ ಸಿದ್ಧಾಂತಗಳನ್ನು ರೂಪಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ವಿಭಿನ್ನ ಪರಿಸರದಲ್ಲಿ ರೂಪಿತವಾದ ಸಿದ್ಧಾಂತಗಳ ಕುರಿತ ಅತಿಯಾದ ಮುಕ್ತತೆ ಇಲ್ಲಿನ ಸಾಂಸ್ಕೃತಿಕ ವಾಸ್ತವಗಳನ್ನು ಅರಿಯಲು ಅವಕಾಶ ನೀಡುವುದಿಲ್ಲ. ತೀರಾ ಎಚ್ಚರ ಅವುಗಳ ಬಗೆಗೆ ಪೂರ್ವಗ್ರಹಗಳನ್ನು ಹುಟ್ಟಿಸಬಹುದು. ಅದು ಯಾವುದೇ 'ಸಂಸ್ಕೃತಿ ಸಿದ್ಧಾಂತ' ವಾಗಿರಲಿ ಇಲ್ಲಿನ ಸಾಂಸ್ಕೃತಿಕ ವಾಸ್ತವಗಳ ಅಧ್ಯಯನಕ್ಕೆ ಉಪಯೋಗವಾಗುವಂತೆ ಪರಿವರ್ತಿಸಿಕೊಳ್ಳಬೇಕು. ಇಲ್ಲಿಯ ರಾಜಕಾರಣ, ಸಂಸ್ಕೃತಿಯನ್ನು ನೈತಿಕವಾಗಿ ಪರಿಶೀಲಿಸಲು ಅವಕಾಶವಾಗುವಂತೆ ದಕ್ಕಿಸಿಕೊಳ್ಳಬೇಕು. ಎಲ್ಲಕ್ಕಿಂತ ಮುಖ್ಯವಾಗಿ ನಮ್ಮ ಪರಿಸರದಿಂದಲೇ ಸಂಸ್ಕೃತಿ ಸಿದ್ಧಾಂತಗಳನ್ನು ಕಟ್ಟಿಕೊಳ್ಳಲು ಯತ್ನಿಸಬೇಕು.

೪. ಈಗ ಎಲ್ಲರಿಗೂ ಗೊತ್ತಿರುವಂತೆ ಈ ಬೈನರಿ ವೈವಿಧ್ಯಗಳು ತಮ್ಮ ನಡುವಿನ ಗೆರೆಗಳನ್ನು ಬಹಳ ಕಡೆ ಅಳಿಸಿಕೊಂಡಿವೆ. ಕೆಲವೆಡೆ ತೆಳುವಾಗಿಸಿಕೊಂಡಿವೆ. ನಗರದಲ್ಲಿ ಗ್ರಾಮ, ಗ್ರಾಮದಲ್ಲಿ ನಗರ, ಶಿಷ್ಟದಲ್ಲಿ ಜಾನಪದ, ಜಾನಪದದಲ್ಲಿ ಶಿಷ್ಟ – ಹೀಗೆ ಒಂದರೊಳಗೊಂದು ಬೆರೆತು ಪರಸ್ಪರ ಕೊಡುಪಡೆಯುವ ಸಂಬಂಧ ಸ್ಥಾಪಿಸಿವೆ. ಇವುಗಳ ನಡುವಿನ ಗುಣಾತ್ಮಕ ಸಂಬಂಧಗಳನ್ನು ಶೋಧಿಸುವಂತಾದರೆ ಒಳ್ಳೆಯದು.

೫. ತೀರಾ ಅಕಡೆಮಿಕ್ ಆದ ಸಂಸ್ಕೃತಿ ಚಿಂತಕರ ಸಿದ್ಧಾಂತಗಳೇ ಜನಸಮುದಾಯಗಳನ್ನು ಸರಿಯಾಗಿ ಗ್ರಹಿಸಲಿಲ್ಲ. ಯುರೋಪಿನ ದೃಷ್ಟಿಕೋನಗಳು ಮತ್ತು ಪೂರ್ವನಿರ್ಧಾರಿತ ಚೌಕಟ್ಟುಗಳಿಂದಾಗಿ ಸಂಕುಚಿತವಾದ ನಿರ್ಣಯಗಳಿಗೆ ತಲುಪಿದರು. ಇದರಿಂದಾಗಿ ತಕ್ಷಣಕ್ಕೆ ಸಲ್ಲುವ ಇಲ್ಲವೆ ದೂರದ ಆದರ್ಶವಾದಿ ಚಿಂತನೆಗಳು ರೂಪುಗೊಂಡವು. ತಕ್ಷಣಕ್ಕೆ ಸಲ್ಲುವ ಚಿಂತನೆ ಮುಂದೆ ಅಪಾಯಗಳನ್ನು ತಂದೊಡ್ಡಿದರೆ, ತನ್ನ ಕಾಲಕ್ಕಿಂತ ಬಹುದೂರದ ಆದರ್ಶವಾದಿ ಚಿಂತನೆ ವಾಸ್ತವದ ದುಗುಡಗಳಿಗೆ ಸಮಾಧಾನ ನೀಡದೇ ಇರಬಹುದು. ಇಂಥ ಅಂತರ, ಗೊಂದಲಗಳಿಂದಾಗಿಯೇ ಪರ್ಯಾಯಗಳನ್ನು ರೂಪಿಸಿಕೊಳ್ಳಲು ತೊಡಕಾಗುತ್ತಿದೆ. ಪರ್ಯಾಯಗಳಿಲ್ಲದ ಏಣಚಿಂತನೆಯೆ ಇಂದಿನ ಸಿದ್ಧಾಂತಗಳಲ್ಲಿರುವ ದೊಡ್ಡ ಬಿಕ್ಕಟ್ಟಾಗಿದೆ.

*ವಿಕ್ರಮ ವಿಸಾಜಿ, ಅಧ್ಯಾಪಕರು, ಸ್ನಾತಕೋತ್ತರ ಕೇಂದ್ರ, ನಂದಿಹಳ್ಳಿ, ಸೊಂಡೂರು – ೫೮೩ ೧೧೯*

## 'ಹೊಸತು'-ಪ್ರಶ್ನಾವಳಿಗೆ ಉತ್ತರಗಳು

ಡಾ॥ ಎಚ್. ಎಸ್. ರಾಘವೇಂದ್ರ ರಾವ್

೧. ಸಂಸ್ಕೃತಿ ಎನ್ನುವುದು ಒಂದು ಸಂಗತಿಯೂ ಹೌದು, ಪ್ರಕ್ರಿಯೆಯೂ ಹೌದು. ಅದರ ಹಿಂದೆ ಕೆಲವು ಅಪರಿಹಾರ್ಯವಾದ, ಮತ್ತೆ ಕೆಲವು ತಪ್ಪಿಸಿಕೊಳ್ಳಬಹುದಾದ ಒತ್ತಡಗಳು ಕೆಲಸ ಮಾಡುತ್ತಿರುತ್ತವೆ. ಸಂಸ್ಕೃತಿಯ ಬಹುರೂಪಿ ನೆಲೆಗಳೇ ಆಂತರಿಕ ಮತ್ತು ಬಾಹ್ಯ ಸಂಘರ್ಷಗಳನ್ನು ಅನಿವಾರ್ಯವಾಗಿ ಮಾಡುತ್ತವೆ. ಇಂಥ ಒತ್ತಡಗಳು ವಿಜ್ಞಾನ-ತಂತ್ರಜ್ಞಾನಗಳಿಂದ ಹೇಗೋ ಹಾಗೆಯೇ ಅವೆಲ್ಲವುಗಳ ಸೃಷ್ಟಿ ಮತ್ತು ವಿತರಣೆಗಳನ್ನು ನಿಯಂತ್ರಿಸುವ ಆರ್ಥಿಕ ಮತ್ತು ರಾಜಕೀಯ ನೆಲೆಗಳಿಂದಲೂ ಹುಟ್ಟಿಕೊಳ್ಳುತ್ತವೆ. ಈ ನಿಯಂತ್ರಕಗಳನ್ನು ಗಮನಿಸದೆ, ಕೇವಲ 'ಸಾಂಸ್ಕೃತಿಕ' ನೆಲೆಯಲ್ಲಿ ಕ್ರಿಯಾಶೀಲವಾಗಿದ್ದು, ಉಳಿದಂತೆ ತಟಸ್ಥವಾಗಿರುತ್ತೇನೆ ಎನ್ನುವುದು ಹುಸಿಯಾಗುತ್ತದೆ. ಎಂದರೆ, ನಾವು ಪರಿಸರದ ಬಗ್ಗೆ ತೆಗೆದುಕೊಳ್ಳುವ ನಿಲುವುಗಳಿಗೂ ನಕ್ಸಲೀಯರ ಬಗ್ಗೆ ತೆಗೆದುಕೊಳ್ಳುವ ನಿಲುವುಗಳಿಗೂ ನಿಕಟ ಸಂಬಂಧವಿರುತ್ತದೆ. ಹಾಗಲ್ಲದ ಸಂಸ್ಕೃತಿ ಚಿಂತನೆಯು ವ್ಯವಸ್ಥೆಯು ಸಾಕಿದ 'ಮುದ್ದುನಾಯಿ'ಗಳಂತೆ, ಹಿಂದೆ ಬಂದರೆ ಒದೆಯದ ಮುಂದೆ ಬಂದರೆ ಕಚ್ಚದ ಪುಣ್ಯಕೋಟಿಯಾಗಿರುತ್ತದೆ. ಅಷ್ಟೇ ಅಲ್ಲ, ವ್ಯವಸ್ಥೆಯು ಸ್ವತಃ ತಾನೇ ತನಗೆ ಅನುಕೂಲವಾದ ಸಂಸ್ಕೃತಿ ಸಿದ್ಧಾಂತಗಳನ್ನು ರೂಪಿಸಿ ಗಾಳಿಯಲ್ಲಿ ತೇಲಿಬಿಡುತ್ತದೆ.

೨. ಇಲ್ಲಿ, 'ಇತ್ತೀಚೆಗೆ' ಎಂಬ ಮಾತಿಗೆ ಅರ್ಥವಿಲ್ಲ. ಆ ರೀತಿಯಲ್ಲಿ ಘೋಷಣೆ ಮಾಡಿಕೊಳ್ಳುವುದರ ಉಪಯುಕ್ತತೆಯು ಈಗ ಸ್ಪಷ್ಟವಾಗಿದೆ ಅಷ್ಟೆ. ಮೊದಲಿನಿಂದಲೂ ವಿಮರ್ಶೆಯು ಒಂದಲ್ಲ ಒಂದು ಬಗೆಯಲ್ಲಿ ಸಾಂಸ್ಕೃತಿಕವಾದ ನೆಲೆಗಳನ್ನು ಹೊಂದಿಯೇ ಇತ್ತು. ಅವುಗಳ ಆರೋಗ್ಯ ಅನಾರೋಗ್ಯಗಳ ಬಗ್ಗೆ ಚರ್ಚೆ ನಡೆಯಬೇಕಾಗಿದೆ; ನಡೆಯುತ್ತಿದೆ. ತಾನು ಸಾಂಸ್ಕೃತಿಕ ನೆಲೆಗಳನ್ನು ಹೊಂದಿಲ್ಲವೆಂದು ಹೇಳಿ, ಆಕೃತಿ ಮತ್ತು ರೂಪಗಳಿಗೆ ಅಂಟಿಕೊಳ್ಳುವ ನವ್ಯವಿಮರ್ಶೆಯೂ ನಿರ್ದಿಷ್ಟ ಸಾಂಸ್ಕೃತಿಕ ಸನ್ನಿವೇಶದ ಫಲಿತವೇ ಆಗಿದೆ. ಸಂಸ್ಕೃತಿಯನ್ನು ಕೇಂದ್ರವಾಗಿಟ್ಟುಕೊಂಡು ಹೊರಡುವ ಬಹುಪಾಲು ಬರವಣಿಗೆಯು ಆಶಯಗಳಿಗೆ ನೀಡುವ ಮಹತ್ವವನ್ನು ಆಕೃತಿಗಳಿಗೆ ಕೊಡುವುದಿಲ್ಲ. ಆಶಯಗಳೇ ಆಕೃತಿಯನ್ನೂ ನಿರ್ಧರಿಸುತ್ತವೆ ಎಂಬ ಮಾತು ಸಂಪೂರ್ಣವಾಗಿ ಸರಿಯಲ್ಲ. ಉದಾಹರಣೆಗೆ ತಂತ್ರಜ್ಞಾನದ ಫಲವಾಗಿ ಮೂಡಿಬಂದಿರುವ ಹೊಸ ಸಂವಹನ ವಿಧಾನಗಳಿಗೂ ಬಹುಜನಪರವಾದ ಆಶಯಗಳಿಗೂ ಹೊಂದಾಣಿಕೆ ಇದೆಯೆಂದು ಹೇಗೆ ತಾನೇ ಹೇಳುವುದು? ಮಾಧ್ಯಮಗಳ ಮೇಲೆ ಮಾಲ್ಕಿ ಹಕ್ಕನ್ನು ಸ್ಥಾಪಿಸಿರುವ ಪ್ರತಿಷ್ಠಿತ ಶಕ್ತಿಗಳು ಅಲ್ಲಿ ಒಡಮೂಡುತ್ತಿರುವ ಆಕೃತಿಗಳ ಸ್ವರೂಪವನ್ನೂ ತೀರ್ಮಾನಿಸುತ್ತಿಲ್ಲವೇ? ಅಂಥ ಆಕೃತಿಗಳನ್ನು ನಿರಾಕರಿಸಿ ಪರ್ಯಾಯ ಆಕೃತಿಗಳನ್ನು ರೂಪಿಸಿಕೊಳ್ಳುವ ಹೊಣೆಗಾರಿಕೆಯೂ ಜನಪರ ಹೋರಾಟಗಳದೇ ಆಗಿರುತ್ತದೆ.

ಆದ್ದರಿಂದ ಯಾವುದೇ ಸಾಂಸ್ಕೃತಿಕ ವಿಮರ್ಶೆಯು ಆಕೃತಿ ಮತ್ತು ಆಶಯಗಳಿಗೆ ಇರುವ ಅವಿನಾಸಂಬಂಧ ಹಾಗೂ ಸಂಘರ್ಷಾತ್ಮಕ ಸಂಬಂಧಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ಅವೆರಡರ ಚಲನಶೀಲತೆಯ ಸ್ವರೂಪವನ್ನು ಪರಿಶೀಲಿಸಬೇಕು. 'ಅನ್ಯ' ಪ್ರಭಾವಗಳನ್ನು ಒಳಗೊಳ್ಳುವ ಸಂದರ್ಭದಲ್ಲಿಯೂ ಈ ತಿಳಿವಳಿಕೆಯೂ ಮೂಡಿಬರುತ್ತದೆ. 'ಅನ್ಯ' ವಿಧಾನಗಳು ಅಂತೆಯೇ 'ತಾತ್ವಿಕತೆಗಳು' ಎಂದಿಗೂ ಮೌಲ್ಯ ತಟಸ್ಥವಲ್ಲ. ಅವುಗಳನ್ನು ನಮ್ಮ ಬಹುಸಾಂಸ್ಕೃತಿಕ ನೆಲೆಗಳ 'ವರ್ತಮಾನ ಸ್ಥಿತಿ'ಯಲ್ಲಿ ಗ್ರಹಿಸುವ, ಬಳಸುವ, ತಿರಸ್ಕರಿಸುವ ಹೊಣೆಯು ಸದಾ ಇರುತ್ತದೆ.

೩. ಇದು ಬಹಳ ಸೂಕ್ಷ್ಮವಾದ ಪ್ರಶ್ನೆ. ಸಂಸ್ಕೃತಿ ಸಿದ್ಧಾಂತಗಳನ್ನು ಸಾಮಾಜಿಕ ಮತ್ತು ರಾಜಕೀಯ ಸಿದ್ಧಾಂತಗಳಿಂದ ಅಲಾಯಿದವಾಗಿ ನೋಡುವುದು ಅಸಾಧ್ಯ ಮತ್ತು ಅಸಮರ್ಪಕ. 'ತಾತ್ವಿಕತೆ'ಗಳಿಗೆ ಕಾಲ-ದೇಶ-ಸಂದರ್ಭಾತೀತವಾದ ಅಸ್ತಿತ್ವವಿರುವುದಿಲ್ಲ. ಆದ್ದರಿಂದ, ಅವುಗಳ ಮುಕ್ತ ಮತ್ತು ವಿಮರ್ಶಾತ್ಮಕವಾದ ಅನುಸಂಧಾನವು ಅಗತ್ಯ. ಹಾಗೆಂದು, ಅನ್ಯವೆಲ್ಲವನ್ನೂ ನಿರಾಕರಿಸಿ ಯಾವಾಗಲೂ ದೇಶೀಯತೆಯ ಬಾವುಟವನ್ನು ಹಾರಿಸುವ ಅಗತ್ಯವೂ ಇಲ್ಲ. ಅಲ್ಲದೆ, ಇಂಥ ವಿಷಯಗಳನ್ನು ಕುರಿತು ಮಾತನಾಡುವಾಗ ಅಲ್ಲಿ ಬರುವ ಘೋಷಿತ ನೆಲೆಗಳಿಗೆ ಮಾತ್ರ ಮರುಳಾಗದೆ ಸಾಲುಗಳ ನಡುವೆ ಅಡಗಿರುವ 'ಹಿಡನ್ ಅಜೆಂಡಾ'ಗಳನ್ನು ಗುರುತಿಸಬೇಕು. ಕೆಲವು ಬಾರಿ, ಅವುಗಳ ಉದ್ದೇಶಿತ ಕ್ಲಿಷ್ಟತೆಯ ಫಲವಾಗಿ ಒಡಮೂಡುವ ಹುಸಿ ತಿಳವಳಿಕೆಯನ್ನು ಗುರುತಿಸಿ ನಿರಾಕರಿಸಬೇಕು. ಅಂಥ ಓದು ಯಾವುದೇ 'ಜ್ಞಾನದರ್ಪ'ಕ್ಕೆ ಕಾರಣವಾಗಬೇಕಿಲ್ಲ. ಏಕೆಂದರೆ ಮತ್ತೆ ಅದು ಇಂಗ್ಲಿಷ್ ಬಲ್ಲವರ, 'ಜ್ಞಾನಕೇಂದ್ರ'(?)ಗಳಲ್ಲಿ ಕಲಿತವರ ದಬ್ಬಾಳಿಕೆಗೆ ಅವಕಾಶ ಮಾಡಿಕೊಡುತ್ತದೆ.

೪. ವಾಸ್ತವವನ್ನು ಪರಸ್ಪರ ವಿರುದ್ಧವೆನ್ನಲಾದ ದ್ವೈವಿಧ್ಯಗಳ ನೆಲೆಯಲ್ಲಿ ಗ್ರಹಿಸುವುದು ಮನುಷ್ಯನ ಮೆದುಳಿಗೆ ದತ್ತವಾಗಿರುವ ಲಕ್ಷಣಗಳಲ್ಲಿ ಒಂದು. ಲೋಕಗ್ರಹಿಕೆ, ಲೋಕವ್ಯಾಖ್ಯಾನಗಳ ಉಪಕರಣವಾಗಿ ನಮಗೆ ದತ್ತವಾಗಿರುವ 'ಭಾಷೆ'ಯೂ ಕೂಡ ಹೀಗೆಯೇ ಕನ್ನಡಿಯೂ ಹೌದು, ಗೋಡೆಯೂ ಹೌದು. ಬೈನರಿಯಾದ ತಿಳವಳಿಕೆಯು ಕ್ರಿಯಾಶೀಲತೆಗೆ ಅನಿವಾರ್ಯವಾದ ಸಂಗತಿ. ಏಕೆಂದರೆ ಅದು, ತೊಡಗಿಸಿಕೊಳ್ಳಬೇಕಾದ ಕ್ರಿಯೆಯ ಆಯ್ಕೆಯನ್ನು ಸರಳವಾಗಿಸುತ್ತದೆ. ಅಂತೆಯೇ 'ಕಾರ್ಯತಂತ್ರ'ಗಳ ರೂಪಣಕ್ಕೆ ಬೇಕಾದ 'ರುತ್‌ಲೆಸ್‌ನೆಸ್' ಅನ್ನೂ ಕೊಡುತ್ತದೆ. ಆದರೆ, ಬೈನರಿ ಗ್ರಹಿಕೆಗಳು ಯಾರಿಗೂ ಕಾಣದ ಆದರೆ ವಾಸ್ತವದಲ್ಲಿ ಇರುವ 'ಸ್ಥಿತಿ'ಯನ್ನು ಮರೆಮಾಚುತ್ತವೆ; ಜಾಣಕುರುಡನ್ನು ನೀಡುತ್ತವೆ. 'ನಿಷ್ಕ್ರಿಯ'ವಾದ 'ಜಡಭರತ' ಸ್ಥಿತಿಯ ವಿವೇಕವು ಇಂಥ ಸಂಕೀರ್ಣ ಸತ್ಯವನ್ನು ಗ್ರಹಿಸಬಹುದೇನೋ! ಆದರೆ ಅದು ಯಾರಿಗೆ ಬೇಕು. ಕೆಲವು ಬಾರಿ ಕಲೆಯು ಇಂಥ 'ಎರಡಲಗಿನ' ವಾಸ್ತವವನ್ನು ತನ್ನೊಳಗೆ ಹುದುಗಿಸಿಕೊಂಡಿರುತ್ತದೆ. ಯಾಕೆಂದರೆ, ಅದಕ್ಕೆ ತನ್ನ ಮಾಧ್ಯಮದ ಮಿತಿಗಳನ್ನು ಮೀರುವ ಸಾಮರ್ಥ್ಯವಿರುತ್ತದೆ. ವೈಯಕ್ತಿಕವಾಗಿ ನನಗೆ, ಇಂಥ ಬೈನರಿ ನೆಲೆಗಳ ಪರಿಮಿತಿಯನ್ನು ಅರ್ಥಮಾಡಿ ಕೊಳ್ಳುವುದು, ಆದರೆ, ತಾತ್ಕಾಲಿಕವಾಗಿ ಅವುಗಳಲ್ಲಿ ಯಾವುದೋ ಒಂದರ ಪರವಾದ ನಿಲುವನ್ನು ತಳೆಯುವುದು ಅನಿವಾರ್ಯವೆಂದು ತೋರುತ್ತದೆ. ಏಕೆಂದರೆ ನಮ್ಮನ್ನು ಯಾವಾಗಲೂ ಕಾಡುವುದು 'ಗ್ರೇಟರ್ ಈವಿಲ್' ಮತ್ತು 'ಲೆಸ್ಸರ್ ಈವಿಲ್'ಗಳಲ್ಲಿ ಒಂದರ ಆಯ್ಕೆಯ ಪ್ರಶ್ನೆ.

೫. ಯಾವುದೇ ಸಿದ್ಧಾಂತವು ವಾಸ್ತವದ ಬದುಕಿಗೆ ಹಿಡಿದ ಕನ್ನಡಿಯಲ್ಲ. ಅದು ನಿರ್ದಿಷ್ಟ ಸನ್ನಿವೇಶದಲ್ಲಿ, ನಿರ್ದಿಷ್ಟ ನೆಲೆಗಳಿಂದ, ನಿರ್ದಿಷ್ಟ ಉದ್ದೇಶಕ್ಕಾಗಿ ಹುಟ್ಟಿಕೊಂಡಿರುವ ರಚನೆ. ವಾಸ್ತವ ಜೀವನವಿಧಾನಗಳು ಪ್ರಾಯಶಃ ಚರಿತ್ರೆಯ ಭಾರಕ್ಕಿಂತ ಹೆಚ್ಚಾಗಿ ವರ್ತಮಾನದ ಒತ್ತಡಗಳಿಂದ ರೂಪಿತವಾಗುತ್ತವೆ. ಚರಿತ್ರೆ ಇರುವುದು ಸಮುದಾಯಗಳ ರೂಪಣದಲ್ಲಿಯೇ ವಿನಾ ಚಿಂತನೆಯಲ್ಲಲ್ಲ. ಆದರೆ ಅದು ತನಗೆ ಚರಿತ್ರೆಯೆಂದು ದತ್ತವಾದುದನ್ನು ಒಪ್ಪಿಕೊಂಡುಬಿಡುತ್ತದೆ. ಆದರೆ ಅಂಥ ಒಪ್ಪಿಕೊಳ್ಳುವಿಕೆಯ ಹಿಂದೆಯೂ ಸದ್ಯದ ಅಗತ್ಯಗಳೇ ಇರುತ್ತವೆ. ಆದರೆ ತಕ್ಕ ಆಯುಧಗಳಿಂದ ಮತ್ತು ಶಕ್ತ ಪೋಷಕರಿಂದ ಸನ್ನದ್ಧವಾದ ಸಂಸ್ಕೃತಿ ಸಿದ್ಧಾಂತದ ಅಜೆಂಡಾಗಳಿಗೆ ಸಮುದಾಯಗಳ ಜೀವನಕ್ರಮವನ್ನು



'ಇರ್ರಿವರ್ಸಿಬಲ್' ಆಗಿ ಬದಲಿಸಿಬಿಡುವ ಶಕ್ತಿಯಿರುವುದೇನೋ. ಅದು ಒಂದು ದುರಂತ. ಕೇವಲ ಬೌದ್ಧಿಕವಾದ ಸಂಸ್ಕೃತಿ ಸಿದ್ಧಾಂತಗಳ ನೆಲೆಯಿಂದ ಹೊರಟವವರು 'ಪ್ರಾಕ್ಟಿಕಲ್ ಪಾಲಿಟಿಕ್ಸ್' ಮಾಡುವವರಷ್ಟು ಯಶಸ್ವಿಯಾಗದಿರುವುದು ಇನ್ನೊಂದು ಬಿಕ್ಕಟ್ಟು. ಇದನ್ನು ತಾತ್ಕಾಲಿಕವಾಗಿಯಾದರೂ ಎದುರಿಸಲು ಸಾಧ್ಯವಾಗಿದ್ದು ಗಾಂಧೀಜಿಯವರಿಗೆ ಮಾತ್ರವೆಂದು ತೋರುತ್ತದೆ. ಇಂಥ ಕಡೆ ಬಿಕ್ಕಟ್ಟುಗಳನ್ನು ಗುರುತಿಸುವಷ್ಟು ಸುಲಭವಾಗಿ ಪರಿಹಾರವನ್ನು ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲ.

**ಡಾ|| ಎಚ್. ಎಸ್. ರಾಘವೇಂದ್ರ ರಾವ್**, ನಂ.೭, 'ಶ್ರೀಮಾತಾ'
೧೫ನೇ ಅಡ್ಡರಸ್ತೆ, ೫ನೇ ಹಂತ, ಜೆ. ಪಿ. ನಗರ, ಬೆಂಗಳೂರು – ೫೬೦ ೦೭೮

## ಕರ್ನಾಟಕದ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ

ಬಿ. ಯು. ಸುಮಾ

೧. 'ಸಂಸ್ಕೃತಿ' ಎಂಬ ಪದವನ್ನು ಕೇಳಿದ ತಕ್ಷಣ ಗೊಂದಲಕ್ಕೆ ಒಳಗಾಗುವಂಥ ಸ್ಥಿತಿ ಬಂದಿದೆ. ಪ್ರಸ್ತುತ ಸಂದರ್ಭದಲ್ಲಿ 'ಸಂಸ್ಕೃತಿ'ಯ ಅರ್ಥ – ವ್ಯಾಪ್ತಿಗಳ ಬಗ್ಗೆ ನಾವು ಪರಿಹರಿಸಿಕೊಳ್ಳಲು ಸಾಧ್ಯವಿಲ್ಲವೇನೋ ಎಂಬಂಥ ಸಮಸ್ಯೆ ಉಂಟಾಗಿದೆ. ಈ ಕಾರಣದಿಂದಲೇ 'ಸಂಸ್ಕೃತಿ' ಎನ್ನುವುದು ಏಕಕಾಲಕ್ಕೆ ಅತ್ಯಂತ ಸಂಕೀರ್ಣ ಮತ್ತು 'amorphous' ಆದ ಪರಿಕಲ್ಪನೆಯಾಗಿದೆ. ಸಂಸ್ಕೃತಿಯ ವ್ಯಾಖ್ಯಾನ ಹಾಗೂ ವಿವರಣೆಗಳಿಗೆ ಸಂಬಂಧಿಸಿದ ಇಂಥ ಸಮಸ್ಯೆಗಳ ನಡುವೆಯೇ, 'ಸಂಸ್ಕೃತಿ'ಯ ಬಗ್ಗೆ ನಾವೆಲ್ಲಾ ನಮ್ಮದೆ ಪರಿಕಲ್ಪನೆಗಳನ್ನು ಇಟ್ಟುಕೊಂಡಿದ್ದೇವೆ ಎನ್ನುವುದೂ ನಿಜ.

ಸಂಸ್ಕೃತಿಯ ರೂಪಣ, ಸ್ವೀಕಾರ, ನಿರಾಕರಣೆ ಮತ್ತು ಪರಿವರ್ತನೆಗಳ ಹಿಂದೆ ನಿಸ್ಸಂದೇಹವಾಗಿ ರಾಜಕೀಯ ಹಾಗೂ ಆರ್ಥಿಕ ಶಕ್ತಿಗಳ ಯಾಜಮಾನ್ಯದ ಒತ್ತಡವಿರುತ್ತದೆ. ಭಾರತದ ಮಟ್ಟಿಗೆ ಧರ್ಮ ಕೂಡ ರಾಜಕೀಯವಾದದ್ದು. ವಾಸ್ತವವಾಗಿ ಇಂಥ ಒತ್ತಡಗಳೊಂದಿಗೆ ಮುಖಾಮುಖಿಯಾಗುವುದಕ್ಕೆ ಸಂಸ್ಕೃತಿಯ ಒಳಗೇ ಸಂಘರ್ಷಗಳು ರೂಪುಗೊಳ್ಳುತ್ತಿರುತ್ತವೆ. ಈ ರೂಪುಗೊಳ್ಳುವಿಕೆಯೇ ಅತ್ಯಂತ ಜಟಿಲವಾದ ಪ್ರತಿಕ್ರಿಯಾತ್ಮಕ ಪ್ರಕ್ರಿಯೆ; ಹಾಗೂ ಈ ಪ್ರಕ್ರಿಯೆಯ ಬಹುಮುಖಿ ಆಯಾಮಗಳೇ ಬಹಳ ಮಹತ್ವ ಪೂರ್ಣವಾದ ಚಿಂತನೆಗಳಾಗಿವೆ. ಒಂದು ಕಾಲಘಟ್ಟದ ಇಂಥ ಒತ್ತಡವನ್ನು ಅದರ ವರ್ತಮಾನ ಕಾಲದಲ್ಲಿ ಮುಖಾಮುಖಿಯಾಗುವ ರೀತಿಗೂ, ನಂತರ ಇದನ್ನು ಕುರಿತು ಚಿಂತನೆ ಮಾಡುವ ಸ್ವರೂಪಕ್ಕೂ ಬಹಳ ವ್ಯತ್ಯಾಸವಿದೆ. ಮೊದಲನೇ ಪ್ರಕ್ರಿಯೆಯಲ್ಲಿ ಅದು ಹಿಂಸೆಯೊಂದಿಗೆ ನೇರವಾಗಿ ಎದುರಾಗುವಾಗಿನ ಎಲ್ಲಾ ಆತಂಕ, ತಲ್ಲಣ, ವಿರೋಧ, ರಾಜಿಗಳೊಂದಿಗೆ ವ್ಯಕ್ತವಾಗುತ್ತದೆ. ಈ ವ್ಯಕ್ತವಾಗುವ ಪ್ರಕ್ರಿಯೆಯೇ ಅತ್ಯಂತ ಕ್ರಿಯಾಶೀಲವಾದುದು. ಇದನ್ನು ಕುರಿತು ಚಿಂತನೆ ಮಾಡುವಾಗ ಆಯಾ ಕಾಲಘಟ್ಟದ ಸಿದ್ಧಾಂತ, ಪ್ರಭಾವ, ವ್ಯಕ್ತಿಗತ ನಂಬಿಕೆಗಳೂ ಕೆಲಸ ಮಾಡುತ್ತಿರುತ್ತವೆ. ಇಲ್ಲಿ ನಿರ್ವಚಿತವಾಗುವ ಸಂಸ್ಕೃತಿ ಚಿಂತನೆ, ಮತ್ತೊಮ್ಮೆ ಒಂದು ಸಂರಚನೆಯಾಗಿಬಿಡುವ ಅಪಾಯವಿದೆ. ಈ ಅಪಾಯವನ್ನು ಅತ್ಯಂತ ಕ್ರಿಯಾಶೀಲವಾಗಿ ಮೀರುವ ಪ್ರಯತ್ನ ಮಾಡಿದಾಗಲೆಲ್ಲಾ, ಆಚರಣೆ, ಕಲೆ, ಧರ್ಮ, ಸಾಹಿತ್ಯ – ಇತ್ಯಾದಿ ಸಂಸ್ಕೃತಿ ಎಂದು ಗ್ರಹೀತವಾಗುತ್ತಿದ್ದ ಮೇಲ್ಪದರದ ರಚನೆಗಳನ್ನು ಮೀರಿ, ಇಂಥ ಅಭಿವ್ಯಕ್ತಿಗಳನ್ನು ಸೃಷ್ಟಿ ಮಾಡುವ ಉತ್ಪಾದನೆಯ ಪರಿಸರ, ಉತ್ಪಾದನೆಯ ವಿಧಾನ, ಉತ್ಪಾದನೆಯ ಸಲಕರಣೆ ಇವೆಲ್ಲವನ್ನೂ ಒಳಗೊಂಡ ಸಂಕೀರ್ಣ ಸಂಕಥನದ ವ್ಯಾಖ್ಯಾನ ನಡೆಯುತ್ತದೆ. ಕನ್ನಡದಲ್ಲಿ ಡಾ. ಡಿ. ಆರ್. ನಾಗರಾಜ್, ಯು. ಆರ್. ಅನಂತಮೂರ್ತಿ, ಡಾ. ಬಸವರಾಜ ಕಲ್ಗುಡಿ, ಜಿ. ರಾಜಶೇಖರ್, ರಹಮತ್ ತರೀಕೆರೆ, ರಾಜೇಂದ್ರ ಚೆನ್ನಿ ಮುಂತಾದವರು ಇದನ್ನು ಸಾಧಿಸಿದ್ದಾರೆ.

೨. ಸಾಹಿತ್ಯ ವಿಮರ್ಶೆ ಮತ್ತು ಸಂಸ್ಕೃತಿ ವಿಮರ್ಶೆ ಎಂದು ಭಿನ್ನವಾಗಿ ಗ್ರಹಿಸುವುದು ಸರಿಯಲ್ಲ ಎನಿಸುತ್ತದೆ. ವಸಾಹತೋತ್ತರ ಚಿಂತನೆಯಲ್ಲಿ ಅತ್ಯಂತ ಸ್ಪಷ್ಟವಾಗಿ 'ಸಂಸ್ಕೃತಿ ವಿಮರ್ಶೆ' ಎಂಬ ಪರಿಭಾಷೆಯ ಬಳಕೆಯಾಗುತ್ತಿದ್ದರೂ, ಈ ಪರಿಭಾಷೆಯ ಹಿಂದಿನ ತಾತ್ವಿಕತೆಯ ಪ್ರಭಾವವಿಲ್ಲದೆಯೇ, ಕನ್ನಡದ ಕಥನ ಪರಂಪರೆಯಲ್ಲಿ ಸಾಹಿತ್ಯ, ವಿಮರ್ಶೆ, ಸಂಸ್ಕೃತಿ ಚಿಂತನೆ – ಎಲ್ಲವೂ ಒಂದರೊಳಗೊಂದು ಬೆರೆತು ಹೋಗಿದೆ. ಹಾಗೆ ನೋಡಿದರೆ, ೮೦ರ ದಶಕದ ನಂತರದ ಸಾಹಿತ್ಯ ವಿಮರ್ಶೆ ಅಥವಾ ಸಂಸ್ಕೃತಿ ವಿಮರ್ಶೆ ಪಡೆದುಕೊಂಡಿರುವ ರಾಜಕೀಯ ಮತ್ತು ಸಾಮಾಜಿಕವಾದ ಬಾಗುವಿಕೆಯನ್ನು ೯ನೇ ಶತಮಾನದ ಕಥನಗಳಿಂದಲೂ ಗುರುತಿಸಬಹುದು. ಇಲ್ಲಿ ನಾವು ಸ್ಪಷ್ಟವಾಗಿ ಗುರುತಿಸಬಹುದಾದ್ದು ಪರಿಭಾಷೆಯಲ್ಲಿ ಆದ ಬದಲಾವಣೆಯನ್ನೇ ಹೊರತು, ಕಥನದ ಕಾಳಜಿಯಲ್ಲಿನ ಬದಲಾವಣೆಯನ್ನಲ್ಲ. ಈ ಪರಿಭಾಷೆಯಲ್ಲಿನ ಬದಲಾವಣೆಯು ತಾತ್ವಿಕತೆಯಲ್ಲಿನ ಬದಲಾವಣೆಯನ್ನೂ ಸೂಚಿಸುತ್ತದೆ. ಈ ಪಲ್ಲಟ ಯಾಕಾಗಿ ಬಂದಿತೆಂದರೆ, ಆಧುನಿಕತೆ, ತದನಂತರದ ಜಾಗತೀಕರಣದಿಂದ ಉಂಟಾದ ಆರ್ಥಿಕ ಯಾಜಮಾನ್ಯ ಮತ್ತು ಅದರಿಂದ ಸೃಷ್ಟಿಯಾದ ಬಿಕ್ಕಟ್ಟುಗಳಿಗೆ ಪರ್ಯಾಯವನ್ನು ಹುಡುಕುವುದಕ್ಕಾಗಿ. ಆದರೆ, ಭಾರತದ ಚರಿತ್ರೆಯ ಸಂದರ್ಭದಲ್ಲಿ ಜಾತೀಯ ಯಾಜಮಾನ್ಯ, ಮತೀಯ ಯಾಜಮಾನ್ಯ, ಅನ್ಯದೇಶೀಯ ಯಾಜಮಾನ್ಯದಿಂದ ಇಂಥ ಸಂದಿಗ್ಧ ಸವಾಲುಗಳು ತಲೆದೋರುತ್ತಲೇ ಇದ್ದವು. ಹಾಗೂ ಇದನ್ನು ಎದುರಿಸುವುದಕ್ಕೆ ಇಲ್ಲಿನ ಸಾಂಸ್ಕೃತಿಕ ಅಭಿವ್ಯಕ್ತಿ ಸ್ಥಾಪಿತ ರಚನೆಗಳನ್ನು ಪ್ರಶ್ನಿಸುತ್ತಲೇ ಬಂದಿದೆ.

ಇನ್ನು ಪ್ರಶ್ನೆಯ ಎರಡನೇ ಭಾಗ : ವಿಶ್ವದಲ್ಲಿ ಉಂಟಾಗಿರುವ ಆರ್ಥಿಕ ರಚನೆಯಲ್ಲಿನ ಬದಲಾವಣೆಗಳು ಮತ್ತು ತಂತ್ರಜ್ಞಾನದ ಪ್ರಗತಿಯಿಂದ ಉಂಟಾಗುತ್ತಿರುವ ಸಾಂಸ್ಕೃತಿಕ ಸಂಕರಗಳನ್ನು ಕೇವಲ ದೇಶಿವಾದ, ಮಾರ್ಕ್ಸ್‌ವಾದ, ಲೀವೀಸಿಯನ್, ಫೂಕೋಲ್ಡಿಯನ್ ಅಥವಾ ಇನ್ನಾವುದೇ ಸೈದ್ಧಾಂತಿಕ ಪರಿಭಾಷೆಯ ನೆರವಿನಿಂದ ಸಂಪೂರ್ಣವಾಗಿ ವಿವರಿಸಿಕೊಳ್ಳುವುದು ಅಸಾಧ್ಯವಾಗುತ್ತಿದೆ. ಅದಕ್ಕಾಗಿ ಹೊಸ ನುಡಿಗಟ್ಟುಗಳನ್ನೇ ರೂಪಿಸಿಕೊಳ್ಳಬೇಕು. ನಿಸ್ಸಂದೇಹವಾಗಿ ಇದೊಂದು ದೊಡ್ಡ ಸವಾಲು ಕೂಡ ಹೌದು. ಇದು ಮೌಲ್ಯಕೇಂದ್ರಿತ ಮತ್ತು ಸಮಾಜಕೇಂದ್ರಿತ ಆಗುವುದು ಅಪೇಕ್ಷಣೀಯ. (ಮತ್ತೊಮ್ಮೆ 'ಮೌಲ್ಯ' ಎನ್ನುವುದು ಕೂಡ ಚರ್ಚಾರ್ಹವಾದುದು ಎನಿಸುತ್ತದೆ).

೩. ಡಾ. ಡಿ. ಆರ್. ನಾಗರಾಜ್ ಅವರ 'ಸಾಹಿತ್ಯ ಕಥನ' ಇದಕ್ಕೆ ಒಳ್ಳೆಯ ಉದಾಹರಣೆ ಆಗಬಲ್ಲದು. ಇಲ್ಲಿ ವಿಭಿನ್ನ ರಾಷ್ಟ್ರ ಮತ್ತು ಪರಿಸರದಲ್ಲಿ ರೂಪಿತವಾದ ಸಂಸ್ಕೃತಿ ಸಿದ್ಧಾಂತಗಳನ್ನು, ಭಾರತ ಮತ್ತು ಕನ್ನಡದ ಸಂಸ್ಕೃತಿಯನ್ನು ಗ್ರಹಿಸಿಕೊಳ್ಳುವುದಕ್ಕೆ ಅನ್ವಯಿಸುತ್ತಲೇ, ಹೊಸದೊಂದು ವ್ಯಾಖ್ಯೆಯನ್ನು ಡಿ. ಆರ್. ರೂಪಿಸುತ್ತಾರೆ. ಇವಾನ್ ಇಲ್ಲಿಚ್, ಫ್ರಾಂಜ್ ಫ್ಯಾನನ್, ಸೈದ್ ಮತ್ತು ಫೂಕೋನ ದಟ್ಟವಾದ ಪ್ರಭಾವವನ್ನು ಈ ಕೃತಿಯಲ್ಲಿ ಗುರುತಿಸಬಹುದಾದರೂ, ಅವು ತಮ್ಮ ಚಿಂತನೆಯನ್ನು ಸಂಪೂರ್ಣವಾಗಿ ಆವರಿಸಿಕೊಳ್ಳದ ಎಚ್ಚರವನ್ನು ಡಿ. ಆರ್. ಕಾಯ್ದುಕೊಳ್ಳುತ್ತಾರೆ.

೪. ದ್ವಿಮಾನ ವೈರುಧ್ಯಗಳು ಅಂತಿಮವಾಗಿ ಕೃತಕವಾದವು. ಇಡೀ ವಿಶ್ವವನ್ನು 'ಗ್ಲೋಬಲ್ ವಿಲೇಜ್' ಎಂದು ಗ್ರಹಿಸುತ್ತಿರುವ ಸಂದರ್ಭದಲ್ಲಿ, ಗ್ರಾಮದೊಳಗೆ ನಗರ, ಪೂರ್ವದೊಳಗೆ ಪಶ್ಚಿಮ.... ಹೀಗೆ ಒಂದರೊಳಗೊಂದು ಅಡಗಿ ಕುಳಿತು ಅತ್ಯಂತ ಸಂಕೀರ್ಣವಾದ ಸ್ವರೂಪದೊಂದಿಗೆ ಪ್ರಕಟವಾಗುತ್ತಿರುತ್ತವೆ.

೫. ನಾವು ಹಾಕಿಕೊಳ್ಳಬೇಕಾದ ಮುಖ್ಯವಾದ ಪ್ರಶ್ನೆ ಏನೆಂದರೆ, ಈ ಸಂಸ್ಕೃತಿ ಚಿಂತಕರು ಯಾರು? ಎಂಬುದು. ಭಾರತದಲ್ಲಿ ಮೂರು ವರ್ಗದ ಜನರು ಗಂಭೀರವಾಗಿ ಸಂಸ್ಕೃತಿ ಚಿಂತನೆಯಲ್ಲಿ ತೊಡಗಿದ್ದಾರೆ.

೧) ಮಧ್ಯಮ ವರ್ಗದ ಚಿಂತಕರು
೨) ಎನ್.ಜಿ.ಓ.ಗಳು
೩) ವಿಶ್ವವಿದ್ಯಾಲಯಗಳಲ್ಲಿನ ವಿದ್ವಾಂಸರು/ಸಾಮಾಜಿಕ ಚಿಂತಕರು.

ಮಧ್ಯಮ ವರ್ಗದ ಸಂಸ್ಕೃತಿ ಚಿಂತನೆ ಅನೇಕ ವೇಳೆ ದ್ವಿಮಾನ ವೈರುಧ್ಯಗಳಲ್ಲಿ ಪ್ರಕಟವಾಗುವುದರ ಜೊತೆಗೆ, ತಾವು 'ಇತ್ತು' ಅಥವಾ 'ಇದೆ' ಎಂದುಕೊಂಡಿದ್ದ ರೊಮ್ಯಾಂಟಿಕ್ ಆದ ಲೋಕ ಇಲ್ಲವಾಗುತ್ತಿದೆ ಎಂಬ ಹಳಹಳಿಕೆಯೇ 'ಸಂಸ್ಕೃತಿ ಚಿಂತನೆ'ಯಾಗಿ ವ್ಯಕ್ತವಾಗುತ್ತಿದೆ. ಈ ರೀತಿಯ ಸಂಸ್ಕೃತಿ ಚಿಂತನೆಯ ಮೇಲೆ ರಾಷ್ಟ್ರದ ವಿದ್ಯಮಾನಗಳ immediate past ಮತ್ತು presentನ ತೀವ್ರವಾದ ಪ್ರಭಾವವಿದ್ದು, ಅದಕ್ಕೆ ಪ್ರತಿಕ್ರಿಯೆಯಾಗಿ ಈ ರೀತಿಯ ಸಂಸ್ಕೃತಿ ಚಿಂತನೆ ರೂಪುಗೊಳ್ಳುತ್ತದೆ.

ಇಲ್ಲಿನ ದಲಿತರು, ಬುಡಕಟ್ಟು ಜನಾಂಗ, ಮಹಿಳೆಯರ ಸಮಸ್ಯೆಗಳನ್ನು ಕುರಿತು ಅನೇಕ ಎನ್.ಜಿ.ಓ.ಗಳು ಅಧ್ಯಯನ ಮಾಡುತ್ತಿವೆ. ಸಂಸ್ಕೃತಿ ಚಿಂತನೆಯ ಹೆಸರಿನಲ್ಲಿ ನಡೆಯುವ ಈ ಅಧ್ಯಯನಗಳು ಎಷ್ಟೋ ಸಲ ಕೇವಲ ಸಮಾಜಶಾಸ್ತ್ರೀಯ ವಿವರಗಳಾಗಿ ಮಾತ್ರ ಪ್ರಕಟವಾಗುತ್ತಿವೆ. ಇದರ ಪರಿಣಾಮವಾಗಿ, ಕೇವಲ ಎರಡು ದಶಕಗಳ ಹಿಂದೆ ಇಲ್ಲದ ದಲಿತ, ಆದಿವಾಸಿ... ಇತ್ಯಾದಿ ಸಾಮಾಜಿಕ ವಿಭಜನೆ ಹೆಚ್ಚಾಗುತ್ತಿದೆಯೇ? ಎಂಬ ಅನುಮಾನ ಕೂಡ ಕಾಡುತ್ತಿದೆ.



ಇನ್ನು ಮೂರನೆಯ ವರ್ಗ ಕೈಗೊಳ್ಳುತ್ತಿರುವ ಸಂಸ್ಕೃತಿ ಚಿಂತನೆಯ ಸ್ವರೂಪ ಜನಜೀವನದ ವಾಸ್ತವಿಕತೆಯನ್ನು ಬಿಂಬಿಸುತ್ತಿದೆ. ಆದರೂ ಸಂಸ್ಕೃತಿ ಚಿಂತನೆಯ ಸಿದ್ಧಾಂತಗಳ ಪ್ರೇರಣೆ, ಅಂತರ್‌ಶಿಸ್ತೀಯ ಅಧ್ಯಯನದ ಬಹುಮುಖತ್ವ, ವೇಗವಾಗಿ ಬದಲಾಗುತ್ತಿರುವ ಜಾಗತಿಕ ವಿದ್ಯಮಾನಗಳು, ರಾಷ್ಟ್ರದ ಸಾಮಾಜಿಕ ರಾಜಕಾರಣದ ಸಂದಿಗ್ಧಗಳು – ಈ ಹೊತ್ತು ಇವರು ಕೈಗೊಳ್ಳುತ್ತಿರುವ ಸಂಸ್ಕೃತಿ ಚಿಂತನೆಯನ್ನು ಜಟಿಲ ಗೊಳಿಸಿವೆ. ಇದರಿಂದಾಗಿ ಸಂಸ್ಕೃತಿ ಚಿಂತನೆಯ ಮಾದರಿಗಳು ನಿರಂತರವಾಗಿ ಬದಲಾವಣೆ ಯಾಗುತ್ತಿವೆ. ಆದರೆ ಈ ಅಂಶವನ್ನು ನೇತ್ಯಾತ್ಮಕವಾಗಿ ಪರಿಗಣಿಸುವ ಅಗತ್ಯವಿಲ್ಲ.

ಬಿ. ಯು. ಸುಮಾ, ೧೬೧೧, ೧೨ನೇ ಕ್ರಾಸ್, ವಿಲೇಜ್ ಈಸ್ಟ್ ರೋಡ್
ಕೆಂಗೇರಿ ಉಪನಗರ, ಬೆಂಗಳೂರು - ೫೬೦ ೦೬೦

## ಪ್ರಶ್ನಾವಳಿಗೆ ಪ್ರತಿಕ್ರಿಯೆ

ದು. ಸರಸ್ವತಿ

ಸಂಸ್ಕೃತಿ ಎಂದ ಕೂಡಲೇ ನಾನು ತಟ್ಟನೆ ಗುರುತಿಸಿಕೊಳ್ಳುವುದು ನನ್ನವ್ವ, ಅವಳ ಊರು, ಅಟ್ಟಿ, ಕಳ್ಳುಬಳ್ಳಿ ಮತ್ತು ನನ್ನಯ್ಯ, ಅವನ ಊರು, ಅಟ್ಟಿ, ಕಳ್ಳುಬಳ್ಳಿ. ಹಾಗಾಗಿ ನನ್ನವ್ವ, ಅಯ್ಯ ಮತ್ತು ನನ್ನ ಅನುಭವಕ್ಕೆ ಸೀಮಿತವಾಗಿ ಮಾತ್ರ ನನ್ನ ಅನಿಸಿಕೆ, ನಿಲುವುಗಳನ್ನು ಹೇಳಲಿಚ್ಛಿಸುತ್ತೇನೆ. ಕೇಳಿರುವ ಪ್ರಶ್ನೆಗಳ ವ್ಯಾಪ್ತಿ ತುಂಬಾ ದೊಡ್ಡದಾಗಿದ್ದು ಅದಕ್ಕೊಂದು ಅಧ್ಯಯನವೇ ಬೇಕು. ಅಧ್ಯಯನ ದೃಷ್ಟಿಯಿಂದ ನನಗೆ ಮಿತಿ ಇದೆ. ಹಾಗಾಗಿ ನನ್ನ ಅನುಭವಕ್ಕೆ ಸೀಮಿತವಾಗುವುದು ಅನಿವಾರ್ಯ.

ನನ್ನವ್ವ-ಅಯ್ಯನ ಸಂಸ್ಕೃತಿಯೊಳಗೆ ಬಿದಿರಿನ ತೊಟ್ಟಿಲಿನಿಂದಿಡಿದು ಚಟ್ಟದವರೆಗಿನ ಉಣ್ಣು, ಉಡು, ಲಗ್ಣ, ಸೋಬ್ಣ, ಹೆರಿಗೆ, ತೊಟ್ಲು, ಅರ್ಸೆವೆ, ಮನೊಕ್ಲು, ಅಬ್ಬಲಿರ್ದಿನ, ಪರ್ಸೆ, ಸಂತೆ, ಆಟ, ಕುಣ್ತಾ , ಪದ, ದ್ಯಾವ್ರು-ದಿಂಡ್ರು, ನೆಂಟ್ರು-ಇಷ್ಟ್ರು, ತತ್ವ.... ಎಲ್ಲವೂ ಇವೆ.

ಅವ್ವ ಬಯಲು ಸೀಮೆ ಕೆಂಪು ಮಣ್ಣಿನವಳು. ಆ ಮಣ್ಣಲ್ಲಿ ಬೆಳೆಯೋದು ರಾಗಿ, ಉಳ್ಳಿ, ಅವ್ರೆ, ಬೆರಕೆ ಸೊಪ್ಪು, ಕಾಯಿ. ಅಂಗಾಗಿ ಅಲ್ಲಿ ಉಣ್ಣೋದು ರಾಗಿರೊಟ್ಟಿ-ಕಾಯ್‌ಚಟ್ನಿ, ಇಟ್ಟು, ಬಸ್ಸಾರು, ಮಸ್ಸೊಪ್ಪು, ಮೆಣ್ಸ್‌ಬೆಳ್ಳುಳ್ಳಿ ಕಾರ, ಬೆಂಗ್ಳತ್ತಿದ್ ಕಾಳು. ವನ್ನಮ್ಮನ ಪರ್ಸೆ, ಉಗಾದಿ, ಕಾರಬ್ಬ ಅಟ್ಟಿಲಕ್ಕಮ್ಮನಬ್ಬ ಮಾರ್ನಾಮಿ... ದಿನಗಳಲ್ಲಿ ಪಾಯ್ಸ, ತಮ್ಟ, ಓಳ್ಗೆ, ಬಾಡ್ನೆಸ್ರು, ಉಳ್ಳಿಅಪ್ಪ, ಎಳ್ಳಿಕಾಯಿ ಉಪ್ಪನ್ನಾಯಿ, ಎಸ್ರುಬ್ಯಾಳೆ ಗಮಗಮಿಸ್ತವೆ.

ಅದ್ಯಾಕಮ್ಮಿ ಅದ್ಯಾಕಲ, ಅಯ್ಯ-ಅವ್ವ, ಅಮ್ಮ-ತಾತ, ದೋ, ಯಪ್ಪೊ, ಅಕೊ, ಅಣ್ಣೊ, ಚಿಗಪ್ಪ-ಚಿಗವ್ವ, ದೊಡ್ಡಪ್ಪ-ದೊಡ್ಡವ್ವ ಎಂದಾಡುವ ಜನರ ದೇವಾನುದೇವತೆಗಳೆಂದರೆ ವನ್ನಮ್ಮ, ಕಾಳ್ಗಟ್ಟಮ್ಮ, ಕರ್ಗಟ್ಟಮ್ಮ, ವೆಂಕಟೇಸ್ವರ, ಆಂಜ್ನೆಯಸಾಮಿ. ಅವರ ರಂಪ, ರಂಕ್ಲು, ರ್‍ವಾತೆ, ಕುಸಿ, ಸಂತೋಸ, ಲಗ್ಣ, ತೊಟ್ಲು, ಸಾವು-ನೋವು ಎಲ್ಲವನ್ನೂ ಆ ದೇವಾನುದೇವತೆಗಳ ಹೆಸರಿನಲ್ಲಿ ನೀಗಿಸಿಬಿಡುವವರು. ವನ್ನಮ್ಮನ ಗುಡಿಯೊಳಗೆ ಕಾಲಿಕ್ಕದವರಿಗೆ ದೇವಿ ಅಂದ್ರೆ ವನ್ನಮ್ಮ, ಪರ್ಸೆಂದ್ರೆ ವನ್ನಮ್ಮನ್ಪರ್ಸೆ ಜಗತ್ತಿನ ಅದ್ಭುತ.

ಅಯ್ಯ ಮಲೆನಾಡ ಸೆರಗಿನ ಎರೆಭೂಮಿಯವ. ಜೋಳ, ಭತ್ತ , ಸಜ್ಜೆ, ಮುಳ್ಗಾಯಿ, ಚೌವ್ಳಿಕಾಯಿ, ನೀರುಳ್ಳಿ ಬೆಳೆಯುವ ಕರಿಮಣ್ಣಿನವ. ರೊಟ್ಟಿ-ಪಲ್ಲೆ, ಕಾರ, ಕರಿಂಡಿ, ಮಾಲ್ದಿ, ಉಗ್ಗಿ, ಮಂಡಕ್ಕಿ, ಓಳ್ಗೆ-ಸೀಕರಣೆ ಬಾಡು ಗಮಗಮಿಸುವ ಸೀಮೆಯವ. ಲೇ ತಮ್ಮಾ ಲೇ ತಂಗಿ, ಅಪ್ಪ-ಅವ್ವ, ಸಣ್ಣಪ್ಪ-ಸಣ್ಣಮ್ಮ ದೊಡ್ಡಪ್ಪ-ದೊಡ್ಡಮ್ಮ ಅಣ್ಣ ಎಂದಾಡೊ ಜನರಿಗೆ ಕುಂದೂರಪ್ಪ, ಗೆಲ್ಲೆದುಗ್ಗಮ್ಮ, ಕರೂಮ್ಮ, ಚೌಡಮ್ಮ, ಭೂತಪ್ಪ, ಸಿದ್ದಪ್ಪಗಳೇ ದೇವಾನು ದೇವತೆಗಳು. ಕುಂದೂರಪ್ಪನ ಜಾತ್ರೆ, ಸಿದ್ದಪ್ಪ-ಭೂತಪ್ಪನ ಜಾತ್ರೆ, ಇರ್‍ಯರಬ್ಬ ಉಗಾದಿ, ಉಣ್‌ವಿ, ದೀವಳಿಗೆ ದಿನಗಳಂದು ಕುರೆ-ಕೋಳಿ ಮಾಂಸಕ್ಕಾಗಿಯೋ, ಸಿಪ್ಪಕ್ಕಾಗಿಯೋ ಮನೆ ಮುಂದಿನ ಕಲ್ಲುಚಪ್ಪಡಿ-ಬಂಡೆಗಳು ಅರೆದು ಸವೆಯುತ್ತವೆ.

ರೊಟ್ಟಿ ಸೀಮೆಯ ಅಯ್ಯನ ನಡಿಗೆ ಹೇಗೇಗೊ ಇಟ್ಟಿನ ಸೀಮೆಗೆ ಎಳೆದು ತಂದು ಮಣ್ಣಿನ ಹೆಣ್ಣಿನೊಂದಿಗೆ ಮದುವೆ ಕೂಡಿ ಬಂದಾಗ ''ಗಂಡ್ಯಾವ್ದೊ ದೂರ್ದ್ ಸೀಮೆದಂತೆ, ಆಡಮಾತೆ ತಿಳ್ಯಾಕಿಲ್ಲ'' ಅಂದಿದ್ದರಂತೆ ಅಟ್ಟಿಜನ. ಇಂತ ಅಯ್ಯ ಅಲ್ಲಿನ ಕೆಂಪು ಮಣ್ಣಿನಲ್ಲಿ ರಾಗಿ ಬೆಳೆಯುತ್ತ ಅಲ್ಲಿನ ಭೂಗೋಳವನ್ನೆ ಅಂಗೈ ಗೆರೆಯಷ್ಟು ಸ್ಪಷ್ಟವಾಗಿ ಕಂಡುಕೊಂಡ ತನ್ನ ದುಡಿಮೆ, ನಡತೆಯಿಂದ ಅಟ್ಟಿಗೇ ಬಂಧುವಾದ. ತನ್ನ ಸೀಮೆಯ ಭಾಷೆ, ಉಡುಗೆ, ರುಚಿ, ಸೊಗಡು ಏನನ್ನೂ ಬಿಡದೆ ಇಟ್ಟು-ಬಸ್ಸಾರಿನ ರುಚಿ ತನ್ನದಾಗಿಸಿಕೊಂಡ.

ಇಟ್ಟಿನ ಸೀಮೆಯ ಅವ್ವ ರೊಟ್ಟಿ-ಪಲ್ಲೆ, ಉಗ್ಗಿ ಕಲಿತು ಕುಂದೂರಪ್ಪನಿಗೆ ನಡೆದುಕೊಂಡು ಎರೆನೆಲದ ಬಂಧುಗಳನ್ನೆಲ್ಲ ತನ್ನ ಕಳ್ಳುಬಳ್ಳಿಗೆ ಪೋಣಿಸಿಕೊಂಡಳು. ತನ್ನ ಮಣ್ಣಿನ ಬೆರಗು, ಸತ್ವವನ್ನು ಬಿಡದೆ ಗಟ್ಟಿಮಾಡಿಕೊಂಡಳು.

ಈ ಇಟ್ಟು-ರೊಟ್ಟಿಯ ಸಂಸ್ಕೃತಿಗಳು ಮುಖಾಮುಖಿಯಾಗಿ ಒಂದರೊಳಗೊಂದು ಒಗ್ಗಿಕೊಂಡು, ಒಗ್ಗಿಸಿಕೊಳ್ಳುವ ಪ್ರಕ್ರಿಯೆಯಲ್ಲಿನ ಒತ್ತಡಗಳು ಸಿಡಿಯುವುದಕ್ಕಿಂತ ಬೆಸೆಯುವುದಕ್ಕೆ ಹೆಚ್ಚು ಕಾರಣವಾಗಿವೆ. ಶ್ರೇಷ್ಠ-ನಿಕೃಷ್ಟವೆಂಬ ಜಟಾಪಟಿಯನ್ನೆ ಅಯ್ಯ-ಅವ್ವ ಹುಟ್ಟುಹಾಕದಿದ್ದಕ್ಕೆ ಬೆಸುಗೆ ಸಾಧ್ಯವಾಗಿದೆ. ಈ ಬೆಸುಗೆಯಿಂದಾಗಿಯೇ ಇಟ್ಟು-ರೊಟ್ಟಿ ಎರಡೂ ನನಗೆ ಆಪ್ತ .

ರಾಗಿ, ತೆಂಗು ಬೆಳೆಯುತ್ತಲೆ ಅಯ್ಯ ಬಿ.ಎ ಪಾಸು ಮಾಡಿ ಅಧಿಕಾರಿಯಾದಾಗ ಅಯ್ಯ-ಅವ್ವ ಬಾಳ್ವೆ ಮಾಡುತ್ತ ಚಿತ್ರದುರ್ಗ, ಬಳ್ಳಾರಿ, ಬೀದರ್, ಚಿಕ್ಕಮಗಳೂರೆಂದು ಸುತ್ತುತ್ತ ನೆಲೆ ನಿಂತದ್ದು ಬೆಂಗಳೂರಿನಲ್ಲಿ. ಸುಮ್ಮನೆ ಸುತ್ತಿದ್ದಲ್ಲ. ಈಗಲೂ ಅಯ್ಯ ಯಾವುದೇ ಜಿಲ್ಲೆಯ ಹಳ್ಳಿಯ ಮೇಲೆ ಹಾದುಹೋಗಲಿ ಆ ಹಳ್ಳಿ ಯಾವ ತಾಲೂಕಿಗೆ ಸೇರಿದ್ದು, ಅಲ್ಲಿ ಜನ ಯಾವ್ಯಾವ ಸಮುದಾಯದವರು, ಅಲ್ಲಿನ ಸ್ಕೂಲು, ಕೆರೆ-ಕುಂಟೆ, ಬೆಳೆ ಎಲ್ಲ ಬಿಡಿಸಿಟ್ಟು ಬಿಡುತ್ತಾನೆ. 'ಶ್ರೇಷ್ಠ' ಎಂದುಕೊಂಡಿರುವವರು 'ನಿಕೃಷ್ಟ'ರೆಂದು ಕರೆಯುವ ಜನಸಮುದಾಯದಲ್ಲಿ ಹುಟ್ಟಿ ಗೌಡರ ಮನೆಯ ಸಗಣಿ ಬಾಚಿ, ಜೀತ ಮಾಡಿಕೊಂಡಿದ್ದ ಹುಡುಗ ಏನೆಲ್ಲ ಪಾಡುಪಟ್ಟು ಸರ್ಕಾರಿ ಅಧಿಕಾರಿಯಾಗಿ ಒಂದಿಂಚೂ ಭ್ರಷ್ಟನಾಗಲಿಲ್ಲ. ಎರೆನೆಲದ ಅಟ್ಟಿ ಹುಡುಗ ಬಿ.ಎ.ವರೆಗೆ ಓದುವಾಗ, ಅಧಿಕಾರಿಯಾದಾಗ ಎದುರಿಸಿದ ಅವಮಾನ, ಸವಾಲುಗಳು ದ್ವೇಷದ ಕೋಟೆಯಾಗದೆ ಬಂಧಿಸುವ ಸರಪಳಿಯಾಗದೆ, ಎಲ್ಲವನ್ನೂ ತಡವುತ್ತ ಹರಿಯುವ ನದಿಯಾಗಿದ್ದು ಹೇಗೆ? ತುಳಿಸಿಕೊಳ್ಳಬೇಕಾದ ಸಂಸ್ಕೃತಿಗೆ ಸೇರಿದವ, ತುಳಿಯುವ ಸಂಸ್ಕೃತಿಗೆ ಹೋದಾಗ ಭ್ರಷ್ಟನಾಗದೆ ಉಳಿದಿದ್ದರ ಹಿಂದೆ ಕೆಲಸ ಮಾಡಿದ ಎಚ್ಚರ ಯಾವುದು ?

ಬೆಂಗಳೂರೆಂಬೊ ನಗರದಲ್ಲಿ ಸಂಸಾರ ಹೂಡಿದ್ದು ಮಹಡಿಯ ಪುಟ್ಟ ಕಾಂಕ್ರೀಟ್ ಮನೆಯಲ್ಲಿ. ಜನರಿಗೆ ಇಕ್ಕಟ್ಟು ಆ ಇಕ್ಕಟ್ಟಿನಲ್ಲೂ ತುಳಸಿ, ಕರ್ಣಕುಂಡಲ, ಗುಲಾಬಿ, ಸಂಜೆಮಲ್ಗೆ ನಳನಳಿಸಿದ್ದು, ಶಿವನ ನೆತ್ತಿಯ ಮೇಲೆ ತಾವೆ ಬೆಳೆದ ಹೂ ಬೀಳಬೇಕೆಂಬ ಅವ್ವನ ಆಸೆಗೆ. ಊರೆಂಬ ಬೆಂಗಳೂರು ಮಹಾನಗರವಾಗುತ್ತಿದ್ದಾಗಲೂ ಅವ್ವ ಸಣ್ಣಗೆ, ಕುಳ್ಳಗೆ, ಸೊಟ್ಟಗೆ, ಪುಟ್ಟದಾಗಿರುವ ನಾಟಿ ತರಕಾರಿ-ಸೊಪ್ಪನ್ನೆ ಹುಡುಕುತ್ತಿತ್ತು. ತಮ್ಮದೆ ಮನೆ ಎಂದಾದಾಗ ಬೆಳೆದ ತರಾವರಿ ಮಲ್ಲಿಗೆ, ಸೋರೆ, ತುಪ್ಪೀರೆ, ಹಿತ್ಲವ್ರೆ, ತೆಂಗಿನ ಫಲಗಳೆಲ್ಲ ನಮ್ಮ ಮನೆಯಲ್ಲದೆ ಹಲವರ ಮನೆಗೆ ಹಂಚಿಕೆಯಾಗುತ್ತಿದ್ದುದು – 'ಮನೆ ಎಂಬುದರೊಳಗಿನ ಯಾವ ಫಲವೂ ಮಾರಾಟವಾಗಬಾರದೆಂಬ' ಅವ್ವನ ನಿಯಮದಿಂದಾಗಿ. ನಮ್ಮ ದುಡಿಮೆಯ ಫಲವಲ್ಲದ ಒಂದೇ ಒಂದು ಕಾಸಿನ ತೂಕದ್ದೂ ಮನೆಯ ಹೊಸಿಲಿನೊಳಗೆ ಕಾಲಿರಿಸದಿದ್ದಕ್ಕೆ ಕಾರಣ 'ಬಂಗಾರ ಸಿಕ್ರೆ ಬಂಗ ಬರುತ್ತೆ' 'ತುತ್ ಎಚ್ಗೆ ಉಂಡ್ರೆ ಇನ್ನೊಬ್ರನ್ ತುತ್ತ ಕಸ್ಕಂಡಂಗೆ' ಎಂಬ ಅವ್ವನ ತತ್ವ, ವಚನದಿಂದಾಗಿ.

ಕುಂದೂರಪ್ಪಗೆಲ್ಲೆ ದುಗ್ಗಮ್ಮನ ಕುಲದವನಿಗೆ ವನ್ನಮ್ಮ, ಯಂಕಟೇಸ್ವರರು ಅಪರಿಚಿತರಾಗಿ ಉಳಿಯಲಿಲ್ಲ. ವನ್ನಮ್ಮ, ಯಂಕಟೇಸ್ವರನ ಒಕ್ಕಲಿನವಳು ಸಿವನೆಂಬೋನ್ನ್ನ ಬೇವ ಮಾಡಿಕೊಂಡಾಗ ವನ್ನಮ್ಮನಾಗಲಿ ಗೆಲ್ಲೆದುಗ್ಗಮ್ಮನಾಗಲಿ ಕೆರಳಲಿಲ್ಲ. ಈ ಇಬ್ಬರೂ ಫ್ರಿಡ್ಜ್, ಟಿ.ವಿ., ಕಾರು, ಬಂಗ್ಲೆ, ವಡವೆಯ ಮಹಾನಗರದಲ್ಲಿ ತಮ್ಮದೆ ನೆಲೆ ಮಾಡಿಕೊಂಡು, ಘನತೆಯಿಂದ ಬಾಳ್ವೆಮಾಡಿದ್ದರ ಹಿಂದೆ ಇದ್ದ ಎಚ್ಚರ ಯಾವುದು ?

ಜೀವಪರವಾಗಿರುವ, ಸಹಬಾಳ್ವೆಯ ಮೌಲ್ಯಗಳು ಯಾವ ಸಂಸ್ಕೃತಿಯಿಂದಲೇ ಬಂದಿರಲಿ ಅವಕ್ಕೆ ಮುಕ್ತರಾಗಿರಬೇಕು. ಇದು ಹೇಳುವಷ್ಟು ಸರಳವಲ್ಲ. ಸಹಬಾಳ್ವೆಯ ಜರಡಿಯಲ್ಲಿ ಜೊಳ್ಳು, ಕಸ-ಕಡ್ಡಿ, ಕಲ್ಲು, ಎಂಟೆನೆಲ್ಲ ಆಡಿಸಿ ಉದುರಿಸಿಬೇಕಾಗುತ್ತದೆ. ಜರಡಿಯ ಕಣ್ಣುಗಳಲ್ಲಿ ಕಸ-ಕಡ್ಡಿ ಸಿಕ್ಕಿಕೊಳ್ಳಬಹುದು, ಜರಡಿಯೇ ತುಕ್ಕಿಡಿಯಬಹುದು. ಮುಕ್ಕಾಗಬಹುದು. ಜರಡಿಯನ್ನೆ ಆಗಾಗ್ಗೆ ಉಜ್ಜಿ ಕಿಟ್ಟ ತೆಗೆಯಬೇಕಾಗುತ್ತದೆ, ಸರಿಮಾಡಬೇಕಾಗುತ್ತದೆ, ಬದಲಾಯಿಸಬೇಕಾಗುತ್ತದೆ. ಜರಡಿಯ ಉದ್ದೇಶ ಮಾತ್ರ ಒಂದೆ, ಜಳ್ಳುಗಟ್ಟಿ ಇಂಗಡಿಸೋದು. ಎಚ್ಚರದ ಮೂಲ ಹುಡುಕುತ್ತ ಹೋದರೆ, ಗೋಚರವಾಗುವುದು ನೆಲದ ಮಣ್ಣು, ಗಾಳಿ, ನೀರು, ರುಚಿ, ಸೊಗಡು, ಸತ್ವ ಸೇರಿ ರೂಪುಗೊಂಡ ತತ್ವ. ಈ ತತ್ವಕ್ಕೂ ಮಹಾನಗರದ ಕಾಂಕ್ರೀಟಿಗೂ ಸಂಬಂಧವೇ ಇಲ್ಲವೆನಿಸಿದರೂ, ಕಾಂಕ್ರೀಟಿನಲ್ಲೂ ಹೃದಯ ಮನಸ್ಸು ಹೊತ್ತ ಮನುಷ್ಯರೇ



ಇರುವುದರಿಂದ ನಂಟಿನ ಕೊಂಡಿಗಳಿದ್ದೇ ಇರುತ್ತವೆ.

ವೈವಿಧ್ಯತೆಯೇ ಭೂಮಿಯ ವಿಶಿಷ್ಟತೆ. ವೈವಿಧ್ಯತೆಗಳ ನಡುವೆ ಶ್ರೇಷ್ಠ, ನಿಕೃಷ್ಟವೆಂಬ ತಾರತಮ್ಯವೇ ಮನುಷ್ಯ ಮನಸ್ಸಿನ ಹೊಲಸಿನ ಭಾಗ. ಅದನ್ನ ತೊಳೆಯುವುದೇ ದೊಡ್ಡ ಸವಾಲು. ಶ್ರೇಷ್ಠವೆಂಬುದು ಯಾವ ಸೋಗಿನ ಮೇಲೆ ನಿಂತಿದೆ ಅದನ್ನ ಅಲ್ಲಾಡಿಸಬೇಕು. ಈ ಕೆಲಸವನ್ನು ನಿಕೃಷ್ಟರೆನಿಸಿಕೊಂಡವರೇ ಮಾಡಬೇಕಿದೆ. ಅವರ ಬಳಿ 'high technology' ಇಲ್ಲ, ಬದುಕೆಂಬ ತತ್ವವಿದೆ. ಈ ತತ್ವವೂ hightechಗೆ ಚಿಪ್ಸ್‌ಗಳಾಗಿಬಿಡುವ ಅಪಾಯದ ಬಗ್ಗೆಯೂ ಎಚ್ಚರಿಕೆ ಇರಬೇಕು. ಜವಾಬ್ದಾರಿ ಎಚ್ಚರಿಕೆ ಎರಡನ್ನೂ ತೂಗಿಸಲು ಸಹಬಾಳ್ವೆಯ ಜರಡಿಗೆ ಮೊರೆಹೋಗದೆ ಬೇರೆ ದಾರಿಯೇ ಇಲ್ಲ. ಎಲ್ಲಕ್ಕಿಂತ ಮುಂಚೆ ನಿಕೃಷ್ಟರೆಂಬ ಹಣೆಪಟ್ಟಿ ಹಾಕಿ ಅದನ್ನೇ ಹಣೆಬರಹವೆಂದು ನಂಬಿಸಿರುವುದನ್ನು ಗುಡಿಸಿ ಗೊಬ್ಬರವಾಗಿಸಲು ಪರಕೆಯೇ ತತ್ವವಾಗಬೇಕು. ಈ ಪರಕೆ ಎಂಬುದನ್ನು ತತ್ವವಾಗಿ ಕಾಣಿಸಿದವರು ಪೌರಕಾರ್ಮಿಕರು. Civilized ಸಂಸ್ಕೃತಿಯಿಂದ ಬಳುವಳಿಯಾಗಿ ಪಡೆದಿದ್ದ ದುರಹಂಕಾರಗಳನ್ನು ಗುಡಿಸಿ ಹಾಕಲು ಸಹಾಯ ಮಾಡುತ್ತಿರುವುದು ಪರಕೆಯೇ.

ಪ್ರತಿಷ್ಠಿತ ಶಾಲೆ, ಕಾಲೇಜಿನ 'civilized' ಸಂಸ್ಕೃತಿಯಿಂದ ಪಡೆದುಕೊಂಡಿದ್ದ ಕೀಳರಿಮೆಯ ಬುಡ ಅಲ್ಲಾಡಿಸಲು ನೆರವಾಗಿದ್ದು ಅವ್ವನ ಕಳ್ಳುಬಳ್ಳಿಯ ಸಂಸ್ಕೃತಿ. ಇಂತಹ ಬೇರುಗಳಿದ್ದೂ 'civilized citizen' ಆಗಲು ಹೋಗಿದ್ದು civilized ಸಂಸ್ಕೃತಿಯ ಪ್ರಾಬಲ್ಯವನ್ನು ತೋರುತ್ತೆ. ಈ ಪ್ರಾಬಲ್ಯವನ್ನ ಮೀರಲು ಬೇರಿನ ಬಲವನ್ನು ನೆಚ್ಚದೆ ವಿಚಿತ್ರ ಕಸಿವಿಸಿ ಅನುಭವಿಸಿ ಕೀಳರಿಮೆಯ ಪಾತಾಳಕ್ಕೆ ಬೀಳುತ್ತಿರುತ್ತೇವೆ. ಇಲ್ಲ ಪ್ರಾಬಲ್ಯದ ಆಮಿಷಕ್ಕೆ, ನಶೆಗೆ ಒಳಗಾಗಿ ಮೇಲರಿಮೆಯಲ್ಲಿ ಉರಿಯುತ್ತೇವೆ. ಈ ಉರಿಗೆ ಬದಲಾವಣೆಗಾಗಿ ನಡೆಯುವ ಹೋರಾಟಗಳು ಹೊರತಲ್ಲ. ಎಚ್ಚರವಿಲ್ಲದಿದ್ದರೆ ನಾವು ಬಯಸುವ ಬದಲಾವಣೆ ನಮ್ಮ ಆತ್ಮಕ್ಕೆ ಇಳಿಯುವುದೇ ಇಲ್ಲ. ಆಡುವ ಮಾತುಗಳು ನಾಲಿಗೆಯಲ್ಲಷ್ಟೇ ಉಳಿದು ವಾದಗಳಾಗಿ, ನಮ್ಮ ನಂಬಿಕೆಗಳು ಬದುಕಿನ ರೀತಿಯಾಗದೆ ಅಧಿಕಾರದ ಗೂಟವಾಗಿಬಿಡುವ ಅಪಾಯವಿದೆ.

ಪೌರ ಕಾರ್ಮಿಕರನ್ನು civilized ಕಣ್ಣಿನಿಂದ ನೋಡಿದರೆ ನಮಗವರು ಕಾಣಿಸುವುದು ಕುಡುಕರು, ಕೊಳಕರು, ದರಿದ್ರರು, ಕಳ್ಳರು, illiterates, deprived, low thinking level ಜನರಾಗಿ. ಹಾಗೆ ಯೋಚಿಸಿದ ಕೂಡಲೇ ನಾಗರಿಕ ಪ್ರಜ್ಞೆ ಜಾಗೃತವಾಗಿ ಉದ್ಧರಿಸಲು ಸಿದ್ಧರಾಗುತ್ತೇವೆ. ಅವರ ಹಸಿವು ಪೌಷ್ಟಿಕಾಂಶದ ಕೊರತೆಯಾಗಿ ಬಿಡುತ್ತದೆ. ಕಳ್ಳುಬಳ್ಳಿಯ ಕಣ್ಣಿನಿಂದ ನೋಡಿದಾಗ ಮಾತ್ರ ಅವರ ಬಲ ಏನೆಂಬುದು, ಅನ್ಯಾಯವಾಗಿರುವುದು ಯಾರಿಂದ ಎಂಬುದು ಗೋಚರಿಸುವುದು. ಆ ಬಲವೇ ಹೋರಾಟದ ಆಧಾರ. Civilized ಸರ್ಕಾರ ತನ್ನದೇ civilized ಕೋರ್ಟುಗಳು ನ್ಯಾಯಕ್ಕೆ ಬದ್ಧವಾಗಿ ಹೇಳುವ, ದುಡಿಮೆಗೆ ತಕ್ಕ ಸಂಬಳ, ಸಮಾನ ಸಂಬಳ, ಕನಿಷ್ಟ ಸಂಬಳ ಮತ್ತು civilized ಜನರು ಮನುಷ್ಯರೆಂದು ಪಡೆದುಕೊಳ್ಳುವ ಸವಲತ್ತುಗಳನ್ನ.

ಚಿಂತಕರ ಸಿದ್ಧಾಂತ, ಜನಸಮುದಾಯಗಳ ಜೀವನ ವಿಧಾನ, ತಾತ್ವಿಕತೆ ವಿಶ್ಲೇಷಣೆಯ ವಿಧಾನಗಳ ಕುರಿತು ಯೋಚಿಸುವಾಗ ನನಗೆ ನೆನಪಾಗುವುದು, ಒಪ್ಪಲೇಬೇಕೆನಿಸುವುದು, ಪಾಲಿಸಬೇಕೆನ್ನಿಸುವುದು ಈ ಮಾತುಗಳನ್ನ ''ಊವ ಚೆನ್ನಗೈತೆ ಮಣ್ ಗಲೀಜಂತಿಯ ಮಣ್ಣೊಳ್ಗೆ ಅಲ್ವ ಬೀಜ ಮೊಳ್ತು ಗಿಡಾಗಿ ಊವ ಬಿಡದು'' ಎಂಬ ಅವ್ವನ ಮಾತು. ''ಪ್ರತಿಯೊಂದು ಆತ್ಮಕ್ಕೂ ಜ್ಞಾನೋದಯ ಹೊಂದುವ ಶಕ್ತಿ ಇದೆ'' ಎಂಬ ಬುದ್ಧನ ಮಾತು, ''ಆತ್ಮ ಯಾವ ಕುಲ ಜೀವ ಯಾವ ಕುಲ'' ಎಂದ ಕನಕನ ಮಾತು, ''ಒಳಗೆ ಸುಳಿವ ಆತ್ಮ ಗಂಡೋ ಹೆಣ್ಣೋ ?'' ಎಂದ ದಾಸಿಮಯ್ಯನ ಮಾತು, "In workers, paradise a worker will work in the morning, do some fishing in the afternoon, read some Plato in the evening" ಎಂಬ ಮಾರ್ಕ್ಸ್‌ನ ಮಾತು, "Don't follow me, I am not going to lead you, don't lead me, I am not going to follow you, come with me, let's walk together" ಎಂಬ ಸಾರ್ತ್ರೆಯ ಮಾತುಗಳು....

ಸಹಬಾಳ್ವೆಯ ಮೌಲ್ಯಗಳು ಭೂಮಿಯ ಯಾವ ಮೂಲದಿಂದಲೇ ಬರಲಿ ಒಗ್ಗಿಸಿ ಕೊಳ್ಳಬೇಕು. ಮೇಲು ಕೀಳೆಂಬುದು ನಮ್ಮ ಮೂಲದಿಂದಲೇ ಬಂದಿರಲಿ ಬಗ್ಗಿಸಬೇಕು.

ದು. ಸರಸ್ವತಿ, ೧೧೯, ಪಶ್ಚಿಮ ಕಾರ್ಡ್ ರಸ್ತೆ, ೨ನೇ ಹಂತ, ಮಹಾಲಕ್ಷ್ಮಿಪುರ, ಬೆಂಗಳೂರು - ೫೬೦೦೮೬

## ಕರ್ನಾಟಕದ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ

ಡಾ|| ರಾಜಾರಾಮ ಹೆಗಡೆ

೧. ಒತ್ತಡಗಳು ಯಾವ ಬಗೆಯವು ಎಂಬುದನ್ನು ಸಂಕ್ಷಿಪ್ತವಾಗಿ ಹೇಳಲು ಸಾಧ್ಯವಿಲ್ಲ. ಇಂಥ ಒತ್ತಡಗಳು ಎಂದು ಯಾವುದನ್ನು ಗುರುತಿಸುತ್ತೇವೆಯೋ ಅವು ಒಂದಲ್ಲಾ ಒಂದು ನಿರೂಪಣೆಗಳಾಗಿರಲು ಮಾತ್ರ ಸಾಧ್ಯ. ಹಾಗಾಗಿ ಒತ್ತಡಗಳು ಯಾವುವು ಎಂಬುದನ್ನು ಚಿಂತನಾಪ್ರಕಾರಗಳೇ ನಿರ್ಧರಿಸುತ್ತವೆ.

ಈ ಕುರಿತು ಸಂಸ್ಕೃತಿ ಚಿಂತಕರು ಕ್ರಿಯಾಶೀಲ ನಿಲುವು ತಳೆಯಬೇಕು ಎಂದು ಹೇಳುವಾಗ ಯಾವ ರೀತಿಯ ಚಿಂತನಾ ಸಂಪ್ರದಾಯದ ಕುರಿತು ಅವರು ಕ್ರಿಯಾಶೀಲ ನಿಲುವು ತಳೆಯಬೇಕು ಎಂಬ ಪ್ರಶ್ನೆ ಹುಟ್ಟುತ್ತದೆ. ಹಾಗಾಗಿ ಈ ಎರಡೂ ಪ್ರಶ್ನೆಗಳನ್ನು ವಸ್ತುನಿಷ್ಠ ನೆಲೆಯಲ್ಲಿ ಉತ್ತರಿಸಲು ಸಾಧ್ಯವಿಲ್ಲ. ಕೆಲವು ಪ್ರಕಾರದ ಸಂಸ್ಕೃತಿ ಚಿಂತನೆಗಳು ಕ್ರಿಯಾಶೀಲವಾದಷ್ಟೂ ಒತ್ತಡಗಳು ಜಾಸ್ತಿಯಾಗಬಹುದು.

೨. ಸಾಹಿತ್ಯ ಕೃತಿಗಳ ರೂಪನಿಷ್ಠ ವಿಮರ್ಶೆಯನ್ನು ಸಾಹಿತ್ಯ ವಿಮರ್ಶೆ ಎಂದೂ, ಈ ಕೃತಿಗಳ ಸಾಂಸ್ಕೃತಿಕ ಆಯಾಮವನ್ನು ಕುರಿತು ಚರ್ಚಿಸುವ ವಿಮರ್ಶೆಯನ್ನು ಸಂಸ್ಕೃತಿ ವಿಮರ್ಶೆ ಎಂದೂ ಇಲ್ಲಿ ಭಾವಿಸಿಕೊಳ್ಳಲಾಗಿದೆ ಎಂದುಕೊಂಡಿದ್ದೇನೆ. ಹಾಗಿದ್ದಲ್ಲಿ ಇನ್ನೂ ಕೆಲ ವಿಷಯಗಳ ಕುರಿತು ಗಮನ ಸೆಳೆಯಬಯಸುತ್ತೇನೆ. ಈ ಮೇಲಿನ ಅರ್ಥದ ಸಾಹಿತ್ಯ ವಿಮರ್ಶೆ ನವ್ಯದ ಜೊತೆ ಕಾಣಿಸಿಕೊಂಡು ಅದರ ಜೊತೆಯೇ ಹೋಯಿತೆನಿಸುತ್ತದೆ. ಒಂದು ದಶಕದಿಂದೀಚೆಗೆ ಸಂಸ್ಕೃತಿ ಲೇಖನ ಹಾಗೂ ಸಂಸ್ಕೃತಿ ವಿಮರ್ಶೆ ಎರಡೂ ಪ್ರಬಲ ವಾಗುತ್ತಿವೆ. ಅದಕ್ಕೆ ಒಂದು ಕಾರಣ ಎಂದರೆ ಹೊಸ ಸಾಹಿತ್ಯ ಚಳವಳಿಗಳು : ದಲಿತ-ಬಂಡಾಯ ಇತ್ಯಾದಿಗಳು ಸಾಹಿತ್ಯ ವಿಮರ್ಶೆಯ ರೂಪನಿಷ್ಠತೆ ತಮಗೆ ಪ್ರಸ್ತುತವಲ್ಲ ಅಥವಾ ಅರ್ಥಹೀನ ಎಂದು ಅರಿತುಕೊಂಡಿದ್ದು. ಮತ್ತೊಂದು ಕಾರಣ ಎಂದರೆ ಅದೇ ವೇಳೆಗೆ ಕನ್ನಡ ವಿಮರ್ಶಾಲೋಕಕ್ಕೆ ಪ್ರೇರಣೆಯಾಗಿದ್ದ ಐರೋಪ್ಯ ಚಿಂತನೆಗಳಲ್ಲಿ ಆದ ಬದಲಾವಣೆ ಗಳು. ಕನ್ನಡ ಸಾಹಿತ್ಯ ಹೊಸ ರೀತಿಯ ವಿಮರ್ಶೆಯನ್ನು ಈ ರೀತಿ ಬೆಳೆಸಿಕೊಳ್ಳುವಾಗ ಎಡಪಂಥೀಯ ಸಂಸ್ಕೃತಿ ಸಿದ್ಧಾಂತಗಳು ಒಂದೆಡೆಯಾದರೆ, ವಸಾಹತೋತ್ತರ ಸಂಸ್ಕೃತಿ ಸಿದ್ಧಾಂತಗಳು ಮತ್ತೊಂದೆಡೆ ಪ್ರಸ್ತುತತೆ ಪಡೆದವು. ಇದು ಪಾಶ್ಚಾತ್ಯ ಆಧುನಿಕ-ಆಧುನಿ ಕೋತ್ತರ ಎಂಬ ಮುಖಾಮುಖಿಯನ್ನು ಕೂಡ ಕನ್ನಡ ಸಂಸ್ಕೃತಿ ವಿಮರ್ಶೆಯಲ್ಲಿ ಸೃಷ್ಟಿಸುತ್ತಿದೆ.

ಇವುಗಳಲ್ಲಿ ಯಾವುದೇ ಒಂದು ಸರಿ, ಅದನ್ನು ಆಯ್ದುಕೊಳ್ಳಬೇಕು ಎನ್ನುವ ಭಾವವೇ ತಮಾಷೆಯಾಗಿದೆ. ಏಕೆಂದರೆ, ಯುರೋಪಿನಲ್ಲಿ ಕೂಡ ಅವು ಏಕರೂಪಿಯಾಗಿಲ್ಲ. ಹಾಗೂ ಈ ಕುರಿತು ಕನ್ನಡದ ಸಂದರ್ಭದಲ್ಲಿ ಮಾತನಾಡುವವರು ಈ ಸಿದ್ಧಾಂತಗಳ ಮೂಲಗಳ ಕುರಿತು ತಲೆಕೆಡಿಸಿಕೊಂಡಿಲ್ಲ. ಹಾಗಿರುವಾಗ ಇಂಥ ಚರ್ಚೆಗಳನ್ನು ಬಿಟ್ಟು ಮಾನವೀಯ ವಾಸ್ತವದ ಕುರಿತ ಸಂಸ್ಕೃತಿ ವಿಮರ್ಶೆಯನ್ನು ನಮ್ಮದೇ ಆದ ರೀತಿ ಬೆಳೆಸಿಕೊಳ್ಳಲು ಸಾಧ್ಯವಿಲ್ಲವೇ ? ಎಂದು ನನಗೆ ಅನಿಸುತ್ತದೆ.

೩. ಸಂಸ್ಕೃತಿ ಸಿದ್ಧಾಂತಗಳು ಕೇವಲ ಪರಿಸರದಿಂದಲೇ ರೂಪಿತವಾಗುವುದಿಲ್ಲ. ಅವುಗಳಿಗೆ ಅಂಥದೊಂದು ಸಂಪ್ರದಾಯವೂ ಬೆಳೆದುಬಂದಿರಬೇಕು. ಇಂದು ಇರುವ 'ಸಂಸ್ಕೃತಿ' ಪರಿಕಲ್ಪನೆ ಹಾಗೂ ಆ ಕುರಿತು ಸಮಾಜಶಾಸ್ತ್ರೀಯ ಸಿದ್ಧಾಂತಗಳೆಲ್ಲವೂ ಐರೋಪ್ಯ ಮೂಲದವು. ನಾವು ನಮ್ಮ ಸಂದರ್ಭದಲ್ಲಿ ಅವುಗಳನ್ನು ಬಳಸಿಕೊಳ್ಳುತ್ತಿದ್ದೇವೆ. ಹಾಗಾಗಿ ಭಾರತೀಯ ಸಂದರ್ಭದಲ್ಲಿ ಮುಖಾಮುಖಿಯಾಗುವ, ಸಂಘರ್ಷಿಸುವ ಸಿದ್ಧಾಂತಗಳೆಲ್ಲ ಭಾರತದ ವಿಭಿನ್ನ ಪರಿಸರದಲ್ಲಿ ಹುಟ್ಟಿಕೊಂಡ ಕಾರಣದಿಂದಾಗಲೀ, ಜಗತ್ತಿನ ವಿಭಿನ್ನ ಪರಿಸರಗಳಲ್ಲಿ ಹುಟ್ಟಿಕೊಂಡ ಕಾರಣದಿಂದಾಗಲೀ ತಮ್ಮ ಗುಣಗಳನ್ನು ಪಡೆದುಕೊಂಡದ್ದಲ್ಲ. ಈ ಮುಖಾಮುಖಿಗಳು ಐರೋಪ್ಯ ಸಿದ್ಧಾಂತಗಳ ನಡುವಿನ ಮುಖಾಮುಖಿಗಳೋ, ಭಿನ್ನಾಭಿಪ್ರಾಯಗಳೋ ಆಗಿವೆ. ಹಾಗೂ ಐರೋಪ್ಯ ಸಮಾಜವಿಜ್ಞಾನಕ್ಕೆ ಸಾಂಸ್ಕೃತಿಕ ವಾಸ್ತವಗಳ ಕುರಿತು ಇರುವ ಭಿನ್ನಾಭಿಪ್ರಾಯಗಳಾಗಿವೆ. ಈ ಭಿನ್ನಾಭಿಪ್ರಾಯಗಳಲ್ಲಿ ಒಂದೊಂದನ್ನು ಹಿಡಿದು ನಾವು ಭಾರತೀಯ ಸಂಸ್ಕೃತಿಯನ್ನು ಅರ್ಥೈಸಲು ಪ್ರಯತ್ನಿಸಿದಾಗ ಅದು ಇಲ್ಲೂ ಕಾಣಿಸಿಕೊಂಡಿದೆ. ಈ ಕುರಿತು ನಾವು ಎಚ್ಚರಗೊಂಡರೆ ಒಳ್ಳೆಯದು.

೪. ಸಂಸ್ಕೃತಿ ವಿಶ್ಲೇಷಣೆಯಲ್ಲಿ ಇಂಥ ಬೈನರಿಗಳನ್ನು ಯಾವುದೇ ಅರ್ಥಸ್ಪಷ್ಟತೆ ಇಲ್ಲದೇ ಅನಂತವಾಗಿ ಸೃಷ್ಟಿಸುತ್ತ ಸಾಗಬಹುದು. ಇವುಗಳನ್ನು ಮಂಡಿಸಿದ ಕೆಲಕಾಲ ಅದೇ ಸತ್ಯ ಎನ್ನಿಸುತ್ತ , ಕ್ರಮೇಣ ಅವುಗಳ ಸಮಸ್ಯೆ ಬಯಲಾಗುತ್ತ , ತದನಂತರ ಅವು

ಮೂಲೆಗೆ ಬೀಳುತ್ತ ಸಾಗುವುದು ನಮ್ಮ ಸಂಸ್ಕೃತಿ ಚಿಂತನೆಯಲ್ಲಿ ನಡೆದೇ ಇದೆ. ಒಂದು ರೀತಿಯ ಚಿಂತನಾ ಸಂಪ್ರದಾಯಕ್ಕೆ ಮತ್ತೊಂದರ ಬೈನರಿಗಳು ಅರ್ಥಹೀನ ಎನ್ನಿಸಬಹುದು. ಒಂದು ಕಾಲದ ಚಿಂತನಾ ಸಂಪ್ರದಾಯಕ್ಕೆ ಹಿಂದಿನ ಕಾಲದ ಬೈನರಿಗಳು ಅರ್ಥಹೀನ ಎನ್ನಿಸಬಹುದು. ಹೀಗೆ ಈ ಬೈನರಿಗಳು ಸಂಸ್ಕೃತಿಯ ಗತಿಶೀಲತೆಯ ಎದುರು ಅರ್ಥ ಕಳೆದುಕೊಳ್ಳುತ್ತವೆ ಎಂದೇ ವಿವರಿಸಬೇಕಾಗಿಲ್ಲ. ಈ ಬೈನರಿಗಳಿಗೂ ಅವು ಸೂಚಿಸುವ ಸಾಂಸ್ಕೃತಿಕ ವಾಸ್ತವಕ್ಕೂ ಯಾವತ್ತಾದರೂ ಸಂಬಂಧ ಇತ್ತೆ ? ಎಂಬ ಪ್ರಶ್ನೆಯೂ ಅತ್ಯಗತ್ಯ. ಉದಾಹರಣೆಗೆ ಶಿಷ್ಟ-ಜಾನಪದ, ಪೂರ್ವ-ಪಶ್ಚಿಮ ಮುಂತಾದ ಪ್ರಕಾರಗಳನ್ನು ಪ್ರಯೋಗಿಸಲು ಪ್ರಾರಂಭ ಮಾಡಿದಾರಭ್ಯದಿಂದಲೂ ಅವು ಪ್ರಶ್ನಾರ್ಥಕವಾಗಿಯೇ ಇದ್ದವು ಎಂಬುದನ್ನೂ ನಾವು ನೋಡುತ್ತೇವೆ.

ಬೈನರಿಗಳನ್ನು ಉಪಯೋಗಿಸುವುದರಲ್ಲಿ ಯಾವ ಪಾಪವೂ ಇಲ್ಲ. ಎಲ್ಲ ಚಿಂತನಾ ಸಂಪ್ರದಾಯಗಳೂ ಒಂದಲ್ಲ ಒಂದು ರೀತಿಯಲ್ಲಿ ತಮಗೆ ಸತ್ಯ ಹಾಗೆ ತೋರಿದಾಗ ಅವುಗಳನ್ನು ಬಳಸಿವೆ. ಆದರೆ ಇಂದು ನಾವು ಅವುಗಳನ್ನು ಬಳಸುವ ರೀತಿ ಬೇರೆಯಾಗಿದೆ. (೧) ಮನುಷ್ಯ ವಾಸ್ತವ ಎರಡಾಗಿ ಒಡೆದು ಕೊಂಡಿರುವಂತೇ ಈ ಬೈನರಿಗಳು ಬಿಂಬಿಸುತ್ತವೆ. ಹಾಗಾಗಿ ಒಂದರಲ್ಲಿ ಮತ್ತೊಂದರ ಅಭಾವ ಅಥವಾ ಅಪ್ರಸ್ತುತತೆಯನ್ನು ನಾವು ಭಾವಿಸಿಕೊಂಡೇ ಈ ಬೈನರಿಗಳು ಹುಟ್ಟುತ್ತವೆ. (೨) ಈ ರೀತಿ ಒಡೆದುಕೊಂಡ ವಾಸ್ತವವು ತನ್ನ ಎರಡು ಹೋಳುಗಳ ಮಧ್ಯೆ ಸಂಘರ್ಷಾತ್ಮಕವಾದ, ಶೋಷಣಾತ್ಮಕವಾದ ಸಂಬಂಧವನ್ನು ಹೊಂದಿರುತ್ತವೆ ಎಂದು ಭಾವಿಸುತ್ತೇವೆ ಹಾಗೂ ಅದು ಏಕಮುಖಿಯಾಗಿದ್ದು ಯಾವುದೋ ಒಂದು ಕೇವಲ ಶೋಷಣೆಯನ್ನು ಮಾಡುತ್ತಿದ್ದು ಮತ್ತೊಂದು ಕೇವಲ ಶೋಷಣೆಗೆ ಒಳಗಾಗುತ್ತಿರುತ್ತದೆ ಎಂದು ಭಾವಿಸುತ್ತೇವೆ. (೩) ಪಾಶ್ಚಾತ್ಯ ಸಂಸ್ಕೃತಿ ವಿಶ್ಲೇಷಣೆಯಲ್ಲಿ ಐರೋಪ್ಯ ಸಮಾಜಶಾಸ್ತ್ರಗಳು ಭಾವಿಸಿಕೊಂಡ ಈ ಬೈನರಿಗಳನ್ನು ನಮ್ಮ ಸಂಸ್ಕೃತಿಯ ವಾಸ್ತವವೋ ಎಂಬಂತೇ ಭಾವಿಸಿಕೊಳ್ಳುತ್ತಿದ್ದೇವೆ. ಇದರ ಪರಿಣಾಮ ಎಂದರೆ ವಾಸ್ತವಿಕತೆ ಮತ್ತು ಗ್ರಹಿಕೆಗಳ ನಡುವೆ ಸಂಭಾಷಣೆಯೇ ಅಸಾಧ್ಯವಾಗಿದೆ.

ಹಾಗಾಗಿ ಈ ಬೈನರಿಗಳ ಸಮಸ್ಯೆ ನಮ್ಮ ಸಾಂಸ್ಕೃತಿಕ ಗತಿಶೀಲತೆಯ ಸಮಸ್ಯೆಯಾಗಿರದೇ ನಮ್ಮ ಚಿಂತನೆಗಳದೇ ಸಮಸ್ಯೆಯಾಗಿದೆ.

೫. ಅಂತರವಿದೆ ಎಂಬುದು ಸ್ಪಷ್ಟ. ಆದರೆ ಯಾವ ಯಾವ ಅಂಶದಲ್ಲಿ ಹಾಗೂ ಯಾವ ಯಾವ ಸಿದ್ಧಾಂತಗಳಲ್ಲಿ ಅಂತರವನ್ನು ಎಷ್ಟೆಷ್ಟು ಕಾಣುತ್ತೇವೆ ಎಂಬುದು ಮುಖ್ಯ. ವಾಸ್ತವ ಜೀವನವಿಧಾನಗಳ ವಿವರಗಳನ್ನು ವೀಕ್ಷಿಸುವಲ್ಲಿ ಅಥವಾ ದಾಖಲಿಸುವಲ್ಲಿ ನಮ್ಮ ಸಮಾಜ ವಿಜ್ಞಾನಗಳ ಸಂಶೋಧನೆಗಳು ವಿಫಲವಾಗಿವೆ ಎಂದು ನನಗನಿಸುವುದಿಲ್ಲ. ಆದರೆ ಅದನ್ನು ಅರ್ಥೈಸುವಲ್ಲಿ ಅವುಗಳಿಗೆ ತೊಡಕಿದೆ. ಕೆಲ ನಿರ್ದಿಷ್ಟ ಪರಿಕಲ್ಪನೆಗಳನ್ನು ಭಾವಿಸಿಕೊಂಡು ವಾಸ್ತವಿಕ ವಿವರಗಳನ್ನು ಅವುಗಳ ದೃಷ್ಟಾಂತಗಳನ್ನಾಗಿ ಮಾಡುವಾಗ ಸಂಸ್ಕೃತಿ ಚಿಂತನೆಗೂ ವಾಸ್ತವಕ್ಕೂ ಅಂತರ ಹುಟ್ಟಿಕೊಳ್ಳುತ್ತದೆ. ನಾನು ಮನುಷ್ಯರ ಜ್ಞಾನದ ಸಮಸ್ಯೆಗಳನ್ನು ಇಲ್ಲಿ ಎತ್ತುತ್ತಿಲ್ಲ. ವಿಧಾನದ ಸಮಸ್ಯೆಯನ್ನು ಮಾತ್ರ ಸೂಚಿಸುತ್ತಿದ್ದೇನೆ. ಜನಸಮುದಾಯದ ವಾಸ್ತವದ ಜೀವನ ವಿಧಾನ ನಮ್ಮ ಪರಿಕಲ್ಪನೆಗಳನ್ನು ಸಮರ್ಥಿಸುವ ಹಾಗೂ ಅಲ್ಲಗಳೆಯುವ, ಅಥವಾ ಇನ್ನೂ ಬಹು ರೀತಿಯಲ್ಲಿ ಅದರ ಜೊತೆ ಸಂಬಂಧಿಸಬಲ್ಲ ಅನಂತ ವಿವರಗಳನ್ನು ಒಳಗೊಂಡಿರುತ್ತದೆ. ನಮ್ಮ ಸೈದ್ಧಾಂತಿಕ ನಿಲುವು ಈ ವಾಸ್ತವದಲ್ಲಿ ತನ್ನ ಪ್ರತಿಬಿಂಬವನ್ನು ಕಾಣತೊಡಗುತ್ತದೆ. ವಾಸ್ತವ ಹಾಗಿರಲಿಕ್ಕೆ ಸಾಧ್ಯವಿಲ್ಲ. ಸೈದ್ಧಾಂತಿಕ ಚಿಂತನೆಯ ಈ ಮಿತಿಯಿಂದಾಗಿ ನಾವು ವಾಸ್ತವದ ವಿವರಗಳನ್ನು ಆಯ್ಕೆ ಮಾಡಿ ವೀಕ್ಷಿಸುತ್ತಲೋ, ದಾಖಲಿಸುತ್ತಲೋ ಇರುತ್ತೇವೆ. ಹಾಗಂತ ಸಿದ್ಧಾಂತಗಳನ್ನು ಹೊಂದುವುದೇ ತಪ್ಪು ಎಂದು ನನ್ನ ವಾದವಲ್ಲ. ಸಿದ್ಧಾಂತಗಳನ್ನು ಹೊಂದುವುದು ಸಂಸ್ಕೃತಿಯನ್ನು ಅರ್ಥೈಸುವ ಪ್ರಯತ್ನದ ಒಂದು ಭಾಗ. ಆದರೆ ತನಗೆ ವ್ಯತಿರಿಕ್ತವಾದ, ವಿರುದ್ಧವಾದ ಸತ್ಯಗಳನ್ನು ಒಂದು ಸಿದ್ಧಾಂತ ಹೇಗೆ ಸಂಬೋಧಿಸುತ್ತದೆ ಹಾಗೂ ತನ್ನ ದೋಷಗಳನ್ನು ತಿದ್ದಿಕೊಳ್ಳುತ್ತದೆ ಎಂಬುದರ ಮೇಲೆ ಆಯಾ ಸಿದ್ಧಾಂತದ ಮತ್ತು ಸಾಮಾಜಿಕ ವಾಸ್ತವದ ಸಂಬಂಧ ನಿಂತಿರುತ್ತದೆ.

ಇಂದು ಸಂಸ್ಕೃತಿ ಚಿಂತನೆಯ ಸಿದ್ಧಾಂತಗಳಿಗೂ ಜನಸಮುದಾಯದ ವಾಸ್ತವ ಜೀವನವಿಧಾನಗಳಿಗೂ ಇರುವ ಅಂತರ ಸೆಕ್ಯುಲರಿಸಂ – ಕಮ್ಯುನಲಿಸಂ ಬಿಕ್ಕಟ್ಟಿನಲ್ಲಿ ಕೂಡ ಪ್ರಕಟವಾಗುತ್ತಿದೆ. ಅದೊಂದು ಕೇವಲ ರಾಜಕೀಯ, ಆ ಕುರಿತ ನಮ್ಮ ಸಂಸ್ಕೃತಿ ಚಿಂತನೆಯಲ್ಲಿ ಏನೂ ಬದಲಾವಣೆ ಆಗಬೇಕಾದದ್ದಿಲ್ಲ ಎಂದು ನಾವು ಧೋರಣೆಯನ್ನು ಬೆಳೆಸಿಕೊಂಡಷ್ಟು ಅದು ಕಗ್ಗಂಟಾಗುತ್ತದೆ ಹಾಗೂ ಈ ವಾಸ್ತವಿಕ ಸಮಾಜಕ್ಕೂ ನಮಗೂ ಅಂತರ ಜಾಸ್ತಿಯಾಗುತ್ತದೆ. ಇದೊಂದು ದೃಷ್ಟಾಂತ ಅಷ್ಟೆ.

**ಡಾ|| ರಾಜಾರಾಮ ಹೆಗಡೆ,** ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ವಿಭಾಗ
ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ - ೫೭೭ ४೫೧

## ಜನಸಮುದಾಯದ ಸಂಸ್ಕೃತಿಯತ್ತ

ಎಸ್. ಎಸ್. ಹಿರೇಮಠ

೧. ನಮ್ಮದು ಬಹುಮುಖಿ ಸಂಸ್ಕೃತಿಗಳ ವಿಚಿತ್ರ ಸಂಗಮ. 'ಸಂಸ್ಕೃತಿ' ಆಯಾ ಸಮಾಜದ ಆರ್ಥಿಕ ಸಂಬಂಧಗಳೆಂಬ ಅಡಿಪಾಯದ ಮೇಲೆ ಮೇಲ್ ರಚನೆಯ ಮೊತ್ತವಾಗಿ ರೂಪುಗೊಳ್ಳುತ್ತದೆ. ಗ್ರಾಮೀಣ ಭಾರತದಲ್ಲಿ ಹಳೆಯ ಕಾಲದ ಪಳೆಯುಳಿಕೆಯಂತಿರುವ ಆರ್ಥಿಕ ಸಂಬಂಧಗಳಲ್ಲಿ ಜಾತಿ ಎಂಬ ಸಾಮಾಜಿಕ ಘಟಕವೂ ಸಂಯೋಜನೆಗೊಂಡಿದೆ. ಜಾತಿಯ ನಗರೀಯ ರೂಪಾಕೃತಿ ಬೂರ್ಷ್ವಾ ರಾಜಕೀಯ ಪ್ರಕ್ರಿಯೆಗಳ ಜತೆ ಅಂಟಿಕೊಂಡಿದೆ.

ಈ ಸಂಕೀರ್ಣ ಮೂಲ ನೆಲೆಯನ್ನು ಆಧರಿಸಿರುವುದರಿಂದ ಸಂಸ್ಕೃತಿಗಳ ರೂಪಾಕೃತಿಗಳು ಅವುಗಳ ನಡುವಿನ ಕೊಳುಕೊಡೆ ಸ್ಥಿತ್ಯಂತರಗಳ ಪ್ರಶ್ನೆ ಜಟಿಲ. ಬಂಡವಾಳಗಾರ, ಭೂಮಾಲಿಕ ವರ್ಗಗಳು ಮತ್ತು ಅವುಗಳ ಶಕ್ತಿ ರಾಜಕಾರಣ; ಜಾಗತೀಕರಣ, ಖಾಸಗೀಕರಣ, ಉದಾರೀಕರಣದಂಥ ಅಪಾಯಕಾರಿ ಅಂತರ್‌ರಾಷ್ಟ್ರೀಯ ಉಪಕ್ರಮಗಳ ಒಡನಾಟದಲ್ಲಿ ಭಾರತದ ಶ್ರಮಿಕ ಸಮುದಾಯಗಳನ್ನು ಸರ್ವನಾಶ ಮಾಡುತ್ತಿವೆ. ಇದರಲ್ಲಿ ಸಂಸ್ಕೃತಿಯ ಪ್ರಶ್ನೆಯೂ ಬೆರೆತಿದೆ. ಉದಾಹರಣೆಗೆ: ಅನೇಕ ಚಾನಲ್‌ಗಳ ಮೂಲಕ ಹರಿದು ಬರುತ್ತಿರುವ ಸಾಂಸ್ಕೃತಿಕ ಪ್ರವಾಹ ನಮ್ಮ ಗ್ರಾಮೀಣ



ಭಾಗದ ಜನಪದ ಸಂಸ್ಕೃತಿಯ ಮೇಲೆ ಮಾಡುತ್ತಿರುವ ಅಪಾಯಕಾರಿ ಪರಿಣಾಮದ ಕುರಿತು ಗಂಭೀರವಾಗಿ ಯೋಚಿಸಬೇಕಿದೆ.

'ವರ್ಗ ಸಂಸ್ಕೃತಿ' ಮತ್ತು 'ಜನಪ್ರಿಯ ಸಂಸ್ಕೃತಿ'ಗಳು ಮೇಲೆ ಹೇಳಿದ ಜನವಿರೋಧಿ ಆಳುವ ವರ್ಗಗಳ ನೆಲೆಗೆ ಸಂಬಂಧಿಸಿವೆ. ಜನಪದ ಸಂಸ್ಕೃತಿಯ ಆರೋಗ್ಯಕರ ಅಂತಃಸತ್ವವನ್ನು ಬಳಸಿಕೊಂಡು ಜನ ಸಮೂಹಗಳ ಹೋರಾಟದ ಮಧ್ಯೆ (ರಾಷ್ಟ್ರೀಯ ವಿಮೋಚನಾ ಚಳವಳಿ, ಇತ್ಯಾದಿ) ಹುಟ್ಟಿರುವ 'ಜನಪರ ಸಂಸ್ಕೃತಿ'ಯ ಮೂಲಕ ಕ್ರಿಯಾಶೀಲ ನಿಲುವು ತಾಳದೇ ಇದ್ದರೆ ಗಂಡಾಂತರವನ್ನು ಸುಮ್ಮನೇ ಒಪ್ಪಿಕೊಂಡು ಸಾಯ ಬೇಕಾಗುತ್ತದೆ. ಜನ ಸಮೂಹಗಳ ಸಂಘರ್ಷಗಳು ಅನಾರೋಗ್ಯಕರ ಸಾಂಸ್ಕೃತಿಕ ಪ್ರಭಾವ ಗಳನ್ನು ನಿರಾಕರಿಸುವ ಮತ್ತು ಹೊಸ ಅನುಭವಗಳ ಆಧಾರದ, ಸಮಾನತೆ, ಸೋದರತೆ, ಪ್ರಜಾಸತ್ತೀಯತೆ, ಮಾನವೀಯತೆಗಳನ್ನು ಸ್ವೀಕರಿಸಿ, ಪರಿವರ್ತನೆಗೊಳ್ಳುವ ಒತ್ತಡ ಇದ್ದೇ ಇದೆ. ಸಂಸ್ಕೃತಿ ಚಿಂತನೆಯಲ್ಲಿ ಇಂಥ ಕ್ರಿಯಾಶೀಲ ನಿಲುವು ತಳೆಯಲೇ ಬೇಕಾಗುತ್ತದೆ.

೨. 'ಸಾಹಿತ್ಯ' ಸಂಸ್ಕೃತಿಯ ಒಂದು ಸಣ್ಣ ಭಾಗ. ಅದು ಕಲೆಯ ಪ್ರಭೇದ. 'ಸಂಸ್ಕೃತಿ' ಮಾನವನ ಭೌತಿಕ, ಬೌದ್ಧಿಕ ಚಟುವಟಿಕೆಗಳ ಅಥವಾ ಅರಿವು, ಇರವುಗಳ ಗತಿತಾರ್ಕಿಕ ಪ್ರಕ್ರಿಯೆಯ ಅಭಿವ್ಯಕ್ತಿ. ಅದು ಸಾಹಿತ್ಯದಂತೆ ಭಾಷಿಕ ಅಭಿವ್ಯಕ್ತಿ ಮಾತ್ರವಲ್ಲ.

ಸಾಹಿತ್ಯ 'ವಿಮರ್ಶೆ'ಯ ಅನೇಕ ಪ್ರಯೋಗಗಳು, ಸಿದ್ಧಾಂತಗಳ ರೂಪದಲ್ಲಿ ಚಾಲ್ತಿಯಲ್ಲಿವೆ. ಕಾಲ, ದೇಶವೊಂದರ ಸಾಂಸ್ಕೃತಿಕ ಸಂದರ್ಭದಲ್ಲಿ ಕೃತಿ ರೂಪುಗೊಳ್ಳುವ ಕ್ರಿಯೆಯನ್ನು ಅರಿಯಲೆಳಸುವುದು ಸಮರ್ಪಕ ವಿಧಾನವೇ. ಆದರೆ ಇದಕ್ಕೆ 'ಸಂಸ್ಕೃತಿ ವಿಮರ್ಶೆ' ಎಂದು ಹೆಸರಿಸುವುದರ ಔಚಿತ್ಯವನ್ನು ಪರಾಮರ್ಶಿಸಬೇಕಿದೆ.

ಸಂಸ್ಕೃತಿಯಂಥ ದೊಡ್ಡ ವ್ಯಾಪ್ತಿಯ ಪರಿಕಲ್ಪನೆಯನ್ನು ಸಾಹಿತ್ಯ ಕಲೆಯ ವಿಮರ್ಶೆಗೆ ಬಳಸಿಕೊಳ್ಳುವಾಗ 'ಸಂಸ್ಕೃತಿ' ಮತ್ತು 'ಕಲೆ'ಯ ರೂಪವಾದ ಸಾಹಿತ್ಯದ ವ್ಯಾಪ್ತಿ , ಇತಿಮಿತಿ, ಸ್ವರೂಪಗಳ ಖಚಿತ ಗ್ರಹಿಕೆ ಅಗತ್ಯ, ಅನಿವಾರ್ಯ. ವರ್ಗ-ಜಾತಿಗಳ ನಮ್ಮ ನಾಡಿನಲ್ಲಿ 'ಧಡಿಯರ ಸಂಸ್ಕೃತಿ' (ಮ್ಯಾಕ್ಸಿಂ ಗಾರ್ಕಿ ಬಳಸಿದ್ದು), 'ಜನಪ್ರಿಯ ಸಂಸ್ಕೃತಿ', 'ಜನಪದ ಸಂಸ್ಕೃತಿ', 'ಜನತೆಯ ಸಂಸ್ಕೃತಿ'ಗಳಂತೂ ಅಸ್ತಿತ್ವದಲ್ಲಿವೆ. ಇವಲ್ಲದೆ ಸಾಹಿತಿಯ ವರ್ಗ ಜಾತಿಗಳೂ ಅವನ ಕೃತಿ ರಚನೆಯ ಮೇಲೆ ಗಾಢ ಪ್ರಭಾವ ಬೀರುತ್ತವೆ. ಈ ಎಲ್ಲ ಹಿನ್ನೆಲೆಯಲ್ಲಿ ಕೃತಿಯೊಂದರ ವಿಮರ್ಶೆಯಾಗುವುದಾದರೆ ತುಂಬ ಪ್ರಯೋಜನಕಾರಿ. 'ಸಮಾಜವಾದೀ ಸಂಸ್ಕೃತಿ'ಯ ನಿರ್ಮಾಣದ ಆಶಯಗಳು, ತುಡಿತಗಳು, ಸ್ಪಂದನೆಗಳು ತಾತ್ವಿಕತೆ ಮತ್ತು ವಿಶ್ಲೇಷಣೆಯ ವಿಧಾನವನ್ನು ನಿರ್ದೇಶಿಸುವಂತಾಗಬೇಕು.

೩. ಮುಕ್ತ ಮತ್ತು ತೀವ್ರಗತಿಯ ವೈಚಾರಿಕ ವಲಸೆಗಾರಿಕೆಯ ಇಂದಿನ ಯುಗದಲ್ಲಿ 'ಸಂಸ್ಕೃತಿ ಸಿದ್ಧಾಂತ'ಗಳು ನಮ್ಮನ್ನು ಬಹುವಾಗಿ ಪ್ರಭಾವಿಸಿವೆ. ನಮ್ಮನ್ನು ನಾವು ಅರಿತುಕೊಳ್ಳಲು, ತಿದ್ದಿಕೊಳ್ಳಲು, ಪ್ರಗತಿಯತ್ತ ದಾಪುಗಾಲು ಹಾಕಲು ಸಹಾಯಿಸುವ ಚಿಂತನೆಗಳನ್ನು ಸ್ವಾಗತಿಸಲೇಬೇಕು. ಸಾಮಾಜಿಕಾರ್ಥ ವಾಸ್ತವಗಳನ್ನು ನಿರ್ಲಕ್ಷಿಸಿ, ವ್ಯವಸ್ಥೆಗೆ ಅನುಕೂಲವಾಗುವಂಥ ಚಿಂತನೆಗಳು ಎಷ್ಟೇ ಪ್ರಭಾವಶಾಲಿಯಾಗಿರಲಿ ಅವುಗಳ ಬಗ್ಗೆ ಎಚ್ಚರಿಕೆಯಿಂದಿರಬೇಕು.

೪. ಸಂಸ್ಕೃತಿಯ ಗತಿಶೀಲ ನೆಲೆ ಅರಿವು-ಇರವುಗಳ ವೈರುಧ್ಯಾತ್ಮಕ ಸಂಘರ್ಷವನ್ನು ಆಧರಿಸಿರುವುದಾದರೆ ಇಂದಿನ ವ್ಯವಸ್ಥೆಯಲ್ಲಿ ಗ್ರಾಮ-ನಗರಗಳ ಬಯೋನರಿ ವೈರುಧ್ಯ ತೀವ್ರ ಸ್ವರೂಪ ತಾಳಿದೆ. ನಗರ ನಾಗರಿಕತೆಯ ದಾಳಿಯಲ್ಲಿ ಗ್ರಾಮಗಳು ದಿಗ್‌ಭ್ರಮಿತವಾಗಿವೆ. ದೇಸೀತನಕ್ಕೆ ನಿರಂತರ ಪೆಟ್ಟು ಬೀಳುತ್ತಿದೆ. ಇದರ ಸಾಂಸ್ಕೃತಿಕ ಆಕಾರ ಶಿಷ್ಟ-ಜನಪರವೆಂಬ ವೈರುಧ್ಯದಲ್ಲಿರುವುದನ್ನು ಗುರುತಿಸಬಹುದು. ಈ ಚರ್ಚೆಯನ್ನು ಬೆಳೆಸುವಾಗ ಒಂದೆಡೆ ನಗರಗಳ ಕಾರ್ಮಿಕರು ಮತ್ತು ಬಡಜನತೆಯನ್ನು; ಇನ್ನೊಂದೆಡೆ ಗ್ರಾಮಗಳ ಜಮೀನುದಾರಿ ವರ್ಗವನ್ನು ಮತ್ತು ಸ್ಪೃಶ್ಯ-ಅಸ್ಪೃಶ್ಯ ನೆಲೆಗಳನ್ನು ಮರೆಯಬಾರದು. ಪೂರ್ವ-ಪಶ್ಚಿಮ ಎಂಬುದನ್ನು ಸಾಮ್ರಾಜ್ಯಶಾಹಿಗಳ ನವವಸಾಹತು ನೀತಿ ಮತ್ತು ಮುಂದುವರಿಯುತ್ತಿರುವ (?) ತೃತೀಯ ಜಗತ್ತುಗಳ ನಡುವಿನ ವೈರುಧ್ಯವಾಗಿ ನೋಡಬೇಕು. ಎಲ್.ಪಿ.ಜಿ.ಯ ಇಂದಿನ ಈ ಸಂದರ್ಭ ಸ್ಥಳೀಯ – ವಿಶ್ವಾತ್ಮಕ ಎಂಬ ವೈರುಧ್ಯವಾಗಿ ಸಂಘರ್ಷಿಸುತ್ತಿದೆ. ಸ್ವಕೀಯ-ಪರಕೀಯ ಎನ್ನುವುದಕ್ಕಿಂತ ಒಟ್ಟಾರೆ ಮಾನವೀಯ-ಅಮಾನವೀಯತೆಗಳ ನಡುವಿನ ಜಾಗತಿಕ ಸಂಘರ್ಷವನ್ನು ಯೋಚಿಸುವ ತುರ್ತಿದೆ.

೫. ಜನಸಮುದಾಯಗಳ ಸಂಸ್ಕೃತಿ ವೈವಿಧ್ಯತೆಯನ್ನು ನಿರ್ಲಕ್ಷಿಸುವ ಚಿಂತಕರು ತಮಗರಿವಿಲ್ಲದೇ ಜನವಿರೋಧಿಯಾದ 'ವರ್ಗ' ಇಲ್ಲವೇ 'ಜನಪ್ರಿಯ' ಸಂಸ್ಕೃತಿಗಳ ಪರವಾಗಿರುತ್ತಾರೆ. ಅಂಥವರ ಸಾಂಸ್ಕೃತಿಕ ಚಿಂತನೆಗಳು 'ಜನತೆಯ ಸಂಸ್ಕೃತಿ'ಯ ಜತೆ ಮುಖಾಮುಖಿಯಾದಾಗ ಸಂಘರ್ಷ ಅನಿವಾರ್ಯ. ಬದಲುತ್ತಿರುವ ಜನ ಸಮೂಹಗಳ ಜೀವನ ವಿಧಾನಗಳ ನಿರ್ಲಕ್ಷಿತ ನೆಲೆಯ ಅಧ್ಯಯನಗಳು ಈವರೆಗಿನ ಸಂಸ್ಕೃತಿ ಸಿದ್ಧಾಂತಗಳನ್ನು ದಂಗು ಬಡಿಸುತ್ತಿವೆ. ನಿದರ್ಶನಕ್ಕೆ – ಎಂ. ಎನ್. ಶ್ರೀನಿವಾಸ್ ಅವರ 'ಸಂಸ್ಕೃತೈಜೇಶನ್'ನಂಥ ವಿಚಾರಗಳನ್ನಾಗಲೀ, ವೀಣಾ ದಾಸ್ ಮೊದಲಾದವರ ಮಡಿ-ಮೈಲಿಗೆ ಪರಿಕಲ್ಪನೆಗಳನ್ನಾಗಲೀ 'ಉಪ ಸಂಸ್ಕೃತಿ'ಗಳ ಜತೆ ತುಲನೆ ಮಾಡಿ ನೋಡಬಹುದು.

ಎಸ್. ಎಸ್. ಹಿರೇಮಠ, ಕನ್ನಡ ಪ್ರಾಧ್ಯಾಪಕ, ಎ.ಡಿ.ಬಿ. ಕಾಲೇಜು, ಹರಪನಹಳ್ಳಿ – ೫೮೩ ೧೩೧

## ಸಂಸ್ಕೃತಿ ಚಿಂತನೆ - ಪ್ರಶ್ನಾವಳಿ

ರಾಮಲಿಂಗಪ್ಪ ಟಿ. ಬೇಗೂರು

ನಾಲ್ಕನೇ ಪ್ರಶ್ನೆಯಿಂದ ನನ್ನ ವಿಚಾರಗಳನ್ನು ಆರಂಭಿಸುತ್ತೇನೆ. ಲಿಪಿಕ ಜನ ಯಾವತ್ತೂ ತಮ್ಮ ಅಧ್ಯಯನದ ಅನುಕೂಲಕ್ಕೆ ಸಂಸ್ಕೃತಿ ವಿನ್ಯಾಸವನ್ನು ವಿಭಾಗೀಕರಣ ಮತ್ತು ನಾಮಕರಣಗಳಿಗೆ ಗುರಿಪಡಿಸುತ್ತಿರುತ್ತಾರೆ. ಹೀಗೆ ಗುರಿಪಡಿಸುವಾಗ ಸಂಸ್ಕೃತಿ ನಿರ್ವಚನಕ್ಕೆ ತಮ್ಮದೇ ಆದ ಅಪ್ರೋಚು ಮತ್ತು ಪರಿಭಾಷೆಗಳನ್ನು ಹುಟ್ಟು ಹಾಕುತ್ತಿರುತ್ತಾರೆ. ಬೈನರಿ ವಿಧಾನವು ಸಂಸ್ಕೃತಿ ವಿನ್ಯಾಸವನ್ನು ಗ್ರಹಿಸುವ ಬಹು ಪ್ರಾಚೀನವೂ-ಆಧುನಿಕವೂ ಆದ ಒಂದು ಅಪ್ರೋಚಾಗಿದೆ.

ಯಾವಾವ ಬೈನರಿಗಳನ್ನು ನಮ್ಮ ಸಂಸ್ಕೃತಿ ಚರಿತ್ರೆಯಲ್ಲಿ ಬಳಸುತ್ತ ಬಂದಿದ್ದೇವೆಂದು ಪಟ್ಟಿ ಮಾಡಿದರೆ, ಈ ಬೈನರಿ ಅಪ್ರೋಚು ನಮ್ಮ ಚಿಂತನಾಕ್ರಮವನ್ನೇ ಶತಶತಮಾನಗಳಿಂದ ಆಳುತ್ತ ಬಂದಿರುವುದು ಕಾಣುತ್ತದೆ. (ದೇಸಿ ಮತ್ತು ಮಾರ್ಗ ಆದಿಮ ಬೈನರಿಗಳಲ್ಲೊಂದು). ನಮ್ಮ ಜ್ಞಾನ ರಚನೆಯ ಹಿಂದಿನ ಒಂದು ಮುಖ್ಯ ನಿಯಂತ್ರಕ ಶಕ್ತಿಯಾಗಿ ಈ ಪರಿಕಲ್ಪನೆ ಕೆಲಸ ಮಾಡಿರುವುದನ್ನು ಸಂಸ್ಕೃತಿ ಚರಿತ್ರೆಯನ್ನಿಷ್ಟು ಅವಲೋಕಿಸಿದರೆ ತಿಳಿಯುತ್ತದೆ. ಗ್ರಾಮ-ನಗರ, ಶಿಷ್ಟ-ಜಾನಪದ, ಸ್ಥಳೀಯ-ವಿಶ್ವಾತ್ಮಕ ಇಂಥ ಬೈನರಿ ಕಲ್ಪನೆಗಳು ಜನ್ಮ ತಾಳುವುದೇ ಯಜಮಾನೀಯ ಪರಿಭಾಷೆಗಳಾಗಿ. ಸಂಸ್ಕೃತಿಯನ್ನು ತರತಮವಾಗಿ ಗ್ರಹಿಸುವ ನೆಲೆಯಿಂದಲೇ ಹುಟ್ಟಿರುವ ಇವು ಶ್ರೇಷ್ಠ-ಕನಿಷ್ಠವೆಂದು ಸಂಸ್ಕೃತಿಯನ್ನು ಇಬ್ಭಾಗ ಮಾಡುತ್ತವೆ. ಒಂದನ್ನು ಇನ್ನೊಂದರ ಮೂಲಕ ತುಲನೆಗೆ ಒಳಪಡಿಸಿ ಒಂದನ್ನು ಏರಿಸಿ ಇನ್ನೊಂದನ್ನು ಇಳಿಸುವ ಪರಿಭಾಷೆಗಳಿವು.

ಹಾಗೆ ಸಂಸ್ಕೃತಿಗಳನ್ನು (ಬೈನರಿಯಾಗಿ) ಕೇವಲ ಎರಡಾಗಿ ಮಾತ್ರ ನೋಡಲು ಬರುವುದಿಲ್ಲ. ಇಡೀ ಸಂಸ್ಕೃತಿ ವಿನ್ಯಾಸವನ್ನು ಎರಡಾಗಿ ವಿಭಾಗೀಕರಿಸುವ ಈ ವಿಧಾನವು ಸದಾ ಸಂಸ್ಕೃತಿಯನ್ನು ಎರಡು ವಿರುದ್ಧ ವೈರಿನೆಲೆಗಳನ್ನಾಗಿಯೇ ಗ್ರಹಿಸುತ್ತಿರುತ್ತದೆ. ಹಾಗೇ ಸಂಸ್ಕೃತಿಯನ್ನು ಸದಾ ಸಂಘರ್ಷಾತ್ಮಕ ನೆಲೆಯಲ್ಲಿಯೆ ನಿರ್ವಚಿಸುತ್ತಿರುತ್ತದೆ. ವಾಸ್ತವವಾಗಿ ಹೀಗಿರುವುದಿಲ್ಲ. ಯಾವೊಂದು ಸಂಸ್ಕೃತಿಯೂ ಏಕಾಕಾರಿಯಾದುದಲ್ಲ. ಎಲ್ಲ ಸಾಂಸ್ಕೃತಿಕ ಘಟಕಗಳೂ ಬಹುಮುಖಿಯಾದಂಥವು. ಹಾಗೇ ವೈರುಧ್ಯವೆನ್ನುವುದು ಇಬ್ಬಗೆಯಲ್ಲಿ ಮಾತ್ರ ಇರುವುದಿಲ್ಲ. ಸ್ವ ಮತ್ತು ಅನ್ಯ, ಪೂರ್ವ ಮತ್ತು ಪಶ್ಚಿಮ ಇಂಥ ಬೈನರಿಗಳು ಇಡೀ ಜಗತ್ತನ್ನೇ ಎರಡು ಏಕಾಕಾರಿ ಆಕೃತಿಗಳನ್ನಾಗಿ ಕಾಣುತ್ತವೆ ಮತ್ತು ಸಂಘರ್ಷಾತ್ಮಕ ವೈರಿ ಘಟಕಗಳನ್ನಾಗಿಯೇ ಜಗತ್ತನ್ನು ವಿಭಾಗಿಸುತ್ತವೆ. ಬೈನರಿ ಅಪ್ರೋಚಿಗೆ ಇರುವ ಮಿತಿಯಿದು.

ಇಂಥ ವಿಭಾಗೀಕೃತ ಬೈನರಿ ಕಲ್ಪನೆಗಳನ್ನು ನೋಡಿದರೆ ನಿಜವಾಗಿಯೂ ಸಂಸ್ಕೃತಿ ಚಿಂತಕರ ಚಿಂತನೆಗಳಿಗೂ ಜನಸಮುದಾಯಗಳ ವಾಸ್ತವ ಆಚಾರಕ್ಕೂ ಅಂತರವಿದೆ ಎನ್ನಿಸುತ್ತದೆ. ಇರುವುದು ಮತ್ತು ಕಾಣುವುದು ಇವೆರಡೂ ನಮ್ಮಲ್ಲಿ ಯಾವತ್ತೂ ಭಿನ್ನ ವಾಗಿಯೇ ಇವೆ. ಹಾಗೇ ಚಿಂತನೆ-ಸಿದ್ಧಾಂತ ಮತ್ತು ಬಾಳ್ವೆ ಕೂಡ ಭಿನ್ನವಾಗಿಯೇ ಇದೆ. ಸಂಸ್ಕೃತಿಯನ್ನು (ಬೈನರಿ) ದ್ವಿಮಾನತೆಯಿಂದ ಮಾತ್ರ ನೋಡಿದರೆ ಸಾಲದು, ಅಖಂಡತೆ ಮತ್ತು ಬಹುಮುಖತೆಗಳಿಂದಲೂ ನೋಡಬೇಕು. ದ್ವಿಮಾನತೆ ಬರಿ ಒಂದು ಮುಖ ಅಷ್ಟೆ.

ನಿತ್ಯ ಸ್ಥಿತ್ಯಂತರ ಸ್ಥಿತಿಯೇ ಸದಾ ಸಾಂಸ್ಕೃತಿಕ ವಾಸ್ತವ. ಯಥಾಸ್ಥಿತಿಯೆಂಬುದು ಕೇವಲ ಪರಿಕಲ್ಪನಾತ್ಮಕ ಭ್ರಮೆ. ಯಾವ ಸಮಾಜದಲ್ಲೂ ಯಥಾಸ್ಥಿತಿಯೆಂಬುದು ಆಚರಣೆಯಲ್ಲಿ ಇರುವುದಿಲ್ಲ. ಗತಿಶೀಲತೆಯೇ ಇರುವ ಸ್ಥಿತಿ. ಆದರೆ ಗತಿಶೀಲತೆಯ ಪ್ರಮಾಣ ಕಾಲಕಾಲಕ್ಕೆ ಹೆಚ್ಚು ಕಡಿಮೆಯಿರುತ್ತದೆ ಅಷ್ಟೆ. ಹೀಗಿರುವಾಗ ಸಂಸ್ಕೃತಿ ನಿರ್ವಚನಕ್ಕೆ ಸೃಷ್ಟಿಯಾದ ಯಾವುದೇ ಪರಿಭಾಷೆಗಳೂ ಅನ್ವಯಿಕವಾಗಿ ಆತ್ಯಂತಿಕವಲ್ಲ. ಪರಿಭಾಷೆ-ಸಿದ್ಧಾಂತಗಳು ನಿತ್ಯ ಚಲನಶೀಲವಾಗಿರುತ್ತವೆ. ಹಾಗೇ ಯಾವುದೇ ಪರಿಭಾಷೆಯ ಅರ್ಥವೂ ನಿತ್ಯ ಸ್ಥಿತ್ಯಂತರಗೊಳ್ಳುತ್ತಲೇ ಇರುತ್ತದೆ. ಯಾವೊಂದು ಕಾಲಕ್ಕೂ ಯಾವುದೇ ಪರಿಭಾಷೆಗೆ ಒಂದು ಅರ್ಥ ಎನ್ನುವುದು ಇರುವುದಿಲ್ಲ. ಹಾಗೆ ಇದ್ದರೆ ಅದು ನಮ್ಮ ಸೈದ್ಧಾಂತಿಕ ವ್ಯಕ್ತಿನಿಷ್ಠ ನಂಬಿಕೆ ಅಷ್ಟೆ. ವಾಸ್ತವ ಅಲ್ಲ. ಹಾಗೇ ಗ್ರಾಮ-ನಗರ, ಪೂರ್ವ-ಪಶ್ಚಿಮ, ಸ್ವ-ಅನ್ಯ ಇತ್ಯಾದಿಗಳ ಸ್ವರೂಪ, ಅರ್ಥಗಳು ಯಾವಾಗಲೂ ಒಂದು ಆಗಿರಲಿಲ್ಲ, ಈಗಲೂ ಆಗಿಲ್ಲ. ಸಂಸ್ಕೃತಿಯು



ಹೇಗೆ ನಿತ್ಯ ಗತಿಶೀಲವೋ ಹಾಗೆ ಈ ನಿರ್ವಚನಗಳ ಅರ್ಥವಿನ್ಯಾಸವೂ ಗತಿಶೀಲ ಮತ್ತು ಬಹುರೂಪ ಆಗುತ್ತ ಬಂದಿದೆ.

ಕೆಲವೇ ಅಕಡಮೀಶಿಯನ್ನರು, ವಿದ್ಯಾರ್ಥಿಗಳು, ಬುದ್ಧಿಜೀವಿಗಳನ್ನು ಬಿಟ್ಟರೆ ಸಂಸ್ಕೃತಿ ಸಿದ್ಧಾಂತಗಳನ್ನು ಸೃಷ್ಟಿಸುವ-ಬಳಸುವ ಜನ ನಮ್ಮಲ್ಲಿ ಇನ್ನಾರೂ ಇಲ್ಲ. ಕರ್ನಾಟಕದಾದ್ಯಂತ ಲೆಕ್ಕ ಹಾಕಿದರೆ ಅಜಮಾಸು ಒಂದೆರಡು ಸಾವಿರ ಜನ ಇಂಥವರು ಸಿಗಬಹುದು. ಇಂಥವರ ಸಿದ್ಧಾಂತಗಳನ್ನೇ ಸಮುದಾಯ ಗಳ ವಾಸ್ತವ ಜೀವನ ವಿಧಾನವೆನ್ನಲು ಬರುವುದಿಲ್ಲ. ಸಂಸ್ಕೃತಿ ಚಿಂತಕರ ಸಿದ್ಧಾಂತಗಳಿಗೂ ಜನ ಸಮುದಾಯಗಳ ವಾಸ್ತವ ಜೀವನ ವಿಧಾನಗಳಿಗೂ ಖಂಡಿತಾ ಅಂತರವಿದೆ.

ಉದಾಹರಣೆಗೆ ಡಿ.ಆರ್. ಬಳಕೆಗೆ ತಂದ ವಿಸ್ಮೃತಿ ಥಿಯರಿಯನ್ನು ನೋಡಬಹುದು. ವಿದ್ಯಾಭ್ಯಾಸ ಪ್ರಣೀತ ಎಂಪಿರಿಕಲ್ ಪೊರೆಗಳು ನಮ್ಮ ಕಣ್ಣುಗಳಿಗೆ ಬೆಳೆದಾಗ ವಿಸ್ಮೃತಿಯಂಥ ಸಿದ್ಧಾಂತಗಳನ್ನು ನಾವು ನಂಬುತ್ತೇವೆ. ಮದುವೆ, ಮಣ್ಣುಗಳಿಂದ ಹಿಡಿದು ಮಾದಪ್ಪನ ಜಾತ್ರೆಯವರೆಗೆ ನಮ್ಮಲ್ಲಿ ಸ್ಮೃತಿಯುಕ್ತ ಜೀವನಕ್ರಮಗಳು ನಿಜಕ್ಕೂ ಇಂದಿಗೂ ಆಚರಣೆಯಲ್ಲಿವೆ. ಸ್ಥಿತ್ಯಂತರಗಳಾಗಿವೆ, ಇಲ್ಲವೆಂದಲ್ಲ. ಆದರೆ ನಮಗೆ ವಿಸ್ಮೃತಿ ಖಂಡಿತಾ ಬಂದಿಲ್ಲ, ಹಾಗೊಂದು ವೇಳೆ ಬಂದಿದ್ದರೆ ಅದು ಸಂಸ್ಕೃತಿ ಸಿದ್ಧಾಂತಿಗಳಿಗೆ ಮಾತ್ರ.

ಇತ್ತೀಚೆಗೆ ಸಂಸ್ಕೃತಿಗಳ ನಿರ್ವಚನೆಯ ಚರ್ಚೆಯಲ್ಲಿ ಪಾರಿಭಾಷಿಕ ಸಮರವೊಂದು ನಡೆಯಿತು. ಈ ಚರ್ಚೆಯಲ್ಲಿ ಅಧೀನ, ಕಿರು, ಉಪಸಂಸ್ಕೃತಿಯೆಂಬ ಪದಗಳಿಗೆ ಬದಲಾಗಿ ಪ್ರತಿ ಸಂಸ್ಕೃತಿ, ಪರ್ಯಾಯ ಸಂಸ್ಕೃತಿ, ಆದಿಮ, ತಳಸಂಸ್ಕೃತಿಗಳೆಂಬ ಪರಿಭಾಷೆಗಳನ್ನು ಬಳಕೆಗೆ ತರಲಾಯ್ತು. ವಾಸ್ತವಿಕ ಸಾಂಸ್ಕೃತಿಕ ಸ್ತರವಿನ್ಯಾಸದಲ್ಲಿ ನಮ್ಮ ಸಮಾಜಶಾಸ್ತ್ರಜ್ಞರು ಹೇಳುವ ಅಥವಾ ಸಂಸ್ಕೃತಿ ಚಿಂತಕರು ಹೇಳುವ ಸ್ತರವಿನ್ಯಾಸ ಖಂಡಿತಾ ಇರುವುದಿಲ್ಲ. ವಾಸ್ತವ ಸ್ತರವು ಏಕರೂಪಿ ತಾತ್ತ್ವೀಕರಣಕ್ಕೆ ಅಥವಾ ಪಾರಿಭಾಷಿಕ ಸೂತ್ರೀಕರಣಕ್ಕೆ, ನಾಮಕರಣ, ವಿಭಾಗೀಕರಣಗಳಿಗೆ ಸಿಗುವಷ್ಟು ಸರಳವಾದದ್ದಲ್ಲ. ವಾಸ್ತವ ಸ್ತರವಿನ್ಯಾಸವನ್ನು ಹೇಗೆ ಸೂತ್ರೀಕರಿಸಿದರೂ ಅದು ತುಂಬಾ ಪರ್ಟಿಕ್ಯುಲರ್ ಆಗಿರುತ್ತದೆ ಮತ್ತು ತತ್ಕಾಲೀನವಾಗಿರುತ್ತದೆ. ಸಮಾಜ ಅಕ್ಷರವಲ್ಲ. ಅದು ನಿತ್ಯಗತಿಶೀಲವಾದದ್ದು. ಹಾಗಾಗಿ ಸಂಸ್ಕೃತಿ ವಿನ್ಯಾಸ ಕೂಡ ಸಿದ್ಧಾಂತೀಕರಣಗಳನ್ನು ಮೀರಿದ್ದು. ವಾಸ್ತವ ಜೀವನ ವಿಧಾನಗಳೂ ಸಂಸ್ಕೃತಿ ಸಿದ್ಧಾಂತಗಳೂ ಯಾವತ್ತೂ ಒಂದೇ ಆಗಿರಲು ಸಾಧ್ಯವಿಲ್ಲ. ಸಂಸ್ಕೃತಿ ಸಿದ್ಧಾಂತಗಳೆಲ್ಲ ವ್ಯಕ್ತಿನಿಷ್ಠ ದೃಷ್ಟಿಕೋನಗಳಷ್ಟೆ.

ನಮ್ಮಲ್ಲಿ ತೀವ್ರಪ್ರಮಾಣದ ಸಾಂಸ್ಕೃತಿಕ ಪರಿವರ್ತನೆ (ಸ್ಥಿತ್ಯಂತರ)ಗಳು ಚರಿತ್ರೆಯಲ್ಲಿ ಎಲ್ಲೆಲ್ಲಿ, ಯಾವಾಗ್ಯಾವಾಗ ಆಗಿವೆಯೋ ಅವನ್ನು ವಿಶ್ಲೇಷಿಸಿದರೆ ಸ್ಥಿತ್ಯಂತರಗಳ ಹಿಂದಿನ ಒತ್ತಡಗಳು ಯಾವ ಬಗೆಯವೆಂದು ತಿಳಿಯುತ್ತದೆ. ಸ್ಥಿತ್ಯಂತರಗಳ ಸಂಭವಗಳು ಕಾಲಾಂತರದಲ್ಲಿ ಒಂದಲ್ಲ ಹತ್ತಲ್ಲ ಸಾವಿರಾರು ಕಾರಣಗಳಿಂದ ಆಗುತ್ತವೆ. ವ್ಯಕ್ತಿ, ಕುಟುಂಬ, ಕುಲ, ನಾಡುಗಳ ಹಂತದಲ್ಲಿ ಇವು ಭಿನ್ನವಾಗುತ್ತ ಹೋಗುತ್ತವೆ. ವಚನ ಕಾಲ, ಸ್ವಾತಂತ್ರ್ಯ ಚಳವಳಿಯ ಕಾಲ, ಅನುಭಾವಿ ಪರಂಪರೆ, ಅವಧೂತ ಪರಂಪರೆ, ಸ್ವಂತ ಪರಂಪರೆ, ಸಾಂಸ್ಕೃತಿಕ ವೀರ ಪರಂಪರೆಗಳು ಕ್ರಿಯಾಶೀಲವಾಗಿದ್ದ ಕಾಲಗಳನ್ನು ವಿಶ್ಲೇಷಣೆಗೆ ಗುರಿಪಡಿಸಿದರೆ ಸ್ಥಿತ್ಯಂತರ-ರೂಪಣೆಗಳ ಹಿಂದಿನ ಒತ್ತಡಗಳು ಯಾವ ತೆರನಾಗಿರುತ್ತವೆ ಎಂಬುದನ್ನು ತಿಳಿಯಬಹುದು.

ರಾಜಕೀಯ ಅಧಿಕಾರ ಕೇಂದ್ರಗಳಲ್ಲಿ, ಧಾರ್ಮಿಕ, ಶೈಕ್ಷಣಿಕ, ಜ್ಞಾನಶಾಸ್ತ್ರ ನಿರ್ಮಾಣ ಕೇಂದ್ರಗಳಲ್ಲಿ ಪಲ್ಲಟಗಳು ಸಂಭವಿಸಿದಾಗೆಲ್ಲ ನಮ್ಮ ಸಂಸ್ಕೃತಿ ಚರಿತ್ರೆಯಲ್ಲಿ ಸ್ಥಿತ್ಯಂತರಗಳು ಸಂಭವಿಸುತ್ತಲೇ ಬಂದಿವೆ. ಪರಿಸರಿಕ ಪ್ರಭಾವಗಳು, ಸಾಂದರ್ಭಿಕ ಅಗತ್ಯಗಳು, ಅನುಕೂಲತೆ/ಪ್ರಯೋಜನಗಳ ರಾಜಕಾರಣ, ಆರ್ಥಿಕತೆ, ಧಾರ್ಮಿಕ/ಆಧ್ಯಾತ್ಮಿಕ ನಡಾವಳಿಗಳು, ಸಾಂಸ್ಕೃತಿಕ ಸ್ಮೃತಿಕೋಶಗಳ ಶಕ್ತಿ, ಯಾಜಮಾನೀಯ ಹುನ್ನಾರಗಳ ಪ್ರಾಬಲ್ಯ, ಶೋಷಣೆ, ಬಡತನ, ಜ್ಞಾನಕ್ರಾಂತಿ, ಹೀಗೆ ಅಸಂಖ್ಯ ಕಾರಣ-ಒತ್ತಡಗಳಿಂದ ಸಂಸ್ಕೃತಿಯ ರೂಪಣೆ ಸಂಭವಿಸುತ್ತದೆ. ಸ್ಥಿತ್ಯಂತರ, ನಿರಾಕರಣೆ, ಸ್ವೀಕಾರ, ರೂಪಾಂತರ, ಅಳವಡಿಕೆ, ಅಣಕಗಳು ಸಂಭವಿಸುತ್ತವೆ.

ಸ್ಥಿತ್ಯಂತರದ ಎರಡು ನಿದರ್ಶನಗಳನ್ನಿಲ್ಲಿ ಹೇಳುತ್ತೇನೆ : (೧) ಗೊರೂರರ ಬೈಲಹಳ್ಳಿ ಸರ್ವೆ ಪ್ರಬಂಧದಲ್ಲಿ ಒಬ್ಬ ಬ್ರಾಹ್ಮಣನ ಕತೆ ಬರುತ್ತದೆ (ಪು.೭೬). ಈ ಬ್ರಾಹ್ಮಣ

# ಕರ್ನಾಟಕದ ಸಂದರ್ಭದಲ್ಲಿ ಸಂಸ್ಕೃತಿ ಚಿಂತನೆ



ಹೊಟ್ಟೆಪಾಡಿಗೆ ತಲೆಮೇಲೆ ಸೌದೆ ಹೊತ್ತು ಮಾರಿ ಜೀವಿಸುತ್ತಿರುತ್ತಾನೆ. ಇವನಿಗೆ ನಿತ್ಯ ಸೌದೆ ಮಾರಲು ಬೀದಿ ಬೀದಿ ಅಲೆಯಬೇಕಾದ್ದರಿಂದ ಸ್ನಾನ, ಮಡಿ, ಜಪ, ಧ್ಯಾನಗಳ್ಯಾವ ಬಗೆಗೂ ಧ್ಯಾಸ ಇರುವುದಿಲ್ಲ. ಇವನಿಗೆ ಮೈಸೂರು ಮಹಾರಾಜರು ಒಮ್ಮೆ ಮಾನ್ಯ ಹಾಕಿಕೊಡುತ್ತಾರೆ. ನಿಗದಿತ ಆದಾಯ ಮಾನ್ಯದಿಂದ ಬರತೊಡಗಿದಂತೆ ಈ ಬ್ರಾಹ್ಮಣ ಸ್ನಾನ, ಮಡಿ, ಜಪತಪಗಳನ್ನೆಲ್ಲ ಚಾಚೂ ತಪ್ಪದೆ ಮಾಡತೊಡಗುತ್ತಾನೆ. ಇವನ ವಿಚಾರದಲ್ಲಿ ಬಿಡುವು ಮತ್ತು ಆರ್ಥಿಕತೆಗಳು ಇವನದೇ ಸಾಂಸ್ಕೃತಿಕ ಐಡೆಂಟಿಟಿಯ ಸ್ವೀಕಾರ ಅಥವಾ ನಿರಾಕರಣೆಯ ಹಿಂದೆ ಕೆಲಸ ಮಾಡುತ್ತಿರುತ್ತವೆ. ಸಂಸ್ಕೃತಿಯಲ್ಲಿನ ಸ್ಥಿತ್ಯಂತರದ ಹಿಂದೆ ವೈಯಕ್ತಿಕ ನೆಲೆಯಲ್ಲಿ ಒದಗಬಹುದಾದ ಒಂದು ಒತ್ತಡಕ್ಕೆ ಇದು ಉದಾಹರಣೆ.

(೨) ಇತ್ತೀಚೆಗೆ ನಮ್ಮೂರಿನಲ್ಲಿ ಪ್ರತಿವರ್ಷವೂ ತಪ್ಪದೇ ಆಗುತ್ತಿದ್ದ ಪರಿಸೆ ತಪ್ಪತೊಡಗಿದೆ. ಯಾವಾಗ ಕಾಲ ಕೂಡಿಬರುತ್ತದೋ ಆಗ ಆಗುತ್ತದೆ. ಈಗ್ಗೆ ನಾಲ್ಕು ವರ್ಷಗಳ ಹಿಂದೆ ಅರ್ಧಕ್ಕೆ ಕೊಂಡದ ಹತ್ತಿರ ಧೂಳುಮರಿ ಹೊಡೆದಾಗಲೇ ನಿಂತುಹೋದದ್ದು ಇದುವರೆಗೆ ಮತ್ತೆ ನಡೆದಿಲ್ಲ. ಪೊಲೀಸರು ಇದ್ದರೂ ಕಾಂಗ್ರೆಸು ಮತ್ತು ದಳದವರ ನಡುವೆ ನಡೆದ ಮಾರಾಮಾರಿ ಇದಕ್ಕೆ ಕಾರಣ. ಮಾರಮ್ಮ ಅವಳ ಕಾರ್ಯಕ್ಕೆ ಕಲ್ಲು ಹಾಕಿದವರಿಗೆ ಏನಾದರೂ ತಂದು ಹಾಕಿ ತಕ್ಕ ಶಾಸ್ತಿ ಮಾಡದೆ ಬಿಡೊಲ್ಲ ಅಂದುಕೊಂಡಿದ್ದು ಸುಳ್ಳಾಗಿ ವರ್ಷಗಳೇ ಆಗಿವೆ. ವಿದ್ಯಾಭ್ಯಾಸ, ಮೀಸಲಾತಿ ಮತ್ತು ಪಂಚಾಯಿತಿ ರಾಜಕೀಯಗಳು ನಮ್ಮೂರನ್ನು ಪ್ರವೇಶಿಸಿದ ನಂತರ ಜನರ ಅಂತಸ್ತಿನ ಸ್ತರವಿನ್ಯಾಸ-ಸಾಮಾಜಿಕ ಸ್ಥಾನಮಾನಗಳಲ್ಲಿ ಬಹಳಷ್ಟು ಬದಲಾವಣೆ ಆಗಿದೆ. ಮಾರಿಪರಿಸೆಯಲ್ಲಿ ಈ ಬದಲಾದ ಸ್ಥಾನಮಾನಗಳಿಗೆ ತಕ್ಕಂತೆ ಆಯಾಯ ಜನಕ್ಕೆ ಪಾತ್ರಗಳ ಹಂಚಿಕೆ ಆಗಿಲ್ಲ. ಹಳೇ ಗೌಡನಿಗೆ, ಕುಳವಾಡಿಗಳಿಗೆ ತಮ್ಮ ರಿವಾಜು ಬಿಟ್ಟುಕೊಡಲು ಇಷ್ಟವಿಲ್ಲ. ಹೊಸ ಅಂತಸ್ತು ಸ್ಥಾನಮಾನಗಳನ್ನು ಪಡೆದ ಜನರಿಗೆ ಪರಿಸೆಯಲ್ಲಿ ಹಳೇ ಪಾತ್ರನಿರ್ವಹಣೆಗಳಲ್ಲಿ ತೃಪ್ತಿಯಿಲ್ಲ. ಅದು ಅವರ ಘನತೆಗೆ ಕುಂದು. ಇದೊಂಥರ ಸಾಮೂಹಿಕ ಆಚರಣೆಯಲ್ಲಿ ಬದಲಾದ ಯೋಗ್ಯತೆಗಳಿಗನುಸಾರವಾಗಿ ಪಾತ್ರಗಳ ಹಂಚಿಕೆಯಾಗದಿರುವುದರಿಂದ ಉಂಟಾಗಿರುವ ಬಿಕ್ಕಟ್ಟು.

ಇಂಥ ಪರಿಸೆಗಳು ಅರ್ಧಕ್ಕೆ ನಿಂತುಹೋಗುವ ಘಟನೆಗಳನ್ನು ದೇಸಿವಾದಿಗಳು (ಸ್ವದೇಶಿಗಳು) ಸ್ಥಳೀಯ ಸಂಸ್ಕೃತಿಗೆ ಅಪಚಾರವಾಗುತ್ತಿದೆ, ಜನ ನಮ್ಮ ದೇವರು ದಿಂಡರಿಗೆ ಬೆಲೆ ನೀಡುತ್ತಿಲ್ಲ, ದೇಸಿ ಸಂಸ್ಕೃತಿ ಪಾಶ್ಚಾತ್ತೀಕರಣದಿಂದ (ಜಾಗತೀಕರಣದಿಂದ) ಹಾಳುತ್ತಿದೆ ಎಂದೆಲ್ಲ ವ್ಯಾಖ್ಯಾನಿಸಿ ಬೊಬ್ಬೆ ಹಾಕುತ್ತಾರೆ. ಆದರೆ ಸಮಾಜದಲ್ಲಿ ಇಂಥವರು ನಿಜಕ್ಕೂ ಯಥಾಸ್ಥಿತಿವಾದಿಗಳಾಗಿರುತ್ತಾರೆ. ತಲೆತಲಾಂತರಗಳಿಂದ ದೇವರು ಹೊರುವವನು ದೇವರು ಹೊರುತ್ತಲೇ ಇರಬೇಕು, ಕಸ ಗುಡಿಸುವವನು ಕಸ ಗುಡಿಸುತ್ತಲೇ ಇರಬೇಕು ಎಂದರೆ ಹೇಗೆ? ಸಾಮಾಜಿಕ ಅಂತಸ್ತು ಮತ್ತು ಸಾಂಸ್ಕೃತಿಕ ಪಾತ್ರಗಳ ನಡುವೆ ತಾಳಮೇಳವಿಲ್ಲದ ವ್ಯವಸ್ಥೆಯ ಎದುರಿನ ಅಸಹನೆಯೇ ಇಲ್ಲಿ ಸ್ಥಿತ್ಯಂತರಗಾಮಿ ಪ್ರತಿರೋಧದ ಹಿಂದಿನ ಒತ್ತಡವಾಗಿದೆ. ಸಾಮೂಹಿಕ ನೆಲೆಯಲ್ಲಿ ಸಂಸ್ಕೃತಿ ರೂಪಣೆ-ಸ್ವೀಕಾರ-ನಿರಾಕರಣೆ, ಸ್ಥಿತ್ಯಂತರದ ಹಿಂದಿನ ಒತ್ತಡ ಹೇಗಿರಬಹುದೆಂಬುದಕ್ಕೆ ಇದೊಂದು ಉದಾಹರಣೆ.

ಇನ್ನು ವಿಭಿನ್ನ ಪರಿಸರದಲ್ಲಿ ರೂಪಿತವಾದ ಸಂಸ್ಕೃತಿ ಸಿದ್ಧಾಂತಗಳಿಗೆ ಮುಖಾಮುಖಿಯಾಗುವಾಗ ಇರಬೇಕಾದ ಮುಕ್ತತೆ ಮತ್ತು ಎಚ್ಚರಗಳು ಯಾವ ಬಗೆಯವಾಗಿರಬೇಕೆಂಬ ಪ್ರಶ್ನೆ. ಈ ಬಗ್ಗೆ ಹಾಗೆ ಪ್ಯಾಕೇಜು ನೀಡಲು ಆಗುವುದಿಲ್ಲ. ಇಂಥ ಮುಕ್ತತೆ ಮತ್ತು ಎಚ್ಚರಗಳು ನಿಜಕ್ಕೂ ಸಾಂದರ್ಭಿಕವಾದುವು. ನಮ್ಮ ನೀತಿ ನಿರೂಪಣಾ ಕೇಂದ್ರಗಳು, ಆಡಳಿತ ಮತ್ತು ಜ್ಞಾನಕೇಂದ್ರಗಳು, ವರ್ಗಹಿತಾಸಕ್ತವಾಗದೆ, ಹುನ್ನಾರಗಳನ್ನು ಒಡ್ಡದೆ, ನಮ್ಮ ಸಾಮುದಾಯಿಕ ಅಗತ್ಯ, ಸೌಖ್ಯ ಮತ್ತು ಉಳಿವುಗಳಿಗೆ ತಕ್ಕಂತೆ ಮುಕ್ತತೆ ಮತ್ತು ಎಚ್ಚರಗಳನ್ನು ಇಟ್ಟುಕೊಂಡರೆ ಸಾಕು. ಇದೊಂದು ಆದರ್ಶವೇ ಸರಿ. ಜಾಗತಿಕ ಯಾಜಮಾನೀಯ ಕೇಂದ್ರಗಳ ಎಲ್ಲ ದಾನ ಮತ್ತು ಒತ್ತಡ ಗಳನ್ನು ಪ್ರಸ್ತುತ ಮತ್ತು ದೂರಗಾಮಿ ಪರಿಣಾಮಗಳ ಹಿನ್ನೆಲೆಯಲ್ಲಿ ನೋಡಿದರೆ ಯುಕ್ತ.

ವಿದೇಶೀ ಪರಿಸರದಲ್ಲಿ ರೂಪಿತವಾದ ಸಂಸ್ಕೃತಿ ಸಿದ್ಧಾಂತಗಳನ್ನು ಕೇವಲ ಅಪಾಯ ಕಾರಿಯೆಂದೋ ಅಥವಾ ಸರ್ವರುಜಾಪಹಾರಿಯೆಂದೋ ಮಾತ್ರವೆ ತಿಳಿಯುವುದು ಬಾಲಿಶ ವಾದದ್ದು. (ಜಾಗತೀಕರಣವನ್ನು ಈ ಎರಡು ಅತಿಗಳಲ್ಲಿಯೂ ಕಾಣಲಾಗುತ್ತಿದೆ.) ಈಗ ಉದಾಹರಣೆಗೆ ಸಯೀದನ ಓರಿಯಂಟಲಿಸಂ ಹಾಗೆ ತಿರಸ್ಕಾರಾರ್ಹ ಸಂಸ್ಕೃತಿ ಸಿದ್ಧಾಂತವೇನೂ ಅಲ್ಲ. ಅದೇ ರೀತಿ ಮಿಶೆಲ್ ಫುಕೋನ ಜ್ಞಾನ ಮತ್ತು ಅಧಿಕಾರ ಸಿದ್ಧಾಂತ, ಇಲ್ಯಿಚ್‌ನ ವರ್ನಾಕ್ಯುಲರ್ ಜೆಂಡರ್‌ನ ಕಲ್ಪನೆಗಳನ್ನು ಅವು ಅನ್ಯ ಪರಿಸರದಲ್ಲಿ ಹುಟ್ಟಿದುವು ಎಂದು ತಳ್ಳಿಹಾಕ ಲಾಗುವುದಿಲ್ಲ. ನಾವು ಹಾಗೆ ಮಾಡುತ್ತಿಲ್ಲ ಕೂಡ. ಆದರೆ ಅದೇ ಜಾಗತೀಕರಣವೆಂಬ ಪರಿಭಾಷೆ ನವವಸಾಹತುಶಾಹಿಯ ಹೊಸ ಹೆಸರಷ್ಟೆ.

ಈ ಸಿದ್ಧಾಂತಗಳ ಗೊಂದಲಗಳೇನಿದ್ದರೂ ನಮ್ಮಂಥ ಅಕ್ಷರಲೋಕದ ವರಿಗೆ ಮಾತ್ರ. ಬಹುಸಂಖ್ಯಾತ ಜನರಿಗೆ ಪ್ರಾಕ್ಟಿಕಲ್ಲಾಗಿ ಇರುವ ಸಮಸ್ಯೆಗಳು ಮತ್ತು ಸನ್ನಿವೇಶಗಳೇ ಬೇರೆ. ಅವರು ನೇರವಾಗಿ ಪರಿಣಾಮಗಳನ್ನು ಎದುರಿಸುವವರು.

ನಮ್ಮಲ್ಲಿನ ಬಹುಪಾಲು ಬುದ್ಧಿಜೀವಿ ಸಿದ್ಧಾಂತಿಗಳು ಬರೀ ನಿಷ್ಕ್ರಿಯ ಚಿಂತಕರು. ಸಾಮಾಜಿಕ ಭಾಗವಹಿಸುವಿಕೆ ಇಲ್ಲದವರು. ಸಿದ್ಧಾಂತಗಳಿಗೂ ಜೀವನ ವಿಧಾನಗಳಿಗೂ ಅಂತರ ಉಳ್ಳವರು. ನಮ್ಮಲ್ಲಿ ಪರಿಸರದ ಬಗ್ಗೆ ಅದ್ಭುತವಾಗಿ ಭಾಷಣ ಮಾಡುವವರು ಬಹಳ ಇದ್ದಾರೆ. ಆದರೆ ಅವರೆಲ್ಲರೂ ಆಡಿದಂತೆ ಸ್ವತಃ ಬದುಕುವುದಿಲ್ಲ. ಈ ಸಂದರ್ಭದಲ್ಲಿ ಡಿಎಸೆಸ್‌ನಲ್ಲಿನ ಬುದ್ಧಿಜೀವಿಗಳ, ಸೌಹಾರ್ದ ಸಮಾವೇಶವನ್ನು ಸಂಘಟಿಸಿದಂತಹ ಚಿಂತಕರ, ಕುದುರೆಮುಖ ಗಣಿ ಹೋರಾಟದ ಸಂಘಟಕರ ಕ್ರಿಯಾಶೀಲತೆಯನ್ನು ಮರೆಯುವಂತಿಲ್ಲ.

ಇನ್ನು ಒಂದಿಷ್ಟು ಸಂಸ್ಕೃತಿ ವಿಮರ್ಶೆಯ ವಿಚಾರ. ಕಲೆಗಾಗಿ ಕಲೆ ಎಂಬ ಕಾಲ ಇದಲ್ಲ. ರೂಪ ನಿಷ್ಠತೆಯು ಹಳತಾಗಿ ಹಳೇ ಕಾಲವಾಗಿದೆ. ಇತ್ತೀಚೆಗೆ ಕನ್ನಡ ಸಾಹಿತ್ಯ ವಿಮರ್ಶೆಯು ಸಂಸ್ಕೃತಿ ವಿಮರ್ಶೆಯ ಕಡೆಗೆ ಹೊರಳಿಕೊಳ್ಳುತ್ತಿರುವಂತೆ ಕಾಣುತ್ತಿದೆ, ನಿಜ. ಡಿ.ಆರ್. ನಾಗರಾಜರ ಸಾಹಿತ್ಯ ಕಥನವು ಸಂಸ್ಕೃತಿ ಕಥನವಾಗಿ ಹೊರಳಿಕೊಂಡಿರುವುದನ್ನು ನೋಡಿದರೆ, ಅಕಡೆಮಿಯ ಬರಗೂರು ಕಾಲದ ಉಪಸಂಸ್ಕೃತಿಮಾಲೆ ನೋಡಿದರೆ, ಕನ್ನಡ ವಿವಿಯ ಸಾಂಸ್ಕೃತಿಕ ಮುಖಾಮುಖಿ ಮಾಲಿಕೆಯನ್ನು ನೋಡಿದರೆ, ಕೆ.ವಿ.ಎನ್, ಜಿ.ರಾ, ರಹಮತ್, ಸುಬ್ಬಣ್ಣರ ಚಿಂತನೆಗಳು ಸಾಗುತ್ತಿರುವ ಹಾದಿಯನ್ನು ನೋಡಿದರೆ ಇಂದು ಸಾಹಿತ್ಯ ವಿಮರ್ಶೆಯು ಬರೀ ಸಾಹಿತ್ಯ ಸಂಸ್ಥೆಯ ವಿಶ್ಲೇಷಣೆಯಾಗಿ ಉಳಿದಿಲ್ಲ. ಅದು ಸಾಂಸ್ಕೃತಿಕ ಸಂಕಥನವಾಗಿ ಬೆಳೆದಿದೆ ಎನ್ನಿಸುತ್ತದೆ.

ಆದರೆ ಕನ್ನಡ ಸಂದರ್ಭದಲ್ಲಿ ಈ ಹಿಂದಿನ ಸಾಹಿತ್ಯ ವಿಮರ್ಶೆ ಸಂಸ್ಕೃತಿ ವಿಮರ್ಶೆಯಾಗಿರಲಿಲ್ಲವೇ? ಆಗಿತ್ತು. ನಾವು ಅದನ್ನು ಹಾಗೆ ಪಾರಿಭಾಷಿಕವಾಗಿ ಗುರ್ತಿಸಿರಲಿಲ್ಲ ಅಷ್ಟೆ. ಮುಳಿಯ, ಕಪಟರಾಳ, ಶಂಬಾ ಜೋಷಿ, ಕುವೆಂಪು, ಪುಣೇಕರ, ಕುರ್ತಕೋಟಿ, ಆಲೂರ ವೆಂಕಟರಾಯ, ಚಿ. ಮೂರ್ತಿ ಇಂಥವರ ಚಿಂತನೆಗಳನ್ನು ಸಂಸ್ಕೃತಿ ವಿಮರ್ಶೆಯಲ್ಲ ಎನ್ನಲು ಬಾರದು. ಒಂದೊಂದು ಕಾಲಘಟ್ಟದಲ್ಲಿ ಒಂದೊಂದು ಹೊಸ ಪರಿಭಾಷೆಗಳು ಪ್ರಾಧಾನ್ಯತೆ ಪಡೆಯುತ್ತಿರುತ್ತವೆ. ನವೋದಯದಿಂದ ಇಂದಿನವರೆಗಿನ ನಮ್ಮ ವಿಮರ್ಶಾಶಾಸ್ತ್ರೀಯ ಚರಿತ್ರೆಯನ್ನು ಗಮನಿಸಿದರೆ ಅದು ಖಂಡಿತಾ ಬಹುಮುಖಿಯಾಗಿರುವುದು ಕಾಣುತ್ತದೆ. ಕೆಲವೇಳೆ ವಿಮರ್ಶಾವಿಧಾನಗಳ ಕಗ್ಗಾಡೇ ಎದುರಾಗುತ್ತದೆ. ಸಂಸ್ಕೃತಿ ವಿಮರ್ಶೆಯೆಂಬುದು ಇಲ್ಲಿ ಅಂತರ್ಗತವಾಗಿದೆ. ಆದರೆ ಇನ್ನೂ ನಮ್ಮ ವಿಮರ್ಶಾ ಚರಿತ್ರೆಯ ಕನ್ನಡ ತಾತ್ವಿಕತೆ ನಿರ್ವಚನವಾಗಿಲ್ಲ. ಆದರೆ ಇತ್ತೀಚೆಗೆ ಆ ಕಡೆಗೆ ಫೋಕಸ್ಸು ಜಾಸ್ತಿಯಾಗಿದೆ. ಒಂದು ಮಾತು. ಈ ಹಿಂದೆ ಸಾಹಿತ್ಯ ವಿಮರ್ಶೆಯಲ್ಲಿ ಸಾಂಸ್ಕೃತಿಕ ದೃಷ್ಟಿಕೋನ ಇತ್ತು. ಆದರೆ ಸಂಸ್ಕೃತಿ ಅಧ್ಯಯನವೆಂಬ ಶಿಸ್ತೊಂದು ರೂಪಗೊಂಡಿರಲಿಲ್ಲ. ಈಗೀಗ ಸಾಹಿತ್ಯವನ್ನು ಸಂಸ್ಕೃತಿಯ ಉತ್ಪನ್ನವೆಂಬಂತೆ, ಸಾಹಿತ್ಯಪಠ್ಯವನ್ನು ಸಾಂಸ್ಕೃತಿಕ ಪಠ್ಯವೆಂಬಂತೆ ಕಾಣಲಾಗುತ್ತಿದೆ. ಸಾಹಿತ್ಯದ ಕಲಾತ್ಮಕ ಅಭಿವ್ಯಕ್ತಿ, ಸೌಂದರ್ಯಾತ್ಮಕ ಕೌಶಲ್ಯಗಳಿಗಿಂತ ವಿಮರ್ಶೆಯ ಒತ್ತು ಅದರ ಸಾಂಸ್ಕೃತಿಕ ಮಹತ್ವ, ಸಾಮಾಜಿಕ ಕಾಳಜಿಯ ಕಡೆಗೆ ಹೊರಳಿದೆ. ಜಾನಪದ, ನವಮೌಖಿಕತೆಯನ್ನು ನೋಡುವ ಕ್ರಮವೂ ಬದಲಾಗಿದೆ. ಸಂಸ್ಕೃತಿ ಅಧ್ಯಯನವೆಂಬ ಶಾಖೆಯೊಂದು ಕನ್ನಡದಲ್ಲೂ ಬೆಳೆಯುತ್ತಿದೆ.

ನಮ್ಮಲ್ಲಿ ಯಾವುದೇ ಅಧ್ಯಯನ ಶಿಸ್ತಿನ ತಾತ್ವಿಕತೆ ಮತ್ತು ವೈಧಾನಿಕತೆಯ ಬಗ್ಗೆ ತಲೆ ಕೆಡಿಸಿಕೊಳ್ಳುವುದು ಕಡಿಮೆ. ಹೇಗೋ ಅಧ್ಯಯನವು ಸಾಂದರ್ಭಿಕ ಅಗತ್ಯಗಳಿಗೆ ತಕ್ಕಂತೆ ನಡೆದುಬಿಡುತ್ತದೆ. ಆನಂತರ ಆ ನಡವಳಿಯ ತಾತ್ವಿಕತೆಗಳನ್ನು ಕಂಡುಕೊಳ್ಳಲಾಗುತ್ತದೆ. ಇದಕ್ಕೆ ತೌಲನಿಕ ಅಧ್ಯಯನ ಒಂದು ಉತ್ತಮ ಉದಾಹರಣೆ. ನಮ್ಮಲ್ಲಿ ತೌಲನಿಕ ಅಧ್ಯಯನದ ತತ್ವದ ಬಗ್ಗೆ ನಾವು ಹೆಚ್ಚು ತಲೆಕೆಡಿಸಿಕೊಂಡಿಲ್ಲ. ಸುಮ್ಮನೆ ನಮ್ಮ ಅಗತ್ಯಗಳಿಗೆ ತಕ್ಕಂತೆ ತುಲನೆ ನಡೆಸುತ್ತ ಬಂದಿದ್ದೇವೆ. ಆದರೆ ಇಂಗ್ಲಿಷ್ ಲೋಕದಲ್ಲಿ ತುಲನೆ ನಡೆಯುವುದಕ್ಕಿಂತ ಹೆಚ್ಚು ತುಲನಶಾಸ್ತ್ರ ಹೇಗಿರಬೇಕೆಂಬ ಬಗ್ಗೆಯೇ ಚರ್ಚೆ ನಡೆದಿದೆ. ಕನ್ನಡದಲ್ಲಿಂದು ಸಂಸ್ಕೃತಿ ವಿಮರ್ಶೆಯ ತಾತ್ವಿಕತೆ ಮತ್ತು ವೈಧಾನಿಕತೆಗಳ ಬಗೆಗೆ ಒಂದು ನಿರ್ದಿಷ್ಟರೂಪ ಇನ್ನೂ ಬಂದಿಲ್ಲ. ಅದಕ್ಕಿದು ಕೊನೆಗಾಲವೂ ಅಲ್ಲ.

ರಾಮಲಿಂಗಪ್ಪ ಟಿ. ಬೇಗೂರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೋಲಾರ



ಕರ್ನಾಟಕ ಏಕೀಕರಣಕ್ಕೆ ಒತ್ತಾಯ ತಂದದ್ದು ಮೂಲತಃ ಸಾಂಸ್ಕೃತಿಕ ಮತ್ತು ಸಾಹಿತ್ಯಕ ಭಾವಪೂರ್ಣ ಸೆಲೆಗಳಾದರೂ, ಹರಿದು ಹಂಚಿಹೋಗಿದ್ದ ವಿವಿಧ ಪ್ರದೇಶಗಳ ರಾಜಕೀಯ ನಾಯಕರುಗಳ ಮೇಲೆ ಒತ್ತಾಯ ತರಲು ಅನೇಕ ಸ್ವರೂಪದ ಚಳುವಳಿಗಳನ್ನೇ ನಡೆಸಬೇಕಾಯ್ತು. ಸಿಗುವ ಅಧಿಕಾರದ ಅವಕಾಶಗಳು ರಾಜಕೀಯವನ್ನು ಚಾಲಿಸುತ್ತವೆಯಾದರೂ, ತನ್ಮೂಲಕ ಎಲ್ಲ ಪ್ರದೇಶಗಳ ಸರ್ವಾಂಗೀಣ ಆರ್ಥಿಕ ಬೆಳವಣಿಗೆಯೂ ಉಂಟಾಗಿ, ಸಾಹಿತ್ಯ, ಸಂಸ್ಕೃತಿಯ ಮತ್ತು ಒಟ್ಟಾರೆ ಜೀವನದ ಮಟ್ಟ ಸುಧಾರಿಸಿ ಹಲವು ಪಟ್ಟು ವಿಕಾಸವಾಗುತ್ತದೆ ಎಂಬುದು ಎಲ್ಲರ ಆಶಯವಾಗಿತ್ತು. ಈ ಏಕೀಕೃತ ಕರ್ನಾಟಕ ಒಂದು ರೀತಿಯಲ್ಲಿ ಏಕೀಕೃತ ಭಾರತದ ಸಣ್ಣ ಪ್ರಮಾಣದ ಚಿತ್ರಣವೇ ಆಗಿದ್ದು, ಕರ್ನಾಟಕದವರಿಗೆ ತಮ್ಮನ್ನು ತಾವು "ಭಾರತ ಜನನಿಯ ತನುಜಾತೆ" ಎಂದು ಕಂಡುಕೊಳ್ಳುವುದು ಸಹಜ ಬೆಳವಣಿಗೆಯಂತೆ ಇತ್ತು.

ಇಂದು ರಾಜ್ಯ ಮಟ್ಟದಲ್ಲೂ, ಅಖಿಲ ಭಾರತ ಮಟ್ಟದಲ್ಲೂ ಮತ್ತೊಮ್ಮೆ ರಾಜ್ಯ ವಿಭಜನೆಯ ಪ್ರತ್ಯೇಕತೆಯ ಸೊಲ್ಲು ಎದ್ದಿದೆ. ಕರ್ನಾಟಕದ ಮಟ್ಟಿಗೆ ಇದು ಆತಂಕಕಾರಿ ಎಂದು ನಮ್ಮ ಅನಿಸಿಕೆ. ಈ ಸೊಲ್ಲಿನ ಹಿಂದೆ ವಾಸ್ತವದ ಕಾರಣಗಳು ಹಲವಾರು ಇರಬಹುದು. ಇವು ಅಪರಿಹಾರ್ಯವಲ್ಲ, ಈ ಕಾರಣಗಳನ್ನು ಒಂದು ಕುಟುಂಬದವರಂತೆ ಪರಿಹರಿಸಿಕೊಳ್ಳುವುದು ವಿವೇಕವೆಂದು ನಮ್ಮ ಅನಿಸಿಕೆ. ಪ್ರತ್ಯೇಕತೆ ರಾಜಕೀಯ ಶಕ್ತಿಗಳಿಗೆ ಮತ್ತಷ್ಟು ಅಧಿಕಾರದ ಅವಕಾಶ ಸೃಷ್ಟಿಸಬಹುದೇ ವಿನಾ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹೆಚ್ಚು ವಿಕಸನ ಅವಕಾಶವನ್ನೇನೂ ಅದು ಕಲ್ಪಿಸಲಾರದು ಎಂಬುದು ನಮ್ಮ ತಿಳಿವಳಿಕೆ. ಈ ಬಗ್ಗೆ ತಮ್ಮ ಅನಿಸಿಕೆಗಳನ್ನು ದಾಖಲಿಸಲು ಕೆಲವು ಹಿರಿಯರನ್ನು ಕೋರಲಾಗಿತ್ತು. ಪತ್ರಿಕೆಗೆ ಬಂದ ಪ್ರತಿಕ್ರಿಯೆಗಳಲ್ಲಿ ಕೆಲವನ್ನು ಇಲ್ಲಿ ಪ್ರಕಟಿಸಲಾಗಿದೆ. ಪ್ರತಿಕ್ರಿಯಿಸಿದ ಎಲ್ಲ ಮಹನೀಯರಿಗೂ 'ಹೊಸತು' ಕೃತಜ್ಞತೆ ತಿಳಿಸಬಯಸುತ್ತದೆ.

ಈ ಚರ್ಚೆಯನ್ನು ಸಂಯೋಜಿಸಲು ಸಹಕರಿಸಿದ ಪ್ರೊ॥ ಬರಗೂರು ರಾಮಚಂದ್ರಪ್ಪ, ಶ್ರೀ ರಾ. ನಂ. ಚಂದ್ರಶೇಖರ ಮತ್ತು ಶ್ರೀ ಕೆ. ಎಸ್. ಪಾರ್ಥಸಾರಥಿ ಅವರಿಗೆ 'ಹೊಸತು'ವಿನ ವಂದನೆಗಳು.

**– ಸಂಪಾದಕ**

## ನಂಜುಂಡಪ್ಪ ವರದಿ – ಒಂದು ಪಕ್ಷಿನೋಟ

**– ಡಾ॥ ಎಂ. ಸಿ. ಕೊಡಲಿ**

ನಮ್ಮ ದೇಶದಲ್ಲಿ ಪ್ರಾಂತೀಯ ಆರ್ಥಿಕ ಅಸಮಾನತೆಯನ್ನು ನಿವಾರಿಸುವ ದೃಷ್ಟಿಯಿಂದ ಅನೇಕ ಕಮೀಟಿಗಳನ್ನು ನೇಮಿಸಲಾಗಿತ್ತು. ಪಾಂಡೆ ಕಮಿಟಿ, ಚಕ್ರವರ್ತಿ ಕಮಿಟಿ ಮತ್ತು ದಾಂಡೇಕರ ಕಮಿಟಿಗಳು ಮುಖ್ಯವಾದವುಗಳು. ಕರ್ನಾಟಕ ಸರಕಾರವು ನೇಮಿಸಿದ ನಂಜುಂಡಪ್ಪ ಕಮಿಟಿಯ ವಿಶೇಷತೆ ಏನೆಂದರೆ, ಆರ್ಥಿಕ ಅಸಮಾನತೆಯನ್ನು ಅಳೆಯಲು ಅವರು ಅನುಸರಿಸಿದ ವಿಧಾನ. ಇದರಿಂದಾಗಿ ಈ ಕಮಿಟಿಯ ವರದಿ ನಮ್ಮ ರಾಷ್ಟ್ರದಲ್ಲಿ ಒಂದು ಮಾದರಿಯಾಗಿ ನಿಲ್ಲುವ ಯೋಗ್ಯತೆಯನ್ನು ಪಡೆದಿದೆ ಎಂದು ಹೇಳಬಹುದು.

ನಂಜುಂಡಪ್ಪ ಕಮಿಟಿ ತಾಲ್ಲೂಕನ್ನು ಒಂದು ಘಟಕ ಅಥವಾ ಏಕಮಾನವಾಗಿ ತೆಗೆದುಕೊಂಡು ಕರ್ನಾಟಕದಲ್ಲಿಯ ಎಲ್ಲ ೧೭೫ ತಾಲ್ಲೂಕುಗಳ ಆರ್ಥಿಕ ಅಭಿವೃದ್ಧಿಯ ಮಟ್ಟವನ್ನು ನಿರ್ಧರಿಸಿದೆ. ಪ್ರತಿ ತಾಲ್ಲೂಕಿನ ಆರ್ಥಿಕ ಮಟ್ಟವನ್ನು ನಿರ್ಧರಿಸುವಾಗ ಅವರು ತೆಗೆದುಕೊಂಡ ಮಾನದಂಡವೆಂದರೆ – ೫ ಮುಖ್ಯ ವಲಯಗಳಿಂದ ೩೫ ಸೂಚಿಕೆಗಳನ್ನು ಆರಿಸಿಕೊಂಡರು. ಅವುಗಳಾವುವೆಂದರೆ, ಬೇಸಾಯ ರಂಗದಿಂದ ೯ ಸೂಚಿಕೆಗಳು, ವಾಣಿಜ್ಯ, ಉದ್ದಿಮೆ, ವ್ಯಾಪಾರ ವಲಯದಿಂದ ೫ ಸೂಚಿಕೆಗಳು, ಆರ್ಥಿಕ ಮೂಲಭೂತ ಸೌಲಭ್ಯ ವಲಯದಿಂದ ೯ ಸೂಚಿಕೆಗಳು, ಸಾಮಾಜಿಕ ಮೂಲಭೂತ ಸೌಲಭ್ಯ ವಲಯದಿಂದ ೭ ಸೂಚಿಕೆಗಳು ಹಾಗೂ ಜನಸಂಖ್ಯೆಯ ೫ ಗುಣಲಕ್ಷಣಗಳು.

ಹೀಗೆ ಒಟ್ಟು ೩೫ ಸೂಚಿಕೆಗಳನ್ನು ತೆಗೆದುಕೊಂಡು ಅವರು ಒಂದು ವ್ಯಾಪಕ ಸಂಯುಕ್ತ ಅಭಿವೃದ್ಧಿ ಸೂಚಿಯನ್ನು ನಿರ್ಮಿಸಿದರು (Comprehensive Composite Development Index). ಹೀಗೆ ನಿರ್ಮಿಸಲಾದ ವ್ಯಾಪಕ ಸಂಯುಕ್ತ ಅಭಿವೃದ್ಧಿ ಸೂಚಿಯಿಂದ ಪ್ರತಿ ೧೭೫ ತಾಲ್ಲೂಕುಗಳ ಅಭಿವೃದ್ಧಿಯ ಮಟ್ಟವನ್ನು ಅಳೆಯಲಾಗಿದೆ. ಕರ್ನಾಟಕದ ೧೭೫ ತಾಲ್ಲೂಕುಗಳ ಪೈಕಿ ೧೧೪ ತಾಲ್ಲೂಕುಗಳು ರಾಜ್ಯದ ಸರಾಸರಿ ಅಭಿವೃದ್ಧಿಯ ಮಟ್ಟಕ್ಕಿಂತ ಕೆಳಗಿದ್ದವೆಂದು ತಿಳಿಯಿತು. ಕೇವಲ ೬೧ ತಾಲ್ಲೂಕುಗಳು ಮಾತ್ರ ರಾಜ್ಯದ ಸರಾಸರಿ ಅಭಿವೃದ್ಧಿಯ ಮಟ್ಟಕ್ಕಿಂತ ಮೇಲಿದ್ದವೆಂದು ತಿಳಿಯಿತು. ೧೧೪ ಹಿಂದುಳಿದ ತಾಲ್ಲೂಕುಗಳ ಪೈಕಿ ೫೯ ತಾಲ್ಲೂಕುಗಳು ಉತ್ತರ ಕರ್ನಾಟಕದಲ್ಲಿ ಹಾಗೂ ೫೫ ತಾಲ್ಲೂಕುಗಳು ದಕ್ಷಿಣ ಕರ್ನಾಟಕದಲ್ಲಿ ಇವೆಯೆಂದು ತಿಳಿಯಲಾಯಿತು.

ಹಳೆಯ ಮೈಸೂರಿನ ಭಾಗವಾದ ದಕ್ಷಿಣ ಕರ್ನಾಟಕದಲ್ಲಿ ೫೫ ತಾಲ್ಲೂಕುಗಳು ಹಿಂದುಳಿದ ತಾಲ್ಲೂಕುಗಳಾಗಿದ್ದವು. ಉತ್ತರ ಕರ್ನಾಟಕದ ಪ್ರದೇಶಗಳಾದ ಮುಂಬೈ ಕರ್ನಾಟಕ ಹಾಗೂ ಹೈದರಾಬಾದ್ ಕರ್ನಾಟಕಗಳಲ್ಲಿ ೫೯ ತಾಲ್ಲೂಕುಗಳು ಹಿಂದುಳಿದ ತಾಲ್ಲೂಕುಗಳಾಗಿದ್ದವು.

ಕರ್ನಾಟಕದಲ್ಲಿಯ ೧೧೪ ಹಿಂದುಳಿದ ತಾಲ್ಲೂಕುಗಳನ್ನು ಮೂರು ಭಾಗವಾಗಿ ವಿಂಗಡಿಸಿ, ೩೫ ತಾಲ್ಲೂಕುಗಳು ಹಿಂದುಳಿದ ತಾಲ್ಲೂಕುಗಳು, ೪೦ ತೀರಾ ಹಿಂದುಳಿದ ತಾಲ್ಲೂಕುಗಳು ಹಾಗೂ ೩೯ ಅತೀ ಹಿಂದುಳಿದ ತಾಲ್ಲೂಕುಗಳೆಂದು ವಿಂಗಡಿಸಲಾಯಿತು.

ಈ ೩೯ ಅತೀ ಹಿಂದುಳಿದ ತಾಲ್ಲೂಕುಗಳಲ್ಲಿ ೨೬ ತಾಲ್ಲೂಕುಗಳು ಉತ್ತರ ಕರ್ನಾಟಕದ ಭಾಗದಲ್ಲಿ ಹಾಗೂ ೧೩ ತಾಲ್ಲೂಕುಗಳು ದಕ್ಷಿಣ ಕರ್ನಾಟಕದ ಭಾಗದಲ್ಲಿ ಇವೆ.

ನಂಜುಂಡಪ್ಪ ವರದಿಯ ಪ್ರಕಾರ ೧೯೫೬ರಿಂದೀಚಿನವರೆಗೆ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದ ಭಾಗಗಳ ನಡುವಿನ ಆರ್ಥಿಕ ಅಸಮಾನತೆ ಕಡಿಮೆಯಾಗುವ

# ಕರ್ನಾಟಕ ಏಕೀಕರಣ

ಬದಲು ಹೆಚ್ಚುತ್ತಾ ಹೋಗಿದೆ.

೧. ಜಿಲ್ಲಾವಾರು ವ್ಯಕ್ತಿಯ ವರಮಾನ ತೆಗೆದುಕೊಂಡರೆ, ೧೯೭೦-೭೧ರಲ್ಲಿ ರಾಜ್ಯದ ಸರಾಸರಿ ವ್ಯಕ್ತಿಯ ವರಮಾನ ೬೮೫ ರೂ ಇತ್ತು. ಉತ್ತರ ಕರ್ನಾಟಕದ ಆಗಿನ ೮ ಜಿಲ್ಲೆಗಳ ಪೈಕಿ ೩ ಜಿಲ್ಲೆಗಳಲ್ಲಿ ಮಾತ್ರ (ಉತ್ತರ ಕನ್ನಡ, ರಾಯಚೂರ ಮತ್ತು ಬಳ್ಳಾರಿ) ವ್ಯಕ್ತಿಯ ವರಮಾನ ರಾಜ್ಯದ ಸರಾಸರಿಗಿಂತ ಹೆಚ್ಚಿಗೆ ಇತ್ತು.

ಆದರೆ ಇದು ದಕ್ಷಿಣ ಕರ್ನಾಟಕದ ೧೨ ಜಿಲ್ಲೆಗಳ ಪೈಕಿ ೬ ಜಿಲ್ಲೆಗಳಲ್ಲಿ (ಬೆಂಗಳೂರು, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಕೊಡಗು, ಶಿವಮೊಗ್ಗ ಮತ್ತು ಮೈಸೂರು) ರಾಜ್ಯದ ಸರಾಸರಿಗಿಂತ ಹೆಚ್ಚಿಗೆ ಇತ್ತು.

೧೯೯೭-೯೮ರಲ್ಲಿ ರಾಜ್ಯದ ವ್ಯಕ್ತಿಯ ಸರಾಸರಿ ವರಮಾನ ರೂ ೧೩,೬೨೧ಕ್ಕೆ ಏರಿತು. ಉತ್ತರ ಕರ್ನಾಟಕದ ಎಲ್ಲ ೮ ಜಿಲ್ಲೆಗಳಲ್ಲಿ ವ್ಯಕ್ತಿಯ ಸರಾಸರಿ ಆದಾಯ ಇದಕ್ಕಿಂತ ಕಡಿಮೆ ಇತ್ತು.

ದಕ್ಷಿಣ ಕರ್ನಾಟಕದ ೧೨ ಜಿಲ್ಲೆಗಳ ಪೈಕಿ ೬ ಜಿಲ್ಲೆಗಳಲ್ಲಿ (ಬೆಂಗಳೂರು, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಕೊಡಗು, ಮೈಸೂರು ಮತ್ತು ಶಿವಮೊಗ್ಗ) ವ್ಯಕ್ತಿಯ ಸರಾಸರಿ ಆದಾಯ ರಾಜ್ಯದ ಸರಾಸರಿಗಿಂತ ಹೆಚ್ಚಿಗೆ ಇತ್ತು.

**೨. ಉದ್ದಿಮೆ**: ೧೯೫೭ರಲ್ಲಿ ದಕ್ಷಿಣ ಕರ್ನಾಟಕದಲ್ಲಿ ೨/೩ರಷ್ಟು ಮತ್ತು ಉತ್ತರ ಕರ್ನಾಟಕದಲ್ಲಿ ೧/೩ರಷ್ಟು ಉದ್ದಿಮೆಗಳಿದ್ದವು. ೧೯೯೮-೯೯ರಲ್ಲಿಯೂ ಇದೇ ಪರಿಸ್ಥಿತಿ ಮುಂದುವರಿದಿದ್ದು, ದಕ್ಷಿಣ ಕರ್ನಾಟಕದಲ್ಲಿ ೩/೪ರಷ್ಟು ಉದ್ದಿಮೆ ಕೆಲಸಗಾರರಿದ್ದಾರೆ. ಇದು ಪ್ರಾಂತೀಯ ಅಸಮಾನತೆಗೆ ಬಹುಮುಖ್ಯ ಕಾರಣವೆಂದು ಹೇಳಬಹುದು. ಉದ್ಯಮ ದೃಷ್ಟಿಯಿಂದ ಪ್ರಗತಿ ಹೊಂದಿದ ಜಿಲ್ಲೆಗಳೆಂದರೆ ಬೆಂಗಳೂರು, ಧಾರವಾಡ, ಬೆಳಗಾಂವ, ದಕ್ಷಿಣ ಕನ್ನಡ ಮತ್ತು ಮೈಸೂರು.

**೩. ವಿದ್ಯುತ್ತೀಕರಣ** : ಇದನ್ನು ಸಾಮಾನ್ಯ ಆರ್ಥಿಕ ಅಭಿವೃದ್ಧಿಯ ಸೂಚ್ಯಾಂಕವೆಂದು ಹೇಳಲಾಗುತ್ತದೆ.

೧೯೫೯ರಲ್ಲಿ ಕರ್ನಾಟಕದಲ್ಲಿ ಕೇವಲ ಶೇಕಡಾ ೭ರಷ್ಟು ಪಟ್ಟಣ ಮತ್ತು ಗ್ರಾಮೀಣ ಪ್ರದೇಶಗಳಿಗೆ ವಿದ್ಯುತ್ ಪೂರೈಕೆಯಾಗುತ್ತಿತ್ತು.

ಉತ್ತರ ಕರ್ನಾಟಕದಲ್ಲಿ ಬಳ್ಳಾರಿಯನ್ನು ಹೊರತುಪಡಿಸಿ ಉಳಿದ ಎಲ್ಲ ಜಿಲ್ಲೆಗಳಲ್ಲಿ ಈ ಪ್ರಮಾಣ ಕೇವಲ ಶೇಕಡಾ ೧ ಇತ್ತು. ಆದರೆ ಬೆಂಗಳೂರು ಮತ್ತು ಮಂಗಳೂರು ಜಿಲ್ಲೆಗಳಲ್ಲಿ ಈ ಪ್ರಮಾಣ ಶೇಕಡಾ ೨೧ ಮತ್ತು ೧೪ ಇತ್ತು. ಅದು ಈಗ ಶೇಕಡಾ ೧೦೦ರ ಪ್ರಮಾಣ ಮುಟ್ಟಿದ್ದರೂ ಮಲೆನಾಡು ಹಾಗೂ ಕರಾವಳಿ ಜಿಲ್ಲೆಗಳಲ್ಲಿ ಅದು ಶೇಕಡಾ ೩೭.೫ ರಷ್ಟು ಚಿಕ್ಕ ಗ್ರಾಮಗಳಿಗೆ ವಿದ್ಯುತ್ ಪೂರೈಕೆ ಇನ್ನೂ ಆಗಬೇಕಾಗಿದೆ.

**೪. ರಸ್ತೆಗಳು** : ೧೯೫೯ರಲ್ಲಿ ರಾಜ್ಯದಲ್ಲಿ ಪ್ರತಿ ನೂರು ಚ. ಕಿಲೋಮೀಟರ್‌ಗೆ ೨೩ ಕಿಲೋಮೀಟರ್ ರಸ್ತೆಗಳಿದ್ದವು. ದಕ್ಷಿಣ ಕರ್ನಾಟಕದಲ್ಲಿ ೩ ಜಿಲ್ಲೆಗಳಲ್ಲಿ (ಚಿತ್ರದುರ್ಗ, ಕೊಡಗು ಮತ್ತು ಕೋಲಾರ) ಸರಾಸರಿ ರಸ್ತೆ ಕಡಿಮೆ ಇತ್ತು.

ಉತ್ತರ ಕರ್ನಾಟಕದಲ್ಲಿ ೬ ಜಿಲ್ಲೆಗಳಲ್ಲಿ (ಬೆಳಗಾಂವ, ಬಿಜಾಪೂರ, ಬಳ್ಳಾರಿ, ಬೀದರ, ಗುಲಬರ್ಗಾ, ರಾಯಚೂರು) ಸರಾಸರಿ ರಸ್ತೆ ಕಡಿಮೆ ಇತ್ತು.

ಆದರೆ ೧೯೯೧ರಲ್ಲಿ ರಾಜ್ಯದಲ್ಲಿ ಸರಾಸರಿ ರಸ್ತೆಗಳ ಉದ್ದ ಪ್ರತಿ ನೂರು ಚ.ಕಿ. ಮೀಟರಿಗೆ ೭೦ ಕಿ.ಮೀ. ಆಗಿದೆ. ದಕ್ಷಿಣ ಕರ್ನಾಟಕದಲ್ಲಿ ಕೇವಲ ಚಿತ್ರದುರ್ಗ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಮಾತ್ರ ಈ ಸರಾಸರಿ ಕಡಿಮೆ ಇತ್ತು. ಉತ್ತರ ಕರ್ನಾಟಕದ ಬೆಳಗಾಂವ, ಬಿಜಾಪೂರ, ಬಳ್ಳಾರಿ, ಬೀದರ, ಗುಲಬರ್ಗಾ, ರಾಯಚೂರುಗಳಲ್ಲಿ ಈ ಸರಾಸರಿ ಕಡಿಮೆ ಇದೆ.

**೫. ಬೇಸಾಯ ಕೂಲಿಕಾರರು** : ಬೇಸಾಯ ಕೂಲಿಕಾರರಲ್ಲಿ ಶೇಕಡಾ ೬೦ರಷ್ಟು ಉತ್ತರ ಕರ್ನಾಟಕದಲ್ಲಿ ಮತ್ತು ಶೇಕಡಾ ೪೦ರಷ್ಟು ದಕ್ಷಿಣ ಕರ್ನಾಟಕದಲ್ಲಿದ್ದಾರೆ.

ಕರ್ನಾಟಕದಲ್ಲಿ ಬೇಸಾಯ ಕೂಲಿಕಾರರ ಸಂಖ್ಯೆ ೬೨ ಲಕ್ಷ ೧೦ ಸಾವಿರ ಇದ್ದು, ಇದು ಒಟ್ಟು ಶ್ರಮಿಕರ ಪ್ರತಿಶತ ೨೬.೪ರಷ್ಟು (೨೦೦೧) ಆಗುತ್ತದೆ.

ಉತ್ತರ ಕರ್ನಾಟಕದಲ್ಲಿ ಒಟ್ಟು ಶ್ರಮಿಕರಲ್ಲಿ ಬೇಸಾಯ ಕೂಲಿಕಾರರ ಪ್ರಮಾಣ ಶೇಕಡಾ ೩೬.೨ರಷ್ಟು ಇದ್ದು, ದಕ್ಷಿಣ ಕರ್ನಾಟಕದಲ್ಲಿ ಅದು ೧೯.೪ರಷ್ಟು ಇದೆ.

**೬. ನೀರಾವರಿ** : ನೀರಾವರಿ ಸೌಕರ್ಯದಲ್ಲಿ ಮಾತ್ರ ಉತ್ತರ ಕರ್ನಾಟಕ ಬಹಳಷ್ಟು ಪ್ರಗತಿ ಸಾಧಿಸಿದೆ.

೧೯೫೭-೫೮ರಲ್ಲಿ ಕರ್ನಾಟಕದಲ್ಲಿ ನೀರಾವರಿ ಸೌಲಭ್ಯ ಕೇವಲ ಶೇಕಡಾ ೭.೫ ಮಾತ್ರ ಇತ್ತು. ಅಂದರೆ ೭.೬ ಲಕ್ಷ ಹೆಕ್ಟೇರ್ ಪ್ರದೇಶ ನೀರಾವರಿ ಸೌಲಭ್ಯ ಹೊಂದಿತ್ತು.

ಇದರಲ್ಲಿ ಕೇವಲ ಶೇಕಡಾ ೨೯ರಷ್ಟು ಭಾಗ ಮಾತ್ರ ಉತ್ತರ ಕರ್ನಾಟಕದಲ್ಲಿಯೂ, ಶೇಕಡಾ ೭೧ರಷ್ಟು ಭಾಗ ದಕ್ಷಿಣ ಕರ್ನಾಟಕದಲ್ಲಿಯೂ ಇತ್ತು.

ಅದೇ ೨೦೦೧ರಲ್ಲಿ ಕರ್ನಾಟಕದಲ್ಲಿ ನೀರಾವರಿ ಸೌಲಭ್ಯ ೨೫.೫ ಲಕ್ಷ ಹೆಕ್ಟೇರಿಗೆ ಹೆಚ್ಚಿತು. ಇದರಲ್ಲೂ ಉತ್ತರ ಕರ್ನಾಟಕದ ಪಾಲು ಶೇಕಡಾ ೫೮ ಮತ್ತು ದಕ್ಷಿಣ ಕರ್ನಾಟಕದ ಪಾಲು ೪೨ ಆಗಿದೆ.

**೭. ಆರ್ಥಿಕ ಸಂಕಷ್ಟ**: ಬಡತನ ರೇಖೆಯ ಕೆಳಗಿರುವ ಜನ ಉತ್ತರ ಕರ್ನಾಟಕದಲ್ಲಿ ಶೇಕಡಾ ೩೭.೨೯, ದಕ್ಷಿಣ ಕರ್ನಾಟಕದಲ್ಲಿ ಶೇಕಡಾ ೨೮.೭೧.

**ಅಸುರಕ್ಷಿತ ಹೆರಿಗೆಗಳು**

ಉತ್ತರ ಕರ್ನಾಟಕದಲ್ಲಿ ಶೇಕಡಾ ೪೨.೭೮, ದಕ್ಷಿಣ ಕರ್ನಾಟಕದಲ್ಲಿ ಶೇಕಡಾ ೨೭.೨೯.

**ಪೌಷ್ಟಿಕ ಆಹಾರದ ಕೊರತೆ ಇರುವ 5 ವರುಷದ ಒಳಗಿನ ಮಕ್ಕಳು**

ಉತ್ತರ ಕರ್ನಾಟಕದಲ್ಲಿ ಶೇಕಡಾ ೬೨, ದಕ್ಷಿಣ ಕರ್ನಾಟಕದಲ್ಲಿ ಶೇಕಡಾ ೫೩.೬೪.

**ಶಾಲೆಗೆ ಹೋಗದ ಮಕ್ಕಳ ಪ್ರಮಾಣ (೬ ರಿಂದ ೧೪ ವರುಷ)**

ಉತ್ತರ ಕರ್ನಾಟಕದಲ್ಲಿ ಪ್ರತಿಶತ ೧೫.೨೧, ದಕ್ಷಿಣ ಕರ್ನಾಟಕದಲ್ಲಿ ಪ್ರತಿಶತ ೫.೫೩.

**೮. ಸಾರ್ವಜನಿಕ ಸೇವೆ - ಸಾಂಸ್ಕೃತಿಕ** : ಕರ್ನಾಟಕ ಲೋಕಸೇವಾ ಆಯೋಗದಿಂದ ನೇಮಿಸಲ್ಪಟ್ಟ (೧೯೯೨-೨೦೦೧) ಗೆಜೆಟೆಡ್/ನಾನ್ ಗೆಜೆಟೆಡ್ ಅಧಿಕಾರಿಗಳು.

ಉತ್ತರ ಕರ್ನಾಟಕದ ಭಾಗ ಶೇಕಡಾ ೨೭.೮೯, ದಕ್ಷಿಣ ಕರ್ನಾಟಕದ ಭಾಗ ೭೨.೧೧.

ಲೋಕಸೇವಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರು (೧೯೫೬-೨೦೦೨).

೧೨ ಅಧ್ಯಕ್ಷರ ಪೈಕಿ – ೯ ದಕ್ಷಿಣ ಕರ್ನಾಟಕದವರು

೨ ಉತ್ತರ ಕರ್ನಾಟಕ – ೧ ಹೊರಗಿನವರು

೫೫ ಸದಸ್ಯರಲ್ಲಿ – ೩೮ ದಕ್ಷಿಣ ಕರ್ನಾಟಕದವರು

– ಮಂಡಳಿಗಳ ಅಧ್ಯಕ್ಷರು (೧೯೯೯-೨೦೦೦)ದಲ್ಲಿ

೪೧ ಸಾರ್ವಜನಿಕ ಸಂಸ್ಥೆಗಳ ಪೈಕಿ ೩/೪ರಷ್ಟು ದಕ್ಷಿಣ ಕರ್ನಾಟಕದವರು. ವಿಶ್ವವಿದ್ಯಾಲಯಗಳ ಉಪಕುಲಪತಿಗಳ ನೇಮಕದಲ್ಲಿ ಹೆಚ್ಚು ಪಾಲು ದಕ್ಷಿಣ ಕರ್ನಾಟಕ.

ಯೋಜನಾ ಮಂಡಳಿ ಸದಸ್ಯರುಗಳು : ದಕ್ಷಿಣ ಕರ್ನಾಟಕಕ್ಕೆ ಸಿಂಹಪಾಲು.

ವಿವಿಧ ಅಕೆಡಮಿಗಳಿಂದ ಕೊಡಮಾಡಿದ ಅವಾರ್ಡ್‌ಗಳು – ೩/೪ರಷ್ಟು ದಕ್ಷಿಣ ಕರ್ನಾಟಕಕ್ಕೆ.

ರಾಜ್ಯೋತ್ಸವ ಅವಾರ್ಡ್‌ಗಳು – ೨/೩ರಷ್ಟು ದಕ್ಷಿಣ ಕರ್ನಾಟಕಕ್ಕೆ.

**ಪರಿಹಾರ** : ಕರ್ನಾಟಕದ ಹಿಂದುಳಿದ ಪ್ರದೇಶಗಳ ಅಭಿವೃದ್ಧಿಗಾಗಿ ನಂಜುಂಡಪ್ಪ ಕಮಿಟಿ ೮ ವರುಷದ ಒಂದು ವಿಶೇಷ ಅಭಿವೃದ್ಧಿ ಯೋಜನೆಯನ್ನು ಸೂಚಿಸಿದೆ. ೨೦೦೩ ರಿಂದ ಪ್ರಾರಂಭವಾಗುವ ಈ ಯೋಜನೆ ೨೦೧೦ಕ್ಕೆ ಮುಗಿಯುತ್ತದೆ. ಈ ವಿಶೇಷ ಯೋಜನೆಯ ವೆಚ್ಚ ೧೬ ಸಾವಿರ ಕೋಟಿ ರೂಪಾಯಿಗಳದ್ದಾಗಿದ್ದು, ಈ ಮೊತ್ತದಲ್ಲಿ ಉತ್ತರ ಕರ್ನಾಟಕದ ಪಾಲು ಶೇಕಡಾ ೬೦ರಷ್ಟಿದೆ. ಈ ಶೇಕಡಾ ೬೦ರಲ್ಲಿ, ಶೇಕಡಾ ೪೦ ಗುಲಬರ್ಗಾ ಡಿವಿಜನ್ನಿಗೆ ಶೇಕಡಾ ೨೦ ಬೆಳಗಾಂವ ಡಿವಿಜನ್ನಿಗೆ ವೆಚ್ಚಮಾಡಬೇಕೆಂದು ಸೂಚಿಸಲಾಗಿದೆ. ಉತ್ತರ ಕರ್ನಾಟಕಕ್ಕೆ ಒಟ್ಟು ವೆಚ್ಚ ೯ ಸಾವಿರದ ೬ ನೂರು ಕೋಟಿ ರೂಪಾಯಿಗಳು.

ಇನ್ನುಳಿದ ೬ ಸಾವಿರದ ೪ ನೂರು ಕೋಟಿ ರೂಪಾಯಿಗಳಲ್ಲಿ ಒಟ್ಟು ವೆಚ್ಚದ ಶೇಕಡಾ ೨೫ ಬೆಂಗಳೂರು ಡಿವಿಜನ್ನಿಗೆ ಮತ್ತು ಶೇಕಡಾ ೧೫ರಷ್ಟು ಮೈಸೂರು ಡಿವಿಜನ್ನಿಗೆ ಎಂದು ಸೂಚಿಸಲಾಗಿದೆ.

ಈ ಮೊತ್ತವನ್ನು ಬೇಸಾಯ, ಗ್ರಾಮೀಣ ಅಭಿವೃದ್ಧಿ, ನೀರಾವರಿ, ಶಕ್ತಿ ಉತ್ಪಾದನೆ, ಉದ್ದಿಮೆ, ಸಾರಿಗೆ, ವಿಜ್ಞಾನ ಮತ್ತು ತಂತ್ರಜ್ಞಾನ, ಸಾಮಾಜಿಕ ಸೇವೆಗಳಾದ ಆರೋಗ್ಯ, ಶಿಕ್ಷಣ, ಕ್ರೀಡೆ, ಪ್ರವಾಸೋದ್ಯಮ, ನಗರಾಭಿವೃದ್ಧಿ, ನಗರ ಪ್ರದೇಶಗಳಲ್ಲಿ ನೀರಿನ ಪೂರೈಕೆ, ಸಮಾಜ ಕಲ್ಯಾಣ ಮತ್ತು ಮಹಿಳೆಯರ ಅಭಿವೃದ್ಧಿಗಾಗಿ ಖರ್ಚು ಮಾಡಲು ಸೂಚಿಸಿದೆ.

**ಶಿಫಾರಸ್ಸುಗಳು**

ಬೇಸಾಯ : ವಾರ್ಷಿಕ ಯೋಜನೆಗಳಲ್ಲಿ ಬೇಸಾಯದ ಪಾಲು ಶೇಕಡಾ ೯.೯೪ ರಿಂದ ೨.೮೪ಕ್ಕೆ ಇಳಿದಿದೆ. ಬೇಸಾಯದ ಅಭಿವೃದ್ಧಿಗೆ ಹೆಚ್ಚಿನ ಗಮನ ಹರಿಸಬೇಕೆಂದು ಕಮಿಟಿ ಹೇಳಿದೆ.

ಬೇಸಾಯದ ಅಭಿವೃದ್ಧಿಯಿಂದ ನೋಡಲಾಗಿ, ಉತ್ತರ ಕರ್ನಾಟಕದಲ್ಲಿ ೫೦ ತಾಲ್ಲೂಕುಗಳು ಮತ್ತು ದಕ್ಷಿಣ ಕರ್ನಾಟಕದಲ್ಲಿ ೩೮ ತಾಲ್ಲೂಕುಗಳು ರಾಜ್ಯದ ಸರಾಸರಿ ಅಭಿವೃದ್ಧಿಯ ಮಟ್ಟಕ್ಕಿಂತ ಕೆಳಗಿವೆ. ರಾಜ್ಯದ ೩೩ ತಾಲ್ಲೂಕುಗಳಲ್ಲಿ ನಿಯಂತ್ರಿತ ಬೇಸಾಯ ಮಾರುಕಟ್ಟೆಗಳಿಲ್ಲ, ಅವುಗಳ ಪೈಕಿ ೨೨ ತಾಲ್ಲೂಕುಗಳು ಉತ್ತರ ಕರ್ನಾಟಕದಲ್ಲಿವೆ, ೧೧ ತಾಲ್ಲೂಕುಗಳು ದಕ್ಷಿಣ ಕರ್ನಾಟಕದಲ್ಲಿವೆ. ಈ ತಾಲ್ಲೂಕುಗಳಲ್ಲಿ ಬೇಸಾಯ ಮಾರುಕಟ್ಟೆಗಳನ್ನು ಸ್ಥಾಪಿಸಬೇಕು. ಪ್ರತಿಯೊಂದು ಜಿಲ್ಲೆಯಲ್ಲಿ ಬೇಸಾಯ ತರಬೇತಿ ಕೇಂದ್ರ ಬೇಕು. ತೋಟಗಾರಿಕೆ ಬೆಳೆಗಳಿಗೆ ಪ್ರೋತ್ಸಾಹ ಬೇಕು.

ಪಶುಸಂಗೋಪನೆ ಮತ್ತು ಮೀನುಗಾರಿಕೆಗೆ ಪ್ರೋತ್ಸಾಹ. ಉತ್ತರ ಕರ್ನಾಟಕದ ಕೆಳಗಿನ ತಾಲ್ಲೂಕುಗಳಲ್ಲಿ ರೇಷ್ಮೆ ಅಭಿವೃದ್ಧಿಗೆ ಅವಕಾಶವಿದೆಯೆಂದು ಕಮಿಟಿ ಹೇಳಿದೆ : ಬೆಳಗಾಂವ, ಖಾನಾಪೂರ, ಹುಕ್ಕೇರಿ, ಬೈಲಹೊಂಗಲ, ಸವದತ್ತಿ, ಧಾರವಾಡ, ಭಟ್ಕಳ, ಯಲ್ಲಾಪುರ, ಕಾರವಾರ, ಅಂಕೋಲಾ, ಸುಪಾ, ಸಿರ್ಸಿ, ಕುಮಟಾ, ಸಿದ್ಧಾಪುರ, ಹೊನ್ನಾವರ, ಹಳ್ಯಾಳ, ಮುಂಡಗೋಡ.

**ನೀರಾವರಿ** : ಉತ್ತರ ಕರ್ನಾಟಕದ ಭಾರಿ ಮತ್ತು ಸಣ್ಣ ನೀರಾವರಿ ಯೋಜನೆಗಳನ್ನು ಪೂರ್ತಿಗೊಳಿಸುವುದು : ಅವು ಯಾವುವೆಂದರೆ,

ಕೃಷ್ಣಾ ಮೇಲ್ದಂಡೆ I - II, ಹಿಪ್ಪರಗಿ, ಘಟಪ್ರಭಾ III, ಮಾರ್ಕಾಂಡೇಯ, ರಾಮಥಾಲಾ, ಭೀಮಾ, ತುಂಗಾ ಮೇಲ್ದಂಡೆ II, ಸಿಂಗಟಾಲೂರು, ಇಟಗಿ, ಸಾಸ್ವಾಡ, ಬಸಾಪೂರ, ಗಂಡೋರಿನಾಲಾ, ಹೊಟಿರಾಯನ ಹಳ್ಳ.

ನೀರಾವರಿ ಸೌಕರ್ಯದ ಉಪಯೋಗದಲ್ಲಿ ಉತ್ತರ ಕರ್ನಾಟಕ ಹಿಂದುಳಿದಿದ್ದು, ಕೇವಲ ಶೇಕಡಾ ೩.೨ರಷ್ಟು ಮಾತ್ರ ಉಪಯೋಗಿಸಲಾಗಿದೆ.

**ಶಕ್ತಿಯ ಬಳಕೆ** : ಉತ್ತರ ಕರ್ನಾಟಕದಲ್ಲಿ ರಾಜ್ಯದ ಒಟ್ಟು ಶಕ್ತಿಯಲ್ಲಿ ಶೇಕಡಾ ೨೪.೨೧ ಮಾತ್ರ ಬಳಕೆಯಾಗುತ್ತಿದ್ದು, ಉಳಿದ ಶೇಕಡಾ ೭೫.೭೯ ದಕ್ಷಿಣ ಕರ್ನಾಟಕದಲ್ಲಿ ಬಳಕೆಯಾಗುತ್ತಿದೆ. ಶಕ್ತಿಯ ಉತ್ಪಾದನೆ ಹೆಚ್ಚಬೇಕು ಮತ್ತು ಒಟ್ಟು ಶಕ್ತಿಯ ಶೇಕಡಾ ೪೦ರಷ್ಟು ಉತ್ತರ ಕರ್ನಾಟಕಕ್ಕೆ ಮೀಸಲಾಗಿರಬೇಕು.

**ಉದ್ದಿಮೆ** : ಉತ್ತರ ಕರ್ನಾಟಕದ ೬೬ ತಾಲ್ಲೂಕುಗಳು ಮತ್ತು ದಕ್ಷಿಣ ಕರ್ನಾಟಕದ ೬೬ ತಾಲ್ಲೂಕುಗಳು ರಾಜ್ಯದ ಸರಾಸರಿ ಉದ್ದಿಮೆ ಅಭಿವೃದ್ಧಿಗಿಂತ ಹಿಂದುಳಿದಿವೆ. ಉತ್ತರ ಕರ್ನಾಟಕಕ್ಕೆ ಪ್ರತ್ಯೇಕ 'ರಾಜ್ಯ ಹಣಕಾಸು ನಿಗಮ' ಸ್ಥಾಪನೆಯಾಗಬೇಕೆಂದು ಕಮಿಟಿ ಹೇಳಿದೆ.

**ರಸ್ತೆ**: ಆರ್ಥಿಕ ಅಭಿವೃದ್ಧಿಯಲ್ಲಿ ರಸ್ತೆಗಳ ಪಾತ್ರ ಹಿರಿದು. ರಾಜ್ಯದಲ್ಲಿ ೯೦ ತಾಲ್ಲೂಕುಗಳು ರಸ್ತೆಯ ದೃಷ್ಟಿಯಿಂದ ಹಿಂದುಳಿದಿವೆ. ಇದರಲ್ಲಿ ೬೧ ತಾಲ್ಲೂಕುಗಳು ಉತ್ತರ ಕರ್ನಾಟಕದಲ್ಲಿ ಮತ್ತು ೨೯ ತಾಲ್ಲೂಕುಗಳು ದಕ್ಷಿಣ ಕರ್ನಾಟಕದಲ್ಲಿ ಇವೆ.

ಹುಬ್ಬಳ್ಳಿ-ಅಂಕೋಲಾ ರೇಲ್ವೆ ನಿರ್ಮಾಣ, ಭಟ್ಕಳ, ಕಾರವಾರ ಮತ್ತು ತದಡಿ ಬಂದರುಗಳ ಅಭಿವೃದ್ಧಿ.

**ಮಾನವ ಅಭಿವೃದ್ಧಿ**: ಆರೋಗ್ಯ, ಶಿಕ್ಷಣಕ್ಕೆ ಹೆಚ್ಚಿನ ಪ್ರಾಧಾನ್ಯತೆ, ಗ್ರಾಮೀಣ ಕುಡಿಯುವ ನೀರಿನ ಯೋಜನೆಗಳು, ಗ್ರಾಮೀಣ ನೈರ್ಮಲ್ಯೀಕರಣ, ಧಾರವಾಡದ Mental hospital ಅನ್ನು NIMHANSದಂತೆ ಅಭಿವೃದ್ಧಿಗೊಳಿಸುವುದು.

ಉತ್ತರ ಕರ್ನಾಟಕದ ಪಟ್ಟಣ ಪ್ರದೇಶಗಳಲ್ಲಿ ಕುಡಿಯುವ ನೀರಿನ ಯೋಜನೆ, ಉತ್ತರ ಕರ್ನಾಟಕಕ್ಕೆ ಪ್ರತ್ಯೇಕ ಜಲಮಂಡಳಿ ರಚನೆ, ನಗರಗಳಲ್ಲಿ ಕೊಳಚೆ ಪ್ರದೇಶಗಳ ಸುಧಾರಣೆ ಮತ್ತು ಮನೆ ನಿರ್ಮಾಣ, ವಿಜ್ಞಾನ ಮತ್ತು ತಂತ್ರಜ್ಞಾನಕ್ಕೆ ಪ್ರೋತ್ಸಾಹ, ಸಾರ್ವಜನಿಕ ಸಂಸ್ಥೆಗಳಲ್ಲಿ, ಕರ್ನಾಟಕ ಲೋಕಸೇವಾ ಆಯೋಗ ಯೋಜನಾ ಮಂಡಳಿ ಮತ್ತು ವಿಶ್ವವಿದ್ಯಾಲಯಗಳ ಉಪಕುಲಪತಿಗಳನ್ನು ನೇಮಿಸುವಾಗ ಉತ್ತರ ಕರ್ನಾಟಕಕ್ಕೆ ಪ್ರಾಧಾನ್ಯತೆ ಕೊಡಬೇಕು. ೩ನೇ ಗ್ರೂಪ್ ನೌಕರಿಯಲ್ಲಿ ಶೇಕಡಾ ೮೦; ೪ನೇ ಗ್ರೂಪ್ ನೌಕರಿಯಲ್ಲಿ ಶೇಕಡಾ ೧೦೦, ಸ್ಥಳೀಯರಿಗೆ ಅವಕಾಶ. ಉತ್ತರ ಕರ್ನಾಟಕ ಕಲೆ ಮತ್ತು ಸಂಸ್ಕೃತಿಗೆ ಪ್ರೋತ್ಸಾಹ, ರಂಗಮಂದಿರ, ಆಟದ ಮೈದಾನ ಮತ್ತು ತರಬೇತಿ ಕೇಂದ್ರಗಳ ಸ್ಥಾಪನೆ.

ಪ್ರವಾಸೋದ್ಯಮದ ಅಭಿವೃದ್ಧಿಯ ದೃಷ್ಟಿಯಿಂದ ಉತ್ತರ ಕರ್ನಾಟಕದಲ್ಲಿಯ ಪ್ರೇಕ್ಷಣೀಯ ಸ್ಥಳಗಳ ಅಭಿವೃದ್ಧಿ, ಬಿಜಾಪೂರದಲ್ಲಿ ಮಹಿಳಾ ವಿಶ್ವವಿದ್ಯಾಲಯ ಸ್ಥಾಪನೆ. ಉತ್ತರ ಕರ್ನಾಟಕದಲ್ಲಿ ಹೈಕೋರ್ಟ್ ಪೀಠ ಸ್ಥಾಪಿಸಬೇಕೆಂದು ಮಧ್ಯಂತರ ವರದಿಯಲ್ಲಿಯೇ ಸೂಚಿಸಲಾಗಿದೆ.

ಇದೊಂದು ವೈಜ್ಞಾನಿಕ ದೃಷ್ಟಿಕೋನದಿಂದ ತಯಾರಿಸಿದ ವರದಿಯಾಗಿದೆ. ಈ ವರದಿಯ ಅನುಷ್ಠಾನ ಬಹಳ ನಿಷ್ಠೆಯಿಂದ ಆಗಬೇಕಾಗಿದೆ. ಅಂದರೆ ಮಾತ್ರ ಕರ್ನಾಟಕದ ಅಭಿವೃದ್ಧಿ ಒಂದು ಸಮತೋಲ ಅಭಿವೃದ್ಧಿಯಾಗುತ್ತದೆ.

**ಡಾ|| ಎಂ. ಸಿ. ಕೊಡಲಿ**, ಶ್ರೀನಗರ
ಹಳ್ಯಾಳ ರೋಡ್, ಧಾರವಾಡ - ೫೮೦ ೦೦೩

## ಅಖಂಡ ಕರ್ನಾಟಕದ ಸಿದ್ಧಿಗೆ ವಿಧಾನಸೌಧದ ಧೀಮಂತರು ವಿಶಾಲಮತಿಗಳಾಗಬೇಕು

– ಕಯ್ಯಾರ ಕಿಞ್ಞಣ್ಣ ರೈ

ಪ್ರಪಂಚದ ಇತಿಹಾಸವನ್ನು ಪ್ರಾಚೀನ ಕಾಲದಿಂದ ಆಧುನಿಕದವರೆಗೂ ಸಮೀಕ್ಷಿಸಿದಲ್ಲಿ ನಮಗೆ ಜನಜೀವನದ ಉತ್ತಮಿಕೆಯ ಉದ್ದೇಶದಿಂದ ನಾನಾ ರೂಪದಲ್ಲಿ ಆಡಳಿತದ ವ್ಯವಸ್ಥೆ ಇದ್ದದ್ದನ್ನು – ಇರುವುದನ್ನು ನಾವು ಪರಿಗಣಿಸಬಹುದು. ಭಾರತದಲ್ಲಿಯೇ ಅಂಗವಂಗ ಕಳಿಂಗಾದಿ ಐವತ್ತಾರು ದೇಶಗಳು – ರಾಜ್ಯಗಳು ಪ್ರಾಚೀನ ಕಾಲದಿಂದಲೇ ಇದ್ದ

ಇಂದಿರಾ ಗಾಂಧಿಯವರು ೧೮೦ ಜಿಲ್ಲೆಗಳನ್ನು ಹಿಂದುಳಿದವೆಂದು ಗುರ್ತಿಸಿ ಅವುಗಳ ಬೆಳವಣಿಗೆಗೆ ಹೆಚ್ಚು ಒತ್ತುಕೊಡಬೇಕು ಎಂದು ಹೇಳಿದಾಗಿನ ಒಂದು ಸ್ವಾರಸ್ಯದ ಸಂಗತಿ : ಉತ್ತರ ಪ್ರದೇಶದ ಮಂಕಾಪುರ ಜಿಲ್ಲೆ ಅಂದು ಅತಿ ಹಿಂದುಳಿದಿದ್ದು, ಅಲ್ಲಿಯ ಶಿಕ್ಷಣ, ಆರೋಗ್ಯ ಎಲ್ಲವೂ ಇಲ್ಲವೇ ಇಲ್ಲವೆನ್ನುವಷ್ಟು ಹದಗೆಟ್ಟಿತ್ತು. ವಿದ್ಯುತ್ತಿನ ಜಾಲವಂತೂ ಇರಲೇ ಇಲ್ಲ. ಆಗ ದೂರ ಸಂಚಾರದ ಆಧುನೀಕರಣದ ಹುಯ್ಲು ಎದ್ದಿದ್ದು, ವಿದ್ಯುನ್ಮಾನ ಉಪಕರಣಗಳನ್ನು ತಯಾರಿಸುವ ಮೂರು ಘಟಕಗಳನ್ನು ಅಲ್ಲಿಯ ಆರ್ಥಿಕ ಬೆಳವಣಿಗೆಗೆಂದು ಸ್ಥಾಪಿಸುವ ತೀರ್ಮಾನವಾಗಿತ್ತು. ಇದರಲ್ಲಿ ಒಂದನ್ನು ಮಂಕಾಪುರಕ್ಕೆ ನೀಡಲಾಯ್ತು. ಪರಿಣಾಮ ಈ ಘಟಕ ಅಲ್ಲಿ ಬರಲು ಹತ್ತಾರು ವರ್ಷಗಳಾದುವು, ಹಾಗೂ ದೇಶದ ದೂರ ಸಂಪರ್ಕ ವಿಕಾಸಕ್ಕೆ ಇದು ಏನೇನೂ ಸಹಾಯ ಮಾಡಲಾಗಲಿಲ್ಲ. ಬೆಂಗಳೂರಿನ ಐಟಿಐನಲ್ಲಿ ತಯಾರಿಸಿದ ಉಪಕರಣಗಳನ್ನು ಮಂಕಾಪುರದಲ್ಲಿ ತಯಾರಿಸಿದ್ದೆಂದು ಪುಸ್ತಕದಲ್ಲಿ ತೋರಿಸಿ ಅಲ್ಲಿ ಲಾಭ ತೋರಿಸಿದರು. ಹಾಗೂ ದೇಶದ ಮೂರೂ ಕಡೆ – ಬೆಂಗಳೂರು, ಪಾಲ್ಕಾಡ್, ಮಂಕಾಪುರ – ಉತ್ಪನ್ನಗಳನ್ನು ಒಟ್ಟಾಗಿ ತೋರಿಸಿ, ಮಂಕಾಪುರದವರಿಗೂ ಬೋನಸ್ ಹಂಚಿದರು. ಈ ಘಟಕ ತಾನಿದ್ದ ಕಾಲವೆಲ್ಲಾ ರೋಗಗ್ರಸ್ತವಾಗಿ ಈಗ ಮುಚ್ಚಿಕೊಂಡಿದೆ. ಯಾವುದು ಆರ್ಥಿಕವಾಗಿ ಅಸಾಧುವೋ ಅವಾಸ್ತವವೋ ಅಂಥದನ್ನು ರಾಜಕೀಯವಾಗಿ ನಿರ್ಧರಿಸಲು ಹೊರಟರೆ ಬೆಳವಣಿಗೆಯಾಗುವುದಿಲ್ಲ ಎಂಬುದಕ್ಕೆ ಇದು ಒಂದು ಉದಾಹರಣೆ. ಬೆಂಗಳೂರಿನಲ್ಲಿ ಆಗುವ ಎಲ್ಲಾ ಕೆಲಸಗಳೂ ಉತ್ತರ ಕರ್ನಾಟಕದಲ್ಲಿ ಸದ್ಯದಲ್ಲಂತೂ ಆಗುವುದಿಲ್ಲ. ಆದರೆ ಅಲ್ಲಿಯ ಪ್ರದೇಶದ ಪ್ರಾಕೃತಿಕ ಸಂಪತ್ತು ಮತ್ತು ಸಾಮಾಜಿಕ ಪರಿಸರಕ್ಕೆ ಒಗ್ಗುವ ಅನೇಕ ಆರ್ಥಿಕ ಯೋಜನೆಗಳಿಗೆ ವಿಪುಲ ಅವಕಾಶವಿದೆ, ಅವಕ್ಕಾಗಿ ಹೋರಾಟವಾಗಬೇಕು.

ವಿಷಯ ಗೊತ್ತಾಗುತ್ತದೆ. ಇಷ್ಟು ದೇಶಗಳ ವ್ಯವಸ್ಥೆಗೆ ಮೂಲ ಸಿದ್ಧಾಂತವೆಂದರೆ ದೇಶದ ಆಡಳಿತ ವ್ಯವಸ್ಥೆ ಜನತೆಗೆ ಸರಿಯಾಗಿ ತಿಳಿಯಬೇಕಾದರೆ, ಜನರಿಗೆ ಅರ್ಥವಾಗುವ ಭಾಷೆಯಲ್ಲಿ ಸರಕಾರದ ಆಡಳಿತ ನಡೆಯಬೇಕಾಗಿದೆ. ಸರಕಾರೀ ಆಜ್ಞೆಗಳು, ನ್ಯಾಯಾಲಯದ ತೀರ್ಮಾನಗಳು, ಎಲ್ಲವೂ ಸಾಮಾನ್ಯ ಜನರ ನಡತೆ ಪ್ರಯೋಜನಗಳಿಗಾಗಿ ಇರುವುದನ್ನು ಎಲ್ಲರೂ ತಿಳಿದುಕೊಳ್ಳಲು ದೇಶವನ್ನು ಹಾಗೆ ಅಂಗವಂಗಾದಿ ಐವತ್ತಾರು ವಿಭಾಗಗಳಾಗಿ ಮಾಡಿ ಆಡಳಿತ ನಡೆಸುತ್ತಿದ್ದರು. 'ಸರ್ವಭಾಷಾಮಯೀ ದೇವೀ' ಎಂಬ ಕನ್ನಡ ಭಾಷಾ ಸಿದ್ಧಾಂತ ಸರಿಯಾದರೂ, ಮನುಷ್ಯನ ಸುಖ ದುಃಖ ಇತ್ಯಾದಿಗಳ ವಿವರಣೆಯ ಸಂದರ್ಭದಲ್ಲಿ ನಗುವಿಕೆ ಅಳುವಿಕೆ ಇತ್ಯಾದಿ ಭಾವಗಳ ಗೋಚರ ಪ್ರಕೃತಿ ಸಹಜವಾದರೂ, ಜೀವಿಯ ಆಹಾರ, ವಿಚಾರ, ಪ್ರಕೃತಿಯ ಸಂಪರ್ಕ, ಇತ್ಯಾದಿಗಳಿಂದ ಆಡುವ ಅಕ್ಷರಗಳು ವ್ಯತ್ಯಾಸವಾಗುತ್ತವೆ. ಮಾತೃ ಎಂಬುದು ಸಂಸ್ಕೃತ ಪದ - ಮದರ್ ಆಂಗ್ಲಪದ, ಮಾ, ಅಮ್ಮಾ ಎಂಬುದು ಕನ್ನಡವೇ ಮೊದಲಾದ ಭಾಷಾ ಪದಗಳು ಮೂಲತಃ ಒಂದೇ ಆಗಿದ್ದರೂ ಹವೆ, ಆಹಾರಾದಿಗಳಿಂದ ವ್ಯತ್ಯಾಸ ಹೊಂದಿ ಅನೇಕ ಭಾಷೆಗಳಾದುವು. ಆರ್ಯ, ದ್ರಾವಿಡ, ಆಂಗ್ಲ, ಜಪಾನು ಇತ್ಯಾದಿ ಭಾಷೆಗಳಾದುವು. ಹಾಗೆ ಆದಾಗ ಆ ವ್ಯತ್ಯಾಸಗೊಂಡ ಸ್ಥಳೀಯರಿಗೆ ದೇಶದ ಆಡಳಿತ ಸರಿಯಾಗಿ ತಿಳಿಯಲು ಹಿಂದಿನಿಂದಲೇ ಐವತ್ತಾರು ದೇಶಗಳು ಭಾರತದಲ್ಲೂ ಆದುವು; ಆದರೆ ಈ ಪರಿಯಾಗಿ ಪ್ರಯೋಗ ಭಾರತದೇಶ ಪರದೇಶೀ ಆಂಗ್ಲರ ಆಡಳಿತಕ್ಕೆ ಒಳಗಾದಾಗ ಛಿನ್ನ ವಿಚ್ಛಿನ್ನವಾಯಿತು. ಮದ್ರಾಸು ರಾಜ್ಯವೆಂಬ ಒಂದು ಪ್ರಾಂತದಲ್ಲಿಯೇ, ತುಳು, ಕನ್ನಡ, ಮಲೆಯಾಳ, ತಮಿಳು, ತೆಲುಗು, ಕೊಂಕಣಿ ಇತ್ಯಾದಿ ನಾನಾ ಭಾಷೆಗಳು ಆದುವು; ಅಂತೆಯೇ ಅವರು ವಿಭಜಿಸಿ ಆಳಿದ ಬೇರೆ ಬೇರೆ ಪ್ರಾಂತಗಳ ಸ್ಥಿತಿಯೂ ಆಯಿತು; ಇದು ನಮ್ಮನ್ನು ವಿಭಜಿಸಿ, ಗುಲಾಮರನ್ನಾಗಿ ಆಳುವ ಪರದೇಶೀ ಪ್ರಭುತ್ವದ ಉದ್ದೇಶ ಪೂರ್ಣವಾದ ದುರಾಡಳಿತವಾದರೂ, ನಮ್ಮ ದೇಶಕ್ಕೆ ಭಾರತಕ್ಕೆ ಸ್ವಾತಂತ್ರ್ಯ ಸಿಗಬೇಕೆಂದು ತ್ಯಾಗಮಯ ಸಂಗ್ರಾಮ ಸಾಧನೆ ಮಾಡಿದ ದೇಶಭಕ್ತ ಸ್ವಾತಂತ್ರ್ಯವೀರರು ಸುಮಾರು ೧೯೨೦ರ ಕಾಲದಲ್ಲಿಯೇ ಭಾಷಾಮೂಲ ರಾಜ್ಯ ನಿರ್ಮಾಣವಾಗಬೇಕೆಂದೂ, ದೇಶದ ಆಡಳಿತದ, ಕಾನೂನಿನ ವಿಚಾರಗಳು ಸಾಮಾನ್ಯ ಜನರಿಗೂ ಅರ್ಥವಾಗಬೇಕೆಂದೂ ದೃಢ ಸಂಕಲ್ಪ ಮಾಡಿದಂತೆ, ಭಾರತ ಸ್ವತಂತ್ರವಾದ ಕೂಡಲೇ, ಪೊಟ್ಟಿ ಶ್ರೀರಾಮುಲು ಎಂಬ ಧೀರ ಹೋರಾಟಗಾರರು, ಆಂಧ್ರಪ್ರಾಂತ ರಚನೆಗಾಗಿ ಆತ್ಮಾಹುತಿ ಮಾಡಿದಂತೆ, ಆ ಕೂಡಲೇ ಎಚ್ಚೆತ್ತ ಸ್ವತಂತ್ರ ಭಾರತ ಸರಕಾರ ಫಜಲಾಲಿ ಆಯೋಗ ನಿರ್ಮಿಸಿತು. ಅದರಲ್ಲಿ ಆದ ಕೆಲವೊಂದು ದೋಷಗಳ ಪರಿಹಾರಕ್ಕೆ ಮಹಾಜನ ಆಯೋಗ ನೇಮಿಸಿ ಭಾರತ ಸರ್ವತ್ರ ಭಾಷಾ ರಾಜ್ಯ ವ್ಯವಸ್ಥೆಯನ್ನು ಮಾಡಿದ್ದು ಪ್ರಕೃತಿ ಸಹಜವೂ, ನ್ಯಾಯನೀತಿ ಸಮ್ಮತವೂ ಆಗಿದೆ. ಜಿಲ್ಲಾಧಿಕಾರಿಗಳ ಆಡಳಿತ ಕಚೇರಿಯಲ್ಲಿ ಹಾಗೆಯೇ ನ್ಯಾಯಾಲಯಗಳಲ್ಲಿ ದೇಶದ ಜನತೆಯ ಸಾಮಾನ್ಯರ ಮಾತಿನಲ್ಲಿಯೇ ವ್ಯವಹಾರ ನಡೆಯುವಾಗ ಸಮಸ್ತ ನಾಡಿನ ಜನತೆ ಶ್ರೀಮಂತ-ದರಿದ್ರ, ಹೆಣ್ಣು-ಗಂಡು ಭೇದವಿಲ್ಲದೆ ಅದನ್ನು ಸರಿಯಾಗಿ ಪ್ರತ್ಯಕ್ಷವಾಗಿ ತಿಳಿದುಕೊಂಡು ಉತ್ತಮ ಜೀವನ ನಿರ್ವಹಣೆ ಮಾಡಲು ಶಕ್ತರಾಗುತ್ತಾರೆ, ಯೋಗ್ಯ ನಾಗರಿಕರಾಗಿ ದೇಶಭಾಷಾ ಪ್ರೇಮಿಗಳಾಗಿ ಉನ್ನತಿ ಹೊಂದುತ್ತಾರೆ.

ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿ ಹಾಗೂ ಕರ್ನಾಟಕ ರಾಜ್ಯ ಎಂಬೀ ಸದಭಿಮಾನ ಸ್ವಾತಂತ್ರ್ಯ ಸಂಗ್ರಾಮದ ಭಾರತದ ಬಿಡುಗಡೆಯ ಆಂಶಿಕ ಸಾಧನೆ ಸಿದ್ಧಿಯಾಗಿಯೇ ನಡೆಯಿತು. ಸ್ವಾತಂತ್ರ್ಯವೀರರು ಕರ್ನಾಟಕರಾಜ್ಯ ಒಂದಾಗಬೇಕೆಂದೂ ಜತೆಜತೆಯಾಗಿ ಹೋರಾಟ ಪ್ರಾರಂಭಿಸಿದರು. ಅದು ನಿಜವಾದ ಸ್ವಾತಂತ್ರ್ಯದ ಪೂರ್ಣತೆಯ ಸಾಧನೆಯೇ ಆಗಿದೆ. ಆಲೂರು ವೆಂಕಟರಾಯರು, ಕಡಪಾ ರಾಘವೇಂದ್ರರಾಯರು, ಕೋಟ ರಾಮಕೃಷ್ಣ ಕಾರಂತರು, ಜೀವರಾಜ ಹೆಗ್ಡೆಯವರು ಹೀಗೆ ಅನೇಕ ಖ್ಯಾತನಾಮರು ಈ ಸಾಧನೆಯ ಅಗ್ರಗಣ್ಯ ಧುರೀಣರು. ಸಣ್ಣ ಸಣ್ಣ ಸೀಮೆಗಳ ಅರಸರನ್ನು ಬ್ರಿಟಿಷರೇ ಪೆನ್ಶನ್ ಕೊಟ್ಟು ಮೂಲೆ ಸೇರಿಸಿದ್ದರೂ, ವಿಶಾಲ ಪ್ರಭುತ್ವದ ಅರಸರಾಗಿದ್ದ ಮೈಸೂರು, ಹೈದರಾಬಾದುಗಳ ರಾಜರನ್ನು ಉಳಿಸಿದ್ದರು. ಹಾಗಾಗಿ ಆ ಕಡೆಗಳಲ್ಲಿ ಕವಿ, ಸಾಹಿತಿ, ಸಂಸ್ಕೃತಿ ಸಂಪನ್ನರು ಹಲವರು ಏಕೀಕರಣವಾದಿಗಳಾಗಿದ್ದರೂ, ಮೈಸೂರರಸರ ಹಾಗೂ ಹೈದರಾಬಾದು ನಿಜಾಮರ ಪ್ರಭುತ್ವ ಕಳಚಿಹಾಕುವ ಹೋರಾಟಕ್ಕೆ ಹೆಚ್ಚಿನ ಉತ್ಸಾಹ ತೆಗೆದುಕೊಳ್ಳಲಿಲ್ಲ. ಆದರೂ ಆ ಎಲ್ಲಾಕಡೆಯ ಕರ್ನಾಟಕದ ನಾಡುನುಡಿಗಳ ಪ್ರತಿಯೊಂದು ಮನೆ, ಗ್ರಾಮ, ತಾಲೂಕು, ಜಿಲ್ಲೆಗಳಲ್ಲಿ ಏಕೀಕರಣದ ಸಿದ್ಧಾಂತಕ್ಕೆ ಬೆಂಬಲ ಇದ್ದೇ ಇತ್ತು. ತನ್ನಿಮಿತ್ತವೇ ಸ್ವತಂತ್ರ ಭಾರತ ಸರಕಾರ ಸ್ಥಾಪನೆಯಾದ ಕೂಡಲೇ, ಸರಕಾರದ ನೀತಿನಿಯಮದಂತೆ ಅದರ ಪಾಲನೆಗಾಗಿ ಮೈಸೂರರಸರು ಕೇಂದ್ರ ಸರಕಾರಕ್ಕೆ ತನ್ನ ಸಮ್ಮತಿಯನ್ನೂ ತಿಳಿಸಿದರು. ಅದರಂತೆ ಕರ್ನಾಟಕ ರಾಜ್ಯ ಪುನರ್ನಿರ್ಮಾಣವಾದಾಗ, ಪ್ರಥಮ ರಾಜ್ಯಪಾಲರಾಗಿ ಮೈಸೂರಿನ ಅರಸರೇ ನೇಮಕಗೊಂಡದ್ದು ಉಲ್ಲೇಖನೀಯ. ಕರ್ನಾಟಕ ರಾಜ್ಯವೆಂಬ ಹೆಸರು ರಾಜ್ಯಕ್ಕೆ ಸ್ಥಾಪಿತವಾಗಲು ತುಸು ವಿಳಂಬವಾಗಿ ಮೊದಲು ಮೈಸೂರು ರಾಜ್ಯವೆಂದೇ ಕರೆಯಲ್ಪಟ್ಟುದು, ಕನ್ನಡದ ಅಭಿಮಾನೀ ಧುರೀಣರು, ಆಡಳಿತಕ್ಕೆ ಬಂದ ನಂತರ ಕರ್ನಾಟಕ ರಾಜ್ಯವೆಂಬ ಈ ಸರಿಯಾದ ನಾಮಧೇಯ ಸ್ಥಿರವಾದುದು ಪ್ರಶಂಸನೀಯ.

ಕರ್ನಾಟಕ ರಾಜ್ಯದ ರಾಜಧಾನಿ ಹಿಂದಿನ ಮೈಸೂರು ಸಂಸ್ಥಾನಕ್ಕೆ ಸೇರಿದ ಬೆಂಗಳೂರಿನಲ್ಲಿ ಇದೆ. ಮೊದಲ ಮುಖ್ಯಮಂತ್ರಿಯಾಗಿದ್ದ ಹನುಮಂತಯ್ಯನವರು ಭವ್ಯವಾಗಿ ನಿರ್ಮಿಸಿದ ವಿಧಾನಸೌಧದಲ್ಲಿ ಸರಕಾರದ ಆಡಳಿತ ನಿಯಮನಿಷ್ಠೆ ಜರುಗುತ್ತಿರುವುದು ಯೋಗ್ಯವಾಗಿದೆ. ಆದರೆ ಅದರಿಂದ ಆಡಳಿತದಲ್ಲಿ ಮೈಸೂರು ಸಂಸ್ಥಾನಕ್ಕೆ ಸೇರಿದ ಭಾಗಗಳ ಅಭಿವೃದ್ಧಿ, ಅಲ್ಲಿನ ಕವಿ ಸಾಹಿತಿ ಧೀಮಂತರಿಗೇ ಹೆಚ್ಚಿನ ಪ್ರಾಶಸ್ತ್ಯ ಸನ್ಮಾನಗಳು ದೊರೆಯುತ್ತಿದ್ದು, ಅಖಿಲ ಕರ್ನಾಟಕ ದೃಷ್ಟಿ ಸಂಕುಚಿತವಾಗುತ್ತಿದೆ ಹಾಗೂ ಅಖಿಲ ಕರ್ನಾಟಕ ಭಾಗಗಳ ಅಭಿವೃದ್ಧಿ ಕಾರ್ಯವೂ ಕುಂಠಿತವಾಗುತ್ತಿದೆ – ಎಂಬೀ ನಿಜವಾದ ಹೇಳಿಕೆಗೆ ಸರಿಯಾದ ಪರಿಹಾರ ಆಗಲೇಬೇಕಾದರೂ, ಆ ನಿಮಿತ್ತದಿಂದ ಉದ್ವೇಗಪರವಶರಾಗಿ, ಕನ್ನಡಿಗರು ಕರ್ನಾಟಕ ರಾಜ್ಯದ ವಿಭಜನೆಗೆ ಸರ್ವಥಾ ಹೋಗಬಾರದು. ಹಾಗೂ ಹೋಗಲಾರರೆಂದು ನಾವೆಲ್ಲರೂ ಆಶಿಸಬೇಕು; ಐಕಮತ್ಯದಿಂದ ಸಾಧಿಸಬೇಕು. ಅಖಿಲ ಕರ್ನಾಟಕದ ವಿಶಾಲಮತತ್ವ ಆಡಳಿತದವರಲ್ಲಿ ಇನ್ನೂ ತಳ ಸರಿಯಾಗಿ ಪ್ರಾಯೋಗಿಕವಾಗಬೇಕು ಹಾಗೂ ಆದೀತೆಂದು ಭರವಸೆಯೂ ಇದೆ. ವಿಶ್ವಮಾನವತೆಯ ಹರಿಕಾರರೆಂದು ಪ್ರಶಂಸನೀಯರಾದ ರಾಷ್ಟ್ರಕವಿ ಕುವೆಂಪು ಮೂಲತಃ ಮೈಸೂರು ಸೀಮೆಯವರಾದರೂ, ಅವರ ಲೇಖನ, ಕವನ, ಭಾಷಣಗಳಲ್ಲಿ ಅಖಿಲ ಕರ್ನಾಟಕದ ಐಕ್ಯದ ಸರ್ವೋನ್ನತಿಯ ಸಾಧನೆಯೇ ಉಗ್ರವಾಗಿ ಉಲ್ಲೇಖಗೊಂಡಿದೆ. ಅದು ಸರ್ವಮಾನ್ಯವಾಗಿದೆ. ಈ ರೀತಿ ಶ್ರೇಷ್ಠ ಧೀಮಂತ ಸಾಹಿತ್ಯಜ್ಞರು ಹೃತ್ಪೂರ್ವಕವಾಗಿ ಅಖಿಲ ಕರ್ನಾಟಕದ ಸರ್ವೋನ್ನತಿಯನ್ನೇ ಸಾಧಿಸಲು ಬೋಧಿಸುತ್ತಿರುವಾಗ ಇಂದು ವಿಧಾನಸೌಧದಲ್ಲಿ ಆಡಳಿತದಲ್ಲಿರುವ ಸಮರ್ಥ ರಾಜಕಾರಣಿಗಳು, ವಿಶಾಲಮತತ್ವವನ್ನು ಹೃತ್ಪೂರ್ವಕ ಪ್ರಾಯೋಗಿಕವಾಗಿ ಶೀಘ್ರ ನಡೆಸಲು ಬದ್ಧಕಂಕಣರಾದರೆ ಇಂದಿನ ಈ ಕರ್ನಾಟಕ ರಾಜ್ಯದ ಭಿನ್ನತೆಯ ಆಕ್ರೋಶ ಖಂಡಿತವಾಗಿಯೂ ನಿಲ್ಲಬಹುದು – ನಿಂತೇನಿಲ್ಲುತ್ತದೆ. ಈ ಯೋಗ್ಯ ಹಾಗೂ ಉತ್ತಮ ನಾಡುನುಡಿಗಳ ಏಳಿಗೆಯ ಹೊಣೆಗಾರಿಕೆ, ಆಡಳಿತ ನಡೆಸುತ್ತಿರುವ, ವಿಧಾನಸೌಧದ ಆಸನಾಸೀನರಾದ ನಾಡಿನ ನಾಯಕರತ್ನರದ್ದು ಹೆಚ್ಚಿನದ್ದು ಆಗಿದೆ. ಅದಕ್ಕೆ ಸಮಸ್ತ ಕನ್ನಡಿಗರೂ ಖಂಡಿತ ಸಹಕರಿಸುತ್ತಾರೆ. 'ಕರ್ನಾಟಕ ಒಂದೇ' ಎಂದು ಕಾರ್ಯರೂಪದಲ್ಲಿ ಸಹಕರಿಸಿ ಸಾಧಿಸುತ್ತಾರೆ, ಸಾಧಿಸಲಿಯೆಂದು ಪ್ರಾರ್ಥನೆ.

**ಕಯ್ಯಾರ ಕಿಞ್ಞಣ್ಣ ರೈ**

ಕವಿತಾ ಕುಟೀರ, ಪೆರಡಾಲ–೬೭೧೫೫೧, ಕಾಸರಗೋಡು

## ಏಕೀಕೃತ ಕರ್ನಾಟಕದಲ್ಲಿಯೇ ಪ್ರಜಾಪ್ರಭುತ್ವದ ಸ್ವಾಮಿಗೆ ನೆಮ್ಮದಿ

– ಪ್ರೊ॥ ವಸಂತ ಕುಷ್ಟಗಿ

ಕನ್ನಡ ನಾಡು-ನುಡಿಯ ಸಾಂಸ್ಕೃತಿಕ ಇತಿಹಾಸಕ್ಕೆ, ಸಾಹಿತ್ಯಿಕ ಹಾಗೂ ಚಾರಿತ್ರಿಕ ಪರಂಪರೆಗೆ ಕೊಡುಗೆಯಾದ, 'ಕವಿರಾಜಮಾರ್ಗ' ಎಂಬ ಲಕ್ಷಣ ಗ್ರಂಥವು ಹೈದರಾಬಾದ್ ಕರ್ನಾಟಕದ ಮಾನ್ಯಖೇಟದಿಂದ ಪ್ರಕಟಗೊಂಡುದು ಹೆಮ್ಮೆಯ ವಿಷಯ. ಪಂಪ-ಪೊನ್ನರಾದಿಯಾಗಿ ಅನೇಕ ಮಹಾಕವಿಗಳೂ ಇದೇ ಭಾಗದಲ್ಲಿ ನೆಲೆಸಿ ರಾಜಾಶ್ರಯ ಪಡೆದು ಕಾವ್ಯರಚನೆ ಮಾಡಿದುದು ಆ ಹೆಮ್ಮೆಗೆ ಒಂದು ವಿಶೇಷ ಗರಿ. ರಾಷ್ಟ್ರಕೂಟರು, ಕಲ್ಯಾಣಿಯ ಚಾಳುಕ್ಯರು ತಮ್ಮ ರಾಜಸತ್ತೆಯಲ್ಲಿ ಶ್ರೀಸಾಮಾನ್ಯನ ಹಿತವನ್ನು ಕಾಯ್ದು ರಾಜಧರ್ಮವನ್ನು ಮೆರೆದದ್ದು – ಆ ಗರಿಗೆ ಮತ್ತೊಂದು ಗರಿ ವಿಶೇಷ ಜೋಡು. ಜೊತೆಗೆ ಶರಣಸಾಹಿತ್ಯ ದಾಸಸಾಹಿತ್ಯಗಳೆರಡು ಇದೇ ನೆಲದಲ್ಲಿ ಚೇತನ ಚಿಲುಮೆಯಾಗಿ ಚಿಮ್ಮಿ ಮಾನವಧರ್ಮವನ್ನು ರಾರಾಜಿಸುವಂತೆ ಮಾಡಿದ್ದು ಈ ನೆಲಕ್ಕೇ ಮುಕ್ಕಾಗದ ಬೆಳಕು. ಆದರೆ ಬ್ರಿಟಿಷರು ವ್ಯಾಪಾರಿಗಳಾಗಿ ಬಂದು ಇಡೀ ದೇಶದ ಆಡಳಿತವನ್ನೇ ತಮ್ಮ ಕಪಿ ಮುಷ್ಟಿಗೆ ತೆಗೆದುಕೊಂಡಾಗ, ನಿಜಾಮನು ಹೈದರಾಬಾದ್ ಸಂಸ್ಥಾನವನ್ನು ತಾನು ಸಂಸ್ಥಾನಾಧೀಶನಾಗಿದ್ದರೂ ಬ್ರಿಟಿಷರ ಅಧೀನನಾಗಿಯೇ ಆಳುತ್ತಿದ್ದನು. ಆಗ ಹೈದರಾಬಾದ್ ಸಂಸ್ಥಾನದಲ್ಲಿ ಕರ್ನಾಟಕದ ಭಾಗಗಳಾದ ಬೀದರ, ಕಲಬುರಗಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳು ಸಮಾವೇಶಗೊಂಡಿದ್ದವು. ಆದರೆ ಈ ಭಾಗದಲ್ಲಿ ಆಗ ಉರ್ದು ಆಡಳಿತ ಭಾಷೆಯಾಗಿದ್ದು, ದೇಸಿಯ ಭಾಷೆಯಾದ ಕನ್ನಡವು ಪ್ರಾಥಮಿಕ ಶಾಲೆಯ ಶಿಕ್ಷಣಕ್ಕೆ ಮಾತ್ರ ಸೀಮಿತಕ್ಕೊಳಪಟ್ಟಿತ್ತು. ಹೀಗಾಗಿ ಕನ್ನಡ ಭಾಷಾ ಸಾಹಿತ್ಯ ಸಂಸ್ಕೃತಿ – ಒಟ್ಟಾರೆ ಕನ್ನಡ ಬದುಕು ಕೊರಗಿ ಸೊರಗಿತು. ಉರ್ದುವಿನ ಜೊತೆಗೆ, ದೇಶದ ಸಾಮ್ರಾಟರಾಗಿದ್ದ ಇಂಗ್ಲಿಷರ ಇಂಗ್ಲಿಷಿನ ಪ್ರಭಾವವು ಪರ್ಯಾಯದ ಒತ್ತಡದಲ್ಲಿ ಕನ್ನಡದ ಕೊರಗಿಗೆ ಸ್ನೇಹಹಸ್ತವನ್ನೇ ನೀಡಿತೆಂದರೆ ತಪ್ಪೇನಿಲ್ಲ. ಇದಲ್ಲದೆ ಹೈದರಾಬಾದ್ ಸಂಸ್ಥಾನದ ಇತರ ದೇಸೀ ಭಾಷೆಗಳಾಗಿದ್ದ ತೆಲುಗು ಮತ್ತು ಮರಾಠಿಗಳು ಕನ್ನಡಕ್ಕೆ ಸೋದರೀಭಾಷೆಗಳೆನ್ನಿಸಿದರೂ – ಅವುಗಳ ಒತ್ತಡದಲ್ಲಿ ಕನ್ನಡವು ಉಪಾಧ್ಯಾಯರ ಕೂಸಾಗಿಯೇ, ಬಾಯಿ ಕಳೆದುಕೊಂಡು ಉಸಿರನ್ನು ಗಟ್ಟಿಯಾಗಿ ಹಿಡಿದುಕೊಂಡೇ ಬರಬೇಕಾಯಿತು.

ಮುಂದೆ ೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯವು ಸಿಕ್ಕ ಅನಂತರ ೧೭ನೆಯ ಸೆಪ್ಟೆಂಬರ್ ೧೯೪೮ರಲ್ಲಿ, ಹೈದರಾಬಾದ್ ಸಂಸ್ಥಾನವು ಪೂಜ್ಯ ಸ್ವಾಮೀ ರಾಮಾನಂದತೀರ್ಥರ ನೇತೃತ್ವದಲ್ಲಿ ವಿಮೋಚನೆಗೊಂಡ ಅನಂತರ, ಭಾಷಾವಾರು ಪ್ರಾಂತ ರಚನೆಯ ೧-೧೧-೧೯೫೬ರವರೆಗಿನ ಅವಧಿಯಲ್ಲಿ ಹೈದರಾಬಾದ್ ಪ್ರಾಂತದ ಕನ್ನಡಿಗರು 'ಏಕೀಕರಣ'ದ ಮಾತು ಬಂದಾಗಲೆಲ್ಲ ಕನಸುಗಳ ಮಹಲನ್ನೇ ಕಟ್ಟಿದರು. ಹುಯಿಲುಗೋಳ ನಾರಾಯಣರಾಯರ 'ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು' ನಾಡಿನ ಉದ್ದಗಲಕ್ಕೂ ಮೊಳಗಿತು. ಆ ಮೊಳಗು ನಾಡಿನ ಒಂದಾಗುವಿಕೆಯ ಹೋರಾಟಕ್ಕೆ ಕಹಳೆಯ ಕೂಗೂ ಆಯಿತು. ಆ ಹಾಡಿನಲ್ಲಿಯ ಕೂಗಿನಿಂದ ಧುಮ್ಮಿಕ್ಕಿ ಬಂದ ಸ್ವಾಭಿಮಾನದ ಕಸುವು ಕಾವೇರಿಯಿಂದಾಗೋದೆಯವರೆಗೆ ಸ್ಫೂರ್ತಿಯ ಹಾಡಾಗಿ, ಜೀವನಾಡಿಯಾಗಿ ಹರಿದು, ಮುಂದೆ ನೆಲದ ಜನವೆಲ್ಲ ಜಾಗರಣಗೊಂಡು ಒಂದೆ, ಒಂದೆ, ಕರ್ನಾಟಕ ಒಂದೆ ಆಗಿ ವಂದನೆಯನ್ನು ಸ್ವೀಕರಿಸಿತು. ತತ್ಪ್ರೇರಣೆಯಿಂದ ದ. ರಾ. ಬೇಂದ್ರೆ, ಕೆ. ವಿ. ಪುಟ್ಟಪ್ಪ, ವಿ. ಸೀ., ಡಿ. ಕೆ. ಭೀಮಸೇನರಾವ್, ಜಿ. ಕೆ. ಪ್ರಾಣೇಶಾ ಚಾರ್ಯ – ಮೊದಲಾದ ಎಲ್ಲ ಕವಿಗಳು ಕನ್ನಡ ಡಿಂಡಿಮಕ್ಕಾಗಿ ಹಾತೊರೆದರು. ಮಾಸ್ತಿ ಅವರ ಕೂಗು ಕನ್ನಡ ಕೌದಿಯನ್ನು ನಿರ್ಮಾಣಮಾಡಿತು. ಆಗ ಸುಮಾರು ೨೨ ಖಂಡ ಗಳಲ್ಲಿ ಹಂಚಿಹೋಗಿದ್ದ ಕನ್ನಡವು ಒಂದು ರೀತಿಯಲ್ಲಿ



### ಭೀಮಣ್ಣನ 'ರಾಮಕಲಿ'*

**ಧೋ** ಗುಟ್ಟಿ ಸುರಿಯಿತೋ ಮಳೆ
ಇಳೆಯ ಇಂಚಿಂಚೂ ಪುಳಕಗೊಂಡಿತು
ಮೋರಿಯೊಳಗೆ ಹರಿದ ಹನಿಯೊಂದು
ಹಳೆಯ ಜನುಮದ ನೆನಪು –
ನೋವುಗಳಿಂದ ಮುದಗೊಂಡಿತ್ತು, ಸಾಗರದ ಭಾಗವಾದದ್ದು
ಮೋಡದಲ್ಲಿ ಕರಗಿ ಹೋಗಿದ್ದು
ಹೊಳೆಗಿಳಿದು, ಬೆಟ್ಟದಂಚಿಂದ ಧುಮ ಧುಮಾ ಧುಮುಕಿ
ಬಯಲ ಅಂಚು-ಸೆರಗು ತಡಕಿ
ಸರ ಸರಾಂತ ಹರಿದು ಸಣ್ಣಗೆ ಝುರಿವಡೆದು
ಕಾಲುಗಳು ಸಾವಿರ ಸಾವಿರ

ಅದ್ಯಾವ ಪರ್ವತದ ಹೆರಿಗೆ
ನಿನ್ನೊಳಗೇ ಹಾಕುತ್ತಿದೆ ಗುದಮುರಿಗೆ
ಬಿಡಿಸಿಟ್ಟುಬಿಡೋ ಭೀಮಣ್ಣ;
ರಂಗು ಚಾಮರದ ಬೀಸಣಿಗೆ
ನಮ್ಮೂರ ಕಿನ್ನರಿಯರು
ಸಾಯಲಿ ಬಿಡು ಹೊಟ್ಟೆಯುರಿಯಿಂದ

ಹೆಜ್ಜೆ ಹೆಜ್ಜೆ ಹತ್ತಿಸುತ್ತೀಯ
ನಾವೋ ಹುಂಬರು, ನಿನ್ನ ನಂಬಿ
ಬೆನ್ನು ಬಿದ್ದವರು
ಹತ್ತಿ ಹತ್ತಿ ಎತ್ತರಕ್ಕೆ ಇನ್ನೂ ಎತ್ತರಕ್ಕೆ
ಕಾಣಲಾರದು ಜಗದ
ಯಾವ ನೋವು
ಕ್ಷುದ್ರಕಣ್ಣಿಗೆ ಎಲ್ಲವೂ ಸಣ್ಣಗೆ
ಆನೆಗಳು ಸೊಳ್ಳೆಗಳ ಹಾಗೆ

ಅದ್ಯಾವ ಶಿಶು ಮಾರಾಯ ? ಹಾಗೇಕೆ ಅಳುತ್ತಿದೆ ?
ಸ್ವರ-ಖಾಲಿ ಜಠರದ ಹಾಹಾಕಾರ ?
ಚಂದ್ರ ಬೇಕೆನ್ನುವ ಹಠಮಾರಿತನದಲ್ಲಿ
ಕೈಯ ಚಕ್ಕುಲಿಯೂ ಚೆಲ್ಲಾಪಿಲ್ಲಿ

ಆ ಕಡೆಯನ್ನ ತೋರಿಸಿಬಿಡೋ ಭೀಮಣ್ಣ
ನೆತ್ತಿಯ ಮೇಲಿನ ಕತ್ತಲ ಖೋಲಿ
ಬಾಗಿಲ ತೆರೆದು ಬಿಡು

ಭೀಮಣ್ಣನ ರಾಮಕಲಿ
ನೀ ಕಲಿ

* *ಭೀಮಸೇನ ಜೋಷಿಯವರ 'ರಾಮ್‌ಕಲಿ' ರಾಗ ಕೇಳಿ.*

ಡಿ. ವಿ. ಪ್ರಹ್ಲಾದ್, ನಂ. ೧೦೦, ೨ನೇ ಮೇನ್, ೬ನೇ ಬ್ಲಾಕ್, ೩ನೇ ಹಂತ, ೩ನೇ ಘಟ್ಟ, ಬನಶಂಕರಿ, ಬೆಂಗಳೂರು - ೫೬೦ ೦೮೫

ಅಖಂಡತ್ವಕ್ಕೆ ಧಾವಿಸಿತು. ಕಾಸರಗೋಡು, ಅಕ್ಕಲಕೋಟೆ, ಸೊಲ್ಲಾಪುರದಂತಹ ಕನ್ನಡ ಜಟ್ಟಿ ನೆಲ ಇನ್ನೂ ಅಖಂಡತೆಗೆ ಬರಬೇಕಿದೆ. ಇಂಥ ಕೊರಗು ಏನಿದ್ದರೂ ಖಂಡಖಂಡಗಳಲ್ಲಿಯ ಕನ್ನಡಿಗರು ಒಂದೆ ನೆಲ, ಒಂದೆ ಜಲ, ನಾವೆಲ್ಲ ಒಂದು ಎಂದೆಂದು – ಈಗ ಮತ್ತೆ ಒಂದಾದೆವು ಎಂದು ಖುಷಿಪಟ್ಟೆವು.

ಆಗ ನಮ್ಮಲ್ಲಿ ಸರ್ ವಿಶ್ವೇಶ್ವರಯ್ಯನವರ ಸಾಧನೆಯ ಆದರ್ಶಗಳು ಹೈದರಾಬಾದ್ ಕರ್ನಾಟಕಕ್ಕೂ ಹರಿದುಬರುತ್ತವೆಯೆಂದು ಭಾವನೆಯಿತ್ತು. ಶ್ರೀ ಸಾಮಾನ್ಯರೆಲ್ಲರೂ ಸಾಕ್ಷರರಾಗಿ ಸ್ವಾಭಿಮಾನಿಗಳಾಗಿ ಕಾಯಕನಿರತರಾಗುವರೆಂದು ಯೋಚಿಸಲಾಗಿತ್ತು. ಬಹಳ ಕುತ್ತುರಿಗೊಳಗಾಗಿದ್ದ ಈ ನೆಲಕ್ಕೆ ಸಮಾನತೆಯತ್ತ , ಮಾದರಿಯ ಮೈಸೂರಿನ ಜನ, ಧಾರವಾಡದ ಜನ, ಮಂಗಳೂರಿನ ಜನ ಧಾವಿಸುವಂತೆ ಮಾಡುತ್ತಾರೆಂದು ವಿಶ್ವಾಸ ಮೂಡಿತ್ತು. ಆದರೆ ಈ ಭಾಗದ ನೆಲ ಜಲ ಜನ ಸಮಸ್ಯೆಗಳು ಸಮಸ್ಯೆಗಳಾಗಿಯೇ ಉಳಿದುವು. ಇದಕ್ಕೆ ಕಾರಣ ನಮ್ಮ ಶೋಷಣೆಯು ನಮ್ಮವರಿಂದಲೇ ಆಗಿ ಭಾಗಾದಿತನವು ಕಾಡತೊಡಗಿದಂತಾಯಿತು. ಚಿಕ್ಕಮ್ಮ ದೊಡ್ಡಮ್ಮರ ವಿಶೇಷ ರೀತಿಯ ಪ್ರೀತಿಯ ಪ್ಯಾಕೇಜ್ "ಹೈಕ"ಕ್ಕೆ ದೊರೆಯಲೇ ಇಲ್ಲ. ಅದರ ಬದಲಾಗಿ ಹೈರಾಣದ ಪರಮಾವಧಿಯಲ್ಲಿ ಕಂಗಾಲತನವು ಕಾಡತೊಡಗಿತು. ಎಲ್ಲಕ್ಕೂ ಹೆಚ್ಚಾಗಿ "ಮೊಗಲಾಯಿ" ಎಂಬ ಮೂಗು ಮುರಿತ, ಧ್ವನಿ ಅಡಕಲಾದ ಅರ್ಥಾತ್ ಬಾಯಿ ಸತ್ತ ಹೈದರಾಬಾದ್ ಕರ್ನಾಟಕದ ಗಂಟಲಿಗೆ ಆರೈಕೆಯ ಮಾತೂ ಎರವಾಯಿತು, ಎಡವಟ್ಟಾಯಿತು. ಹೀಗಾಗಿ ನಮಗೆ ಆ ಗೋದೆ ಕಾವೇರಿ, ಭೀಮರಥಿಯ ನದಿ ತಂಪಿಗೆ, ಬತ್ತೋದೆ ಆಯ್ತು. ಹಿಂದುಳಿತವನ್ನು ವಿಸ್ತಾರಗೊಳಿಸಲು ನಾಡಿನ ಎಲ್ಲ ದಿಕ್ಕಿನಿಂದಲೂ ಕುಮ್ಮಕ್ಕು ಬರತೊಡಗಿತು. ಸ್ವಾಭಿಮಾನವನ್ನು ಜಾಗೃತಗೊಳಿಸಿಕೊಂಡು ಕ್ರಿಯಾಶೀಲರಾಗುವತ್ತ ಈ ಭಾಗದವರು ಎಚ್ಚರಗೊಂಡರೂ ಬೆಂಗಳೂರು ಕಂಡು ಬಂದ ಕೂಡಲೇ – ಮೆಜೆಸ್ಟಿಕ್ ಎಂಬ ಕನವರಿಕೆಯೇ ಹೆಚ್ಚಾಗತೊಡಗಿ, ಸಿಂಹಾವಲೋಕನವೇ ಅಡಗಿಹೋಯಿತೆಂಬ ದಿಗ್‌ಭ್ರಮೆ ಆವರಿಸಿತು. ಎಲ್ಲಕ್ಕೂ ಹೆಚ್ಚಾಗಿ ಮಾದರಿಯಾಗಿದ್ದ ಬೇರೆಬೇರೆ ಭಾಗದ ಕನ್ನಡಿಗರು ನಮ್ಮನ್ನು ಬಡಿದೆಬ್ಬಿಸದೆ, ೨೫೦ ವರ್ಷಗಳ ದಾಸ್ಯದಲ್ಲಿ ಹೂತುಹೋದ ನಮ್ಮ ಧ್ವನಿಯನ್ನು ಇನ್ನಷ್ಟು ಇನ್ನಷ್ಟು ಕ್ಷೀಣಗೊಳಿಸದರೆಂಬ ಪರಿಭ್ರಮೆಯು ಈಗ ನಮ್ಮನ್ನು ಕಾಡತೊಡಗಿರುವುದು ಸತ್ಯ. ಅಲ್ಲದೆ ನಮ್ಮನ್ನು ಪ್ರತಿನಿಧಿಸುತ್ತಿರುವವರಲ್ಲಿ ಇಚ್ಛಾಶಕ್ತಿಯು ಅರಳದೇ ಹೋದುದು ನಮ್ಮ ದುರಂತ. ಎಲ್ಲಿಯೋ ಒಂದಿಷ್ಟು ಅರಳಿದೆಯೆಂದರೆ ಅದೆಲ್ಲ ಆಭಾಸದ ಮಾತು. ವಿರಳಕ್ಕೆ ವಿರಳ ಎಂಬುದೇ ಆ ಒಗಟಿನ ಅರ್ಥ. ಹೀಗಾಗಿ ಕಾರಂಜಾ, ಮುಳ್ಳಾಮಾರಿ, ಬೆಣ್ಣೆತೊರಾ, ಜುರನಾಲಾ, ಭೀಮಾ, ಕೃಷ್ಣಾ – ನೀರಾವರಿ ಯೋಜನೆಗಳು ಎದೆಗುದಿಗೆ ಬಿದ್ದು ಹೋದುವು. ಅಲ್ಲಿಯೇ ಅವು ಕುದಿಯುತ್ತಿವೆ.

ಕರ್ನಾಟಕ ರಾಜ್ಯೋದಯವಾಗಿ ೨೦೦೪ಕ್ಕೆ ೪೮ ವರ್ಷಗಳೇ ಸಂದವು – ಈ ಭಾಗದ ನೀರಾವರಿ ಯೋಜನೆಗಳಷ್ಟೇ ಅಲ್ಲ, ರಸ್ತೆಗಳೂ ಕುಸಿದುಹೋಗಿವೆ; ಶಾಲೆಯ ಗುಡಿಗಳು ಹಾಳೂರಿನ ದೇಗುಲಗಳಾಗಿವೆ. ಪ್ರಗತಿಪರ ವಿಚಾರಗಳ ಕಾಯಕಲ್ಪವೆಲ್ಲ ಗಣಕ ಯಂತ್ರದಲ್ಲಿ ಎಲ್ಲಡಕ. ಅದರಿಂದ ಡೌಲು ಹೆಚ್ಚಾಗಿದೆ. ಜುಟ್ಟಿಗೆ ಮಲ್ಲಿಗೆ, ರಾವಣನ ಹೊಟ್ಟೆಗೆ ಕಾಶಿನ ಶುಂಠಿ. ತುಂಗಭದ್ರಾ, ಕೃಷ್ಣ ಮೇಲ್ದಂಡೆ ಯೋಜನೆಗಳು ಪೂರ್ತಿಯಾಗಿ ನೀರಾವರಿ ಬಂದಂತೆ ಆಗಿದ್ದರೂ – ನೆಲ ಬೇರೆ ರಾಜ್ಯದವರಿಗೆ ಮಾರಾಟವಾಗ ತೊಡಗಿದೆ. ಆಡಳಿತದಲ್ಲಿದ್ದವರು, ಆಡಳಿತಕ್ಕೆ ಬರಬೇಕೆನ್ನುವವರು ಬೆಂಗಳೂರಿನ ದೃಷ್ಟಿ ವ್ಯಸನದಲ್ಲಿ ಮುಳುಗಿ ಹೋಗಿದ್ದಾರೆ. ಹೀಗಾಗಿ ಈ ಭಾಗದಲ್ಲಿಯೇ ಇರುವ ನೆಲದ ಮಕ್ಕಳು ಬೇವಾರಸಿಯಾಗುತ್ತಿರುವರೇನೋ ಎಂಬ ಭಯವು ಅಳಿಬಿಳಿಗೊಳಿಸಿದೆ. ಹೀಗಾಗಿ ನಾವೆಲ್ಲ ಹಿಂದೆ ಹೈದರಾಬಾದ್ ನಿಜಾಮರ ಸಂಸ್ಥಾನದಲ್ಲಿಯೇ ಖುಷಿಯಾಗಿದ್ದೆವೆಂದು ಉಸಿರು ಹಾಕುವುದನ್ನು ಕಾಣಬಹುದಾಗಿದೆ. ಇದಕ್ಕೆಲ್ಲ ಕಾರಣ ಆಡಳಿತದಲ್ಲಿರುವವರ ಮಲತಾಯಿಯ ಧೋರಣೆ!

ಈ ಮಲತಾಯಿಯ ಧೋರಣೆಯಿಂದಾಗಿ ಬೇಸತ್ತ ಜನಪ್ರತಿನಿಧಿಗಳಲ್ಲಿ ಕೆಲವರು ಪ್ರತ್ಯೇಕ ಕರ್ನಾಟಕದಿಂದ ಲಾಭವಾದೀತೇನೋ, ಆಗ ನಮ್ಮ ಉಳಿದ ಭಾಗದ ಕನ್ನಡ ದೇಸಿಗರು ನಮ್ಮನ್ನು ಮರ್ಯಾದೆಯಿಂದ ಬಾಳಲು ಬಿಟ್ಟು, ಮರ್ಯಾದೆಯನ್ನು ಪಡೆದಾರೇನೋ ಎಂಬ ಸೊಲ್ಲಿಗೆ ಅರ್ಥಬಂದೀತೆಂದು ಭಾವಿಸಿ, ಬೇಸತ್ತ ಜನ, ಅನ್ಯಾಯಕ್ಕೆ ತುತ್ತಾಗುತ್ತಿದ್ದೇವೆಂಬ ಆಸಕ್ತ ಜನ – ಪ್ರತ್ಯೇಕ ಹೈದರಾಬಾದ್ ಕರ್ನಾಟಕ ರಾಜ್ಯೋದಯದಿಂದ ನಮ್ಮದನ್ನಾದರೂ ನಾವು ನಿರ್ವಂಚನೆಯಿಂದ ಕುಚ್ಚಿಕೊಂಡು ತಿಂದಂತಾಗುತ್ತದೆಂಬ ನಿರ್ಣಯಕ್ಕೆ ಬಂದು ಧ್ವನಿಯೆತ್ತಿದ್ದು ನಿಜ.

ಒಂದು ವೇಳೆ ಪ್ರತ್ಯೇಕ ಪ್ರತ್ಯೇಕ ಕರ್ನಾಟಕಗಳು ಆದರೆ ಹೈದರಾಬಾದ್ ಕರ್ನಾಟಕವು ಆರ್ಥಿಕ ಸಾಧನ ಸಂಪತ್ತನ್ನು ಅರಳಿಸಿಕೊಳ್ಳಲು ಸಾಧ್ಯವಿದೆ. ಇದೆಲ್ಲ ಯಾವಾಗ ಸಾಧ್ಯವಾಗುವುದೆಂದರೆ, ಇಲ್ಲಿಯ ಜನಕೋಟಿ 'ಮೊಗಲಾಯಿತನ'ವನ್ನು ಕೊಡಹಿಕೊಂಡು, ಮೈಝಾಡಿಸಿಕೊಂಡು, ಸೋಮಾರಿತನದ ತಾಯಿಬೇರನ್ನು ಕಿತ್ತೆಸೆದು, ದುಡಿತವನ್ನೇ ದೇವರೆಂದು ಪ್ರತ್ಯಕ್ಷೀಕರಿಸಿಕೊಂಡು, ಒಳಬಳಗೆ ಹೂತುಹೋದ ವಿವೇಕವನ್ನು ಅರಳಿಸಿ



ಕೊಂಡು ವ್ರತಬದ್ಧರಾದರೆ ದಶದಿಕ್ಕು ದೇಶಕ್ಕೆ ಮಾದರಿಯಾಗುವ ರಾಜ್ಯವನ್ನು ಕಟ್ಟಲು ಸಾಧ್ಯವಿದೆ. ಏಕೆಂದರೆ ಈ ಭಾಗದಲ್ಲಿ ಬಂಗಾರ, ಕಬ್ಬಿಣ, ಮ್ಯಾಂಗನೀಜ, ತಾಮ್ರ, ಎಣ್ಣೆ, ಸಕ್ಕರೆ, ಗೋಧಿ, ಸೆಜ್ಜೆ, ಮಾನದಂಡಿ ಜೋಳ ಎಲ್ಲ ಎಲ್ಲ ಇದೆ. ನೆಲಕ್ಕೆ ಸ್ವಲ್ಪ ತಟ್ಟಿದರೆ ಸಾಕು ನೀರು ಏತವಾಗುತ್ತದೆ. ಓತಪ್ರೋತವಾಗುತ್ತದೆ. ಮತ್ತೆ, ಆಡಂಬರದಿಂದ ಕೂಡಿದ ಪಾಶ್ಚಾತ್ಯೀಕರಣಕ್ಕೆ ಇಲ್ಲಿಯ ಮನಸ್ಸುಗಳು ಇನ್ನೂ ಹಿಂದೇಟು ಹಾಕುತ್ತಿವೆ. ಆದ್ದರಿಂದ ಮಹಾತ್ಮಗಾಂಧಿ ಅವರ ಅರ್ಥಶಾಸ್ತ್ರವು ಶೋಧ ಪರಿಶೋಧ ಸಂಶೋಧಗಳಿಗೆ ಅಳವಡ ಬೇಕಿಲ್ಲ, ಅದನ್ನೆಲ್ಲ ಪ್ರಾಚ್ಯವಸ್ತು ಇಲಾಖೆಗೆ ಸೇರಿಸಬೇಕಿಲ್ಲ.

ಇಷ್ಟೆಲ್ಲ ಅವಕಾಶಗಳಿದ್ದರೂ, ಹಿಂದೆ ಹರಿದು ಹಂಚಿಹೋಗಿದ್ದ ಕನ್ನಡನಾಡು ಒಂದು ಕುಟುಂಬ ಎಂಬುದರ ಹಿಡಿತಕ್ಕೆ ಬಂದು ೪೮ ವರ್ಷಗಳಾದಾಗ, ಪ್ರತ್ಯೇಕತೆಯ ಮಾತಿಗೆ ಇಂಬು ಬರಬಾರದಾಗಿತ್ತು! ಆದರೆ ಬಹುಮತ ವಿಚಾರಿಗಳು ಹಿಂದುಳಿಯುವಿಕೆಯನ್ನೇ ಪ್ರೋತ್ಸಾಹಿಸುವಂತಿದೆ. ಆದ್ದರಿಂದ ಈಗ ಪ್ರತ್ಯೇಕತೆಯ ಮಾತು ಉಲ್ಬಣಗೊಳ್ಳುತ್ತಿದೆ. ಮತ್ತೆ ಎಲ್ಲ ಭಾಗದ ಕನ್ನಡಿಗರು ತಮ್ಮನ್ನು ಮರ್ಯಾದೆಯಿಂದ ಕರೆಯಬೇಕೆಂದು ಒಕ್ಕೊರಲು ನೀಡತೊಡಗಿದ್ದಾರೆ. ಆದರೆ ಈ ಪ್ರತ್ಯೇಕತೆಯ ಸೊಲ್ಲು ಎಂದೆಂದಿಗೂ ಬೇಡ. ನಾವೆಲ್ಲ ಒಂದು, ಒಂದೇ ಕನ್ನಡ ಎನ್ನುವುದು ನೆಲೆನಿಂತು ಜೀವನದ ಸೆಲೆಯ ಅಲೆ ಅಲೆಯಾಗಿ ಹಬ್ಬಬೇಕಾದರೆ – ಸೊರಗಿದ ಭಾಗವನ್ನು ತುಂಬಿ ಅವರನ್ನು ಸ್ವಾವಲಂಬಿಗೊಳಿಸಬೇಕಿದೆ. ತಾಯಿಗೆ ಎಲ್ಲ ಮಕ್ಕಳೂ ಅಷ್ಟೆ. ಆದರೆ ನಿಕ್ಕಳಿಕೆಗೆ ಒಳಗಾದ ಮಗುವಿನ ಬಗ್ಗೆ ತಾಯಿಗೆ ವಿಶೇಷ ಕಾಳಜಿ ಇರಬೇಕಾದುದು ಸ್ವಾಭಾವಿಕ. ಇದನ್ನು ಆಕೆಯ ಜಾಣ ಮಕ್ಕಳೆಲ್ಲ ತಿಳಿದುಕೊಂಡು, ತಾಯಿಯ ಅಂತಃಕರುಣೆಯ ಕಾಳಜಿಯನ್ನು ತಾವೂ ಹೊತ್ತು, ನಿಕ್ಕಳಿಕೆಗೆ ಒಳಗಾದ ಸೋದರ-ಸೋದರಿಯರ ಬಗ್ಗೆ ಪ್ರೀತಿ ತೋರಿಸಲು ಮುಂದಾಗಬೇಕಾಗುತ್ತದೆ. ಹೀಗಳಿಕೆ ನಿಂತು ಸ್ವಾಭಿಮಾನ ಮತ್ತು ದತ್ತ ಸ್ವಾತಂತ್ರ್ಯಗಳಿಗೆ ಕಾಯಕಲ್ಪ ನೀಡಲು ವಿಶೇಷ ಅವಕಾಶ ನೀಡಿ ಕುಟುಂಬವೆಲ್ಲ ಸಹಕರಿಸಬೇಕಾಗುತ್ತದೆ. ಹೀಗಾಗುವಾಗ ಉಸುಗಿನ ಗಣಪಕ್ಕೆ ಹಾಲಿನ ಜಳಕ ಮಾಡಿಸುವುದು ಬೇಡ. ಉಸುಗಿನಿಂದ ಎಣ್ಣೆ ತೆಗೆಯುವ ಕಸುವಿಗೆ ಪ್ರೇರಣೆಯಾಗುವುದೇ ಹಿತ. ಅದಕ್ಕಾಗಿ ವಿಶೇಷ ಪ್ಯಾಕೇಜುಗಳನ್ನು ನೀಡಿ, ಕೊರತೆಗಳನ್ನು ಕೊರಗುಗಳನ್ನು ತುಂಬಿಕೊಂಡು, ಜೀವನೋಲ್ಲಾಸವನ್ನು ಸಾನ್ನಿಧ್ಯಗೊಳಿಸುವ ಕಡೆ ಗಮನಕೊಡಬೇಕೆ ವಿನಾ ಎಲ್ಲವೂ ಪ್ರಚಾರಕ್ಕಾಗಿ ಮಾಡುವ ಉಗುಳು ಮಂತ್ರವಾಗಬಾರದು. ತೋರಿಕೆ ನಿಂತು ತ್ರಿಕರಣಶುದ್ಧಿಯಾದ ಫಲಿತಾಂಶ ನೀಡಲು ಸಮತೋಲಕ್ಕೆ ಬರುವ ಪರಿಪಾಠವನ್ನು ಜಾಗೃತಗೊಳಿಸಿಕೊಳ್ಳಬೇಕು. ಸ್ವಾರ್ಥರಹಿತ, ಆತ್ಮಸಾಕ್ಷಿಯ ಅನುಷ್ಠಾನವು ಜನಪ್ರತಿನಿಧಿಗಳಲ್ಲಿ ಸಾಪೇಕ್ಷವಾಗಿ ಫಲಿಸಿದರೆ ಪ್ರತ್ಯೇಕ ರಾಜ್ಯದ ವಿಚಾರವು ತನ್ನಷ್ಟಕ್ಕೆ ತಾನೇ ಅಂತರ್ಧಾನವಾಗುತ್ತದೆ. ಈಗ ಇದರ ಅರಿವು ಅವರಿಗೆ ಮೂಡದಿದ್ದರೆ, ಮತ್ತೆ ಹರಿದ ಕೌದಿಯನ್ನು ಹೊಲಿಯುವುದು ಕಷ್ಟವಾದೀತು!

ಆದ್ದರಿಂದ ಈಗಿರುವ ಏಕೀಕೃತ ವ್ಯವಸ್ಥೆಯಲ್ಲಿ ನಿಷ್ಠುರವಾಗಿಯೇ ಕೊರತೆಗಳನ್ನು ಕೊರಗುಗಳನ್ನು ತುಂಬಿಕೊಳ್ಳುವ ವ್ಯವಸ್ಥೆ ಮಾಡಿಕೊಳ್ಳಬೇಕು. ಇಲ್ಲದೆ ಹೋದರೆ ಬಿಚ್ಚಿಹೋದ ಕೌದಿಯ ತೇಪೆಗಳ ತುಂಬ ಮಂತ್ರಿಗಳು ಹೆಚ್ಚಾಗಿ ಗೂಟದ ಕೆಂಪುಕಾರುಗಳು ಹೆಚ್ಚಾಗುತ್ತವೆ. ರಾಯಭಾರಗಳು ಹೆಚ್ಚುತ್ತವೆ. ಮತ್ತೆ ಪ್ರಜಾಪ್ರಭುತ್ವದ ಸ್ವಾಮಿಯು – ಕನಸು ಒಡೆದುಕೊಂಡ ತಿರುಕನಾಗುತ್ತಾನೆ!

ಇದು ಬೇಡ. ಏಕೆಂದರೆ 'ಕರ್ನಾಟಕದಿಂದಲೇ ಜಗದೇಳಿಗೆಯಾಗಲಿದೆ' ಎಂಬ ಕವಿವಾಣಿ ಈಗಾಗಲೇ ತನ್ನ ಮಾತನ್ನು ವಿಜ್ಞಾನದ ವಿದ್ಯುನ್ಮಾನದಲ್ಲಿ ಸಾರ್ಥಕಗೊಂಡಿದೆ. ಈ ಬಗೆಯನ್ನು ಬದುಕಿನ ಸರ್ವಾಂಗೀಣ ಪ್ರಗತಿಯ ಸಾಧನೆಯಲ್ಲಿ ಎಲ್ಲ ಮೈಗಳಲ್ಲಿಯೂ

[illegible] ಭೃಂಗಕೋಟಿಯ ಮಕ್ಕಳಾದ ನಾವು ಈ ಸತ್ಯವನ್ನು ಕಂಡುಕೊಂಡು ನಡೆಯದಿದ್ದರೆ ನಾಚಿಕೆಗೇಡು!

ಆದ್ದರಿಂದ ತುಂಡು ತುಂಡು ಕರ್ನಾಟಕ – ಪ್ರತ್ಯೇಕ ಪ್ರತ್ಯೇಕ ರಾಜ್ಯಗಳ ಕರ್ನಾಟಕ ಬೇಡ. ಅಖಂಡ ಕರ್ನಾಟಕವೇ ಆಚಂದ್ರಾರ್ಕ ನನಸಾಗಿರಲಿ. ಕಾಸರಗೋಡು, ಸೊಲ್ಲಾಪುರ, ಉದ್ಗೀರಗಳೂ ತಾಯಿಯ ಉಸಿರಿಗೆ ಸೇರಲಿ.

ಪ್ರೊ॥ ವಸಂತ ಕುಷ್ಟಗಿ, ಎಂಐಜಿ ೨೬
ಆದರ್ಶನಗರ, ಮೊದಲ ಹಂತ, ಗುಲಬರ್ಗಾ – ೫೮೫ ೧೦೫

## ಪ್ರತ್ಯೇಕತೆಯ ಸೊಲ್ಲು

– ವೀರೇಂದ್ರ ಸಿಂಪಿ

ಸುಮಾರು ೫೦ ವರ್ಷಗಳ ಹಿಂದೆ ಐದು ಪ್ರದೇಶಗಳಲ್ಲಿ ಹರಿದು ಹಂಚಿಹೋದ ಕರ್ನಾಟಕ ಒಂದುಗೂಡಿತು. ಅಂದು ಭಾರತಕ್ಕೆ ಸ್ವಾತಂತ್ರ್ಯ ಅವಶ್ಯವಾಗಿರುವಂತೆ ಕರ್ನಾಟಕಕ್ಕೆ ಏಕೀಕರಣದ ಅವಶ್ಯಕತೆಯೂ ಇತ್ತು. ಅದರಿಂದ ಕರ್ನಾಟಕದ, ಕನ್ನಡ ಭಾಷೆಯ, ಕನ್ನಡಿಗರ ಸರ್ವತೋಮುಖ ಪ್ರಗತಿ ಸಾಧ್ಯವೆಂದು ನಮ್ಮ ಹಿರಿಯ ರಾಜಕೀಯ ಧುರೀಣರು ಹಾಗೂ ಲೇಖಕರು ಕನಸು ಕಂಡಿದ್ದರು. ದುರ್ದೈವದಿಂದ ಅವರೆಲ್ಲರ ಕನಸು ಇಂದು ನುಚ್ಚುನೂರಾಗಿ ಹೋಗಿದೆ.

ಇದಕ್ಕೆ ಮುಖ್ಯ ಕಾರಣ – ನಮ್ಮ ರಾಜ್ಯಕ್ಕೆ ನಿಜಲಿಂಗಪ್ಪ, ದೇವರಾಜ ಅರಸು ಹಾಗೂ ವೀರೇಂದ್ರ ಪಾಟೀಲರ ಹೊರತಾಗಿ ಎಂದಿಗೂ ಯೋಗ್ಯ ಮುಖಂಡತ್ವ ದೊರಕಲೇ ಇಲ್ಲ. ಅದರಿಂದಾಗಿ ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ ಹೋಗಲೇ ಇಲ್ಲ. ಇಲ್ಲಿಯವರೆಗೆ ಆಳಿದ ಎಲ್ಲ ರಾಜಕೀಯ ಮುಖಂಡರ ಲಕ್ಷ್ಯವೆಲ್ಲ ಬೆಂಗಳೂರಿನ ಹಾಗೂ ಹಳೆಯ ಮೈಸೂರಿನ ಜಿಲ್ಲೆಗಳ ಸುಧಾರಣೆಯತ್ತ ಕೇಂದ್ರೀಕೃತವಾಗಿತ್ತೇ ಹೊರತು ಉತ್ತರ ಕರ್ನಾಟಕದ, ಅದರಲ್ಲೂ ವಿಶೇಷವಾಗಿ ಹೈದ್ರಾಬಾದ್ ಕರ್ನಾಟಕದ ಅಭಿವೃದ್ಧಿಗೆ ಲಕ್ಷ್ಯಕೊಡಲಿಲ್ಲ.

ಒಂದನೆಯದಾಗಿ, ಎಲ್ಲ ಕೈಗಾರಿಕೆಗಳು ಬೆಂಗಳೂರಿಗೆ ಸೀಮಿತವಾದವು. ತತ್ಪರಿಣಾಮವಾಗಿ ಉತ್ತರ ಕರ್ನಾಟಕ ಹಾಗೂ ಹೈದ್ರಾಬಾದ್ ಕರ್ನಾಟಕದಲ್ಲಿ ಇಂದಿಗೂ ಕೈಗಾರಿಕೆಗಳೇ ಇಲ್ಲ. ಅದರಿಂದಾಗಿ ಈ ಭಾಗದ ಯುವಕರು ಎಲ್ಲ ನೌಕರಿ ಉದ್ಯೋಗಗಳಿಂದ ವಂಚಿತರಾದರು.

ಎರಡನೆಯದಾಗಿ, ಉತ್ತರ ಕರ್ನಾಟಕದಲ್ಲಿ ಹಾಗೂ ಹೈದ್ರಾಬಾದ್ ಕರ್ನಾಟಕದಲ್ಲಿ ಶೈಕ್ಷಣಿಕ ಪ್ರಗತಿ ಆಗಬೇಕಾದಷ್ಟು ಆಗಲೇ ಇಲ್ಲ. ಈ ಭಾಗದಲ್ಲಿ ವಿಶ್ವವಿದ್ಯಾಲಯಗಳ ಸ್ಥಾಪನೆಯೂ ತಡವಾಗಿಯೇ ಆಯಿತು. ಹೀಗಾಗಿ ಇಂದಿಗೂ ಈ ಭಾಗದ ಯುವಕರು ಬೆಂಗಳೂರಿನ ಹಾಗೂ ಹಳೆಯ ಮೈಸೂರಿನ ಯುವಕರ ಜೊತೆಗೆ ಶೈಕ್ಷಣಿಕ, ಸಾಂಸ್ಕೃತಿಕ ಸ್ಪರ್ಧೆಗಳಲ್ಲಿ ಸರಿಸಮಾನರಾಗಿ ಸ್ಪರ್ಧಿಸಲು ಸಾಧ್ಯವಾಗಲೇ ಇಲ್ಲ. ಈ ಭಾಗದ ಲೇಖಕರೂ ಕೂಡ ಇಂದಿಗೂ ಬೆಂಗಳೂರಿನ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳ ಲೇಖಕರಿಗೆ ದಕ್ಕಿದ ಬೌದ್ಧಿಕ ಶಿಸ್ತನ್ನು ದೊರಕಿಸಿಕೊಳ್ಳಲು ಸಾಧ್ಯವಾಗಲೇ ಇಲ್ಲ.

ಮೂರನೆಯದಾಗಿ, ರಾಜಧಾನಿಯಿಂದ ಭೌಗೋಲಿಕವಾಗಿ ದೂರವಿರುವ ಈ ಭಾಗದ ಸಾಹಿತಿಗಳಿಗೆ, ಕಲಾವಿದರಿಗೆ ಸರಕಾರದಿಂದ ನಿಯುಕ್ತವಾದ ಅಕಾಡೆಮಿ ಹಾಗೂ ಇತರ ನಿಗಮಗಳಲ್ಲಿ ಅವಕಾಶ ದೊರೆಯಲೇ ಇಲ್ಲ. ನವೆಂಬರ್ ೧ರಂದು ಸರಕಾರ ದಯಪಾಲಿಸುವ – ಲಾಬಿಗೆ ಮಣಿದು ದಯಪಾಲಿಸುವ – ರಾಜ್ಯೋತ್ಸವ ಪ್ರಶಸ್ತಿಯಲ್ಲಿ ಈ ಭಾಗದ ಪ್ರತಿಭೆಗಳಿಗೆ ಮನ್ನಣೆ ಸಿಗುವುದೇ ಇಲ್ಲ. ಒಂದು ವಾಸ್ತವ ಸತ್ಯವೆಂದರೆ – ಬೆಂಗಳೂರಿನ ಸರಕಾರಿ ಹಾಗೂ ಸಾಂಸ್ಕೃತಿಕ ವಲಯಗಳಲ್ಲಿ ಉತ್ತರ ಕರ್ನಾಟಕದ ಪ್ರತಿಭೆಗಳನ್ನು ಯಾರೂ ಗುರುತಿಸುವುದಿಲ್ಲ. ಈ ಭಾಗದ ಶಾಸಕರು ತಮ್ಮ ತಮ್ಮ ವೈಯಕ್ತಿಕ ಅಭಿವೃದ್ಧಿ ಮಾಡಿಕೊಳ್ಳಲು ಹೆಣಗುತ್ತ ಬಂದಿದ್ದಾರೆಯೇ ವಿನಾ ಈ ಭಾಗದ ಪ್ರತಿಭೆಗಳನ್ನು ಸರಕಾರಕ್ಕೆ ಪರಿಚಯಿಸುವ ಜವಾಬ್ದಾರಿಯನ್ನು ಅರಿತಿಲ್ಲ. ಅದರಂತೆ ಸಾರ್ವಜನಿಕ ಗ್ರಂಥಾಲಯವೆಂಬ ಸರಕಾರೀ ಇಲಾಖೆ ಬೆಂಗಳೂರಿನ ಕೆಲವೇ ಪ್ರತಿಷ್ಠಿತ ಪ್ರಕಾಶಕರ ಪುಸ್ತಕಗಳ ಸಗಟು ಖರೀದಿ ಮಾಡುತ್ತದೆಯೇ ವಿನಾ ಕಲಬುರ್ಗಿಯ, ಹುಬ್ಬಳ್ಳಿಯ ಪ್ರಕಾಶಕರು ಪ್ರಕಟಿಸಿದ ಪುಸ್ತಕಗಳನ್ನು ಕಣ್ಣೆತ್ತಿ ನೋಡುವುದೇ ಇಲ್ಲ. ಈ ಭಾಗದ ಲೇಖಕರ ಪುಸ್ತಕಗಳ ವಿಮರ್ಶೆ ಬೇಡ. ಸಾದರ ಸ್ವೀಕಾರದಲ್ಲಿ ಉಲ್ಲೇಖಿಸುವ ಸೌಜನ್ಯವನ್ನೂ ಬೆಂಗಳೂರಿನ ಪತ್ರಿಕೆಗಳು ತೋರಿಸುವುದಿಲ್ಲ. ಅಂತೂ ಉತ್ತರ ಕರ್ನಾಟಕದ, ಹೈದ್ರಾಬಾದ್ ಕರ್ನಾಟಕದ ಲೇಖಕರು ಇಂದಿಗೂ ಬೌದ್ಧಿಕವಾಗಿ ಅಸ್ಪೃಶ್ಯರೇ ಆಗಿ ಉಳಿದಿದ್ದಾರೆ.

ಈ ಭಾಗದ ರೋಡುಗಳಂತೂ ದೇವರಿಗೇ ಪ್ರೀತಿ. ಬೀದರ ಜಿಲ್ಲೆಯ ಬಸವ ಕಲ್ಯಾಣದಂಥ ತಾಲ್ಲೂಕಿನ ಹಳ್ಳಿಗಳನ್ನು ತಲುಪಲು ರೋಡುಗಳೇ ಇಲ್ಲ. ಭಾರತಕ್ಕೆ, ಕರ್ನಾಟಕಕ್ಕೆ ಸಿಕ್ಕ ಸ್ವಾತಂತ್ರ್ಯ ಈ ಭಾಗಕ್ಕೆ ಸಿಗಲೇ ಇಲ್ಲ ಎನ್ನುವ ಪರಿಸ್ಥಿತಿಯಿದೆ. ಬೀದರಿನಿಂದ ಸಮೀಪದ ಮಹಾರಾಷ್ಟ್ರದ ಉದಗೀರ ಪಟ್ಟಣಕ್ಕೆ ಹೋಗಬೇಕಾದರೆ ಕರ್ನಾಟಕದ ಕಮಲ ನಗರದವರೆಗೆ ಮೈ ನುಗ್ಗು ಮಾಡುವ, ಎಲುವನ್ನು ಪುಡಿಪುಡಿ ಮಾಡುವ ತಗ್ಗು ದಿನ್ನೆಗಳ ರೋಡು ಇದ್ದರೆ ಮುಂದೆ ಕಮಲ ನಗರದಿಂದ ಉದಗೀರ ಮುಟ್ಟುವವರೆಗಿನ ಮಹಾರಾಷ್ಟ್ರದ ರೋಡು ಕನ್ನಡಿಯೋಪಾದಿಯಲ್ಲಿ ಇದೆ. ಇದು ನಮ್ಮ ಉತ್ತರ ಕರ್ನಾಟಕದ ರೋಡುಗಳ ದುರವಸ್ಥೆ. ನಮ್ಮ ಶಾಸಕರಿಗೆ ಇದೆಂದಿಗೂ ತಿಳಿಯುವುದೇ ಇಲ್ಲ.

ಐವತ್ತು ವರ್ಷಗಳ ಅವಧಿಯಲ್ಲಿ ಬೆಳಗಾವಿ, ಬೀದರಗಳಂಥ ಗಡಿ ಜಿಲ್ಲೆಗಳಲ್ಲಿ ಕನ್ನಡ ಉಳಿಸುವ, ಬೆಳೆಸುವ ವಾತಾವರಣವನ್ನೇ ಸರಕಾರಗಳು ಸೃಷ್ಟಿಸಲಿಲ್ಲ. ಬೀದರ ಜಿಲ್ಲೆಯ ಕೆಲ ಗಡಿ ಪ್ರದೇಶದ ಹಳ್ಳಿಗಳಲ್ಲಿ ಮರಾಠಿ ಮಾಧ್ಯಮದ ಶಿಕ್ಷಕರು ಕನ್ನಡ ಮಾಧ್ಯಮದ ಶಿಕ್ಷಕರನ್ನೂ ವಿದ್ಯಾರ್ಥಿಗಳನ್ನೂ ಶಾಲೆಯಿಂದ ಶಬ್ದಶಃ ಹೊರದಬ್ಬಿದ ನಿದರ್ಶನಗಳಿವೆ. ಕರ್ನಾಟಕದಲ್ಲಿ ಕನ್ನಡಕ್ಕೆ ರಕ್ಷಣೆಯಿಲ್ಲ, ಇದರಂತಹ ಲಾಂಛನಾಸ್ಪದ ವಿಷಯ ಮತ್ತೊಂದಿಲ್ಲ.

ಗಡಿ ರಕ್ಷಣೆಯಲ್ಲೂ ನಮ್ಮ ಸರಕಾರಗಳು ಸಂಪೂರ್ಣ ವಿಫಲವಾಗಿವೆ. ಅಂತೆಯೇ ಎಂದೋ ಮುಗಿದುಹೋದ ಬೆಳಗಾವಿ ಪ್ರಶ್ನೆಯನ್ನು ಮಹಾರಾಷ್ಟ್ರ ಸರಕಾರ ಸುಪ್ರೀಮ್ ಕೋರ್ಟಿನ ಎದುರು ಒಯ್ಯುವ ದುಸ್ಸಾಹಸ ಮಾಡಿದೆ. ಪಾಪ, ಕರ್ನಾಟಕ ಸರಕಾರ ಈಗ ಎಚ್ಚೆತ್ತು ಗಡಿ ರಕ್ಷಣೆಯ ಸಮಿತಿ ನೇಮಿಸಿದೆ. ಇದು ನಮ್ಮ ಸರಕಾರಗಳ ಆಮೆಯ ಗತಿ.

ಜಲವಿವಾದದಲ್ಲೂ ಕೂಡ ನಮ್ಮ ಸರಕಾರಗಳಿಗೆ ಬಲವಿಲ್ಲ. ಇವರಿಗೆ ಗಟ್ಟಿಯಾದ ನಿಲುವುಗಳಿಲ್ಲ, ಕಳಕಳಿಯಿಲ್ಲ, ಪ್ರಬಲ ಇಚ್ಛಾಶಕ್ತಿಗಳಿಲ್ಲ. ಅಂತೆಯೇ ಜಲವಿವಾದದ

ಸುದ್ದಿ ಚಿತ್ರ

### 'ವ್ಯಕ್ತಿ ವಿಕಸನ ಮಾಲೆ'ಯ ಹನ್ನೆರಡು ಪುಸ್ತಕಗಳ ಅನಾವರಣ



೧೨-೧೨-೨೦೦೪ರಂದು ನಡೆದ ಸಮಾರಂಭದಲ್ಲಿ ನವಕರ್ನಾಟಕ ಪ್ರಕಟಿಸಿರುವ 'ವ್ಯಕ್ತಿ ವಿಕಸನ ಮಾಲೆ'ಯ ಹನ್ನೆರಡು ಪುಸ್ತಕಗಳನ್ನು ಓದುಗರಿಗೆ ಅರ್ಪಿಸಲಾಯಿತು. ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ॥ ಎಂ. ಎಸ್. ತಿಮ್ಮಪ್ಪ ಅಧ್ಯಕ್ಷತೆ ವಹಿಸಿದ್ದರು. ಮತ್ತು 'ಪ್ರಸ್ತುತ ಪರಿಸ್ಥಿತಿಯಲ್ಲಿ ಮನೋವಿಕಾಸ ಹೇಗಿರಬೇಕು?' ಎಂಬ ವಿಷಯದ ಮೇಲೆ ಉಪನ್ಯಾಸ ನೀಡಿದರು. ಖ್ಯಾತ ಸಾಹಿತಿ ಮತ್ತು ಚಲನಚಿತ್ರ ನಿರ್ದೇಶಕ ಶ್ರೀ ನಾಗತಿಹಳ್ಳಿ ಚಂದ್ರಶೇಖರ ಪುಸ್ತಕಗಳ ಪರಿಚಯ ಮಾಡಿದರು ಹಾಗೂ 'ಸಾಹಿತ್ಯ ಮತ್ತು ಮಾಧ್ಯಮಗಳು' ಕುರಿತು ಉಪನ್ಯಾಸ ನೀಡಿದರು. ಮಾಲೆಯ ಈ ಕಂತಿನ ಪುಸ್ತಕಗಳ ಲೇಖಕರೆಲ್ಲರೂ ಉಪಸ್ಥಿತರಿದ್ದರು.

## ಸಾದರ ಸ್ವೀಕಾರ

**ಗಾಂಧೀಗಿಡ** (ಕವನ ಸಂಕಲನ) *ಸತೀಶ ಕುಲಕರ್ಣಿ*
**ಪುಟ : ೮೨** **ಬೆಲೆ : ರೂ. ೩೫**
**ಲೋಹಿಯಾ ಪ್ರಕಾಶನ**
ಕಪ್ಪಗಲ್ಲು ರಸ್ತೆ , ಬಳ್ಳಾರಿ - ೫೮೩ ೧೦೩

**ಜೀವನಾಡಿ** (ಕವನ ಸಂಕಲನ) *ಎಲ್. ಖಾದರ್‌ಬಾಷಾ*
**ಪುಟ : ೬೫** **ಬೆಲೆ : ರೂ. ೩೦**
**ಮಲ್ಲಿಗೆ ಪ್ರಕಾಶನ**
ಹೂವಿನಹಡಗಲಿ, ಬಳ್ಳಾರಿ - ೫೮೩ ೨೧೯

**ಸುಮಯ್ಯಾ** (ನವಸಾಕ್ಷರರಿಗಾಗಿ ಜಾನಪದ ಕತೆಗಳು)
*ಸಾರಾ ಅಬೂಬಕ್ಕರ್*
**ಪುಟ : ೧೧೦** **ಬೆಲೆ : ರೂ. ೪೫**
**ಚಂದ್ರಗಿರಿ ಪ್ರಕಾಶನ,** ೨-೨೧-೧೬೩೧/೨ ಸೂಕ್ಷ್ಮ ತರಂಗ ನಿಲಯ ರಸ್ತೆ , ಮಂಗಳೂರು - ೫೭೫ ೦೦೬

**ಡಾ|| ಎಚ್. ಆರ್. ರಘುನಾಥಭಟ್ಟ** (ಸ್ಮರಣ ಸಂಚಿಕೆ)
*ಸಂ. ಪ್ರೊ|| ಲಕ್ಷ್ಮಣ್ ತೆಲಗಾವಿ*
**ಪುಟ : ೫೬** **ಬೆಲೆ : ರೂ. ೨೦**
**ಚಿತ್ರಕಲ್ಲು ಪ್ರಕಾಶನ,** 'ರೇಣು', ೧ನೇ ಕ್ರಾಸ್
ನೆಹರೂನಗರ, ಚಿತ್ರದುರ್ಗ-೫೭೭೫೦೧

**ಮಳೆಬಂದ ಮಾರನೆಯ ದಿನ** (ಕವನ ಸಂಕಲನ)
*ಗುಂಡಣ್ಣ ಕಲಬುರ್ಗಿ*
**ಪುಟ : ೭೮** **ಬೆಲೆ : ರೂ. ೭೫**
**ಸೌಜನ್ಯ ಪ್ರಕಾಶನ,** 'ಸೃಷ್ಟಿ', ಈರಣ್ಣನಗರ
ಮೂಡಲಗಿ - ೫೯೧ ೩೧೩

**ಭುವಿ ಆಕಾಶ** (ಕವನ ಸಂಕಲನ) *ಭಾರತೀಪುತ್ರ*
**ಪುಟ : ೨೮** **ಬೆಲೆ : ರೂ. ೩೫**

**ಯೋಧ** (ಕವನ ಸಂಕಲನ) *ಭಾರತೀಪುತ್ರ*
**ಪುಟ : ೨೪** **ಬೆಲೆ : ರೂ. ೩೦**

**ಕಂಬನಿ** (ಕವನ ಸಂಕಲನ) *ಭಾರತೀಪುತ್ರ*
**ಪುಟ : ೪೪** **ಬೆಲೆ : ರೂ. ೪೦**

**ಕಡತಯಜ್ಞ** (ನಾಟಕ ಸಂಕಲನ) *ಭಾರತೀಪುತ್ರ*
**ಪುಟ : ೪೬** **ಬೆಲೆ : ರೂ. ೫೦**
*ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು*
**ಭಾರತೀ ಸಾಹಿತ್ಯ ಪ್ರಕಾಶಕರು**
ಹಳೇ ಅಂಚೆ ಕಚೇರಿ ರಸ್ತೆ , ನಾಗಮಂಗಲ

**ವಿಜಲುಗಳು** (ಕವಣ ಸಂಕಲನ)
*ಡಾ|| ಜಾಜಿ ದೇವೇಂದ್ರಪ್ಪ*
**ಪುಟ : ೪೮** **ಬೆಲೆ : ರೂ. ೪೦**
**ಕನ್ನಡ ಸಾಹಿತ್ಯ ಪರಿಷತ್ತು** , ತಾಲ್ಲುಕು ಘಟಕ, ಸಿರುಗುಪ್ಪೆ

**ಕಹಿ ಕಾಫಿ** (ಲೇಖನ ಸಂಗ್ರಹ) *ರಾಜಿ*
**ಪುಟ : ೬೦** **ಬೆಲೆ : ರೂ. ೧೦**
ವಿಮುಕ್ತಿ ಪ್ರಕಾಶನ, ಬೆಂಗಳೂರು

**ಆನೆಬಾಗಿಲು** (ಕಥಾ ಸಂಕಲನ) *ಶಶಿ ಭಾಟಿಯ*
**ಪುಟ : ೨೮** **ಬೆಲೆ : ರೂ. ೨೫**
**ಸ್ವಂತಿಕಾ ಸಾಹಿತ್ಯ ಬಳಗ,** ಸುಳ್ಯ - ೫೭೪ ೨೩೯ (ದಕ)

**ಪುತಿನ ಪರಿಶೀಲನ** (ಲೇಖನ ಸಂಗ್ರಹ) *ಸಿ. ಪಿ. ಕೆ*
**ಪುಟ : ೮೮** **ಬೆಲೆ : ರೂ. ೪೦**
**ಚೇತನ ಬುಕ್‌ಹೌಸ್,** ರೇಣುಕಾಚಾರ್ಯ
ದೇವಸ್ಥಾನದ ರಸ್ತೆ , ಲಕ್ಷ್ಮಿ ಟಾಕೀಸ್ ಹಿಂಭಾಗ,
ಮೈಸೂರು - ೫೭೦ ೦೨೪

**ಕ್ಷಣ ಕ್ಷಣ** (ಹನಿಗವನಗಳು) *ಸಿ. ಪಿ. ಕೆ*
**ಪುಟ : ೧೧೨** **ಬೆಲೆ : ರೂ. ೮೦**

**ವಚನ ವಿಜ್ಞಾಪನ** (ವಚನಗಳು) *ಸಿ. ಪಿ. ಕೆ*
**ಪುಟ : ೧೩೬** **ಬೆಲೆ : ರೂ. ೧೦೦**
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಚಿತ್ರಭಾನು ಪ್ರಕಾಶನ,** ೨೨೬೫/೧೯, 'ಭಾರತಿ', ೬ನೇ ಕ್ರಾಸ್, ವಿನಾಯಕ ನಗರ, ಮೈಸೂರು - ೫೭೦ ೦೧೨

**ಕೋಲ್ಮಿಂಚು** (ಚಿಂತನ ಲೇಖನಗಳು) *ಸಿ. ಪಿ. ಕೆ*
**ಪುಟ : ೯೬** **ಬೆಲೆ : ರೂ. ೬೦**
**ಸಂವಹನ ಪ್ರಕಾಶನ,** ೧೨/೧A ಈವನಿಂಗ್ ಬಜಾರ್ ಹಿಂಭಾಗ, ಶಿವರಾಂಪೇಟೆ, ಮೈಸೂರು - ೫೭೦ ೦೦೧

**ಪರಿಮಳದಂಗಳ** (ವಿಷ್ಣು ಅಭಿನಂದನ)
*ಸಂ : ಪ್ರಕಾಶ ಕಡಮೆ, ಸುನಂದಾ ಕಡಮೆ*
**ಪುಟ : ೨೨೦** **ಬೆಲೆ : ರೂ. ೧೨೫**
ಸುನಂದಾ ಪ್ರಕಾಶ ಕಡಮೆ, ನಾಗಸುಧೆ ಪ್ರಕಾಶನ,
ಕಡಮೆ (ಉಕ)

**ಗೌರವ ತಪಸ್ವಿ** (ಪ್ರಬಂಧ ಮಂಜರಿ)
*ಎ. ಆರ್. ನಾರಾಯಣ ಘಟ್ಟ*
**ಪುಟ : ೮೦** **ಬೆಲೆ : ರೂ. ೩೦**
**ಗೀತಾ ಕುಟೀರ,** ೭೦, ರತ್ನವಿಲಾಸ ರಸ್ತೆ ,
ಬಸವನಗುಡಿ, ಬೆಂಗಳೂರು-೫೬೦೦೦೪

**ಬೆಳಗಾವಿ ಜಿಲ್ಲೆಯ ಸಾಹಿತ್ಯ ದರ್ಶನ**
*ಸಂ : ಡಾ|| ಪಿ. ಜಿ. ಕೆಂಪಣ್ಣನವರ*
**ಪುಟ : ೨೦೩** **ಬೆಲೆ : ರೂ. ೭೫**
**ಕನ್ನಡ ಜಾಗೃತಿ ಪುಸ್ತಕ ಮಾಲೆ,** ಅಲ್ಲಮಪ್ರಭು ಜನ ಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನ ಮಠ, ಚಿಂಚಣಿ - ೫೯೧ ೨೭೨, ಚಿಕ್ಕೋಡಿ, ಬೆಳಗಾವಿ

**ಹಿಡಿದ ಉಸಿರು** (ಕವನ ಸಂಕಲನ) *ಅಂಕುರ್ ಬೆಟಗೇರಿ*
**ಪುಟ : ೬೪** **ಬೆಲೆ : ರೂ. ೪೦**
**ಅಭಿನವ,** ೧೨/೧೮-೨, ಮೊದಲನೇ ಮುಖ್ಯರಸ್ತೆ , ಮಾರೇನಹಳ್ಳಿ, ವಿಯಜನಗರ, ಬೆಂಗಳೂರು-೪೦

**ಸಂತೋಷಕರ ಜೀವನಕ್ಕಾಗಿ ನೀವೇನು ಮಾಡಬೇಕು?**
*ಎನ್. ವಿಶ್ವರೂಪಾಚಾರ್*
**ಪುಟ : ೬೪** **ಬೆಲೆ : ರೂ. ೧೫**
**ವಿಶ್ವರೂಪ ಪ್ರಕಾಶನ,** ಬಿಲ್ಡಿಂಗ್ ನಂ. ೧೬೮
೨ನೇ ಮಹಡಿ, ಕೆ.ಎಚ್.ಬಿ. ಕಾಲೋನಿ, ಕೆಂಗೇರಿ
ಉಪನಗರ, ಬೆಂಗಳೂರು - ೫೬೦ ೦೬೦

**ಆರೋಗ್ಯ ವ್ಯಕ್ತಿತ್ವ; ಆಕರ್ಷಕ ವ್ಯಕ್ತಿತ್ವ**
*ಎನ್. ವಿಶ್ವರೂಪಾಚಾರ್*
**ಪುಟ : ೯೬** **ಬೆಲೆ : ರೂ. ೨೫**
**ಪದ್ಮಶ್ರೀ ಪ್ರಕಾಶನ,** ನಂ. ೭೭, ೬ನೇ ಮುಖ್ಯರಸ್ತೆ , ಹೆಚ್‌ಬಿಆರ್ ಲೇಔಟ್, ಬೆಂಗಳೂರು - ೫೬೦ ೦೭೯

**ಪುಸ್ತಕ ಪ್ರೀತಿ** (ಕಿರುಹೊತ್ತಗೆ) *ಜಗನ್ನಾಥ ಅ. ಸಣ್ಣೂರ*
**ಪುಟ : ೧೦** **ಉಚಿತ**
**ಜಗನ್ನಾಥ ಅ. ಸಣ್ಣೂರ,** ಅಧ್ಯಕ್ಷರು, ಚಾಲುಕ್ಯ ನವಯುವಕ ಸಂಘ, ವಾಸವದತ್ತಾ ಸಿಮೆಂಟ್ ಕಾಲೋನಿ, ಸೇಡಂ - ೫೮೫ ೨೨೨ (ಗುಲಬರ್ಗಾ)

---

ನೆಲೆಯಲ್ಲೂ ನಾವು ಅತ್ಯಂತ ದುರ್ಬಲರು. ನಮ್ಮ ಸರಕಾರಕ್ಕೆ ಕಾವೇರಿ ಸಮಸ್ಯೆ ಗೊತ್ತು. ಆದರೆ ಕೃಷ್ಣಾ, ಮಾಂಜರಾ ನದಿಗಳ ದಂಡೆಯ ರೈತರ ಸಮಸ್ಯೆ ತಿಳಿದೇ ಇಲ್ಲ, ತಿಳಿಯಬೇಕೆಂಬ ಇಚ್ಛೆಯೂ ಇಲ್ಲ. ಒಟ್ಟಿನಲ್ಲಿ ಸರಕಾರಗಳು ಜನಪರವಾಗಿಲ್ಲ. ಅವರಿಗೆ ಕುರ್ಚಿ ಬೇಕೇ ವಿನಾ ಜನಸಾಮಾನ್ಯರ ಬದುಕು, ಬಾಳ್ವೆ, ಹಿತಗಳು ಬೇಕಾಗಿಲ್ಲ.

ಈ ಭಾಗದಲ್ಲಿ ರೇಲ್ವೆ ವಲಯವನ್ನು ಸ್ಥಾಪಿಸುವುದರಲ್ಲಿ, ಹೈಕೋರ್ಟಿನ ಪೀಠಗಳನ್ನು ಒದಗಿಸುವಲ್ಲಿ, ಸರಕಾರ ವಿಫಲವಾಗಿದೆ. ಕೊನೆಗೆ ಹುಬ್ಬಳ್ಳಿಯಲ್ಲಿ ಅಂತೂ ಇಂತೂ ಸ್ಥಾಪನೆಗೊಂಡ ರೇಲ್ವೆ ವಲಯದಲ್ಲಿ ಕನ್ನಡಿಗರಿಗೆ ಅತಿ ಕಡಿಮೆ ಪ್ರಮಾಣದ ನೇಮಕಾತಿಯೂ ಇಲ್ಲವೆನ್ನುವುದನ್ನು ಇತ್ತೀಚಿನ ವರದಿ ಸ್ಪಷ್ಟಪಡಿಸಿದೆ. ಹೀಗಾಗಿ ಉತ್ತರ ಕರ್ನಾಟಕದ, ಹೈದ್ರಾಬಾದ್ ಕರ್ನಾಟಕದ ಜನರಿಗೆ ನ್ಯಾಯ ಸಿಗುವುದೇ ಇಲ್ಲ. ಇತ್ತೀಚೆಗೆ ಇಂದಿನ ಮುಖ್ಯಮಂತ್ರಿಗಳು ಈ ಭಾಗದ ಅಭಿವೃದ್ಧಿಗೆ ವಿಶೇಷವಾಗಿ ಗುಲಬರ್ಗಾ ಜಿಲ್ಲೆಗೆ ವಿಶೇಷ ಸೌಲಭ್ಯದ ಆಶ್ವಾಸನೆಯ ಸುರಿಮಳೆ ಸುರಿಸಿದರು. ಅದು ಅನುಷ್ಠಾನಕ್ಕೆಂದೂ ಬರದು ಎನ್ನುವುದು ಈ ಭಾಗದ ಜನರಿಗೆ ಎಂದೋ ತಿಳಿದಿದೆ.

ಇಂಥ ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಅಸಮಾನತೆಗಳನ್ನು ಅನುಭವಿಸಿದ ಇಲ್ಲಿಯ ಜನ ಈಗ ಪ್ರತ್ಯೇಕ ರಾಜ್ಯದ ಸೊಲ್ಲನ್ನು ಎತ್ತುತ್ತಿದ್ದಾರೆ. ನವೆಂಬರ್ ೧ರಂದು ಪ್ರತ್ಯೇಕ ರಾಜ್ಯದ ಧ್ವಜವನ್ನು ಹಾರಿಸುತ್ತಿದ್ದಾರೆ. ಆದರೆ ಪ್ರತ್ಯೇಕ ರಾಜ್ಯದ ಕುರಿತ ಅವರ ಬೇಡಿಕೆ ಆಳವಾದ ನೈಜ ಬೇಡಿಕೆಯೇನೂ ಅಲ್ಲ. ಅದು ಆಳುವ ಸರಕಾರಕ್ಕೆ ಕೊಟ್ಟ ಎಚ್ಚರಿಕೆಯ ಗಂಟೆ ಮಾತ್ರ. ಕುಂಭಕರ್ಣ ನಿದ್ರೆ ಮಾಡುತ್ತಿರುವ ಸರಕಾರವನ್ನು ಎಚ್ಚರಿಸುವ ವಿಧಾನ ಮಾತ್ರ.

ಇನ್ನು ಪ್ರತ್ಯೇಕ ರಾಜ್ಯ ಸ್ಥಾಪನೆ ಯಾವ ದೃಷ್ಟಿಯಿಂದಲೂ ಯೋಗ್ಯವಾದುದಲ್ಲ. ಅದಕ್ಕಾಗಿ ಅಧಿಕಾರದ ವಿಕೇಂದ್ರೀಕರಣ, ರಾಜ್ಯ ಮಟ್ಟದ ಕಛೇರಿಗಳ ಸ್ಥಳಾಂತರ, ನಂಜುಂಡಪ್ಪ ವರದಿಯ ಅನುಷ್ಠಾನ, ಅಸೆಂಬ್ಲಿಯ ಅಧಿವೇಶನಗಳನ್ನು ಈ ಭಾಗದಲ್ಲಿ ನಡೆಸುವ ಯೋಜನೆ ಈ ಭಾಗದ ಜನರ ನಿರಾಶೆಯನ್ನು ಕಡಿಮೆ ಮಾಡುವ ಉಪಾಯಗಳಾಗಿವೆ. ಒಟ್ಟಿನಲ್ಲಿ ಉತ್ತರ ಕರ್ನಾಟಕದ, ಹೈದ್ರಾಬಾದ್ ಕರ್ನಾಟಕದ ಸರ್ವತೋಮುಖ ಅಭಿವೃದ್ಧಿಗಾಗಿ ನೀಲೀ ನಕ್ಷೆ ತಯಾರಿಸುವ ಮೂಲಕ, ಕೆಲ ದಿಟ್ಟ ಆರ್ಥಿಕ ಕ್ರಮಗಳನ್ನು ಕೈಕೊಳ್ಳುವುದರ ಮೂಲಕ ಪ್ರತ್ಯೇಕ ರಾಜ್ಯದ ಕೂಗನ್ನು ಶಾಶ್ವತವಾಗಿ ನಿಲ್ಲಿಸಬಹುದು.

ವೀರೇಂದ್ರ ಸಿಂಪಿ, ವಿದ್ಯಾನಗರ ಕಾಲೋನಿ, ಬೀದರ - ೫೮೫ ೪೦೩

## ಕರ್ನಾಟಕ ಒಂದಾಗಿ ಉಳಿಯಬೇಕು, ಕನ್ನಡಿಗರು ಜೊತೆಗೂಡಿ ಬಾಳಬೇಕು

– ಬಿ. ವಿ. ಕಕ್ಕಿಲ್ಲಾಯ

**ಕ**ರ್ನಾಟಕ ರಾಜ್ಯ ರೂಪ ತಳೆದು ೫೦ ವರ್ಷಗಳು ತುಂಬುವುದಕ್ಕೆ ಇನ್ನೂ ಕೆಲವು ವರ್ಷಗಳು ಉಳಿದಿರುವಾಗಲೇ ಅದನ್ನು ಎರಡು ಹೋಳುಗಳಾಗಿ ಒಡೆಯಬೇಕೆಂಬ

ಕೂಗು ಎದ್ದಿದೆ. ಎರಡೇ ಯಾಕೆ? ನಾಲ್ಕಾದರೂ ಆಗಬಹುದಲ್ಲಾ? ಹತ್ತಾದರೂ ಆಗಬಹುದಲ್ಲಾ? ಅಂತಹ ಕೂಗುಗಳ ಒಳದನಿಗಳು ಸಹ ಇಲ್ಲದ್ದಿಲ್ಲ. ಭಾರತವು ಬ್ರಿಟಿಷ್ ಸಾಮ್ರಾಜ್ಯದಲ್ಲೊಂದು ವಸಾಹತಾಗಿ ಇದ್ದಾಗ ಆ ಸಾಮ್ರಾಜ್ಯಾಧಿಪತ್ಯದ ಸುಲಿಗೆ ದಬ್ಬಾಳಿಕೆಗಳಿಂದ ಕೂಡಿದ ಆಡಳಿತೆಯ ಅನುಕೂಲದ ಸಲುವಾಗಿ ರೂಪಿಸಲಾಗಿದ್ದ ಪ್ರಾಂತ್ಯಗಳ ಮತ್ತು ಆಶ್ರಿತ ರಾಜ್ಯಗಳ ವ್ಯವಸ್ಥೆಯೊಳಗೆ ಮತ್ತೆಲ್ಲ ಭಾಷೀಯ ಪ್ರದೇಶಗಳಿಗಿಂತ ಹೆಚ್ಚು ಛಿದ್ರೀಕರಿಸಲಾಗಿದ್ದ ಪ್ರದೇಶವಾಗಿತ್ತು ಕರ್ನಾಟಕ. ಅದು ವಿದೇಶಿ ಸಾಮ್ರಾಜ್ಯಶಾಹಿ ಮತ್ತು ಅದಕ್ಕೆ ಆಧಾರವಾಗಿ ವರ್ತಿಸುತ್ತಿದ್ದ ದೇಶೀಯ ಸಾಮಂತಶಾಹಿ, ನಿರಂಕುಶ ಪ್ರಭುತ್ವಗಳ ಒಡಂಬಡಿಕೆಯ ವಿಷಫಲವಾಗಿತ್ತು. ಸಂಪೂರ್ಣ ಸ್ವಾತಂತ್ರ್ಯ ಮತ್ತು ರಾಜ್ಯಗಳ ಭಾಷಾವಾರು ಪುನರ್‌ವಿಂಗಡಣೆಗಳು ಈ ವೈಷಮ್ಯವನ್ನು ಕೊನೆಗಾಣಿಸುವ ಸಲುವಾಗಿ ನಮಗೆ ಬೇಕಾಗಿತ್ತು. ನಮ್ಮ ಜನರು ತಮ್ಮ ಹೋರಾಟಗಳಿಂದ ತ್ಯಾಗ ಬಲಿದಾನಗಳ ಮೂಲಕ ಅದನ್ನು ಸಾಧಿಸಿದರು. ಅದಕ್ಕೆ ಈಗ ಆ ಹೋರಾಟಗಾರರ ವಾರಸುದಾರರು ಎನಿಸಿಕೊಂಡು ರಾಜ್ಯಭಾರ ನಡೆಸುವ ಸ್ಥಾಪಿತ ಹಿತಾಸಕ್ತಿಗಳ ಪ್ರತಿನಿಧಿಗಳು ತಿಳಿದೂ ತಿಳಿಯದವರಂತೆ ಕರ್ನಾಟಕವನ್ನು ಮತ್ತೆ ಒಡೆಯಲು ಹೊರಟಿದ್ದಾರೆ. ನಾವು ಅದನ್ನು ವಿರೋಧಿಸುತ್ತೇವೆ. ಯಾಕೆಂದರೆ ನಮ್ಮ ಸ್ವಾತಂತ್ರ್ಯ ಅರ್ಥಪೂರ್ಣವಾಗಬೇಕಾದರೆ ಮತ್ತು ನಮ್ಮ ಪ್ರಜಾಪ್ರಭುತ್ವವು ಯಥಾರ್ಥವಾಗಬೇಕಾದರೆ ಕರ್ನಾಟಕವು ಒಂದಾಗಿ ಉಳಿಯಬೇಕು ಹಾಗೂ ಕನ್ನಡವು ಶಿಕ್ಷಣದ ಮತ್ತು ಆಡಳಿತದ ಭಾಷಾ ಮಾಧ್ಯಮವಾಗಬೇಕು.

ಎರಡು ಅಥವಾ ಹೆಚ್ಚು ಕರ್ನಾಟಕಗಳ ಕೂಗನ್ನು ಎಬ್ಬಿಸಿರುವವರು ಹರಿದು ಹಂಚಿಹೋಗಿದ್ದ ಕನ್ನಡಿಗರ ನಾಡಿನ ಸ್ವರೂಪವನ್ನು ಹಾಗೂ ಆರ್ಥಿಕ, ರಾಜಕೀಯ ಚಿತ್ರವನ್ನು ಮತ್ತೊಮ್ಮೆ ನೆನಪಿಗೆ ತಂದುಕೊಳ್ಳಬೇಕಾದ ಅಗತ್ಯವಿದೆ. ಅಂದಿನ ಕನ್ನಡಿಗರನ್ನು ಮತ್ತು ಅವರ ನೆಲವನ್ನು ಬ್ರಿಟಿಷರು ಮತ್ತು ಅವರೊಂದಿಗೆ ಸಮಜಾಯಿಷಿ ಮಾಡಿಕೊಂಡಿದ್ದ ರಾಜರುಗಳು ಪರಸ್ಪರ ಸಂಬಂಧವಿಲ್ಲದ ಹಾಗೂ ಪರಸ್ಪರ ವೈರುಧ್ಯಗಳಿಂದ ಕೂಡಿದ್ದ ಆರು ಆಡಳಿತಗಳೊಳಗೆ ಹರಿದು ಹಾಕಿದ್ದರು. ಕರ್ನಾಟಕದ ಪಶ್ಚಿಮದ ಕರಾವಳಿಯು ವಿದೇಶಗಳೊಂದಿಗೆ ನಮ್ಮ ಸುಲಭ ಸಂಬಂಧದ ಮಾರ್ಗವಾಗಿತ್ತು. ಅದು ಉತ್ತರದಲ್ಲಿ ಬೊಂಬಾಯಿಯ ರಾಜಧಾನಿಯಾಗಿದ್ದ ಪ್ರಾಂತ್ಯಕ್ಕೂ ತೆಂಕಣ ಭಾಗವು ಪೂರ್ವ ಕರಾವಳಿಯ ಮದರಾಸ್ ಪ್ರಾಂತ್ಯಕ್ಕೂ ಸೇರಿಸಲ್ಪಟ್ಟಿದ್ದವು. ಆ ಎರಡು ರಾಜ್ಯಗಳಾದರೋ ಬಹುಭಾಷಾ ರಾಜ್ಯಗಳಾಗಿದ್ದವು. ಯಾರಿಗೂ ಯಾವ ಅಧಿಕಾರವೂ ಇಲ್ಲದೆ ಎಲ್ಲರನ್ನೂ ಬ್ರಿಟಿಷರ ಅಡಿಯಾಳುಗಳನ್ನಾಗಿ ಇರಿಸುವ ಮತ್ತು ಎಲ್ಲ ಜನರನ್ನೂ ದುರ್ಬಲರನ್ನಾಗಿ ತುಳಿದಿಡುವ ವ್ಯವಸ್ಥೆಯಾಗಿತ್ತು ಅದು. ಕೊಡಗು, ಮೈಸೂರು, ಸೊಂಡೂರು, ರಾಮದುರ್ಗ ಇತ್ಯಾದಿ, ಇತ್ಯಾದಿ ಆಶ್ರಿತ ರಾಜ್ಯಗಳಲ್ಲಿ ಹರಿದು ಹಂಚಲ್ಪಟ್ಟಿದ್ದುದಲ್ಲದೆ ನಾಲ್ಕು ಜಿಲ್ಲೆಗಳು ಮುಂಬಯಿ ಪ್ರಾಂತ್ಯದೊಳಗೂ ಮೂರು ಜಿಲ್ಲೆಗಳು ಕನ್ನಡ ಭಾಷೆ ಪರದೇಶಿ ಎನಿಸಿದ್ದ ಹೈದರಾಬಾದ್ ಸಂಸ್ಥಾನದೊಳಗೂ ಸೇರಿದ್ದವು. ಆ ವಿಶಾಲ ಪ್ರದೇಶದ ಕಾವೇರಿ, ಕೃಷ್ಣಾ, ತುಂಗಾಭದ್ರಾ, ಘಟಪ್ರಭ, ಮಲಪ್ರಭ ಮೊದಲಾದ ಜೀವನದಿಗಳು ಸುತ್ತಮುತ್ತಲಿನ ರಾಜ್ಯಗಳ ಪರದೇಶಿ ಪ್ರಭುತ್ವಗಳಿಗೆ ಒಳಪಟ್ಟು ಕನ್ನಡಿಗರು ತಮ್ಮ ನೀರಿನ ಹಕ್ಕನ್ನು ತಾವು ಕಳೆದುಕೊಳ್ಳುವಂತಾಗಿತ್ತು. ಅದಿರುಗಳು, ಅರಣ್ಯ ಸಂಪತ್ತುಗಳು ಮುಂಬಯಿ, ಮದರಾಸ್ ಬಂದರುಗಳಿಗೆ ಓಡುವ ರೈಲುಗಳ ಮೂಲಕ ಬ್ರಿಟಿಷ್ ಮಾರುಕಟ್ಟೆಗಳಿಗೆ ಸಾಗುವ ಸ್ಥಿತಿ ಇತ್ತು. ಅದನ್ನೆಲ್ಲ ಕೊನೆಗಾಣಿಸಿ ಕನ್ನಡನಾಡನ್ನು ೧೯೫೬ರಲ್ಲಿ ಒಂದೇ ಆಡಳಿತದೊಳಗೆ ತರಲಾಯಿತು. ಅನಂತರದ ದಿನಗಳಲ್ಲಿ ಬೆಂಗಳೂರಿನಲ್ಲಿ ಬೃಹತ್ ಸಾರ್ವಜನಿಕ ಸ್ವಾಮ್ಯದ ಉದ್ಯಮಗಳು ಬೆಳೆದವು. ನವ ಮಂಗಳೂರು ಬಂದರ ಸ್ಥಾಪನೆಯಾಯಿತು. ಪಶ್ಚಿಮ ಕರಾವಳಿಯ ಉದ್ದಕ್ಕೂ ಸಾಗುವ ರಾಷ್ಟ್ರೀಯ ಹೆದ್ದಾರಿ ಬೊಂಬಾಯಿ, ಕನ್ಯಾಕುಮಾರಿಗಳನ್ನು ಮತ್ತು ಕರಾವಳಿ ಬಯಲು ಸೀಮೆಗಳನ್ನು ಜೋಡಿಸಿದವು. ಕೊಂಕಣ ರೈಲ್ವೇ ಮತ್ತು ಇದೀಗ ಹಾಸನ-ಮಂಗಳೂರು ರೈಲ್ವೇಯ ಅಗಲ ಹಳಿಗಳಿಗೆ ಪರಿವರ್ತನೆ, ಮಂಗಳೂರು ವಿಮಾನ ನಿಲ್ದಾಣದ ಬಡಾವಣೆ ಇತ್ಯಾದಿಗಳೆಲ್ಲವೂ ಕರ್ನಾಟಕಕ್ಕೆ ಭಾರತದ ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಜೀವನದಲ್ಲಿ ಪ್ರಮುಖ ಸ್ಥಾನ-ಮಾನಗಳನ್ನು ಒದಗಿಸುವಂತಾಯಿತು. ಈ ಬೆಳವಣಿಗೆಗಳ ಜೊತೆಜೊತೆಗೆ ಊಳಿಗಮಾನ್ಯ ಹಾಗೂ ಬಂಡವಾಳಶಾಹಿ ವ್ಯವಸ್ಥೆಯು ಅಮೆರಿಕಾದ ಮತ್ತು ಬಹುರಾಷ್ಟ್ರೀಯ ಕಂಪೆನಿಗಳ ಅಂಕೆಯೊಳಗೆ ಸಿಲುಕಿ ಶೋಷಣೆಗೆ ಗುರಿಯಾಗುವ ಸ್ಥಿತಿ ತೀವ್ರಗೊಂಡಿತು. ಈ ಶೋಷಕ ವ್ಯವಸ್ಥೆಯು ನಾಡನ್ನೂ ಜನರನ್ನೂ ಒಡೆದು ಆಳುವ ಕ್ರಮಗಳನ್ನು ಮತ್ತು ತಂತ್ರಗಳನ್ನು ಹರಿತಗೊಳಿಸಿದವು. ಯಾವುಯಾವುದೋ ಹೆಸರಿನಲ್ಲಿ ಜನರನ್ನು ಪರಸ್ಪರ ವಿರೋಧವಾಗಿ ಉದ್ರೇಕಗೊಳಿಸುವ ಮತ್ತು ಬಡಿದಾಟವೆಬ್ಬಿಸುವ ಪ್ರಕ್ರಿಯೆ ಇಂದು ತೀವ್ರವಾಗಿದೆ. ಈ ನಡುವೆ ಕನ್ನಡ ಜನರನ್ನೂ ಕನ್ನಡಿಗರ ನೆಲವನ್ನೂ

ಮತ್ತೊಮ್ಮೆ ಒಡೆದು ಒಡೆದು ನಿರ್ವೀರ್ಯಗೊಳಿಸುವ ಚಳುವಳಿಗಳು ತಲೆ ಎತ್ತುತ್ತಿವೆ. ಒಂದೇ ಕಾನೂನಿನ ಚೌಕಟ್ಟಿಗೆ ಬಂದಿರುವ ಕರ್ನಾಟಕಕ್ಕೆ ಹಲವು ಪ್ರಾದೇಶಿಕ ಹೈಕೋರ್ಟ್ ಪೀಠಗಳು ಬೇಕೆಂಬ ಚಳುವಳಿ ತೀವ್ರ ರೂಪ ತಳೆದು ರಾಜ್ಯವನ್ನೇ ಒಡೆಯುವ ಅಟ್ಟಹಾಸವು ಇತ್ತೀಚೆಗೆ ಭುಗಿಲೆದ್ದಿದೆ. ಅದೃಷ್ಟವಶಾತ್ ಚಳುವಳಿಗಾರರಿಗೆ ವಿವೇಕೋದಯವಾಗಿ ಶ್ರೇಷ್ಠ ನ್ಯಾಯಾಲಯದ ಎರಡು ಸಂಚಾರಿ ಪೀಠಗಳು ಹುಬ್ಬಳ್ಳಿ ಹಾಗೂ ಗುಲ್ಬರ್ಗಾದಲ್ಲಿ ಸ್ಥಾಪನೆಯಾಗುವುದರ ಜೊತೆಗೆ ಕರ್ನಾಟಕವು ಒಂದಾಗಿ ಉಳಿಯುವ ಸ್ಥಿತಿಗೂ ಚಳುವಳಿಗಾರರು ಸಮ್ಮತಿಸಿದರು. ಇದು ಸಂತೋಷದ ಸಂಗತಿ. ಆದರೆ, ಭಾರತದ ಛಿದ್ರೀಕರಣಕ್ಕೆ ನಾಂದಿಯೆಂಬಂತೆ ಕರ್ನಾಟಕದ ಛಿದ್ರೀಕರಣವು ಮರುಕಳಿಸುವ ಅಪಾಯವು ಉಳಿದೇ ಉಳಿದಿದೆ ಎಂಬುದನ್ನು ನಾವು ಗುರುತಿಸ ಬೇಕಾಗಿದೆ. ಭಾರತದ ಏಕತೆಯ ಜೊತೆಯಲ್ಲಿ ಕರ್ನಾಟಕದ ಏಕತೆಯನ್ನು ಎಲ್ಲಾ ತ್ಯಾಗ ಬಲಿದಾನಗಳನ್ನು ನೀಡಿಯಾದರೂ ಸಂರಕ್ಷಿಸುವ ಜವಾಬ್ದಾರಿ ನಮ್ಮ ಪ್ರಬುದ್ಧ ಜನತೆಯದ್ದಾಗಿದೆ. ''ಭಾರತ ಜನನಿಯ ತನುಜಾತೆ ಜಯ ಹೇ ಕರ್ನಾಟಕ ಮಾತೆ'' ಎಂಬ ಕುವೆಂಪುರವರ ಹಾಡು ಎಂದೆಂದಿಗೂ ನಮಗೆ ಸ್ಫೂರ್ತಿಯನ್ನು, ಶಕ್ತಿಯನ್ನು ನೀಡಲಿ ಎಂದು ಹಾರೈಸುತ್ತೇನೆ.

ಬಿ. ವಿ. ಕಕ್ಕಿಲ್ಲಾಯ, 'ಗಂಗಾ', ನಂ. ೩-೧೭/೪, ಸ್ಟೈಮನ್ ರಸ್ತೆ
ಕಂಕನಾಡಿ, ಮಂಗಳೂರು -೫೭೫ ೦೦೨

## ದ್ವಿತೀಯ ಕರ್ನಾಟಕ ಅಗತ್ಯವೆ ?

— ಕೋ. ಚೆನ್ನಬಸಪ್ಪ

ಕರ್ನಾಟಕ ಏಕೀಕರಣವಾಗಿ ಇನ್ನೆರಡು ವರ್ಷಗಳಲ್ಲಿ ಐವತ್ತು ವರ್ಷಗಳೆ ಆಗುತ್ತದೆ. ಏಕೀಕರಣಕ್ಕೆ ನಾಂದಿಯಾದ ಬಳ್ಳಾರಿ ಜಿಲ್ಲೆ ಮೈಸೂರು ಸೀಮೆಯಲ್ಲಿ ವಿಲಯನವಾಗಿ ಐವತ್ತೊಂದು ವರ್ಷಗಳೆ ಮುಗಿದುಹೋದವು. ಯಾವ ಉದ್ದೇಶದಿಂದ ಏಕೀಕರಣ ಎಂಬ ಘಟನೆ ಜರುಗಿತು, ಆ ಉದ್ದೇಶ ಎಷ್ಟರಮಟ್ಟಿಗೆ ಈಡೇರಿತು ಎಂದು ಹಿಂದಿರುಗಿ ನೋಡುವ ಅಗತ್ಯವಿದೆ.

ಹತ್ತೊಂಭತ್ತನೇ ಶತಮಾನದ ಕೊನೆಯಲ್ಲಿ, ಇಪ್ಪತ್ತನೇ ಶತಮಾನದ ಮೊದಲ ಎರಡು ದಶಕಗಳಲ್ಲಿ ಕರ್ನಾಟಕ ಏಕೀಕರಣದ ಕನಸು ಕಟ್ಟಿದವರ ಉದ್ದೇಶ, ಆ ಕನಸು ನನಸಾಗಲು ಆ ತರುವಾಯ ಪ್ರಯತ್ನಿಸಿದವರ, ಚಳವಳಿ ಹೂಡಿದವರ ಪ್ರಾಥಮಿಕ ಉದ್ದೇಶ ಕನ್ನಡ ಮಾತನಾಡುವ ಜನರು ತಮ್ಮ ಮಾತೃಭಾಷೆಯಲ್ಲೆ ಶಿಕ್ಷಣ ದೊರೆಯಬೇಕು ಎಂಬುದಾಗಿತ್ತು. ಐತಿಹಾಸಿಕ ಕಾರಣಕ್ಕಾಗಿ ಕನ್ನಡ ಮಾತನಾಡುವ ಜನ ಮರಾಠಿ, ತೆಲುಗು, ತಮಿಳು ಭಾಷೆಗಳ ಪ್ರಾಂತ್ಯಗಳಲ್ಲಿ ಹಂಚಿಹೋಗಿ ಮಾತೃಭಾಷಾ ಶಿಕ್ಷಣದಿಂದ ವಂಚಿತರಾಗಿ ಅನಾಥಾವಸ್ಥೆಯಲ್ಲಿದ್ದರು. ಇದು ಒಂದು ಜನಾಂಗದ ಸಾಂಸ್ಕೃತಿಕ, ಶೈಕ್ಷಣಿಕ, ಆತ್ಮೋನ್ನತಿಗೆ ಮಾರಕ ಎಂಬುದನ್ನು ಮುಂಗಂಡ ಜನ ಏಕೀಕರಣಕ್ಕಾಗಿ ಪ್ರಯತ್ನಿಸಿದರು.

ಆರ್ಥಿಕ ಪ್ರಗತಿಯ – ಅನ್ನ ಬಟ್ಟೆ ಅಕ್ಷರವಿದ್ಯೆ ಆರೋಗ್ಯಗಳ ಅತ್ಯಾವಶ್ಯಕ ಪ್ರಾಥಮಿಕ ಜೀವನಾವಶ್ಯಕತೆಗಳ ಪೂರೈಕೆಗೆ ಒಂದು ಭಾಷೆಯನ್ನಾಡುವ ಜನ ಒತ್ತಟ್ಟಿಗೆ ಕೂಡಿ, ತಮ್ಮ ಬಾಳನ್ನು ಚಂದಮಾಡಿಕೊಳ್ಳುವ ಮಾನವ ಸಹಜ ಆಕಾಂಕ್ಷೆಯೂ ಏಕೀಕರಣದ ಉದ್ದೇಶವಾಗಿತ್ತು. ಕರ್ನಾಟಕದ ನೈಸರ್ಗಿಕ ಸಂಪತ್ತು ನೆಲ, ಜಲ, ನಿಸರ್ಗ, ಖನಿಜ ಸಂಪತ್ತು ಹೇರಳ. ಇನ್ನೂರು ಮೈಲುಗಳ ಕರಾವಳಿ, ಸಹಸ್ರಾರು ಎಕರೆ ವಿಸ್ತೀರ್ಣದ ಅರಣ್ಯ ಸಂಪತ್ತು – ಇದೆಲ್ಲ ಸಂಪತ್ತನ್ನು ಉಳಿಸಿಕೊಂಡು ಮಾನವ ಜೀವನ ಸುಂದರವಾಗಬೇಕು.

ಮೊದಲನೆಯ ಉದ್ದೇಶ – ಕನ್ನಡ ಮಕ್ಕಳಿಗೆ ಮಾತೃಭಾಷೆ ಕನ್ನಡದಲ್ಲಿ ಶಿಕ್ಷಣ – ಪ್ರಾಥಮಿಕ ಶಿಕ್ಷಣವಾದರೂ–ದೊರೆಯುತ್ತಿದೆಯೆ ? ಬ್ರಿಟಿಷ್ ಆಡಳಿತೆಯ ಕಾಲದಲ್ಲಿ ನಿಶ್ಚಯವಾಗಿ ಪ್ರಾಥಮಿಕ ಶಿಕ್ಷಣ ಆಯಾ ಮಕ್ಕಳ ಮಾತೃಭಾಷೆಯಲ್ಲೆ ಸಿಗುತ್ತಿತ್ತು ! ಆದರೆ ಈಗ ? ಮಕ್ಕಳು ಶಾಲೆಗೆ ಕಾಲಿಡುತ್ತಿದ್ದಂತೆಯೆ ಅಕ್ಷರಾಭ್ಯಾಸದಿಂದಲೇ ಇಂಗ್ಲಿಷ್ ತಿಳುವಳಿಕೆ ಉಂಟಾಗಬೇಕೆಂಬುದು ಆಳುವವರ ದಿವ್ಯದೃಷ್ಟಿ! ಈ ದುರ್ಗತಿಗೆ ಮುಖ್ಯ ಕಾರಣ ಜನರಿಗೇ ಇಂಗ್ಲಿಷ್ ಶಿಕ್ಷಣ ಬೇಕಾಗಿರುವುದರಿಂದ ಜನರಿಗೆ ಬೇಕಾದಂತೆ ಆಡಳಿತ ನಡೆಸಬೇಕೆಂಬುದು. ಜನರಿಗೆ ಈ ಭಾವನೆ ಉಂಟುಮಾಡಿದವರು ಯಾರು ? ಇಂಗ್ಲಿಷ್ ಕಲಿಯದಿದ್ದರೆ ನಿಮ್ಮ ಉದ್ಧಾರವಿಲ್ಲ ಎಂಬ ವಿಷ ಭಾವನೆಯನ್ನು ಬಿತ್ತಿದವರು ಯಾರು ? ಆಡಳಿತೆ – ಇಂಗ್ಲಿಷಿನಲ್ಲಿಯೆ ನಡೆಯುತ್ತಿರುವುದರಿಂದ ಜನರಿಗೆ ಅದರ ವ್ಯಾಮೋಹ. ಆ ವ್ಯಾಮೋಹ ತಪ್ಪಬೇಕಾದರೆ ಆಡಳಿತ ಕನ್ನಡದಲ್ಲೇ ಆಗಬೇಕು.

ಇನ್ನು ಈ ರಾಜ್ಯದ ನೈಸರ್ಗಿಕ ಸಂಪತ್ತು ಉದ್ದಿಮೆಯ ಲಾಭ ಯಾರ ಪಾಲಾಗುತ್ತಿದೆ ? ಉದ್ದಿಮೆಗಳು ಯಾರ ಕೈಯಲ್ಲಿವೆ ? ಕೇಂದ್ರ ಮತ್ತು ಸರ್ಕಾರೀ ಉದ್ದಿಮೆಗಳಲ್ಲಿ ಯಾರು ಪ್ರಬಲ ಸ್ಥಾನ ಪಡೆದುಕೊಂಡಿದ್ದಾರೆ ? ಖಾಸಗಿ ಕ್ಷೇತ್ರದಲ್ಲಿ ಗುಜರಾತಿ, ಮಾರ್ವಾಡಿ, ಆಂಧ್ರ, ತಮಿಳು ಉದ್ಯಮಿಗಳೇ ಮೇಲುಗೈ ಸಾಧಿಸಿದ್ದಾರೆ ಕರ್ನಾಟಕದಲ್ಲಿ. ಕರ್ನಾಟಕದ ನೀರಾವರೀ ಯೋಜನೆಗಳ ನಿರ್ಮಾಣದಲ್ಲಿ ಆಂಧ್ರ, ತಮಿಳು ಕಂಟ್ರಾಕ್ಟ್‌ದಾರರೇ ಪ್ರಭುತ್ವ ಸಾಧಿಸಿದ್ದಾರೆ. ಕೃಷ್ಣ ಮೇಲ್ದಂಡೆ ನೀರಾವರಿ ನಿರ್ಮಾಣಕ್ಕೆ ಆಂಧ್ರರೆ ಗುತ್ತಿಗೆದಾರರು ! ಕರ್ನಾಟಕದ ಬೊಕ್ಕಸ ಬರಿದಾಯಿತು. ಕೃಷ್ಣಾ–ತುಂಗಭದ್ರಾ ಜಲಾಶಯಗಳ ನೀರೂ ಉಳಿಯಲಿಲ್ಲ.

ಹೋಗಲಿ, ಕರ್ನಾಟಕದಲ್ಲಿಯೆ ವಿವಿಧ ಭಾಗಗಳ ಬೆಳವಣಿಗೆಯಲ್ಲಿ ಸಮತೋಲನ ಇದೆಯೆ ? ಉತ್ತರ ಕರ್ನಾಟಕ ಅಲಕ್ಷ್ಯಕ್ಕೆ ಒಳಗಾಗಿ ಬಡತನ ದಹಿಸುತ್ತಿದೆ. ನಮ್ಮ ಮಾಜಿ ಮಂತ್ರಿಗಳೊಬ್ಬರು 'ನನಸಾಗದ ಕನಸು' ಎಂಬ ಪುಸ್ತಕವನ್ನೇ ಬರೆದು ಉತ್ತರ ಕರ್ನಾಟಕಕ್ಕೆ ಆಗಿರುವ, ದಿನದಿನಕ್ಕೂ ಆಗುತ್ತಿರುವ ಆಡಳಿತಾತ್ಮಕ ಅನ್ಯಾಯವನ್ನು ಎತ್ತಿ ತೋರಿಸಿದರು. ಈ ಅಸಮಾನತೆ ನಿವಾರಣೆಗಾಗಿ ಏನು ಮಾಡಬೇಕೆಂಬುದನ್ನು ರೂಪಿಸಲು ಆರ್ಥಿಕತಜ್ಞ ಡಾ. ನಂಜುಂಡಪ್ಪ ಸಮಿತಿಯನ್ನು ನೇಮಿಸಿತು. ಅವರು ಬೃಹತ್ ವರದಿಯನ್ನು ಸಲ್ಲಿಸಿದರು. ಅದನ್ನು ಅನುಷ್ಠಾನದಲ್ಲಿ ತರಲು ಒಬ್ಬ ಐ.ಎ.ಎಸ್., ಅಧಿಕಾರಿಯನ್ನೆ ನೇಮಿಸಿದ್ದಾರೆ.

ಅರ್ಧ ಶತಮಾನದ ಈ ಅನುಭವದಿಂದ ಉತ್ತರ ಕರ್ನಾಟಕದ ಜನ ಪ್ರತ್ಯೇಕ ಉತ್ತರ ಕರ್ನಾಟಕ ರಾಜ್ಯ ರಚನೆ ಆಗಬೇಕೆಂದು ಕೂಗೆಬ್ಬಿಸಿರುವುದರಲ್ಲಿ ಆಶ್ಚರ್ಯವೇನು ? ಕರ್ನಾಟಕ ಏಕೀಕರಣ ಚಳವಳಿಯ ಕಾಲದಲ್ಲಿ ಇನ್ನೂ ಹುಟ್ಟದಿದ್ದವರು, ಏಕೀಕರಣ ಆದಮೇಲೆ ಅದರ ಏಳಿಗೆಗಾಗಿ ಕಿರುಬೆರಳು ಎತ್ತದವರು, ಜೈ ಕರ್ನಾಟಕ ಘೋಷಣೆಯೊಂದನ್ನೇ ಕರ್ನಾಟಕದ ಸೇವೆ ಎಂದು ಹುಯಿಲೆಬ್ಬಿಸುವ ಪ್ರಸಿದ್ಧಿಪ್ರಿಯರು – ದ್ವಿತೀಯ ಕರ್ನಾಟಕದ ಬೇಡಿಕೆ ದೇಶದ್ರೋಹ ಎಂಬಂಥ ಮಾತನಾಡುವುದು ಉತ್ತರ ಕರ್ನಾಟಕದವರ ಆಗಲೆ ಸುಡುತ್ತಿರುವವರ ಹೊಟ್ಟೆಗೆ ಕಿಚ್ಚು ಹಚ್ಚುವ ವ್ಯಂಗ್ಯವೆ ಎನಿಸದಿರದು ! ಐವತ್ತು ವರ್ಷಗಳವರೆಗೆ ಈ ತಾರತಮ್ಯ ಅಸಮಾನತೆಯ ಘೋರ ಅನ್ಯಾಯವನ್ನು ನಿವಾರಣೆ ಮಾಡಲಾರದವರು, ಇನ್ನೂ ಐವತ್ತು ವರ್ಷಗಳು ಸಮಾಧಾನದಿಂದಿರಿ ಎಂದು ಹೇಳುವುದು ಆಳುವವರ ಕಣ್ಣಲ್ಲಿ ಕಾದ ಸೂಜಿಯನ್ನು ತಿವಿಯುವಂತೆ ಎಂದು ಭಾವಿಸುವುದರಲ್ಲಿ ತಪ್ಪೇನು ?

ಈ ತಾರತಮ್ಯಕ್ಕೆ ಮುಖ್ಯ ಕಾರಣ – ಆಡಳಿತೆಯ ಸೂತ್ರ ಹಿಡಿದಿರುವ ರಾಜಕಾರಣಿಗಳು ಈ ರಾಜ್ಯದ ಜನರೆಲ್ಲ ಒಂದು ಎಂಬ ದೃಷ್ಟಿಯನ್ನು ತಾಳಲಿಲ್ಲ. ನಿಪ್ಪಾಣಿಯಲ್ಲಿ ತಂಬಾಕು ಬೆಳೆಯುವ ಪಟಗಾ ಸುತ್ತಿದ ರೈತ, ಮಂಡ್ಯದಲ್ಲಿ ಬತ್ತ ಬೆಳೆಯುವ ಒಕ್ಕಲು ಮಕ್ಕಳೂ ಒಂದೇ ಎಂಬ ಸರಿ ಸಮಾನತೆಯ ದೃಷ್ಟಿ ಬೆಳೆಯಲಿಲ್ಲ. ಬಳ್ಳಾರಿ ಜಿಲ್ಲೆಯ ಕಬ್ಬಿಣದ ಅದಿರು ಲಾರಿಗೆ ತುಂಬುವ ಕೂಲಿಕಾರನೂ, ಕೋಲಾರದ ಚಿನ್ನದ ಗಣಿ ಎತ್ತುವ ಕಾರ್ಮಿಕರೂ ಒಂದೆಂಬ ವಿಶಾಲದೃಷ್ಟಿ ಆಳುವವರಲ್ಲಿ ಬೆಳೆಯಲಿಲ್ಲ. ಕಾವೇರಿ ನೀರಿನ ಹಂಚಿಕೆಯಲ್ಲಿ ಅನ್ಯಾಯವಾದೀತೆಂಬ ಅಂಜಿಕೆಯಿಂದ ಸುಪ್ರೀಂ ಕೋರ್ಟಿನ ಆಜ್ಞೆಯನ್ನು ಉಲ್ಲಂಘಿಸಲೂ ಸಿದ್ಧರಾಗಿ ಹೋರಾಟಕ್ಕಿಳಿಯಲು ಸಿದ್ಧರಾದವರು ಕೃಷ್ಣಾ ಜಲಾಶಯವನ್ನು ಪೂರ್ಣಗೊಳಿಸದೆ ಆ ಜಲಾಶಯದ ನಿರ್ಮಾಣಕ್ಕಾಗಿ ಮಂಜೂರಾದ ಹಣವನ್ನು, ಸರಬರಾಜು ಮಾಡಿದ್ದ ಕಬ್ಬಿಣ, ಉಕ್ಕು, ಸಿಮೆಂಟ್ ಮುಂತಾದ ಸಾಮಗ್ರಿಯನ್ನು ಅಧಿಕಾರಿಗಳೂ ರಾಜಕಾರಣಿಗಳೂ ನುಂಗಿ ನೀರು ಕುಡಿದು ಉಳಿದದ್ದನ್ನು ಹಳೆಯ ಮೈಸೂರು ಜಲಾಶಯಗಳ ನಿರ್ಮಾಣಕ್ಕಾಗಿ ರವಾನಿಸುವ ಭ್ರಷ್ಟ ರಾಜಕಾರಣಿಗಳಿಂದ ಬೇಸತ್ತ ಉತ್ತರ ಕರ್ನಾಟಕದ ಜನ ಇವರ ಸಹವಾಸ ಸಾಕೆಂದು ಉತ್ತರ ಕರ್ನಾಟಕದ ಹತ್ತು ಜಿಲ್ಲೆಗಳ ಪ್ರತ್ಯೇಕ ರಾಜ್ಯವಾಗಬೇಕೆಂದು ಅತ್ತು ಗೋಳಾಡಿದರೆ ಅದು ಕನ್ನಡಮ್ಮನಿಗೆಸಗಿದ ದ್ರೋಹವೆಂದು ಆರೋಪಿಸುವ ಹಕ್ಕು ಇದೆಯೆ ? ವಿಜಾಪುರ, ಗುಲ್ಬರ್ಗಾದ ಬಡಜನ ಬರಪೀಡಿತರಾಗಿ ಪ್ರತಿ ವರ್ಷ ಸಾವಿರಾರು–ಲಕ್ಷಾಂತರ ಬಡವರು ವಲಸೆ ಹೋಗುತ್ತಿರುವ ಈ ಅಖಂಡ ಕರ್ನಾಟಕದಲ್ಲಿ ಉಳಿಗಾಲವೆಲ್ಲಿದೆ ? ಯಾವ ಸೌಭಾಗ್ಯಕ್ಕಾಗಿ ಈ ಅಖಂಡ ಕರ್ನಾಟಕದಲ್ಲಿ ಉಳಿಯಬೇಕಾಗಿದೆ ? ಕರ್ನಾಟಕದಲ್ಲಿರುವ ಈ ಪ್ರಾದೇಶಿಕ ಅಸಮಾನತೆಯನ್ನು ಹೋಗಲಾಡಿಸಲು ಐವತ್ತು ವರ್ಷಗಳಲ್ಲೂ ಆಗದಿರುವಾಗ ಇನ್ನೆಷ್ಟು ಐವತ್ತು ವರ್ಷಗಳು ಕಾಯಬೇಕು ? ಜನ ನರಳಬೇಕು ? ಒಂದೇ ಭಾಷೆಯನ್ನಾಡ ಬೇಕಾಗಿದೆಯೆ ? ಒಂದೇ ಮನಸ್ಸಿಲ್ಲದೆ ಒಂದೇ ಭಾಷೆಯನ್ನಾಡುವುದರಿಂದ ಮನಸ್ಸು ಒಂದಾಗುವುವೆ ? ಉತ್ತರ ಕರ್ನಾಟಕದವರು ಅಖಂಡ ಕರ್ನಾಟಕದಲ್ಲಿ ಸರಿಸಮಾನ ಸ್ಥಾನ ಪಡೆದಿದ್ದಾರೆಯೆ ? ಪ್ರಥಮತಃ ಆರ್ಥಿಕವಾಗಿ ಸರಿಸಮಾನತೆ ಇದೆಯೆ ?

ಅಖಂಡ ಕರ್ನಾಟಕದ ಕಲ್ಯಾಣ ದೃಷ್ಟಿಯ ಮುಖಂಡರ ಅಭಾವ ಎಲ್ಲಿಯವರೆಗೆ ಇರುತ್ತದೆಯೊ ಅಲ್ಲಿಯವರೆಗೆ ಪ್ರಾದೇಶಿಕ ಅಸಮಾನತೆ ಶಾಶ್ವತವಾಗಿಯೆ ಇರುತ್ತದೆ. ರಾಜ್ಯಾಡಳಿತೆಯ ಚುಕ್ಕಾಣಿ ಹಿಡಿದ ಕುಬ್ಜ ದೃಷ್ಟಿಯ ಜಂತುಗಳು ಅಸಮಾನತೆಯನ್ನು ಹೋಗಲಾಡಿಸಲು ಶಕ್ತವಾದಾವೆಯೆ ?

ಹಾಗಾದರೆ ಎರಡು ಕರ್ನಾಟಕ ಆದರೆ ಅಸಮಾನತೆ ನೀಗುವುದೆ ? ಅರ್ಧ ಶತಮಾನ ಅಖಂಡ ಏಕೀಕೃತ ಕರ್ನಾಟಕವನ್ನು ಪ್ರಯೋಗ ಮಾಡಿ ನೋಡಿದ್ದೇವೆ. ನಿರೀಕ್ಷಿತ ಫಲ ನೀಡಿಲ್ಲ, ಈಗ ಎರಡು ಕರ್ನಾಟಕ ರಚನೆ ಮಾಡಿ ಪ್ರಯೋಗ ಮಾಡಿ ನೋಡುವುದರಲ್ಲಿ ತಪ್ಪೇನು ?

ದ್ವಿ-ಕರ್ನಾಟಕಗಳಾದರೆ ಆ ಭೂಭಾಗ ಕರ್ನಾಟಕ ಪ್ರದೇಶಕ್ಕೆ ಧಕ್ಕೆಯನ್ನೇನೂ ಉಂಟುಮಾಡಲಾರದು. ನಾಗಾಲ್ಯಾಂಡ್, ಮಿಝೋರಂಗಳಂತೆ ಭಾರತದಿಂದ ಸಿಡಿದು ಹೋಗುವ ಅಪಾಯವೇನೂ ಆಗಲಾರದು. ತೆಲಂಗಾಣಾ, ಮರಾಠವಾಡ – ಬೇಡಿಕೆಯಂತೆ ಇದೂ ಒಂದು ಬೇಡಿಕೆ. ಬೀದರಿನ ಜನ ಆರು ನೂರು ಕಿ.ಮೀ. ದೂರದ ಬೆಂಗಳೂರಿಗೆ ಬಂದು ದಣಿಯುವುದಕ್ಕಿಂತ ಗುಲ್ಬರ್ಗಾ, ಬೆಳಗಾಂವಿ ಅಥವಾ ಹುಬ್ಬಳ್ಳಿ ಧಾರವಾಡದ ಹತ್ತಿರದ ರಾಜ್ಯದ ಮುಖ್ಯ ಪಟ್ಟಣಕ್ಕೆ ಬಂದು ತಮ್ಮ ಸಮಸ್ಯೆ ಪರಿಹರಿಸಿಕೊಳ್ಳಬಹುದು.

ಕೊನೆಯದಾಗಿ ದ್ವಿ-ಕರ್ನಾಟಕ ಪ್ರಾಂತಸಿದ್ಧಿಗೆ ಪ್ರಜಾಸತ್ತಾತ್ಮಕ ಶಾಂತಿಯುತ ಪ್ರಯತ್ನಗಳೆ ಆಗಬೇಕು. ದ್ವಿ-ಕರ್ನಾಟಕ ತತ್ತ್ವವನ್ನು ಪ್ರತಿಪಾದಿಸುವ ನಾನು ಅಖಂಡ ಕರ್ನಾಟಕಕ್ಕಾಗಿ ಸಕ್ರಿಯವಾಗಿ ಭಾಗವಹಿಸಿ ಅದರ ಕಷ್ಟಕಾರ್ಪಣ್ಯವನ್ನು ನಷ್ಟವನ್ನು ಅನುಭವಿಸಿದವನು ಎಂಬುದನ್ನು ಕರ್ನಾಟಕ ಏಕೀಕರಣ ಇತಿಹಾಸದ ಪುಟಗಳಿಂದ ತಿಳಿಯಬಹುದು.

ಕೋ. ಚೆನ್ನಬಸಪ್ಪ, ನಂ. ೧೨೭, ವೆಸ್ಟ್ ಆಫ್ ಕಾರ್ಡ್ ರಸ್ತೆ
ರಾಜಾಜಿನಗರ, ಬೆಂಗಳೂರು - ೫೬೦ ೦೮೬

## ಕರ್ನಾಟಕದಲ್ಲಿ ಅಸಮತೋಲನ ಬೆಳವಣಿಗೆ

– ಕೆ. ಎಸ್. ಪಾರ್ಥಸಾರಥಿ

ಆರ್ಥಿಕ ಅಸಮತೋಲನದ ಚರ್ಚೆಯ ಸಂದರ್ಭ ಸಾಮಾನ್ಯ ಆರ್ಥಿಕ ಬೆಳವಣಿಗೆಯ ತಾತ್ಕಾಲಿಕ ಸಮಸ್ಯೆ ಮಾತ್ರವಲ್ಲ, ಅದು ಬೆಳವಣಿಗೆಯ ಚಾರಿತ್ರಿಕ ಹಂತವೂ ಹೌದು. ಹಾಗೂ ಅದರ ಸಾಮಾಜಿಕ ಸ್ವರೂಪವನ್ನು ಪ್ರತಿಬಿಂಬಿಸುತ್ತದೆ. ಗಣನೀಯವಾದ ಬೆಳವಣಿಗೆಯೇ ಇಲ್ಲದೆಡೆ ಅಸಮತೋಲನದ ಚರ್ಚೆ ಅಪ್ರಸ್ತುತವಾಗಿಬಿಡುತ್ತದೆ. ಕರ್ನಾಟಕದ ಆರ್ಥಿಕ ಬೆಳವಣಿಗೆಯ ಇತಿಹಾಸ ಸಮಗ್ರ ಭಾರತದ ಇತಿಹಾಸದ ಒಂದು ಭಾಗವೆಂಬಂತೆಯೇ ಅದು ತನ್ನ ವಿಶಿಷ್ಟತೆಯಲ್ಲಿ ರಾಷ್ಟ್ರದಲ್ಲಿನ ಅಸಮತೆಯ ಬೆಳವಣಿಗೆಯ ಲಕ್ಷಣಗಳನ್ನೆಲ್ಲಾ ಪ್ರತಿನಿಧಿಸುತ್ತದೆ. ಕಾರಣ ಕರ್ನಾಟಕವೆನ್ನುವ ರಾಜ್ಯ ಸಂಘಟನೆ ಈಗಷ್ಟೆ ಆಗಿದ್ದು, ಅದಕ್ಕೆ ಪೂರ್ವದಲ್ಲಿ ಅದರ ವಿವಿಧ ಭಾಗಗಳು ಹರಿದು ಹಂಚಿ ಹೋಗಿ, ವಿವಿಧ ರೀತಿಯ ಭಿನ್ನಭಿನ್ನವಾದ ರಾಜಕೀಯ-ಸಾಮಾಜಿಕ-ಆರ್ಥಿಕ-ಚಾರಿತ್ರಿಕ ಅನುಭವಗಳನ್ನು ಪಡೆದುಕೊಂಡಿದ್ದವು. ಈಗ ಇವೆಲ್ಲವೂ ಒಂದೇ ರಾಜ್ಯದಲ್ಲಿ ಆಂತರಿಕವಾಗಿ ಆವರಿಸಿಕೊಂಡು, ಈಗ ಅವುಗಳನ್ನು ಅರಗಿಸಿಕೊಂಡು ಬರೇ ಆರ್ಥಿಕವಲ್ಲದೆ ಇತರ ಎಲ್ಲ ಕ್ಷೇತ್ರಗಳಲ್ಲೂ ಒಂದಿಷ್ಟು ಸಮತೋಲನವನ್ನು ಸಾಧಿಸಿಕೊಳ್ಳಬೇಕಾಗಿದೆ. ಆರು ದಶಕಗಳ ನಂತರ ಇಡೀ ಭಾರತದಲ್ಲಿ ರಾಜ್ಯ-ರಾಜ್ಯಗಳ ನಡುವೆ, ಪ್ರಾದೇಶಿಕ ಅಸಮತೋಲನದ ರಾಜಕೀಯ ಪ್ರಜ್ಞೆಗಳು ಭುಗಿಲೆದ್ದಿವೆ. ಸಮಸ್ಯೆಗೆ ಪರಿಹಾರವೋ ಎಂಬಂತೆ ಹೊಸ ಹೊಸ ರಾಜ್ಯ ನಿರ್ಮಾಣಗಳ ಒತ್ತಾಯಗಳು ಉಂಟಾಗುತ್ತಿವೆ. ಆರ್ಥಿಕ ಪರಿಹಾರಗಳ ಚಿಂತನೆಯ ಜತೆಜತೆಗೇ ರಾಜ್ಯಗಳ ಪುನರ್ವಿಂಗಡಣೆಯ ಚಿಂತನೆಯೂ ಪ್ರಬಲವಾಗುತ್ತಿದೆ. ಕರ್ನಾಟಕದಲ್ಲಿನ ಪ್ರತ್ಯೇಕತೆಯ ಕೂಗು ಈ ಬೆಳವಣಿಗೆಯಿಂದ ಹೊರತಾದುದಲ್ಲ. ರಾಜಕೀಯವಾಗಿ ಇದನ್ನು ಬಗೆಹರಿಸಬಹುದೇ ಎಂಬ ಪ್ರಶ್ನೆಯೇ ಬೇರೆ. ಇಲ್ಲಿ ಅದರ ಚರ್ಚೆ ವಸ್ತುವಲ್ಲ. ಆದರೆ ಅದರ ಬಗ್ಗೆ ಒಂದು ಮಾತು ಹೇಳಿ ಮುಖ್ಯ ವಿಷಯ, ಆರ್ಥಿಕ ಅಸಮತೋಲನದ ಪ್ರಶ್ನೆಗೆ ಬರಬಹುದು. ಸಮಸ್ಯೆ ಪರಿಹಾರವಾಗುವುದೋ ಇಲ್ಲವೋ, ಆದರೂ ಪುನರ್ವಿಂಗಡಣೆ ತರುವ ರಾಜಕೀಯ ಅಧಿಕಾರದ ಅವಕಾಶದ ಲಾಭ ಪಡೆಯಲು ಆ ದಿಶೆಯಲ್ಲಿ ರಾಜಕೀಯ ಶಕ್ತಿಗಳು ಮುನ್ನುಗ್ಗುವುದಂತೂ ಖಚಿತ. ರಾಜ್ಯ ಪುನರ್ವಿಂಗಡಣೆಯ ಆಯೋಗ ರಚನೆ ಅದಕ್ಕೆ ಮೊದಲ ಹಂತವಾಗಿ ಬರಲಿದೆ.

ಒಂದು ಪ್ರದೇಶದ ಆರ್ಥಿಕ ಬೆಳವಣಿಗೆ ನೇರವಾಗಿ ಅಲ್ಲಿಯ ಸಾಮಾಜಿಕ ಬೆಳವಣಿಗೆಯನ್ನು, ಸಾಂಸ್ಕೃತಿಕ ಚಟುವಟಿಕೆಗಳನ್ನು ಪ್ರಭಾವಿಸುವಂತೆ, ಆ ಚಟುವಟಿಕೆಗಳೂ ಸೂಕ್ಷ್ಮವಾಗಿ ಆರ್ಥಿಕ ಬೆಳವಣಿಗೆಯ ಹಾದಿಯನ್ನು ಮರು ಪ್ರಭಾವಿಸುತ್ತವೆ. ಬೆಳವಣಿಗೆಯ ಸಾಧ್ಯತೆಗಳಿದ್ದರೂ ಅದು ಕೈಗೂಡಲು ಅನುಕೂಲವಾಗುವ ಸಾಮಾಜಿಕ ರಚನೆ ಮುಖ್ಯವಾಗುತ್ತದೆ. ವಿಕಾಸಕ್ಕೆ ಅವಕಾಶವಿದ್ದೂ ಸಾಮಾಜಿಕ ರಚನೆ ಅದಕ್ಕೆ ಅಡಚಣೆಯಾದರೆ ಆ ರಚನೆಯನ್ನು ತೆಗೆದು ಅಥವಾ ಮಾರ್ಪಡಿಸಿ ಹೊಸ ಅಗತ್ಯವಾದ ರೂಪವನ್ನು ರಚಿಸಿಕೊಳ್ಳುವ ಚಳವಳಿಗಳು ಹೋರಾಟಗಳು ಅನಿವಾರ್ಯವಾಗಿ ಸಂಘಟಿತವಾಗುತ್ತವೆ. ಏಕೈಕ ಕರ್ನಾಟಕವಾಗಬೇಕೆಂಬ ಆಸೆ ಸಾಹಿತ್ಯಕ-ಸಾಂಸ್ಕೃತಿಕವೆಂದು ಹೊರಸೂಸಿದ್ದರೂ ಅದರ ಅಂತರ್ಗತವಾಗಿ ಅಂಥ ಏಕೀಕೃತ ರಚನೆಯಲ್ಲಿ ತೆರೆದುಕೊಳ್ಳುವ ವಿಕಾಸದ ಸಾಧ್ಯತೆಗಳು ಒಂದು ಮುಖ್ಯ ಸೆಲೆಯಾಗಿತ್ತು. ಬಹುಶಃ ಅಂತಹ ವಿಕಾಸ ಸಾಧ್ಯವಾಗಲಿಲ್ಲವೆಂಬಂತೆ ಯಾವುದೋ ಭ್ರಮನಿರಸನವಾದಂತೆ ಪುನಃ ಪ್ರತ್ಯೇಕತೆ, ಅದೇ ಸಮಸ್ಯೆಯ ಪರಿಹಾರಗಳ ಮಾರ್ಗವೆಂಬಂತೆ, ಈಗ ಪ್ರತ್ಯೇಕತೆಯ ಕೂಗು ಎದ್ದಿದೆ. ಈಗ ಏನಿದ್ದರೂ ಈ ಮೂಲಭೂತ ವಿಕಾಸದ ಸಮಸ್ಯೆಗೆ ಪರಿಹಾರ ಏಕೀಕೃತ ರಚನೆಯಲ್ಲಿ ಮಾತ್ರ ಸಾಧ್ಯ ಎಂದು ಮನಗಾಣಬಲ್ಲಂತಾದರೆ ಕರ್ನಾಟಕದ ಏಕೀಕೃತ ಉಳಿವೂ ಸಾಧ್ಯ.

''ಕರ್ನಾಟಕದ ಆರ್ಥಿಕ ಅಸಮತೋಲನ''ದ ಬಗ್ಗೆಯೇ ಅಲ್ಲದೆ ಇತರ ಎಲ್ಲ ಸಮಸ್ಯೆಗಳನ್ನು ಅಂಕಿ-ಅಂಶ, ಐತಿಹಾಸಿಕ ಪುರಾವೆಗಳೊಡನೆ ಶ್ರೀ ರಾ. ನಂ. ಚಂದ್ರಶೇಖರ್ ಅವರು ಮನದಟ್ಟುವಂತೆ 'ಆಧುನಿಕ ಕರ್ನಾಟಕದ ಆತಂಕಗಳು' ಎಂಬ ತಮ್ಮ ಕಿರುಹೊತ್ತಗೆಯಲ್ಲಿ ಚರ್ಚಿಸಿದ್ದಾರೆ. ಆದ್ದರಿಂದ ಅವುಗಳ ಪುನರುಚ್ಚಾರಣೆ ಅನಗತ್ಯ. ಈ ಚರ್ಚೆಯಲ್ಲಿ ಆಸಕ್ತರೆಲ್ಲಾ ಈ ಪುಸ್ತಕವನ್ನು ಕೊಂಡು ಓದಬೇಕೆಂದು ಹೇಳಬಯಸುತ್ತೇನೆ. ಇದನ್ನು 'ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧ ಸಂಸ್ಥಾನ ಮಠ, ಚಿಂಚಣಿ, ಚಿಕ್ಕೋಡಿ ತಾಲ್ಲೂಕು, ಬೆಳಗಾಂ ಜಿಲ್ಲೆ' ಇವರು ಪ್ರಕಟಿಸಿದ್ದಾರೆ. ಈ ಪುಸ್ತಕ ನಂಜುಂಡಪ್ಪ ಸಮಿತಿಯ ವರದಿಗೆ ಹಿಂದಿನ ಎಲ್ಲ ಬೆಳವಣಿಗೆಗಳ ಒಳನೋಟವನ್ನು ನೀಡುತ್ತದೆ. ನಂಜುಂಡಪ್ಪ ವರದಿ ಆರ್ಥಿಕ ಅಸಮತೋಲನದ ತಾಲ್ಲೂಕು ಮಟ್ಟದ ಅಂಕಿ-ಅಂಶಗಳ ಸಮೇತ ಸೂಕ್ಷ್ಮ ಚಿತ್ರವನ್ನು ಸಂಪನ್ಮೂಲಗಳ ಶೇಖರಣೆ, ವಿತರಣೆಗಳ ವಾಸ್ತವ ಚಿತ್ರ ನೀಡಿದ್ದು, ಹೆಚ್ಚು ಒತ್ತು ನೀಡಬೇಕಾದ ಕ್ಷೇತ್ರಗಳನ್ನು ಗುರುತಿಸಿ ಏನು ಮಾಡಬೇಕೆಂಬ ಶಿಫಾರಸುಗಳನ್ನು ನೀಡುತ್ತದೆ.

– ಪಾರ್ಥಸಾರಥಿ

ಸಮತೋಲನವಾದ ವಿಕಾಸ ಆಗಲಿಲ್ಲವೋ, ವಿಕಾಸವೇ ಆಗಲಿಲ್ಲವೋ ? ಈ ಪ್ರಶ್ನೆಗೆ ವಿಸ್ತೃತ ಉತ್ತರ ಹುಡುಕುವಾಗ ಒಂದು ವಿಷಯ ಸ್ಪಷ್ಟ. ಒಟ್ಟಾರೆ ಸಾಕಷ್ಟು ವಿಕಾಸ ಸಾಧ್ಯವಾಗಿದೆ. ಇದನ್ನು ಅಂಕಿ-ಅಂಶಗಳ ಸಮೇತ ತೋರಿಸಬಹುದು. ಏನಿದ್ದರೂ ರಾಜ್ಯವನ್ನು ಉತ್ತರ-ದಕ್ಷಿಣ ಎಂದು ಮುಂತಾಗಿ ಅಂಗ-ಅಂಗವಾಗಿ ನೋಡ ಲಾರಂಭಿಸಿದರೆ ಕೆಲವು ಭಾಗಗಳು ಕೆಲವಕ್ಕಿಂತ ಹೆಚ್ಚು ಮುಂದೆ ಸಾಗಿವೆ ಎನ್ನಬಹುದೇ ವಿನಾ ಎಲ್ಲೂ ಏನೂ ಆಗಿಲ್ಲವೆಂಬಂತೆ ಅಥವಾ ಕೆಲವು ಭಾಗದಲ್ಲಿ ಏನೇನೂ ಆಗಿಲ್ಲವೆಂಬಂತೆ ಹೇಳಲಾಗುತ್ತಿಲ್ಲ. ಚಿತ್ರವನ್ನು ಸೂಕ್ಷ್ಮವಾಗಿ ಗ್ರಹಿಸಲು ನಂಜುಂಡಪ್ಪ ಸಮಿತಿ ತಾಲ್ಲೂಕು ಮಟ್ಟವನ್ನು ಒಂದು ಘಟಕವಾಗಿ ಗಣಿಸಿ ವರದಿ ತಯಾರಿಸಿತು. ಇದು ಆಡಳಿತ ನೀತಿ ನಿರೂಪಣೆಗೆ ಸಹಾಯವಾಗಲು ಎಷ್ಟು ಫಲಕಾರಿಯಾಯ್ತೆಂದರೆ ಈಗ ಅಖಿಲ ಭಾರತ ಮಟ್ಟದಲ್ಲಿ ಈ ಮಾರ್ಗವನ್ನು ಅನುಸರಿಸಲು ಮುಂದಾಗಿದ್ದಾರೆ. ಎಂಭತ್ತರ ದಶಕದಲ್ಲಿ ಇಂದಿರಾ ಗಾಂಧಿ ದೇಶದ ೧೮೦ ಜಿಲ್ಲೆಗಳನ್ನು ಹಿಂದುಳಿದವೆಂದು ಪರಿಗಣಿಸಿದಾಗ ಅವುಗಳ ಮುಕ್ಕಾಲು ಮೂರು ಪಾಲು ಉತ್ತರ ಭಾರತದ ನಾಲ್ಕು ಹಿಂದೀ ರಾಜ್ಯಗಳಲ್ಲೇ ಕೇಂದ್ರೀಕೃತವಾಗಿದ್ದುದನ್ನು ಸ್ಮರಿಸಬಹುದು. ನಂಜುಂಡಪ್ಪ ಸಮಿತಿ ರಾಜ್ಯದ ಅರ್ಧದಷ್ಟು ತಾಲ್ಲೂಕುಗಳನ್ನು ಹಿಂದುಳಿದವು ಎಂದು ಗುರುತಿಸಿ, ಅವು ರಾಜ್ಯದ ಯಾವೊಂದು ಪ್ರದೇಶದಲ್ಲೂ ಕೇಂದ್ರೀಕೃತವಾಗದೆ ಎಲ್ಲ ಕಡೆಯೂ ಹರಡಿರುವುದನ್ನು ಹೊರಗೆಡಹಿದೆ. ಈ ಆರ್ಥಿಕ ವಿಕಾಸದ ಅಸಮತೋಲನದ ಚಿತ್ರ ನೀತಿ ನಿರೂಪಣೆಗೆ ಸಹಾಯಕವಾಗುವ ಮಾಹಿತಿ ಒದಗಿಸಿದೆಯೇ ವಿನಾ ಪ್ರತ್ಯೇಕತೆಯ ಕೂಗಿಗೆ ಬೆಂಬಲವನ್ನಲ್ಲ. ಕರ್ನಾಟಕ ಸರ್ಕಾರ ಪದೇ ಪದೇ ಅಸಮತೋಲನದತ್ತ ಗಮನ ಹರಿಸುತ್ತಾ, ಅಧ್ಯಯನಗಳನ್ನು ನಡೆಸುತ್ತಾ, ತದನ್ವಯ ನೀತಿ ನಿರೂಪಣೆಯನ್ನು ಮಾಡುತ್ತಾ ಬಂದಿರುವುದರ ಪರಿಣಾಮ ಇದು ಎಂದೆನಿಸುತ್ತದೆ. ಇಂದು ಕಂಡು ಬಂದಿರುವ ಅಸಮತೋಲನದಲ್ಲೂ ಒಂದು ರೀತಿಯ ಪ್ರಾದೇಶಿಕ ಸಮತೋಲನವಿದೆ ಎಂಬುದನ್ನು ನಂಜುಂಡಪ್ಪ ಅಧ್ಯಯನ ಸ್ಪಷ್ಟಪಡಿಸುತ್ತದೆ !

ಮಾರುಕಟ್ಟೆಯ ಲಾಭ-ನಷ್ಟದ ಮಾರ್ಗದಲ್ಲಿ ವೇಗವಾಗಿ ಆರ್ಥಿಕಾಭಿವೃದ್ಧಿಯೂ, ನ್ಯಾಯಯುತವಾದ ಹಂಚಿಕೆಯೂ ಆಗುತ್ತದೆ ಎಂಬುದು ಬಂಡವಳಿಗ ಅರ್ಥಶಾಸ್ತ್ರದ ವಾದ. ಈ ಮಾರ್ಗದಲ್ಲಿ ಪೈಪೋಟಿಯಿಂದ ಸಂಪನ್ಮೂಲಗಳು ವ್ಯರ್ಥವಾಗಿ, ಸಾಮಾಜಿಕವಾಗಿ ನಷ್ಟವಾಗುತ್ತದೆ, ಏಕಸ್ವಾಮ್ಯ ಬೆಳೆಯುತ್ತದೆ, ಮಾರುಕಟ್ಟೆಯ ಬೆಲೆಯನ್ನು ಅತ್ಯಧಿಕ ಲಾಭದೃಷ್ಟಿಯಿಂದ ಏಕಸ್ವಾಮ್ಯ ನಿರ್ಧರಿಸುತ್ತದೆ, ಮಾರುವ ಬೆಲೆಯನ್ನು ನಿರ್ಧರಿಸಲು ಪೂರೈಕೆಯನ್ನು ತಡೆಹಿಡಿಯುತ್ತದೆ, ಏಕಸ್ವಾಮ್ಯದಡಿ ಮಾನವ ಹಾಗೂ ಸಂಪನ್ಮೂಲಗಳ ಸಾಮರ್ಥ್ಯ ಸಂಪೂರ್ಣವಾಗಿ ಬಳಕೆಯಾಗದೆ, ಸಾಮಾಜಿಕವಾಗಿ ಎಲ್ಲ ವಿಧದ ನಿರುದ್ಯೋಗ ಉಂಟಾಗುತ್ತದೆ (ಮನುಷ್ಯನಿಗೆ ಉದ್ಯೋಗವೆಂಬಂತೆಯೇ ಸಂಪನ್ಮೂಲಗಳನ್ನು ಉತ್ಪಾದನೆಯಲ್ಲಿ ತೊಡಗಿಸುವುದೂ ಅರ್ಥಶಾಸ್ತ್ರದಲ್ಲಿ ಉದ್ಯೋಗವೆನಿಸುತ್ತದೆ. ಹಾಗೆಯೇ ಆದ್ಯತೆಯ ಮೇಲೆ ತೊಡಗದೆ ಹೋದರೆ ಅವೂ ನಿರುದ್ಯೋಗಕ್ಕೆ ಒಳಗಾದಂತೆ). – ಇವೆಲ್ಲದರ ಪರಿಣಾಮವಾಗಿ ನ್ಯಾಯಯುತವಾದ ಹಂಚಿಕೆಯಾಗದೆ, ವೈಯಕ್ತಿಕ ಮಟ್ಟದಲ್ಲಿ ಸಂಪನ್ಮೂಲಗಳು ಕೇಂದ್ರೀಕೃತವಾಗಿ ಹಾಗೂ ರಾಷ್ಟ್ರೀಯ ಅಥವಾ ಭೌಗೋಳಿಕ ಮಟ್ಟದಲ್ಲಿ ಅಂಥದೇ ಕೇಂದ್ರೀಕರಣ ರಾಜಕೀಯ-ಆರ್ಥಿಕ ಪ್ರಾಬಲ್ಯದ ಆಧಾರದ ಮೇಲೆ ಉಂಟಾಗಿ, ಹೀಗೆ ಹಲವು ರೀತಿಯ ಹಲವು ಸ್ತರದ ಅಸಮತೋಲನವಾಗುತ್ತದೆ. ಇದು ಬಂಡವಾಳ ಪ್ರಾಧಾನ್ಯದ ಖಾಸಗಿ ಆಸ್ತಿಯ ಲಾಭ-ನಷ್ಟದ ಆಧಾರದ ನೀತಿಯು ಖಂಡಿತ ವಿಮರ್ಶೆ ವ್ಯಕ್ತಿಯ ಜೀವನದಲ್ಲೆಂತೋ ರಾಷ್ಟ್ರೀಯ ಜೀವನದಲ್ಲೂ ಸಮಷ್ಟಿ ಮಟ್ಟದಲ್ಲೂ ಆದಾಯ-ವೆಚ್ಚವನ್ನು ಸರಿತೂಗಿಸುತ್ತಾ ವೈಯಕ್ತಿಕ ಲಾಭಕ್ಕಿಂತ ಸಾಮಾಜಿಕ ಲಾಭಕ್ಕೆ ಒತ್ತು ಕೊಡುವ, ನಿರುದ್ಯೋಗವನ್ನು ಅನಿವಾರ್ಯವೆಂದು ಒಪ್ಪದ ಯೋಜಿತ ಆರ್ಥಿಕ ನೀತಿಯೇ ಪರಿಹಾರವೆಂಬ ವಾದ, ಬಂಡವಳಿಗ ಅರ್ಥನೀತಿಗೆ ಪರ್ಯಾಯವಾದುದು. ಆಯ್ಕೆ ಪ್ರಜಾಪ್ರಭುತ್ವದ್ದು. ಆದರೆ ಇಂದಿನ ಕರ್ನಾಟಕದ ಹಾಗೂ ಭಾರತದ, ಇನ್ನೂ ಮುಂದುವರಿದು, ಜಗತ್ತಿನ ಆರ್ಥಿಕ ಅಸಮತೋಲನದ ಮೂಲ ವಿಶ್ವ ಹಣಕಾಸು ಮತ್ತು ವಿಶ್ವ ಬ್ಯಾಂಕು ಸಂಸ್ಥೆಗಳು ನಿರ್ದೇಶಿಸುವ ಜಾಗತೀಕರಣ, ಉದಾರವಾದ ಮತ್ತು ಖಾಸಗೀಕರಣದ ಮಾರ್ಗದಲ್ಲಿದೆ ಎಂದರೆ ಆಶ್ಚರ್ಯಪಡಬೇಕಾಗಿಲ್ಲ. ನಮಗೆಲ್ಲಾ ತಿಳಿದಿರುವಂತೆ ಕಳೆದ ಕೆಲವು ವರ್ಷಗಳಿಂದ ನಮ್ಮ ರಾಷ್ಟ್ರೀಯ ಒಟ್ಟು ವರಮಾನ ವೇಗವಾಗಿ ಬೆಳೆಯುತ್ತಿದೆ. ಉತ್ಪಾದನೆಯನ್ನು ಅಗತ್ಯಕ್ಕೆ ಮೀರಿಯೂ ಹೆಚ್ಚಿಸಬಹುದಾದ ತಾಂತ್ರಿಕ ಸಾಧನಗಳು ಬೆಳೆದಿವೆ. ಅಂದರೆ ಮಾನವ ಹಸಿವಿನಿಂದ ಬಳಲುವ ಅಗತ್ಯವಿಲ್ಲವೆಂದು ತಂತ್ರಜ್ಞಾನದ ನವನವೀನ ಉತ್ಪಾದನಾ ವಿಧಾನಗಳು ಮೊಳಗುತ್ತಿವೆ. ಆದರೂ ಈ ದಶಕದಲ್ಲಿ ಜಗತ್ತಿನಾದ್ಯಂತ ಭಾರತದಲ್ಲೂ ಕರ್ನಾಟಕದಲ್ಲೂ ಬೆಂಗಳೂರಿನಲ್ಲೂ ನಿರುದ್ಯೋಗ ವೇಗವಾಗಿ ಬೆಳೆಯುತ್ತಿದೆ. ಇದು ಒಂದು ಅಸಂಗತ ವೈಪರೀತ್ಯವಲ್ಲವೇ ? ಅದಕ್ಕೆ ನಾವು ಅನುಸರಿಸುತ್ತಿರುವ ನೀತಿಯೇ ಕಾರಣವಾದರೆ, ಅದನ್ನು ಕೈಬಿಡುವುದು, ತಿದ್ದುಪಾಟು ಮಾಡುವುದು ಸಾಮಾನ್ಯರ ಸಾಮಾನ್ಯಜ್ಞಾನ. ಬೇರೆ ಮಾರ್ಗದಲ್ಲಿ ಕೆಲವರ ಅನೀತಿಯುತ ಅನಗತ್ಯ ಅತಿಹೆಚ್ಚು ಲಾಭಕ್ಕೆ ಧಕ್ಕೆಯಾಗಬಹುದೇ ವಿನಾ ಅದರಿಂದ ಒಟ್ಟಾರೆ ಸಾಮಾಜಿಕ ನ್ಯಾಯ, ನ್ಯಾಯಯುತ ಹಂಚಿಕೆ, ಸಾಧ್ಯವಾಗುವುದಾದರೆ ನಾವು ಏನನ್ನು ಆರಿಸಿಕೊಳ್ಳಬೇಕೆಂದು ನಿರ್ಧರಿಸಬೇಕಷ್ಟೆ. ಆರ್ಥಿಕ ಬೆಳವಣಿಗೆ ಮತ್ತು ಸಾಮಾಜಿಕ ನ್ಯಾಯ ಜತೆಜತೆಗೇ ಹೆಜ್ಜೆ ಇಡಬಲ್ಲುದು. ಇದನ್ನು ಅರ್ಥಶಾಸ್ತ್ರೀಯವಾಗಿ ಸಮರ್ಥಿಸಬಹುದು.

ಒಂದು ಪ್ರದೇಶದ ಆರ್ಥಿಕ ಬೆಳವಣಿಗೆ ಅಲ್ಲಿರುವ ಪ್ರಾಕೃತಿಕ ಸಂಪತ್ತು, ಶಿಕ್ಷಣ ಮಟ್ಟ, ಈಗಾಗಲೇ ಇರುವ ಬಂಡವಾಳ ಸಂಗ್ರಹ, ಸಾಮಾಜಿಕ ಉಳಿತಾಯ, ಚಾರಿತ್ರಿಕ ಅನುಭವ, ಮೂಲಭೂತ ಸೌಕರ್ಯಗಳು ಮುಂತಾದವುಗಳನ್ನೆಲ್ಲಾ ಅವಲಂಬಿಸಿರುತ್ತದೆ. ಬಂಡವಾಳವನ್ನು ಹೊರಗಿನಿಂದ ತರಬಹುದು. ಆದರೆ ವಿಕಸನಗೊಳ್ಳಬೇಕೆಂಬ ಆಶಯ ಸ್ಥಳೀಯವಾಗಿ ಸಾಮಾಜಿಕ ರಾಜಕೀಯವಾಗಿ ಕುದುರಬೇಕು. ಖಾಸಗಿ ಬಂಡವಾಳ ಲಾಭ ಸಿಕ್ಕುವೆಡೆ ನುಗ್ಗುತ್ತದೆ. ಪ್ರಭುತ್ವದ ನೀತಿಯಿಂದ ಅದನ್ನು ಅಗತ್ಯವಿರುವೆಡೆಗೆ ಉದ್ದೇಶ ಪೂರ್ವಕ ದಬ್ಬದೆ ಅದು ತಾನಾಗೇ ಹೋಗುವುದಿಲ್ಲ. ಈಗ ಖಾಸಗೀಕರಣ ನೀತಿ ಜಾರಿಯಾಗಿದೆ. ಆದರೂ ಹೆಚ್ಚು ಬಂಡವಾಳ ಬೇಕಾಗುವ, ಲಾಭ ಅಷ್ಟು ಹೆಚ್ಚಿಲ್ಲದ ಹಾಗೂ ಹೆಚ್ಚು ಸಮಯ ಬೇಕಾಗುವ ಮೂಲಭೂತ ಸೌಕರ್ಯಗಳ ವಿಕಾಸಕ್ಕೆ ಅದರ ಉದ್ಯಮದಲ್ಲಿ ಬಂಡವಾಳ ಹೂಡಲು ಖಾಸಗೀ ಉದ್ಯಮ ಮುಂದಾಗುತ್ತಿಲ್ಲ. ಅದೇ ಸಮಯ ಅವರು ಕಳೆದ ಹತ್ತು ವರ್ಷಗಳಲ್ಲಿ ಸರ್ಕಾರಕ್ಕೆ ಕೊಡುವ ತೆರಿಗೆ ಸಂಗ್ರಹದಲ್ಲಿ ಮಹತ್ವದ ಕಡಿತವಾಗಿದೆ. ಹೀಗಾಗಿ ಸರ್ಕಾರವೇ ಮೂಲಭೂತ ಸೌಕರ್ಯಗಳಲ್ಲಿ ಬಂಡವಾಳ ಹೂಡಲು ಬಂಡವಾಳದ ಕೊರತೆ ಉಂಟಾಗಿದೆ. ಈ ಕ್ಷೇತ್ರಕ್ಕೆ ವಿದೇಶದಿಂದ ಬರಬಹುದಾದ ಬಂಡವಾಳ ಸಾಕಷ್ಟು ಇಲ್ಲ ಹಾಗೂ ಅನೇಕ ಷರತ್ತುಗಳಿಂದ ಕೂಡಿದ್ದು, ನಮ್ಮ ಆರ್ಥಿಕತೆ ತನ್ನ ಸ್ವಂತ ಶಕ್ತಿಯ ಮೇಲೆ ವಿಕಾಸವಾಗುವುದು ಅನಿವಾರ್ಯ ಆಗಿದ್ದು, ಈಗ ಮುಂದುವರಿಯಬೇಕಾದರೆ ಈ ಮೂಲಭೂತ ಸೌಕರ್ಯಗಳ ವಿಕಾಸ ಅತ್ಯಗತ್ಯವಾಗಿ ಆಗಲೇಬೇಕು. ಈ ಸಮಸ್ಯೆಗಳೂ ನಮ್ಮ ಆರ್ಥಿಕ ಅಸಮತೋಲನದ ಹಿಂದೆ ಅಡಗಿಕೊಂಡಿವೆ.

ಎಲ್ಲಾ ಪ್ರಗತಿಪರ ರಾಷ್ಟ್ರಗಳೂ, ಬಂಡವಳಿಗ ರಾಷ್ಟ್ರಗಳೂ ಕಳೆದ ಶತಮಾನದಲ್ಲಿ ಬಂಡವಾಳ ಮಾರ್ಗದ ಅರ್ಥನೀತಿಯ ಅಡಿಯಲ್ಲಿ ಭೂಸುಧಾರಣೆಗೆ ಆದ್ಯ ಗಮನ ನೀಡಿದ್ದವು. ಜಪಾನ್, ತೈವಾನ್, ಚೀನಾ, ವಿಯಟ್ನಾಂ, ದಕ್ಷಿಣ ಕೊರಿಯಾ ಇವೆಲ್ಲಾ ಉಳುವವನಿಗೆ ಭೂಮಿ ಹಂಚಿದ ನಂತರ ಮುಂದಿನ ಕೆಲಸ ಮಾಡಿದವು. ನಮ್ಮ ದೇಶದಲ್ಲಿಯಾದರೋ ಈ ನೀತಿಯನ್ನು ಕಮ್ಯುನಿಸ್ಟ್ ನೀತಿಯೆಂದು ಹಳಿದು ಆಳುವ ವರ್ಗ ಈ ನೀತಿಯನ್ನು ಸಮರ್ಪಕವಾಗಿ ನೆರವೇರಿಸಲು ಬಿಡಲೇ ಇಲ್ಲ. ಅಮೆರಿಕದ ಮೊದಮೊದಲ ರಾಯಭಾರಿಗಳೇ, ಚಸ್ಟರ್ ಬೌಲ್ಸ್ ಮತ್ತು ಗ್ಯಾಲ್‌ಬ್ರೈತ್ ಅಂಥವರೇ ಭೂಸುಧಾರಣೆಗೆ ಆದ್ಯತೆ ನೀಡಬೇಕೆಂದು ಒತ್ತಾಯಿಸಿದ್ದನ್ನು ನೆನಪಿಸಿಕೊಳ್ಳಬೇಕು. ಈ ನೀತಿ ಕಮ್ಯುನಿಸಂ ಅಲ್ಲದಿದ್ದರೆ, ಆದರೂ ಇದನ್ನು ಕಾರ್ಯಗತಗೊಳಿಸಲೇಬೇಕಾದ ಮಹತ್ವವೇನು ? ಆರ್ಥಿಕ ಬೆಳವಣಿಗೆಯ ಹಂತದಲ್ಲಿ ಪಾಳೆಗಾರಿಕೆಯ ಊಳಿಗಮಾನ್ಯದ ಜೀತಪದ್ಧತಿಯ ಕೃಷಿಕ ಸಮಾಜದ ಪರೆ ಕಳೆದುಕೊಳ್ಳುವುದು ಬಂಡವಾಳ ನೀತಿಯ

ಕೈಗಾರಿಕೀಕರಣದ ಆಧುನೀಕರಣದ ಪ್ರಕ್ರಿಯೆಗೆ ಪೂರ್ವಭಾವಿಯಾದ ಮಹತ್ವದ ಘಟ್ಟ. ಎಲ್ಲಿಯವರೆಗೆ ಊಳಿಗಮಾನ್ಯ ಮನೋಭಾವನೆಗಳು ನಮ್ಮ ರಾಜಕೀಯವನ್ನು ನಿಯಂತ್ರಿಸುತ್ತದೋ ಅಲ್ಲಿಯವರೆಗೆ ಈ ಪರಿವರ್ತನೆಯ ಕೆಲಸ ಆಗುವುದಿಲ್ಲ. ನಮ್ಮ ನಾಡಿನ ರಾಜಕೀಯವನ್ನು ಹಳ್ಳಿಯ ಜಮೀನುದಾರ, ದೊಡ್ಡ ಹಿಡುವಳಿಯವ, ಆರ್ಥಿಕ ಯೋಜನೆಗಳ ಎಲ್ಲ ಪ್ರಯೋಜನಗಳನ್ನು ತಾವೇ ಕಬಳಿಸಿರುವ ಈ ವರ್ಗ, ಅಷ್ಟೊಂದು ಲಾಭ ಗಳಿಸಿದ್ದರೂ ಇನ್ನೂ ಕೃಷಿ ಆದಾಯ ತೆರಿಗೆ ನೀಡಲು ಒಪ್ಪದ ಈ ಮನೋಭಾವನೆ ಬಂಡವಳಿಗರ ಛೇಂಬರ್ ಆಫ್ ಕಾಮರ್ಸ್‌ಗಳನ್ನೂ ತಡೆಹಿಡಿದಿರುವುದು ವಾಸ್ತವದ ಸಂಗತಿ. ದೇಶದೆಲ್ಲೆಡೆಯಂತೆ ಕರ್ನಾಟಕದಲ್ಲೂ ಈ ವರ್ಗದ ಮಾನಸಿಕ ಹಿನ್ನಡೆ ಭೂಸುಧಾರಣೆ ಸಮರ್ಪಕವಾಗಿ ಆಗದೆ, ಆಧುನಿಕ ಆರ್ಥಿಕ ವಿಕಾಸದ ಕಾಲಿಗೆ ಕುಣಿಕೆಯಾಗಿರುವುದು ವಾಸ್ತವ. ಈ ವರ್ಗ ಹೋಗುವವರೆಗೆ, ಗ್ರಾಮಾಂತರ ಪ್ರದೇಶದ ಸಣ್ಣ ಹಿಡುವಳಿದಾರ, ಭೂರಹಿತ ಕೃಷಿ ಕಾರ್ಮಿಕರ ಅಭ್ಯುದಯ ಸಾಧ್ಯವಾಗದೆ ಪ್ರಾದೇಶಿಕ ಹಾಗೂ ಗ್ರಾಮೀಣ ಮತ್ತು ನಗರ ಪ್ರದೇಶಗಳ ನಡುವಿನ ಆರ್ಥಿಕ ಅಸಮತೆಯ ಪರಿಹಾರವಾಗುವುದಿಲ್ಲ. ಯುಪಿಎ ಸರ್ಕಾರದ ಕನಿಷ್ಠ ಕಾರ್ಯಕ್ರಮದಲ್ಲಿ 'ಭೂಸುಧಾರಣೆ' ಎಂಬ ಸಣ್ಣ ಅಕ್ಷರದ ಕಾರ್ಯಕ್ರಮ ಅಡಗಿದೆ!

ಹಿಂದುಳಿದ ಅರ್ಥವ್ಯವಸ್ಥೆಯ ಮತ್ತೊಂದು ಲಕ್ಷಣವೆಂದರೆ ಯಾವ ಪ್ರದೇಶ ತುಂಬ ಹಿಂದುಳಿದಿದೆಯೋ ಅದು ಸಾಮಾನ್ಯ ಪ್ರಯತ್ನಗಳಿಗೆ ಜಗ್ಗದೆ ಹಿಂದುಳಿಯುತ್ತಲೇ ಹೋಗುತ್ತದೆ. ಹಾಗೆಯೇ ಮುಂದುವರಿದ ಪ್ರದೇಶಗಳು ಸ್ವಲ್ಪ ಪ್ರಯತ್ನದಿಂದಲೂ ಮಹತ್ವದ ಪ್ರಗತಿ ಸಾಧಿಸಬಲ್ಲವಾಗಿ ನಾಗಾಲೋಟದಿಂದ ಮುಂದೋಡುತ್ತವೆ. ಹಳೆ ಮೈಸೂರು, ಉತ್ತರ ಕರ್ನಾಟಕದ ಪರಿಸ್ಥಿತಿಯನ್ನು ಇಲ್ಲಿ ಹೋಲಿಸಿಕೊಳ್ಳಬಹುದು, ಕೇವಲ ಸಾಮಾನ್ಯ ಪ್ರಯತ್ನವನ್ನೇ ಎಲ್ಲಾ ಕಡೆಯೂ ಅನ್ವಯಿಸಿದಾಗ. ಹೀಗಾಗಿ ಆರ್ಥಿಕ ಅಸಮತೋಲನದ ವಿಷಮತೆ ಹಿಗ್ಗುತ್ತಾ ಆದರೂ ಒಟ್ಟಾರೆ ಪ್ರಗತಿಯ ಸಂಖ್ಯೆಯನ್ನು ಹೆಚ್ಚಿಸುತ್ತಾ ಮುಂದುವರಿಯುತ್ತದೆ. ಅಂದರೆ ಕೆಲವು ಪ್ರದೇಶಗಳಿಗೆ ಹೆಚ್ಚು ಬಂಡವಾಳ, ವಿಶೇಷ ಪ್ರಯತ್ನ, ವಿಶೇಷ ಕಾರ್ಯಕ್ರಮಗಳು ಅತ್ಯಗತ್ಯವಾಗುತ್ತದೆ. ಇಲ್ಲಿಯ ಪ್ರಯತ್ನಗಳು ಪರಿಣಾಮ ನೀಡಲು ಬಹುಕಾಲೀನವಾಗಿದ್ದು, ಶೀಘ್ರ ಸಾಧನೆಯ ಪ್ರಭೆಗಾಗಿ ಸದಾ ಅರಸುವ ಸಂಕುಚಿತ ದೃಷ್ಟಿಯ ರಾಜಕೀಯಕ್ಕೆ ಈ ತಾಮಸ ಪ್ರಿಯವಾಗುವುದಿಲ್ಲ. ಅಂದರೆ ಆರ್ಥಿಕ ಅಸಮತೋಲನ ನಿರ್ಮೂಲನಕ್ಕೆ ರಾಜಕೀಯ ಇಚ್ಛಾಶಕ್ತಿಯನ್ನು ಪ್ರಯತ್ನಪೂರ್ವಕ ಸಂಘಟಿಸಬೇಕಾಗುತ್ತದೆ. ಅಂದರೆ ಇದಕ್ಕೆ ತತ್ವಾಧಾರಿತ ಸಿದ್ಧಾಂತ ಪೂರ್ಣ ರಾಜಕೀಯ ಬೇಕಾಗುತ್ತದೆ. ನಮ್ಮಲ್ಲಿ ಇದರ ಕೊರತೆ ತೀರ ಇದೆ. ಬಂಡವಳಿಗ ತನ್ನಷ್ಟಕ್ಕೇ ತಾನು ತಕ್ಷಣದ ಲಾಭಕ್ಕಾಗಿ ಕೆಲಸ ಮಾಡುವವನೇ ವಿನಾ ಅವನಿಗೆ ತಾನು ಆರ್ಥಿಕ ವಿಕಾಸದ ಮಹತ್ವವಾದ ಯೋಜನೆಯಲ್ಲಿ ಭಾಗಿ ಎಂಬ ಪ್ರಜ್ಞೆ ಏನೂ ಇರಬೇಕಿಲ್ಲ. ಅಂಥ ಬಂಡವಳಿಗರು ಒಬ್ಬಿಬ್ಬರು ಕಂಡುಬಂದಿರುವುದು ನಿಜ. ಆದರೆ ಬಂಡವಾಳದ ಆರ್ಥಿಕ ನೀತಿಯಲ್ಲೇ ಈ ಪ್ರಜ್ಞೆಯ ಕೊರತೆ ಇರುವುದರಿಂದ ಅಸಮತೋಲಿತ ಬೆಳವಣಿಗೆ ಅನಿವಾರ್ಯವಾಗುತ್ತದೆ.

ಬಂಡವಳಿಗರು ಖಾಸಗಿ ಉದ್ಯಮಿಯನ್ನು ಸಾಹಸಿ ಎಂದು ವರ್ಣಿಸುತ್ತಾರೆ. ಅವರು ಹಾಗಿದ್ದಿದ್ದರೆ ಚೆನ್ನಾಗಿತ್ತು. ಹಿಂದುಳಿದ ಗುಲಬರ್ಗಾ ಜಿಲ್ಲೆಗೆ, ಬೆಂಗಳೂರಿನ ಐಟಿ ಕ್ಷೇತ್ರದ ವಿಶ್ವವಿಖ್ಯಾತ ಶ್ರೀಮಂತರು ತಮ್ಮಲ್ಲಿ ನಿರುಪಯೋಗಿ ಎನಿಸುವಷ್ಟು ಶೇಖರವಾಗಿರುವ ಅಪಾರ ನಗದು ಹಣವನ್ನು ಕೊಂಡೊಯ್ದು ಸ್ಥಳೀಯ ಜನರನ್ನೇ ಉಪಯೋಗಿಸಿಕೊಂಡು, ಅಲ್ಲಿಯ ಪರಿಸರ ಪ್ರಾಕೃತಿಕ ಸಂಪತ್ತುಗಳನ್ನು ಬಳಸಿಕೊಂಡು ಉದ್ಯಮ ಸೃಷ್ಟಿಸುವ ಸಾಹಸವನ್ನೇಕೆ ಮಾಡುವುದಿಲ್ಲ? ಅದೇ ಪ್ರಯತ್ನವನ್ನು ಯೋಜನಾಬದ್ಧ ಆರ್ಥಿಕ ನೀತಿ ಸರ್ಕಾರೀ ಕ್ಷೇತ್ರದಲ್ಲಿ ಮಾಡಹೊರಟರೆ ಅದನ್ನೇಕೆ ಹಳಿಯುತ್ತಾರೆ? ಈ ಪ್ರಯತ್ನದಲ್ಲಿ ಸದ್ಯಕ್ಕೆ ಲಾಭವಾಗದಿದ್ದರೂ ಸ್ವಲ್ಪ ಕಾಲಾನಂತರದಲ್ಲಿ ಆಗೇ ಆಗುತ್ತದೆ. ಅಪಾರ ಲಾಭವಿಲ್ಲದಿದ್ದರೂ ಸಾಕಷ್ಟು ಲಾಭವಾಗುತ್ತದೆ. ಸಾಮಾಜಿಕ ಬದಲಾವಣೆಗಳು ಉಂಟಾಗುತ್ತವೆ. ಪರಿಣಾಮದಲ್ಲಿ ಖಾಸಗಿ ಬಂಡವಾಳ ಬರುವುದಕ್ಕೆ ದಾರಿಮಾಡಿಕೊಡುತ್ತದೆ. ಶಿಕ್ಷಣ ಮಟ್ಟವನ್ನು ಆರೋಗ್ಯ ಮಟ್ಟವನ್ನು ಹೆಚ್ಚಿಸುವ ಕೆಲಸವನ್ನು ಉತ್ಪಾದನೆಯ ಬಹುಮುಖ್ಯ ಮೂಲ ಮಾನವ ಸಂಪನ್ಮೂಲ ಸಾಮರ್ಥ್ಯದ ವಿಕಾಸದಲ್ಲಿನ ಹೂಡಿಕೆ ಎಂಬಂತೆ ಭಾವಿಸಿ ಅಂಥ ಉದ್ಯಮದಲ್ಲಿ ಖಾಸಗೀ ಉದ್ಯಮಿ ತನ್ನನ್ನು ತೊಡಗಿಸಿಕೊಳ್ಳುವುದಿಲ್ಲವೇಕೆ? ಅಂಥ ಪ್ರಯತ್ನಗಳು ಬಂಡವಾಳಶಾಹಿ ಅರ್ಥನೀತಿಯ ಮಾರ್ಗವಾಗುವುದಿಲ್ಲ. ಅದು ಸಾಮಾಜಿಕ ಹೊಣೆಗಾರಿಕೆ ಹೊತ್ತು ಪ್ರಜಾಪ್ರಭುತ್ವಾತ್ಮಕ ಮಾದರಿಯ ಬೆಳವಣಿಗೆಯಾಗುತ್ತದೆ. ಈ ಬೆಳವಣಿಗೆ ನಗರಕೇಂದ್ರಿತ ಬೃಹತ್ ಉದ್ಯಮಿಗಳಿಂದ ಆಗುವುದಿಲ್ಲ. ಸ್ಥಳೀಯವಾದ, ಸಾಮಾಜಿಕ-ರಾಜಕೀಯ ಚಳವಳಿಗಳಿಂದ ಸಾರ್ವಜನಿಕವಾಗಿ ಒತ್ತಡ ಉಂಟಾಗದೆ ಇಂಥ ಬೆಳವಣಿಗೆ ಸಾಧ್ಯವಿಲ್ಲ. ಬಹುಶಃ ಪ್ರತ್ಯೇಕತೆಯ ಕೂಗು ಅಂಥ ಚಳವಳಿಗಳ ಪ್ರಾರಂಭ ದಿಶೆ ಇರಬಹುದು. ಈಗಾಗಲೇ ಜನರಲ್ಲಿ ವಿಕಾಸದ ಬಯಕೆಯ ಪ್ರಜ್ಞೆ ಉಂಟಾಗಿರುವುದು, ಅದು ರಾಜಕೀಯ ಪ್ರಜ್ಞೆಯಾಗಿ ಪಕ್ವವಾಗುತ್ತಿರುವ ಸೂಚನೆ ಇದ್ದಿರಬಹುದೇ?

ಒಂದು ಭಾಷೆಗೆ ಎರಡು ಪ್ರಾಂತಗಳ ನಿರ್ಮಾಣ ಅಂತಹ ಧೃತಿಗೆಡಿಸುವ ಅವಘಡವೇನೂ ಅಲ್ಲ. ರಾಜಕೀಯವಾಗಿ ಅದು ಪ್ರಯೋಜನಕಾರಿಯೂ ಆಗಬಹುದು. ಆದರೆ ಕನ್ನಡ ಜನಸಮುದಾಯಕ್ಕೆ ಈ ಬೆಳವಣಿಗೆಯಿಂದ ಬಡತನ ನೀಗಿಸಿಕೊಳ್ಳಲು ಸಮರ್ಥವಾದ ಆರ್ಥಿಕ ಬೆಳವಣಿಗೆಗೆ ಇದು ಪ್ರಯೋಜನಕಾರಿಯೇ ಎಂಬುದು ಮುಖ್ಯ. ಕಳೆದ ಬಾರಿಯ ಚುನಾವಣೆಯ ಫಲಿತಾಂಶಗಳನ್ನು ಗಮನಿಸಿದರೆ ಕೋಮುವಾದಿ ಪ್ರತಿಗಾಮಿ ಶಕ್ತಿಗಳು ಈ ಪ್ರತ್ಯೇಕತೆಯ ಕೂಗಿನ ಹಿಂದೆ ಅಡಗಿಲ್ಲವೇ ಎಂಬ ಸಂದೇಹ ಬರುತ್ತದೆ. ಇಡೀ ಕರ್ನಾಟಕ ಅವರ ಕೈಗೆ ದಕ್ಕದಿದ್ದರೆ ಭಾಗಶಃ ಸಿಗಲಿ ಎಂಬ ಹುನ್ನಾರವಿದ್ದರೆ ಅದು ಖಂಡನೀಯ. ಇದು ಆರ್ಥಿಕ ಅಸಮತೋಲನದ ವಾಸ್ತವವನ್ನು ಬಳಸಿಕೊಂಡು ಜನತೆಯನ್ನು ದಾರಿ ತಪ್ಪಿಸುವ ಸಂಚಾಗುತ್ತದೆ. ಸ್ವಾತಂತ್ರ್ಯ ಹೋರಾಟದಲ್ಲಿ ನೇರ ಭಾಗವಹಿಸಿದ ಕರ್ನಾಟಕದ ಹೊಸ ಭಾಗದ ಜನತೆಗೆ ಇದನ್ನು ತಿಳಿಯುವುದು ಸುಲಭ. ಹಾಗೂ ಹಾಗೇನಾದರೂ ಹೊಸ ರಾಜ್ಯ ರಚನೆಯಾದರೆ ಅದು ಆರ್ಥಿಕವಾಗಿ ಆರೋಗ್ಯವಾಗಿ ಬೆಳೆಯಲು ಸಾಕಷ್ಟು ಸಂಪನ್ಮೂಲಗಳಿಲ್ಲದೆ ಮತ್ತೂ ಸೊರಗುವುದು ಖಚಿತ.

ಕರ್ನಾಟಕವು ರಾಜಕೀಯವಾಗಿ ಮೃದು ರಾಜ್ಯವೆಂದು ದೇಶದ ಬಂಡವಳಿಗ ಪ್ರಭುಗಳೂ ಕೋಮುವಾದಿ ಪ್ರತಿಗಾಮಿಗಳೂ ಏಕಕಾಲದಲ್ಲಿ ಇಲ್ಲಿಯ ಸೌಕರ್ಯಗಳ ಮೇಲೆ ಲಗ್ಗೆ ಹಾಕಿದ್ದಾರೆ. ಈ ಮಾರ್ಗದ ಬೆಳವಣಿಗೆಯಲ್ಲಿ ಸಂಪತ್ತಿನ ಕೇಂದ್ರೀಕರಣ, ಆರ್ಥಿಕ ಅಸಮತೋಲನ, ವಿಚ್ಛಿದ್ರಕಾರೀ ಸಾಮಾಜಿಕ ಪ್ರವೃತ್ತಿಗಳ ಹುಟ್ಟು ಇವೆಲ್ಲಾ ಸಹಜ ಬೆಳವಣಿಗೆಗಳು. ಶೋಷಣೆಯ ಹಾದಿಯೂ ಪರಿಣಾಮವೂ ಇದೇ. ಇವುಗಳನ್ನು ಹಿಮ್ಮೆಟ್ಟಿಸಿ, ನಿರ್ವೀರ್ಯಗೊಳಿಸುವ, ಸಾಮಾಜಿಕ ನ್ಯಾಯದೊಡನೆ ಬೆಳವಣಿಗೆಯನ್ನು ತಳಕುಹಾಕಿಸುವ, ಸಾಮಾಜಿಕ ಆರ್ಥಿಕ-ರಾಜಕೀಯ ನೀತಿಗಳಿಗಾಗಿ ಜನಪರ ಜನಸಮೂಹದ ಹೋರಾಟಗಳನ್ನು ಸಂಘಟಿಸುವುದು ಪರಿಹಾರ ಮಾರ್ಗ. ಪ್ರತ್ಯೇಕತಾ ಚಳವಳಿಗಳಲ್ಲಿ ಭಾವನಾತ್ಮಕವಾಗಿ ಕನ್ನಡ-ಕನ್ನಡ ಎನ್ನುವವರೂ ತಮ್ಮ ಚಳವಳಿಗಳ ಹೂರಣವನ್ನು ಈ ತಿಳಿವಿನಲ್ಲಿ ಗಟ್ಟಿಯಾಗಿಸಿಕೊಳ್ಳುವ ಸಮಯ ಸನ್ನಿಹಿತವಾಗಿದೆ.

**ಕೆ. ಎಸ್. ಪಾರ್ಥಸಾರಥಿ**, ನಂ. ಸಿ-೧, ನಾಗಾರ್ಜುನ ಎನ್‌ಕ್ಲೇವ್
೭೬/ಎ, ೧೪ನೇ ಕ್ರಾಸ್ ೧ನೇ ಹಂತ, ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

# ಕುವೆಂಪು ಚಿಂತನೆ

## ಆಕರ್ಷಣೆ ಹಾಗೂ ವಿಕರ್ಷಣೆಗಳ ನಡುವೆ

ಡಾ|| ರಹಮತ್ ತರೀಕೆರೆ

> ಕುವೆಂಪು ಚಿಂತನೆಯ ಬಹಳ ದೊಡ್ಡ ಮಾನವೀಯತೆ ಮುಖವೆಂದರೆ, ಈ ಲೋಕ ದಮನಿಸಿದ ಜಗತ್ತನ್ನು, ನಿರ್ಲಕ್ಷಿಸಿದ ಸಂಗತಿಗಳನ್ನು ಪ್ರೀತಿಯಿಂದ ಕುತೂಹಲದಿಂದ ನೋಡುವುದು.

### ಒಂದು ಅನುಭವ

ನಮ್ಮ ಕಾಲದ ದೊಡ್ಡ ಲೇಖಕರಾದ ಕುವೆಂಪು ಅವರನ್ನು ಸಮಾಜದ ಬೇರೆಬೇರೆ ವರ್ಗದ ಜನ ಹೇಗೆ ಪರಿಭಾವಿಸಿದ್ದಾರೆ? ಈ ಬಗ್ಗೆ ನನಗೆ ವಿಚಿತ್ರ ಅನುಭವಗಳಾಗಿವೆ. ಮೊದಲನೆಯದು ಮಲೆನಾಡಿನಲ್ಲಾದುದು. ನಾಥಪಂಥಕ್ಕೆ ಸಂಬಂಧಪಟ್ಟಂತೆ ಭೈರವಾರಾಧನೆಯ ಜಾಗಗಳನ್ನು ಹುಡುಕಿಕೊಂಡು ಘಟ್ಟದ ಮೇಲೆ ತಿರುಗುತ್ತಿದ್ದೆ. ಆದಿಚುಂಚನಗಿರಿಯ ಭೈರವನ ಒಕ್ಕಲುಗಳಾಗಿರುವ ಒಕ್ಕಲಿಗರು ಇರುವ ಪ್ರದೇಶವದು. ಈ ಒಕ್ಕಲಿಗರು ಒಂದು ಕಾಲಕ್ಕೆ ನಾಥಪಂಥದ ಆಚರಣೆಗಳನ್ನು ಮಾಡುತ್ತಿದ್ದ ಕಾಪಾಲಿಕ ಶೈವರಾಗಿದ್ದರು. ಈ ವಿಷಯದಲ್ಲಿ ಮಾಕೋನಹಳ್ಳಿ ದೊಡ್ಡಪ್ಪಗೌಡರು 'ಪಾಶುಪತ ಶೈವರು ಮತ್ತು ಗೌಡಸಮಾಜ' ಎಂಬ ಪುಸ್ತಕವನ್ನು ಬರೆದಿದ್ದು, ಅದನ್ನು ಅನುಸರಿಸಿಕೊಂಡು ಮೂಡಿಗೆರೆ ತಾಲೂಕಿನ ಮಾಕೋನಹಳ್ಳಿಗೆ ಹೋದೆ. ಅಲ್ಲಿನ ಭೈರವಗುಡಿ ನೋಡಿಕೊಂಡು, ಅಲ್ಲೇ ಹತ್ತಿರದ್ದ ಒಬ್ಬರ ಮನೆಗೆ ಹೋದೆ – ಭೈರವಾರಾಧನೆಯ ಆಚರಣೆಗಳನ್ನು ತಿಳಿಯಲು. ಅವರು ವಿಶ್ವಾಸದಿಂದ ಒಳಕರೆದು, ಕಾಫಿಕೊಟ್ಟು ತಮಗೆ ಗೊತ್ತಿದ್ದನ್ನೆಲ್ಲ ತಿಳಿಸಿದರು. ಅಧೊಂದು ಕಾಫಿ ಪ್ಲಾಂಟರರ ದೊಡ್ಡಮನೆ. ಹೆಂಚಿನ ಮನೆಯಾದರೂ ಒಳಗೆ ಅರಮನೆಯಂತೆ ಇತ್ತು. ಮನೆಯ ಯಜಮಾನರು ಒಕ್ಕಲಿಗರ ಸಂಘದ ಸಮುದಾಯ ಭವನದಲ್ಲಿ ಮಾಡಿದ ಮಗನ ಮದುವೆಯ ಆಲ್ಬಂ ನೋಡಲು ಕೊಟ್ಟರು. ಫೋಟೊಗಳು ಮದುವೆಯ ಸಿರಿವಂತಿಕೆಯನ್ನು ಸೂಚಿಸುತ್ತಿದ್ದವು. ಅಲ್ಲಿದ್ದ ಬ್ರಾಹ್ಮಣ ಪುರೋಹಿತರನ್ನು ಕಂಡಾಗ ಕುವೆಂಪು ಅವರ ಮಂತ್ರಮಾಂಗಲ್ಯ ತತ್ವವು ಅಷ್ಟಾಗಿ ಜನಪ್ರಿಯವಾಗಿಲ್ಲ ಎಂದು ತಿಳಿಯಿತು. ಕುವೆಂಪು ಚಿಂತನೆ ಅವರು ಹುಟ್ಟಿಬಂದ ಸಮುದಾಯ ಹಾಗೂ ಪ್ರದೇಶದಲ್ಲಿ ಯಾವ ಪ್ರಭಾವ ಬೀರಿದೆಯೆಂಬ ಕುತೂಹಲ ಹುಟ್ಟಿತು. ಅವರ ಮನೆಯಲ್ಲಿ ಕುವೆಂಪು ಫೋಟೋವಾಗಲಿ, ಪುಸ್ತಕವಾಗಲಿ ಇರಲಿಲ್ಲ. ನಾನು ಕೇಳಿದೆ: ''ನಿಮ್ಮ ಸಮುದಾಯ ಕಂಡ ದೊಡ್ಡ ಚಿಂತಕ ಅವರು. ಅವರ ಪುಸ್ತಕ ನಿಮ್ಮಲ್ಲಿ ಇಲ್ಲ. ಅವರು ಪುರೋಹಿತಶಾಹಿಯನ್ನು ಧಿಕ್ಕರಿಸಿದವರು. ನೀವು ಪುರೋಹಿತರನ್ನು ಕರೆಸಿದ್ದೀರಿ'' ಎಂದೆ. ನನ್ನ ಮಾತು ಅವರಲ್ಲಿ ಸೆಡವುಂಟುಮಾಡಿತು. ಅವರು ನೇರವಾಗಿ ತೀಕ್ಷ್ಣವಾಗಿ ಕೇಳಿದರು: ''ಕುವೆಂಪು ನಮ್ಮ ಜನಾಂಗಕ್ಕೆ ಏನು ಮಾಡಿದ್ದಾರೆ? ದೊಡ್ಡದೊಡ್ಡ ಪುಸ್ತಕ ಬರೆದಿರಬಹುದು. ಆದರೆ ಚುಂಚನಗಿರಿಸ್ವಾಮಿ ನೋಡಿ. ಅವರು ಪಟ್ಟಕ್ಕೆ ಬಂದಮೇಲೆ ಊರೂರಲ್ಲಿ ಸಮುದಾಯ ಭವನ ಕಟ್ಟಿಸಿದ್ದಾರೆ. ಮೆಡಿಕಲ್ ಕಾಲೇಜು ಕಟ್ಟಿಸಿದ್ದಾರೆ. ಬೇಕಾದಷ್ಟು ಡೆವಲಪ್‌ಮೆಂಟ್ ಆಗಿದೆ. ಕುವೆಂಪು ಅವರಿಂದ ಏನಾಗಿದೆ?''

ನಾನು ನಿರುತ್ತರನಾದೆ. ಬಹುಶಃ ನಾನು ಕೇಳಿದ ಪ್ರಶ್ನೆಯಲ್ಲೇ ದೋಷವಿತ್ತು. ಒಕ್ಕಲಿಗರ ಮನೆಯಲ್ಲಿ ಕುವೆಂಪು ಸಾಹಿತ್ಯ ಇರಲೇಬೇಕೆಂದು ನಿರೀಕ್ಷಿಸಿದ್ದು ತಪ್ಪು. ಕುವೆಂಪು ಒಕ್ಕಲಿಗರ ಲೇಖಕರೇನೂ ಅಲ್ಲವಲ್ಲ. ವಿಶೇಷ ಎಂದರೆ ಕುವೆಂಪು ವೈಚಾರಿಕ ಚಿಂತನೆ ಶುರುವಾಗಿದ್ದೇ ಒಕ್ಕಲಿಗರ ಸುಧಾರಣೆಗೆ. ಅವರು ಒಕ್ಕಲಿಗ ಯುವಕರನ್ನು ಕುರಿತು ೧೯೩೦ರ ಸುಮಾರಿಗೆ 'ಮಲೆನಾಡ ಯುವಕರಲ್ಲಿ' ಎಂದು ಮಾಡಿದ ಭಾಷಣ ನೆನೆಯಬೇಕು. ಮಲೆನಾಡ ಒಕ್ಕಲಿಗರಲ್ಲಿ ಇರುವ ಕುಡುಕತನ, ಬಾಲ್ಯವಿವಾಹ, ಮದುವೆಸಾಲ, ಭೂತಕ್ಕೆ ಹರಕೆ ಕಟ್ಟುವುದು – ಇವೆಲ್ಲ ಸಾಮಾಜಿಕ ಅಧಃಪತನಕ್ಕೆ ಹೇಗೆ ಕಾರಣವಾಗಿವೆ ಎಂಬುದನ್ನು ಅವರು ತಲ್ಲಣದಿಂದ ವಿವರಿಸುತ್ತಾರೆ. ಈಗ ನೋಡಿದರೆ, ಒಕ್ಕಲಿಗರ ಸಾಂಸ್ಕೃತಿಕ ನಾಯಕತ್ವದ ಜಾಗದಲ್ಲಿ ಕುವೆಂಪುಗಿಂತ ಹೆಚ್ಚಾಗಿ ದೇವೇಗೌಡರು ಅಥವಾ ಚುಂಚನಗಿರಿ ಸ್ವಾಮಿಗಳಂತಹ ಯಶಸ್ವಿವ್ಯಕ್ತಿಗಳು ಪ್ರತಿಷ್ಠಾಪನೆಗೊಂಡಿದ್ದಾರೆ. ಕೊನೇ ಪಕ್ಷ ದೊಡ್ಡಪ್ಪಗೌಡರು ವಿವರಿಸುವ ನಾಥಪಂಥದ ಹಿನ್ನೆಲೆಯ ಸಾಂಪ್ರದಾಯಿಕ ಮದುವೆಗಳೂ ಇಲ್ಲ. ಪುರೋಹಿತಶಾಹಿ ಬಂದಿದೆ. ಇದು ನಮ್ಮ ಸಮಾಜವು



ಚಲಿಸಿದ ಪರಿಯನ್ನು ಸೂಚಿಸುತ್ತದೆ. ಈ ಚಲನೆಯಲ್ಲಿ ಮಲೆನಾಡಿನ ಬಹುತೇಕ ಒಕ್ಕಲಿಗರ ಜೀವನವಲಯದಲ್ಲಿ ಕುವೆಂಪು ಚಿಂತನೆ ಉಚ್ಚಾಟನೆಗೊಂಡಿದೆ ಅಥವಾ ಪ್ರವೇಶ ಪಡೆದಿಲ್ಲ. ಪ್ಲಾಂಟರ್ ಮನೆಯವರು ಕುವೆಂಪು ಮೇಲೆ ಹುಸಿ ಅಭಿಮಾನ ತೋರದೆ, ಪ್ರಾಮಾಣಿಕವಾಗಿ ಸರಳವಾಗಿ ಈ ಸತ್ಯವನ್ನು ತೋರಿದರು. ಶ್ರೀಮಂತರ ಬದುಕಿನಲ್ಲಿ ಕುವೆಂಪು ಚಿಂತನೆ ಅಷ್ಟು ಸರಾಗವಾಗಿ ಇರುವುದೂ ಕಷ್ಟ. ಒಂದೊಮ್ಮೆ ಪುಸ್ತಕವೋ ಫೋಟೊವೋ ಇದ್ದರೆ ಅವು ಶೋಕೇಸಿನಂತೆ ಇರುತ್ತವೆ. ಹಾಗೆಂದು ಬಡ ಒಕ್ಕಲಿಗರಲ್ಲಿ ಕುವೆಂಪು ವೈಚಾರಿಕ ಚೈತನ್ಯವಾಗಿ ಇದ್ದಾರೆ ಎಂದೂ ಅರ್ಥವಲ್ಲ. ಅಕ್ಷರ ಸಂಸ್ಕೃತಿಗೆ ಹೊರತಾಗಿರುವ ಅವರಿಗೆ ಕುವೆಂಪು ಹೆಸರೂ ಗೊತ್ತಿಲ್ಲವಾದರೆ ಅದು ಸೋಜಿಗವೂ ಅಲ್ಲ, ತಪ್ಪೂ ಅಲ್ಲ.

ಇದೊಂದು ನಮ್ಮ ಸಾಹಿತ್ಯಕ ಪ್ರಭಾವದ ಮಿತಿಯನ್ನು ಸೂಚಿಸುವ ನಿಷ್ಠುರವಾದ ಸಾಮಾಜಿಕ ವಾಸ್ತವ. ಹಿಂದುಳಿದ ಸಮಾಜಗಳಲ್ಲಿ ಅಕ್ಷರಪರಂಪರೆಯ ಸಾಹಿತ್ಯ, ಕಲೆ ಇತ್ಯಾದಿಯನ್ನು ಜೀವನದಲ್ಲಿ ಮೌಲ್ಯ ಎಂದು ಭಾವಿಸುವ ಸಾಹಿತ್ಯಾಸಕ್ತ ಸಮುದಾಯ ಬಹಳ ಚಿಕ್ಕದು. ಇದಕ್ಕೆ ಕುವೆಂಪು ಕಾರಂತರಂತಹ ಲೇಖಕರು ಸಾಂಸ್ಕೃತಿಕ ನಾಯಕರಾಗಿ ತೋರಬಹುದು. ಹಾಗೆಂದು ಆರುಕೋಟಿ ಕನ್ನಡಿಗರೂ ಭಾವಿಸಬೇಕು ಎನ್ನುವುದು ಅಸಾಧ್ಯ. ಬಹುಸಂಖ್ಯಾತ ಜನ, ತಮ್ಮ ಜೀವನದ ನಿತ್ಯ ಬವಣೆ ಸಂಭ್ರಮದಲ್ಲಿ ಸಾಹಿತ್ಯದ ತಾರೆಗಳನ್ನು ದೊಡ್ಡವರೆಂದು ತಿಳಿಯಲು ಸಾಧ್ಯವಿಲ್ಲ. ಅವರಿಗೆ ಜೀವನಕ್ಕೆ ನೇರ ಸಂಬಂಧವುಳ್ಳ ಇನ್ಯಾವುದೋ ಮುಖ್ಯವಾಗಿರುತ್ತದೆ. ಜನ ಕೇವಲ ದೊಡ್ಡ ಆದರ್ಶಗಳಲ್ಲಿ ಬದುಕುವುದಿಲ್ಲ; ಲೌಕಿಕವಾಗಿರುತ್ತಾರೆ, ಪ್ರಯೋಜನ ವಾದಿಯಾಗಿರುತ್ತಾರೆ. ಎಂತಲೇ ಆರ್ಥಿಕವಾಗಿ ಯಶಸ್ವಿ ಯಾದ ಸಂಸ್ಥೆಗಳನ್ನು ಕಟ್ಟಿ ರಾಜಕೀಯವಾಗಿ ಪ್ರಭಾವ ಶಾಲಿಯಾಗಿರುವ ಚುಂಚನಗಿರಿಸ್ವಾಮಿ ಒಕ್ಕಲಿಗರಿಗೆ ಒಂದು ಐಡೆಂಟಿಟಿ ಗುರುತಾಗಿದ್ದಾರೆ. ಇದು ಇಲ್ಲಿಗೆ ಮಾತ್ರ ನಿಂತಿಲ್ಲ. ಒಕ್ಕಲಿಗರು ದಟ್ಟವಾಗಿರುವ ಶೃಂಗೇರಿ, ತೀರ್ಥಹಳ್ಳಿ, ಚಿಕ್ಕಮಗಳೂರುಗಳಲ್ಲಿ, ಕುವೆಂಪು ಶತಮಾನೋತ್ಸವದ ಈ ವರ್ಷದಲ್ಲಿ ಶಾಸಕರಾಗಿ ಗೆದ್ದು ಬಂದಿರುವವರು ಒಕ್ಕಲಿಗರು. ಇವರು ಕುವೆಂಪು ತೀವ್ರವಾಗಿ ವಿರೋಧಿಸಿದ ಬ್ರಾಹ್ಮಣ ಪುರೋಹಿತಶಾಹಿ ನಿರ್ದೇಶನಕ್ಕೆ ಒಳಪಟ್ಟಿರುವ ಬಿಜೆಪಿ, ಬಜರಂಗ ದಳದವರು. ಅತ್ತ ಉತ್ತರ ಕರ್ನಾಟಕದಲ್ಲಿಯೂ 'ಉಳ್ಳವರು ಶಿವಾಲಯ ಮಾಡುವರು' ವಚನ ರಚಿಸಿದ ಬಸವಣ್ಣನ ಅನುಯಾಯಿಗಳು, ರಾಮನಿಗೆ ಗುಡಿಕಟ್ಟುವ ಪಕ್ಷದ ಮೂಲಕ ತಮ್ಮ ರಾಜಕೀಯ ಅಸ್ತಿತ್ವವನ್ನು ಪಡೆದು ಕೊಳ್ಳುವ ದೃಶ್ಯವಿದೆ. ಇದು ನಮ್ಮ ಸಮಾಜ ರಾಜಕಾರಣ ಚಲಿಸುತ್ತಿರುವ ದಿಕ್ಕಿನ ಸೂಚಕ. ಮಾಕೋನಹಳ್ಳಿ ಅನುಭವ ಕುವೆಂಪು ಅವರನ್ನು ೨೦ನೇ ಶತಮಾನದ ಕರ್ನಾಟಕದ ಸಾಂಸ್ಕೃತಿಕ ನಾಯಕ ಎಂದು ಹರಿಕಥೆ ಮಾಡಿಕೊಂಡು ತಿರುಗುತ್ತಿದ್ದ ನನಗೆ ಹೊಸ ಜ್ಞಾನೋದಯ ಮೂಡಿಸಿತು. ಇದನ್ನು ಕುವೆಂಪು ಚಿಂತನೆಯ ಸೋಲೆಂದು ಭಾವಿಸಬೇಕಿಲ್ಲ. ಬದಲಿಗೆ ಯಾವುದೇ ದೊಡ್ಡ ಚಿಂತನೆ ವಾಸ್ತವದಲ್ಲಿ ನೆಲೆಗೊಳ್ಳುವ ಬಿಕ್ಕಟ್ಟುಗಳನ್ನು ತೋರಿಸುತ್ತದೆ.

**ಸಾಂಸ್ಕೃತಿಕ ನಾಯಕರೆ**

ಕುವೆಂಪು ನಮ್ಮ ಸಮಾಜದ ಬೇರೆಬೇರೆ ಸಮುದಾಯಗಳ ಮೇಲೆ ಲೇಖಕರಾಗಿ ಚಿಂತಕರಾಗಿ ಬೀರಿದ ಪ್ರಭಾವವನ್ನು ನಾವಿನ್ನೂ ಅರಿಯಬೇಕಿದೆ. ಆದರೆ ನಿಸ್ಸಂಶಯವಾಗಿ ಅವರು ಆಧುನಿಕ ಸಾಹಿತ್ಯದ ಲೇಖಕ ಸಮುದಾಯವೊಂದರ ಮೇಲೆ ತೀವ್ರವಾಗಿ ಪ್ರಭಾವ ಬೀರಿದ ಲೇಖಕ. ಕಂಬಾರರು, ಶಿವರುದ್ರಪ್ಪ, ಕಣವಿ, ಸಿದ್ಧಲಿಂಗಯ್ಯ, ತೇಜಸ್ವಿ, ಮೊಗಳ್ಳಿ, ನುಗಡೋಣಿ, ಕೋ.ಚೆ., ಕಟ್ಟೀಮನಿ, ದೇವನೂರು, ರಾಜೇಂದ್ರಚೆನ್ನಿ ಎಚ್ ಎಸ್ ರಾಘವೇಂದ್ರರಾವ್, ಲಂಕೇಶ್, ಸುಬ್ಬಣ್ಣ – ಹೀಗೆ ಹಲವು ತಲೆಮಾರಿನ ಲೇಖಕರು ತಮ್ಮನ್ನು ಕುವೆಂಪು ಪರಂಪರೆಯಲ್ಲಿ ಗುರುತಿಸಿಕೊಂಡಿದ್ದಾರೆ. ಮಾತ್ರವಲ್ಲ ನಂಜುಂಡಸ್ವಾಮಿ, ಸುಂದರೇಶ್, ರುದ್ರಪ್ಪ ಕಡಿದಾಳು ಶಾಮಣ್ಣ, ಗಣಪತಿಯಪ್ಪ ಮುಂತಾದ ರೈತ ಚಳವಳಿಯ ನಾಯಕರು, ಶಾಂತವೇರಿ ಗೋಪಾಲಗೌಡ, ಕೋಣಂದೂರು ಲಿಂಗಪ್ಪ, ವೈ.ಕೆ. ರಾಮಯ್ಯ, ಬಸವಲಿಂಗಪ್ಪ, ನೀಲಗಂಗಯ್ಯ ಪೂಜಾರ – ಮುಂತಾದ ರಾಜಕೀಯ ನೇತಾರರು ಕುವೆಂಪು ಅವರಿಂದ ಪ್ರಭಾವಿತರಾಗಿದ್ದರು. ಕನ್ನಡದ ಅನೇಕ ಸಮುದಾಯಗಳ ಮೇಲೆ ವೈಚಾರಿಕವಾಗಿ ಇಷ್ಟೊಂದು ಪ್ರಭಾವ ಬೀರಿದ ಲೇಖಕ ಇನ್ನೊಬ್ಬರಿಲ್ಲ. ಸಮಾಜದಲ್ಲಿ ಬದಲಾವಣೆ ಬಯಸುವ ಎಲ್ಲ ಪ್ರಗತಿಪರರಿಗೂ ಕುವೆಂಪು ಹೇಗೊ ಅನಿವಾರ್ಯವಾಗಿಬಿಡುತ್ತಾರೆ. ೨೦ನೇ ಶತಮಾನದ ಕರ್ನಾಟಕದ ಚರಿತ್ರೆಯನ್ನು ನೋಡಿದರೂ ಗೊತ್ತಾಗುತ್ತದೆ. ಮಾತೃಭಾಷಾ ಚಳವಳಿ, ದಲಿತ ಚಳವಳಿ, ತುರ್ತುಪರಿಸ್ಥಿತಿ, ಜಾಗತೀಕರಣ, ಕೋಮುವಾದ, ವಸಾಹತುಶಾಹಿ ವಿರೋಧಿ ಹೋರಾಟಗಳು – ಇಲ್ಲೆಲ್ಲ ನಮ್ಮ ಲೇಖಕರೆ ಮುಂಚೂಣಿ ಪಾತ್ರವಹಿಸಿದ್ದಾರೆ. ಕುವೆಂಪು ಅವರನ್ನು ಹೊರತುಪಡಿಸಿ ೨೦ನೇ ಶತಮಾನದ ಕರ್ನಾಟಕದ ಯಾವ ಚಳವಳಿಯನ್ನೂ ಕಲ್ಪಿಸಿಕೊಳ್ಳುವುದು ಕಷ್ಟ. ಬಹುಶಃ ತುರ್ತುಪರಿಸ್ಥಿತಿ ವಿರೋಧಿ ಚಳವಳಿಯನ್ನು ಹೊರತುಪಡಿಸಿ. ತುರ್ತುಪರಿಸ್ಥಿಯ ಹೊತ್ತಲ್ಲಿ ಅವರು ಯಾಕೆ ಪ್ರತಿರೋಧ ವ್ಯಕ್ತಮಾಡಲಿಲ್ಲವೊ ಸ್ಪಷ್ಟವಾಗುವುದಿಲ್ಲ. ಈ ಕಾರಣಕ್ಕಾಗಿಯೇ ಅವರನ್ನು ರಸಋಷಿ, ರಾಷ್ಟ್ರಕವಿ, ಮಹಾಕವಿ, ಮುಂತಾದ ಸಾಹಿತ್ಯಕ ಪರಿಭಾಷೆಯಲ್ಲಿ ಕರೆಯುವುದು ಸೂಕ್ತವಲ್ಲ. ಅವರನ್ನು ಸಾಂಸ್ಕೃತಿಕ ಪರಿಭಾಷೆಯಲ್ಲಿ ವಿವರಿಸುವುದಕ್ಕೆ ಯತ್ನಿಸಬೇಕು. ಅವರೊಬ್ಬ ಕಳೆದ ಶತಮಾನದ ಕರ್ನಾಟಕದ ಒಬ್ಬ ಸಾಂಸ್ಕೃತಿಕ ನಾಯಕ.

ಸಾಂಸ್ಕೃತಿಕ ನಾಯಕ ಎಂದರೆ, ನಮ್ಮ ವರ್ತಮಾನದ ಬದುಕನ್ನು ರೂಪಿಸುವ ಬಿಕ್ಕಟ್ಟಿನಲ್ಲಿ ನೆರಗೆ ಒದಗುತ್ತಾರೊ, ಒದಗುತ್ತ ಮತ್ತೆಮತ್ತೆ ಕಾಡುತ್ತಾರೊ ಅಂತಹ ವ್ಯಕ್ತಿತ್ವಗಳು. ಬಹುಶಃ ಬಸವಣ್ಣನನ್ನು ಬಿಟ್ಟರೆ ಕಳೆದ ಒಂಬತ್ತು ಶತಮಾನಗಳಲ್ಲಿ ಕನ್ನಡದ ಮನಸ್ಸನ್ನು ಇಷ್ಟೊಂದು ಕಾಡಿದ ಆವರಿಸಿದ ಎರಡನೆಯ ಸಾಂಸ್ಕೃತಿಕ ವ್ಯಕ್ತಿತ್ವವೆಂದರೆ ಕುವೆಂಪು ಅವರದು. ಅವರನ್ನು ಸಂದೇಶ ಕೊಡುವ ಪ್ರವಾದಿ ಎಂದು ಭಾವಿಸುವವರು ಆರಾಧನೆಯ ದೈವ ವಾಗಿಸಿ, ತಮ್ಮನ್ನು ಅವರ ಮುಂದೆ ಕುಬ್ಜಮಾಡಿಕೊಳ್ಳುತ್ತಾರೆ. ನಿಜವಾದ ಸಾಂಸ್ಕೃತಿಕ ನಾಯಕತ್ವವು ವಾಗ್ವಾದವನ್ನು ಆಹ್ವಾನಿಸುತ್ತದೆ. ಕುವೆಂಪು ಚಿಂತನೆಗೆ ಅಂತಹ ಒಂದು ಶಕ್ತಿಯಿದೆ. ಸಾಂಸ್ಕೃತಿಕ ನಾಯಕರು ಒಂದು ಸಮುದಾಯ ಎದುರಿಸುವ ಎಲ್ಲ ಸಮಸ್ಯೆಗಳಿಗೆ ಪರಿಹಾರ ಒದಗಿಸುವ ಮಂತ್ರವಾದಿಗಳಲ್ಲ. ನಮ್ಮ ಪ್ರಜ್ಞೆಯನ್ನು ತನ್ನ ಪ್ರಶ್ನೆಗಳಿಂದ ಕಲಕುವ, ನಮ್ಮಿಂದ ಪ್ರಶ್ನೆಗೆ ಒಳಗಾಗುವ, ಈ ಕೊಡು ಕೊಳುವಿಕೆಯಲ್ಲಿ ಒಂದು ನಾಡಿನ ಮಾನಸವನ್ನು ರೂಪಿಸುವ ವ್ಯಕ್ತಿತ್ವಗಳು ಸ್ವಾತಂತ್ರ್ಯದ ಬೆಳ್ಳಿಹಬ್ಬದ ಹೊತ್ತಲ್ಲಿ (೧೯೭೨) ಕುವೆಂಪು ವಯಸ್ಕರ ಶಿಕ್ಷಣ ಸಮಿತಿಯವರಿಗೆ ಕೊಟ್ಟ ಒಂದು ಸಂದರ್ಶನವನ್ನು ಗಮನಿಸಬೇಕು:

*ಈ ಹೊತ್ತಲ್ಲಿ ನಾವು ಬಡತನವನ್ನು ಎಷ್ಟರಮಟ್ಟಿಗೆ ಪರಿಹರಿಸಿದ್ದೇವೆ? ಜಾತಿಮತಗಳ ಭೇದಬುದ್ಧಿಯನ್ನು ಎಷ್ಟರಮಟ್ಟಿಗೆ ತೊಡೆದುಹಾಕಿದ್ದೇವೆ? ಉಳ್ಳವರ ಇಲ್ಲದವರ ನಡುವಣ ಅಂತರವನ್ನು ಎಷ್ಟು ಕಡಿಮೆ ಮಾಡಿದ್ದೇವೆ? ಸಾಮಾನ್ಯರಲ್ಲಿ ಸಮಾಜವಾದಿ ಪ್ರಜಾಪ್ರಭುತ್ವದ ಜ್ಞಾನೋದಯವಾಗಲು ಏನೇನು ಕ್ರಮ ಕೈಗೊಂಡಿದ್ದೇವೆ? ವೈಚಾರಿಕ ಬುದ್ಧಿ ಮತ್ತು ವೈಜ್ಞಾನಿಕ ದೃಷ್ಟಿ ಇವುಗಳನ್ನು ಸಾರ್ವಜನಿಕರ ಮನಸ್ಸಿನಲ್ಲಿ ಯಾವ ಪ್ರಮಾಣದಲ್ಲಿ ಬೆಳೆಸಿದ್ದೇವೆ ಎಂಬ ವಿಚಾರವಾಗಿ ಸಿಂಹಾವಲೋಕನ ಮಾಡಬೇಕು.*

ಮೇಲಿನ ಮಾತುಗಳನ್ನು ಸೂಕ್ಷ್ಮವಾಗಿ ಗಮನಿಸಬೇಕು. ಇವು ನಮ್ಮ ಆರ್ಥಿಕತೆ, ಸಮಾಜ, ರಾಜಕಾರಣ ಹಾಗೂ ಧರ್ಮಗಳನ್ನು ಕುರಿತ ಮೂಲಭೂತ ಪ್ರಶ್ನೆಗಳಾಗಿವೆ. ಇವುಗಳ ಮೂಲಕ ಕುವೆಂಪು ನಮಗೆ ಸಮಾಜವಾದ, ಪ್ರಜಾಪ್ರಭುತ್ವ, ವೈಚಾರಿಕತೆ, ವೈಜ್ಞಾನಿಕತೆಗಳನ್ನು ಪರ್ಯಾಯ ಎಂದು ಸೂಚಿಸುತ್ತಿದ್ದಾರೆಯೇ? ಇಂತಹ ಪ್ರಶ್ನೆಗಳನ್ನು ಒಬ್ಬ ಲೇಖಕ ಎತ್ತುತ್ತಿದ್ದಾರೆ ಎನ್ನುವುದು ಮಾರ್ಮಿಕವಾಗಿದೆ. ಇದು ಕುವೆಂಪು ಶಿಷ್ಟತೆ ಮಾತ್ರವಲ್ಲ, ಕನ್ನಡದ ಲೇಖಕರ ಸಾಮಾನ್ಯ ಲಕ್ಷಣವೂ ಹೌದು. ಕನ್ನಡದ ಎಲ್ಲ ದೊಡ್ಡ ಲೇಖಕರು ನಮ್ಮ ಸಮಾಜಕ್ಕೆ ಸಂಬಂಧಿಸಿದಂತಹ ಮೂಲಭೂತ ಪ್ರಶ್ನೆಗಳನ್ನು ಎತ್ತುತ್ತಲೇ ಬಂದಿದ್ದಾರೆ. ಈ ಕಾರಣಕ್ಕೆ ಕುವೆಂಪು, ಮಾಸ್ತಿ, ಕಾರಂತ, ಬೇಂದ್ರೆ, ತೇಜಸ್ವಿ, ಅನಂತಮೂರ್ತಿ, ನಿರಂಜನ, ಆಲೂರು, ಶಂಬಾ, ಡಿವಿಜಿ, ಲಂಕೇಶ್, ಮಹಾದೇವ, ಸುಬ್ಬಣ್ಣ, ಚಂಪಾ, ಬರಗೂರು - ನಮ್ಮ ಕೇವಲ ಲೇಖಕರಲ್ಲ. ಅವರು ಕರ್ನಾಟಕದ ಶಿಷ್ಟ ರಾಜಕೀಯ ಚಿಂತಕರೂ ತತ್ವಜ್ಞಾನಿಗಳೂ ಸಮಾಜಶಾಸ್ತ್ರಜ್ಞರೂ ಹೌದು. ತಮ್ಮೆಲ್ಲ ಮಿತಿಗಳಲ್ಲಿ ಅವರು ಬಹುರೂಪಿಗಳು. ಅವರು ಹಲವು ಪ್ರಕಾರಗಳಲ್ಲಿ ಬರೆಯುವುದಕ್ಕೆ ಕಾರಣ, ಪ್ರಯೋಗಶೀಲತೆಯಲ್ಲ. ಅದು ಹಲವು ಬಗೆಗಳಲ್ಲಿ ಸಮಾಜದ ವಿವಿಧ ಸ್ತರಗಳನ್ನು ಮುಟ್ಟುವ ಅವರ ತವಕದ ಸಂಕೇತ. ಕುವೆಂಪು ಅವರ ಮಹಾಕಾವ್ಯದಿಂದ ಮಕ್ಕಳ ಪದ್ಯಗಳವರೆಗಿನ ಬಹುಪ್ರಕಾರದ ಬಳಕೆಯನ್ನು ಈ ಅರ್ಥದಲ್ಲಿ ನೋಡಬೇಕು ಅನಿಸುತ್ತದೆ. ಬೊಮ್ಮನಹಳ್ಳಿ ಕಿಂದರಿ ಜೋಗಿಯ ಮುನ್ನುಡಿಯಲ್ಲಿ ಕುವೆಂಪು ಹೇಳುತ್ತಾರೆ: ಈ ಕತೆ ಬರೆದಿರುವುದು ಮಕ್ಕಳಿಗಾಗಿ ಮಾತ್ರವಲ್ಲ, ದೊಡ್ಡವರಲ್ಲಿ ಮಲಗಿರುವ ಮಗುತನವನ್ನು ಎಚ್ಚರಿಸಲು ಎಂದು. ಲೇಖಕರು ನಾಡಿನ ಮನಸ್ಸನ್ನು ಕಟ್ಟುವ ಕಾರ್ಯವೆಂದರೆ ಇದು.

ಯಾಕೆ ಕನ್ನಡದ ಲೇಖಕರು ಹೀಗೆ ಬಹು ಮುಖಿಗಳು, ಬಹುಪ್ರಕಾರಿಗಳು, ಬಹುಶಃ ಚಿಂತಿತರು? ಒಂದು ಭಾವುಕ ಸನ್ನಿವೇಶದಲ್ಲಿ ರಾಜಕೀಯಶಾಸ್ತ್ರಜ್ಞರು ಸಮಾಜಶಾಸ್ತ್ರಜ್ಞರು ತತ್ವಶಾಸ್ತ್ರಜ್ಞರು ತಮ್ಮ ಹೊಣೆಯನ್ನು ಸರಿಯಾಗಿ ನಿಭಾಯಿಸದೆ ಹೋದಾಗ, ಸೃಜನಶೀಲ ಲೇಖಕರು ನಿಭಾಯಿಸುತ್ತಿರಬಹುದೆ? ಈ ಬಗ್ಗೆ ತೀವ್ರ ಭಿನ್ನಾಭಿಪ್ರಾಯಗಳು ಏಳ ಬಹುದು. ನಮ್ಮ ಲೇಖಕರು ಮೂಲತಃ ಚಿಂತಕರು ಎಂಬುದು ಮಾತ್ರ ನಿಜ. ಕನ್ನಡದ ಚಿಂತನಾಪರಂಪರೆಯನ್ನು ಕಟ್ಟಿಕೊಳ್ಳುವ ಕೆಲಸವನ್ನು ನಾವಿನ್ನೂ ಗಂಭೀರವಾಗಿ ಮಾಡಿಲ್ಲ. ಇದು ಕವಿತೆ, ಕಾವ್ಯ, ಕಾದಂಬರಿ ಪ್ರಧಾನವಾಗಿ ಕನ್ನಡ ಸಾಹಿತ್ಯವನ್ನು ನೋಡುವ

ದೃಷ್ಟಿಕೋನದ ದೋಷವಿದು. ಕುವೆಂಪು ತಮ್ಮ ಚಿಂತನೆಯನ್ನು ಕೇವಲ 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' ಮೊದಲಾದ ಲೇಖನಗಳಲ್ಲಿ ಮಾತ್ರ ಪ್ರಕಟಿಸಲಿಲ್ಲ, ತಮ್ಮ ಕತೆ ಕವಿತೆ ಕಾದಂಬರಿ ಎಲ್ಲದರಲ್ಲೂ ಪ್ರಕಟಿಸಿದ್ದಾರೆ. ಸ್ವತಃ ಕುವೆಂಪು ತಮ್ಮ ಚಿಂತನೆಯನ್ನು ೫ ಪರಿಕಲ್ಪನೆಗಳಲ್ಲಿ ಮಂಡಿಸುವುದುಂಟು. ಅವೆಂದರೆ ಮನುಜಮತ, ವಿಶ್ವಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ. ಆದರೆ ಅವು ವಿಶ್ಲೇಷಣೆಗೆ ಅಷ್ಟು ಉಪಯುಕ್ತವಲ್ಲ. ಕುವೆಂಪು ಚಿಂತನೆಯನ್ನು ಹೊಸಹೊಸ ಬಗೆಗಳಲ್ಲಿ ಗುರುತಿಸುತ್ತ ವಿಶ್ಲೇಷಣೆಯ ಹೊಸ ವಿಧಾನಗಳನ್ನು ಶೋಧಿಸಬೇಕು. ಸದ್ಯಕ್ಕೆ ಪ್ರತಿರೋಧ, ಸಂವಾದ, ಅವತರಣ, ರೂಪಾಂತರ, ಆವಾಹನೆ ಎಂಬ ಪರಿಕಲ್ಪನೆಗಳ ಮೂಲಕ ಅವರ ಚಿಂತನೆಯನ್ನು ವಿಶ್ಲೇಷಿಸಲು ಯತ್ನಿಸಬಹುದು.

**ಪ್ರತಿರೋಧದ ಗುಣ**

ಕನ್ನಡದ ಚಿಂತಕರಲ್ಲಿ ಕೆಲವು ಗುಣಗಳಿವೆ. ಅವುಗಳಲ್ಲಿ ಒಂದು ತಳಮಳ. ಮೇಲುನೋಟಕ್ಕೆ ಕುವೆಂಪು ಅವರಲ್ಲಿ ತಳಮಳವಿಲ್ಲ. ಬದಲಿಗೆ ಕರೆಗೊಡುವ ಗುಣವಿದೆ. ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ, ವಿಚಾರಕ್ರಾಂತಿಗೆ ಆಹ್ವಾನ, ಆಗು ನೀ ಅನಿಕೇತನ ಇವೆಲ್ಲವೂ ಸಂದೇಶ ವಾದಿ ವಾಕ್ಯಗಳು. ಆದರೂ ನಮ್ಮ ಸಮಾಜದ ವಾಸ್ತವ ವನ್ನು ಕುರಿತ ಅವರ ಗ್ರಹಿಕೆಯ ನೋವು, ಸಿಟ್ಟು, ತಳಮಳಗಳಿಂದ ಕೂಡಿದೆ. ತಳಮಳ, ಸಿಟ್ಟು, ಕನಸು ಗಳು ಏಕೀಭವಿಸುವುದರಿಂದ ಅವರ ಚಿಂತನೆಗೆ ಸಮಕಾಲೀನತೆಯ ತೀವ್ರತೆ ಒದಗುತ್ತದೆ; ಸಾಮಾಜಿಕ ರಾಜಕೀಯ ತತ್ವಶಾಸ್ತ್ರೀಯ ಧಾರ್ಮಿಕ ಸಾಹಿತ್ಯಕ ಆಯಾಮ ಒದಗುತ್ತದೆ. ಈ ವಿಷಯದಲ್ಲಿ ನೆನಪಾಗುವ ಇನ್ನೊಂದು ಹೆಸರು ಬಸವಣ್ಣನದು. ಬಸವಣ್ಣನದೂ ಮಹಾ ತಳಮಳದ ಜೀವ. ಲೋಹಿಯಾ ಅವರದು ಕೂಡ. ಬಹುಶಃ ತಳಮಳವು ನಮ್ಮೆಲ್ಲ ಸಾಂಸ್ಕೃತಿಕ ನಾಯಕರ ಲಕ್ಷಣವೆನಿಸುತ್ತದೆ. ತಳಮಳವು ಪ್ರತಿರೋಧಕ್ಕೆ ಕಾರಣವಾಗುವುದು. 'ಆತ್ಮಶ್ರೀ ಗಾಗಿ ನಿರಂಕುಶ ಮತಿಗಳಾಗಿ', 'ವಿಚಾರಕ್ರಾಂತಿಗೆ ಆಹ್ವಾನ' ಇತ್ಯಾದಿ ಎಲ್ಲ ಪ್ರಸಿದ್ಧ ಲೇಖನಗಳಲ್ಲಿ ಈ ಪ್ರತಿರೋಧದ ದನಿಯಿದೆ. ಈ ಪ್ರತಿರೋಧಕ್ಕೆ ಎರಡು ಮುಖಗಳಿವೆ. ಮೊದಲನೆಯದು, ವ್ಯಕ್ತಿಯು ತನ್ನ ವಿಶಿಷ್ಟತೆಯನ್ನು ಸಾಬೀತು ಮಾಡುವ ಮುಖ, ತನ್ನ ನಾಗರಿಕ ಹಕ್ಕನ್ನು ಸ್ಥಾಪಿಸುವ ಮುಖ. ಉದಾಹರಣೆಗೆ ವಿದ್ಯೆ ಕಲಿಯುವ ಹಕ್ಕನ್ನು ಸ್ಥಾಪಿಸುವುದು. ಶೂದ್ರತಪಸ್ವಿಯ ನಾಯಕ ಇಂತಹವನು. ಇದು ಕೊಂಚ ವ್ಯಕ್ತಿವಾದಿ ಮುಖ. ಎರಡನೆಯದು, ತಾನು ಬೆಳೆಯುವುದು ಮಾತ್ರವಲ್ಲ, ತನ್ನ ಪರಿಸರವನ್ನು ಬದಲಿಸುವುದು. ಇದು ಸಮುದಾಯವಾದಿ ಮುಖ. ಪ್ರತಿರೋಧದ ಈ ಎರಡೂ ಮುಖಗಳು ಬೇರೆಬೇರೆ ಯಲ್ಲ. ಒಂದರೊಳಗೊಂದು ಇವೆ. 'ಕಾನೂರು ಹೆಗ್ಗಡಿತಿ'ಯ ಹೂವಯ್ಯ ಇವೆರಡೂ ಮುಖಗಳ ಸಂಕೇತ.

> ಕುವೆಂಪು ಚಿಂತನೆಯಲ್ಲಿ ಬಹಳ ಮುಖ್ಯ ಲಕ್ಷಣ ಎಂದರೆ ಒಂದು ವಸ್ತು ಅಥವಾ ವ್ಯಕ್ತಿಯು ಚಲನೆಗೆ ಒಳಪಡುವುದು. ಕಾಯುವಿಕೆ ಮಾಗುವಿಕೆ ಸಾಧನೆಯಿಂದ ಬದಲಾಗುವುದು. ರೂಪಾಂತರವಾಗುವುದು ಒಂದು ಕನಸು.

ಭಾರತದಲ್ಲಿ ಆಧುನಿಕತೆಯನ್ನು ಮೆಚ್ಚುವ, ಮತ ಧರ್ಮಗಳ ಹಿಡಿತವನ್ನು ನಿರಾಕರಿಸುವ, ಎಲ್ಲ ಚಿಂತಕರು ಈ ಇಳಿಮುಖದ ಪರಿಕಲ್ಪನೆಯನ್ನು ರೂಪಿಸಿದ್ದಾರೆ. ಉರ್ದು ಕವಿ ಇಕ್ಬಾಲರು ಅವರಲ್ಲಿ ಒಬ್ಬರು. ಇಕ್ಬಾಲ್ ಕುವೆಂಪು ಜತೆ ಆಶ್ಚರ್ಯಕರ ಸಾಮ್ಯವನ್ನು ಹೊಂದಿದ್ದಾರೆ. ಇಬ್ಬರೂ ರಾಷ್ಟ್ರೀಯವಾದಿಗಳು. ನಾಡಗೀತೆಗಳನ್ನು (ಸಾರೆ ಜಹಾಂಸೆ ಅಚ್ಛಾ / ಜಯಭಾರತ ಜನನಿಯ ತನುಜಾತೆ ) ಬರೆದವರು. ಇಬ್ಬರೂ ಆಧುನಿಕತೆ ಆರಾಧಕರು. ಇಬ್ಬರೂ ತಂತಮ್ಮ ಧರ್ಮಗಳಲ್ಲಿ ಸುಧಾರಣೆ ಬಯಸಿದವರು. ಇಬ್ಬರೂ ನಿರಂಕುಶಮತಿ ಪರಿಕಲ್ಪನೆ ಮಂಡಿಸಿದವರು. ಇಕ್ಬಾಲರ 'ಖುದಿ'ಕಲ್ಪನೆಯು ನಿರಂಕುಶಮತಿಯ ಇನ್ನೊಂದು ರೂಪವಾಗಿದೆ. ಅವರ ಕತೆಯೊಂದರ ಪ್ರಸಿದ್ಧ ಸಾಲುಗಳಿವು : ''ಖುದಿಕೋ ಕರ್ ಬುಲಂದ್ ಇತನಾ, ಕಿ ಖುದಾ ಖುದ್ ಪೂಛೆ ಅಪನೆ ಬಂದೇಸೆ ಕೀ ಬತಾ ತೇರಿ ರಜಾ ಕ್ಯಾ ಹೈ!'' (ನಿನ್ನ ಸಂಕಲ್ಪಶಕ್ತಿಯನ್ನು ದೃಢಗೊಳಿಸು. ವಿಧಿ ಬರೆಹ ಬರೆಯುವ ದೈವವೇ ಬಂದು ಏನೆಂದು ಬರೆಯಲಿ ಎಂದು ನಿನ್ನನ್ನೆ ಕೇಳುವಂತೆ). ಇಲ್ಲಿನ ಅಹಂ, ಅದ್ವೈತ ತತ್ವದ ಅಹಂ ಬ್ರಹ್ಮಾಸ್ಮಿಯ ಅಹಂ ಪ್ರಜಾಪ್ರಭುತ್ವದಲ್ಲಿ ಇರುವ ವ್ಯಕ್ತಿಷ್ಟವಾದದ ಹಕ್ಕು ಕೂಡ.

ಪ್ರಜಾಪ್ರಭುತ್ವದ ಮಾತು ಯಾಕೆಂದರೆ ವ್ಯಕ್ತಿಗೆ ಸ್ವಯಂನಿರ್ಣಯದ ಹಕ್ಕನ್ನು ಕುವೆಂಪು ತಮ್ಮ ಓದುಗರಲ್ಲಿಯೂ ಇರಬೇಕೆಂದು ಬಯಸುತ್ತಾರೆ. ಅವರ ಪ್ರಸಿದ್ಧ ಭಾಷಣಗಳ ಮೊದಲಿಗೆ ಬರುವ ಸೂಚನೆಗಳನ್ನು ಗಮನಿಸಬೇಕು: ''ಯಾರೊಬ್ಬರೂ ನನ್ನ ಮಾತುಗಳನ್ನು ಪಚನಮಾಡದೆ ನುಂಗದಿರಲಿ; ಮತಿಯ ಒರೆಗಲ್ಲಿಗೆ ಹಚ್ಚದೆ ಸ್ವೀಕರಿಸದಿರಲಿ; ಧೀರವಾಗಿ ವಿಮರ್ಶಿಸದೆ ಒಪ್ಪದಿರಲಿ'' ('ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ'). ವ್ಯಕ್ತಿಯು ಚಿಂತಿಸುವ ವಿಮರ್ಶಿಸುವ ಸ್ವಂತ ನಿರ್ಧರಿಸುವ ಹಕ್ಕನ್ನು ಉಪನಿಷತ್ತುಗಳ ಧೀಚಿಂತನೆಯಿಂದ ಪಡೆದಿರ ಬಹುದು. ಆದರೆ ಶೂದ್ರಜಾತಿಯಿಂದ ಬಂದ ಅವರಿಗೆ ಮೇಲುಜಾತಿಯ ಜನರೇ ತುಂಬಿರುವ ಸಾಂಸ್ಕೃತಿಕ ರಾಜಕಾರಣದಲ್ಲಿ ಧೀಮಂತವಾಗಿ ಬದುಕಲು ಈ ಅಹಂಕಾರ ಸಹಾಯಕವಾಯಿತು. ಇದೇ ಅಹಂಕಾರವು ಸಂಕುಚಿತ ಸಾಮಾಜಿಕ ಚಿಂತನೆಗಳನ್ನು ನಿರಾಕರಿಸಲು ಕಾರಣವಾಯಿತು. ಆದರೆ ಇದುವೇ ಜನಸಮುದಾಯಗಳ ಆಚರಣಲೋಕಗಳನ್ನು ಅವು ಚೈತನ್ಯಹೀನವಾದವು ಎಂದು ನಿರಾಕರಿಸಲು ಕೂಡ ಕಾರಣವಾಯಿತು.

**ಸಂವಾದದ ಗುಣ**

ಕುವೆಂಪು ಚಿಂತನೆಯು ಕೇವಲ ನಿರಾಕರಣೆ ಮತ್ತು ಪ್ರತಿರೋಧದ್ದಲ್ಲ. ಹಾಗಾಗಿದ್ದರೆ ಅವರು ಇನ್ನೊಬ್ಬ ಶ್ರೀರಂಗರೊ ವಸುದೇವಭೂಪಾಲಂ ಅವರೊ ಆಗಿ ಬಿಡುತ್ತಿದ್ದರು. ಅವರೊಬ್ಬ ಕವಿಯೂ ಸಮಾಜ ಸುಧಾರಣೆಯಲ್ಲಿ ನಂಬಿಕೆ ಇಟ್ಟವರೂ ಜನತೆಯ ಅನುಭವ ಲೋಕದ ಮೂಲಕ ಕಥೆಯನ್ನು ಕಟ್ಟುವವರೂ ಆಗಿದ್ದರು. ಇದರಿಂದ ನಿರಾಕರಣೆಯೇ ಮುಖ್ಯಗುಣವಾದ ವೈಚಾರಿಕತೆಯನ್ನು ಏಕಮುಖವಾಗಿ ಬಳಸಲಿಲ್ಲ. ಅದರ ಜತೆಗೆ ಪರಂಪರೆಯಲ್ಲಿ ಸಂಧಾನ ಗೈದು ಸ್ವೀಕರಿಸುವ ಗುಣವನ್ನೂ ಎಚ್ಚರಿಕೆಯಿಂದ ಜೋಡಿಸಿಕೊಂಡರು. ಈ ಸಂವಾದದ ಗುಣವು ಸೃಜನ ಶೀಲ ಲೇಖಕರಾಗಿ ಅವರಿಗೆ ಒಂದು ಒಳ ಅಗತ್ಯವೂ ಆಗಿತ್ತು. ಬರಹಗಾರ ಮತ್ತು ಕಲಾವಿದರ ಒಕ್ಕೂಟದ ಉದ್ಘಾಟನ ಭಾಷಣದಲ್ಲಿ ಅವರು ಸ್ಪಷ್ಟವಾಗಿ ಹೇಳಿದರು: ''ಎಲ್ಲೆಲ್ಲಿ ಒಳ್ಳೆಯ ಕೆಲಸ ನಡೆಯುತ್ತಾ ಇದೆಯೋ ಯಾವ ಪಕ್ಷದಿಂದ ನಡೆಯುತ್ತಾ ಇದೆಯೋ ಅದಕ್ಕೆಲ್ಲ ನಿಮ್ಮ ಬೆಂಬಲ ಇರಬೇಕು. ಏಕೆಂದರೆ ನೀವು ಎಲ್ಲವನ್ನೂ ರೋಧಿಸುವ ಮತ್ತೊಂದು ವಿರೋಧ ಪಕ್ಷವಾಗಿ ಉಳಿಯಬಾರದು. ಗೆಟ್ ಅವೆ ಫ್ರಂ ದಿಸ್ ನೆಗಟಿವ್ ಆಟಿಟ್ಯೂಡ್, ಯಾವಾಗಲೂ ಸೃಜನಕಾರ್ಯ ಸೃಷ್ಟಿಕಾರ್ಯ ವಿಧ್ಯುಕ್ತವಾಗಿ ನಡೆಯಲಿ, ಬರಿಯ ನಿಷೇಧ ಅನಾವಶ್ಯಕ'': ಪರಂಪರೆಯ ರಿ-ಸೈಕಲ್ ಆಗುವ ಬಗ್ಗೆ ಅವರಿಗೆ ಬಹಳ ನಂಬಿಕೆಯಿತ್ತು. ಅವರು ಕೊಟ್ಟ ಚಿನ್ನದೊಡವೆಯನ್ನು ಮುರಿಸಿ ಹೊಸ ಒಡವೆ ಮಾಡಿಕೊಳ್ಳಬೇಕು ಎಂಬ ರೂಪಕವು ಈ ಸಂವಾದದ ಸ್ವರೂಪವನ್ನು ಅದ್ಭುತವಾಗಿ ವಿವರಿಸುತ್ತದೆ. ಇದರಿಂದ ಅವರಿಗೆ ಏಕಕಾಲದಲ್ಲಿ ಬ್ರಾಹ್ಮಣವಾದಿಯಾದ ಪುರಾಣ ವಸತಿಗಳನ್ನು ನಿರಾಕರಿಸುತ್ತಲೇ ಉಪನಿಷತ್ತುಗಳ ಜತೆ ಸಂವಾದ ಮಾಡುವ ಸಹನೆಯನ್ನು ಕೊಟ್ಟಿತು. ಇದು ಅವರ ಚಿಂತನೆಯನ್ನು ಸುಧಾರಣಾವಾದಿ ನೆಲೆಯಲ್ಲಿಯೇ ನಿಲ್ಲಿಸಿತು ಕೂಡ.

**ಅವತರಣದ ಗುಣ**

ಕುವೆಂಪು ಚಿಂತನೆಯ ಬಹಳ ದೊಡ್ಡ ಮಾನವೀಯತೆ ಮುಖವೆಂದರೆ, ಈ ಲೋಕ ದಮನಿಸಿದ ಜಗತ್ತನ್ನು, ನಿರ್ಲಕ್ಷಿಸಿದ ಸಂಗತಿಗಳನ್ನು ಪ್ರೀತಿಯಿಂದ ಕುತೂಹಲದಿಂದ ನೋಡುವುದು. ಅವರು 'ಮದುಮಗಳು' ಕಾದಂಬರಿಯ ಮೊದಲಲ್ಲಿ ಬರುವ 'ಇಲ್ಲಿ ಯಾರೂ ಮುಖ್ಯರಲ್ಲ, ಯಾವುದೂ ಅಮುಖ್ಯವಲ್ಲ' ಎಂಬುದು ಇದರ ಧ್ಯೇಯವಾಕ್ಯ ವಾಗಿದೆ. ಇದು ೨೦ನೇ ಶತಮಾನದ ಕನ್ನಡ ಸಾಹಿತ್ಯ ಹುಟ್ಟಿಸಿದ ಬಹಳದೊಡ್ಡ ಸಮಾಜವಾದಿ ಹೇಳಿಕೆ. ಲೇಖಕರು ಕೊಡುವ ಘೋಷವಾಕ್ಯಗಳ ಮೂಲಕ ಅವರ ಸಾಹಿತ್ಯವನ್ನು ನೋಡಬೇಕಿಲ್ಲ. ಆದರೆ ಕುವೆಂಪು ಅವರ ಈ ಧ್ಯೇಯವಾಕ್ಯವು ಅವರ ಸಾಹಿತ್ಯದಲ್ಲಿ ನಿಜವಾಗಿದೆ. ಇಲ್ಲದಿದ್ದರೆ ಏನಾಗುತ್ತಿಯಂತಹ ಪಾತ್ರವನ್ನು ಕಟೆಯಲು ಅವರಿಗೆ ಸಾಧ್ಯವಾಗುತ್ತಿರಲಿಲ್ಲ. 'ಗೊಬ್ಬರ' ಪದ್ಯವಾಗಲೀ 'ಯಾರೂ ಅರಿಯದ ವೀರ ಕತೆ'ಯಾಗಲಿ, ಅನಾಥ ಹುಡುಗಿ 'ನಾಗಿ'ಯ ಮೇಲಿನ ಕಥನಕವನವಾಗಲೀ ಮೂಲತಃ ತಾಯ್ತನದಿಂದ ಹುಟ್ಟಿದ ಕೃತಿಗಳು. ಇದನ್ನೇ ಡಿ.ಆರ್. ನಾಗರಾಜ 'ಕುವೆಂಪು ಹಾದಿಬದಿಯ ಹೂವನ್ನು ಬಾಗಿ ಎತ್ತಿಕೊಳ್ಳುತ್ತಾರೆ' ಎಂಬ ರೂಪಕದಲ್ಲಿ ವಿಶ್ಲೇಷಿಸುತ್ತಾರೆ. ಈ ಗುಣವು ಬೇರೆಬೇರೆ ಪ್ರಕಾರಗಳಲ್ಲಿ ಬೇರೆಬೇರೆ ರೂಪಗಳಲ್ಲಿ ಪ್ರಕಟವಾಗುತ್ತದೆ. ಕುವೆಂಪು ವೈಚಾರಿಕ ಲೇಖನಗಳಲ್ಲಿ ಪ್ರತಿರೋಧದ ಸೆಡವಿನ ಪ್ರಶ್ನಿಸುವ ಗುಣ ಹೆಚ್ಚು. ಕತೆ ಕಾದಂಬರಿ ಲೋಕಗಳಲ್ಲಿ ಸಂವಾದದ ಅವತರಣದ ಬಾಗುವ ಗುಣ ಹೆಚ್ಚು. ಕತೆ ಕಾದಂಬರಿಗಳನ್ನು ಕೇವಲ ವಿಚಾರಗಳಿಂದ ಕಟ್ಟಲು ಸಾಧ್ಯವಿಲ್ಲವಷ್ಟೆ. ಮೂರ್ತ ಸಾಮಾಜಿಕ ಅನುಭವದಿಂದ ಕಟ್ಟಬೇಕಾಗುತ್ತದೆ. ಕುವೆಂಪು ತಬ್ಬಿಕೊಳ್ಳುವ ಈ ಸಾಮಾಜಿಕ ಅನುಭವಲೋಕವು ಗುತ್ತಿ, ಐತ, ಪೀಂಚಲು, ಕರಿಸಿದ್ದ, ಗಿಡ್ಡಿಯರದು, ಮಕ್ಕಳದು. ಕುವೆಂಪು ಕಥನಸಾಹಿತ್ಯದಲ್ಲಿ ಅಪಾರವಾದ ಮಕ್ಕಳು ಬರುತ್ತಾರೆ. ಅವುಗಳ ಮೂಲಕ,

ಜೀತದಾಳುಗಳ ಮೂಲಕ. ದೊಡ್ಡವರ ಜಗತ್ತನ್ನು ನೋಡುವ ಅದನ್ನು ಮೌಲ್ಯ ಮಾಪನ ಮಾಡುವ ದೃಷ್ಟಿ ಕೋನವು ಇಳಿವಟ್ಟದೆ. ಇಷ್ಟೇಕೆ ಪ್ರಾಣಿಗಳ ಮೂಲಕ ಕೂಡ ಜಗತ್ತನ್ನು ನೋಡುವ, ನೋಟಗಳು ಇಲ್ಲಿ ಸಿಗುತ್ತವೆ. ಲೋಕದ ಚೇಷ್ಟೆ ನೋಡಲು ತಾನಿರುವ ಆಗಸದಿಂದ ಇಳಿದು ಬರಬಲ್ಲ ದೇವತೆ ಕುವೆಂಪು.

**ರೂಪಾಂತರದ ಗುಣ**

ಕುವೆಂಪು ಚಿಂತನೆಯಲ್ಲಿ ಬಹಳ ಮುಖ್ಯ ಲಕ್ಷಣ ಎಂದರೆ ಒಂದು ವಸ್ತು ಅಥವಾ ವ್ಯಕ್ತಿಯು ಚಲನೆಗೆ ಒಳ ಪಡುವುದು. ಕಾಯುವಿಕೆ ಮಾಗುವಿಕೆ ಸಾಧನೆಯಿಂದ ಬದಲಾಗುವುದು. ರೂಪಾಂತರವಾಗುವುದು ಒಂದು ಕನಸು. ಅದಕ್ಕಾಗಿ ಪ್ರಯತ್ನ ಮಾಡಬೇಕಾಗುತ್ತದೆ. ಒಂದು ಹುಳು ಕೂಡ ದೇವರಲ್ಲಿ ಹೋಗಿ ಸೇರುತ್ತದೆ ಎಂಬ ವಿವೇಕಾನಂದರ ಮಾತನ್ನು ಅವರು ತಮ್ಮೊಂದು ಲೇಖನದಲ್ಲಿ ಉಲ್ಲೇಖಿಸುತ್ತಾರೆ. ಜಾತಿಪದ್ಧತಿ ಅಥವಾ ಮಾಧ್ವರ ನಿತ್ಯನಾರಕಿ ಕಲ್ಪನೆ ಮೇಲೆ ಆಕ್ರೋಶ ಮಾಡಲು ಅವರು ನಂಬಿದ ಪರಿವರ್ತನೆಯ ಈ ತತ್ವವೇ ಪ್ರೇರಣೆ. ಜಾತಿಯು ಮನುಷ್ಯರ ಚಲನಶೀಲತೆಯನ್ನು ಬಂಧಿಸುತ್ತದೆ. ಎಂತಲೇ ಪರಿವರ್ತನೆಯ ಸಿದ್ಧಾಂತವನ್ನು ಕುವೆಂಪು ಚಿಂತನೆ ದೊಡ್ಡಮೌಲ್ಯವಾಗಿ ಹಠದಿಂದ ಪ್ರತಿಪಾದಿಸಿತು. ಶೂದ್ರತಪಸ್ವಿ ಇಂತಹ ಹಠದ ಪ್ರತೀಕ. ಅವನು ತಪಸ್ವಿಯಾಗಿ ರೂಪಾಂತರವಾಗುತ್ತಾನೆ. ಇಲ್ಲಿನ ರಾಮನೂ, ಶೂದ್ರತಪಸ್ವಿಯ ಮೇಲೆ ಅನ್ಯಾಯದ ಆರೋಪ ಹೊರಿಸಿದ ಬ್ರಾಹ್ಮಣನೂ ಬದಲಾಗುತ್ತಾರೆ. 'ಶಿಲಾತಪಸ್ವಿ' ಕತೆಯಲ್ಲಿ ಜಡ ಶಿಲೆಯೊಂದು ಪರಿವರ್ತನೆಗೆ ಹಂಬಲಿಸುತ್ತದೆ. 'ರಾಮಾಯಣ ದರ್ಶನಂ'ನಲ್ಲಿ ರಾವಣ ಬದಲಾಗುತ್ತಾನೆ. ಕ್ರೌರ್ಯ ಹಠಮಾರಿತನಗಳ ಸಂಕೇತವಾಗಿದ್ದ ಚಂದ್ರಯ್ಯಗೌಡರು ಬದಲಾಗುತ್ತಾರೆ. ಕೆಳಜಾತಿಯ ಕೂಲಿಕಾರರಾದ ಐತ ಪೀಂಚಲು ಅವರನ್ನು ಶಿವ ಶಿವಾಣಿಯರಾಗಿ ಕಾಣುವುದು ಇಂತಹ ರೂಪಾಂತರ ತತ್ವದಿಂದಲೇ. ರೂಪಾಂತರವು ಕುವೆಂಪು ಚಿಂತನೆಯಲ್ಲಿ ಪ್ರಮುಖ ದಾರ್ಶನಿಕ ಸತ್ಯ. ಕುವೆಂಪು ಸಾಹಿತ್ಯದಲ್ಲಿ ಮಕ್ಕಳಪಾತ್ರಗಳು ಯಾಕಷ್ಟು ಬರುತ್ತವೆ ಎಂದರೆ, ಅವು ದೊಡ್ಡವರಂತೆ ಪೂರ್ವ ಗ್ರಹಿಕೆಗಳಿಗೆ ಫಿಕ್ಸ್ ಆಗಿರುವುದಿಲ್ಲ. ಅವರಲ್ಲಿ ಪರಿವರ್ತನೆಯ ಸಾಧ್ಯತೆ ಹೆಚ್ಚು ಎಂಬ ನಂಬಿಕೆ. ಬೊಮ್ಮನಹಳ್ಳಿಯ ಕಿಂದರಜೋಗಿ ಪದ್ಯದ ಉದ್ದೇಶ, ದೊಡ್ಡವರಾಗುವ ಮೂಲಕ ಈ ಪರಿವರ್ತನೆಯ ಸಾಧ್ಯತೆಯನ್ನು ಕಳೆದುಕೊಂಡವರಲ್ಲಿ ಸುಪ್ತವಾಗಿರುವ ಮಗುತನವನ್ನು ಜಾಗೃತಗೊಳಿಸುವುದು ಎಂಬ ಹಂಬಲವನ್ನು ಈ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬೇಕು.

ಕುವೆಂಪು ಬಸವಣ್ಣನವರ ಬಗ್ಗೆ ಒಂದು ಲೇಖನ ಒಂದು ಪದ್ಯ ಬರೆದಿದ್ದಾರೆ. ಆದರೂ ಬಸವಣ್ಣನ ಪ್ರಭಾವ ಅವರ ಚಿಂತನೆಯಲ್ಲಿ ಕಡಿಮೆ. ಮಾನವರ ಪರಿವರ್ತನೆಯ ಪರಿಕಲ್ಪನೆಯ ವಿಷಯದಲ್ಲಿ ಮಾತ್ರ ಅವರು ಬಸವಣ್ಣನ ಚಿಂತನೆಯನ್ನು ಸೂಕ್ಷ್ಮನೆಲೆಯಲ್ಲಿ ಮುಂದುವರೆಸುತ್ತಾರೆ. 'ಉಳ್ಳವರು ಶಿವಾಲಯವ ಮಾಡುವರು' ವಚನವು ಗುಡಿಯನ್ನು ನಿರಾಕರಣೆ ಮಾಡುತ್ತದೆ. ಕುವೆಂಪು ಕೂಡ ಗುಡಿ ಸಂಸ್ಕೃತಿಯನ್ನು ನಿರಾಕರಿಸುವವರು. ಎಲ್ಲ ಸಮಾಜ ಸುಧಾರಕರ ತಂತ್ರಗಾರಿಕೆಯ ಭಾಗವದು. ಬಸವಣ್ಣ ದೇವರು ಗುಡಿಯಲ್ಲಿಲ್ಲ, ದೇಹದಲ್ಲಿದೆ ಎಂದರೆ, ಕುವೆಂಪು ದೇವರನ್ನು ನಿಸರ್ಗ ಸೌಂದರ್ಯದಲ್ಲಿ ಇದೆ ಎನ್ನುತ್ತಾರೆ. ನಿಸರ್ಗವೇ ದೈವವಾಗಿ ರೂಪಾಂತರ ಪಡೆಯುತ್ತದೆ. 'ದೇವರು ರುಜುಮಾಡಿದನು' ಪದ್ಯವನ್ನು ಅಥವಾ 'ಹೂವುದೇವರು' ಪದ್ಯವನ್ನು ಈ ಹಿನ್ನೆಲೆಯಲ್ಲಿ ನೋಡಬಹುದು. ಕುವೆಂಪು ಚಿಂತನೆಯಲ್ಲಿ ಪ್ರಯಾಣ ಅಥವಾ ಯಾತ್ರೆಯ ಪರಿಭಾಷೆ ಮತ್ತೆಮತ್ತೆ ಬರುತ್ತದೆ. ಸಹೃದಯನು ಕವಿಯಲ್ಲವಾದರೂ ತನ್ನ ಅನುಭೂತಿಯಿಂದ ಕವಿಯ ಎತ್ತರಕ್ಕೆ ಏರಬಹುದು ಎಂಬ ಚಿಂತನೆ ಬರುತ್ತದೆ. ಇವೆಲ್ಲವೂ ಪರಿವರ್ತನೆಯನ್ನು ನಂಬುವ ದರ್ಶನದ ರೂಪಕಗಳು. 'ಮದುಮಗಳು' ಕೃತಿಯು ಮೊದಲಲ್ಲಿ ಬರುವ ಸೂಚನಾ ಹೇಳಿಕೆಯಲ್ಲಿ "ನೀರೆಲ್ಲವೂ ತೀರ್ಥ" ಎಂಬ ಚಿತ್ರವನ್ನು ಗಮನಿಸಿ. ನೀರು ಸಾಧಾರಣ ವಸ್ತು. ತೀರ್ಥವು ಪವಿತ್ರವಾದದು. ಸಾಧಾರಣವಾದುದು ಪವಿತ್ರತೆಯ ಉನ್ನತಿಗೇರಲು ಸಾಧ್ಯವಿದೆ ಎಂದು ಈ ರೂಪಕ ಹೇಳುತ್ತದೆ.

**ಆವಾಹನೆಯ ಗುಣ**

ಕುವೆಂಪು ಅವರ ಕಥನವನ್ನು ವಾಸ್ತವವಾದಿ ಕಥನಕ್ರಮ ಎನ್ನಲಾಗುತ್ತದೆ. ನಮ್ಮ ಸಮಾಜದ ಜೀವಂತ ಚಿತ್ರವನ್ನು ಕೊಟ್ಟವರು ಎಂಬ ಅರ್ಥದಲ್ಲಿ. ಆದರೆ ಈ ವಾಸ್ತವವಾದ ಕಥನಕ್ರಮದೊಳಗೆ ಅವರು ತಾವು ಹಂಬಲಿಸುವ ಸಮಾಜದ ಚಿತ್ರದ ಸ್ಕೆಚ್ಚನ್ನೂ ಮೂಡಿಸುತ್ತಿರುತ್ತಾರೆ. ಈ ಅರ್ಥದಲ್ಲಿ ನಮ್ಮೆಲ್ಲ ದೊಡ್ಡ ಲೇಖಕರು ಇರುವ ಸಮಾಜದ ಚಿತ್ರಣಕಾರರು ಮಾತ್ರವಲ್ಲ, ಹುಟ್ಟಲಿರುವ ಸಮಾಜದ ಆವಾಹನಕಾರರೂ ಕೂಡ. ಈ ಅರ್ಥದಲ್ಲಿ ಕುವೆಂಪು ಆವಾಹನೆ ಮಾಡಿದ ಆದರ್ಶ ಸಮಾಜವು ಅವರ ಚಿಂತನೆಯ

ಸಾರರೂಪಿಯಾದ ವಿಶ್ವಮಾನವ ಕಲ್ಪನೆಯಲ್ಲಿದೆ ಎಂದು ಹೇಳಬಹುದು. ವಿಶ್ವಮಾನವ ಪರಿಕಲ್ಪನೆಯು ಒಂದು ಆದರ್ಶ ಸಮಾಜದ ಪರಿಕಲ್ಪನೆ. ಆದರ್ಶಸಮಾಜದ ಆವಾಹನೆಯನ್ನು ಶಂಬಾ ಮಾಡುತ್ತಾರೆ. ತೇಜಸ್ವಿ ಮಾಡುತ್ತಾರೆ. ಕುವೆಂಪು ಕೂಡ ಮಾಡುತ್ತಾರೆ. ಉದಾಹರಣೆಗೆ, ಅವರ ಕಾದಂಬರಿಗಳಲ್ಲಿ ಕನ್ನಡ ವಿಮರ್ಶೆ ಈಗ ಕಾಣುತ್ತಿರುವ ಜೀವಕೇಂದ್ರಿತ ಪರಿಸರ ಚಿಂತನೆ. ಅಂದರೆ ಈ ಭೂಮಿಯ ಮೇಲೆ ಒಂದು ಕೀಟಕ್ಕೂ ಬದುಕುವ ಹಕ್ಕಿದೆ ಎಂದು ವಾದಿಸುವ ಜೀವಕೇಂದ್ರಿತ ಲೋಕವನ್ನು ಕುವೆಂಪು ಕಾದಂಬರಿಗಳು ಕಟ್ಟಿಕೊಡುತ್ತವೆ ಎಂದು ಅದು ಹೇಳುತ್ತಿದೆ. ಇದು ಏನನ್ನು ಸೂಚಿಸುತ್ತದೆ? ಹೊಸ ಸಮಾಜದ ಹೊಸ ಲೋಕದ ಆವಾಹನೆಯಿರುವ ಲೇಖಕರು ಮಾತ್ರ ಕಾಣಿಸುವ ದರ್ಶನವನ್ನು ತಾನೆ? ಆದರೂ ವಿಶ್ವ ಮಾನವ ಕಲ್ಪನೆಯನ್ನು ಕುವೆಂಪು ಅವರ ಹಾಗೆ ಹೇಳಿದರೆ ಅವರ ದಾರ್ಶನಿಕತೆಯ ವಿವಿಧ ಆಯಾಮ ಗಳನ್ನು ಕುಬ್ಜಗೊಳಿಸುವ ಸಾಧ್ಯತೆಯಿದೆ.

**ದಾರ್ಶನಿಕ ಬರಹಗಾರ**

ಕುವೆಂಪು ಅವರಿಗೆ ಪ್ರಿಯವಾದ ಪದಗಳಲ್ಲಿ ಒಂದು 'ವಿಚಾರಕ್ರಾಂತಿ'. ಅದರೂ ವಿಚಾರ ಎನ್ನುವುದು ಕುವೆಂಪು ಚಿಂತನೆ ಮಟ್ಟಿಗೆ ಕೊಂಚ ಪರಿಮಿತಿಯ ಕಲ್ಪನೆಯಾಗಿ ತೋರುತ್ತಿದೆ. ಅವರ ಚಿಂತನೆಯನ್ನು ವಿಚಾರ ಎನ್ನುವುದಕ್ಕಿಂತ ದರ್ಶನ ಎನ್ನುವುದು ಹೆಚ್ಚು ಉಚಿತ. ಸ್ವತಃ ಅವರು ತಮ್ಮನ್ನು ತತ್ವಶಾಸ್ತ್ರದ ಹುಡುಕಾಟಗಾರ ಎಂದೆ ಭಾವಿಸಿದ್ದರು. ಲೋಕವನ್ನು ಕುರಿತ ಚಿಂತನೆಯನ್ನು ಅವರು ತಮ್ಮ ಬರೆಹದಲ್ಲಿ ಹಾಗೂ ಬದುಕಿನಲ್ಲಿ ಹುಡುಕುತ್ತ, ಬೆಳೆಸುತ್ತ ಬಂದರು. ಕುವೆಂಪು ಅವರನ್ನು ಹೋಲುವ ಜಗತ್ತಿನ ಲೇಖಕ ನೆಂದರೆ ಟಾಲ್‌ಸ್ಟಾಯ್. ಇಬ್ಬರೂ ದಾರ್ಶನಿಕರು. ಕಾರಂತ, ಕುವೆಂಪು, ತೇಜಸ್ವಿ, ಅನಂತಮೂರ್ತಿ, ಅಡಿಗ, ಲಂಕೇಶ್ ಇವರನ್ನು ನಮ್ಮ ದಾರ್ಶನಿಕ ಬರೆಹಗಾರರು ಎಂದರೆ, ಒಂದು ದರ್ಶನವನ್ನು ತರ್ಕ ಬದ್ಧವಾಗಿ ಥಿಸೀಸ್ ಆಗಿ ಮಂಡಿಸುವವರು ಎಂದಲ್ಲ, ಈ ಲೇಖಕರು ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ತಾವು ನಂಬಿದ ದರ್ಶನವನ್ನು ಪರಿಶೀಲಿಸುವ, ಬೆಳೆಸುವ ಸಂಕೀರ್ಣವಾದ ದಾರಿಯ ಪಥಿಕರು. ಕುವೆಂಪು ಅವರ ಬಹುಪ್ರಕಾರದಲ್ಲಿ ಬರೆಯುವಿಕೆಯನ್ನು ಈ ಹುಡುಕಾಟದ ವಿವಿಧ ವಿಧಾನಗಳಾಗಿಯೂ ನೋಡಬೇಕಾಗಿದೆ. ಹೀಗಾಗಿ ಅವರ ದಾರ್ಶನಿಕತೆ ಇಡೀ ಸಾಹಿತ್ಯದಲ್ಲಿ ವ್ಯಕ್ತವಾಗುತ್ತದೆ. ಕುವೆಂಪು ದರ್ಶನವು ಮೊದಲ ಕತೆಯಲ್ಲಿ ಶುರುವಾಗಿ ಕೊನೆಯ ತನಕ ಇಡೀ ಸಾಹಿತ್ಯದಲ್ಲಿ ಬದಲಾಗುತ್ತ, ಬೆಳೆಯುತ್ತ ಬಂದಿದೆ. ವಿಶ್ವಮಾನವ ಪರಿಕಲ್ಪನೆಯು ಅದರ ಫಲ. ಅವರ ಕೊನೆಯ ಕೃತಿಯ ಹೆಸರು 'ಕೊನೆಯ ತೆನೆ ಮತ್ತು ವಿಶ್ವ ಮಾನವ ಸಂದೇಶ'! ಕೊನೆಯ ತೆನೆ ಬಿಟ್ಟಬಳಿಕ ಅದೇ ದಂಟು ಮತ್ತೊಂದು ತೆನೆಬಿಡುವುದಿಲ್ಲ, ಆದರೆ ತೆನೆಯ ಕಾಳುಗಳು ಹೊಸ ಬೆಳೆಯನ್ನು ಬೆಳೆಯ ತೊಡಗುತ್ತವೆ.

**ಪ್ರವಾದಿಯಲ್ಲ**

ಕುವೆಂಪು ನಮ್ಮ ಕಾಲದ ದಾರ್ಶನಿಕ ಬರೆಹಗಾರ ಎಂದು ಒಪ್ಪಿಕೊಂಡಾಗಲೂ ಅವರ ಚಿಂತನೆಗಳು ಸಮಸ್ಯಾತೀತವಾಗಿರಲಿಲ್ಲ. ಕುವೆಂಪು ಪರಂಪರೆ ಎಂದಾಗ ಉಪನಿಷತ್ತು ವೇದಗಳನ್ನು ಒಪ್ಪಿಕೊಂಡರಷ್ಟೆ, ಇದಕ್ಕೆ ವಿವೇಕಾನಂದರ ಪ್ರಭಾವ ಅಥವಾ ರಾಮಕೃಷ್ಣ ಆಶ್ರಮದ ಸಹವಾಸ ಕಾರಣವಾಗಿರಬಹುದು. ಅವರು 'ರಾಮಾಯಣ ದರ್ಶನಂ' ಬರೆದಿದ್ದನ್ನಾಗಲಿ, ವೈದಿಕ ವಾಙ್ಮಯದಲ್ಲಿ ಇರುವ ಪ್ರಗತಿಪರ ಚಿಂತನೆಗಳನ್ನು ಅವರು ಪರಿಷ್ಕರಿಸಿ ಪಡೆಯಲು ಬಯಸಿದ್ದನ್ನಾಗಲೀ ಇನ್ನೂ ಅರ್ಥಮಾಡಿಕೊಳ್ಳಬೇಕಿದೆ. ಇದೂ ವೈದಿಕ ಸನಾತನವಾದವನ್ನು ಅವರ ಸರಕಿನಿಂದಲೇ ಎದುರಿಸುವ ಯುದ್ಧತಂತ್ರವೂ ಆಗಿತ್ತು ಎಂಬುದನ್ನು ಮರೆಯುವಂತಿಲ್ಲ. ಕೋಮುವಾದವನ್ನು ಕೇವಲ ವೈಚಾರಿಕ ಪರಿಭಾಷೆಯಲ್ಲಿ ಮುಖಾಮುಖಿ ಮಾಡುವುದು ಕಷ್ಟ ಎಂಬುದನ್ನು ಈಗ ನಾವೂ ಅನುಭವಿಸುತ್ತಿದ್ದೇವೆ. ಇದರಿಂದ ಕುವೆಂಪು ಅವರ ಯುದ್ಧತಂತ್ರವು ಯಶಸ್ವಿಯಾಯಿತು. ಆದರೆ ಅದು ಜನಸಮುದಾಯಗಳ ಧರ್ಮ ಹಾಗೂ ಸಂಸ್ಕೃತಿಯಿಂದ ಬಹಳಷ್ಟನ್ನು ಪಡೆಯಲು ಬಯಸಲಿಲ್ಲ? ಕಡೆಯತನಕ ಜನಪದ ಧರ್ಮಗಳ ಬಗ್ಗೆ ಅವರಿಗೆ ತಿರಸ್ಕಾರವೇ ಇತ್ತು.




'ಗುಡಿ, ಚರ್ಚು, ಮಸಜೀದುಗಳ ಬಿಟ್ಟು ಹೊರ ಬನ್ನಿ' ಮುಂತಾದ ಸಂದೇಶವಾಕ್ಯಗಳು ಕಾವ್ಯದ ದೃಷ್ಟಿಯಿಂದ ದೊಡ್ಡವಾಗಿಲ್ಲ, ಆದರೆ ನಮ್ಮ ಸಮಾಜವೂ ಇಂತಹ ಹೇಳಿಕೆಗಳನ್ನು ಮತ್ತೆಮತ್ತೆ ರಿಸೈಕಲ್ ಯಾಕೆ ಮಾಡುತ್ತಿದೆ ಎಂಬ ಪ್ರಶ್ನೆ ಅನೇಕ ಸಲ ಎದುರಾಗುತ್ತದೆ. ಉದಾಹರಣೆಗೆ, ಚಿಕ್ಕಮಗಳೂರಿನಲ್ಲಿ ಬಾಬಾಬುಡನ್ ಗಿರಿಯ ಹೆಸರಲ್ಲಿ ಹುಟ್ಟಿರುವ ಕೋಮುವಾದದ ವಿರುದ್ಧ ಜನಾಂದೋಲನವು ಕುವೆಂಪು ಹೇಳಿಕೆಗಳನ್ನು ಬಳಸುತ್ತಿರುವುದು. ಕುವೆಂಪು ಚಿಂತನೆ ಕೇವಲ ಪ್ರವಾದಿಯ ಸಂದೇಶವಾಹಕ ಗುಣವುಳ್ಳದ್ದೇನು? ಕೊನೆಯ ಹಂತದಲ್ಲಿ ಅದಕ್ಕೆ ದಾರ್ಶನಿಕ ಜಡತೆ ಬಂದಂತೆ ತೋರುತ್ತದೆ. ವಿಶ್ವಮಾನವ ಚಿಂತನೆಯಲ್ಲಿ ಅದರ ಮಾನವತಾವಾದಿ ವೈಶಾಲ್ಯದ ಜತೆಯಲ್ಲಿಯೇ ದಾರ್ಶನಿಕ ಜಡತೆಯೂ ಇದೆ. ಆದರೆ ಕುವೆಂಪು ಚಿಂತನೆ ಇಡಿಯಾಗಿ ವಾಗ್ವಾದ ಹಾಗೂ ಚಿಂತನೆಯ ಪರಿಸರ ನಿರ್ಮಿಸುವ ಚಾರಿತ್ರಿಕ ಹೊಣೆಗಾರಿಕೆಯನ್ನು ನಿಭಾಯಿಸಿತು. ನಾಗರಿಕ ಸಮಾಜವೊಂದರಲ್ಲಿ ಚಿಂತನೆಯ ವಾತಾವರಣ ನಿರ್ಮಿಸುವುದು ಬಹಳ ಮುಖ್ಯವಾದ ರಾಜಕೀಯ ಚಟುವಟಿಕೆಯಾಗಿದೆ. ಭಾರತವು ರಾಜ್ಯ ಪದ್ಧತಿಯಾಗಿ ಡೆಮಾಕ್ರಸಿಯನ್ನು ೧೯೪೭ರ ನಂತರ ಒಪ್ಪಿಕೊಂಡಿತು. ಅದು ಈಗ ಹೇಗೆ ವಿಕೃತಗೊಂಡಿದೆ ಎಂಬುದೂ ನಮಗೆ ಗೊತ್ತಿದೆ, ದ್ವೇಷ ಹಾಗೂ ರಕ್ತಪಾತಗಳ ಮೂಲಕ ಚುನಾವಣೆ ಗೆಲ್ಲಬಹುದು ಎಂಬುದನ್ನು ಗುಜರಾತು ತೋರಿಸಿದೆ. ಇಂತಹ ಹೊತ್ತಲ್ಲಿ ಜನತೆಯ ಮಾನಸದಲ್ಲಿ ವಿಚಾರಮಾಡುವ ಜಾಗೃತ ಪ್ರಜ್ಞೆಯನ್ನು ಬಿತ್ತುವುದು, ಸಮಾಜವನ್ನು ಮಾನವೀಯ ಬದಲಾವಣೆಯತ್ತ ಹೋಗುವಂತೆ ಪ್ರೇರಿಸುವುದು, ಯಾಂತ್ರಿಕ ಡೆಮಾಕ್ರಸಿ ಯನ್ನು ಅರ್ಥಪೂರ್ಣವಾಗಿಸುವ ಕೆಲಸ. ಇಂತಹ ಪ್ರಜ್ಞಾನಿರ್ಮಿತಿಯ ಕೆಲಸವನ್ನು ಕುವೆಂಪು ಚಿಂತನೆ ತನ್ನೆಲ್ಲ ಮಿತಿಯಲ್ಲಿ ಮಾಡಿದೆ. ಈ ಕಾರಣಕ್ಕಾಗಿಯೇ ಅವರು ನಮ್ಮ ದಾರ್ಶನಿಕ ಮಾತ್ರವಲ್ಲ ರಾಜಕೀಯ ಲೇಖಕ ಹಾಗೂ ಸಾಂಸ್ಕೃತಿಕ ನಾಯಕ.

**ಇನ್ನೊಂದು ಅನುಭವ**

ಮೇಲಿನ ಮಾತಿಗೆ ನನಗಾದ ಇನ್ನೊಂದು ಅನುಭವ ಹೇಳಿಕೊಳ್ಳಬೇಕು. ಇದು ಬಾಗಲಕೋಟೆ ಜಿಲ್ಲೆಯ ಐಹೊಳೆ ಪಕ್ಕದಲ್ಲಿ ಕೆಲೂರು ಎಂಬ ಹಳ್ಳಿಯಲ್ಲಿ ಆಯಿತು. ಅಲ್ಲಿ ಮಂಟೆಸ್ವಾಮಿಯ ಗುಡಿಯಿದೆಯೆಂದು ತಿಳಿದು ನೋಡಲು ಗೆಳೆಯರೊಂದಿಗೆ ಹೋಗಿದ್ದೆ (೧೯೯೮). ಅಲ್ಲಿದ್ದ ಕೋರಿಶೆಟ್ಟರ್ ಎಂಬ ೮೦ ವರುಷದ ಹಿರಿಯರು (ಈಗ ಅವರು ತೀರಿ ಕೊಂಡಿದ್ದಾರೆ) ನಮ್ಮನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಟೀ-ಮಂಡಾಳು ಕೊಟ್ಟು ಉಪಚರಿಸಿದರು. ಅವರ ಮೇಜಿನ ಮೇಲೆ ಕುವೆಂಪು ಅವರ ಮುಖ್ಯ ಕೃತಿ ಗಳಿದ್ದವು. ಅವು ಮೊದಲ ಮುದ್ರಣಗಳು. ಓದಿಓದಿ ಜೀರ್ಣವಾಗಿದ್ದವು. ಉತ್ತರ ಕರ್ನಾಟಕದ ಈ ಮೂಲೆ ಹಳ್ಳಿಯಲ್ಲಿ ಕುವೆಂಪು ಅವರನ್ನು ನೋಡಿ ಆನಂದ ವಾಯಿತು. ''ಶೆಟ್ಟರೆ, ಕುವೆಂಪು ಬಗ್ಗೆ ಈ ಒಲವು ಹೇಗೆ ಬಂತು?'' ಎಂದು ಕೇಳಿದೆ. ಶೆಟ್ಟರು ಅಭಿಮಾನದಿಂದ ಕಣ್ಮುಚ್ಚಿ ''ನನ್ನ ಬದುಕನ್ನು ಬದಲಾಯಿಸಿದ ಲೇಖಕಾನ್ರಿ'' ಎಂದರು. ಅವರು ಬಸವಣ್ಣನ ಬಗ್ಗೆ ಈ ಮಾತು ಹೇಳಿದ್ದರೆ ವಿಶೇಷ ವೆನಿಸುತ್ತಿರಲಿಲ್ಲ. ಕುವೆಂಪು ಬಗ್ಗೆ ಹೇಳಿದ್ದು ವಿಶೇಷ ವೆನಿಸಿತು. ಚನ್ನಯ್ಯ, ವೃಷಭೇಂದ್ರ ಸ್ವಾಮಿ, ಚೆನ್ನವೀರ ಕಣವಿ, ಬಸವರಾಜ ಕಟ್ಟೀಮನಿ, ಚಂಪಾ, ಮರಿಗುದ್ದಿ, ನುಗಡೋಣಿ – ಕುವೆಂಪು ಅವರಿಂದ ಪ್ರಭಾವಿತರಾದ ಎಷ್ಟೊಂದು ಲೇಖಕರಿದ್ದಾರೆ! ಉದ್ದೇಶಪೂರ್ವಕವಾಗಿ ಹುಟ್ಟಿನಿಂದ ಲಿಂಗಾಯತ ರಾದವರನ್ನೇ ಪಟ್ಟಿಮಾಡಿದ್ದೇನೆ, ಕುವೆಂಪು ಚಿಂತನೆ ಜಾತ್ಯತೀತವಾಗಿ ಹರಡಿದೆ ಎಂದು ಸೂಚಿಸಲು. ಇದು ಲೇಖಕರ ಹೆಸರಲ್ಲಿ ಭವನಕಟ್ಟಿಸುವ, ಟ್ರಸ್ಟುಮಾಡಿ ಕೊಂಡು ಕಾರ್ಯಕ್ರಮ ಮಾಡುವ, ಬೀದಿಗೆ ಹೆಸರಿಡುವ ಚಟುವಟಿಕೆಗಳಿಗಿಂತ ಅಮೂಲ್ಯ ವಾದುದು. ಕರ್ನಾಟಕದಲ್ಲಿ ಕುವೆಂಪು ಚಿಂತನೆ ಊಹಿಸಲಾಗದ ಬಗೆಯಲ್ಲಿ ನೆಲೆಸಿದೆ. ಯಾವ ಯಾವ ಮೂಲೆಯಲ್ಲಿ ಕುವೆಂಪು ಗುಪ್ತಗಾಮಿನಿಯಾಗಿ ಎಷ್ಟು ಜನರ ಮನಸ್ಸನ್ನು ತಟ್ಟಿದ್ದಾರೊ ತಿಳಿಯದು. ಒಬ್ಬ ಲೇಖಕ ಸಾಂಸ್ಕೃತಿಕ ನಾಯಕನಾಗುವ ಪರಿ ಎಂದರೆ ಇದೇ ಇರಬೇಕು.

**ಡಾ|| ರಹಮತ್ ತರೀಕೆರೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ

# “ನಾವು ಶ್ರೇಷ್ಠರಾಗಿದ್ದೆವು, ಶ್ರೇಷ್ಠರಾಗಿದ್ದೇವೆ” ಎಂಬ ಅಬ್ಬರ ಬೇಕಿಲ್ಲ.

– ಡಾ॥ ಪದ್ಮನಾಭನ್ ಬಲರಾಮ್



ಬೆಂಗಳೂರು ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಜೀವ ವಿಜ್ಞಾನ ವಿಭಾಗದ ಪ್ರಾಧ್ಯಾಪಕರೂ ಮುಖ್ಯಸ್ಥರೂ ಆಗಿರುವ ಡಾ॥ ಪದ್ಮನಾಭನ್ ಬಲರಾಮ್ ಅವರು (ಜ. ೧೯೪೯) ಪುಣೆ, ಕಾನ್ಪುರ ಮತ್ತು ಪಿಟ್ಸ್‌ಬರ್ಗ್(ಅಮೆರಿಕಾ)ಗಳಲ್ಲಿ ವ್ಯಾಸಂಗ ಮಾಡಿ ೧೯೭೨-೭೩ರಲ್ಲಿ ಹಾರ್ವರ್ಡ್ ವಿಶ್ವವಿದ್ಯಾನಿಲಯದ ರಸಾಯನಶಾಸ್ತ್ರ ವಿಭಾಗದಲ್ಲಿ ಸಂಶೋಧಕರಾಗಿದ್ದರು. ೧೯೭೩ರಲ್ಲಿ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಅಧ್ಯಾಪಕರಾಗಿ ಸೇರಿದ ಶ್ರೀಯುತರು ಭಾರತೀಯ ವಿಜ್ಞಾನ ಅಕಾಡೆಮಿ, ತೃತೀಯ ಜಗತ್ತಿನ ವಿಜ್ಞಾನ ಅಕಾಡೆಮಿ, ಮುಂತಾದವುಗಳಲ್ಲಿ ಫೆಲೋ ಆಗಿದ್ದವರು. ೧೯೭೭ರಲ್ಲಿ ಯುವ ವಿಜ್ಞಾನಿ ಪ್ರಶಸ್ತಿ ಪಡೆದ ಡಾ॥ ಬಲರಾಮ್ ಗಳಿಸಿರುವ ಇತರ ಪ್ರಶಸ್ತಿಗಳು ಹಲವು. ನಮ್ಮ ದೇಶದ ಮೊದಲ ಪಂಕ್ತಿಯ ವಿಜ್ಞಾನಿಗಳಲ್ಲಿ ಒಬ್ಬರಾದ ಇವರು ೨೦೦೨ರಲ್ಲಿ ಪದ್ಮಶ್ರೀ ಪುರಸ್ಕಾರ ಪಡೆದಿದ್ದಾರೆ. ದೇಶ-ವಿದೇಶಗಳ ನೂರಾರು ಶ್ರೇಷ್ಠ ವಿಶ್ವವಿದ್ಯಾನಿಲಯಗಳಲ್ಲಿ ಮತ್ತು ಸಂಶೋಧನಾ ಸಂಸ್ಥೆಗಳಲ್ಲಿ ಇವರು ವಿದ್ವತ್ಪೂರ್ಣ ಉಪನ್ಯಾಸಗಳನ್ನು ನೀಡಿದ್ದು ೧೯೯೫ರಿಂದ *ಕರೆಂಟ್ ಸೈನ್ಸ್* ಎಂಬ ಮಾಸಿಕದ ಸಂಪಾದಕರಾಗಿ ಕೆಲಸ ಮಾಡುತ್ತಿದ್ದಾರೆ. ಅಂತೆಯೇ ಯೂರೋಪಿನ ರಾಸಾಯನಿಕ ಜೀವಶಾಸ್ತ್ರ ನಿಯತಕಾಲಿಕೆಯ ಸಂಪಾದಕ ಸಲಹಾ ಮಂಡಲಿಯಲ್ಲೂ ಇದ್ದಾರೆ. ರಸಾಯನಶಾಸ್ತ್ರದ ಸಂಶೋಧನಾ ಪತ್ರಿಕೆಗಳಲ್ಲೆಲ್ಲಾ ಇವರು ಛಾಪು ಮೂಡಿಸಿದ್ದಾರೆ. ಕೇಂದ್ರ ಸಚಿವ ಸಂಪುಟದ ವಿಜ್ಞಾನ ಸಲಹಾ ಮಂಡಲಿಯ ಸದಸ್ಯರೂ ಆಗಿರುವ ಡಾ॥ ಬಲರಾಮ್ ಸಿ. ಎಸ್. ಐ. ಆರ್. ಹಾಗೂ ಟಿ. ಐ. ಎಫ್. ಆರ್.ಗಳ ಸಲಹಾ ಮಂಡಲಿಗಳಲ್ಲಿ ಸಕ್ರಿಯ ಸದಸ್ಯರಾಗಿದ್ದಾರೆ. ವಿಜ್ಞಾನದ ಕ್ಷೇತ್ರದಲ್ಲಿ ಇವರದು ಅಪ್ರತಿಮ ಸ್ಥಾನ. ಇಂತಹ ವಿದ್ವಾಂಸರು ‘ಹೊಸತು’ ಪತ್ರಿಕೆಗೆ ಸಂದರ್ಶನ ನೀಡುವ ಸೌಜನ್ಯ ತೋರಿ ಸುಮಾರು ತೊಂಭತ್ತು ನಿಮಿಷಗಳ ಕಾಲ ನಮ್ಮ ಪ್ರಶ್ನೆಗಳಿಗೆ ಉತ್ತರ ನೀಡುತ್ತಾ ಚರ್ಚೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಸಂದರ್ಶನದ ಮುಖ್ಯವಾದ ಭಾಗಗಳನ್ನು ಪ್ರಕಟಿಸಲು ‘ಹೊಸತು’ ಹರ್ಷಿಸುತ್ತದೆ. ಸಂದರ್ಶನದಲ್ಲಿ ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಸಸ್ಯಶಾಸ್ತ್ರ ಪ್ರಾಧ್ಯಾಪಕರಾದ ಡಾ॥ ಎಚ್. ಗೋಕುಲ್ ಭಾಗವಹಿಸಿ ಸಹಕಾರ ನೀಡಿದರು. ಇತರ ಸಂದರ್ಶಕರು ಡಾ॥ ಜಿ. ರಾಮಕೃಷ್ಣ, ಕೆ. ಎಸ್. ಪಾರ್ಥಸಾರಥಿ, ಎಸ್. ಸುರೇಂದ್ರ ಮತ್ತು ಕೆ. ಪಿ. ಸ್ವಾಮಿ. ಸಂದರ್ಶನ ಲೇಖನವನ್ನು ಸಿದ್ಧಗೊಳಿಸಿದವರು ಡಾ॥ ಜಿ. ರಾಮಕೃಷ್ಣ



ಚಿತ್ರಗಳು : ಕೆ. ಪಿ. ಸ್ವಾಮಿ

**ಹೊಸತು** : ತಮ್ಮನ್ನು ಸಂದರ್ಶಿಸಲು ಒಪ್ಪಿಗೆ ನೀಡಿದುದಕ್ಕಾಗಿ ಕೃತಜ್ಞರಾಗಿದ್ದೇವೆ. ನಾವು ಸಾಮಾನ್ಯ ಜ್ಞಾನವಿರುವವರೆ ವಿನಾ ವಿಜ್ಞಾನದಲ್ಲಿ ಪರಿಣತರಲ್ಲ. ನಮ್ಮ ಜೊತೆಗಿರುವ ಡಾ॥ ಗೋಕುಲ್ ಮಾತ್ರವೇ ವಿಜ್ಞಾನದಲ್ಲಿ ಸಂಶೋಧಕರಾಗಿರುವವರು. ಸಹಜವಾಗಿಯೇ ನಾವು ಸಾಮಾನ್ಯ ನೆಲೆಯಲ್ಲಿ ಪ್ರಶ್ನೆ ಕೇಳುವವರಿದ್ದೇವೆ. ಮೊದಲಿಗೆ ವಿಜ್ಞಾನ ಕ್ಷೇತ್ರದ ಸನ್ನಿವೇಶದ ಬಗ್ಗೆ : ಈಚಿನ ವರ್ಷಗಳಲ್ಲಿ ವಿಜ್ಞಾನದ ಅಧ್ಯಯನ - ಸಂಶೋಧನೆಗಳಲ್ಲಿ ಅವನತಿ ಉಂಟಾಗಿದೆಯೆಂಬ ಅಭಿಪ್ರಾಯವಿದೆ. ಹಿಂದಿನ ಕೆಲವು ವಿಜ್ಞಾನಿಗಳಿಗೆ ಸಮಾನರು ಇಂದು ಇಲ್ಲವೆಂಬಷ್ಟು ಹಿಂಜರಿತ ಕಂಡುಬಂದಿದೆ. ಇದಕ್ಕೆ ತಮ್ಮ ಪ್ರತಿಕ್ರಿಯೆ ಏನು ?

**ಡಾ॥ ಬಲರಾಮ್** : ನಾನು ಇದನ್ನು ಒಪ್ಪಲಾರೆ. ಅವನತಿಗೆ ಬದಲಾಗಿ ಕಳೆದ ನೂರು ವರ್ಷಗಳಲ್ಲಿ ಅದು ಉತ್ತಮವಾಗುತ್ತಲೇ ಬಂದಿದೆ. ಬಹುಶಃ ಅವನತಿಯ ಮಾತನಾಡುವವರ ದೃಷ್ಟಿಯಲ್ಲಿ ೧೯೨೦-೩೦ರ ಚಿತ್ರವಿದೆ. ಆಗ್ಗೆ ಡಾ॥ ಸಿ. ವಿ. ರಾಮನ್, ಸತ್ಯೇನ್ ಬೋಸ್. ಮೇಘನಾದ ಸಹಾ ಮುಂತಾದ ಅಗ್ರಗಣ್ಯರಿದ್ದರು. ಈಗ ಅಂಥವರಿಲ್ಲ, ನಿಜ, ಆದರೆ ಮಾಪನ ವಿಧಾನ ಅದಲ್ಲ. ವಿಜ್ಞಾನದ ಸ್ವರೂಪವೇ ಬದಲಾಗಿದೆ. ೨೦ನೆಯ ಶತಮಾನದ ಆದಿಭಾಗದಲ್ಲಿ ವಿಶ್ವದಲ್ಲೆಲ್ಲಾ ಚಟುವಟಿಕೆಗಳಿದ್ದುವು, ಅದಕ್ಕೇ ಬದ್ಧರಾಗಿದ್ದ ವ್ಯಕ್ತಿಗಳಿದ್ದರು. ಅವರ ಸಂಪನ್ಮೂಲಗಳೂ ಬಹುಮಟ್ಟಿಗೆ ಅವರವೇ. ಇದೇ ಸನ್ನಿವೇಶವು ಪಾಶ್ಚಿಮಾತ್ಯ ದೇಶಗಳಲ್ಲೂ ಇತ್ತು. ೧೯೪೫ರ ನಂತರ ವಿಜ್ಞಾನದ ಸಂಘಟನೆ ತೀವ್ರವಾಗಿ ನಡೆಯಿತು. ಅದಕ್ಕೆ ಮುನ್ನ ಅಮೆರಿಕಾದಲ್ಲೂ ಅಷ್ಟು ಸಂಘಟಿತವಾಗಿರಲಿಲ್ಲ. ಯೂರೋಪಿನಲ್ಲಿ ಸ್ವಲ್ಪ ಮಟ್ಟಿಗೆ ಸಂಘಟಿತವಾಗಿತ್ತು , ಅಷ್ಟೆ. ಇಂದು ವಿಜ್ಞಾನವು ಸ್ಪರ್ಧಾತ್ಮಕವಾಗಿದೆ, ಸಾವಿರಾರು ಮಂದಿ ವಿಶ್ವದಲ್ಲೆಲ್ಲಾ ಸಂಶೋಧನೆಯಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಭಾರತದಲ್ಲೂ ನೂರಾರು ಸಂಸ್ಥೆಗಳಿವೆ. ಐವತ್ತು ವರ್ಷಗಳ ಹಿಂದಿನ ಸ್ಥಿತಿಗೆ ಹೋಲಿಸಿದರೆ ಇಂದು ನಾವು ಬಹುದೂರ ಬಂದಿದ್ದೇವೆ. ಆದರೆ ಕಾಲೇಜು-ವಿಶ್ವವಿದ್ಯಾನಿಲಯಗಳನ್ನು ನೋಡುವ ಜನಸಾಮಾನ್ಯರಿಗೆ ಅವನತಿಯ ಭಾವನೆ ಬರುತ್ತದೆ. ಏಕೆಂದರೆ, ಅಲ್ಲಿ ವಿದ್ವತ್ತಿನ ಕೊರತೆ ನಿಜಕ್ಕೂ ಹೆಚ್ಚುತ್ತಿದೆ. ವಿಜ್ಞಾನವೇ ಏಕೆ, ಸಂಸ್ಕೃತ - ಇತಿಹಾಸ - ಇಂಗ್ಲಿಷ್ ಮುಂತಾದ ಶಿಸ್ತುಗಳಲ್ಲಿ ಅವನತಿ ಇಲ್ಲವೆ ? ಹಿಂದೆ ಕಾಣುತ್ತಿದ್ದ ಆಳವಾದ ಪಾಂಡಿತ್ಯ ಎಲ್ಲಿ ಹೋಯಿತು ? ವಾಸ್ತವವೇನೆಂದರೆ ವಿದ್ವತ್ತಿನ ಬೆನ್ನು ಹತ್ತುತ್ತಿದ್ದವರಲ್ಲಿ ಬಹುಭಾಗ ಈಗ ವಿಜ್ಞಾನದ ಕ್ಷೇತ್ರಕ್ಕೆ ಹಾಗೂ ಸಂಶೋಧನಾ ಸಂಸ್ಥೆಗಳಿಗೆ ಬಂದುಬಿಟ್ಟಿದ್ದಾರೆ. ಅಂತಹ ಸಂಸ್ಥೆಗಳೂ ಹೆಚ್ಚಿವೆ. ಈಗಲೂ ಒಟ್ಟಾರೆ ನೋಡಿದರೆ ಒಳ್ಳೆಯ ಕೆಲಸ ನಡೆಯುತ್ತಿದೆ. ಹಿಂದಿನ ಕೆಲವು ಸಂಸ್ಥೆಗಳು ಕ್ಷೀಣಿಸಿದ್ದರೂ ಸಾಮಾನ್ಯವಾಗಿ ಉತ್ತಮವಾಗಿರುವುವೂ ಹೆಚ್ಚಾಗುತ್ತಿವೆ.



**ಹೊ** : ವಿಜ್ಞಾನದ ಸಂಶೋಧನೆಯಲ್ಲಿ ಹಾಗಾದರೆ ಅವನತಿ ಇಲ್ಲವೆನ್ನುತ್ತೀರಾ ?

**ಬ** : ನನಗೆ ತಿಳಿದ ಜೀವಶಾಸ್ತ್ರದಲ್ಲಿ ಎಷ್ಟೊಂದು ಹೊಸ ಆವಿಷ್ಕಾರಗಳಾಗಿವೆ! ಉದಾಹರಣೆಗೆ, ಜೀವ-ತಂತ್ರಜ್ಞಾನ, ಇದಕ್ಕೆ ಮೀಸಲಾದ ಸಂಸ್ಥೆಗಳು. ಅವುಗಳ ಪೈಕಿ ಎಷ್ಟೋ ಒಳ್ಳೆಯವಿವೆ. ದೆಹಲಿ ವಿಶ್ವವಿದ್ಯಾನಿಲಯ ಈಗಲೂ ಚೆನ್ನಾಗಿಯೇ ಇದೆ. *ಕರೆಂಟ್ ಸೈನ್ಸ್‌*ನ ಸಂಪಾದಕನಾಗಿ ಅನೇಕ ಲೇಖನಗಳನ್ನು ನೋಡುತ್ತೇನೆ. ಈಚೆಗೆ ಮಹೇಶ್ವರಿ ಅವರ ಬಗ್ಗೆ ಯಾರೋ ಬರೆದಿದ್ದರು. ಸಸ್ಯಶಾಸ್ತ್ರ ಸಂಶೋಧಕರಾಗಿ ರಾಯಲ್ ಸೊಸೈಟಿಯ ಫೆಲೋ ಆಗಿದ್ದವರು ಅವರು. ರಸಾಯನಶಾಸ್ತ್ರದಲ್ಲಿ ಶೇಷಾದ್ರಿ, ಪ್ರಾಣಿಶಾಸ್ತ್ರದಲ್ಲಿ ಶೇಷಾಚಾರ್, ಇಂಥವರೆಲ್ಲಾ ಇದ್ದರು. ಈಗಿಲ್ಲ ವಲ್ಲಾ ಎಂದು ಅವನತಿಯ ಮಾತು ಬರುತ್ತದೆ.

**ಹೊ** : ವಿಶ್ವ ಮಟ್ಟದಲ್ಲಿ ನಮ್ಮ ಪ್ರಕಟಣೆಗಳು ಕಡಿಮೆ, ಕಳಪೆ, ಎನ್ನುತ್ತಾರೆ. ವಿಶೇಷತಃ ಅಂತರ ರಾಷ್ಟ್ರೀಯ ನಿಯತಕಾಲಿಕೆಗಳಲ್ಲಿ, ನಮ್ಮ ಸಂಸ್ಥೆಗಳ ಸಂಖ್ಯೆಗೆ ಹೋಲಿಸಿದರೆ ಸಂಶೋಧನಾ ಲೇಖನಗಳು ಎಷ್ಟಿವೆ? ಪ್ರಶಸ್ತಿಗಳನ್ನು ಗಮನಿಸಿ. ದೊಡ್ಡವು ಯಾವೂ ನಮ್ಮದಲ್ಲ. ಏನಾದರೂ ವಿಶಿಷ್ಟ ಕಾರಣದಿಂದಾಗಿ ಅವು ನಮಗೆ ದೊರೆಯುತ್ತಿಲ್ಲವೆ ? ಅಥವಾ ಅರ್ಹತೆ ಇಲ್ಲವೋ ?

**ಬ** : ಅಂತಹ ತಾರತಮ್ಯದಿಂದ ನಮಗೆ ದೊರೆತಿಲ್ಲವೆಂಬುದು ನಿಜವಲ್ಲ. ಸಾಮಾನ್ಯವಾಗಿ ವಿಜ್ಞಾನದಲ್ಲಿ ಹಾಗಾಗುವುದಿಲ್ಲ. ಸಂಶೋಧನೆ ಮೌಲಿಕವಾಗಿದ್ದರೆ ಅದನ್ನು ಗುರುತಿಸಲಾಗುತ್ತದೆ. ಅತ್ಯಂತ ಅದ್ಭುತವಾದ ಕೆಲಸವನ್ನು ಭಾರತೀಯ ವಿಜ್ಞಾನಿಗಳಿಂದ ನಿರೀಕ್ಷಿಸಬಾರದು. ನಮ್ಮ ಅತಿಶ್ರೇಷ್ಠ ಸಂಶೋಧನಾ ಸಂಸ್ಥೆಗಳು ಸಹ ಕೊರತೆಗಳನ್ನು ಅನುಭವಿಸುತ್ತವೆ. ನಮ್ಮ ಸಂಸ್ಥೆಯೂ ಅಂತಹ ಒಂದು ಉದಾಹರಣೆ. ಹಾರ್ವರ್ಡ್, ಮ್ಯಾಸಚ್ಯೂಸೆಟ್‌ಗೆ ನಮ್ಮ ಸಂಸ್ಥೆ ಸಾಟಿಯೆ ? ಅಮೆರಿಕಾದ ಐವತ್ತು ಉತ್ತಮ ವಿಶ್ವವಿದ್ಯಾನಿಲಯಗಳನ್ನು ತೆಗೆದುಕೊಂಡರೆ ಅವಕ್ಕೆ ನಮ್ಮದು ಸಮವಲ್ಲ. ಭೌತಿಕ ಸೌಲಭ್ಯ, ಹಣದ ಮುಗ್ಗಟ್ಟು...

**ಹೊ** : ಸಂಶೋಧನೆಯನ್ನು ಅನ್ವಯ ಮಾಡಿ ಪ್ರತಿಫಲ ನೀಡದಿದ್ದಾಗ ಹಣದ ಕೊರತೆ ಹೇಗೆ ನೀಗುತ್ತದೆ ? ನೀವು ಮೂಲಭೂತವಾದ ಸಂಶೋಧನೆ ಮಾಡುತ್ತೀರಿ, ಅದರಿಂದ ಉದ್ಯಮ ಉತ್ಪಾದನೆ, ಜನಸಾಮಾನ್ಯ, ಏನು ಫಲ ಪಡೆಯುತ್ತಾರೆ ? ಹಾಗಾಗಿ ಹಣದ ಕೊರತೆ ಅನಿವಾರ್ಯವೇನೋ....

**ಬ** : ಇದು ತಪ್ಪು ಗ್ರಹಿಕೆ. ವಿಜ್ಞಾನದಲ್ಲಿ ನೇರವಾಗಿ ಅಂತಹ ಸಂಬಂಧ ಏರ್ಪಡುವುದಿಲ್ಲ, ಇಷ್ಟು ಹಣ ತೊಡಗಿಸು - ಇಷ್ಟು ಪ್ರತಿಫಲ ಪಡೆ, ಎಂಬ ಸೂತ್ರ ಅಮೆರಿಕಾದಲ್ಲೂ ಇರಲಾರದು. ತೊಡಗಿಸಿದ ಅಪಾರ ಮೊತ್ತಕ್ಕೆ ಸರಿಯಾಗಿ ಫಲ ದೊರೆತಿಲ್ಲವೆಂಬ ದೂರು ಅಲ್ಲೂ ಇದೆ. ಹಾಗೆ ಲೆಕ್ಕ ಮಾಡಲಾಗದು. ಅನಿರೀಕ್ಷಿತವಾದ ಯಾವುದೋ ಮೂಲದಿಂದ ಪ್ರತಿಫಲ ಬರಬಹುದು. ಮುಖ್ಯವಾದ್ದು ವೈಜ್ಞಾನಿಕ ಸಂಶೋಧನೆ ಜರುಗುತ್ತಿರಬೇಕು. ಇಲ್ಲವಾದರೆ ಆ 'ಅನಿರೀಕ್ಷಿತ ಮೂಲ' ಎನ್ನುವುದೇ ಇರುವುದಿಲ್ಲ - ಹಣದಿಂದ ಎಲ್ಲ ಸಮಸ್ಯೆಗಳೂ ಪರಿಹಾರವಾಗುವುದಿಲ್ಲ - ಈಗಿಗಿಂತ ಎರಡರಷ್ಟು ಹಣ ಒದಗಿಸಿದರೆ ಪ್ರತಿಫಲ ಇಮ್ಮಡಿಯಾಗುತ್ತದೆಯೆ ? ಇಲ್ಲ, ಅದಕ್ಕೆ ದೀರ್ಘಾವಧಿಯ ದೃಷ್ಟಿ, ಯೋಜನೆ, ಅಗತ್ಯ. ಪ್ರತಿಭಾವಂತರು ಸಂಶೋಧನೆಯಲ್ಲಿ ತೊಡಗಿಕೊಳ್ಳಬೇಕು, ಅಲ್ಲೇ ಉಳಿಯಬೇಕು. ಪ್ರತಿಭೆ ಇದ್ದೂ ಸಂಸ್ಥೆಯ ಗುಣಮಟ್ಟ ಕೀಳಾಗಿದ್ದರೆ ಏನಾಗುತ್ತದೆ ? ಆದ್ದರಿಂದ ಪ್ರತಿಭೆ - ಪರಿಸರ ಎರಡೂ ಮುಖ್ಯ.

**ಹೊ** : ಈಗ ವೃತ್ತಿ ಶಿಕ್ಷಣದ ಮೋಹ ಹೆಚ್ಚಿದೆ. ಎಲ್ಲರೂ ಅದಕ್ಕೆ ನುಗ್ಗುತ್ತಾರೆ. ವಿಜ್ಞಾನದ ಅಧ್ಯಯನಕ್ಕೆ ವಿದ್ಯಾರ್ಥಿಗಳು ಕಡಿಮೆ, ಆದ್ದರಿಂದ ಸಂಶೋಧನೆ ಆಯ್ಕೆ ಮಾಡಿಕೊಳ್ಳುವವರೂ ಕಡಿಮೆ. ನಿಮ್ಮ ಸಂಸ್ಥೆಯ 'ಇಂಟೆಗ್ರೇಟೆಡ್ ಪಿಎಚ್.ಡಿ. ಪ್ರೋಗ್ರಾಂ' ಬಂದಿದ್ದೇಕೆ ? ವಿಶ್ವವಿದ್ಯಾನಿಲಯಗಳಲ್ಲಿ ಗುಣಮಟ್ಟ ಸಾಲದು ಎಂಬ ಕಾರಣಕ್ಕಾಗಿಯಲ್ಲವೆ ?

**ಬ** : ನನ್ನ ಅಭಿಪ್ರಾಯ ಸ್ವಲ್ಪ ಭಿನ್ನವಾಗಿದೆ. ನಮ್ಮ ದೇಶದಲ್ಲಿ ವಿಜ್ಞಾನದ ಅಧ್ಯಯನಕ್ಕೆ ವಿದ್ಯಾರ್ಥಿಗಳು ಕಡಿಮೆಯಾಗಿಲ್ಲ. ನಮ್ಮ ಒಂದು ರಾಜ್ಯವನ್ನು ನೋಡಿ ತೀರ್ಮಾನಿಸಬಾರದು. ಉದಾಹರಣೆಗೆ, ಪಶ್ಚಿಮ ಬಂಗಾಳ. ರಾಜ್ಯದಿಂದ ರಾಜ್ಯಕ್ಕೆ ಇದರಲ್ಲಿ ವ್ಯತ್ಯಾಸವಿದೆ. ಗುಣಮಟ್ಟದಲ್ಲೂ ಅಷ್ಟೆ. ನಮ್ಮ ಎಲ್ಲ ವಿದ್ಯಾರ್ಥಿಗಳ ಹಿನ್ನೆಲೆಯೂ ಒಂದೇ ಅಲ್ಲ. ಎಷ್ಟೋ ಮಂದಿಗೆ ಆರ್ಥಿಕ ಸನ್ನಿವೇಶ ಬಹಳ ದುಸ್ತರ. ಹಾಗೆಂದು ಅವರ ಬುದ್ಧಿಮತ್ತೆ ಕಡಿಮೆಯಲ್ಲ - ಹೇಗೋ ಅವರು ಕಾಲೇಜುಗಳಿಂದ ಹೊರಬಂದರೆ ಉತ್ತಮ ಸಂಶೋಧಕರಾಗಿ ಪ್ರಕಾಶಕ್ಕೆ ಬರಬಲ್ಲರು. ಮುಖ್ಯವಾದ್ದು ಬದ್ಧತೆ, ಆಕಾಂಕ್ಷೆ ಮತ್ತು ಗಾಢ ಪ್ರೇರಣೆ. ಅದಿದೆ, ಆದ್ದರಿಂದ ಸ್ವಲ್ಪ ತರಬೇತಿ ನೀಡಿದರೆ ತಾಂತ್ರಿಕ ಕೌಶಲ್ಯ ಬೆಳೆಸಿಕೊಳ್ಳುತ್ತಾರೆ. ನಮ್ಮ ಕಾಲೇಜುಗಳನ್ನು ನೋಡಿ, ಎಷ್ಟೋ ಕಡೆ ಪ್ರಯೋಗಶಾಲೆಗಳೇ ಇಲ್ಲ.

**ಹೊ** : ಅವಿರುವಾಗಲೂ ಅಸಮಾನತೆ ಬಹುವಾಗಿ ಕಾಡುತ್ತದೆ. ಒಂದೆಡೆ ಚೆನ್ನಾದ್ದು

ಇನ್ನೊಂದೆಡೆ ಕಳಪೆಯಾದ್ದು. ಎರಡೂ ಕಡೆಯ ವಿದ್ಯಾರ್ಥಿಗಳು ಒಟ್ಟಿಗೆ ಸ್ಪರ್ಧಿಸಬೇಕು, ಒಂದೇ ಹೊಳೆಯಲ್ಲಿ ಸಾಗಬೇಕು.

**ಬ** : ಅದು ನಿಜ, ನಮ್ಮ ಸಂಸ್ಥೆಯ ಜೀವಾಳವೆಂದರೆ ವಿದ್ಯಾರ್ಥಿಗಳು. ೧೫೦೦-೧೬೦೦ ರಷ್ಟಿದ್ದಾರೆ. ಭಾರತದ ಎಲ್ಲ ಭಾಗಗಳಿಂದ ಬಂದಿದ್ದಾರೆ, ಆದರೆ ಬಂಗಾಳದವರು ಅಧಿಕ. ಏಕೆ ? ಅಲ್ಲಿಯ ಕಾಲೇಜುಗಳಲ್ಲಿ ವಿಜ್ಞಾನ ಬೋಧನೆ ಚೆನ್ನಾಗಿರಬೇಕು. ಆದ್ದರಿಂದ ಎಲ್ಲಿಯಾದರೂ ಉಪನ್ಯಾಸ ನೀಡಬೇಕಾದರೆ ನಾನು ಕಲ್ಕತ್ತಾದ ಕಾಲೇಜನ್ನು ಆಯ್ದುಕೊಳ್ಳಬೇಕೆನಿಸುತ್ತದೆ.

**ಹೊ** : ಯುವ ಪೀಳಿಗೆಗೆ ತರಬೇತಿ ನೀಡುವ ಯಾವ ಕಾರ್ಯಕ್ರಮಗಳಿವೆ? ಪದವಿ ತರಗತಿಗಳವರೆಗೆ ವಿದ್ಯಾರ್ಥಿವೇತನ, ಬೇಸಿಗೆ ಶಿಬಿರಗಳು, ವಿಜ್ಞಾನಿಗಳೊಡನೆ ಸಂಸರ್ಗ, ಇವೆಲ್ಲಾ ಎಷ್ಟು ಪ್ರಯೋಜನ ನೀಡಿವೆ ?

**ಬ** : ಬೇಸಿಗೆ ಶಿಬಿರಗಳು ಬಹಳ ಯಶಸ್ವಿಯಾಗಿವೆ. ಬಹುತೇಕ ಇವೆಲ್ಲಾ ಬೆಂಗಳೂರಿನಲ್ಲೇ ಕೇಂದ್ರಿತವಾಗಿವೆ. ನಮ್ಮ ಸಂಸ್ಥೆ, ಜವಾಹರಲಾಲ್ ಸಂಶೋಧನಾ ಕೇಂದ್ರ, ವಿಜ್ಞಾನ ಅಕಾಡೆಮಿ, ಇತ್ಯಾದಿ. ಬೇರೆ ಕಡೆಗಳಲ್ಲೂ ಇವೆ. ಆದರೆ ವಿದ್ಯಾರ್ಥಿಗಳಿಗೆ ಅವು ತಿಳಿದಿಲ್ಲ, ಅಲ್ಲದೆ, ಇವುಗಳಿಗೆ ಬರುವವರಲ್ಲಿ ಬಹುಭಾಗ ಅನುಕೂಲಸ್ಥ ಕುಟುಂಬಗಳವರು.

**ಹೊ** : ನಿಮ್ಮ ಅನುಭವ ಹೇಗಿದೆ ? ವಿದ್ಯಾರ್ಥಿಗಳು ಪ್ರತಿಭಾವಂತರೆ ? ಸಂಶೋಧನೆಯಲ್ಲಿ ಆಸಕ್ತಿಯುಳ್ಳವರೆ ?

**ಬ** : ಲಭ್ಯವಿರುವ ತರಬೇತಿ ಎಲ್ಲ ತರಗತಿಯವರಿಗೂ ಇದೆ. ಪದವಿಪೂರ್ವದಿಂದ ಸ್ನಾತಕೋತ್ತರದವರೆಗೆ. ಇವರಲ್ಲಿ ೧೨ನೇ ಇಯತ್ತೆಯವರದು ಮಾತ್ರ ಸಂದಿಗ್ಧ ಸ್ಥಿತಿ. ಅವರ ಆಯ್ಕೆ ಅದಾದ ನಂತರದ್ದು: ಇಂಜಿನಿಯರಿಂಗ್, ವೈದ್ಯಕೀಯ, ಇತ್ಯಾದಿ - ಮಿಕ್ಕವರು ಆಗಲೇ ವಿಜ್ಞಾನವನ್ನು ಆಯ್ದುಕೊಂಡವರು. ಪರೀಕ್ಷೆಗಳಲ್ಲಿ ಅಂಕಗಳಿಸುವುದು ಮಾಪಕವಲ್ಲ, ಅವರ ಸಾಮರ್ಥ್ಯದ ಮಾಪನವಾಗಬೇಕು. ನಮ್ಮ ಪರೀಕ್ಷೆಗಳು ಆಸಕ್ತಿಗಳನ್ನು ಗುರುತಿಸುವುದಿಲ್ಲ, ಆದ್ದರಿಂದ ಮೇಲಿನ ನೂರು ಮಂದಿ ವಿಜ್ಞಾನಕ್ಕೆ ಬರದಿದ್ದರೆ ಬಾಧಕವೇನೂ ಇಲ್ಲ.

**ಹೊ** : ಆಸಕ್ತಿ ಕೆರಳಿಸುವುದು ಹೇಗೆ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ?

**ಬ** : ಶ್ರದ್ಧೆ ಇರುವ ಅಧ್ಯಾಪಕರು ಇದನ್ನು ಮಾಡುತ್ತಾರೆ. ಇದು ಸಂಸ್ಕೃತಿಯ ಪ್ರಶ್ನೆ. ಆಳವಾದ ಅಧ್ಯಯನ ನಡೆಸುವವರಿಗೆ ಗೌರವ ನೀಡುವ ವಾತಾವರಣ ನಿರ್ಮಾಣ ಮಾಡುವುದರಲ್ಲಿ ಅವರ ಪಾತ್ರವೂ ಇದೆ.

**ಹೊ** : ನಿಮ್ಮ ಪರಿಣತಿಯ ಕ್ಷೇತ್ರಕ್ಕೆ ಬರೋಣ: ನೀವು ಬಯೋಫಿಸಿಕ್ಸ್‌ನಲ್ಲಿ ನಿಷ್ಣಾತರು; ಜನಸಾಮಾನ್ಯರಿಗೆ ತಿಳಿಯುವಂತೆ ಅದೇನೆಂಬುದನ್ನು ದಯವಿಟ್ಟು ಹೇಳಿ.

**ಬ** : ಭಾರತದ ಹಿನ್ನೆಲೆಯಲ್ಲಿ ಮಾತಾಡೋಣ. ಭೌತಶಾಸ್ತ್ರ ಹಾಗೂ ಆ ಶಿಸ್ತಿನ ವಿಧಾನವನ್ನು ಜೈವಿಕ ಪ್ರಶ್ನೆಗಳನ್ನು ಬಿಡಿಸಲು ಬಳಸುವುದು ಬಯೋಫಿಸಿಕ್ಸ್. ನಮ್ಮ ಶ್ರೇಷ್ಠ ವಿಜ್ಞಾನಿ ಜೆ. ಸಿ. ಬೋಸ್ ಭೌತ ಮತ್ತು ಜೀವಶಾಸ್ತ್ರಗಳ ನಡುವೆ ಎಲ್ಲೋ ನಿಂತರು. ವಿಜ್ಞಾನ ಶಾಖೆಗಳನ್ನು ತೀರಾ ಪ್ರತ್ಯೇಕವೆಂದು ನೋಡದಿದ್ದ ಕಾಲ ಅವರದು. ಜೀವಿಗಳನ್ನು ನೋಡಿದರೆ ಅವುಗಳಲ್ಲಿ ಅದೆಷ್ಟು ಭೌತಿಕ ಅಂಶಗಳಿರುತ್ತವೆ! ಸೂರ್ಯಕಿರಣ ಬಿದ್ದಾಗ ಒಂದು ಹೂವು ಅರಳಿದರೆ ಅದೊಂದು ಭೌತಿಕ ಕ್ರಿಯೆ. ಬೇರಿನಿಂದ ನೀರಿನ ಅಂಶವು ಗಿಡದ ಮೇಲಿನವರೆಗೆ ಹೋಗುತ್ತದಲ್ಲ, ಅದು ಭೌತಿಕ ಕ್ರಿಯೆ. ನಾವೆಲ್ಲಾ ಇದನ್ನು ನೋಡುತ್ತಿದ್ದೇವೆ. ಅದು ಹೇಗಾಗುತ್ತದೆಂಬುದರಲ್ಲಿ ವಿಶೇಷ ಆಸಕ್ತಿ ತೋರುವವರು ಬೋಸ್ ಮತ್ತು ಸಿ. ವಿ. ರಾಮನ್ ಅಂಥವರು. ರಸಾಯನ ಮತ್ತು ಜೀವಶಾಸ್ತ್ರಗಳಿಗೆ ಭೌತಶಾಸ್ತ್ರದ ಕೊಡುಗೆ ಅಪಾರ. ಕಣಗಳು ರಸಾಯನ ಶಾಸ್ತ್ರದ ವಿಷಯ. ಈ ಕಣಗಳು ಪರಮಾಣುಗಳ ಸಂಘಾತ. ಅದು ಭೌತಶಾಸ್ತ್ರದ ಪರಿಧಿಗೆ ಸೇರಿದೆ. ಇಂದಿನ ಸನ್ನಿವೇಶದಲ್ಲಿ ವಿಜ್ಞಾನದ ಶಾಖೆಗಳ ಎಲ್ಲೆಗಳನ್ನು ಗುರುತಿಸಲಾಗುವುದಿಲ್ಲ, ಅವು ಒಂದಕ್ಕೊಂದು ಹೆಣೆದುಕೊಂಡಿವೆ. ನನ್ನ ಶಿಸ್ತನ್ನು ನೋಡಿ; ಅದಕ್ಕೆ ಮಾಲಿಕ್ಯುಲರ್ ಬಯೋಫಿಸಿಕ್ಸ್ ಮತ್ತು ಬಯೋಕೆಮಿಸ್ಟ್ರಿ ಎಂಬ ಹೆಸರುಗಳನ್ನೂ ನೀಡಬಹುದು. ಕಣಗಳ ರಚನೆಯನ್ನು ತಿಳಿಯಲು ಭೌತಶಾಸ್ತ್ರದ ವಿಧಾನಗಳು ಅನುವಾಗುತ್ತವೆ. ಸ್ಫಟಿಕ ವಸ್ತುಗಳನ್ನು ಎಕ್ಸ್-ರೇ ಹಾಯಿಸುವುದರಿಂದ ವಿಶ್ಲೇಷಣೆ ಮಾಡಿಕೊಳ್ಳಬಹುದು. ವಜ್ರದಂತಹ ವಸ್ತುಗಳನ್ನು ಸಿ. ವಿ. ರಾಮನ್ ವಿವರಿಸಿದ್ದು ಆ ಮೂಲಕ. ರಾಮನ್ ಅವರ ಒಬ್ಬ ವಿದ್ಯಾರ್ಥಿ ಜಿ. ಎನ್. ರಾಮಚಂದ್ರನ್. ಕೇವಲ ೨೯ನೆಯ ವಯಸ್ಸಿನಲ್ಲಿ ಅವರು ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿ ಭೌತಶಾಸ್ತ್ರ ಪ್ರಾಧ್ಯಾಪಕರಾಗಿ ನೇಮಕಗೊಂಡಿದ್ದರು. ಸಂಶೋಧನೆಗೆ ವಿಷಯ ಅರಸುತ್ತಿದ್ದಾಗ ಜೆ. ಡಿ. ಬರ್ನಾಲ್ ಭೇಟಿಯಾಯಿತು. 'ಕೊಲಜಿನ್' ರಚನೆಯನ್ನು ಆಯ್ದುಕೊಳ್ಳಲು ಸೂಚನೆ ದೊರೆಯಿತು. ನಮ್ಮ ಚರ್ಮದಲ್ಲಿ ಸ್ನಾಯುಗಳಲ್ಲಿರುವ ಪ್ರೋಟಿನ್ ಅದು. ಎಕ್ಸ್-ರೇ ಹಾಯಿಸಿ ರಾಮಚಂದ್ರನ್ ಅದರ ರಚನೆಯ ಸಂಶೋಧನೆ ಮಾಡಿದರು. ಅಂದರೆ, ಒಂದು ಜೀವಶಾಸ್ತ್ರದ ವಿಷಯವನ್ನು ಭೌತಶಾಸ್ತ್ರದ ವಿಧಾನದಿಂದ ವಿವರಿಸಿದರು. ನಮ್ಮ ಸಂಸ್ಥೆಗೆ ಬಂದಾಗ ಅವರ ಭಾಗವನ್ನು ಮಾಲಿಕ್ಯುಲರ್ ಬಯೋಫಿಸಿಕ್ಸ್ ಎಂದು ಕರೆದರು. ನಾನು ರಸಾಯನಶಾಸ್ತ್ರದ ವಿದ್ಯಾರ್ಥಿ. ೧೯೭೩ರ ಡಿಸೆಂಬರ್‌ನಲ್ಲಿ ಅವರೊಡನೆ ಕೆಲಸ ಮಾಡಲು ಬಂದು ಸೇರಿಕೊಂಡೆ. ನಾನು ಭೌತಶಾಸ್ತ್ರದವನೂ ಅಲ್ಲ, ಜೀವಶಾಸ್ತ್ರದವನೂ ಅಲ್ಲ. ಈ ವ್ಯತ್ಯಾಸಗಳನ್ನು ಗಂಭೀರವಾಗಿ ಪರಿಗಣಿಸಬಾರದು. ಪ್ರಾಯೋಗಿಕವಾಗಿ ನಾನೊಬ್ಬ ಜೀವಶಾಸ್ತ್ರಜ್ಞ. ಕಾಲೇಜುಗಳಲ್ಲಿ ಸಹ ಸಸ್ಯಶಾಸ್ತ್ರ, ಜೀವಶಾಸ್ತ್ರ ಮುಂತಾದುವನ್ನು ಅಂತರ್ಗತಗೊಳಿಸಬೇಕು. ಎಲ್ಲ ಶಾಸ್ತ್ರಗಳೂ ಜೀವಂತ ಘಟಕಗಳ ಅಧ್ಯಯನ ಮಾಡುವುವೇ ಆಗಿವೆ. ಶಾಸ್ತ್ರಗಳಲ್ಲಿ ಏಕತೆ ಬರುವುದು ಕಣಗಳ, ಜೀನ್‌ಗಳ, ಪ್ರೋಟೀನ್‌ಗಳ ಅಧ್ಯಯನದಿಂದಾಗಿ. ಅವನ್ನು ಒಡೆದು ಬೇರ್ಪಡಿಸುವುದರಿಂದ ಈ ಏಕತೆ ನಷ್ಟವಾಗುತ್ತದೆ.

**ಹೊ** : ಅಂತರ - ಶಿಸ್ತೀಯ ಅಧ್ಯಯನಕ್ಕೆ ಒತ್ತುಕೊಡುವುದು ಈ ಉದ್ದೇಶದಿಂದಲೇ ಅಲ್ಲವೆ ?

**ಬ** : ಮೊದಲು ಪ್ರತ್ಯೇಕಿಸುವುದು, ಆಮೇಲೆ ಏಕತೆ ತರಲು ಹೊರಡುವುದು ! ಇದೇ ಸೋಜಿಗ. ನೀವು ಆಂಗ್ಲ ಸಾಹಿತ್ಯದ ವಿದ್ಯಾರ್ಥಿ ಯಾದರೆ ಅದಕ್ಕೆ ಪೂರಕವಾಗಿ ಬೇರೆ ಭಾಷೆಗಳ ಸಾಹಿತ್ಯ, ಇತಿಹಾಸ, ಸಮಾಜಶಾಸ್ತ್ರ, ಎಲ್ಲವನ್ನೂ ಸಾಧನ ಮಾಡಿಕೊಳ್ಳುತ್ತೀರಲ್ಲವೆ, ಹಾಗೆ. ಪರಸ್ಪರ ಸಂಬಂಧ ಏರ್ಪಡುವುದು ಈ ರೀತಿಯಲ್ಲಿ.

**ಹೊ** : ನಿಮ್ಮ ಶಿಸ್ತಿನಲ್ಲಿ ಕ್ಲೋನಿಂಗ್, ಜೆನೆಟಿಕ್ ಮಾರ್ಪಾಡು, ಮುಖ್ಯವಾದ ವಿಷಯಗಳಾಗಿವೆ. ಕೃಷಿ ಕ್ಷೇತ್ರದಲ್ಲಿ ಇದರ ಅಳವಡಿಕೆ



ಸಾಧುವಲ್ಲ, ಅಪಾಯಕಾರಿ, ಅದು ಕೂಡದು, ಎಂಬ ಮಾತುಗಳಿವೆ, ಅದನ್ನು ಕುರಿತು ಹೇಳುತ್ತೀರಾ ?

**ಬ** : ನನ್ನ ಸಂಶೋಧನೆಯ ನಿಟ್ಟಿನಲ್ಲಿ ಉತ್ತರಿಸುವುದಕ್ಕಿಂತ ನಾನು ಅಲ್ಲಲ್ಲಿ ಕೇಳಿದ್ದು, ಓದಿದ್ದು, *ಕರೆಂಟ್ ಸೈನ್ಸ್*‌ಗಾಗಿ ಲೇಖನಗಳನ್ನು ಪರಿಶೀಲಿಸಿದ್ದು, ಇವುಗಳ ಹಿನ್ನೆಲೆಯಲ್ಲಿ ಉತ್ತರಿಸುತ್ತೇನೆ. ಬಯೋ ಟೆಕ್ನಾಲಜಿಗೆ ಇಂದು ಮಹತ್ವ ಬಂದಿರುವುದು "ರೀ ಕಾಂಬಿನೆಂಟ್ ಡಿಎನ್‌ಎ ಕ್ರಾಂತಿ"ಯಿಂದಾಗಿ. ಹಾಗೆಂದರೇನು ? ಅದನ್ನು ತಿಳಿದರೆ ಇಡೀ ಪ್ರಶ್ನೆಯನ್ನು ತರ್ಕಬದ್ಧವಾಗಿ ವಿಶ್ಲೇಷಣೆ ಮಾಡುವುದು ಸಾಧ್ಯ. ಇಂದಿನ ತಂತ್ರಜ್ಞಾನದಿಂದಾಗಿ ಒಂದು ಜೀವಿಯ ಜೀನನ್ನು ತೆಗೆದು ಇನ್ನೊಂದು ಜೀವಿಯೊಳಕ್ಕೆ ಇಡಬಹುದು. ಹಾಗೆ ಮಾಡಿದಾಗ ಆ ಜೀವಿಯಲ್ಲಿ ಮಾರ್ಪಾಡು ಉಂಟಾಗುತ್ತದೆ. ಅದರ ಲಕ್ಷಣ ಬದಲಾಗುತ್ತದೆ. ಅದು ಒಳ್ಳೆಯ ಲಕ್ಷಣವಾದರೆ ಜೀವಿಗೆ ಹೊಸ ಸ್ವರೂಪ ಬರುತ್ತದೆ. ಉದಾಹರಣೆಗೆ, ರೋಗವನ್ನು ನಿರೋಧಿಸುವ ಲಕ್ಷಣ ಒಂದು ಸಸ್ಯಕ್ಕೆ ಬರಲು ಸಾಧ್ಯ. ಬೆಳೆ ಹಾಳಾಗುವುದು, ಕೀಟಬಾಧೆ, ಇವನ್ನು ತಪ್ಪಿಸಿದಂತಾಗುತ್ತದೆ. ರಾಸಾಯನಿಕಗಳನ್ನು ಸಿಂಪಡಿಸಿ ಪರಿಸರಕ್ಕೆ ಉಂಟುಮಾಡುವ ಮಾಲಿನ್ಯವನ್ನು ತಡೆಗಟ್ಟಬಹುದು. ರೀಕಾಂಬಿನೆಂಟ್

ಜಿಎಂ ತಂತ್ರಗಳಿಂದ ಸ್ವಾದ, ಆಹಾರ, ಎಲ್ಲಾ ಬದಲಾಗುತ್ತವೆ. ಅವು ಅಪಾಯಕಾರವೇ ಎಂಬುದು ಪ್ರಶ್ನೆ. ಸದ್ಯದಲ್ಲಿ ಲಭ್ಯವಿರುವ ವೈಜ್ಞಾನಿಕ ಪ್ರಮಾಣದ ಪ್ರಕಾರ ಅಂತಹ ಅಪಾಯವೇನೂ ಇಲ್ಲ.

**ಹೊ** : ಎಂತಹ ಅಪಾಯದ ಬಗ್ಗೆ ಭೀತಿಯಿದೆ ? ವಿರೋಧಕ್ಕೆ ಕಾರಣವೇನಿರಬಹುದು ?

ಬ : ಒಂದು, ವಿಷ ತುಂಬಿಕೊಂಡು ಬಿಡುತ್ತದೆಂಬುದು; ಇನ್ನೊಂದು, ಹೀಗೆ ವರ್ಗಾಯಿಸಲಾದ ಜೀನ್‌ನಿಂದಾಗಿ ಅಕ್ಕಪಕ್ಕದ ಹೊಲಗಳಲ್ಲಿ ಬೆಳೆ ಕಲುಷಿತವಾಗಬಹುದು. ಹಿಂದೆ ಈ ಬಗ್ಗೆ ವಿವಾದಗಳೆದ್ದಾಗ ಜೀನ್ ಮಾರ್ಪಾಟಾದ ಸಸ್ಯಕ್ಕೆ ಚಿಟ್ಟೆ ರಾಜ ಹೋದರೆ ಅದರ ಸಂತತಿ ನಾಶವಾಗುತ್ತದೆಂದು ಹೇಳಲಾಗಿತ್ತು. ಜಿಎಂ ಆಲೂಗಡ್ಡೆಯಿಂದ ಇಲಿಗೆ ವಿಷ ತುಂಬಿಕೊಂಡಿತೆಂದೂ ಹೇಳುತ್ತಿದ್ದರು. ಪ್ರಯೋಗಗಳು ಇದೆಲ್ಲ ನಿಜವಲ್ಲವೆಂದು ತೋರಿಸಿದುವು. ನಾವು ಎರಡೂ ಕಡೆಯಿಂದ ಸಮಸ್ಯೆಯನ್ನು ನೋಡಬೇಕು. ವ್ಯಾಪಾರೀ ಆಸಕ್ತಿಗಳು ಈ ಹೊಸ ತಂತ್ರಜ್ಞಾನಗಳನ್ನು ಬಳಸಲು ಮೂಲಕಾರಣ. ಜನಹಿತವೇ ಅವರ ಉದ್ದೇಶವಾಗಿರುವುದಿಲ್ಲ.

**ಹೊ** : ಮೊನ್ಸಾಂಟೋ ಕಂಪನಿಯನ್ನು ಈ ಪಟ್ಟಿಗೆ ಸೇರಿಸುತ್ತೀರಾ ?

ಬ : ಎಲ್ಲ ವ್ಯಾಪಾರೀ ಆಸಕ್ತಿಗಳನ್ನೂ ಸೇರಿಸುತ್ತೇನೆ. ಅವರ ಉದ್ದೇಶ ಲಾಭ ಗಳಿಕೆ. ಷೇರುದಾರರಿಗೆ ಲಾಭ ಗಳಿಸಿಕೊಡಬೇಕು. ಕಾನೂನಿಗೆ ಹೊರತಲ್ಲದ ಏನನ್ನು ಬೇಕಾದರೂ ಮಾಡಲು ಅವರು ಸಿದ್ಧರಿರುತ್ತಾರೆ. ಆದ್ದರಿಂದ ಕಾನೂನು ಮಾಡುವವರಿಗೆ, ಅಂದರೆ ಸರ್ಕಾರಕ್ಕೆ, ಜನರನ್ನು ರಕ್ಷಿಸುವ ಜವಾಬ್ದಾರಿಯಿದೆ. ಪ್ರತಿಯೊಂದನ್ನೂ ನಿರ್ಬಂಧಿಸಲು ಒಂದು ಕ್ರಮವಿದೆ. ಔಷಧಿ, ಕೃಷಿ, ಎಲ್ಲದರಲ್ಲೂ ಅನುಕೂಲಕರವಾದ್ದನ್ನು ಸರ್ಕಾರ ಬೆಂಬಲಿಸಬೇಕು.

**ಹೊ** : ಯಾವುದು ಅನುಕೂಲಕರ ಎಂಬುದನ್ನು ನೀವು, ವಿಜ್ಞಾನಿಗಳು, ಹೇಳಬೇಕಲ್ಲವೆ ? ಆಗ ನಿರ್ಬಂಧದ ಕ್ರಮಗಳನ್ನು ಜನರ ಪರವಾಗಿ ಮಾಡಲು ಸಾಧ್ಯ ?

ಬ : ವೈಜ್ಞಾನಿಕ ಪ್ರಯೋಗಗಳು ಇದರಲ್ಲಿ ಭೀತಿಗೆ ಯಾವ ಕಾರಣವನ್ನೂ ಕಂಡಿಲ್ಲ. ಆದರೆ, ಭೀತಿಯನ್ನು ಗಂಭೀರವಾಗಿ ಪರಿಗಣಿಸಬೇಕು. ಆಗ ವೈಜ್ಞಾನಿಕ ಪ್ರಮಾಣ ದೊರೆಯುತ್ತದೆ. ಪ್ರಮಾಣವನ್ನು ಯಾವಾಗಲೂ ಮುಚ್ಚುಮರೆಯಿಲ್ಲದೆ ಜನರ ಮುಂದಿಡಬೇಕು; ಅಪಾಯವಿದ್ದರೂ ಅಷ್ಟೆ ಇಲ್ಲದಿದ್ದರೂ ಅಷ್ಟೆ. ಆಗ ಜನರಿಗೆ ಎಲ್ಲಾ ಮನದಟ್ಟಾಗುತ್ತದೆ. ಇನ್ನೊಂದು ಮುಖ್ಯಾಂಶವಿದೆ : ಜೀನ್ ಮಾರ್ಪಾಡಿನಿಂದ ಬರುವ ಬೆಳೆ ಆರ್ಥಿಕವಾಗಿ ರೈತರಿಗೆ ಹೆಚ್ಚಿನ ಅನುಕೂಲ ಕಲ್ಪಿಸಿಕೊಡುತ್ತದೆಂಬುದಕ್ಕೆ ಬಲವಾದ ಆಧಾರಗಳೇನೂ ಇಲ್ಲ. ಹೀಗಿರುವಾಗ ಅವರು ಏನು ತೀರ್ಮಾನ ಕೈಗೊಳ್ಳಬೇಕು ? ಮುಂದಿನ ಪ್ರಶ್ನೆ : ಅದರ ಕಾರ್ಯಸಾಧುತ್ವ. ಜಿಎಂ ಬೆಳೆಯಲ್ಲಿ ಎಷ್ಟರಮಟ್ಟಿಗೆ ಇಳುವರಿ ಇರುತ್ತದೆ ? ಇದು ಒಂದು ವರ್ಷದ ಪ್ರಶ್ನೆಯಲ್ಲ. ಅದು ಸತತವಾಗಿ ಅದೇ ಮಟ್ಟದಲ್ಲಿ ಇರುತ್ತದೆಯೆ ಅಥವಾ ಮುಂದಿನ ವರ್ಷಗಳಲ್ಲಿ ಆಘಾತಕರವಾಗಿ ಕಡಿಮೆಯಾಗಿಬಿಡುತ್ತದೆಯೆ ?

**ಹೊ** : ಅದಕ್ಕೂ ಉತ್ತರ ನಿಮ್ಮಿಂದಲೇ ಬರಬೇಕಲ್ಲವೆ ? ಒಬ್ಬ ರಾಜಕಾರಣಿ ಹೇಗೆ ತಾನೆ ಅದನ್ನು ತೀರ್ಮಾನಿಸಬಲ್ಲ ?

ಬ : ಅದು ಸರಿ, ಆದರೆ ಪ್ರಶ್ನೆಗಳನ್ನೆತ್ತುವ ಬುದ್ಧಿವಂತರು ವಿಜ್ಞಾನಿಗಳಿಗೆ ಇಂತಹ ಸಂಶೋಧನೆ ಕೈಗೊಳ್ಳಿರೆಂದು ಒತ್ತಾಯಿಸಬೇಕು. ಇಲ್ಲದಿದ್ದರೆ ವಿಜ್ಞಾನಿಗಳು ಸ್ವತಂತ್ರವಾಗಿ ಅದನ್ನು ಕೈಗೆತ್ತಿಕೊಳ್ಳದಿರಬಹುದು. ನಿರ್ದಿಷ್ಟವಾಗಿ ಅವರಿಗೆ ಜವಾಬ್ದಾರಿ ಹೊರಿಸಬೇಕು. ಉದಾಹರಣೆಗೆ, ಔಷಧಿ ಕ್ಷೇತ್ರ ನೋಡಿ, ಕ್ಲಿಷ್ಟಕರ ಸಮಸ್ಯೆಗಳಿವೆ, ಆದರೆ ಸಾರ್ವಜನಿಕ ಒತ್ತಡವೇ ಇಲ್ಲ. ಈಗಿರುವುದಕ್ಕಿಂತ ಹೆಚ್ಚಿನ ನಿರ್ಬಂಧದ ಅಗತ್ಯವಿದೆ. ಆದರೆ ಜನಕ್ಕೆ ಎಂಥದೋ ಮಾತ್ರೆ ಸಿಕ್ಕಿದರೆ ಮುಗಿಯಿತು. ಅವರು ಬೇರೆ ಪ್ರಶ್ನೆ ಕೇಳುವುದಿಲ್ಲ. ಇತ್ತೀಚೆಗೆ ಒಂದು ಔಷಧಿಯನ್ನು ಮಾರುಕಟ್ಟೆಯಿಂದ ಹಿಂತೆಗೆದುಕೊಳ್ಳಬೇಕಾಯಿತು : ಯಾವುದೋ ದೀಪನ-ನಿರೋಧಕ ಮದ್ದು. ಅದರ ಬಗ್ಗೆ ಜನರು ಗುಲ್ಲೆಬ್ಬಿಸಲಿಲ್ಲ, ಅವರಿಗೆ ಅದು ತಿಳಿಯದು. ಜಿಎಂ ಬೆಳೆಗಳಿಗಿಂತ ಹೆಚ್ಚು ವಿಷವನ್ನು ಹಬ್ಬಿಸುವ ಸಾಧ್ಯತೆ ಇವುಗಳಲ್ಲಿದೆ. ಔಷಧಿಗಳ ಕಾರ್ಯಸಾಧುತ್ವ ತಿಳಿಯುವುದು ಜಿಎಂ ಬೆಳೆಗಳ ಬಗ್ಗೆ ತಿಳಿಯುವುದಕ್ಕಿಂತ ಸುಲಭ.

**ಹೊ** : ಅದು ಹೇಗೆ ?

ಬ : ಬೆಳೆಗಳ ಬಗ್ಗೆ ದೀರ್ಘಕಾಲಾವಧಿಯಲ್ಲಿ ಮಾತ್ರ ರೈತರು ಸರಿಯಾದ ತಿಳಿವಳಿಕೆ ಹೊಂದಬಲ್ಲರು, ಎಲ್ಲೋ ಒಂದು ಚಿಕ್ಕ ಹೊಲದಲ್ಲಿ ಜಿಎಂ ಹತ್ತಿಯ ಬೆಳೆ ನೋಡುವುದರಿಂದ ಅಲ್ಲ.

**ಹೊ** : ಇದು ಬೇರೆ ವಿಷಯಗಳನ್ನು ವ್ಯಾಪಿಸಿದೆ. ನೀರಿನ ಮಾಲಿನ್ಯ ನೋಡಿ. ಯಾವನೋ ತಂದುಕೊಟ್ಟ, ಜನ ಅದನ್ನು ಕುಡಿದರು. ಅದರಲ್ಲಿ ಕೀಟನಾಶಕದ ಪ್ರಮಾಣ ಎಷ್ಟಿದೆಯೆಂಬುದನ್ನು ಪ್ರಶ್ನಿಸಲೇ ಇಲ್ಲ. ಶುದ್ಧ ನೀರು ಎಂಬುದೊಂದಿದೆ ಎಂಬುದನ್ನೇ ಜನ ಮರೆತುಬಿಟ್ಟಿದ್ದಾರೋ ಎನಿಸುತ್ತದೆ.

ಬ : ನೀರಿನ ಪ್ರಶ್ನೆ ಸ್ವಾರಸ್ಯಕರವಾದ್ದು. ಶುದ್ಧವಾದ್ದು ಸಿಗುವುದಿಲ್ಲವೆಂಬುದನ್ನು ಸಾಮಾನ್ಯವಾಗಿ ಒಪ್ಪಿಕೊಂಡಂತೆ ಕಾಣುತ್ತದೆ. ಚರ್ಚೆ ಇರುವುದು ಕಲುಷವನ್ನು ಎಷ್ಟು ಕಡಿಮೆ ಪ್ರಮಾಣಕ್ಕೆ ತರಬಹುದೆಂದು, ಅಷ್ಟೆ. ಒಂದು ಸರ್ಕಾರೇತರ ಸಂಸ್ಥೆ ಈ ಪ್ರಶ್ನೆಯನ್ನು ಸಾರ್ವಜನಿಕರ ಗಮನಕ್ಕೆ ತಂದಿತು. ನೀರನ್ನು ಪ್ರಯೋಗಕ್ಕೆ ಒಡ್ಡಿ ವಿಶ್ಲೇಷಣೆಗಳ ಪಟ್ಟಿ ನೀಡಲಾಯಿತು. ವೈಜ್ಞಾನಿಕ ಪದ್ಧತಿ ಇದ್ದುದರಿಂದ ಇದಕ್ಕೆ ಮಾನ್ಯತೆ ಇತ್ತು. ತಂಪು ಪಾನೀಯಗಳ ತಯಾರಕರ ಮೇಲೆ ಒತ್ತಡ ಹೇರಲು ಇದು ಸಹಾಯ ಮಾಡಿತು. ನೀರಿನಲ್ಲಿ ಸ್ವಲ್ಪ ಪ್ರಮಾಣದ ವಿಷವನ್ನು ನಿವಾರಿಸಲಾಗುವುದಿಲ್ಲವೆಂಬುದನ್ನು ಅಂಗೀಕರಿಸುವುದೇತಕ್ಕೆ ? ನೀರು ನಮಗೆ ಬೇಕಾದ್ದರಿಂದ. ತಂಪು ಪಾನೀಯ ಹಾಗಲ್ಲ, ಅದಿಲ್ಲದೆಯೂ ನಾವು ಬದುಕಬಲ್ಲೆವು. ಹಾಗಿರುವಾಗ ಅದರಲ್ಲೇಕೆ ವಿಷದ ಪ್ರಮಾಣವನ್ನು ಒಪ್ಪಬೇಕು !

**ಹೊ** : ಕ್ಲೋನಿಂಗ್ ವಿಷಯಕ್ಕೆ ಬರೋಣ. ಅದರಿಂದ ಮಾರ್ಪಡಿಸುವಿಕೆ ಹೇಗುಂಟಾಗುತ್ತದೆ ?

ಬ : ಅದು ಬೇರೆ ತರಹದ ಸಮಸ್ಯೆ. ಇಲ್ಲಿ ಇಡೀ ಜೀವಿಯ ಕ್ಲೋನಿಂಗ್ ನಡೆಯುತ್ತದೆ, ಯಾವುದೋ ಒಂದು ಭಾಗದ್ದಲ್ಲ. ಸಾಮಾನ್ಯವಾಗಿ ಪ್ರಾಣಿಗಳ ಹಾಗೂ ಮನುಷ್ಯರ ಬಗ್ಗೆ ಇದರ ಚಿಂತನೆಯಿದೆ. ಪ್ರಾಣಿಗಳಲ್ಲಾದರೆ ಅದು ಅನುಕೂಲಕರವೆಂಬ ಭಾವನೆ ಇದೆ, ಮನುಷ್ಯರಲ್ಲಾದರೆ ಅನೈತಿಕ ಎನ್ನುತ್ತಾರೆ ! ನೈತಿಕತೆಯ ವಕ್ತಾರರು ಮತ್ತು ಇತರರು ಸ್ವಲ್ಪ ಸ್ವ-ವಿಮರ್ಶೆ ಮಾಡಿಕೊಳ್ಳಬೇಕು. ಪ್ರಾಣಿಗಳಿಗೇಕೆ ಮನುಷ್ಯರಿಗಿಂತ ಭಿನ್ನ ನೆಲೆಯಿರಬೇಕು ? ಪ್ರಾಣಿಗಳ ವಿಕಾಸ ಕ್ರಮದಲ್ಲಿ ಮಧ್ಯಪ್ರವೇಶ ಸರಿಯೆಂದಾದರೆ ಮನುಷ್ಯರಲ್ಲಿ ಏಕಲ್ಲ ? ಪ್ರಾಣಿಗಳಲ್ಲಿ ಮತ್ತು ಸಸ್ಯಗಳಲ್ಲಿ ಅದು ಸರಿಯೆ ? ಎಲ್ಲವನ್ನೂ ಪ್ರಕೃತಿಗೆ ಬಿಡುವುದೇ ಒಳ್ಳೆಯದು. ಆದರೆ ಏನೋ ಮಹತ್ತಾದ ಒಳಿತಿಗಾಗಿ ಮಧ್ಯಪ್ರವೇಶ ಎನ್ನುವುದಾದರೆ, ಅದು ಮನುಷ್ಯರಿಗೂ ಅನ್ವಯಿಸುತ್ತದೆ. ಅವರನ್ನೂ ಸುಧಾರಿಸಬಹುದಲ್ಲ ! ಇಲ್ಲಿ ನಾವು ಜೀವಶಾಸ್ತ್ರದ ಪರಿಧಿಯನ್ನು ಮೀರಿ ಮಾನವನು ಪರಿಸರವನ್ನು ಹತೋಟಿಗೆ ತೆಗೆದುಕೊಳ್ಳುವ ಹಂತವನ್ನು ಮುಟ್ಟಿಬಿಡುತ್ತೇವೆ.

**ಹೊ** : ನಾಗರಿಕತೆಯ ವಿಕಾಸದಲ್ಲಿ ಮಾನವ ಅದನ್ನು ಮಾಡುತ್ತಲೇ ಬಂದಿದ್ದಾನಲ್ಲವೆ ?

ಬ : ಇರಬಹುದು, ಆದರೆ ಮಾನವರಲ್ಲಿ ಕ್ಲೋನಿಂಗ್ ಸದ್ಯಕ್ಕಂತೂ ತಾಂತ್ರಿಕವಾಗಿ ಸಾಧ್ಯವಿಲ್ಲ. ಕ್ಲೋನಿಂಗ್‌ನಲ್ಲಿ ತಪ್ಪಿಲ್ಲವೆಂದು ಸಂಶೋಧನೆ ಮಾಡತೊಡಗಿದರೆ ಮುಂದೊಮ್ಮೆ ಸಾಧ್ಯವಾಗಬಹುದು.

**ಹೊ** : ಅದಕ್ಕೆ ಮುಂಚೆ ಅದರ ಅವಶ್ಯಕತೆಯ ಬಗ್ಗೆ ನಿರ್ಧಾರವಾಗಬೇಕಲ್ಲವೆ ?

ಬ : ಅದೇನೋ ನನಗೆ ತಿಳಿಯದು.

**ಹೊ** : ಈಗ ಬಾಂಬ್ ಪ್ರಶ್ನೆ ನೋಡಿ. ಅದು ಬೇಕಿತ್ತೆ ? ಅದನ್ನು ಮಾಡಲು ವಿಜ್ಞಾನಿಗೆ ಸಾಮರ್ಥ್ಯವಿದೆಯೆಂಬ ಕಾರಣಕ್ಕಾಗಿ ಅದನ್ನು ಮಾಡಿಬಿಡಬೇಕೆ ?

ಬ : ಅವಶ್ಯಕತೆಯೆಂಬುದು ಒಂದೊಂದು ಸಂದರ್ಭದಲ್ಲಿ ಒಬ್ಬೊಬ್ಬರಿಗೂ ಬೇರೆಯಾಗಿ ಕಾಣುತ್ತದೆ. ೧೯೪೫ರಲ್ಲಿ ಯುದ್ಧ ಗೆಲ್ಲಲು ಬಾಂಬ್ ಬೇಕಿತ್ತು ಎಂದು ಕೆಲವರು ನಿರ್ಧರಿಸಿದರು. ಕ್ಲೋನಿಂಗ್ ಎಂಬುದು ಸ್ಟೆಮ್ ಸೆಲ್‌ಗಳಿಂದ ಹೊಸ ಅಂಗಾಂಗಗಳನ್ನು ನಿರ್ಮಿಸುವ ವಿಧಾನ. ಅದರಲ್ಲಿ ಮರುಜೋಡಣೆಯ ಪ್ರಶ್ನೆ ಇಲ್ಲ. ಸೆಲ್‌ಗಳನ್ನು ಔಷಧ ಸಾಮಗ್ರಿಯಂತೆ ಬೆಳೆಸುವುದು; ಒಂದು ಕಡೆ ಅದನ್ನು ಹುಟ್ಟು ಹಾಕಿ ಅಲ್ಲೇ ಸಹಜ ಸೆಲ್‌ಗಳಂತೆ ವೃದ್ಧಿಗೊಳಿಸುವುದು, ಅದು ಕ್ಲೋನಿಂಗ್. ಈ ರೀತಿಯ ಸಂಶೋಧನೆಗೆ ಬೇಡಿಕೆ ಬೆಳೆಯುವ ಸಾಧ್ಯತೆಯುಂಟು.

**ಹೊ** : ತಿಳಿವಳಿಕೆ ಇಲ್ಲದವರ ಪ್ರಶ್ನೆ ಇದೆಂದು ಬೇಕಾದರೆ ಗುರುತಿಸಿ ; ಮೊದಲಿಗೆ ಸ್ಟೆಮ್ ಸೆಲ್ ಎಂದರೇನು ?

ಬ : ಅವು ಪ್ರೋಜೆನಿಟರ್ ಅಥವಾ ಪ್ರಿಕರ್ಸರ್ ಸೆಲ್‌ಗಳು. ಜನ್ಮದಾತ ಸೆಲ್‌ಗಳೆಂದು ಬೇಕಾದರೆ ಅರ್ಥಮಾಡಿಕೊಳ್ಳಿ. ಅವು ಬೇರೆಬೇರೆ ಸೆಲ್‌ಗಳಾಗಿ ಪ್ರತ್ಯೇಕಗೊಳ್ಳುತ್ತವೆ. ಉದಾಹರಣೆಗೆ, ಫಲವತ್ತಾದ ಅಂಡವೊಂದಿದೆ ಎನ್ನಿ, ಅದರಲ್ಲಿ ನಿಮ್ಮ ಇಡೀ ಜನ್ಮ ಕುಂಡಲಿ ಇದೆ. ನೀವು ಹೇಗೆ ಬೆಳೆಯುತ್ತೀರೆಂಬುದು ಅದರಲ್ಲಡಗಿದೆ. ಈ ಸೆಲ್‌ಗಳು ದ್ವಿಗುಣಗೊಳ್ಳುತ್ತಾ ಹೋಗುತ್ತವೆ. ಭ್ರೂಣದ ರಚನೆಯಾಗುವುದು ಹೀಗೆ. ಈ ಪ್ರಕ್ರಿಯೆಯಲ್ಲಿ ವಿಭಜಿತ ಸೆಲ್‌ಗಳು ತಮ್ಮ ಜೀನ್ ಲಕ್ಷಣವನ್ನು ಕಳೆದುಕೊಳ್ಳುವುದಿಲ್ಲ. ಒಂದು ಪಿತ್ತ ಜನಕಾಂಗ ಸೆಲ್, ಇನ್ನೊಂದು ಮೆದುಳಿನ ಸೆಲ್, ಇತ್ಯಾದಿ; ಆದರೆ ಜೀನ್ ಸಾಮಗ್ರಿ ಯಾವಾಗಲೂ ಅಭಿವ್ಯಕ್ತವಾಗುತ್ತಲೇ ಇರುತ್ತದೆ. ಕೆಲವು ಜೀನ್‌ಗಳು ಸುಪ್ತ, ಇನ್ನು ಕೆಲವು ವ್ಯಕ್ತ. ಒಟ್ಟಿನಲ್ಲಿ ಜಿನೋಮ್‌ನ ಯಾವ ಭಾಗ ವ್ಯಕ್ತ ಅಥವಾ ಸುಪ್ತ ಎಂಬುದನ್ನು ತಿಳಿದುಕೊಳ್ಳಲು ಬಹಳ ಸೂಕ್ಷ್ಮವಾದ ವಿಧಾನಗಳಿವೆ. ಕ್ಲೋನಿಂಗ್‌ನಲ್ಲಿ ಒಂದು ಸೆಲ್‌ನ ಡಿಎನ್‌ಎ ತೆಗೆದು ಡಿಎನ್‌ಎ ತೆಗೆಯಲ್ಪಟ್ಟ ಅಂಡದೊಳಕ್ಕೆ ಅದನ್ನಿಡಲಾಗುತ್ತದೆ. ರಕ್ತದ ಸೆಲ್ ತೆಗೆದುಕೊಳ್ಳಿ : ಮಿದುಳಿನಲ್ಲಿ ನ್ಯೂರಾನ್‌ಗಳಿರುತ್ತವೆ. ಎಳೆ ವಯಸ್ಸಿನ ನಂತರ ಅವು ಕ್ಷೀಣಿಸುತ್ತಿರುತ್ತವೆ, ಆದ್ದರಿಂದ ಮಿದುಳಿನ ಕಾರ್ಯಶಕ್ತಿ ಕುಗ್ಗುತ್ತದೆ. ಕ್ರಮೇಣ ಪಾರ್ಕಿನ್‌ಸನ್, ಆಲ್‌ಝೈಮರ್, ಮುಂತಾದ ಖಾಯಿಲೆಗಳೂ ಬರ ಬಹುದು. ಈಗಿನ ಆಶಯವೇನೆಂದರೆ ಸ್ಟೆಮ್ ಸೆಲ್ ಗಳಿಂದ ಅಂತಹ ಹಾಗೂ ಇತರ ಖಾಯಿಲೆಗಳನ್ನು ನಿವಾರಿಸಬಹುದು, ಎಂದು. ಮೂಳೆಯ ಮಜ್ಜೆಯನ್ನು ಮರುಜೋಡಣೆ ಮಾಡಿದಾಗ ಆಗುವುದೇನು ? ದಾನಿಯ ರಕ್ತದ ಸೆಲ್‌ಗಳು ಆಗಿನ್ನೂ ಪ್ರತ್ಯೇಕ ಲಕ್ಷಣಗಳನ್ನು ಹೊಂದಿರುವುದಿಲ್ಲ. ಆಮೇಲೆ ಅವು ಕೆಂಪು, ಬಿಳಿ, ಮುಂತಾಗಿ ರಕ್ತಕಣಗಳಾಗುತ್ತವೆ. ಸ್ಟೆಮ್ ಸೆಲ್ ಸಂಶೋಧನೆಯಿಂದ ಇಂಥವುಗಳಿಗೆಲ್ಲಾ ಪರಿಹಾರ ದೊರೆಯುವಂತಾಗಬಹುದು.



**ಹೊ** : ಹಾಗಾದರೆ ಸಂಶೋಧನೆಗೇನಾದರೂ ಅಡ್ಡಿ ಇದೆಯೆ ?

ಬ : ನೈತಿಕತೆಯ ಪ್ರಶ್ನೆ. ಏಕೆಂದರೆ ಸ್ಟೆಮ್ ಸೆಲ್ ಸಂಶೋಧನೆ ಆರಂಭವಾಗುವುದು ಗರ್ಭ ಮತ್ತು ಭ್ರೂಣಗಳಿಂದ. ಭ್ರೂಣದ ಸ್ಟೆಮ್ ಸೆಲ್ ಸಂಶೋಧನೆಗೆ ಬಹುಮುಖ್ಯ. ಗರ್ಭಪಾತದೊಡನೆ ಇಂತಹ ಸಂಶೋಧನೆ ಬಹುಬೇಗ ಸಂಬಂಧ ಬೆಳೆಸಿಕೊಳ್ಳುತ್ತದೆ. ಬುಷ್‌ನಂತಹವನು ಸ್ಟೆಮ್ ಸೆಲ್ ಸಂಶೋಧನೆಯನ್ನು ವಿರೋಧಿಸುವುದು ಇದರಿಂದ ಎನ್ನುತ್ತಾರೆ.

**ಹೊ** : ಆತ ಗುಟ್ಟಾಗಿ ಸಂಶೋಧನೆಗೆ ಬೆಂಬಲ ನೀಡುತ್ತಲೂ ಇರಬಹುದು.

ಬ : ವಿರೋಧಗಳು ಅಲ್ಪಕಾಲೀನ ಎನಿಸುತ್ತದೆ, ಏಕೆಂದರೆ ಅದರ ಕೊಡುಗೆ ಅಪಾರವಾದ್ದು. ಸಾಕಷ್ಟು ಒತ್ತಡ ಬಂದು ಸಂಶೋಧನೆ ತೀವ್ರಗೊಳ್ಳಬಹುದು. ಯಾವ ದೇಶದ ಸಂವಿಧಾನವೂ ಅದಕ್ಕೆ ಅಡ್ಡಿ ತರಲಾರದೇನೋ!

**ಹೊ** : ಕ್ಲೋನಿಂಗ್ ಎಂದರೆ ಹೊಸ ಮಾನವ ಜನಾಂಗವೊಂದರ ನಿರ್ಮಾಣವಲ್ಲ ಎನ್ನುತ್ತೀರಾ ?

ಬ : ಅಲ್ಲವೆಂದೇ ನನ್ನ ಅನಿಸಿಕೆ. ಇದೆಲ್ಲಾ ಕಾದಂಬರಿಗಳಿಗೆ ಯೋಗ್ಯವಾದ ಚರ್ಚೆ. ವಿಜ್ಞಾನದ ಕ್ಷೇತ್ರದಲ್ಲಿ ಅಂತಹ ತುಮುಲ ಯಾರನ್ನೂ ಬಾಧಿಸುತ್ತಿಲ್ಲ.

**ಹೊ** : ಶರೀರದ ಅಂಗಾಂಗಗಳನ್ನು ಪ್ರಯೋಗಶಾಲೆಯಲ್ಲಿ ನಿರ್ಮಿಸುವ ಸಾಧ್ಯತೆ ಇದೆಯೇ ? ಉದಾಹರಣೆಗೆ, ಪಿತ್ತಜನಕಾಂಗ...

ಬ : ಅಂಗಾಂಗ ಗೊತ್ತಿಲ್ಲ, ಆದರೆ ಸೆಲ್‌ಜಾಲ ಅಥವಾ ಟಿಶ್ಯೂ (ಅಂಗಾಂಶ) ನಿರ್ಮಾಣದ ಬಗ್ಗೆ ಬೇಕಾದಷ್ಟು ಪ್ರಯೋಗಗಳು ನಡೆಯುತ್ತಿವೆ. ಹಲವು ಕಂಪೆನಿಗಳಿಗೆ ಇದರಲ್ಲಿ ಆಸಕ್ತಿಯುಂಟು.

**ಹೊ** : ವಿಶೇಷವಾಗಿ ಚರ್ಮಕ್ಕೆ ಸಂಬಂಧಿಸಿದ ಹಾಗೆ, ಅಲ್ಲವೆ ? ಈಗ ಇನ್ನೊಂದು ಪ್ರಶ್ನೆಗೆ ಹೋಗೋಣ. ವೈಜ್ಞಾನಿಕ ಸಂಶೋಧನೆಗೆ ನಮ್ಮ ದೇಶದಲ್ಲಿ ಸಂಘಟನೆ ಯಾವ ಸ್ವರೂಪದ್ದು ?

ಬ : ಭಾರತೀಯ ವಿಜ್ಞಾನ ಸಂಸ್ಥೆಯು ಬೋಧನೆ ಮತ್ತು ಸಂಶೋಧನೆ ಎರಡನ್ನೂ ಮಾಡುತ್ತದೆ. ಸಂಶೋಧನೆ ಉತ್ತಮಮಟ್ಟದ್ದಾಗಿರ ಬೇಕು. ವಿಶ್ವವಿದ್ಯಾನಿಲಯಗಳಲ್ಲಿ ಬೋಧನೆಗೆ ಆದ್ಯತೆ, ಆದರೆ ಸಂಶೋಧನೆಯೂ ಪ್ರಮುಖವೇ. ನಮ್ಮ ಸಂಸ್ಥೆಯ ವಿಜ್ಞಾನಿಗಳು ತಮಗೆ ಆಸಕ್ತಿ ಇರುವ ವಿಷಯಗಳನ್ನು ಆಯ್ದುಕೊಂಡು ಸಂಶೋಧನೆಯಲ್ಲಿ ನಿರತರಾಗುತ್ತಾರೆ. ಇಂಥದ್ದನ್ನು ಮಾಡೆಂದು ಅವರಿಗೆ ಹೇಳುವುದಿಲ್ಲ. ಇದರಿಂದಾಗಿ ಮೂಲಭೂತ ಸಂಶೋಧನೆಗೆ ಒತ್ತು ಕೊಟ್ಟಂತಾಗು ತ್ತದೆ. ಕೇಂದ್ರದ ಸಿ.ಎಸ್.ಐ.ಆರ್. (ವೈಜ್ಞಾನಿಕ ಮತ್ತು ಔದ್ಯಮಿಕ ಸಂಶೋಧನಾ ಸಮಿತಿ) ಅಡಿಯಲ್ಲಿ ರಾಷ್ಟ್ರೀಯ ಸಂಶೋಧನಾ ಪ್ರಯೋಗ ಶಾಲೆಗಳಿವೆ. ಪರಮಾಣು, ಕೃಷಿ, ಗಣಿಗಾರಿಕೆ ಇತ್ಯಾದಿಗಳಿಗೆ ಆನ್ವಯಿಕವಾದ ಸಂಶೋಧನೆ ಅಲ್ಲಿ ನಡೆಯುತ್ತದೆ. ಹಾಗೆ ನೋಡಿದರೆ ಆನ್ವಯಿಕ ಸಂಶೋಧನೆಯೆಂಬುದು ಎಲ್ಲೂ ಇಲ್ಲ. ಇಂಥದ್ದನ್ನು ಪಡೆಯಲು ಸಂಶೋಧನೆ ಮಾಡುತ್ತೇನೆನ್ನುವುದು ವಿಜ್ಞಾನಿಗೆ ಆಗಿಬರುವುದಿಲ್ಲ. ಸಂಶೋಧನೆಯ ನಂತರ ಅದನ್ನು ಅನ್ವಯಿಸಿಕೊಳ್ಳುವುದು, ಬಿಡುವುದು, ಎಂಬ ಮಾತು, ಅಷ್ಟೆ. ವಿಜ್ಞಾನ - ತಂತ್ರಜ್ಞಾನಗಳನ್ನು ತಿಳಿದವರಿಗೆ ನಿರ್ದಿಷ್ಟ ಪರಿಹಾರಗಳನ್ನು ನೀಡಬೇಕೆಂದು ಸಮಸ್ಯೆ ಅವರ ಮುಂದಿಡಬೇಕು. ಹೀಗೆ ಮಾಡಲಾಗುತ್ತಿಲ್ಲವೆಂಬುದೇ ನಮ್ಮ ನ್ಯೂನತೆ. ತೆಂಗಿನ ಗಿಡಕ್ಕೆ ನುಸಿಪೀಡೆ ತಗುಲಿದ್ದನ್ನು ತೆಗೆದುಕೊಳ್ಳಿ. ಅದು ಬರುವ ಮೊದಲೇ ಸಂಶೋಧನೆ ಮಾಡಿ ಅದನ್ನು ತಡೆಗಟ್ಟುವುದು ಹೇಗೆ? ಬಂದನಂತರ ಅದಕ್ಕೆ ಗಮನ ನೀಡಬೇಕು. ಈಗ ಸಿ.ಎಸ್.ಐ.ಆರ್. ಹಮ್ಮಿಕೊಂಡಿರುವ ಒಂದು ಯೋಜನೆ 'ಹೊಸ ಶತಮಾನದ ತಂತ್ರಜ್ಞಾನ' ಎಂಬುದು. ಇಲ್ಲಿ ಸಮಸ್ಯೆಗಳನ್ನು ಗುರುತಿಸಿ ಹಲವು ಪ್ರಯೋಗಶಾಲೆಗಳಿಗೆ ಮತ್ತು ಸಂಶೋಧಕರಿಗೆ ಅದರ ಬಗ್ಗೆ ಅಧ್ಯಯನ ನಡೆಸಲು ಸೂಚಿಸಲಾಗುತ್ತದೆ. ಪ್ರಸ್ತುತ ನಾನೇ ಅಂತಹ ಒಂದು ಸಂಶೋಧನೆಯಲ್ಲಿ ತೊಡಗಿದ್ದೇನೆ. ಯೋಜನೆ ಇಲ್ಲದಿದ್ದರೆ ನಾನು ಅಂತಹ ಅಧ್ಯಯನಕ್ಕೆ ಕೈಹಾಕುತ್ತಿರಲಿಲ್ಲ. ಮದ್ರಾಸಿನಲ್ಲಿ ಕೇಂದ್ರ ಚರ್ಮ ಸಂಶೋಧನಾ ಕೇಂದ್ರವಿದೆ. ಅವರಿಗೆ ಒಂದು ಸಮಸ್ಯೆ ಇದೆ: ವಿಷಪೂರಿತ ಮತ್ತು ಅಪಾಯಕರ ರಾಸಾಯನಿಕಗಳನ್ನು ಬಿಟ್ಟು ಪರಿಸರಕ್ಕೆ ಹಾನಿಯಾಗದಂತೆ ಚರ್ಮವನ್ನು ಹದ ಮಾಡುವುದೆಂತು ? ರಾಸಾಯನಿಕಗಳ ಬದಲಾಗಿ ಜೀವಕಣಗಳಿಂದ ಆವಿರ್ಭಾವವಾಗುವ ಯಾವುದಾದರೂ ಪರಿಣಾಮ ಕಾರಿ ದ್ರವ್ಯ (ಇದನ್ನು ಎನ್‌ಝೈಮ್ ಎನ್ನುತ್ತಾರೆ) ಉಂಟೆ ? ಚರ್ಮಕ್ಕೆ ಹಾನಿಯಾಗದಂತೆ ಅದರ ಮೇಲಿನ ಕೂದಲನ್ನು ತೆಗೆಯಲು ಈಗ ರಾಸಾಯನಿಕ ಬಳಸುತ್ತೇವೆ. ಅದರ ಬದಲಾಗಿ ಸೂಕ್ಷ್ಮಜೀವಿಗಳಿಂದ ಬಂದ ಎನ್‌ಝೈಮ್ ತಯಾರಿಸಬೇಕು. ನನ್ನ ಕೆಲಸ ಇದು : ಈ ಎನ್‌ಝೈಮ್‌ಗಳು ರಾಸಾಯನಿಕಗಳಿಗಿಂತ ಉತ್ತಮವೇ ? ಅವು ಫಲಪ್ರದವೇ ? ಅದನ್ನು ತಿಳಿಯಲು ಪ್ರಯೋಗಶಾಲೆಯಲ್ಲಿ ಒಂದು ವಿಧಾನವನ್ನು ಬೆಳೆಸಬಹುದೇ ?

ಆದ್ದರಿಂದ ವಿಜ್ಞಾನಿಗೆ ನಿರ್ದಿಷ್ಟ ಸಮಸ್ಯೆ ಕೊಡಬೇಕು. ಅದಕ್ಕೆ ಪರಿಹಾರ ಏನೆಂಬುದನ್ನು ವಿಧಾನವಾಗಿಯಾದರೂ ಆತ ತಿಳಿಸಬಲ್ಲ. ಅದು ಅವನ ಬೌದ್ಧಿಕ ಆಸಕ್ತಿಯ ಪರಿಮಿತಿಯಲ್ಲಿಲ್ಲದಿದ್ದರೂ ಸಂಶೋಧನೆ ನಡೆಸಬಹುದು. ಅದಕ್ಕಾಗಿ ಸ್ವಲ್ಪ ಸಮಯ ಕೊಡುವುದು ಅವರಿಗೆ ಅಸಾಧ್ಯವೇನಲ್ಲ.

**ಹೊ** : ನೀವು ಹುಡುಕುತ್ತಿರುವ ಪರಿಹಾರ ಈಗಾಗಲೇ ಬೇರಾವುದಾದರೂ ದೇಶದಲ್ಲಿ ಸಂಶೋಧನೆಯಿಂದ ದೊರಕಿಬಿಟ್ಟಿರಬಹುದೇ?

ಬ : ಇಲ್ಲ, ಇದರಲ್ಲಿ ಒಂದು ವಿಶೇಷವಿದೆ: ನಮ್ಮ ದೇಶದಲ್ಲಿ ಚರ್ಮದ ಜೊತೆ ಕೆಲಸ ಮಾಡುವವರು ಕೆಳಮಟ್ಟದ ಆರ್ಥಿಕ ಸ್ಥಿತಿಯಲ್ಲಿರುವವರು. ಚರ್ಮವನ್ನು ರಫ್ತು ಮಾಡುತ್ತೇವೆ. ನಾವೊಂದು ತಂತ್ರಜ್ಞಾನ ಬೆಳೆಸಿ ಅದಕ್ಕೆ ಪೇಟೆಂಟ್ ಪಡೆಯಬೇಕು. ಇದರರ್ಥವಿಷ್ಟೆ: ವಿಜ್ಞಾನಿಗೆ ಸಮಸ್ಯೆ ಹೇಳಿ. ಆತ ಸಂಶೋಧನೆ ಮಾಡುತ್ತಾನೆ. ಆಮೇಲೆ ಅದನ್ನು ಅನ್ವಯ ಮಾಡಿಕೊಳ್ಳುವುದು ನಿಮ್ಮ ಜವಾಬ್ದಾರಿ. ನಿಮ್ಮ ಕಾರು-ಸ್ಕೂಟರು ರಿಪೇರಿ ಮಾಡಿಸಿಕೊಳ್ಳಲು ಮೆಕ್ಯಾನಿಕ್ ಬಳಿ ಹೋದಾಗ ಹೇಳುತ್ತೀರಲ್ಲ, ಹಾಗೆ. ಸಮಸ್ಯೆಯನ್ನು ಗುರುತಿಸುವವರು ನೀವು, ಮೆಕ್ಯಾನಿಕ್ ಅಲ್ಲ. ಅವನು ಪರಿಹಾರ ನೀಡಬಲ್ಲ, ಆದ್ದರಿಂದ ನೀವು ಅವನ ಬಳಿ ಹೋಗುತ್ತೀರಿ.

**ಹೊ** : ಪ್ರಯೋಗಶಾಲೆ ಮತ್ತು ಉದ್ಯಮಗಳ ನಡುವೆ ಜೀವಂತವಾದ ಗಾಢ ಸಂಬಂಧ ಅವಶ್ಯಕವಲ್ಲವೆ? ನೀವು ಈಗ ತಾನೆ ಹೇಳಿದ ನಿಮ್ಮ ಸಂಶೋಧನೆಯೇ ಅದಕ್ಕೊಂದು ನಿದರ್ಶನ. ಎನ್ಝೈಮ್‌ಗಳಿರುವ ಡಿಟರ್ಜೆಂಟ್‌ಗಳು (ಬಟ್ಟೆ ಒಗೆಯಲು, ಪಾತ್ರೆ ತೊಳೆಯಲು, ಇತ್ಯಾದಿ) ಈಗಾಗಲೇ ಬಂದಿವೆ, ಸರಿ. ಆದರೆ ಎರಡು ಕ್ಷೇತ್ರಗಳಿವೆ: ಜೀವ ವಿಜ್ಞಾನಗಳಲ್ಲಿ ಬೆಳವಣಿಗೆ ಮತ್ತು ಆನ್ವಯಿಕ ತಂತ್ರಜ್ಞಾನ. ಸ್ಪರ್ಧಾತ್ಮಕ ಜೀವಶಾಸ್ತ್ರ ಎಂದು ಬೇಕಾದರೂ ಕರೆಯಬಹುದು. ಮಾಹಿತಿ ತಂತ್ರಜ್ಞಾನಕ್ಕೆ ಜಾಗತಿಕ ಮಟ್ಟದಲ್ಲಿ ಈಗ ಎಲ್ಲಿಲ್ಲದ ಪ್ರಾಶಸ್ತ್ಯ ಬಂದುಬಿಟ್ಟಿದೆ. ಪ್ರಾಕೃತಿಕ ಜೀವ ವಿಜ್ಞಾನಕ್ಕೆ ಅಷ್ಟು ಮಹತ್ವವಿಲ್ಲ. ಉದ್ಯಮ ಮತ್ತು ಸಂಶೋಧನೆ ಒಗ್ಗೂಡಿದರೆ ಅನುಕೂಲವಾಗಬಹುದು. ನಿರ್ದಿಷ್ಟ ಸಂಶೋಧನೆಯನ್ನು ಸಂಬಂಧಪಟ್ಟ ಉದ್ಯಮವು ಆರ್ಥಿಕವಾಗಿ ಬೆಂಬಲಿಸಿ ತನ್ನ ಸಾಮರ್ಥ್ಯವನ್ನು ಹಿಗ್ಗಿಸಿಕೊಳ್ಳಬೇಕು.

ಬ : ಇದು ಸಾಕಷ್ಟು ಹಳೆಯ ಪ್ರಶ್ನೆ ವಿಜ್ಞಾನಿಗಳಿಗೆ. ನಮ್ಮ ಸಂಸ್ಥೆಯಲ್ಲಿ ಈಚೆಗೆ ಅಂತಹ ಯೋಜನೆ ಕಾರ್ಯಗತವಾಗಿದೆ. ಉದ್ಯಮಕ್ಕೆ ಜೀವ ತುಂಬುವಂತಹ ತಾಂತ್ರಿಕ ಅಧ್ಯಯನ ಅದರಲ್ಲಿ ಅಂತರ್ಗತವಾಗಿದೆ. ಮಾನ್ಸಾಂಟೋ ಇರುವುದರಿಂದ ಅದು ಎಲ್ಲರಿಗೂ ತಿಳಿದಿದೆ! ಆದರೆ ಅದೊಂದೇ ಅಲ್ಲಿಲ್ಲ, ಕ್ಯಾಡಿಲ್ಲಾ, ಯೂನಿಕೆಮ್, ಎಲ್ಲಾ ಇವೆ. ಅವರ ಪ್ರಯೋಗಶಾಲೆಯಲ್ಲಿ ವಿಜ್ಞಾನಿಗಳಿದ್ದಾರೆ. ಅಂತೆಯೇ ನಮ್ಮ ವಿಜ್ಞಾನಿಗಳ ಜೊತೆಗೂ ಅವಕ್ಕೆ ನೇರ ಸಂಪರ್ಕವಿದೆ. ಯೂನಿಕೆಮ್ ಜೊತೆ ಈಗ ತಾನೆ ಒಂದು ಚರ್ಚೆ ಮುಗಿಸಿ ಬಂದಿದ್ದೇನೆ. ಪರಸ್ಪರ ಸಂಬಂಧ ಬೆಳೆಯುತ್ತಿದೆ. ವಿಶ್ವವಿದ್ಯಾನಿಲಯಗಳಲ್ಲೂ ಇದು ಇನ್ನೂ ಹೆಚ್ಚಾಗಿ ಬೆಳೆಯಬೇಕು. ಆದರೆ ಭಾರತದ ಕಂಪೆನಿಗಳಿಗೆ ಒಂದು ಮುಗ್ಗಟ್ಟಿದೆ. ಅವಕ್ಕೆ ಸಂಶೋಧನೆಯ ಪರಿಚಯವಿಲ್ಲ. ಈಗಂತೂ ಬೌದ್ಧಿಕ ಆಸ್ತಿಯ ಹಕ್ಕಿನ ಹಿನ್ನೆಲೆಯಲ್ಲಿ ಕೆಲಸ ಮಾಡಬೇಕಾಗಿದೆಯಾದ್ದರಿಂದ ಅವು ಒಂದು ರೀತಿ ಕಂಗಾಲಾಗಿವೆ. ವಿಜ್ಞಾನವು ಗುಟ್ಟಿನಲ್ಲಿ ಬೆಳೆಯುವುದಿಲ್ಲ. ನಿಮ್ಮ ಸಂಶೋಧನೆಯನ್ನು ಬಹಿರಂಗಗೊಳಿಸಿ ಬೇರೆಯವರ ಪ್ರತಿಕ್ರಿಯೆಗಳಿಂದ ಪ್ರಯೋಜನ ಪಡೆಯಬೇಕು. ಆಗ ಉತ್ತಮ ಪರಿಹಾರ ದೊರಕುತ್ತದೆ. ನಮ್ಮ ಕಂಪೆನಿಗಳು ಇದಕ್ಕೆ ಅಣಿಗೊಳ್ಳಬೇಕು.

> ### ಬೆತ್ತಾಲೆ ಚಿತ್ರಗಳು
>
> ಹಲವರಿಗೆ ಬಟ್ಟೆ ಇಲ್ಲದ ಕೊರಗು
> ಕೆಲವರಿಗೆ ಬಟ್ಟೆ ಸಲ್ಲದ ಕೊರಗು
> ಇಲ್ಲ - ಸಲ್ಲದೆ ಕೊರಗುವ ಜೀವಿಗಳು
> ಬಯಸದ - ಬಯಸಿದ ಬೆತ್ತಲೆ ಚಿತ್ರಗಳು
>
> ಶಂಸಾ
> ಸರಕಾರಿ ಪ್ರಥಮ ದರ್ಜೆ ಕಾಲೇಜು
> ಮುಂಡಗೋಡ

**ಹೊ** : ಸಮಕಾಲೀನ ಪ್ರಶ್ನೆಗಳಿಗೆ ವಿಜ್ಞಾನಿಗಳು ಸ್ಪಂದಿಸುತ್ತಿದ್ದರೆ ಅವರು ಜನಸಾಮಾನ್ಯರ ಹತ್ತಿರ ಬರಬಹುದಲ್ಲವೆ? ಈಗ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ವಿಜ್ಞಾನಿಗಳು ಪ್ರತ್ಯೇಕವೆಂಬ ಭಾವನೆ ಇದೆ. ಸಮಾಜಕ್ಕೆ ನೀವಿರುವುದರ ಅರಿವೂ ಕಡಿಮೆ. ರಸ್ತೆಗೆ ಹೆಸರಿಡಬೇಕಾದರೆ ಒಂದು ಪದ್ಯ ಬರೆದವರಾಗಬೇಕು, ಒಂದು ಸಂಶೋಧನೆ ನಡೆಸುವವರಲ್ಲ! ಜನಸಂಪರ್ಕಕ್ಕೆ ನಿಮಗೆ ಬಿಡುವಿಲ್ಲದಿರಬಹುದು, ಆದರೆ...

ಬ : ಅದು ಹಾಗಲ್ಲ – ವಿಜ್ಞಾನಿಗಳು ಒಂದು ಸಮುದಾಯವಲ್ಲ, ಏಕೆಂದರೆ ಅವರೆಲ್ಲಾ ಒಂದೇ ಅಭಿಪ್ರಾಯದವರಲ್ಲ. ವೈಯಕ್ತಿಕವಾಗಿ ಅವರು ಸ್ಪಂದಿಸುತ್ತಿರುತ್ತಾರೆ. ಅವರ ಕಸುಬಿನ ದೃಷ್ಟಿಯಲ್ಲಿ ಮಾತ್ರವೇ ಅವರದೊಂದು ಸಮುದಾಯ. ಸಮಾಜದ ಬೇರೆಲ್ಲರಂತೆ ಅವರಿಗೂ ರಾಜಕೀಯ, ಆರ್ಥಿಕ, ಒಲವುಗಳಿವೆ. ಅಷ್ಟಕ್ಕೂ, ಹೀಗೆ ಸಮಕಾಲೀನ ವಿಷಯಗಳಿಗೆ ಸ್ಪಂದಿಸುತ್ತಿರುವುದು ಅವರಿಗೂ ಒಳ್ಳೆಯದಲ್ಲ ಬಿಡಿ!

**ಹೊ** : ಕಡೆಯ ಪ್ರಶ್ನೆಗೆ ಬರೋಣ. ವಿಜ್ಞಾನದಲ್ಲಿ ಭಾರತೀಯತೆಯನ್ನು ಕಂಡುಕೊಳ್ಳಬೇಕೆಂಬ ಕೂಗೊಂದು ಆಗಾಗ್ಗೆ ಬರುತ್ತದೆ. ಅಂದರೆ, ಎಲ್ಲ ವೈಜ್ಞಾನಿಕ ಸಂಪತ್ತೂ ಹಿಂದೆಯೇ ಲಭಿಸಿತ್ತು, ಅದನ್ನು ಮತ್ತೆ ಪಡೆದುಕೊಂಡರೆ ಸಾಕು, ಈ ಎಲ್ಲ ಅನುಕರಣೆಯ ಸಂಶೋಧನೆ ಅನಗತ್ಯ, ಎಂದು.

ಬ : ಹೌದು, ಇಂತಹ ಮಾತುಗಳನ್ನು ಉನ್ನತ ಮಟ್ಟದ ಕೆಲವು ಸಭೆಗಳಲ್ಲೂ ನಾನು ಕೇಳಿದ್ದೇನೆ. ಅದು ನನಗೆ ಸಮ್ಮತವಲ್ಲ. ಎರಡು ಸಾವಿರ ವರ್ಷಗಳ ಹಿಂದೆ ಏನೋ ಲಭಿಸಿತ್ತು ಎಂದಿಟ್ಟುಕೊಳ್ಳೋಣ. ಅದನ್ನು ನಾವು ಕಳೆದುಕೊಂಡದ್ದು ಹೇಗೆ? ಇದು ಇತಿಹಾಸಕಾರರಿಗೆ ಒಂದು ಪ್ರಶ್ನೆ. ನಾವು ಇತಿಹಾಸವನ್ನು ಅಲ್ಲಗಳೆಯುವುದು ಬೇಡ, ಆದರೆ ಪ್ರಸಕ್ತ ಇತಿಹಾಸ ಹಾಗೂ ಈಚಿನ ಇತಿಹಾಸಕ್ಕೆ ನಾವು ವಿಮುಖರಾಗಬಾರದು. ಪ್ರಾಚೀನ ಇತಿಹಾಸಕ್ಕೆ ದಾಖಲೆಗಳೂ ವಿರಳ. ನಮಗೇನೆಲ್ಲಾ ಗೊತ್ತಿತ್ತು ಮತ್ತು ಅದನ್ನು ಹೇಗೆ ಕಳೆದುಕೊಂಡೆವೆಂದು ಹೇಳುವಾಗ ಪ್ರಾಚೀನ ಕಾಲದ ವೈಭವೀಕರಣ ಅರ್ಥರಹಿತವಾದ್ದು. ಇಂದಿನ ಜೀವಂತ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬೇಕಲ್ಲವೆ? ಸಮಸ್ಯೆ ಏನು, ಬಗೆಹರಿಸುವುದೆಂತು? ಅದು ಮುಖ್ಯ. ಉತ್ತರವನ್ನು ಎಲ್ಲಿಂದಲಾದರೂ ಪಡೆಯೋಣ, ಬಾಧಕವಿಲ್ಲ. ಆಧುನಿಕ ವಿಜ್ಞಾನವು ಅದಕ್ಕೆ ಉತ್ತರಕೊಡಬಲ್ಲುದು. ಅದಕ್ಕೆ ದೀರ್ಘ ಇತಿಹಾಸವಿಲ್ಲವೆಂದು ಅದು ನಗಣ್ಯವಾಗುವುದಿಲ್ಲ. ಪ್ರಾಚೀನ ಸಾಧನೆಗಳ ಬಗ್ಗೆ ಭಾವನಾತ್ಮಕ ನಂಟು ಒಂದು ಅಂಶವಾದರೆ, ನಮ್ಮ ವರ್ತಮಾನ ಸ್ಥಿತಿಯ ಬಗ್ಗೆ ಎಂಥದೋ ಆತಂಕ ಕಾಡುವುದು ಇನ್ನೊಂದಂಶ. ನಮ್ಮ ಬಗ್ಗೆ ಸ್ವಲ್ಪ ವಿಶ್ವಾಸ ಬೆಳೆಸಿಕೊಳ್ಳುವುದು ಒಳ್ಳೆಯದು. ''ನಾವು ಶ್ರೇಷ್ಠರಾಗಿದ್ದೆವು, ಶ್ರೇಷ್ಠರಾಗಿದ್ದೇವೆ'' ಎಂಬ ಅಬ್ಬರ ಬೇಕಿಲ್ಲ; ನಮ್ಮ ಕೈಲಾದಷ್ಟು ಶ್ರೇಷ್ಠ ಸಂಶೋಧನೆಗಳನ್ನು ಮಾಡಿದರೆ ಸಾಕು. ಮುಂದೆ ಸಾಗಲು ಅದು ಸುಗಮ ಹಾದಿ.

**ಹೊ** : ಪ್ರಾಚೀನರ ವೈಭವೀಕರಣ ಏನೋ ತೃಪ್ತಿ ನೀಡುತ್ತದೆಂದು ತೋರುತ್ತದೆ. ನಮ್ಮಲ್ಲಿ ವಿಮಾನಗಳಿದ್ದುವು ಎಂದರೆ ಒಂದು ತರಹದ ಹೆಮ್ಮೆಯೆ?

ಬ : ಇವೆಲ್ಲಾ ಸ್ವಾರಸ್ಯಕರ ಪ್ರಸಂಗಗಳು, ಚರ್ಚೆಗಷ್ಟೇ ಪ್ರಯೋಜನ. ಯಾವುದನ್ನು ಹೇಗೆ ಸ್ವೀಕರಿಸಬೇಕೆಂಬುದೇ ಮುಖ್ಯ. ಈಗ ಡಾ॥ ವಳ್ಳಿಯಾಥನ್ ಇದ್ದಾರೆ. ವೈದ್ಯಕೀಯದಲ್ಲಿ ನಿಷ್ಣಾತರು. ಚರಕ ಸಂಹಿತೆಯ ಬಗ್ಗೆ ಬಹಳ ಮೌಲಿಕವಾದುದನ್ನು ಬರೆದಿದ್ದಾರೆ. ಅದು ನಮ್ಮ ವೈದ್ಯಕೀಯದ ಇತಿಹಾಸ. ಆದರೆ, ಅದಷ್ಟೇ ಸಾಕು, ಅದಕ್ಕೇ ಹಿಂದಿರುಗೋಣ, ಎಂದರೆ ಹೇಗೆ ಸಾಧ್ಯ? ಅದನ್ನು ಮತ್ತೆ ಗಳಿಸಿದರೆ ಆಮೇಲೆ ಇನ್ನೇನನ್ನೂ ಮಾಡಬೇಕಾಗಿಲ್ಲವೆಂದೆ?

**ಹೊ** : ಇದರಲ್ಲೊಂದು ವಿಪರ್ಯಾಸವಿದೆ. ಚರಕನಿಗೆ ಹಿಂದಿರುಗುವುದೆಂದರೆ ವೈದ್ಯಕೀಯದಲ್ಲಿ ಅಂತಿಮವಾದದ್ದನ್ನು ಸಾಧಿಸಿದ್ದೇವೆಂದು ಹೇಳಿಬಿಡುತ್ತಾರೆ. ಸ್ವತಃ ಚರಕ ಹಾಗೆ ಭಾವಿಸಿರಲಿಲ್ಲ, ಮುಂದುವರಿಕೆಗೆ ಅವನು ಒತ್ತುಕೊಡುತ್ತಾನೆ.

ಬ : ಅದು ಸರಿ. ನಮಗೆ ಎಲ್ಲವೂ ತಿಳಿದಿತ್ತು ಎಂದಾದರೆ ನಮ್ಮ ಇಂದಿನ ಸನ್ನಿವೇಶವನ್ನು ಅರ್ಥೈಸುವುದು ಹೇಗೆ? ಬಡತನ, ಖಾಯಿಲೆ, ವಸತಿ ಇಲ್ಲದಿರುವುದು. .....ಅಂದರೆ, ಹಿಂದಿನ ವೈಭವ ಇಂದಿನ ಸಮಸ್ಯೆಗೆ ಪರಿಹಾರ ನೀಡುವುದಿಲ್ಲ.

**ಹೊ** : ಬಹಳ ಸಮಯ ನೀಡಿ ಉಪಕರಿಸಿದ್ದೀರಿ. 'ಹೊಸತು' ನಿಮಗೆ ಋಣಿಯಾಗಿದೆ.



# ಕನ್ನಡಕ್ಕಿದೆಯೆ ಭವಿಷ್ಯ!

ಪ್ರಾಥಮಿಕ ಶಿಕ್ಷಣ ಮಾತೃಭಾಷೆಯಲ್ಲಿ ಆಗಬೇಕು ಎಂದು ನಮ್ಮ ಸರ್ವೋಚ್ಚ ನ್ಯಾಯಾಲಯ ತೀರ್ಪು ಕೊಟ್ಟಿದೆಯಾದರೂ ಕರ್ನಾಟಕದಲ್ಲಿ ಕನ್ನಡಕ್ಕೆ ಯೋಗ್ಯ ಸ್ಥಾನ ನೀಡಬೇಕು ಎಂದು ನಿರ್ಧರಿಸುವ ಸಂಕಲ್ಪ ಶಕ್ತಿ ಸರಕಾರಕ್ಕಿದೆ ಎಂದು ತೋರುತ್ತಿಲ್ಲ. ತಪ್ಪಾಗಿ ಇಂಗ್ಲಿಷನ್ನು ಬಳಸುವುದೂ ತಾವು ಆಧುನಿಕರು ಎಂಬ ಯೋಗ್ಯತೆಯನ್ನು ಬಿಂಬಿಸಲು ಸಹಕರಿಸುತ್ತದೆ ಎಂಬ ಪೊಳ್ಳು ಅಹಂಕಾರವನ್ನು ಪ್ರದರ್ಶಿಸುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಈ ಸಮಸ್ಯೆಗೆ ಪರಿಹಾರವಿದೆಯೇ! ಕನ್ನಡದ ಭವಿಷ್ಯ ಏನಿರಬಹುದು, ಇಂದಿನ ಯುವ ಜನಾಂಗ ಕನ್ನಡವನ್ನು ನೆಚ್ಚಿಕೊಳ್ಳದೆ ಕನ್ನಡ ಭಾಷೆ ಉಳಿಯಬಹುದೇ. ಭಾಷೆ ಉಳಿಯದೆ ಕನ್ನಡದ ಜನಜೀವನದ ಸಂಸ್ಕಾರಗಳು ಮುಂದಿನ ದಶಕಗಳಲ್ಲಿ ಉಳಿಯಲು ಸಾಧ್ಯವೇ ಎಂಬ ನನ್ನ ಚಿಂತನೆಯ ಹರವಿನಲ್ಲಿ ಕೆಳಗಿನ ಮಾತುಗಳನ್ನು ಬರೆಯುತ್ತಿದ್ದೇನೆ.

■

ವ್ಯಾಸರಾಯ ಬಲ್ಲಾಳ

ತಮಿಳುನಾಡು ಈಗಿನ ಕೇಂದ್ರ ಸರಕಾರದ ಮೇಲೆ ರಾಜಕೀಯ ಪ್ರಭಾವ ಬೀರಲು ಶಕ್ತವಾಗಿರುವ ಹಿನ್ನೆಲೆಯಲ್ಲಿ ತಮಿಳು ಭಾಷೆಗೆ ಶಾಸ್ತ್ರೀಯ ಭಾಷೆಯ ಸ್ಥಾನ ಸಿಗುವಂತಾಗಿದೆ. ತಮಿಳಿಗೆ ಈ ಗೌರವ ಸಿಕ್ಕಿದರೆ ಕನ್ನಡಕ್ಕೆ ಏಕಿಲ್ಲ ಎಂದು ಕರ್ನಾಟಕ ಸರಕಾರದಲ್ಲೂ ಇನ್ನು ಕೆಲವು ಆಸಕ್ತ ಕನ್ನಡಿಗರ ಸಂಘಟನೆಗಳಲ್ಲೂ ಕೂಗು ಕೇಳಿಬರುತ್ತಿದೆ. ಕರ್ನಾಟಕ ಸರಕಾರ ತಾನೂ ಈ ವಾದವನ್ನು ಎತ್ತಿ ಹಿಡಿದು ದಿಲ್ಲಿಗೆ ಸರಕಾರದ ಹಾಗೂ ಬುದ್ಧಿಜೀವಿಗಳ ನಿಯೋಗವೊಂದನ್ನು ಒಯ್ಯುವ ಆಶ್ವಾಸನೆಯನ್ನು ಕೊಟ್ಟಿದೆ. ಆದರೆ ಈ ಸಂದರ್ಭದಲ್ಲಿ ತಮಿಳುನಾಡಿನಲ್ಲಿ ತಮಿಳರಿಗಿರುವ ಭಾಷಾಭಿಮಾನ ಕನ್ನಡಿಗರಿಗಿದೆಯೇ ಎಂದು ಯೋಚಿಸುವುದಿಲ್ಲ. ತಮಿಳುನಾಡು ಸರಕಾರದ ಅಧಿಕಾರಿಗಳಾಗಲೀ, ತಮಿಳು ಜನಸಮುದಾಯವಾಗಲೀ ತಮಿಳು ಭಾಷೆಯನ್ನು ಇಂಗ್ಲಿಷ್ ಶಬ್ದಗಳನ್ನು ಉಪಯೋಗಿಸದೆ ಬಳಸುವ ರೀತಿಯನ್ನು ನಾವು ಅನುಸರಿಸುತ್ತಿದ್ದೇವೆಯೇ? ಕನ್ನಡದ ರಾಜಧಾನಿಯಲ್ಲಿ ದೀರ್ಘಕಾಲ ನೆಲೆಸಿರುವ ತಮಿಳರು ತಮಿಳಿನಲ್ಲಿ ಮಾತನಾಡುವಾಗ ಅರ್ಧಮರ್ಧ ತಮಿಳಿನಲ್ಲೇ ಉತ್ತರಿಸುವ ಅತಿಯೆನಿಸುವ ಸೌಜನ್ಯವನ್ನು ಕನ್ನಡಿಗರು ಪ್ರದರ್ಶಿಸುತ್ತಾರೆಯೇ ಹೊರತು ಕನ್ನಡದಲ್ಲಿ ಉತ್ತರಿಸುವುದು ಕಡಮೆ. ತಮಿಳುನಾಡಿನಲ್ಲಿ ತಮಿಳು ಭಾಷೆಯ ಅಧ್ಯಯನವನ್ನು ಕೈಗೊಳ್ಳಲು ಒಂದು ಅಂತಾರಾಷ್ಟ್ರೀಯ ತಮಿಳು ಅಧ್ಯಯನದ ಸಂಸ್ಥೆಯಿದೆ. ಅಲ್ಲಿ ನಡೆಯುವ ಕೆಲವು ಸಭೆಗಳಲ್ಲಿ ತಮಿಳು ಬಾರದ ಸದಸ್ಯರಾಗಲೀ, ಅಧ್ಯಕ್ಷರಾಗಲೀ ಭಾಗವಹಿಸುವಾಗ ಅವರು ತಮಿಳಿನಲ್ಲೆ ಮಾತನಾಡಬೇಕು ಎಂದು ಆಗ್ರಹಪೂರ್ವಕ ಕೇಳಿಕೊಳ್ಳಲಾಗುತ್ತಿದೆ. ದುರಭಿಮಾನ ಮಟ್ಟಕ್ಕೂ ಹರಡಿರುವ ತಮಿಳರ ಭಾಷಾಭಿಮಾನದ ಅತಿರೇಕತೆ ಕನ್ನಡದ ಕುರಿತು ಭಾಷಾಭಿಮಾನ ಹೇಳಿಕೊಳ್ಳಲು ಸಾಧ್ಯವಾಗದ ಕರ್ನಾಟಕದ ಜನರಿಗೆ ಪಾಠ ಕಲಿಸಬೇಕು. ಆದರೆ ನಾವು ಹಾಗೆ ಕಲಿಯುತ್ತಿದ್ದೇವೆಯೇ, ಇಲ್ಲ. ಕನ್ನಡ ಯಾಕೆ ಬೇಕು ಎಂದು ಕೇಳುತ್ತಿರುವ ಅಚ್ಚ ಕನ್ನಡಿಗರು ಈಗ ಕರ್ನಾಟಕದ ರಾಜಧಾನಿಯಲ್ಲೂ ಹೆಚ್ಚುತ್ತಿದ್ದಾರೆ. ಇಂದು ಇಂಗ್ಲಿಷನ್ನು ಬಿಟ್ಟರೆ ನಮಗೆ ಬದುಕೇ ಇಲ್ಲವೆನ್ನುವ ಮನಃಸ್ಥಿತಿಯನ್ನು ನಾವು ತಂದುಕೊಳ್ಳುತ್ತಿದ್ದೇವೆ. ಇಂಗ್ಲಿಷಿನ ಮೂಲದ ಮಾಹಿತಿ ತಂತ್ರಜ್ಞಾನದ ರಾಜಧಾನಿಯೆಂಬ ಹೆಮ್ಮೆ ಪಡುವ ನಮಗೆ ಕನ್ನಡದ ಭಾಷೆ ಸಂಸ್ಕಾರಗಳು ಅಗತ್ಯವೇ ಎಂದು ಯೋಚಿಸುತ್ತಿರುವ ಜನರು ಹೆಚ್ಚುತ್ತಿರುವಾಗ ಕನ್ನಡ ಮುಂದೆ ಕೆಲವೇ ದಶಕಗಳಲ್ಲಿ ಬರೇ ಮ್ಯೂಸಿಯಂ ಭಾಷೆಯಾಗುವುದೇ ಎಂಬ ಸಂದೇಹ ಬರುವುದು ಸಹಜವೇ.

ಕನ್ನಡದ ಸಾಹಿತ್ಯ ಸಂಸ್ಕೃತಿ ಸಂಸ್ಕಾರಗಳು ಪ್ರಸಕ್ತ ಸಾಮಾಜಿಕ ಹಾಗೂ ರಾಜಕೀಯ ಪರಿಸ್ಥಿತಿಯಲ್ಲಿ, 'ಗ್ಲೋಬಲೈಸೇಶನ್' ಎಂಬ ಭೂತದ ನೆರಳಿನಲ್ಲಿ, ಇಂಗ್ಲಿಷ್ ಭಾಷೆಯ ಹಿಡಿತ ಆಧುನಿಕ ತಂತ್ರಜ್ಞಾನದ ಬೆನ್ನೆಲುಬು ಎಂದು ತೋರುತ್ತಿರುವ ಸಂದರ್ಭದಲ್ಲಿ, ಮುಖ್ಯವಾಗಿ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಭಾರತ, ಅದರಲ್ಲೂ ಕರ್ನಾಟಕ, ಸಾಧಿಸಿರುವ ಪ್ರಗತಿ ತರುತ್ತಿರುವ ಆರ್ಥಿಕ ಮೌಲ್ಯದರ್ಶನದಿಂದಾಗಿ ಮುಂದೆ ಕನ್ನಡ ಭಾಷೆಯ ಮಾತಂತಿರಲಿ, ಅದರ ಉಳಿವಿನ ಬಗ್ಗೆ ಸಂದೇಹಗಳನ್ನು ಸೃಷ್ಟಿಸುತ್ತಿದೆಯೇ ಎಂಬ ಭಯ ಈಗ ಮೂಡುವಂತಿದೆ.

ದೀರ್ಘ ಕಾಲ ಕನ್ನಡೇತರ ಪ್ರದೇಶವಾದ ಮುಂಬಯಿ ಮಹಾನಗರದಲ್ಲಿ ನೆಲೆಸಿದ್ದು ನಾನು ಸುಮಾರು ಹತ್ತು ಲಕ್ಷ ಕನ್ನಡಿಗರಿರುವ ಮುಂಬಯಿಯಲ್ಲಿ ಕನ್ನಡದ ಭಾಷೆ ಸಂಸ್ಕಾರಗಳು ಹೇಗೆ ಉಳಿಯಬಹುದು, ಬೆಳೆಯಬಹುದು ಎಂದು ಚಿಂತಿಸುತ್ತಲೇ ಬಂದವನು. ಅದಕ್ಕಾಗಿ ಕನ್ನಡದ ಸಾಂಸ್ಕೃತಿಕ ಎಚ್ಚರವನ್ನು ಉಳಿಸಿಕೊಳ್ಳಲು ನನ್ನ ಕೈಲಾದುದನ್ನು ಮಾಡಿದವನು. ಕೆಲವು ಐತಿಹಾಸಿಕ ಕಾರಣಗಳು ಅಲ್ಲಿ ಕನ್ನಡ ಭಾಷೆಯ ಬೆಳವಣಿಗೆಗೆ ಸಹಕರಿಸಿವೆ. ಕರ್ನಾಟಕ ರಾಜ್ಯರಚನೆಯಾಗುವುದಕ್ಕೆ ಮೊದಲು ಆಗಿನ ಮುಂಬಯಿ ರಾಜ್ಯದಲ್ಲಿ ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳು ಸೇರಿದ್ದುದರಿಂದ ಮರಾಠಿ, ಗುಜರಾತಿ ಭಾಷೆಗಳ ಜತೆಗೆ ಕನ್ನಡವೂ ರಾಜ್ಯಭಾಷೆಯಾಗಿದ್ದುದರಿಂದ ಪ್ರೌಢ ಶಿಕ್ಷಣ ಕನ್ನಡ ಮಾಧ್ಯಮದ ಮೂಲಕ ಸಾಧ್ಯವಾಗುತ್ತಿತ್ತು. ಉತ್ತರ ಕರ್ನಾಟಕದ ಜನ ಆಡಳಿತ, ನ್ಯಾಯಾಂಗಗಳಿಗೆ ಸಂಬಂಧಿಸಿದ ವ್ಯವಹಾರಗಳಿಗೆ ಮುಂಬಯಿಯನ್ನೇ ಆಶ್ರಯಿಸಬೇಕಾಗಿತ್ತು. ಇದಕ್ಕಾಗಿ ಹಲವಾರು ಕನ್ನಡಿಗ ಕುಟುಂಬಗಳೂ ಮುಂಬಯಿಯಲ್ಲಿ ನೆಲಸುವಂತಾಗಿದ್ದರೂ ಹೆಚ್ಚಿನವರು, ತಮ್ಮ ಮಕ್ಕಳಿಗೆ ಕನ್ನಡ ಶಿಕ್ಷಣಕ್ಕೆ ಪ್ರಾಶಸ್ತ್ಯ ಕೊಟ್ಟಿರಲಿಲ್ಲ. ಹೆಚ್ಚಿನ ಸಂಸಾರಗಳು ಮರಾಠಿಯನ್ನೇ ಆಶ್ರಯಿಸಿ ಮುಂದಿನ ಖಾನೇಶುಮಾರಿಗಳಲ್ಲಿ ಮರಾಠಿಗರೆಂದೇ ಕಾಣಿಸಿಕೊಂಡ ಉದಾಹರಣೆಗಳಿವೆ. ಮುಂಬಯಿ ಉದ್ಯೋಗಾವಕಾಶಗಳಿಗೆ ಪ್ರಶಸ್ತ ಶಹರ ಎಂಬ ಕಾರಣದಿಂದಲೂ ಸ್ವಾತಂತ್ರ್ಯಪೂರ್ವದ ದಿನಗಳಲ್ಲಿ ಕರಾವಳಿಯ ಜಿಲ್ಲೆಗಳಲ್ಲಿ ಶಿಕ್ಷಣಾವಕಾಶ ಸೀಮಿತವಾಗಿದ್ದುದರಿಂದಲೂ ಕರಾವಳಿಯ ಜನ ಆಗ ಸುಲಭವಾಗಿದ್ದ ಸ್ಟೀಮರ್ ಸಾರಿಗೆಯ ಮೂಲಕ ಬಡತನದ ಕಷ್ಟ ನಿವಾರಣೆಯ ದಾರಿ ಹುಡುಕಿಕೊಂಡು, ಮುಂಬಯಿ ಸೇರುತ್ತಿದ್ದರು. ಎಂಥ ಕೆಲಸಗಳಿಗಾಗಿ: ಹೊಟೇಲು ಕ್ಯಾಂಟೀನುಗಳಲ್ಲಿ ಕೆಲಸದವರಾಗಿ ದುಡಿಮೆ. ಆಗ ಮುಂಬಯಿಯ ಪ್ರತಿಷ್ಠಿತ ಉದ್ಯಮ ಸಂಸ್ಥೆಗಳ ತಾಣವಾಗಿದ್ದ ಬೆಲ್ಲಾರ್ಡ್ ಎಸ್ಟೇಟ್ ವಿಭಾಗದಲ್ಲಿ ಪೇದೆಗಳಾಗಿ ದುಡಿಮೆ ಇತ್ಯಾದಿ. ಇವರೆಲ್ಲ ಮಲಗಲು ಆಶ್ರಯ ದೊರಕಿಸಿಕೊಂಡದ್ದು ಇಂತಹ ಸಂಸ್ಥೆಗಳಿದ್ದ ಹಾಗೂ ನೂರಾರು ಗಲ್ಲಿಗಳಿದ್ದ ಕೋಟೆ ವಿಭಾಗದ ಚಾಳಗಳಲ್ಲಿ, ಸಂಬಂಧಿಕರ ಹಾಗೂ ಸ್ನೇಹಿತರ ಮನೆ ಬಾಗಿಲಲ್ಲಿ. ಇಂಥ ಸಾವಿರಾರು ಯುವಕರ ಬದುಕು ಸಣ್ಣ ಸಣ್ಣ ಕೆಲಸಗಳನ್ನು ಮಾಡಿಕೊಂಡು ಮುಗಿಯಬೇಕೇ ಎಂಬ ಯೋಚನೆಯಿಂದ ಕೆಲವು ಪ್ರಾತಃಸ್ಮರಣೀಯರು ದೂರದೃಷ್ಟಿಯಿಂದ ಶಾಲೆಗಳಿಗೆ ಸರಿಯಾದ ಸ್ಥಳಾವಕಾಶವಿರದೆ, ಹಗಲು ಶಾಲೆಗಳ ಕಟ್ಟಡಗಳನ್ನೇ ರಾತ್ರಿ ಶಾಲೆಗಳಿಗಾಗಿ ಬೇಡಿ ಪಡೆದು ಆರಂಭಿಸಿದ ರಾತ್ರಿ ಶಾಲೆಗಳ ಸಂಖ್ಯೆ ಕನ್ನಡ ಮಾಧ್ಯಮವನ್ನು ನೆಚ್ಚಿಕೊಂಡ ಒಂದು ಶಾಲೆಯಿಂದ, ಹದಿಮೂರು ಶಾಲೆಗಳಿಗೆ ಏರಿ ಸಾವಿರಾರು ಇಂಥ ವಿದ್ಯಾರ್ಥಿಗಳು ಪ್ರೌಢಶಾಲಾ ಶಿಕ್ಷಣವನ್ನು ಮುಗಿಸಲು ಸಾಧ್ಯವಾಗಿತ್ತು. ಆಗ ಎರಡನೆಯ ಮಹಾಯುದ್ಧ ನಡೆಯುತ್ತಿದ್ದುದರಿಂದ ಕಾಲೇಜು ವ್ಯವಸ್ಥೆಯ ಅನುಕೂಲಕರವಾದ ಪಾಠ ಪಟ್ಟಿಯನ್ನೂ ಸಮಯಾವಕಾಶಗಳನ್ನೂ ಉಪಯೋಗಿಸಿಕೊಂಡು ಕಾಲೇಜು ಶಿಕ್ಷಣವನ್ನೂ ಪಡೆಯಲು ಸಾಧ್ಯವಾಗಿ ಮುಂದೆ ಇವರೆಲ್ಲ ಶಹರದ ಗಣ್ಯ ನಾಗರಿಕರಾದ ನೂರಾರು ಉದಾಹರಣೆಗಳಿವೆ. ಇಂದು ಇಂಥವರಲ್ಲಿ ಕೆಲವರು ಕೋಟಿಗಟ್ಟಲೆ ವ್ಯವಹಾರ ನಡೆಸುವ ಉದ್ಯಮಿಗಳಿದ್ದಾರೆ. ಖ್ಯಾತ ನ್ಯಾಯವಾದಿಗಳಾದವರಿದ್ದಾರೆ. ತಜ್ಞ

ವೈದ್ಯರಾಗಿದ್ದಾರೆ. ಸಾಹಿತ್ಯ, ಕಲೆ ಮುಂತಾದ ಕ್ಷೇತ್ರಗಳಲ್ಲಿ ಹೆಸರು ಗಳಿಸಿದವರೂ ಇದ್ದಾರೆ. ಕ್ರೀಡೆಯಲ್ಲಂತೂ ಒಲಿಂಪಿಕ್ ಸ್ಪರ್ಧೆಗಳ ಪಟ್ಟಿಯಲ್ಲಿ ಸೇರಿದವರೂ ಇದ್ದಾರೆ. ಇವರೆಲ್ಲ ಇಂದು ಕೂಡ 'ಒಬಿಸಿ' ಎಂದು ಕರೆಸಿಕೊಳ್ಳುತ್ತಿರುವವರು. ರಾತ್ರಿ ಶಾಲೆಗಳಲ್ಲಿ ಶಿಕ್ಷಣ ಪಡೆದವರು. ನಾನು ಹಿಂದೆ ಸೂಚಿಸಿದ ಬೆಲ್ಲಾರ್ಡ್ ಎಸ್ಟೇಟ್ ವಿಭಾಗದಲ್ಲಿದ್ದ ಪ್ರತಿಷ್ಠಿತ ವಿದೇಶೀ ಕಂಪೆನಿಗಳಲ್ಲಿ ದುಡಿಯುತ್ತಿದ್ದವರು ರಾತ್ರಿ ಶಾಲೆಗಳ ಹಾಗೂ ಕಾಲೇಜು ಶಿಕ್ಷಣದ ನೆರವಿನಿಂದ ಪದವೀಧರರಾಗಿ ಅವರು ದುಡಿಯುತ್ತಿದ್ದ ಆಫೀಸುಗಳಲ್ಲೇ ಬಡ್ತಿ ದೊರಕಿಸಿಕೊಂಡು ಹಿರಿಯ ಅಧಿಕಾರಿಗಳಾದ ನಿದರ್ಶನಗಳಿವೆ. ಇಂಥ ಅಧಿಕಾರಿಗಳು ಬ್ಯಾಂಕುಗಳ ಡಿರೆಕ್ಟರ್ ಪದವಿಗೇರಿದ ನಿದರ್ಶನಗಳೂ ಇವೆ. ಕಲಿಯುತ್ತಿದ್ದಾಗ ಇವರೆಲ್ಲ ಆಶ್ರಯಿಸಬೇಕಾಗಿದ್ದುದು ಒಂದೆರಡು ಕೋಣೆಗಳಿದ್ದ ಚಾಳ ಮನೆಗಳ ಮುಂದಿನ ಸಾರ್ವತ್ರಿಕ ಬಾಲ್ಕನಿಗಳನ್ನು ಅಥವಾ ತಾವು ದುಡಿಯುತ್ತಿದ್ದ ಆಫೀಸುಗಳಲ್ಲಿ ರಾತ್ರಿ ಮಲಗುವ ಅವಕಾಶವನ್ನು, ಓದಲು ಆಶ್ರಯಿಸಿದ್ದು ಬೀದಿ ದೀಪಗಳನ್ನು. ಇವರೆಲ್ಲ ಹಿಂದುಳಿದ ಜನ. ಮುಂಬಯಿಗೆ ಬಂದು ತಮ್ಮ ಆರ್ಥಿಕ ಸ್ಥಿತಿಯನ್ನು ಶಿಕ್ಷಣದ ಮೂಲಕ ಸುಧಾರಿಸಿಕೊಂಡವರು. ಇವರಲ್ಲಿ ಬಹುಸಂಖ್ಯಾತರು ಮಾತೃಭಾಷೆ ತುಳುವಾಗಿದ್ದವರು. ಇವರೆಲ್ಲ ಕಾಲೇಜು ಪ್ರವೇಶಿಸಿದಾಗ ಲಭ್ಯವಿದ್ದ ಐಚ್ಛಿಕ ಭಾಷೆಯಾಗಿ ಆರಿಸಿಕೊಂಡದ್ದು ಕನ್ನಡವನ್ನು, ಇಂಗ್ಲಿಷನ್ನಲ್ಲ. ಇದರಿಂದಾಗಿ ಕಳೆದ ಶತಮಾನದ ನಲವತ್ತು ಐವತ್ತರ ದಶಕಗಳಲ್ಲಿ ಮುಂಬಯಿಯ ಕೆಲವು ಪ್ರತಿಷ್ಠಿತ ಕಾಲೇಜುಗಳೂ ಸೇರಿದಂತೆ ಸುಮಾರು ೧೮ ಕಾಲೇಜುಗಳಲ್ಲಿ ಕನ್ನಡವನ್ನು ಒಂದು ಐಚ್ಛಿಕ ಭಾಷೆಯಾಗಿ ಕಲಿಯಲು ಅವಕಾಶವಿತ್ತು. ಇಂದು ಬೆಂಗಳೂರು ವಿಶ್ವವಿದ್ಯಾಲಯ ವೃತ್ತಿಪರ ಕಾಲೇಜುಗಳಲ್ಲಿ ಕನ್ನಡದ ಬದಲು ಬೇರೆ ಯಾವ ಭಾಷೆಯನ್ನಾದರೂ ಆರಿಸಿಕೊಳ್ಳಬಹುದು ಎಂದು ಸೂಚಿಸಿರುವ ನಿರ್ಧಾರ ವಿವಾದಕ್ಕೆ ಕಾರಣವಾಗಿರುವ ಹಿನ್ನೆಲೆಯಲ್ಲಿ ನಾನು ಅಂದಿನ ಮುಂಬಯಿ ವಿಶ್ವವಿದ್ಯಾಲಯ ಕನ್ನಡ ಕಲಿಯುವಿಕೆಗೆ ಕೊಟ್ಟ ಸಹಕಾರವನ್ನು ನೆನೆಸಿಕೊಳ್ಳುತ್ತಿದ್ದೇನೆ. ಇದರಿಂದಾಗಿ ಕನ್ನಡ ಭಾಷೆಯಷ್ಟೇ ಅಲ್ಲ, ಮುಂಬಯಿಯ ಕನ್ನಡ ರಂಗಭೂಮಿ ಮತ್ತಿತರ ಸಾಂಸ್ಕೃತಿಕ ಚಟುವಟಿಕೆಗಳೂ ಪ್ರಭಾವಿತವಾಗಿದ್ದವು.

ನಾನು ಅರ್ಧ ಶತಮಾನದ ದೀರ್ಘ ಅವಧಿಯಲ್ಲಿ ಮುಂಬಯಿಯಲ್ಲಿದ್ದಾಗ ಕನ್ನಡಕ್ಕೆ ಸಂಬಂಧಿಸಿದ ನೂರಾರು ಸಂಘ-ಸಂಸ್ಥೆಗಳು ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸುತ್ತಿದ್ದವು. ಇವುಗಳಲ್ಲಿ ಬೆರಳೆಣಿಕೆಯಷ್ಟು ಮಾತ್ರ ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಗಳೇ ಮುಖ್ಯವಾದ ಉದ್ದೇಶಗಳಾಗಿ ಇದ್ದಂಥವು. ಉಳಿದವುಗಳಲ್ಲಿ ಹೆಚ್ಚಿನವು ತುಳು ಮಾತೃಭಾಷೆಯ ಜನರ, ಜಾತೀಯವೆನಿಸುವ ಸಂಸ್ಥೆಗಳು. ಆದರೆ ಇವುಗಳ ನಡೆವಳಿಕೆ ಕಾರ್ಯಕ್ರಮಗಳೆಲ್ಲ ಕನ್ನಡದಲ್ಲಿ. ಇಂದು ತುಳು ಭಾಷೆಯ ಅನನ್ಯತೆ ಹೆಚ್ಚು ಸ್ಪಷ್ಟವಾಗುತ್ತಿರುವಂತೆ ತುಳು-ಕನ್ನಡಗಳ ಸಂಬಂಧ ತುಸು ಸಡಿಲವಾಗುತ್ತಿದೆಯೇ ಎಂಬ ಸಂದೇಹ ಬರುವಂತಿದ್ದರೂ ಅದಕ್ಕೆ ಮುಖ್ಯ ಕಾರಣ ಈ ಸಂಬಂಧದ ಬಂಧದ ಸಡಿಲುವಿಕೆಯಲ್ಲ; ಭಾರತೀಯ ಜನಜೀವನದ ಮೇಲೆ ಇಂಗ್ಲಿಷ್ ಬೀರುತ್ತಿರುವ ಅತಿಯಾದ ಅನಪೇಕ್ಷಣೀಯ ವರ್ಚಸ್ಸು ಎಂಬ ಸಂದೇಹ ಬರುವಂತಿದೆ. ನಾನು ಸೂಚಿಸಿದ ರಾತ್ರಿ ಶಾಲೆಯ ವಿದ್ಯಾರ್ಥಿಗಳೇ ತಮ್ಮ ಜೀವನಸ್ತರವನ್ನು ಸುಧಾರಿಸಿಕೊಂಡು ಇಂದು ಶಹರದ ಉಪನಗರಗಳಲ್ಲಿ ಸ್ವಂತ ಮನೆ ಕಟ್ಟಿಕೊಂಡು ತಮ್ಮ ಮಕ್ಕಳನ್ನು ಕನ್ನಡದ ಶಿಕ್ಷಣಾವಕಾಶವಿರದೆ ಇಂಗ್ಲಿಷಿನ ಮೋಹದಿಂದಲೂ ಇಂಗ್ಲಿಷ್ ಮಾಧ್ಯಮದ ಶಾಲೆಗಳಿಗೆ ಕಳುಹಿಸುತ್ತಿರುವುದು ಸಾಮಾನ್ಯವಾಗಿದೆ.

ಆಧುನಿಕ ಕನ್ನಡ ಸಾಹಿತ್ಯಕ್ಕೆ ಕನ್ನಡ ಮಾತೃಭಾಷೆಯಾಗಿರದ ಮಹನೀಯರು ತಮಿಳು, ಮಲೆಯಾಳಂ, ತೆಲುಗು, ಕೊಂಕಣಿ, ತುಳು, ಉರ್ದು ಹೀಗೆ ಹಲವಾರು ಭಾಷೆಗಳನ್ನಾಡುತ್ತಿದ್ದವರು ಸೇವೆ ಸಲ್ಲಿಸಿದ್ದಾರೆ. ಇವರಲ್ಲಿ ಕೆಲವರಂತೂ ಕನ್ನಡ ಸಾಹಿತ್ಯದ ದಿಗ್ಗಜರು ಎಂದು ಹೆಸರಾದವರು. ಹೀಗಿದ್ದೂ ಇಂಥವರೆಲ್ಲರ ಸಾಹಿತ್ಯಕ ಪ್ರತಿಭೆ ಹಾಗೂ ಕನ್ನಡದ ಸೇವೆ ಇವುಗಳನ್ನು ತೌಲನಿಕ ಅಧ್ಯಯನ ನಡೆಸಿ ಈವರೆಗೂ ಒಂದು ಮಹಾಪ್ರಬಂಧವಾದರೂ ಪ್ರಕಟವಾಗಿದೆಯೇ ಎಂಬ ಸಂದೇಹ ನನಗೆ.

ಈಗ ೫೭ ವರ್ಷಗಳ ನಮ್ಮ ಸ್ವಾತಂತ್ರ್ಯಕ್ಕೆ ನಿಜವಾದ ಅರ್ಥಕೊಡಬೇಕಾದುದು ಭಾರತೀಯ ಭಾಷೆಗಳೇ ಆದರೂ ಮೆಕಾಲೆ ಬಳುವಳಿಯಾದ ಇಂದು ಆಧುನಿಕತೆಗೆ ಪರ್ಯಾಯ ಶಬ್ದವೆನಿಸುವಷ್ಟರ ಮಟ್ಟಿಗೆ ನಾವು ಇಂಗ್ಲಿಷನ್ನು ನೆಚ್ಚಿಕೊಳ್ಳುವ ಸಾಮಾಜಿಕ ಪರಿಸ್ಥಿತಿಯನ್ನು ಉಂಟುಮಾಡಿದೆ. ಇಂದಿನ ಯುವಜನಾಂಗಕ್ಕಂತೂ ಇಂಗ್ಲಿಷ್ ಭಾಷೆ ಗಿಂತಲೂ ಇಂಗ್ಲಿಷಿನ ಸಂಬಂಧವಿರುವ ಪಾಶ್ಚಿಮಾತ್ಯ ಸಂಸ್ಕಾರಗಳೇ ನಮ್ಮ ಪರಂಪರೆಯ ಸೆಳೆತಗಳಿಂದ ಬಿಡಿಸಿಕೊಳ್ಳಲೇಬೇಕಾದ ಮುಖ್ಯ ಸಾಧನವೆನಿಸಿವೆ. ಈಗಂತೂ ಮಾಹಿತಿ ತಂತ್ರಜ್ಞಾನದ ಬೆಳವಣಿಗೆಯಿಂದ ಪಗಾರವನ್ನು ಐದು ಸೊನ್ನೆಗಳಿಂದ ಸೇರಿಸಿ ಎಣಿಸಲು

ಸಾಧ್ಯವಾಗುವುದರಿಂದ ಮಾತೃಭಾಷೆಯೆಂಬುದೇ ಅರ್ಥ ಕಳೆದುಕೊಳ್ಳುವ ಸ್ಥಿತಿಯಲ್ಲಿದೆ. ಇಂದು ಇಂಗ್ಲಿಷ್ ಸಾಮಾಜಿಕ ಅಂತಸ್ತಿನ ಪ್ರತೀಕ, ಆಧುನಿಕರಂತೆ ಬಾಳುತ್ತಿರುವುದರ ಸಂಕೇತ, ಜೀವನಸ್ತರದ ಮಟ್ಟದ ಅಹಂಕಾರವನ್ನೂ ಒಂದು ರೀತಿಯ ವರ್ಗಪ್ರಜ್ಞೆಯನ್ನೂ ಸೂಚಿಸುವ ದಾರಿ. ಎಲ್ಲಕ್ಕಿಂತಲೂ ಹೆಚ್ಚಾಗಿ ಇಂಗ್ಲಿಷ್ ಭಾಷೆಯ ಸಂಬಂಧದಿಂದ, ನಮ್ಮ ಪರಂಪರೆಯ ಪ್ರಜ್ಞೆಯನ್ನು ತ್ಯಜಿಸುವುದರಿಂದ, ಪಾಶ್ಚಿಮಾತ್ಯ ಸಂಸ್ಕಾರಗಳನ್ನು ನೆಚ್ಚಿಕೊಳ್ಳುವುದರಿಂದ, ನಾವು ತಂದುಕೊಳ್ಳುವ ವಿಕೃತ ಸೌಂದರ್ಯಪ್ರಜ್ಞೆ.

ನಮ್ಮ ಮಧ್ಯಮವರ್ಗದ ಹಾಗೂ ಕೆಳ ಮಧ್ಯಮವರ್ಗದ ಜನ ಇಂದು ಇಂಗ್ಲಿಷ್ ಮಾಧ್ಯಮದ ಶಿಕ್ಷಣ ಪಡೆಯಲು ಯಾವ ಬೆಲೆಯನ್ನೂ ತೆರಲು ಸಿದ್ಧರಾಗಿರುವ ಪರಿಸ್ಥಿತಿ ಉಂಟಾಗಿದೆ. ಇದು ನಗರ ಪ್ರದೇಶಗಳಿಗಷ್ಟೆ ಸೀಮಿತವಾಗಿರದೆ ಗ್ರಾಮೀಣ ಪ್ರದೇಶಗಳಿಗೂ ಹರಡುತ್ತಿರುವುದರಿಂದ ಇಷ್ಟರ ತನಕ ಕರ್ನಾಟಕದ ಗ್ರಾಮೀಣ ಪರಿಸರದ ಜನಸಮುದಾಯ ಕನ್ನಡವನ್ನೇ ನೆಚ್ಚಿಕೊಂಡಿದ್ದವರೂ ಇಂಗ್ಲಿಷ್ ಮಾಧ್ಯಮದ ಒಲವಿನಿಂದ ಕನ್ನಡದ ಬಗ್ಗೆ ಕೀಳರಿಮೆ ಬೆಳೆಸಿಕೊಳ್ಳುತ್ತಿದ್ದಾರೆ.

ಇಂಗ್ಲಿಷ್ ಭಾಷೆ ಬೇರೆ, ಸಂಸ್ಕಾರಗಳು ಬೇರೆ ಎಂಬ ವಿವೇಚನೆಯ ದೃಷ್ಟಿಯನ್ನು ತಂದುಕೊಳ್ಳದ ನಮ್ಮ ಯುವಜನಾಂಗ ಮಾತೃಭಾಷೆಯಂತೆಯೇ ಮಾತೃದೇಶದ ಇತಿಹಾಸ ಪರಂಪರೆಗಳಲ್ಲಿ ಏನೂ ಹುರುಳಿಲ್ಲವೆಂಬ ಭಾವನೆಯನ್ನು ನೆಚ್ಚಿಕೊಳ್ಳುವುದರಲ್ಲಿ ಆಶ್ಚರ್ಯವಿಲ್ಲ. ನಗರ ಪ್ರದೇಶಗಳಲ್ಲಂತೂ ಅದೂ ಕರ್ನಾಟಕದ ರಾಜಧಾನಿಯಲ್ಲಿ ಕನ್ನಡದ ಬಗ್ಗೆ ಬೆಳೆಯುತ್ತಿರುವ ಒಂದು ರೀತಿಯ ತಿರಸ್ಕಾರಭಾವವನ್ನು ಯಾವ ರೀತಿ ವಿವರಿಸಬೇಕೆಂದು ನನಗೆ ತಿಳಿದಿಲ್ಲ. ನಾವು ನೆಚ್ಚಿಕೊಂಡಿರುವ ತ್ರಿಭಾಷಾ ಸೂತ್ರ ಕನ್ನಡವನ್ನು ದೂರವಿರಿಸಲು ಇನ್ನಷ್ಟು ಸಹಾಯ ಮಾಡಿದೆ. ಅಚ್ಚಕನ್ನಡಿಗರು ಕನ್ನಡವನ್ನು ಕಲಿಯಬೇಕಾದ ಅನಿವಾರ್ಯ ಪರಿಸ್ಥಿತಿಯನ್ನು ಎದುರಿಸಲು ಮೂರನೆಯ ೫೦ ಅಂಕಗಳ ಭಾಷೆಯನ್ನಾಗಿ ಕನ್ನಡವನ್ನು ಆರಿಸಿಕೊಳ್ಳುವವರನ್ನು ನಾನು ಗಮನಿಸಿದ್ದೇನೆ. ಇಂಗ್ಲಿಷ್ ಮಾಧ್ಯಮದ ಶಾಲೆಗಳಲ್ಲಿ ಕನ್ನಡವನ್ನು ಯಾವ ರೀತಿ ಪಾಠ ಮಾಡುವರೋ ನನಗೆ ತಿಳಿದಿಲ್ಲ. ಆದರೆ ಇಂಥ ಶಾಲೆಗಳಲ್ಲಿ ಕನ್ನಡ ಮಾತನಾಡಿದರೆ ದಂಡ ಕೊಡುವ ಪರಿಸ್ಥಿತಿ ಇದೆಯೆಂಬ ವರದಿಗಳನ್ನು ನಾನು ಗಮನಿಸಿದ್ದೇನೆ. ಮುಂಬಯಿಯಲ್ಲಿ ಅಲ್ಪಸಂಖ್ಯಾತರಾದ ತುಳುವರು, ಕನ್ನಡವನ್ನು ನೆಚ್ಚಿಕೊಂಡಿರುವ ಬಗೆಯನ್ನು ಗಮನಿಸುತ್ತಲೇ ಬಂದಿರುವ ನನಗೆ, ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನಲ್ಲಿ ಕನ್ನಡದ ಶಿಕ್ಷಣಕ್ಕೆ, ಕನ್ನಡ ಮಾಧ್ಯಮಕ್ಕೆ ಜನ ತೋರಿಸುತ್ತಿರುವ ಅನಾದರವನ್ನು ಕಂಡು ಆಶ್ಚರ್ಯವಾಗುತ್ತಿದೆ.

ಇಂಗ್ಲಿಷ್ ಭಾಷೆಯ ನೆರವಿಲ್ಲದ ನಾವು ಬದುಕುವಂತಿಲ್ಲ ಎಂಬ ಆತಂಕವನ್ನು ನಾವೇ ಸೃಷ್ಟಿಸಿಕೊಂಡು ಇಂಗ್ಲಿಷ್ ಮಾಧ್ಯಮದ ಶಿಕ್ಷಣ ಒಳ್ಳೆಯ ಬದುಕಿಗೆ ಹೆದ್ದಾರಿ ಎಂಬ ತಪ್ಪು ಕಲ್ಪನೆಯನ್ನು ಬೆಳೆಸುತ್ತಿರುವುದರಿಂದ, ಮುಂದೆ ಕನ್ನಡ ಒಂದು ಮ್ಯೂಸಿಯಂ ಭಾಷೆಯಾಗದೇ ಎಂಬ ಆತಂಕ ಕನ್ನಡ ಜನಸಮುದಾಯವನ್ನು ಕಾಡುತ್ತಿಲ್ಲವೇ! ಈಗ ಮಾಹಿತಿ ತಂತ್ರಜ್ಞಾನದ ಹೊರ ರಾಜ್ಯಗಳ ಗುತ್ತಿಗೆ (ಬಿಪಿಓ) ಭಾರತದಲ್ಲಿ ಉದ್ಯಮ ಸೃಷ್ಟಿಗೆ ಸಹಕರಿಸಿ ವಿಶ್ವದ ವಿವಿಧ ದೇಶಗಳ ಭಾಷೆಗಳ ಉಚ್ಚಾರ ರೀತಿಯನ್ನು ಕಲಿಯುವ ಉತ್ಸಾಹವೂ ಹೆಚ್ಚಿದೆ. ಯಾವುದೇ ರೀತಿಯ ನಮ್ಮತನವನ್ನು ಪ್ರೋತ್ಸಾಹಿಸುವ ಶಿಕ್ಷಣದ ಪಠ್ಯಕ್ರಮದಲ್ಲೂ ಕೊರತೆ ಬಂದಿರುವುದರಿಂದ, ಇಂದಿನ ವಿದ್ಯಾರ್ಥಿಗಳೂ ಅಧ್ಯಾಪಕರೂ ಕನ್ನಡ ಒಂದು ಅನಿವಾರ್ಯ ಆಪತ್ತು ಎಂದು ತಿಳಿವಳಿಕೆ ಬೆಳೆಸಿಕೊಂಡರೆ ಆಶ್ಚರ್ಯ ಪಡಬೇಕಾಗಿಲ್ಲ.

ಜನಸಂಖ್ಯೆಯ ದೃಷ್ಟಿಯಿಂದಲೂ ಕರ್ನಾಟಕದ ರಾಜಧಾನಿಯಲ್ಲಿ ಕನ್ನಡಿಗರು ಅಲ್ಪಸಂಖ್ಯಾತರು ಎಂಬ ಖಾನೇಶುಮಾರಿಯ ವಿವರಗಳು ತಿಳಿಸುತ್ತವೆ. ಬೆಂಗಳೂರಿನ ಕನ್ನಡಿಗರ ಜನಸಂಖ್ಯೆ ಪ್ರತಿಶತ ಮೂವತ್ತರಷ್ಟು ಎಂದು ಸೂಚಿತವಾಗಿದೆ. ಮಹಾನಗರ ಮುಂಬಯಿಯಲ್ಲಿ ಮರಾಠಿಗರು ಅಲ್ಪಸಂಖ್ಯಾತರು. ದೇಶದ ಬೇರೆ ಬೇರೆ ಭಾಗಗಳಿಂದ ಬಂದು ನೆಲೆಸಿದ ಜನ ಬಹುಸಂಖ್ಯಾತರು. ಆದರೂ ಮುಂಬಯಿಯಲ್ಲಿರುವ ಮರಾಠಿ ಮಾತೃಭಾಷೆಯ ಜನರಿಗಿರುವ ಭಾಷಾಭಿಮಾನ ಬೆಂಗಳೂರಿನ ಕನ್ನಡಿಗರಲ್ಲಿ ಕಾಣುತ್ತಿದ್ದೇನೆ ಎಂದು ಹೇಳುವ ಧೈರ್ಯ ನನಗಿಲ್ಲ.

ಪ್ರಾಥಮಿಕ ಶಿಕ್ಷಣ ಮಾತೃಭಾಷೆಯಲ್ಲಿ ಆಗಬೇಕು ಎಂದು ನಮ್ಮ ಸರ್ವೋಚ್ಚ ನ್ಯಾಯಾಲಯ ತೀರ್ಪು ಕೊಟ್ಟಿದ್ದೆಯಾದರೂ ಕರ್ನಾಟಕದಲ್ಲಿ ಕನ್ನಡಕ್ಕೆ ಯೋಗ್ಯ ಸ್ಥಾನ ನೀಡಬೇಕು ಎಂದು ನಿರ್ಧರಿಸುವ ಸಂಕಲ್ಪ ಶಕ್ತಿ ಸರಕಾರಕ್ಕಿದೆ ಎಂದು ತೋರುತ್ತಿಲ್ಲ. ತಪ್ಪಾಗಿ ಇಂಗ್ಲಿಷನ್ನು ಬಳಸುವುದೂ ತಾವು ಆಧುನಿಕರು ಎಂಬ ಯೋಗ್ಯತೆಯನ್ನು ಬಿಂಬಿಸಲು ಸಹಕರಿಸುತ್ತದೆ ಎಂಬ ಪೊಳ್ಳು ಅಹಂಕಾರವನ್ನು ಪ್ರದರ್ಶಿಸುತ್ತಿರುವುದನ್ನು ನಾವು ಕಾಣುತ್ತಿದ್ದೇವೆ.

ಈ ಸಮಸ್ಯೆಗೆ ಪರಿಹಾರವಿದೆಯೇ! ಕನ್ನಡದ ಭವಿಷ್ಯ ಏನಿರಬಹುದು, ಇಂದಿನ ಯುವ ಜನಾಂಗ ಕನ್ನಡವನ್ನು ನೆಚ್ಚಿಕೊಳ್ಳದೆ ಕನ್ನಡ ಭಾಷೆ ಉಳಿಯಬಹುದೇ. ಭಾಷೆ ಉಳಿಯದೆ ಕನ್ನಡದ ಜನಪದ ಜೀವನದ ಸಂಸ್ಕಾರಗಳು ಮುಂದಿನ ದಶಕಗಳಲ್ಲಿ ಉಳಿಯಲು ಸಾಧ್ಯವೇ ಎಂಬ ನನ್ನ ಚಿಂತನೆಯ ಹರವಿನಲ್ಲಿ ಕೆಳಗಿನ ಮಾತುಗಳನ್ನು ಬರೆಯುತ್ತಿದ್ದೇನೆ.

ನಮ್ಮ ಕೆಲವು ಪ್ರತಿಷ್ಠಿತ ಬುದ್ಧಿಜೀವಿಗಳೆಂದು ಕರೆಸಿಕೊಳ್ಳುತ್ತಿರುವವರು ಇಂಗ್ಲಿಷನ್ನು ಕಲಿಯುವ ಅಗತ್ಯವನ್ನು ಒತ್ತಿ ಒತ್ತಿ ಹೇಳುತ್ತಿದ್ದಾರೆ. ಪ್ರಾಥಮಿಕ ಮೊದಲನೆಯ ತರಗತಿಯಿಂದಲೇ ಇಂಗ್ಲಿಷಿನ ಸಖ್ಯ ವಿದ್ಯಾರ್ಥಿಗಳಿಗೆ ಅಗತ್ಯ ಎನ್ನುತ್ತಿದ್ದಾರೆ. ಈ ರೀತಿಯ ಚಿಂತನೆ ವಾಸ್ತವ ಸ್ಥಿತಿಯನ್ನು ಕಡೆಗಣಿಸಿದ ಚಿಂತನೆ. ಯಾವುದೇ ಇಂಗ್ಲಿಷ್ ಮಾಧ್ಯಮದ ಶಾಲೆಯ ಪ್ರಾಥಮಿಕ ಮೊದಲನೆಯ ತರಗತಿಗೆ ಸೇರಬಯಸುವ ವಿದ್ಯಾರ್ಥಿಗೆ ಇಂಗ್ಲಿಷಿನ ತುಸುವಾದರೂ ಜ್ಞಾನವಿರದೆ ಪ್ರವೇಶ ಸಾಧ್ಯವಾಗುವುದಿಲ್ಲ. ಇಂಗ್ಲಿಷನ್ನು ಮೊದಲನೆಯ ತರಗತಿಯಿಂದ ಕಲಿಸಬೇಕೆನ್ನುವವರು ಪ್ರಾಥಮಿಕ ಪೂರ್ವದ ಮೂರು ವರ್ಷಗಳ ಕಡ್ಡಾಯ ಮಾಂಟೆಸೋರಿ ಪದ್ಧತಿಯ ಶಿಕ್ಷಣವನ್ನು ಗಮನಿಸುವುದಿಲ್ಲ. ಒಂದು ತುಸು ಒಳ್ಳೆಯ ಇಂಗ್ಲಿಷ್ ಮಾಧ್ಯಮದ ಶಾಲೆಯ ಪ್ರವೇಶ ದೊರಕಿಸಿಕೊಳ್ಳಬೇಕಾದರೆ, ಮಗುವಿಗೆ ಎರಡೂವರೆ ವರ್ಷ ಮುಗಿಯುವುದರೊಳಗೆ 'ಪ್ಲೇ ಹೋಮ್' ಅಥವಾ 'ಚಿಣ್ಣರ ಅಂಗಳ'ವನ್ನು ಪ್ರವೇಶಿಸಬೇಕು. ಒಂದು ವರ್ಷ ಅಲ್ಲಿ ಮುಗಿಸಿ, ಮತ್ತೆ ಎಲ್‌ಕೆಜಿ, ಯುಕೆಜಿ ಎಂಬ ಅಪರಿಚಿತ ಇಂಗ್ಲಿಷ್ ಶಬ್ದಗಳನ್ನು ತಮ್ಮ ವಿದ್ಯಾಭ್ಯಾಸದ ಸಂಕೇತಗಳನ್ನಾಗಿ ಭ್ರಮಿಸಿ ಆ ಮೂಲಕ ಇಂಗ್ಲಿಷ್ ಮಾಧ್ಯಮದ ಪ್ರಾಥಮಿಕ ಮೊದಲನೆಯ ತರಗತಿಗೆ ಪ್ರವೇಶ ಪಡೆಯುವ ಅರ್ಹತೆಯನ್ನು ಗಳಿಸಿಕೊಳ್ಳಬೇಕು. ಈ ಅವಧಿಯಲ್ಲಿ ಮಗು ಕಲಿಯುವ ಇಂಗ್ಲಿಷ್ ಪ್ರಾಸ ಗೀತೆಗಳು, ಇಂಗ್ಲಿಷ್ ಅಕ್ಷರಗಳು, ಪದಗಳು, ತನ್ನ ಮಾತೃಭಾಷೆಯ ಬಗೆಗೆ ಒಂದು ರೀತಿಯ ಅಪರಿಚಿತತೆಯನ್ನು ಬೆಳೆಸುವುದು ಸಹಜ ಎಂದು ಹೇಳಲು ಮನಃಶಾಸ್ತ್ರದ ಅಧ್ಯಯನ ಅನಗತ್ಯ. ಅಪ್ಪ ಅಮ್ಮ ಎನ್ನುವುದರ ಬದಲು ಮಮ್ಮಿ ಡ್ಯಾಡಿ ಎಂದು ಸಂಬೋಧಿಸುವುದನ್ನು ಕಂಡು ಆನಂದ ತುಂದಿಲರಾಗುವ ತಂದೆ ತಾಯಿಗಳಿಗೆ ಈ ಮಮ್ಮಿ ಡ್ಯಾಡಿಗಳ ಜತೆಗೆ ಜಾಜ್ ಪಾಪ್ ಸಂಗೀತಗಳನ್ನೂ ಮಕ್ಕಳು ನೆಚ್ಚಿಕೊಳ್ಳುವಂತಾದರೆ ಇನ್ನಷ್ಟು ಸಾಮಾಜಿಕ ಎತ್ತರದ ಅಹಂಕಾರ.

ಕನ್ನಡದ ಭಾಷೆ ಸಂಸ್ಕಾರಗಳು ಉಳಿಯಬೇಕಾದರೆ ಮೊದಲು ನಮ್ಮ ಮಕ್ಕಳು ಈ ಪೂರ್ವ ಪ್ರಾಥಮಿಕ ಶಿಕ್ಷಣದ ಮೂರು ವರ್ಷಗಳಲ್ಲಿ ಇಂಗ್ಲಿಷಿನ ಸಂಪರ್ಕದಿಂದ ದೂರವಿರಬೇಕು. ಈ ಮಾಂಟೆಸೋರಿ ವರ್ಗಗಳಿಗೆ ಬೇಕಾಗುವಂತಹ ಶಿಶು ಸಾಹಿತ್ಯ ಕನ್ನಡದಲ್ಲಿದೆ. ಮಕ್ಕಳು ಸುಲಭವಾಗಿ ಅರ್ಥಮಾಡಿಕೊಳ್ಳುವಂತಹ ತಮ್ಮ ಪರಿಸರದ ವೈವಿಧ್ಯವನ್ನು ಗುರುತಿಸುವಂತಹ ಶಿಶುಗೀತೆಗಳು ಸಾಕಷ್ಟಿವೆ. ಇವೆಲ್ಲವುಗಳ ಒಲವು ಬೆಳೆಸಿಕೊಂಡಾಗ ಮಕ್ಕಳ ಮನಸ್ಸಿನಲ್ಲಿ ಮಾತೃಭಾಷೆಗೆ ಮರ್ಯಾದೆ ಕೊಡುವ ಶಕ್ತಿ ಉಂಟಾಗುವುದು. ಈಗ ಸ್ವಲ್ಪ ಸಮಯದ ಹಿಂದೆ ಎಲ್ಲ ಕೆ. ಜಿ. ವಿದ್ಯಾಭ್ಯಾಸ ಮಾಡಿಸುವ ಶಾಲೆಗಳನ್ನು ನೋಂದಾಯಿಸಿಕೊಳ್ಳುವ ಮಾತು ಬಂದಿತ್ತು. ಆಮೇಲೆ ಸರಕಾರ ಮುಂದುವರಿಯಲಿಲ್ಲ. ಇದು ಅಗತ್ಯವಷ್ಟೇ ಅಲ್ಲ, ಇಂಥ ಶಾಲೆಗಳಲ್ಲಿ ಇಂಗ್ಲಿಷಿನ ಬೋಧನೆ ಕೂಡದು ಎಂಬ ನಿರ್ಬಂಧವಿದ್ದರೆ ಮಾತ್ರ – ಕಾನ್ವೆಂಟ್ ಶಾಲೆಗಳಿಗೂ ಸಂಬಂಧಿಸಿದಂತೆ – ಕನ್ನಡ ಉಳಿಯಲು ಬೆಳೆಯಲು ಸಹಕಾರಿಯಾಗಬಹುದು.

ಬೆಂಗಳೂರಲ್ಲಿ ನಾಲ್ಕು ಶಾಲೆಗಳು ಕನ್ನಡವನ್ನು ಕಲಿಸಲು ಮಾಂಟೆಸೋರಿ ಪದ್ಧತಿಯನ್ನು ಅನುಸರಿಸುತ್ತಿವೆ. ತುಮಕೂರಿನಲ್ಲೂ ಇಂಥ ಒಂದು ಶಾಲೆಯಿದೆ ಎಂದು ಕೇಳಿದ್ದೇನೆ. ಇಲ್ಲಿಯ ಅಧ್ಯಾಪಕಿಯರು ಹೇಳುವಂತೆ, ಈ ವಿಧಾನದಲ್ಲಿ ಕಲಿಯುವ ವಿದ್ಯಾರ್ಥಿಗಳು ಕನ್ನಡ-ಇಂಗ್ಲಿಷ್ ಎರಡು ಭಾಷೆಗಳಲ್ಲೂ ಓದುವುದನ್ನು ಮೊದಲನೆಯ ತರಗತಿಗೆ ಪ್ರವೇಶ ಪಡೆಯುವ ಮೊದಲೇ ರೂಢಿಸಿಕೊಂಡಿರುತ್ತಾರೆ. ಅವರ ಅಭಿಪ್ರಾಯದಂತೆ, ಐದಾರು ಭಾಷೆಗಳ ಪರಿಚಯ ಮಾಡಿಕೊಳ್ಳುವುದೂ ಈ ವಯಸ್ಸಿನ ಮಕ್ಕಳಿಗೆ ಸಾಧ್ಯ. ಕನ್ನಡವನ್ನು ಕಲಿಸುವುದು ಅದರ ಅಕ್ಷರಬಾಹುಳ್ಯದಿಂದ – ಇಂಗ್ಲಿಷಿನಂತೆ ಬರೇ ೨೬ ಅಕ್ಷರಗಳಲ್ಲ – ತುಸು ಕಷ್ಟವೆನಿಸಿದರೂ, ಒತ್ತಕ್ಷರಗಳು, ಅರ್ಕಾಒತ್ತು ಇತ್ಯಾದಿ – ಅಕ್ಷರ ಜೋಡಣೆ ಪದಗಳ ಸೃಷ್ಟಿ ಪರಿಸರದೊಂದಿಗೆ ಸಂಬಂಧ ಕಲ್ಪಿಸುವುದು ಕ್ರಿಯಾತ್ಮಕ ಚಟುವಟಿಕೆಗಳ ಮೂಲಕ ಶಬ್ದಜ್ಞಾನವನ್ನು ಹೆಚ್ಚಿಸುವುದು ಹೀಗೆಲ್ಲ ಭಾಷೆಯ ಪ್ರೀತಿ ಉಂಟಾಗುವಂತೆ ಕನ್ನಡವನ್ನು ಕಲಿಸಲು ಸಾಧ್ಯ ಎನ್ನುತ್ತಾರೆ. ಹೀಗಿರುವುದರಿಂದ ನಮ್ಮ ಸರಕಾರ ಮಾಡಬೇಕಾದ ಮೊದಲ ಕರ್ತವ್ಯ ಇಂಥ ಶಾಲೆಗಳ ನೋಂದಣಿ ವ್ಯವಸ್ಥೆ ಹಾಗೂ ಕೆ. ಜಿ. ಎಂಬ ಇಂಗ್ಲಿಷ್ ಶಬ್ದಗಳನ್ನು ಬಳಸದೆ, ಪೂರ್ವ ಪ್ರಾಥಮಿಕ ಕಿರಿಯ ಮತ್ತು ಹಿರಿಯ ಎಂದೇ ಸೂಚಿಸಿ ಇಂಗ್ಲಿಷನ್ನು ಪ್ರಾಥಮಿಕ ಹಂತದ ಶಿಕ್ಷಣ ಮುಗಿಯುವವರೆಗಾದರೂ ದೂರವಿಡಬೇಕು. ಪ್ರಾಥಮಿಕ ಹಂತದಲ್ಲಿ ಕಂಠಪಾಠ ಮಾಡಿದ ಕನ್ನಡ ಪದ್ಯಗಳು ಜೀವನದುದ್ದಕ್ಕೂ ನೆನಪಿನಲ್ಲಿರುತ್ತವೆ ಎಂಬ ಸತ್ಯವನ್ನು ನಾವು ಏಕೆ ಮರೆಯುತ್ತೇವೆಯೋ ನನಗೆ ತಿಳಿದಿಲ್ಲ. ಈಗಿನ ಶಿಕ್ಷಣ ನೀತಿಯಲ್ಲಿ ಕಂಠಪಾಠ ಮಾಡಿಸುವ ಅಭ್ಯಾಸವೂ ಮರೆಯಾಗುತ್ತಿದೆ.

ಪ್ರಾಥಮಿಕ ಶಿಕ್ಷಣ ಮಾತೃಭಾಷೆಯಲ್ಲಿ ಅಥವಾ ರಾಜ್ಯ ಭಾಷೆಯಲ್ಲಿ ಕಡ್ಡಾಯವಾಗುವಾಗ ಕನ್ನಡದ ಕುರಿತ ಕೀಳರಿಮೆ ಕಡಿಮೆಯಾಗುವುದರಲ್ಲಿ ಸಂದೇಹವಿಲ್ಲ. ಕನ್ನಡವನ್ನು ಉಳಿಸುವ, ಬೆಳೆಸುವ ಕೆಲಸದಲ್ಲಿ ನಮ್ಮ ತಾಯಂದಿರ ಪಾತ್ರ ಅತ್ಯಂತ ಮಹತ್ವದ್ದು. ಅವರಿಗೇ ಮಾತೃಭಾಷೆಯ ಅಭಿಮಾನವಿರದಾಗ ಮಕ್ಕಳಿಗೆ ಅದನ್ನು ಅಂಟಿಸುವುದು ಸಾಧ್ಯವಾಗದ ಕೆಲಸ. ಮನೆಯಲ್ಲಿ ಕನ್ನಡಿಗರು ಕನ್ನಡ ಮಾತನಾಡುವುದನ್ನು ಬಿಟ್ಟು ತಮ್ಮ ಅರ್ಧಮರ್ಧ ಇಂಗ್ಲಿಷ್ ಜ್ಞಾನವನ್ನು ಪ್ರದರ್ಶಿಸ ತೊಡಗಿದರೆ ಮಕ್ಕಳೂ ಅನುಕರಣಶೀಲತೆಯನ್ನು ಬೆಳೆಸಿಕೊಳ್ಳುವುದರಲ್ಲಿ ಆಶ್ಚರ್ಯವಿಲ್ಲ. ನಮ್ಮ ಕೆಲವು ಟಿ. ವಿ. ಕಾರ್ಯಕ್ರಮಗಳಲ್ಲಿ ಮಹಿಳೆಯರು ಹತ್ತು ಶಬ್ದಗಳ ವಾಕ್ಯದಲ್ಲಿ ಆರು ಇಂಗ್ಲಿಷ್ ಶಬ್ದಗಳನ್ನು ಬಳಸುವುದನ್ನು ನೋಡುವಾಗ 'ಅಯ್ಯೋ' ಎನಿಸುತ್ತದೆ. 'ಒಂದೂವರೆ ಗಂಟೆ' ಎನ್ನಬೇಕಾದಲ್ಲಿ ಒನ್ ಎಂಡ್ ಎ ಹಾಫ್ ಅವರ್ ಎನ್ನುವವರು ಮಹಾರಾಷ್ಟ್ರದಲ್ಲಿ ಮಹಿಳೆಯರು ಇಂಗ್ಲಿಷ್ ಶಬ್ದಗಳನ್ನು ಬೆರೆಸದೇನೇ ಮರಾಠಿ ಮಾತನ್ನಾಡುವುದನ್ನು ನೋಡಿ ಕಲಿಯಬೇಕು. ಕನ್ನಡದ ಬುದ್ಧಿಜೀವಿಗಳೆನಿಸಿಕೊಳ್ಳುವವರೂ ಬೌದ್ಧಿಕ ಚರ್ಚೆಗಳಿಗೆ ಇಂಗ್ಲಿಷ್ ಶಬ್ದಗಳನ್ನೂ ವಾಕ್ಯಗಳನ್ನೂ ಬಳಸುವ ರೀತಿ ನಮಗೆ ತಿಳಿದಿದೆ. ಮರಾಠಿ ಮಹಿಳೆಯರೂ ಬೌದ್ಧಿಕ ವಿಚಾರಗಳ ಕುರಿತು ಚರ್ಚಿಸುವಾಗ ಇಂಗ್ಲಿಷನ್ನು ಕನ್ನಡದ ಪ್ರಮಾಣದಲ್ಲಿ ಬಳಸುವುದಿಲ್ಲ. ಮಕ್ಕಳು ಯಾವುದೇ ಮಾಧ್ಯಮದಲ್ಲಿ ಕಲಿಯುತ್ತಿದ್ದರೂ ಮನೆಗಳಲ್ಲಿ ಕನ್ನಡವೇ ಪ್ರಧಾನ ಸಂಪರ್ಕ ಭಾಷೆಯಾಗಿ ಬಳಸುವಾಗ ಕನ್ನಡದ ಪ್ರೀತಿ ಉಳಿಯಲು ಸಾಧ್ಯ.

ಎಂಥ ಶಿಕ್ಷಣ ಪದ್ಧತಿಗೂ ಗ್ರಂಥ ಸಂಸ್ಕಾರ ಪೂರಕ ಎಂದು ತಿಳಿಯದಿದ್ದರೆ ಶಿಕ್ಷಣವೂ ಪೂರ್ಣವೆನಿಸುವುದಿಲ್ಲ. ವ್ಯಕ್ತಿತ್ವದ ವಿಕಸನಕ್ಕೂ ಗ್ರಂಥ ಸಖ್ಯ ಅನಿವಾರ್ಯವೆನಿಸುವ ಆಕರ. ಕರ್ನಾಟಕದಲ್ಲಿ ಗ್ರಂಥ ಸಂಸ್ಕೃತಿಯನ್ನು ಬರೇ ಒಂದು ಔಪಚಾರಿಕ ವ್ಯವಸ್ಥೆಯೆಂದು ಪರಿಗಣಿಸಲಾಗಿದೆ. ಸ್ವಲ್ಪ ಸಮಯದ ಹಿಂದೆ ಸರಕಾರದ ಒಂದು ಆದೇಶದಂತೆ ರಾಜ್ಯದಲ್ಲಿರುವ ಎರಡು ಸಾವಿರಕ್ಕೂ ಹೆಚ್ಚು ಗ್ರಂಥಾಲಯಗಳಿಗೆ ಇಂಟರ್‌ನೆಟ್ ಸೌಲಭ್ಯಗಳನ್ನು ಒದಗಿಸಲಾಗುವುದೆಂಬ ವರದಿ ಪ್ರಕಟವಾಗಿತ್ತು. ನಮ್ಮ ಗ್ರಂಥಾಲಯಗಳು ಯಾವ ರೀತಿ ಕೆಲಸ ಮಾಡುತ್ತಿವೆ ಎಂದು ಸರಿಯಾಗಿ ತಿಳಿಯದೇನೇ ಇಂಟರ್‌ನೆಟ್ ಸೌಲಭ್ಯದ ಕುರಿತು ಅಬ್ಬರದಿಂದ ಮಾತನಾಡುವುದು ವಿಚಿತ್ರವೆನಿಸುತ್ತದೆ. ನಮ್ಮ ಶಿಕ್ಷಣ ವ್ಯವಸ್ಥೆಗೆ ಪೂರಕವಾಗಿ ಪ್ರತಿಯೊಂದು ಗ್ರಾಮದಲ್ಲೂ ಒಂದು ಗ್ರಂಥಾಲಯವಿರಬೇಕಾಗಿದೆ. ಅದು ಆಯ್ಕೆ ಮಾಡಿದ ಯೋಗ್ಯ ಗ್ರಂಥ ಸಂಗ್ರಹವನ್ನು ಹೊಂದಿದ್ದು, ಉತ್ತಮ ಗ್ರಂಥಪಾಲಕರ ನೇತೃತ್ವದಲ್ಲಿ ಹಳ್ಳಿಯ ನಾಗರಿಕರಿಗೆ ಸರಿಯಾದ ಓದಿಗೆ ಅಗತ್ಯವಿರುವ ಗ್ರಂಥಗಳನ್ನು ಒದಗಿಸುವುದರ ಜತೆಗೆ ತಮ್ಮಲ್ಲಿ ಇರದ ಗ್ರಂಥಗಳನ್ನು ಬಯಸಿದವರಿಗೆ ತರಿಸಿ ಕೊಡುವ ಯೋಗ್ಯತೆಯನ್ನೂ ಬೆಳೆಸಿಕೊಂಡಿರಬೇಕು. ಇಂಥ ಗ್ರಂಥಾಲಯ ಆಸಕ್ತರಿಗೆ ಒಂದು ಚರ್ಚೆಯ ಚಾವಡಿಯೂ ಆಗಬೇಕು. ಈಗ ಇರುವ ವ್ಯವಸ್ಥೆಯಲ್ಲಿ ನಾನು ತಿಳಿದಿರುವಂತೆ, ಗ್ರಂಥಪಾಲಕರು ಮಾಸಿಕ ೭೫೦ ರೂಪಾಯಿಗಳ ಗೌರವ ಧನ ಪಡೆದು ಕೆಲಸ ನಿರ್ವಹಿಸಬೇಕು. ಕೆಲಸದ ಭದ್ರತೆಯೂ ಇರದ ಇಂಥ ಗ್ರಂಥಪಾಲಕರಿಂದ ಯಾವ ರೀತಿಯ ನಿಷ್ಠೆಯ ಕೆಲಸವನ್ನು ನಿರೀಕ್ಷಿಸಬಹುದು ಎಂಬುದು ಊಹೆಗೆ ಬಿಟ್ಟ ವಿಚಾರ. ಇಂಥ ಗ್ರಂಥಪಾಲಕರಿಗೆ ಗ್ರಂಥ ವಿಜ್ಞಾನದ ಮಾಹಿತಿ ಎಷ್ಟಿದೆಯೆಂದು ತಿಳಿಯುವಂತಿಲ್ಲ. ಇವರಿಗೆ ವಿಕೇಂದ್ರೀಕೃತ ಗ್ರಂಥ ಖರೀದಿಯ ಸೌಲಭ್ಯವಿಲ್ಲ. ಇವರೆಲ್ಲರಿಗೆ ಗ್ರಂಥ ವಿಜ್ಞಾನದ ತಿಳಿವಳಿಕೆ ಕೊಡುವ ಶಿಬಿರಗಳನ್ನೂ ಕಮ್ಮಟಗಳನ್ನೂ ಏರ್ಪಡಿಸುವ ವ್ಯವಸ್ಥೆಯಿಲ್ಲ. ಪೌರ ಕಾರ್ಮಿಕರಿಗೂ ಸಿಗುವಷ್ಟು ವೇತನದ ಹಾಗೂ ಕೆಲಸದ ಭದ್ರತೆಯೂ ಇರದೆ ಇವರು ಗ್ರಂಥ ನಿಷ್ಠೆಯನ್ನು ಸಮರ್ಥವಾಗಿ ಹೇಗೆ ನಿರ್ವಹಿಸಬಲ್ಲರು, ಗ್ರಂಥ ಸಂಸ್ಕೃತಿಯ ನಿರ್ದೇಶನವನ್ನು ಓದುಗರಿಗೆ ಒದಗಿಸಬಲ್ಲರು ಎಂಬ ವಿಚಾರವಾಗಿ ಯಾರೂ ತಲೆಕೆಡಿಸಿಕೊಂಡಂತಿಲ್ಲ. ಕನ್ನಡದಲ್ಲಿ ಪ್ರಕಟವಾಗುವ ಎಲ್ಲ ಗ್ರಂಥಗಳನ್ನು ಪಟ್ಟಿ ಮಾಡಿ ಅವುಗಳನ್ನು ತಿಳಿಸುವ ಯಾವ ವ್ಯವಸ್ಥೆಯೂ ಇಲ್ಲ. ನಮ್ಮ ಮಾಧ್ಯಮ ಜಗತ್ತಿನ ಪತ್ರಿಕೆಗಳಿಗೂ ಇದು ತಾವು ಮಾಡಬೇಕಾದ ಕೆಲಸವೆಂದು ತಿಳಿದಂತಿಲ್ಲ. ಇಂದಿನ ಪರಿಸ್ಥಿತಿಯಲ್ಲಿ ಮಾಸಿಕ ಎರಡು ಸಾವಿರ ರೂಪಾಯಿಗಳ ಸಂಬಳ ಹಾಗೂ ಕೆಲಸದ ಭದ್ರತೆ ಇರದೆ ಪರಿಣತರು ಈ ಕೆಲಸಗಳಿಗೆ ಬರುವಂತಿಲ್ಲ. ಕನ್ನಡ ಉಳಿದು ಬೆಳೆಯಬೇಕಾದರೆ ಓದುಗರನ್ನು ಆಕರ್ಷಿಸುವ ಹಾಗೂ ಅವರಿಗೆ ಮಾರ್ಗದರ್ಶನ ಮಾಡಬಲ್ಲ ಗ್ರಂಥಾಲಯಗಳೂ ಗ್ರಂಥಪಾಲಕರೂ ಅತ್ಯಗತ್ಯ.

ವೈಯಕ್ತಿಕವಾಗಿ ಹಾಗೂ ಸಾಮಾಜಿಕವಾಗಿ ಕನ್ನಡಿಗರು ಕನ್ನಡದ ಬಗ್ಗೆ ಅಭಿಮಾನ ತಂದುಕೊಳ್ಳುವುದು ಕಷ್ಟದ ಕೆಲಸವೇನಲ್ಲ. ಎಲ್ಲ ಮನೆಗಳಲ್ಲಿ ಕನ್ನಡವೇ ಮನೆ ಮಾತಾಗಿ ಕನ್ನಡದ ಸಾಹಿತ್ಯ, ಸಂಸ್ಕೃತಿ, ಕಲೆಗಳನ್ನು ನೆಚ್ಚಿಕೊಳ್ಳುವ ಆಸಕ್ತಿ ಬೆಳೆದಾಗ, ಅದೇ ಒಂದು ಸಂಪ್ರದಾಯವಾಗಿ ಮಕ್ಕಳನ್ನೂ ಆಕರ್ಷಿಸುವುದು.

ಯಾವುದೇ ಸಮಾರಂಭವಾಗಲೀ ಆಮಂತ್ರಣಗಳನ್ನು ಕಳುಹಿಸುವಾಗ ಇಂಗ್ಲಿಷ್ ಭಾಷೆಯನ್ನು ಬಳಸುವ ಗುಲಾಮ ಸಂಸ್ಕಾರವನ್ನು ಕೈ ಬಿಟ್ಟು ಕನ್ನಡವನ್ನೇ ಬಳಸುವಂತಾದರೆ ಕನ್ನಡದ ಜಾಗೃತಿ ಸಾರ್ವತ್ರಿಕವಾಗಿ ಪಸರಿಸುವುದರಲ್ಲಿ ಸಂದೇಹವಿಲ್ಲ.

ನಮಗೆ ಇಂಗ್ಲಿಷ್ ಭಾಷೆಯ ಸಂಪರ್ಕವೇ ಬೇಡವೆಂದು ಈ ದಿನಗಳಲ್ಲಿ ಯಾರೂ ಹೇಳುವಂತಿಲ್ಲ. ಇಂಗ್ಲಿಷ್ ವಿಶ್ವದ ಜ್ಞಾನಭಂಡಾರಕ್ಕೆ ಬಾಗಿಲು ಎಂಬುದನ್ನು ಯಾರೂ ಅಲ್ಲಗಳೆಯುವುದಿಲ್ಲ. ಆದರೆ ಅದಕ್ಕೆ ಅಗ್ರಪೂಜೆ ಕೊಟ್ಟು ನಮ್ಮ ಭಾಷೆ ಸಂಸ್ಕೃತಿಗಳ ಪರಂಪರೆಯನ್ನೇ ಕಡೆಗಣಿಸುವುದರಿಂದ ನಾವು ಸಾಂಸ್ಕೃತಿಕವಾಗಿ ತಬ್ಬಲಿಗಳಾಗುತ್ತೇವೆ. ನಾವು ನಮ್ಮ ಮಾತೃಭಾಷೆಯ ಹಾಗೂ ನಮ್ಮ ರಾಜ್ಯದ ಸಾಂಸ್ಕೃತಿಕ ಜೀವನದಿಂದ ದೂರ ಸರಿಯುತ್ತ ಹೋದಂತೆ ಸಾಂಸ್ಕೃತಿಕವಾಗಿಯೂ ತಬ್ಬಲಿಗಳಾಗುವುದು ಖಚಿತ. ಹೀಗಾದಾಗ ನಾವು ನಮ್ಮ ದೇಶದ ಇತಿಹಾಸವನ್ನೂ ಸಂಸ್ಕೃತಿಯನ್ನೂ ಮರೆಯುತ್ತೇವೆ. ಇದರಿಂದಾಗಿ ನಾವು ನಮಗೆ ಇರಬೇಕಾದ ದೇಶಾಭಿಮಾನದಿಂದಲೂ ವಂಚಿತರಾದಾಗ ನಮ್ಮ ರಾಷ್ಟ್ರಾಭಿಮಾನವೂ ಪ್ರಶ್ನಾರ್ಹವಾಗುತ್ತದೆ.

**ವ್ಯಾಸರಾಯ ಬಲ್ಲಾಳ**
'ಉತ್ತರಾಯಣ', ನಂ. ೧೦೬೪, ಕುಮಾರಸ್ವಾಮಿ ಲೇಔಟ್, ೫೦ ಅಡಿ ರಸ್ತೆ, ೧ನೇ ಘಟ್ಟ, ಬೆಂಗಳೂರು - ೫೬೦ ೦೭೮

ಸಿ. ಆರ್. ಕೃಷ್ಣರಾವ್

ನಿವೃತ್ತ ನ್ಯಾಯಾಧೀಶ ಶ್ರೀ ಕೆ.ಪಿ. ಚೆನ್ನಬಸಪ್ಪ, ವಕೀಲರುಗಳಾದ ಶ್ರೀ ಎಂ. ಸಿ. ನರಸಿಂಹನ್, ಶ್ರೀ ಎಸ್. ಆರ್. ಗೌತಮ್ ಮತ್ತು ಶ್ರೀ ಮುರಳೀಧರ ನವರುಗಳೊಂದಿಗೆ ನಡೆಸಿದ ಚರ್ಚೆ ಮತ್ತು ಆನಂತರ ನಡೆಸಿದ ಸಮಾಲೋಚನೆಯ ಆಧಾರದ ಮೇಲೆ ಈ ಲೇಖನವನ್ನು ಸಿದ್ಧಗೊಳಿಸಲಾಗಿದೆ.

— ಲೇ.

# ಸಂವಿಧಾನದ ಧ್ಯೇಯೋದ್ದೇಶಗಳನ್ನು ನ್ಯಾಯಾಂಗ ಎತ್ತಿಹಿಡಿದೀತೆ ?

ಪ್ರಜಾಸತ್ತಾತ್ಮಕ, ಜಾತ್ಯತೀತ, ಸಮಾಜವಾದಿ, ಸುಖೀರಾಜ್ಯ ನಿರ್ಮಾಣ ಮಾಡುವ ಗುರಿ ಇರಿಸಿಕೊಂಡಿರುವ ನಮ್ಮ ಭಾರತದ ಸಂವಿಧಾನ ಅನುಷ್ಠಾನಕ್ಕೆ ಬಂದು ಐವತ್ತು ವರ್ಷಗಳಿಗೂ ಮೇಲಾಯಿತು. ಪ್ರಪಂಚದ ಎಲ್ಲ ಸಂವಿಧಾನಗಳಿಗಿಂತ ಭಾರತದ ಸಂವಿಧಾನ ಗಾತ್ರದಲ್ಲಿ ದೊಡ್ಡದು. ಸಂವಿಧಾನವನ್ನು ರೂಪಿಸಿದ ವರಿಷ್ಠರು ಹಲವು ದೇಶಗಳ ಸಂವಿಧಾನಗಳನ್ನು, ಆಚರಣೆಗಳನ್ನು ಅಧ್ಯಯನ ಮಾಡಿ, ಅವುಗಳಲ್ಲಿನ ಒಳ್ಳೆಯ ಅಂಶಗಳನ್ನು ಅದರಲ್ಲಿ ಅಳವಡಿಸಿದ್ದಾರೆ. ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ, ವಿಚಾರ, ಅಭಿವ್ಯಕ್ತಿ, ವಿಶ್ವಾಸ, ಧರ್ಮದ ಮತ್ತು ಉಪಾಸನಾ ಸ್ವಾತಂತ್ರ್ಯ, ಸಮಾನ ಸ್ಥಾನಮಾನ ಮತ್ತು ಅವಕಾಶ ದೊರಕುವಂತೆ ಮಾಡುವುದು, ವ್ಯಕ್ತಿಯ ಗೌರವವನ್ನು, ರಾಷ್ಟ್ರದ ಘನತೆ, ಏಕತೆಗಳನ್ನು ಸುಭದ್ರವಾಗಿ ನೆಲೆಗೊಳಿಸುವ ಎಲ್ಲದರಲ್ಲೂ ಭ್ರಾತೃಭಾವನೆಯನ್ನು ಬೆಳಸುವುದು ಸಂವಿಧಾನದ ದೃಢ ನಿಶ್ಚಯ.

ಜಾತಿಮತ ಭೇದವಿಲ್ಲದೆ ಎಲ್ಲರಿಗೂ ಉದ್ಯೋಗಾವಕಾಶ, ಶಿಕ್ಷಣ ಮತ್ತು ನ್ಯಾಯ, ವಾಕ್‌ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಶಾಂತಿಯುತವಾಗಿ ಸಭೆ ಸೇರುವ, ಸಂಘಟನೆ ಸ್ಥಾಪಿಸಿಕೊಳ್ಳುವ ಮತ್ತು ಇಚ್ಛಿತ ಕೆಲಸವನ್ನು ಮಾಡುವ ಸ್ವಾತಂತ್ರ್ಯ, ಎಲ್ಲ ಬಗೆಯ ಶೋಷಣೆಯಿಂದ ರಕ್ಷಣೆ, ವಾಸ ಮತ್ತು ಸಂಚಾರ ಸ್ವಾತಂತ್ರ್ಯ, ಆಸ್ತಿ ಸಂಪಾದಿಸುವ, ಇರಿಸಿಕೊಳ್ಳುವ ಅಥವಾ ಅದನ್ನು ಮಾರುವ ಸ್ವಾತಂತ್ರ್ಯ ಮತ್ತು ಬೇಕಾದ ಧರ್ಮ ಹಾಗೂ ಅನುಸರಿಸುವ ಸ್ವಾತಂತ್ರ್ಯ ಸಂಕ್ಷೇಪವಾಗಿ ಇವು ಸಂವಿಧಾನದಲ್ಲಿ ಖಾತರಿಗೊಳಿಸಿರುವ ಮೂಲಭೂತ ಹಕ್ಕುಗಳು. ಇವಲ್ಲದೆ, ರಾಷ್ಟ್ರದ ಎಲ್ಲ ಪ್ರಜೆಗಳಿಗೂ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ವ್ಯವಹಾರಗಳಲ್ಲಿ ಭಾಗವಹಿಸಲು ನ್ಯಾಯ ಹಾಗೂ ಸಮಾನವಾದ ಅವಕಾಶಗಳನ್ನು ಸಂವಿಧಾನದಲ್ಲಿ ಒದಗಿಸಲಾಗಿದೆ.

ಸಂವಿಧಾನ ಅನುಷ್ಠಾನಕ್ಕೆ ಬಂದಾಗಿನಿಂದ ಈವರೆಗೆ ಸುಮಾರು ಒಂದುನೂರು ತಿದ್ದುಪಡಿಗಳಾಗಿದ್ದರೂ ಮೂಲಭೂತ ಹಕ್ಕುಗಳು ಮತ್ತು ಉದ್ದೇಶಗಳು ಬದಲಾಗಿಲ್ಲ. ಸಂವಿಧಾನದಲ್ಲಿ ನಮೂದಿತವಾಗಿರುವ ಗುರಿಗಳನ್ನು ಸಾಧಿಸುವುದರ ದಿಶೆಯಲ್ಲಿ ಮಾತ್ರ ಎಡವಟ್ಟಾಗಿದೆ, ಪ್ರಗತಿ ಕುಂಠಿತವಾಗಿದೆ. ಸಂವಿಧಾನ ಕರ್ತೃಗಳ ಉದ್ದೇಶಿತ ಗುರಿಗಳಲ್ಲಿ ಕಾಲುಭಾಗದಷ್ಟಾದರೂ ಕಾರ್ಯಗತವಾಗಿದ್ದರೆ ಎಷ್ಟೋ ಪ್ರಗತಿಯಾಗುತ್ತಿತ್ತು. ಆದರೆ ಉದ್ದೇಶಿತ ಗುರಿಗಳನ್ನು ಸಾಧಿಸಲು ಅಗತ್ಯವಾಗಿರುವ ಮನೋಧರ್ಮ, ದೃಢನಿಶ್ಚಯ ಹಾಗೂ ಪ್ರಾಮಾಣಿಕತೆಯ ಕೊರತೆ ಪ್ರಭುತ್ವದ ಎಲ್ಲ ಅಂಗಗಳಲ್ಲೂ ಎದ್ದುಕಾಣುತ್ತದೆ.

ಕಾರ್ಯಾಂಗ, ಶಾಸಕಾಂಗ ಮತ್ತು ನ್ಯಾಯಾಂಗ, ಈ ಮೂರು ಸಂವಿಧಾನದ ಧ್ಯೇಯೋದ್ದೇಶಗಳನ್ನು ಕಾರ್ಯಗತ ಮಾಡುವುದಕ್ಕಾಗಿ ನೇಮಿತವಾಗಿರುವ ಸಂಸ್ಥೆಗಳು. ಈ ಮೂರೂ ಅಂಗಗಳು ಸ್ವತಂತ್ರ ಅಸ್ತಿತ್ವ ಹೊಂದಿವೆಯಾದರೂ ಪರಸ್ಪರ ಪೂರಕವಾಗಿ ಇರುವುವಲ್ಲದೆ, ಅವಲಂಬಿತವಾಗಿರುತ್ತವೆ. ಇವುಗಳ ಕಾರ್ಯವ್ಯಾಪ್ತಿಯನ್ನು ಸಂವಿಧಾನದಲ್ಲಿ ವಿವರವಾಗಿ ನಮೂದಿಸಲಾಗಿದೆ. ಸಂಕ್ಷೇಪವಾಗಿ ಹೇಳಬೇಕೆಂದರೆ, ಕಾನೂನಿನ ವ್ಯಾಪ್ತಿಯೊಳಗೆ ಆಡಳಿತ ನಿರ್ವಹಣೆ, ಜನತೆಯ ಸಂರಕ್ಷಣೆ, ಅಂಗೀಕೃತ ಕಾರ್ಯಕ್ರಮಗಳನ್ನು ಕಾರ್ಯರೂಪಕ್ಕೆ ತರುವುದು ಕಾರ್ಯಾಂಗದ ಹೊಣೆ. ಇದಕ್ಕೆ ಅಗತ್ಯವಾದ ಕಾಯಿದೆಗಳನ್ನು ಸಂವಿಧಾನಕ್ಕನುಸಾರವಾಗಿ ರೂಪಿಸುವುದು, ಅಂಗೀಕರಿಸುವುದು; ಇವನ್ನು ಕಾರ್ಯಗತ ಮಾಡುವ ಕಾರ್ಯಾಂಗದ ಚಟುವಟಿಕೆಗಳ ಮೇಲೆ ನಿಗಾ ಇರಿಸಿ, ನಿಯಂತ್ರಿಸುವುದು ಶಾಸಕಾಂಗದ ಹೊಣೆ. ಪ್ರಜೆಗಳ ಹಕ್ಕುಗಳ ರಕ್ಷಣೆ, ನ್ಯಾಯ ವಿತರಣೆ, ಸಂವಿಧಾನ ಉಲ್ಲಂಘನೆ ಆಗದಂತೆ ನೋಡಿಕೊಳ್ಳುವುದು, ಅದರ ಧ್ಯೇಯೋದ್ದೇಶಗಳನ್ನು ಎತ್ತಿ ಹಿಡಿಯುವುದು ನ್ಯಾಯಾಂಗದ ಹೊಣೆ.



ಸಂವಿಧಾನದಲ್ಲಿ ನಿಗದಿಯಾಗಿರುವ ತನ್ನ ಹೊಣೆಗಾರಿಕೆಯನ್ನು ನ್ಯಾಯಾಂಗ ಎಷ್ಟು ಮಟ್ಟಿಗೆ ನಿರ್ವಹಿಸಿದೆ, ನಿರ್ವಹಿಸುತ್ತಿದೆ ಎನ್ನುವುದನ್ನು ವಿಮರ್ಶಾತ್ಮಕವಾಗಿ ಅವಲೋಕಿಸುವುದು ಅಗತ್ಯ. ಇವು ಆಗಾಗ್ಗೆ ಮಾಡಬೇಕಾದುದೂ ಹೌದು. ಇಂಥ ಪ್ರಯತ್ನಗಳು ಅಧಿಕೃತವಾಗಿಯೂ ಅನಧಿಕೃತವಾಗಿಯೂ ನಡೆದಿವೆ. ಅವು ವ್ಯಕ್ತಗೊಳಿಸಿರುವ ಅಭಿಪ್ರಾಯಗಳು ಉತ್ತೇಜನಕಾರಿಯಾಗಿಲ್ಲ. ಸಾಕಷ್ಟು ಸುಧಾರಣೆಗಳು ನ್ಯಾಯಾಂಗ ವ್ಯವಸ್ಥೆಯಲ್ಲಿ ಆಗಬೇಕಾಗಿದೆ ಎನ್ನುವುದರಲ್ಲಿ ಎರಡಭಿಪ್ರಾಯ ಇಲ್ಲ. ಕೆಳಗಿನಿಂದ ಮೇಲಿನವರೆಗೆ ನ್ಯಾಯ ವಿತರಣೆಯು

ತೃಪ್ತಿದಾಯಕವಾಗಿಲ್ಲ. ಜನಸಾಮಾನ್ಯರ ವಿಶ್ವಾಸವನ್ನು ಬಲಗೊಳಿಸುವಂಥ ವಾಗಿಲ್ಲ ಎಂದಷ್ಟೇ ಹೇಳಬಹುದು. ನಮ್ಮ ದೇಶದಲ್ಲಿ ಯಾವುದೇ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯದ (ಸುಪ್ರೀಂ ಕೋರ್ಟಿನ) ತೀರ್ಪು ಅಂತಿಮ. ವಿವಾದಾತ್ಮಕ ವಿಷಯಗಳಲ್ಲಿ ಸಂವಿಧಾನವನ್ನು ಅರ್ಥೈಸಿ ಅದು ನೀಡುವ ತೀರ್ಮಾನ ಎಲ್ಲರೂ ಕಡ್ಡಾಯವಾಗಿ ಅನುಸರಿಸಬೇಕಾದ ಶಾಸನವಾಗುತ್ತದೆ. ಇದಲ್ಲದೆ ಸಂವಿಧಾನವನ್ನು ಎತ್ತಿಹಿಡಿಯುವುದು, ಅದರ ಉಲ್ಲಂಘನೆಯಾಗದಂತೆ ನೋಡಿ ಕೊಳ್ಳುವುದು, ಪ್ರಜೆಗಳ ಮೂಲಭೂತ ಹಕ್ಕುಗಳನ್ನು ರಕ್ಷಿಸುವುದು ಸುಪ್ರೀಂ ಕೋರ್ಟಿನ ಆದ್ಯ ಕರ್ತವ್ಯ ಕೂಡ. ಹಾಗಾಗಿ, ಸಂಕ್ಷೇಪವಾಗಿ ಅದರ ಕಾರ್ಯ ಕಲಾಪಗಳನ್ನು ಇಲ್ಲಿ ವಿಶಿಷ್ಟವಾಗಿ ಗಮನಿಸೋಣ.

ನಮ್ಮ ದೇಶದ ನ್ಯಾಯಾಂಗ ವ್ಯವಸ್ಥೆ ಸಾಕಷ್ಟು ವ್ಯಾಪಕವಾದ್ದು. ಬ್ರಿಟಿಷರ ಆಡಳಿತ ಕಾಲದಿಂದ ನಡೆದುಕೊಂಡು ಬಂದಿರುವ ಈ ವ್ಯವಸ್ಥೆ ಹೆಚ್ಚು ಬದಲಾವಣೆಗಳಿಲ್ಲದೆ ಹಾಗೇ ಉಳಿದುಕೊಂಡಿದೆ. ಪ್ರಜೆಗಳಿಗೆ ನ್ಯಾಯವಿತರಣೆಯು ಕೆಳಗಿನ ಹಂತ ತಾಲ್ಲೂಕು ಮಟ್ಟದಲ್ಲಿ ಷೇಕದಾರರಿಂದ ಹಿಡಿದು ದೂರದ ದೆಹಲಿಯ ಸುಪ್ರೀಂ ಕೋರ್ಟಿನವರೆಗೆ ವ್ಯಾಪಿಸಿದೆ. ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ ನ್ಯಾಯ ದೊರಕಿಸಿಕೊಳ್ಳಲು ಮುನ್ಸಿಫ್ ಕೋರ್ಟ್‌ನಿಂದ ಸುಪ್ರೀಂ ಕೋರ್ಟ್‌ನವರೆಗೆ ಹೋಗಬಹುದು. ದಾವೆಗಾರ ಗಟ್ಟಿಮುಟ್ಟಾಗಿದ್ದು, ಸ್ಥಿತಿವಂತನಾಗಿರಬೇಕು ಅಷ್ಟೆ. ರಾಜ್ಯಗಳ ಮಟ್ಟಿಗೆ ಉಚ್ಚ ನ್ಯಾಯಾಲಯಗಳು (ಹೈಕೋರ್ಟು) ಮೇಲ್ಮನವಿಗೆ ಅಂತಿಮ. ಅಲ್ಲಿಂದಾಚೆಗೆ ಸುಪ್ರೀಂ ಕೋರ್ಟು. ಹೀಗೆ ನ್ಯಾಯಾಲಯದ ಮೆಟ್ಟಿಲುಗಳು ಒಂದಕ್ಕಿಂತ ಇನ್ನೊಂದು ಕಡಿದಾದುದಷ್ಟೇ ಅಲ್ಲದೆ ತುಂಬಾ ದುಬಾರಿ ಕೂಡ.

ಈ ವ್ಯವಸ್ಥೆಯಲ್ಲಿ ಜನಸಾಮಾನ್ಯರಿಗೆ ನ್ಯಾಯ ಎಷ್ಟುಮಟ್ಟಿಗೆ ದೊರೆಯುತ್ತಿದೆ? ಇದು ನಮ್ಮ ಇದಿರು ಏಳುವ ಕ್ಲಿಷ್ಟವಾದ ಪ್ರಶ್ನೆ. ಇದಕ್ಕೆ ಉತ್ತರವೂ ಅಷ್ಟೇ ಕ್ಲಿಷ್ಟ. ಏಕೆಂದರೆ, ಅನ್ಯಾಯದ ವಿರುದ್ಧ ನ್ಯಾಯ ದೊರಕಿಸಿಕೊಳ್ಳಲು ಜನ ನ್ಯಾಯಾಲಯದ ಮೊರೆ ಹೋಗುವುದು ಅನಿವಾರ್ಯವಾಗುತ್ತದೆ. ಆದರೆ ನ್ಯಾಯ ದೊರಕುವುದು ಅವರ ಅದೃಷ್ಟ ಎಂದಾಗಿದೆ ಇಂದಿನ ಪರಿಸ್ಥಿತಿ. ಮೊದಲನೆಯದಾಗಿ, ನ್ಯಾಯಾಲಯದ ಮೆಟ್ಟಿಲೇರುವುದೇ ದುಬಾರಿಯಾದ ಸಾಹಸ ಜನಸಾಮಾನ್ಯರಿಗೆ. ಇನ್ನು ಸರ್ವೋಚ್ಚ ನ್ಯಾಯಾಲಯವಂತೂ ಅವರಿಗೆ ಎಟುಕದು. ಹಾಗಾಗಿ, ನ್ಯಾಯ ದೊರಕಿಸಿಕೊಳ್ಳಲು ಪರ್ಯಾಯ ಮಾರ್ಗಗಳನ್ನು ಕಂಡುಕೊಳ್ಳಬೇಕಾದಂಥ, ತಮ್ಮ ಸ್ವಂತ ಶಕ್ತಿಯ ಮೇಲೆ ಅವಲಂಬಿಸಿಕೊಳ್ಳಬೇಕಾದಂಥ ಪರಿಸ್ಥಿತಿ ಉಂಟಾಗುತ್ತಿದೆ. ಇಷ್ಟಾದರೂ ದಾವೆಗಳ ಸಂಖ್ಯೆ ಕಡಿಮೆಯಾಗಿಲ್ಲ, ಬೆಳೆಯುತ್ತಲೇ ಇದೆ. ಇನ್ನು ನ್ಯಾಯ ನಿರ್ಣಯದಲ್ಲಾಗುತ್ತಿರುವ ತಡ, ಮಂದಗತಿ: 'ನ್ಯಾಯ ವಿಳಂಬನೆ, ನ್ಯಾಯ ನಿರಾಕರಣೆ' ಎಂಬ ಉಕ್ತಿ ಬಂದಿದೆ. ಅಂದರೆ, ನ್ಯಾಯನಿರ್ಣಯ ತಡವಾದಷ್ಟೂ ನ್ಯಾಯ ದೊರಕದ ಹಾಗೆಯೇ ಎಂದರ್ಥ. ನಮ್ಮ ನ್ಯಾಯಾಲಯಗಳಲ್ಲಿ ವರ್ಷಗಟ್ಟಲೆ ಮೊಕದ್ದಮೆಗಳು ಧೂಳುಮುಚ್ಚಿಕೊಳ್ಳುತ್ತಿವೆ. ಹತ್ತು ಹದಿನೈದು ವರ್ಷಗಳಿಂದ ನೆನೆಗುದಿಗೆ ಬಿದ್ದಿರುವಂಥ ಪ್ರಕರಣಗಳಿವೆ. ಇಂಥ ಮೊಕದ್ದಮೆಗಳ ಸಂಖ್ಯೆ ಹತ್ತಾರು ಸಾಲಿನ ಬೆಟ್ಟದಷ್ಟು ಬೆಳೆದು ನಿಂತಿವೆ ಎಲ್ಲ ಹಂತಗಳಲ್ಲೂ. ಈ ಪರಿಸ್ಥಿತಿಯನ್ನು ನಿವಾರಿಸುವ ಬಗೆಗೆ ಹಲವು ಶಿಫಾರಸುಗಾರರಿದ್ದರೂ ಏನೂ ಆಗಿಲ್ಲ. ವರ್ಷಗಳು ಉರುಳಿದಂತೆ ಅವು ಇನ್ನಷ್ಟು ಬೆಳೆಯುತ್ತಿವೆ. ಸಾಕ್ಷಿ ವಿಚಾರಣೆ, ವಾದಗಳೆಲ್ಲ ಮಂಡನೆಯಾಗಿದ್ದು ಕಾಯ್ದಿರಿಸಿರುವ ತೀರ್ಪುಗಳ ಸಂಖ್ಯೆಯೇ ಹೈಕೋರ್ಟು ಮತ್ತು ಸುಪ್ರೀಂ ಕೋರ್ಟುಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿವೆ. ಇಂಥ ಪರಿಸ್ಥಿತಿಯಲ್ಲಿ ನ್ಯಾಯವಿತರಣೆ ಎಷ್ಟುಮಟ್ಟಿಗೆ ಪರಿಣಾಮಕಾರಿಯಾಗಿದೆ, ಸಮರ್ಪಕವಾಗಿದೆ ಎಂಬುದನ್ನು ಊಹಿಸಿಕೊಳ್ಳಬಹುದು.

ಇನ್ನು ನಾಡಿನ ಅತ್ಯುನ್ನತ ನ್ಯಾಯ ಪೀಠವಾದ ಸುಪ್ರೀಂ ಕೋರ್ಟಿನ ವಿಚಾರಕ್ಕೆ ಬರೋಣ. ಇಪ್ಪತ್ತೆಂಟು ನ್ಯಾಯಮೂರ್ತಿಗಳನ್ನೊಳಗೊಂಡಿರುವ ಈ ನ್ಯಾಯಾಲಯ ನೀಡುವ ತೀರ್ಪು ಅಂತಿಮ ಹಾಗೂ ಎಲ್ಲರಿಗೂ ಅನ್ವಯ, ಈ ಮೊದಲೇ ಹೇಳಿರುವ ಹಾಗೆ. ಅದು ಒಬ್ಬರೇ ನ್ಯಾಯಮೂರ್ತಿಗಳ ಪೀಠವಾಗಿರಬಹುದು, ಇಬ್ಬರು ಅಥವಾ ಮೂವರ ಅಥವಾ ಇನ್ನೂ ಹೆಚ್ಚು ಸಂಖ್ಯೆಯ ಪೀಠವಾಗಿರಬಹುದು. ತನ್ನ ತೀರ್ಪುಗಳನ್ನು ಮಾರ್ಪಡಿಸುವ, ಹಿಂದಿನ ತೀರ್ಪುಗಳನ್ನು ಪರಿಷ್ಕರಿಸುವ ಅಥವಾ ತಳ್ಳಿಹಾಕುವ ಹಕ್ಕು ಸುಪ್ರೀಂ ಕೋರ್ಟಿಗೆ ಮಾತ್ರ ಇರುತ್ತದೆ. ಅಂದರೆ ಸುಪ್ರೀಂ ಕೋರ್ಟು ತನ್ನ ಹಿಂದಿನ ತೀರ್ಪುಗಳಿಗೇ ಬದ್ಧವಾಗಿರಬೇಕೆಂದೇನಿಲ್ಲ, ಅದು ಅವನ್ನು ಮಾರ್ಪಡಿಸಬಹುದು.

ಸಂವಿಧಾನಕ್ಕೆ ಸಂಬಂಧಪಟ್ಟ ವಿಷಯಗಳ ತೀರ್ಮಾನಕ್ಕೆ ಸಾಮಾನ್ಯವಾಗಿ ಹೆಚ್ಚು ಸಂಖ್ಯೆಯ ನ್ಯಾಯಮೂರ್ತಿಗಳ ಪೀಠವನ್ನು ರಚಿಸಲಾಗುತ್ತದೆ. ಇದು ವಿವಾದಕ್ಕೊಳಗಾಗಿರುವ ವಿಷಯದ ಮೇಲೆ ಅವಲಂಬಿತ. ಸಂವಿಧಾನದ ವಿಧಿಗಳನ್ನು ಅರ್ಥೈಸುವ

ಸುಪ್ರೀಂ ಕೋರ್ಟಿನ ತೀರ್ಮಾನಗಳು ನಮಗೆ ಹೆಚ್ಚು ಮುಖ್ಯ. ಏಕೆಂದರೆ, ಅವು ತುಂಬಾ ದೂರಗಾಮಿಯಾದ ಪರಿಣಾಮಗಳನ್ನು ಹೊಂದಿರುತ್ತವೆ. ಅವು ಸಂವಿಧಾನದ ಧ್ಯೇಯೋದ್ದೇಶಗಳನ್ನೇ ಬದಲಿಸುವಂಥವಾಗಿರಬಹುದು. ಅವು ಸರಕಾರದ ಜನಪರ ಕಾರ್ಯಕ್ರಮಗಳ, ಕಾರ್ಯನೀತಿಗಳ ದಿಶೆಯನ್ನೇ ಬದಲಿಸು ವಂಥದ್ದಾಗಿರಬಹುದು. ಸಾಮಾಜಿಕ ನ್ಯಾಯ ದೊರಕಿಸುವ ಬದಲು ವ್ಯತಿರಿಕ್ತ ಪರಿಣಾಮಗಳನ್ನು ಉಂಟು ಮಾಡುವಂಥದ್ದಾಗಿರಬಹುದು. ಈಚೆಗಿನ ಕೆಲವು ತೀರ್ಪುಗಳು ಸಂವಿಧಾನದ ಮೂಲ ಉದ್ದೇಶಗಳನ್ನೇ ಬದಲಿಸುವಂಥವಾಗಿದ್ದು ಕಳವಳಕಾರಿಯಾಗಿವೆ. ನ್ಯಾಯಾಲಯದ ತೀರ್ಮಾನಗಳನ್ನು ಬಹಿರಂಗವಾಗಿ ಪ್ರಶ್ನಿಸುವಂತಿಲ್ಲ, ಏಕೆಂದರೆ ನ್ಯಾಯಾಲಯದ ದೃಷ್ಟಿಯಲ್ಲಿ ಅದು ಅಪರಾಧ. ಅದು ನ್ಯಾಯಾಲಯದ 'ನಿಂದನೆ' ವ್ಯಾಪ್ತಿಗೆ ಬಂದು ಶಿಕ್ಷಾರ್ಹವಾಗಿರುತ್ತದೆ. ಅಂಥ ಟೀಕೆಗಳು ಅನುದ್ದೇಶಿತವಾಗಿರ ಬಹುದಾದರೂ ಅವನ್ನು ನ್ಯಾಯಾಧೀಶರು ಗಮನಕ್ಕೆ ತೆಗೆದುಕೊಂಡರೆ ಅಪರಾಧವೆನಿಸುತ್ತವೆ. ಅಂಥ ಪ್ರಕರಣಗಳೂ ಸಂಭವಿಸಿವೆ.

ನ್ಯಾಯಾಲಯದ ಎಲ್ಲ ತೀರ್ಪುಗಳೂ ವಸ್ತುನಿಷ್ಠವಾಗಿರುತ್ತವೆ, ಸಾಮಾಜಿಕ ನ್ಯಾಯ ಒದಗಿಸುತ್ತವೆ ಎಂದು ಭಾವಿಸಲಾಗುವುದಿಲ್ಲ. ಅವು ಸಂಬಂಧಪಟ್ಟ ನ್ಯಾಯಮೂರ್ತಿಗಳ ಮನೋಧರ್ಮ, ಹಿನ್ನೆಲೆ, ಬಂದ ಪರಿಸರ, ಪರಿಸ್ಥಿತಿ ಹೀಗೆ ಅನೇಕ ಅಂಶಗಳ ಮೇಲೆ ಅವಲಂಬಿತ. ವಿಷಯವನ್ನು ಕಾನೂನಿನ ಚೌಕಟ್ಟಿನೊಳಗೆ ಸಾಂಪ್ರದಾಯಿಕ ರೀತಿಯಿಂದ ಪರಿಶೀಲಿಸುವವರು, ಅವರ ಮನೋಭಾವದಿಂದ ಪ್ರಗತಿಪರವಾದ ರೀತಿಯಲ್ಲಿ ನೋಡುವವರು, ಕಟ್ಟುನಿಟ್ಟಾಗಿ ಯಾಂತ್ರಿಕವಾಗಿ ನಿಯಮದ ಪ್ರಕಾರವೇ ಗಮನಿಸುವವರೂ ಇರುತ್ತಾರೆ. ಇವುಗಳಿಗಿಂತ ಹೆಚ್ಚಾಗಿ, ಬದಲಾಗುತ್ತಿರುವ ಸಾಮಾಜಿಕ, ರಾಜಕೀಯ, ಆರ್ಥಿಕ ಪರಿಸ್ಥಿತಿಗಳೂ ಸಾಕಷ್ಟು ಪ್ರಭಾವ ಬೀರುವುದರಲ್ಲಿ ಸಂಶಯವಿಲ್ಲ.

ಕಳೆದ ಅರ್ಧಶತಮಾನದಲ್ಲಿ ಸುಪ್ರೀಂ ಕೋರ್ಟು ಅಸ್ತಿತ್ವಕ್ಕೆ ಬಂದಮೇಲೆ ಸಂವಿಧಾನಕ್ಕೆ ಸಂಬಂಧಪಟ್ಟಂತೆ ಅನೇಕ ಮಹತ್ವಪೂರ್ಣ ತೀರ್ಪುಗಳು ಹೊರಬಂದಿವೆ. ಅವುಗಳಲ್ಲಿ ಪ್ರಗತಿಪರವಾದ್ದು ಇವೆ, ಪ್ರತಿಗಾಮಿಯಾದುವೂ ಇವೆ. ಕಾಲಕ್ಕನುಗುಣವಾಗಿ, ಬೆಳವಣಿಗೆಗಳಿಗೆ ಅನುಸಾರವಾಗಿ ಹಿಂದಿನ ತೀರ್ಮಾನಗಳು ಬದಲಾಗಿ ಹೊಸ ತೀರ್ಮಾನಗಳು ಪ್ರಕಟಗೊಂಡಿವೆ. ಅವು ಸಾಮಾಜಿಕ ಜೀವನದ ಮೇಲೆ, ದೇಶದ ಪ್ರಗತಿಯ ಮೇಲೆ ಸಾಕಷ್ಟು ಪರಿಣಾಮ ಉಂಟುಮಾಡಿವೆ. ಮೂಲತಃ ಆಸ್ತಿ ಹಕ್ಕುಗಳಿಗೆ ಸಂಬಂಧಿಸಿದ ವಿಷಯಗಳು ಪುರೋಗಾಮಿ ಸುಧಾರಣೆಗಳಿಗೆ ಅಡ್ಡಿಯಾಗಿವೆ ಎನ್ನುವುದರಲ್ಲಿ ಅನುಮಾನವೇ ಇಲ್ಲ. ಇದಕ್ಕೆ ಸಂಬಂಧಿಸಿದ ಹಾಗೆ ಸಮರ್ಪಕವಾದ ವ್ಯಾಖ್ಯಾನ ಇದುವರೆಗೆ ಬಂದಿಲ್ಲ ಎನ್ನಬಹುದು. ಸಾಮಾನ್ಯವಾಗಿ ಸುಪ್ರೀಂಕೋರ್ಟು ಆಸ್ತಿಯ ಹಕ್ಕಿನ ಪಾವಿತ್ರ್ಯತೆಯನ್ನು ಎತ್ತಿಹಿಡಿದಿದೆ. ಇದು ಒಂದು ಬಗೆಯಾದರೆ, ಈಚೆಗಿನ ಕೆಲವು ತೀರ್ಪುಗಳು ಸಂವಿಧಾನದ ರಚನಾಕಾರರು ನಿಗದಿಪಡಿಸಿರುವ 'ಸುಖೀರಾಜ್ಯ'ದ ಸ್ಥಾಪನೆಯ ಪರಿಕಲ್ಪನೆಯನ್ನೇ ಬುಡಮೇಲು ಮಾಡುವಂಥವಾಗಿವೆ. ಸಂವಿಧಾನದಲ್ಲಿರುವ 'ಮೂಲಭೂತ ಅಂಶಗಳನ್ನು' (ಬೇಸಿಕ್ ಫೀಚರ್ಸು) ತಿದ್ದುಪಡಿ ಮಾಡಲು ಪಾರ್ಲಿಮೆಂಟಿಗೆ ಅಧಿಕಾರವಿಲ್ಲ ಎಂದು ಘೋಷಿಸಿರುವುದು ಸಾಕಷ್ಟು ಗೊಂದಲ ಉಂಟುಮಾಡಿದೆ. ಈ ಮೂಲಾಧಾರ ಅಂಶಗಳೇನು ಎಂಬುದನ್ನು ಸುಪ್ರೀಂ ಕೋರ್ಟು ವಿಶದಪಡಿಸಿಲ್ಲ, ಹಾಗಾಗಿ, ಈ ಬಗ್ಗೆ ಅಭಿಪ್ರಾಯಗಳು ಸಂಬಂಧಪಟ್ಟ ನ್ಯಾಯಾಧೀಶರ ಮರ್ಜಿಗನುಸಾರವಾದ್ದಾಗಿರುತ್ತದೆ. ಇನ್ನೊಂದು ಮುಖ್ಯವಾದ ಅಂಶವೆಂದರೆ, ಸಂವಿಧಾನದ ವಿಧಿಗಳನ್ನು, ಮುಖ್ಯವಾಗಿ ವಿಧಿ ೨೧ ಮತ್ತು ವಿಧಿ ೧೪ನ್ನು ಅರ್ಥೈಸುವಾಗ 'ಸಹಜ ಪ್ರಕ್ರಿಯೆ' ಎಂಬ ಅಂಶವನ್ನು ತಂದಿರುವುದೂ ಸಾಕಷ್ಟು ಕಳವಳ ಉಂಟುಮಾಡಿದೆ. ಮೊದಲನೆಯದು ಸಂವಿಧಾನವನ್ನು ತಿದ್ದುಪಡಿ ಮಾಡುವ ಹಕ್ಕನ್ನು ಜನಪ್ರತಿನಿಧಿಗಳಿಂದ ಕೂಡಿದ ಪಾರ್ಲಿಮೆಂಟಿನಿಂದ ಕಸಿದುಕೊಳ್ಳುವುದಾಗಿದ್ದರೆ, ಎರಡನೆಯದು ಯಾವುದೇ ಕಾಯಿದೆಯನ್ನು ರದ್ದುಗೊಳಿಸುವ ಪರಮಾಧಿಕಾರವನ್ನು ನ್ಯಾಯಾಧೀಶರುಗಳಿಗೆ ನೀಡುವುದಾಗಿದೆ. ಈ ಮೂಲಕವಾಗಿ, ಸುಪ್ರೀಂ ಕೋರ್ಟು ತನ್ನ ವ್ಯಾಪ್ತಿಗೆ ಮೀರಿದ ಅಧಿಕಾರವನ್ನು ಪಡೆದುಕೊಂಡಿದೆ ಎನ್ನುವ ಅಭಿಪ್ರಾಯವೂ ಬಲವಾಗಿದೆ.

ಸ್ವಾತಂತ್ರ್ಯಾನಂತರದ ಮೊದಲವರ್ಷಗಳಲ್ಲಿ ದೇಶದಲ್ಲಿ ಬಹುಮುಖ್ಯವಾಗಿ ಇದ್ದುದ್ದು ಭೂಸುಧಾರಣೆಗಳ ಪ್ರಶ್ನೆ. ಸ್ವಾತಂತ್ರ್ಯ ಹೋರಾಟದ ಕಾಲದಿಂದಲೂ ಜಮೀನುದಾರಿ ಪದ್ಧತಿಯನ್ನು ರದ್ದುಗೊಳಿಸಬೇಕೆಂಬ, ಭೂಮಾಲಿಕತ್ವವನ್ನು ರದ್ದುಗೊಳಿಸಿ, ಭೂ ಹಿಡುವಳಿಯನ್ನು ಮಿತಿಗೊಳಪಡಿಸಿ, ಅಧಿಕ ಭೂಮಿಯನ್ನು ವಶಪಡಿಸಿಕೊಂಡು ಉಳುವ ರೈತನಿಗೆ ನೀಡಬೇಕೆಂಬ ಬೇಡಿಕೆ ಪ್ರಧಾನವಾಗಿತ್ತು. ಇದಕ್ಕೆ ಅಗತ್ಯವಾದ ಭೂಸುಧಾರಣೆಗಳನ್ನು ಜಾರಿಗೊಳಿಸುವುದಕ್ಕೆ ಸರಕಾರಕ್ಕಿಂತ ದೊಡ್ಡ ಅಡ್ಡಿ ಆಸ್ತಿಹಕ್ಕಿನ ಪ್ರಶ್ನೆ. ನ್ಯಾಯಾಲಯಗಳು ಈ ಹಕ್ಕನ್ನು ದೃಢವಾಗಿ ಎತ್ತಿ ಹಿಡಿಯುತ್ತಿದ್ದುವು.

## ನವೋದಯ

ಹಲವು ಭಾಷೆಗಳಲ್ಲಿ
ಹಕ್ಕಿಗಳು ಘೋಷಿಸುತ್ತಿವೆ :
'ಬೆಳಗಾಯಿತು' ಎಂದು ;
ಆದರೆ, ನೀನಿನ್ನೂ ಮುಸುಕೆಳೆದು
ಮಲಗಿರುವೆಯಲ್ಲ
'ಹಾಲಿನವ ಬರಲಿಲ್ಲ' ಎಂದು !



**ಅಲಕ ತೀರ್ಥಹಳ್ಳಿ,**
ಅಲಕ, ನಂ. ೮೨, ತ್ಯಾಗರಾಜ ರಸ್ತೆ
ಸೀಬಿನಕೆರೆ ಅಂಚೆ, ತೀರ್ಥಹಳ್ಳಿ-೫೭೭೪೩೨

ಭೂ ಸುಧಾರಣೆಗಳಿಗಾಗಿ ಹಂಬಲಿಸುತ್ತಿದ್ದ ರೈತರ ಒತ್ತಾಯಕ್ಕೆ, ಚಳವಳಿಗೆ ಸರಕಾರ ತಲೆಬಾಗಬೇಕಾಯಿತು. ಅಡ್ಡಿಯ ನಿವಾರಣೆಗೆ ಅಗತ್ಯವಾದ ತಿದ್ದುಪಡಿಯನ್ನು ಸಂವಿಧಾನಕ್ಕೆ ತರಬೇಕಾಯಿತು. ಹಾಗಾಗಿ, ಭೂಸುಧಾರಣೆಗಳಿಗೆ ಸಂಬಂಧಿಸಿದ ವಿಷಯವನ್ನು ನ್ಯಾಯಾಲಯದಲ್ಲಿ ಪ್ರಸ್ತಾಪಿಸಲಾಗದಂತೆ ಮಾಡುವ ಸಲುವಾಗಿ ಸಂವಿಧಾನಕ್ಕೆ ಎರಡು ತಿದ್ದುಪಡಿಗಳನ್ನು ಸಂಸತ್ತಿನಲ್ಲಿ ೧೯೫೧ರಲ್ಲಿ ತರಲಾಯಿತು. ಈ ಎರಡೂ ಮೂಲಭೂತ ಹಕ್ಕುಗಳಿಗೆ ಸಂಬಂಧಪಟ್ಟವು. ಒಂದು ಸಂವಿಧಾನದ ಯಾವುದೇ ಭಾಗವನ್ನು ತಿದ್ದುಪಡಿ ಮಾಡಲು ಸಂಸತ್ತಿನ ಅಧಿಕಾರವನ್ನು ದೃಢಪಡಿಸಿದ್ದು ; ಇನ್ನೊಂದು ಸರಕಾರ ವಶಪಡಿಸಿಕೊಳ್ಳುವ ಆಸ್ತಿಗೆ ಪರಿಹಾರ ಕೊಡುವುದಕ್ಕೆ ಬದಲಾಗಿ, ಅದು ನಿರ್ಧರಿಸುವ ಮೊಬಲಗನ್ನು ಕೊಡುವ ಅಧಿಕಾರವನ್ನು ಸರಕಾರಕ್ಕೆ ಕೊಡುವುದು.

ಈ ತಿದ್ದುಪಡಿಗಳನ್ನು ೧೯೫೧ರಲ್ಲಿ ಸುಪ್ರೀಂ ಕೋರ್ಟಿನ ಐವರು ನ್ಯಾಯಮೂರ್ತಿಗಳ ಪೀಠ ಒಮ್ಮತದ ತೀರ್ಪು ನೀಡಿ ಎತ್ತಿಹಿಡಿಯಿತಲ್ಲದೆ, ಸಂವಿಧಾನವನ್ನು ತಿದ್ದುಪಡಿಮಾಡಲು ಪಾರ್ಲಿಮೆಂಟಿಗಿರುವ ಪರಮಾಧಿಕಾರವನ್ನು ದೃಢಪಡಿಸಿತು (ಶಂಕರಿಪ್ರಸಾದ್ ಮೊಕದ್ದಮೆ, ಎಐಆರ್ ೧೯೫೧, ಪು.೪೮೫). ಹದಿನೈದು ವರ್ಷಗಳ ಕಾಲ ಈ ತೀರ್ಪನ್ನು ಯಾರೂ ಪ್ರಶ್ನಿಸಿರಲಿಲ್ಲ. ೧೯೬೫ರಲ್ಲಿ ಸಾಜನ್‌ಸಿಂಗ್ ಪ್ರಕರಣದಲ್ಲಿ (ಎಐಆರ್ ೧೯೬೫, ಪು.೮೪೫) ಈ ವಿಷಯ ಪ್ರಸ್ತಾಪಕ್ಕೆ ಬಂದಾಗ ಬಹುಮತದಿಂದ ಮೇಲಿನ ತೀರ್ಪನ್ನು ಎತ್ತಿಹಿಡಿಯಿತು. ಆಗಲೇ ತೀರ್ಪಿಗೆ ಸಮ್ಮತಿಸಿದ ನ್ಯಾಯಮೂರ್ತಿಗಳು ಮೂಲಭೂತ ಹಕ್ಕುಗಳ ತಿದ್ದುಪಡಿಗೆ ಪಾರ್ಲಿಮೆಂಟಿಗಿರುವ ಅಧಿಕಾರದ ಬಗ್ಗೆ ಸಂದೇಹ ವ್ಯಕ್ತಪಡಿಸಿದ್ದರು. ಇದಾದ ಎರಡು ವರ್ಷಗಳ ನಂತರ ಗೋಲಕನಾಥ್ ಪ್ರಕರಣದಲ್ಲಿ (೧೯೬೭, ಎಐಆರ್ ಪು.೧೬೪೩), ೧೧ ನ್ಯಾಯಮೂರ್ತಿಗಳ ಸಂವಿಧಾನದ ಪೀಠ ೬-೫ ಬಹುಮತದಿಂದ ಮೇಲಿನ ತೀರ್ಪನ್ನು ತಳ್ಳಿಹಾಕಿ, ಸಂವಿಧಾನಕ್ಕೆ ತಿದ್ದುಪಡಿ ತಂದು ಮೂಲಭೂತ ಹಕ್ಕುಗಳನ್ನು ಮೊಟಕು ಮಾಡಲಾಗಲೀ, ರದ್ದುಗೊಳಿಸಲಾಗಲಿ ಪಾರ್ಲಿಮೆಂಟಿಗೆ ಅಧಿಕಾರವಿಲ್ಲ ಎಂದು ಹೇಳಿತು. ಸುಪ್ರೀಂ ಕೋರ್ಟಿನ ಈ ಬದಲಾದ ನೀತಿ, ಆಸ್ತಿಹಕ್ಕಿನ ಪಾವಿತ್ರ್ಯತೆಯನ್ನು ಸಂರಕ್ಷಿಸಿತು. ಆದರೆ ಅದು ಸುಧಾರಣೆಗಳಿಗೆ, ಮುಖ್ಯವಾಗಿ ಭೂಸುಧಾರಣೆಗಳಿಗೆ, ಮುಳುವಾಯಿತು. ಈ ವಿಚಾರದಲ್ಲಿ ನ್ಯಾಯಾಂಗ ಮತ್ತು ಶಾಸಕಾಂಗದ ಮಧ್ಯೆ ಪರಸ್ಪರ ವಿರುದ್ಧ ಅಭಿಪ್ರಾಯಗಳಿರುವುದು ವೇದ್ಯವಾಯಿತು. ಸಂವಿಧಾನದ ಧ್ಯೇಯೋದ್ದೇಶಗಳನ್ನು ಕಾರ್ಯಗತ ಮಾಡುವುದರಲ್ಲಿ ಅಗತ್ಯ ಬಿದ್ದಾಗ ಸಂವಿಧಾನವನ್ನು ತಿದ್ದುಪಡಿ ಮಾಡುವ ಹಕ್ಕು ಜನಪ್ರತಿನಿಧಿಗಳಿಗೆ ಅಧಿಕಾರವಿದೆಯೇ ಇಲ್ಲವೇ ಎನ್ನುವ ಪ್ರಶ್ನೆಯೂ ಉದ್ಭವಿಸಿತು. ಸುಧಾರಣೆಗಳಿಗಾಗಿ ಜನತೆ ನಡೆಸುತ್ತಿದ್ದ ಆಂದೋಲನ, ಒತ್ತಾಯಗಳಿಗೆ ಮಣಿದು ಸರಕಾರ ಸಂವಿಧಾನಕ್ಕೆ ತಿದ್ದುಪಡಿಯನ್ನು ತರಬೇಕಾಯಿತು. ಪಾರ್ಲಿಮೆಂಟಿನಲ್ಲಿ ಸರಕಾರ ತಿದ್ದುಪಡಿ (೪೪ನೇ ತಿದ್ದುಪಡಿ)ಯನ್ನು ತಂದು ಆಸ್ತಿಯ ಹಕ್ಕನ್ನು ಸಂವಿಧಾನದ ಮೂರನೇ ಭಾಗದಿಂದ ತೆಗೆದುಹಾಕಿತು. ಬ್ಯಾಂಕುಗಳ ರಾಷ್ಟ್ರೀಕರಣ, ರಾಜಮಹಾರಾಜರುಗಳಿಗೆ ನೀಡುತ್ತಿದ್ದ ಪ್ರೀವಿಪರ್ಸ್ (ಪರಿಹಾರಧನ) ಸೌಲಭ್ಯ ಮತ್ತು ಇತರ ಸವಲತ್ತುಗಳ ರದ್ದು, ಮೊದಲಾದ ಸುಧಾರಣೆಗಳು ಜಾರಿಗೆ ಬಂದದ್ದು ಈ ಕಾಲಾವಧಿಯಲ್ಲೇ ಎನ್ನುವುದನ್ನು ಗಮನಿಸಬೇಕು.

ಈ ಹಿನ್ನೆಲೆಯಲ್ಲಿ ಬಂದದ್ದೇ ಸುಪ್ರೀಂ ಕೋರ್ಟಿನ ಸಂವಿಧಾನದ ಆಧಾರಾಂಶಗಳ (ಬೇಸಿಕ್ ಫೀಚರ್ಸು) ಸಿದ್ಧಾಂತ. ಇದು ಸಂವಿಧಾನದ ಮೂಲಾಧಾರವೆಂದು

ಪರಿಗಣಿಸಿರುವ ಭಾಗಗಳನ್ನು ಮುಖ್ಯವಾಗಿ ಮೂಲಭೂತ ಹಕ್ಕುಗಳಿಗೆ ಸಂಬಂಧಪಟ್ಟ ಭಾಗಗಳನ್ನು ಬದಲಿಸಲಾಗಲಿ, ರದ್ದುಗೊಳಿಸಲಾಗಲಿ ಪಾರ್ಲಿಮೆಂಟಿಗೆ ಅಧಿಕಾರವಿಲ್ಲ ಎಂದು ಸಾರಿತು. ೧೯೭೩ರಲ್ಲಿ ಕೇಶವಾನಂದ ಭಾರತಿ ಪ್ರಕರಣ (ಎಐಆರ್ ೧೯೭೩, ಪು.೧೪೬೧)ದಲ್ಲಿ ಹದಿಮೂರು ನ್ಯಾಯಾಧೀಶರುಗಳನ್ನೊಳಗೊಂಡ ಸಂವಿಧಾನ ಪೀಠ ೭-೬ ಬಹುಮತದಿಂದ ನೀಡಿರುವ ಈ ಬಗೆಯ ತೀರ್ಪು ಆತಂಕಕಾರಿಯಾಗಿದೆ. ಏಕೆಂದರೆ, ಸಂವಿಧಾನದ ಮುನ್ನುಡಿಯಲ್ಲಿ ಹೇಳಿರುವ ಪ್ರಜಾಸತ್ತಾತ್ಮಕ, ಜಾತ್ಯತೀತ, ಸಮಾಜವಾದಿ, ಸುಖೀರಾಜ್ಯ ಸ್ಥಾಪನೆಯ ಗುರಿಯನ್ನು ಮುಟ್ಟಲು ಅಗತ್ಯವಾದ ಕ್ರಮಗಳನ್ನು ಜಾರಿಗೆ ತರುವಂತೆ ನೋಡಿಕೊಳ್ಳುವುದು ಕಾರ್ಯಾಂಗ, ಶಾಸಕಾಂಗ ಹಾಗೂ ನ್ಯಾಯಾಂಗದ ಜವಾಬ್ದಾರಿ. ಈ ಗುರಿ ತಲುಪಲು ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವಾಗ ಉದ್ಭವಿಸುವ ಅಡ್ಡಿಗಳನ್ನು ನಿವಾರಿಸುವುದೂ ಅವುಗಳ ಆದ್ಯಕರ್ತವ್ಯ ಕೂಡ. ಸಂವಿಧಾನ ಜನತೆಗೆ ಸೇರಿದ್ದು. ಬದಲಾದ ಪರಿಸ್ಥಿತಿಗಳಿಗನುಸಾರವಾಗಿ, ಸಂವಿಧಾನದಲ್ಲಿ ನಮೂದಿತವಾಗಿರುವ ಗುರಿಗಳನ್ನು ಮುಟ್ಟಲು ಅಗತ್ಯ ಕಂಡುಬಂದಾಗ ಸಂವಿಧಾನವನ್ನು ತಿದ್ದುಪಡಿ ಮಾಡುವ ಹಕ್ಕು ಜನತೆಗೆ ಇದೆ. ಈ ಅಧಿಕಾರವನ್ನು ಅವರು ತಮ್ಮ ಪ್ರತಿನಿಧಿಗಳ ಮೂಲಕ ಚಲಾಯಿಸುತ್ತಾರೆ. ಸುಪ್ರೀಂ ಕೋರ್ಟಿನ ತೀರ್ಪು ಇದ್ದಾಗ್ಯೂ ಕೂಡ, ಜನಾದೇಶದಿಂದ ಆಯ್ಕೆಗೊಂಡಿರುವ ಪ್ರತಿನಿಧಿಗಳಿಗೆ ಸಂವಿಧಾನವನ್ನು ತಿದ್ದುಪಡಿ ಮಾಡುವ ಅಧಿಕಾರ ಇದೆಯೇ ಇಲ್ಲವೆ ಎನ್ನುವ ಪ್ರಶ್ನೆ ವಿವಾದಾತ್ಮಕವಾಗಿಯೇ ಉಳಿದಿದೆ.

ಇದು ಒಂದು ಕಡೆಯಾದರೆ, ಈಚಿನ ವರ್ಷಗಳಲ್ಲಿ, ಮುಖ್ಯವಾಗಿ ಕಳೆದ ಒಂದು ಒಂದೂವರೆ ದಶಕಗಳಲ್ಲಿ ಸುಪ್ರೀಂ ಕೋರ್ಟು ನೀಡಿರುವ ಅನೇಕ ತೀರ್ಪುಗಳು ಸಾಮಾಜಿಕ ನ್ಯಾಯ ಒದಗಿಸುವ, ಜನಸಾಮಾನ್ಯರ ಮೂಲಹಕ್ಕುಗಳನ್ನು, ಸಂವಿಧಾನದ ಧ್ಯೇಯೋದ್ದೇಶಗಳನ್ನು, ಎತ್ತಿ ಹಿಡಿಯುವುದರಲ್ಲಿ ಹಿಂದೆ ಸರಿದಿದೆಯೇ ಎನ್ನುವ ಅನುಮಾನವಿರುತ್ತದೆ. ಜಾಗತೀಕರಣ, ಉದಾರೀಕರಣ, ಮುಕ್ತಮಾರುಕಟ್ಟೆಯ ವಾತಾವರಣದ ಹಿನ್ನೆಲೆಯಲ್ಲಿ ಈಗಿನ ತೀರ್ಪುಗಳನ್ನು ನೋಡಿದಾಗ, ಅರವತ್ತು ಎಪ್ಪತ್ತರ ದಶಕದ ಸುಧಾರಣೆಗಳ ಕಾಲದಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿದ್ದ ತೀರ್ಪುಗಳನ್ನು ಗಮನಿಸಿದಾಗ ಬದಲಾವಣೆಯಾಗಿರುವುದನ್ನು ಕಾಣಬಹುದು. ಅದೇ ಸಮಯದಲ್ಲಿ ವೈರುಧ್ಯಗಳನ್ನು ಕಾಣಬಹುದು. ಕೆಲವೊಮ್ಮೆ ನ್ಯಾಯಾಲಯಗಳು ನೀಡಿರುವ ಆದೇಶಗಳು ಕಾರ್ಯಾಂಗದ ಅಧಿಕಾರವನ್ನು ತನ್ನ ತೆಕ್ಕೆಗೆ ತೆಗೆದುಕೊಂಡಂತೆ ತೋರಿರುವುದೂ ಉಂಟು. ಜನತೆಯ ಹಿತಾಸಕ್ತಿಗಳಿಗೆ ಬಾಧಕವಾಗಿರುವಂಥ ತೀರ್ಪುಗಳು ಬಂದಿವೆ. ಆದರಿಂದ, ನ್ಯಾಯಾಲಯದ ನಿಷ್ಪಕ್ಷಪಾತತೆ ಬಗೆಗೆ ಜನಸಾಮಾನ್ಯರಲ್ಲಿ ಸಂದೇಹ ಉಂಟಾಗಿರುವುದು ಅಚ್ಚರಿಯೇನಲ್ಲ. ಈ ಭಾವನೆ ದಿನೇದಿನೇ ಹೆಚ್ಚುತ್ತಿದೆ. ಪ್ರಮುಖ ನಾಗರಿಕರು, ವಕೀಲರು, ಹಲವು ನಿವೃತ್ತ ನ್ಯಾಯಾಧೀಶರು ಇದನ್ನು ಗಮನಕ್ಕೆ ತಂದಿದ್ದಾರೆ. ಇದು ನಿಜಕ್ಕೂ ಆತಂಕಕಾರಿ.

ಇದಕ್ಕೆ ಉದಾಹರಣೆ, ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸುಪ್ರೀಂ ಕೋರ್ಟು ನೀಡಿರುವ ತೀರ್ಪುಗಳು. ಇವು ಸಾಕಷ್ಟು ಗೊಂದಲ ಉಂಟುಮಾಡಿವೆ. ಉನ್ನತ ಶಿಕ್ಷಣದ ವಿಷಯದಲ್ಲಿ ವಿದ್ಯಾಭ್ಯಾಸದ ಹಕ್ಕನ್ನು ಮೂಲಭೂತ ಹಕ್ಕುಗಳಲ್ಲಿ ಒಂದಾಗಿ ಸುಪ್ರೀಂ ಕೋರ್ಟು ನ್ಯಾಯವಾಗಿಯೇ ಪರಿಗಣಿಸಿತು. ಆದರೆ ಅದೇ ಸುಪ್ರೀಂ ಕೋರ್ಟು ಮಣಿಪಾಲದ ಟಿ.ಎಂ.ಎ.ಪೈ ಶಿಕ್ಷಣ ಸಂಸ್ಥೆ, ಇಸ್ಲಾಮಿಕ್ ಎಜುಕೇಷನ್ ಸೊಸೈಟಿ ಮೊಕದ್ದಮೆಯಲ್ಲಿ ಅದಕ್ಕೆ ವ್ಯತಿರಿಕ್ತವಾದ ಧೋರಣೆಯನ್ನು ತಳೆಯಿತು. ಈ ಶಿಕ್ಷಣ ಸಂಸ್ಥೆ ಹಾಗೂ ಇತರ ಸಂಸ್ಥೆಗಳು ನಡೆಸುವ ಕಾಲೇಜುಗಳನ್ನು ಖಾಸಗಿ ಆಸ್ತಿಯೆಂದು ಪರಿಗಣಿಸಿ ನ್ಯಾಯಮೂರ್ತಿಗಳು ಪ್ರವೇಶ ನೀಡುವ ಹಕ್ಕನ್ನು ಅವುಗಳ ಆಡಳಿತಗಳಿಗೆ ನೀಡಿತು. ಈ ತೀರ್ಪಿನಿಂದಾಗಿ ಉನ್ನತ ಶಿಕ್ಷಣದ ವ್ಯಾಪಾರೀಕರಣಕ್ಕೆ ದಾರಿ ಸುಗಮವಾಯಿತು. ಬಡಜನರಿಗೆ ಉನ್ನತ ಶಿಕ್ಷಣ ಎಟುಕದಂತಾಗಿ, ಅವರಿಗೆ ಅದನ್ನು ನಿರಾಕರಿಸಿದಂತೆಯೇ ಆಗಿದೆ. ಇದು ಸಂವಿಧಾನದಲ್ಲಿ ನಮೂದಿತವಾಗಿರುವ ಸಮಾನ ಅವಕಾಶ ಕಲ್ಪಿಸುವ ಉದ್ದೇಶದ ನೇರವಾದ ಉಲ್ಲಂಘನೆ ಅಲ್ಲವೆ ಎನ್ನುವ ಪ್ರಶ್ನೆ ಸಹಜವಾಗಿಯೇ ಉದ್ಭವಿಸುತ್ತದೆ. ಸರಕಾರ ಸೂಕ್ತಕ್ರಮ ಕೈಗೊಂಡು ಈ ಅಸಮತೆಯನ್ನು ಸರಿಪಡಿಸ ಬೇಕಾಗಿದೆ. ಎಲ್ಲರಿಗೂ ಶಿಕ್ಷಣದ ಸಮಾನಾವಕಾಶ ಕಲ್ಪಿಸುವ ಹೊಣೆಗಾರಿಕೆಯು ನ್ಯಾಯಾಲಯಗಳ ಮೇಲೂ ಇದೆ ಎಂಬುದನ್ನು ಒತ್ತಿ ಹೇಳಬೇಕಿಲ್ಲ.

ಇನ್ನು ಸಾರ್ವಜನಿಕ ಹಿತಾಸಕ್ತಿ ಅರ್ಜಿಗಳ ವಿಲೇವಾರಿಯಲ್ಲಿ ಹಲವು ಒಳ್ಳೆಯ ಗಮನಾರ್ಹ ತೀರ್ಪುಗಳು ಬಂದಿದ್ದಾಗ್ಯೂ, ಅಷ್ಟೇ ವಿರುದ್ಧವಾದ ತೀರ್ಪುಗಳು ಬಂದಿವೆ. ಕೆಲವು ತೀರ್ಪುಗಳಂತೂ ಸುಪ್ರೀಂ ಕೋರ್ಟು ತಾನೇ ಯಾವುದನ್ನು ಪವಿತ್ರವಾದದು, ಬದಲಿಸಲಾಗದಂಥದ್ದು ಎಂದು ಪರಿಗಣಿಸಿದೆಯೋ ಅದೇ ಮೂಲಭೂತ ಹಕ್ಕುಗಳನ್ನು ಕಳೆದುಕೊಂಡಿರುವುದಾಗಿವೆ. ತಮಿಳುನಾಡು ಸರಕಾರಿ ನೌಕರರ ಮುಷ್ಕರದ ಸಮಯದಲ್ಲಿ, ಸರಕಾರಿ ನೌಕರರಿಗೆ ಮುಷ್ಕರ ನಡೆಸಲು ಹಕ್ಕಿಲ್ಲ ಎಂದು ಘೋಷಿಸಿ, ಮುಷ್ಕರವನ್ನು ನಿಷೇಧಿಸಿದ್ದನ್ನು ಅದಕ್ಕೆ ಉದಾಹರಣೆಯಾಗಿ ನೀಡಬಹುದು. ಅದೇ ತೀರ್ಪಿನಲ್ಲಿ ಕಾರ್ಮಿಕರ ಮುಷ್ಕರದ ಹಕ್ಕನ್ನೇ ಕಸಿದುಕೊಳ್ಳುವ ಅಂಶಗಳನ್ನೂ ಕಾಣಬಹುದು. ಮೇಲಿಂದ ಮೇಲೆ ಬೇರೆ ಬೇರೆ ಹೈಕೋರ್ಟುಗಳು ಇದೇ ಧಾಟಿಯಲ್ಲಿ ಜನತೆಯ ಪ್ರತಿಭಟನೆ, ಮೆರವಣಿಗೆ ಮತ್ತು ಪ್ರದರ್ಶನಗಳನ್ನು ನಿರ್ಬಂಧಿಸುವ, ನಿಯಂತ್ರಿಸುವ ಹಾಗೂ ನಿಷೇಧಿಸುವ ತೀರ್ಪುಗಳನ್ನು ನೀಡಿವೆ. ಕಲ್ಕತ್ತ , ಮುಂಬಯಿ ಹೈಕೋರ್ಟುಗಳು ಪ್ರತಿಭಟನಾರ್ಥವಾಗಿ ಬಂದ್‌ಗೆ ಕರೆ ನೀಡಿವೆ. ರಾಜಕೀಯ ಪಕ್ಷಗಳ ಮೇಲೆ ಕಿಡಿಕಾರಿ, ದಂಡವಿಧಿಸಿರುವುದು ಕಳವಳಕಾರಿ ಸಂಗತಿ. ಸುಪ್ರೀಂ ಕೋರ್ಟು ಕೂಡ ಪ್ರತಿಭಟನೆಯ ಹಕ್ಕನ್ನು ನಿರಾಕರಿಸಿದೆ. ವಕೀಲರು ಮುಷ್ಕರ ನಡೆಸುವ ಹಕ್ಕು ಇಲ್ಲ ಎಂದು ಸುಪ್ರೀಂ ಕೋರ್ಟು ಹೇಳಿದೆಯಷ್ಟೇ ಅಲ್ಲದೆ, ಇತರ ನಿರ್ಬಂಧಗಳನ್ನು ಹೇರಿದೆ. ಇಂಥ ನಿರ್ಬಂಧಗಳು ನಿಷೇಧಗಳನ್ನು ಸಂವಿಧಾನದತ್ತವಾದ ಮೂಲಭೂತ ಹಕ್ಕುಗಳನ್ನು ಎತ್ತಿಹಿಡಿಯಬೇಕಾದ ನ್ಯಾಯಾಲಯಗಳು ಹೇರುತ್ತಿರುವುದು ವಿಪರ್ಯಾಸ.

೧೯೯೪ರಲ್ಲಿ ಎಸ್. ಆರ್. ಬೊಮ್ಮಾಯಿ ಮೊಕದ್ದಮೆಯಲ್ಲಿ ಸುಪ್ರೀಂ ಕೋರ್ಟು ಜಾತ್ಯತೀತತೆಯನ್ನು ಸಂವಿಧಾನದ ಆಧಾರಾಂಶವೆಂದು ಘೋಷಿಸಿತು. ಆದರೆ ಅದೇ ಸುಪ್ರೀಂ ಕೋರ್ಟು 'ಹಿಂದುತ್ವ'ದ ರಾಜಕೀಯವನ್ನು ಸಮರ್ಥಿಸಿತು. ಇದು ವೈರುಧ್ಯವಲ್ಲವೆ ? ಸಂವಿಧಾನದ ಆಧಾರಾಂಶಗಳಲ್ಲಿ ಸಮಾಜವಾದವೂ, ಸುಖೀರಾಜ್ಯದ ಸ್ಥಾಪನೆಯೂ ಸೇರಿವೆ. ಇದರ ಆಧಾರದ ಮೇಲೆ ಸುಪ್ರೀಂ ಕೋರ್ಟು ಸರಕಾರದ ರಾಷ್ಟ್ರೀಕರಣದ ನೀತಿಯನ್ನು ಎತ್ತಿಹಿಡಿದಿತ್ತು. ಆದರೆ ಈಗ, ಅದೇ ಸುಪ್ರೀಂ ಕೋರ್ಟು ಸಮಾಜವಾದಿ ಸಮಾಜ ನಿರ್ಮಾಣದ ಆಧಾರಾಂಶಕ್ಕೇ ವ್ಯತಿರಿಕ್ತವಾದ ನಿಲುವನ್ನು ತಳೆಯುತ್ತಿರುವುದು ಆಶ್ಚರ್ಯಕರ. ಜಾಗತೀಕರಣದ ಹಿನ್ನೆಲೆಯಲ್ಲಿ ಸರಕಾರದ ಖಾಸಗೀಕರಣ, ಬಂಡವಾಳ ಹಿಂತೆಗೆತ (ಡಿಸಿನ್‌ವೆಸ್ಟ್‌ಮೆಂಟ್), ವಿದೇಶೀ ಬಂಡವಾಳಕ್ಕೆ ಮುಕ್ತ ಅವಕಾಶ ಇವನ್ನು ಸುಪ್ರೀಂ ಕೋರ್ಟು ಎತ್ತಿಹಿಡಿಯುತ್ತದೆ. ಭಾರತ ಅಲ್ಯುಮಿನಿಯಂ ಕಂಪೆನಿಯನ್ನು ಖಾಸಗಿ ಕಂಪೆನಿಗೆ ಕಡಿಮೆ ಬೆಲೆಯಲ್ಲಿ ಮಾರಾಟ ಮಾಡಿದ ಸರಕಾರದ ನೀತಿಯನ್ನು ಸುಪ್ರೀಂ ಕೋರ್ಟು ಎತ್ತಿ ಹಿಡಿದದ್ದು ಅದಕ್ಕೆ ಉದಾಹರಣೆ. ಇದು ಸರಕಾರದ ನೀತಿಗೆ ಸಂಬಂಧ ಪಟ್ಟದ್ದಾದ್ದರಿಂದ ನ್ಯಾಯಾಲಯದ ಪ್ರವೇಶ ಅನವಶ್ಯಕ ಎಂದು ಹೇಳಿತು. ಆದರೆ ಅದೇ ಸಮಯದಲ್ಲಿ ಇದಕ್ಕೆ ಪ್ರತಿಯಾಗಿ ಪೆಟ್ರೋಲಿಯಂ ಕಂಪೆನಿಗಳ ಖಾಸಗೀಕರಣದ ಪ್ರಶ್ನೆ ಬಂದಾಗ ಸರಕಾರಕ್ಕೆ ಪಾರ್ಲಿಮೆಂಟಿನ ಅನುಮತಿ ಅಗತ್ಯವೆಂದು ಹೇಳಿತು. ಹೀಗೆ ಪರಸ್ಪರ ವಿರುದ್ಧವಾದ ನಿಲುವುಗಳಿಂದ ಜನರಲ್ಲಿ ನ್ಯಾಯಾಲಯಗಳ ಬಗ್ಗೆ ವಿಶ್ವಾಸ ಕಡಿಮೆ ಯಾಗುತ್ತಿದೆ, ಕಡಿಮೆಯಾಗಿದೆ. ಸಂವಿಧಾನದ ಪ್ರಸ್ತಾವನೆಯಲ್ಲಿ ನಮೂದಿತವಾಗಿರುವ ಪ್ರಜಾಸತ್ತಾತ್ಮಕ, ಸಮಾಜವಾದಿ, ಜಾತ್ಯತೀತ, ರಾಜ್ಯನಿರ್ಮಾಣದ ಗುರಿಯನ್ನು ಎತ್ತಿ ಹಿಡಿಯುವುದಕ್ಕೆ ಪ್ರತಿಯಾಗಿ, ಜಾಗತೀಕರಣ, ಸುಧಾರಣೆಗಳು, ಉದಾರೀಕರಣದ ಹಿನ್ನೆಲೆಯಲ್ಲಿ ನ್ಯಾಯಾಲಯ ಇವಕ್ಕೆ ಅನುಕೂಲವಾಗುವ ಧೋರಣೆ ತಳೆಯುತ್ತಿರುವುದು ದುರದೃಷ್ಟಕರ.

ಸಂವಿಧಾನದ ಪ್ರಸ್ತಾವನೆಯಲ್ಲಿ ಹೇಳಲಾಗಿರುವ ಪ್ರಜಾಸತ್ತಾತ್ಮಕ, ಜಾತ್ಯತೀತ, ಸಮಾಜವಾದಿ, ಸುಖೀರಾಜ್ಯದ ನಿರ್ಮಾಣ ಗುರಿಯನ್ನು ಮುಟ್ಟಲು ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವುದು ಪ್ರಭುತ್ವದ ಮೂರೂ ಅಂಗಗಳ ಆದ್ಯ ಕರ್ತವ್ಯ. ಇವುಗಳಲ್ಲಿ ಯಾವೊಂದು ಅಂಗದಲ್ಲಿ ವೈರುಧ್ಯಗಳು ತಲೆದೋರಿದರೂ, ಹಾದಿ ತಪ್ಪಿದರೂ ಗೊಂದಲವುಂಟಾಗುವುದರಲ್ಲಿ ಸಂದೇಹವಿಲ್ಲ. ನ್ಯಾಯಾಲಯಗಳಲ್ಲಿ ಜನರಿಗೆ ವಿಶ್ವಾಸವುಂಟಾಗಬೇಕಾಗಿದ್ದರೆ ಸಂವಿಧಾನದ ಧ್ಯೇಯೋದ್ದೇಶಗಳಿಗೆ ನ್ಯಾಯಾಲಯಗಳು ಬದ್ಧವಾಗಿರುವುದು ಅತಿಮುಖ್ಯ. ಸರಕಾರದ ಕ್ರಮಗಳು, ಮುಖ್ಯವಾಗಿ ಜಾಗತೀಕರಣದ ಹೆಸರಿನಲ್ಲಿ ಅದು ಕೈಗೊಂಡಿರುವ ಉದಾರೀಕರಣ, ಖಾಸಗೀಕರಣ ಮೊದಲಾದ ನೀತಿಗಳು ಸಂವಿಧಾನದ ಮೂಲ ಉದ್ದೇಶಗಳಿಗೆ ವಿರೋಧವಾಗಿ ಹೋಗುತ್ತಿರುವಾಗ, ಅದನ್ನು ಎಚ್ಚರಿಸಿ, ಸರಿಯಾದ ಮಾರ್ಗದಲ್ಲಿ ಹೋಗುವಂತೆ ಮಾಡುವುದು ನ್ಯಾಯಾಲಯಗಳ ಕರ್ತವ್ಯ. ಆಗಮಾತ್ರವೇ ಜನ ಸಾಮಾನ್ಯರಿಗೆ ನ್ಯಾಯಾಲಯಗಳಲ್ಲಿ ವಿಶ್ವಾಸ ಹುಟ್ಟಬಲ್ಲದು. ಇಲ್ಲದೇ ಹೋದರೆ ತಮ್ಮ ನ್ಯಾಯವಾದ ಹಕ್ಕುಗಳನ್ನು ಕಾಪಾಡಿಕೊಳ್ಳಲು ಜನತೆ ಪರ್ಯಾಯಮಾರ್ಗವನ್ನು ಅರಸುವುದು ಅನಿವಾರ್ಯ. ಈಗಲೇ ಅಂಥ ಸೂಚನೆಗಳನ್ನು ದೇಶದಲ್ಲಿ ಕಾಣುತ್ತಿದ್ದೇವೆ. ನ್ಯಾಯಾಲಯಗಳು ಎಚ್ಚರ ವಹಿಸಿ ಕಾರ್ಯನಿರ್ವಹಿಸಬೇಕಾಗಿದೆ ಜನತೆಯ ಹಿತಾಸಕ್ತಿಯನ್ನು ಕಾಪಾಡಬೇಕಾಗಿದೆ.


ಪಿ. ಆರ್. ಕೃಷ್ಣರಾವ್

'ಚೌಬೀನ' ೮೪೯, ೬ನೇ ಅಡ್ಡರಸ್ತೆ, ಬನಶಂಕರಿ ೩ನೇ ಹಂತ, ೧ನೇ 'ಎ' ಮುಖ್ಯರಸ್ತೆ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

ಪ್ರೊ॥ ಪ್ರಭುಶಂಕರ

# ಸ್ವಾಮಿ ವಿವೇಕಾನಂದರ ಜನಪರ ಕಾಳಜಿ



ಭಾರತಖಂಡದ ಧಾರ್ಮಿಕ ಆಚಾರ್ಯರ ಪರಂಪರೆಯಲ್ಲಿ ಸ್ವಾಮಿ ವಿವೇಕಾನಂದರಿಗೆ ವಿಶಿಷ್ಟವಾದ ಸ್ಥಾನವುಂಟು. ಅದಕ್ಕೆ ಕಾರಣ, ಅವರು ನಡೆಸಿದ ತತ್ವಚಿಂತನೆಯ ಚಿಂತೆಗೆ ಸಾಮಾನ್ಯ ಜನರ, ದಿನವಿಡೀ ಬೆವರು ಸುರಿಸಿ ದುಡಿದರೂ ಹಿಟ್ಟುಬಟ್ಟೆಗಳಿಲ್ಲದೆ ನರಳುತ್ತಿದ್ದ ಕೋಟ್ಯನುಕೋಟಿ ಸ್ತ್ರೀ ಪುರುಷರ ಸ್ಥಿತಿಗತಿಗಳನ್ನೂ ಕುರಿತು ನಡೆಸಿದ ಚಿಂತನೆ ಮತ್ತು ಅದಕ್ಕಾಗಿ ಅವರು ಕಣ್ಣೀರು ಸುರಿಸಿ, ಪರಿಹಾರ ಮಾರ್ಗಗಳನ್ನು ಕಂಡುಹಿಡಿಯಲು ನಡೆಸಿದ ಪ್ರಯತ್ನ. ನನಗೆ ತಿಳಿದಂತೆ ಭಾರತದ, ಅಷ್ಟೇಕೆ ಜಗತ್ತಿನ ಯಾವ ಧಾರ್ಮಿಕ ವ್ಯಕ್ತಿಯೂ ಜನಸಾಮಾನ್ಯರ ದಾರುಣವಾದ ಅವಸ್ಥೆಗೆ ವಿವೇಕಾನಂದರಂತೆ ಮರುಗಿದ, ಅವರಿಗಾಗಿ ಕಣ್ಣೀರು ಕರೆದ ನಿದರ್ಶನವಿಲ್ಲ. ಈ ಹೇಳಿಕೆಗೆ ಒಂದೇ ಒಂದು ಅಪವಾದವಿದೆ. ಅವರು ಶ್ರೀರಾಮಕೃಷ್ಣ ಪರಮಹಂಸರು. ಅವರ ವಿಷಯವನ್ನು ಇಷ್ಟರಲ್ಲಿಯೇ ಪ್ರಸ್ತಾಪಿಸುತ್ತೇನೆ. ಈ ಗುರು-ಶಿಷ್ಯರನ್ನು ಬಿಟ್ಟರೆ ಹೆಚ್ಚಿನ ಸಂಖ್ಯೆಯ ಆಚಾರ್ಯವರೇಣ್ಯರು ಜನರಿಗೆ ಪರಲೋಕಕ್ಕೆ ದಾರಿ ತೋರಿಸುವ ಉಮೇದಿನಲ್ಲಿದ್ದರು. ಅಲ್ಲದೆ ಸ್ವರ್ಗಕ್ಕೆ ತಾವು ತೋರಿಸಿದ್ದೊಂದೇ ದಾರಿ ಎಂದು ತಾವೂ ನಂಬಿ ತಮ್ಮ ಅನುಯಾಯಿಗಳನ್ನೂ ನಂಬಿಸುವುದರಲ್ಲಿಯೇ ಜೀವನವನ್ನೆಲ್ಲ ಕಳೆದರು.

ಸ್ವಾಮಿ ವಿವೇಕಾನಂದರ ಗುರುಗಳಾಗಿದ್ದ ಶ್ರೀರಾಮಕೃಷ್ಣ ಪರಮಹಂಸರು ಭಗವತ್ಸಾಕ್ಷಾತ್ಕಾರವೇ ಜೀವನದ ಗುರಿ ಎಂದು ಹೇಳಿದ್ದು, ಅವರು ಹಾಗೆ ನಂಬಿದ್ದದ್ದು ಹೌದು. ಆದರೆ ಅವರು ಇತರ ಧರ್ಮ ಬೋಧಕರಿಗಿಂತ ಕೆಲವು ವಿಷಯಗಳಲ್ಲಿ ಭಿನ್ನರಾಗಿದ್ದರು. ಅವರು ಬೋಧಿಸಿದ್ದು : ಸತ್ಯಕ್ಕೆ ಇರುವುದು ಒಂದೇ ದಾರಿಯಲ್ಲ, ಅನೇಕ ದಾರಿಗಳು. ಯಾವ ದಾರಿಯನ್ನೇ ಆದರೂ ಶ್ರದ್ಧೆಯಿಂದ ಅನುಸರಿಸಿದರೆ ಪರಮ ಸತ್ಯವನ್ನು ತಿಳಿಯುವುದು ಸಾಧ್ಯ. ಸದಾ ಬ್ರಹ್ಮಾನುಭೂತಿಯಲ್ಲೇ ಅವರು ಮುಳುಗಿದ್ದರು ಎಂದು ವರ್ಣಿಸಲಾಗಿದೆ. ಆದರೆ ಹಸಿದವರ ವಿಷಯದಲ್ಲಿ, ಮೈಮುಚ್ಚುವಷ್ಟು ಬಟ್ಟೆಯಿಲ್ಲದವರ ವಿಷಯದಲ್ಲಿ ಅವರು ತೋರಿದ ಅನುಕಂಪ, ಅವರ ದುಃಖವನ್ನು ಸಹಿಸಲಾರದೆ ಕಣ್ಣೀರು ಕರೆದದ್ದು ಅವರ ಜೀವನ ಚರಿತ್ರೆಯಲ್ಲಿ ದಾಖಲಾಗಿರುವ ಸಂಗತಿ. ಬಡಬಗ್ಗರ ವಿಷಯದಲ್ಲಿ, ಶತಮಾನಗಳ ಕಾಲ ಶ್ರೀಮಂತರ, ಮೇಲ್ವರ್ಗದವರ ತುಳಿತಕ್ಕೆ ಸಿಕ್ಕಿ ಒದ್ದಾಡುತ್ತಿದ್ದವರ ವಿಷಯದಲ್ಲಿ ಅವರು ತೋರಿಸಿದ ಕಳಕಳಿಯನ್ನು ತೋರಿಸುವ ಎರಡು ಘಟನೆಗಳನ್ನು ನಿರೂಪಿಸುವುದು ಅಗತ್ಯ. ಏಕೆಂದರೆ ಅವರ ವರ್ತನೆಯೇ ಮುಂದೆ ಅವರ ಶಿಷ್ಯರಾದ ವಿವೇಕಾನಂದರ ಹೃದಯದಲ್ಲಿ ಪರಾನುಕಂಪೆಯ, ಪರರ ಕಷ್ಟಗಳನ್ನು ಸಹಿಸಲಾರದ ಕಳಕಳಿಯ ಬೀಜಗಳನ್ನು ಬಿತ್ತಿ ಬೆಳೆಸಿದ್ದು.

ಶ್ರೀರಾಮಕೃಷ್ಣ ಪರಮಹಂಸರು ಒಮ್ಮೆ ತಮ್ಮ ಭಕ್ತನು, ತಮ್ಮ ಯೋಗಕ್ಷೇಮದ ಭಾರವನ್ನು ಹೊತ್ತಿದ್ದ ಶ್ರೀಮಂತ ಜಮೀನುದಾರ ಮಥುರಾನಾಥ ವಿಶ್ವಾಸನೊಂದಿಗೆ ಕಾಶಿ, ಬೃಂದಾವನ ಮುಂತಾದ ಸ್ಥಳಗಳಿಗೆ ತೀರ್ಥಯಾತ್ರೆಗೆಂದು ಹೊರಟಿದ್ದರು. ಅವರ ಪರಿವಾರ ದೊಡ್ಡದಾಗೇ ಇತ್ತು. ಪ್ರಯಾಣ ಮಧ್ಯೆ ವೈದ್ಯನಾಥ ಎಂಬ ಊರಿನ ಹತ್ತಿರ, ಒಂದು ಹೊಲದಲ್ಲಿ ನೂರಾರು ರೈತರು ಉರಿಯುವ ಬಿಸಿಲಿನಲ್ಲಿ ಬೇಯುತ್ತಾ ಕಂಗಾಲಾಗಿ ಕುಳಿತಿದ್ದರು. ರಾಮಕೃಷ್ಣರು ಹತ್ತಿರ ಹೋಗಿ ನೋಡುತ್ತಾರೆ – ಅವರೆಲ್ಲ ಹಸಿದಿದ್ದಾರೆ, ಹೊಟ್ಟೆಗಳು ಬೆನ್ನಿಗೆ ಅಂಟಿಕೊಂಡಿವೆ. ಮೈಮೇಲೆ ಕೌಪೀನ ವಿನಾ ಬೇರೆ ಬಟ್ಟೆಯ ತುಂಡೂ ಇಲ್ಲ, ತಲೆಯ ಕೂದಲು ಜಟೆಯಾಗಿ ಧೂಳಿನಿಂದ ತುಂಬಿವೆ. ಆ ದೃಶ್ಯವನ್ನು ನೋಡಿ, ಭಕ್ತರು ದಿವ್ಯಜ್ಞಾನಿ ಎಂದು ಕರೆಯುತ್ತಿದ್ದ ಶ್ರೀರಾಮಕೃಷ್ಣರಿಗೆ ತಡೆಯಲಾರದಷ್ಟು ಸಂಕಟವಾಯಿತು. ತಮ್ಮ ಯೋಗಕ್ಷೇಮದ ಜವಾಬ್ದಾರಿಯನ್ನು ಹೊತ್ತಿದ್ದ ಮಥುರಬಾಬುವಿಗೆ ಹೇಳಿದರು : ''ಅಯ್ಯಾ, ಈ ನತದೃಷ್ಟರ ಸ್ಥಿತಿಯನ್ನು ನಾನು ನೋಡಲಾರೆ. ಇವರಿಗೆ ಊಟ ಹಾಕು, ನೆತ್ತಿಗೆ ಎಣ್ಣೆ ಕೊಡಿಸು, ಜೊತೆಗೆ ಎಲ್ಲರಿಗೂ ಮೈಮುಚ್ಚುವಷ್ಟು ಬಟ್ಟೆ ಕೊಡಿಸು.''

ಮಥುರನಾಥನಿಗೆ ಕಸಿವಿಸಿಯಾಯಿತು. ನೂರಾರು ಜನ ಬಡವರಿಗೆ ಊಟ, ಬಟ್ಟೆ, ಎಣ್ಣೆ ಕೊಡಿಸುವಷ್ಟು ಆರ್ಥಿಕ ಶಕ್ತಿ ಅವನಿಗೆ ಇರಲಿಲ್ಲ ಎಂದಲ್ಲ. ತಾನು ಯೋಜಿಸಿದ್ದದ್ದು ಹತ್ತಾರು ಸಾವಿರ ರೂಪಾಯಿಗಳ ಖರ್ಚು ಬರುವ ತೀರ್ಥಯಾತ್ರೆ. ಈಗ ಆ ಹಣವನ್ನೆಲ್ಲ ಖರ್ಚು ಮಾಡಿಬಿಟ್ಟರೆ ಮುಂದೆ ಪ್ರಯಾಣ ಹೇಗೆ ? ತಾನು ಸಾಕ್ಷಾತ್ ಭಗವಂತ ಎಂದು ನಂಬಿದ್ದ ಪರಮಹಂಸರು ಹೀಗೆ ಅಪ್ಪಣೆ ಮಾಡುತ್ತಿದ್ದಾರೆ! ಅವರ ಮುಂದೆ ತನ್ನ ಸಮಸ್ಯೆಯನ್ನು ಹೇಳಿಕೊಂಡ. ಅವರು ಥಟ್ಟನೆ ಹೇಳಿದರು :

> ಶ್ರಮಿಕವರ್ಗವನ್ನು ಬಳಸಿಕೊಂಡ ಶ್ರೀಮಂತವರ್ಗ ಇನ್ನು ಇನ್ನು ಶ್ರೀಮಂತರಾಗುವುದಲ್ಲದೆ ಆ ವರ್ಗವನ್ನು ಕಷ್ಟಕಾರ್ಪಣ್ಯಗಳ ಆಳವಾದ ಕಂದಕಕ್ಕೆ ನೂಕುತ್ತಾ ಇದೆ ಎಂಬುದನ್ನು ಸ್ವಾಮೀಜಿ ಸ್ಪಷ್ಟವಾಗಿ ಅರ್ಥಮಾಡಿಕೊಂಡಿದ್ದರು. ಪೂರ್ವದಲ್ಲಾಗಲಿ, ಪಶ್ಚಿಮದಲ್ಲಾಗಲಿ ಸಂಪತ್ತು ಎಂಬುದು ಕೆಲವರ ಕೈಯಲ್ಲಿ ಸಿಕ್ಕಿಕೊಂಡಿದೆ, ಆ ಕೆಲವರು ಯಾವುದೇ ರೀತಿಯ ದೈಹಿಕ ಶ್ರಮವೂ ಇಲ್ಲದೆ ಲಕ್ಷೋಪಲಕ್ಷ ಜನರ ದೈಹಿಕ ಶ್ರಮವನ್ನು ತಮ್ಮ ಸ್ವಂತ ಸಂಪತ್ತಿನ ವೃದ್ಧಿಗಾಗಿ ಬಳಸಿಕೊಳ್ಳುತ್ತಿದ್ದಾರೆ ಎಂಬುದನ್ನು ಸ್ವಾಮೀಜಿ ಹೇಳಿದ್ದಾರೆ. ಪಶ್ಚಿಮಕ್ಕೆ ಉಳ್ಳವರ ಹಿಂಸೆ ಮಾತ್ರ ಇದ್ದರೆ ಪೂರ್ವದ ಜನರಿಗೆ ಉಳ್ಳವರ ದಬ್ಬಾಳಿಕೆಯ ಜೊತೆಗೆ ಪುರೋಹಿತಶಾಹಿಯ ಹಿಂಸೆಯೂ ಸೇರಿಕೊಂಡಿದೆ ಎನ್ನುತ್ತಾರೆ ಸ್ವಾಮೀಜಿ.

"ಈ ಜನರ ಕಷ್ಟ ಪರಿಹಾರ ಮಾಡುವುದೇ ತೀರ್ಥಯಾತ್ರೆ. ಇದಾಗದಿದ್ದರೆ ನನಗೆ ತೀರ್ಥವೂ ಬೇಡ, ಯಾತ್ರೆಯೂ ಬೇಡ!'' ಹೀಗೆ ಹೇಳಿದವರೇ ತಾವು ಹೋಗಿ ಆ ಬಡ ರೈತರ ನಡುವೆ ಸುಡುಬಿಸಿಲಿನಲ್ಲಿ ಕುಳಿತುಬಿಟ್ಟರು. ಪರಮಹಂಸರ ಈ ನೂತನ ಆಧ್ಯಾತ್ಮಿಕ ಸಂದೇಶವನ್ನು ಅರ್ಥಮಾಡಿಕೊಂಡ ಮಥುರಬಾಬು ಆ ದರಿದ್ರ ನಾರಾಯಣರಿಗೆ ಊಟ ಉಪಚಾರಗಳನ್ನು ಏರ್ಪಡಿಸಿದ. ತೀರ್ಥಯಾತ್ರೆ ಮುಂದುವರಿಯಿತು.

ಸ್ವಾಮಿ ವಿವೇಕಾನಂದರು ಇನ್ನೂ ನರೇಂದ್ರನಾಗಿದ್ದಾಗಲೇ ಅವರಿಗೆ ಪರಮಹಂಸರ ಜೀವನದ, ಮೇಲಿನ ಈ ಘಟನೆಯ ಅಂತರಾರ್ಥ ಅರಿವಿಗೆ ಬಂದಿತ್ತು. ಅದನ್ನು ಅವರಿಗೆ ಮನದಟ್ಟು ಮಾಡಲು ಪರಮಹಂಸರು ಬೇರೆ ವಿಧಾನಗಳನ್ನು ಅನುಸರಿಸಿದರು. ಗುರುಗಳ ನಿಧನದ ಮುಂಚೆ ಒಂದು ಘಟನೆ ನಡೆಯಿತು. ನರೇಂದ್ರ ಅವರಿಂದ ಒಂದು ಅನುಗ್ರಹ ಬಯಸಿದ: ''ನಿಮ್ಮಂತೆ ನಾನು ಸದಾ ನಿರ್ವಿಕಲ್ಪ ಸಮಾಧಿಯ ಸ್ಥಿತಿಯಲ್ಲಿದ್ದು ಆನಂದವನ್ನು ಅನುಭವಿಸಬೇಕು!'' ತಾವು ಅತ್ಯುತ್ತಮ ವ್ಯಕ್ತಿ ಎಂದು ಭಾವಿಸಿದ್ದ ತಮ್ಮ ಪ್ರಿಯಶಿಷ್ಯನ ಮನಸ್ಸಿನ ಈ ಆಸೆ ಪರಮಹಂಸರನ್ನು ನಿರಾಶೆಗೊಳಿಸಿತು. ಅವರು ತಮ್ಮ ಭಾವನೆಯನ್ನು ಬಚ್ಚಿಟ್ಟುಕೊಳ್ಳದೆ ನೇರವಾಗೇ ಹೇಳಿದರು : ''ನೀನು ದೊಡ್ಡ ಮನುಷ್ಯ ಎಂದು ಭಾವಿಸಿದ್ದೆ. ದೊಡ್ಡ ಆಲದ ಮರದಂತೆ ಬೆಳೆದು, ಹರಡಿಕೊಂಡು ನೊಂದ ನೂರಾರು ಜನರಿಗೆ ಆಶ್ರಯ ಕೊಡುತ್ತೀಯೆ ಎಂದು ಭಾವಿಸಿದ್ದೆ. ಆದರೆ, ಈಗ ನೋಡಿದರೆ ನಿನ್ನ ಸ್ವಂತ ಮುಕ್ತಿ, ಸ್ವಂತ ಆನಂದ ಇವು ನಿನ್ನ ಗುರಿಯಾಗಿವೆ.'' ನರೇಂದ್ರನನ್ನು ಪರಮಹಂಸರು ಸಕಾಲದಲ್ಲಿ ಎಚ್ಚರಿಸಿದರು, ತಿದ್ದಿದರು, ದೊಡ್ಡ ಆದರ್ಶವನ್ನು ಅವನ ಮುಂದೆ ಬೆಳಗಿಸಿದರು. ಅದು ಅವರ ಸಂದೇಶದ ಸಾರ: ''ಒಂದೊಂದು ಜೀವಿಯೂ ಶಿವ. ಆ ಜೀವಿಯ ಸೇವೆಯೇ ನಿಜವಾದ ಅಧ್ಯಾತ್ಮ.''

ಹೆಚ್ಚು ಕಡಿಮೆ ಅನಕ್ಷರಸ್ಥರಾದ, ದಕ್ಷಿಣೇಶ್ವರದ ಭವತಾರಿಣೀ ದೇವಿಯ ಮಂದಿರದ ಪೂಜಾರಿ ಮಾತ್ರರಾಗಿದ್ದು ಸರ್ವಧರ್ಮ ಸಮನ್ವಯಾಚಾರ್ಯರೆಂದು ಪ್ರಸಿದ್ಧರಾದ, ತಾನು ದೇವಮಾನವರೆಂದು ಕಂಡುಕೊಂಡಿದ್ದ ರಾಮಕೃಷ್ಣ ಪರಮಹಂಸರ ಬಾಯಿಂದ ಬಂದ ಅಧ್ಯಾತ್ಮದ ನೂತನ ವ್ಯಾಖ್ಯಾನ ನರೇಂದ್ರನ ಜೀವನ ಮಂತ್ರವಾಯಿತು.

ತಮ್ಮ ಗುರುದೇವರು ತೀರಿಕೊಂಡ ಮೇಲೆ, ನರೇಂದ್ರನು ವಿವೇಕಾನಂದರಾದ ಅವಧಿಯಲ್ಲಿ ಸ್ವಾಮಿ ವಿವೇಕಾನಂದರು ಇಡೀ ಭಾರತವನ್ನು ಹೆಚ್ಚು ಕಡಿಮೆ ಕಾಲ್ನಡಿಗೆಯಲ್ಲಿ ಸುತ್ತಿದರು. ಅಖಂಡ ಭರತಖಂಡದ ಆಧ್ಯಾತ್ಮಿಕ ಸಂಪತ್ತಿನ ಸ್ವರೂಪವನ್ನು, ಅದು ಜನತೆಯಲ್ಲಿ ವ್ಯಕ್ತವಾಗಿರುವ ರೀತಿಯನ್ನು ಕಣ್ಣಾರೆ ಕಾಣಲು ಅವರು ಎರಡು ವರ್ಷಗಳ ಕಾಲ ಭಾರತದ ಉದ್ದಗಲಗಳನ್ನು ತಮ್ಮ ಪಾದಗಳಿಂದ ಅಳೆದರು. ಆದರೆ, ಅವರ ಕಣ್ಣಿಗೆ ಬಿದ್ದದ್ದು, ಅವರ ಹೃದಯವನ್ನು ಕಲಕಿದ್ದು, ಅವರ ಜೀವನದ ದಿಕ್ಕುದೆಸೆಗಳನ್ನು ಬದಲಿಸಿದ್ದು ಬೇರೆಯದೇ ಆಗಿತ್ತು. ಅಧ್ಯಾತ್ಮ, ಧರ್ಮ ಇವುಗಳನ್ನು ಜನತೆಯಲ್ಲಿ ಬಹು ಪ್ರಮಾಣದಲ್ಲಿ ಕಾಣ ಹೊರಟಿದ್ದ ಅವರ ಕಣ್ಣಿಗೆ ಬಿದ್ದದ್ದು, ದೊಡ್ಡ ಪ್ರಮಾಣದಲ್ಲಿ ಕಂಡದ್ದು ಜನರಲ್ಲಿ ದಟ್ಟವಾಗಿ ವ್ಯಾಪಿಸಿದ್ದ ಅನಕ್ಷರತೆ, ಬಡತನ, ಹಿಮಾಲಯೋಪಮ ಮೂಢನಂಬಿಕೆಗಳು, ಜಾತೀಯತೆ, ತನ್ನ ಜಾತಿಯೇ ಅತಿದೊಡ್ಡದು, ಉಳಿದವೆಲ್ಲ ಕೀಳು ಎಂಬ ಭಾವನೆ, ಸ್ತ್ರೀಯರ ಮೇಲೆ, ಬಡವರ ಮೇಲೆ, ದಲಿತರ ಮೇಲೆ ನಡೆಯುತ್ತಿದ್ದ ದೌರ್ಜನ್ಯ – ಇತ್ಯಾದಿ ಇತ್ಯಾದಿ. ಅನಾಗರಿಕ ಆಚರಣೆಗಳ ತವರಾಗಿದ್ದ ಭಾರತದ ಸ್ಥಿತಿಯನ್ನು ಕಂಡು ಕರುಣಾಳುವಾದ ಸನ್ಯಾಸಿಯ ಅಂತಃಕರಣ ಕಲಕಿ ಹೋಯಿತು. ತಾನು ಮನಸ್ಸಿನಲ್ಲಿ ಗೌರವಿಸುತ್ತಿದ್ದ, ಪೂಜಿಸುತ್ತಿದ್ದ ಭಾರತ ಇದೇ ಹೌದೆ ಎಂದು ಅವರು ಮತ್ತೆ ಮತ್ತೆ ಪ್ರಶ್ನಿಸಿಕೊಳ್ಳುವಂತಾಯಿತು. ಶ್ರಮಜೀವಿಗಳು ತಲುಪಿದ್ದ ದುಃಸ್ಥಿತಿಯನ್ನು ಕಂಡು ಶಾಂತಮೂರ್ತಿಯಾಗಿದ್ದ ಅವರು ರುದ್ರಮೂರ್ತಿಯಾದರು. ಆದರೆ ಅವರ ವಜ್ರಸಮ ವ್ಯಕ್ತಿತ್ವ ಅವರನ್ನು ನಿರಾಶರಾಗಿ ಉಳಿಯಲು ಬಿಡಲಿಲ್ಲ; ಇವಕ್ಕೆಲ್ಲ ಪರಿಹಾರವೇ ಇಲ್ಲ, ಇದಕ್ಕೆ ನಾನೊಬ್ಬ ಏನು ತಾನೆ ಮಾಡಬಲ್ಲೆ ಎಂದು ನಿಷ್ಕ್ರಿಯರಾಗಿ ಸಮಸ್ಯೆಗಳು ಹಾಗೇ ಉಳಿಯಲು ಬಿಡಲಿಲ್ಲ; ಸರ್ವಸಂಗ ಪರಿತ್ಯಾಗಿಯಾದ, ಸನ್ಯಾಸಿಯಾದ, ನನಗೇಕೆ ಇದರ ಗೊಡವೆ ಎಂದು ಜಗತ್ತಿಗೆ ವಿಮುಖರಾಗಿ ಉಳಿಯಲು ಬಿಡಲಿಲ್ಲ. ಪಶ್ಚಿಮ ದೇಶಗಳ, ಅದರಲ್ಲೂ ಅಮೆರಿಕಾ ದೇಶದ ಸಂಪತ್ತಿನ ಕಥೆಯನ್ನು ಅವರು ಕೇಳಿದ್ದರು. ಅಮೆರಿಕಾದ ಷಿಕಾಗೋ ನಗರದಲ್ಲಿ ೧೮೯೩ರ ಸೆಪ್ಟೆಂಬರ್ ತಿಂಗಳಿನಲ್ಲಿ ಸರ್ವಧರ್ಮ ಸಮ್ಮೇಳನ ನಡೆಯಲಿದೆ ಎಂದು ಕೇಳಿದ್ದ ಅವರು ಅದರಲ್ಲಿ ಭಾಗವಹಿಸಲು ನಿರ್ಧರಿಸಿದರು. ಆ ನಿರ್ಧಾರ ತೆಗೆದುಕೊಳ್ಳಲು ಕಾರಣ ತಮ್ಮ ದೇಶದ ಆಧ್ಯಾತ್ಮಿಕ ಸಂಪತ್ತನ್ನು ಅಲ್ಲಿ ನೀಡಿ ಅದಕ್ಕೆ ಪ್ರತಿಯಾಗಿ ಅಲ್ಲಿಂದ ಹಣ ತಂದು ಭಾರತದಲ್ಲಿನ ಬಡತನ, ಅಜ್ಞಾನ, ಮೂಢನಂಬಿಕೆಗಳ ವಿನಾಶಕ್ಕೆ ಪ್ರಯತ್ನಿಸುತ್ತೇನೆ ಎಂಬ ಸಂಕಲ್ಪ. ಆದರೆ ನಡೆದದ್ದೇ ಬೇರೆ. ನಿಜಕ್ಕೂ ಅದು ಇನ್ನೊಂದು ಕಥೆ.

ಜನಸಾಮಾನ್ಯರ ಇಂದಿನ ದುರವಸ್ಥೆಗೆ ಶ್ರೀಮಂತರು ಮತ್ತು ಉಚ್ಚ ವರ್ಗದವರು ನೇರವಾಗಿ ಕಾರಣ ಎಂಬುದು ಸ್ವಾಮೀಜಿಯ ಖಚಿತವಾದ ಅಭಿಪ್ರಾಯ. ಉಚ್ಚ ವರ್ಗದ ಜನರ ವಿಷಯದಲ್ಲಿ ವಿವೇಕಾನಂದರಿಗಿದ್ದ ಆಕ್ರೋಶ, ತಿರಸ್ಕಾರಗಳು ಅವರ ಮನಸ್ಸಿನ ಆಳಸ್ತರದಿಂದ ಹೊಮ್ಮಿದ್ದು, ಹಾಗೆ ಹೊಮ್ಮುವಾಗ ಅವರ ಕ್ರೋಧ ಜ್ವಾಲಾಮುಖಿಯಾಗಿ, ಮಾತುಗಳು ಲಾವಾ ಪ್ರವಾಹವಾಗಿ ಉಕ್ಕಿ ಹರಿದಿವೆ.

ಒಂದು ಸಂದರ್ಭ : ವಿವೇಕಾನಂದರು ಬಂಗಾಳ ಕೊಲ್ಲಿ, ಹಿಂದೂ ಮಹಾಸಾಗರ, ಕೆಂಪು ಸಮುದ್ರ – ಇವುಗಳ ಮೂಲಕ ಪ್ರಯಾಣ ಮಾಡುತ್ತಿರುವಾಗ ಬಂಗಾಳಿ ಭಾಷೆಯಲ್ಲಿ ಒಂದು ಲೇಖನ – ನೂರು ಪುಟಗಳಷ್ಟು ದೊಡ್ಡ ಲೇಖನ ಬರೆದರು. ಅನಂತರ ಅದು 'ಉದ್ಬೋಧನ' ಎಂಬ ಪತ್ರಿಕೆಯಲ್ಲಿ ಪ್ರಕಟವಾಯಿತು. ಕನ್ನಡದಲ್ಲಿ 'ಪರಿವ್ರಾಜಕ' ಎಂಬ ಹೆಸರಿನ ಪುಸ್ತಕವಾಗಿ ಮೈಸೂರಿನ ಶ್ರೀರಾಮಕೃಷ್ಣಾಶ್ರಮದಿಂದ ಪ್ರಕಟವಾಗಿದೆ. ಹಡಗಿನ ವ್ಯವಸ್ಥೆಯ ಬಗ್ಗೆ ಬರೆಯುತ್ತಾ ಸ್ವಾಮೀಜಿ ಇದ್ದಕ್ಕಿದ್ದಂತೆ ಉಚ್ಚ ಕುಲದವರ ಮೇಲೆ ಶ್ರೀಮಂತರ ಮೇಲೆ ಹೀಗೆ ಕಿಡಿಕಾರಿದ್ದಾರೆ. ಆ ದೀರ್ಘವಾದ ಭಾಗವನ್ನು ಓದಿದರೆ ಭಾರತದ ಉಜ್ವಲವಾದ ಭವಿಷ್ಯವನ್ನು ನಿರ್ಮಾಣ ಮಾಡುವ ಶಕ್ತಿ ಇರುವುದು ಬಡವರಿಗೆ, ಅಂದಿಗೆ ಕೀಳು ಎಂದು ಭಾವಿಸಲ್ಪಟ್ಟಿರುವವರಿಗೆ ಮಾತ್ರ ಎಂಬುದು ಸ್ವಾಮಿಜಿಯ 'ದರ್ಶನ' ಎಂಬುದು ನಿಚ್ಚಳವಾಗಿ ಕಾಣುತ್ತದೆ:

''ಪುರಾತನ ಆರ್ಯ ಮಹರ್ಷಿಕುಲ ಸಂಭೂತರೆಂದು ನೀವೆನಿತು ಹಿಗ್ಗಿದರೂ, ಪುರಾತನ ಆರ್ಯಾವರ್ತದ ಮಹಿಮೆ ಗೌರವಗಳನ್ನು ನೀವು ಎಷ್ಟು ಕೀರ್ತಿಸಿದರೂ, ಉಚ್ಚ ಕುಲ ಪ್ರಸೂತರೆಂದು ನೀವೆನಿತು ಉಬ್ಬಿದರೂ, ಆರ್ಯಾವರ್ತದಲ್ಲಿ ಉತ್ತಮ ವರ್ಗದವರು ಎಂದೆನಿಸಿಕೊಂಡಿರುವ ನೀವೆಲ್ಲ ಬದುಕಿದ್ದೀರಿ ಎಂದು ಭಾವಿಸಿದ್ದೀರೇನು ? ಯಾರನ್ನು ನಿಮ್ಮ ಪೂರ್ವಿಕರು ಚಲಿಸುವ ಸ್ಮಶಾನಗಳೆಂದು (ಶಂಕರಾಚಾರ್ಯ ಮುಂತಾದ ಭಾಷ್ಯಕಾರರು ಶೂದ್ರರನ್ನು ''ಚಲಿಸುವ ಸ್ಮಶಾನ'' ಎಂದು ಕರೆದು ಅವರಿಗೆ ವೇದಾಧಿಕಾರ ಇಲ್ಲ ಎಂದು ಹೇಳಿದ್ದಾರೆ. ಉಳಿದ ಭಾಷ್ಯಕಾರರ ಅಭಿಪ್ರಾಯ ಇದಕ್ಕಿಂತ ಬೇರೆಯಾದದ್ದಲ್ಲ.) ತಿರಸ್ಕರಿಸಿದರೋ ಅವರಲ್ಲಿ (ಎಂದರೆ ಶೂದ್ರರಲ್ಲಿ) ಮಾತ್ರವೇ ಭಾರತ ವರ್ಷದ ಪ್ರಾಣ ಸ್ವಲ್ಪವಾದರೂ ಸಂಚರಿಸುತ್ತಿದೆ. ನೀವು ಮಾತ್ರ (ಎಂದರೆ ಉಚ್ಚರೆಂದು ಕರೆಸಿಕೊಳ್ಳುವವರು) ನಿಜವಾಗಿಯೂ ಜೀವಂತ

ಶವಗಳಾಗಿದ್ದೀರಿ. ನಿಮ್ಮ ಮನೆಗಳಲ್ಲಿರುವ ಸಾಮಾನುಗಳನ್ನು ನೋಡಿದರೆ ಪ್ರಾಚೀನ ವಸ್ತುಸಂಗ್ರಹಾಲಯದ ನೆನಪಾಗುತ್ತದೆ; ಅಲ್ಲಿ ಜೀವವಿಲ್ಲ, ನವ್ಯತೆಯಿಲ್ಲ. ಉಚ್ಚ ವರ್ಗದವರೆಂದು ಕೂಗಿಕೊಳ್ಳುವ ಭಾರತೀಯರಿರಾ... ನೀವೆಲ್ಲ ಭೂತಕಾಲದ ಭೂತಗಳಾಗಿದ್ದೀರಿ. ನಿಮ್ಮ ವರ್ತಮಾನತೆ ಒಂದು ಹುಸಿಗನಸು, ಬರಿಯ ಭ್ರಾಂತಿ. ನೀವು ಸೊನ್ನೆಗಳು. ಭವಿತವ್ಯದ ದೃಷ್ಟಿಗೆ ನೀವೆಲ್ಲ ಶೂನ್ಯ! ಸ್ವಪ್ನಲೋಕದ ಛಾಯಾಮೂರ್ತಿಗಳಿರಾ, ಏಕಿನ್ನೂ ಉಳಿದಿರುವಿರಿ? ಮೃತಗತ ಭಾರತದ ರಕ್ತಮಾಂಸವಿಹೀನ ಅಸ್ಥಿಪಂಜರಗಳಿರಾ, ನೀವೇಕೆ ಆದಷ್ಟು ಬೇಗನೆ ಹುಡಿಯಲ್ಲಿ ಹುಡಿಯಾಗಿ ಗಾಳಿಯಾಗಿ ಹೋಗಬಾರದು?... ಶೂನ್ಯದಲ್ಲಿ ಐಕ್ಯವಾಗಿ ಕಾಣದೆ ತೊಲಗಿ ಹೋಗಿ. ನಿಮ್ಮ ಸ್ಥಾನದಲ್ಲಿ ನವೀನ ಭಾರತವೇಳಲಿ. ಕೃಷಿಕನ ದರಿದ್ರ ಗುಡಿಸಲಿನಿಂದ ನೇಗಿಲು ಹಿಡಿದು ಹೊಸ ಭಾರತಾಂಬೆ ಮೈದೋರಲಿ. ಬೆಸ್ತನ ಜೋಪಡಿಯಿಂದ ಆಕೆ ಮೂಡಲಿ. ಚಮ್ಮಾರರ, ಜಾಡಮಾಲಿಗಳ ಬಡಗುಡಿಸಲುಗಳಿಂದ ಆಕೆ ಹೊರಹೊಮ್ಮಲಿ. ಮಳಿಗೆಯಿಂದ, ಕಾರ್ಖಾನೆಯಿಂದ, ಅಂಗಡಿಯಿಂದ, ಸಂತೆಯಿಂದ ಆಕೆ ಪ್ರತ್ಯಕ್ಷವಾಗಲಿ... ಸಾಮಾನ್ಯ ಜನರು ಸಹಸ್ರಾರು ವರುಷಗಳಿಂದ ಪದದಲಿತರಾಗಿದ್ದಾರೆ. ಉಚ್ಚವರ್ಗದವರ ಕ್ರೂರ ಪಾದಾಘಾತವನ್ನು ಗೊಣಗದೆ ಸಹಿಸಿ ಸಹಿಸಿ ಅವರಲ್ಲಿ ಒಂದು ಅದ್ಭುತ ಸಹಿಷ್ಣುತೆ ತಲೆದೋರಿದೆ. ಅನಂತವಾದ ದುಃಖವನ್ನು ಸಹಿಸಿ ಸಹಿಸಿ ಅವರು ಅಮಿತ ಶಕ್ತಿಶಾಲಿಗಳಾಗಿದ್ದಾರೆ. ಬೊಗಸೆ ಗಂಜಿಯನ್ನು ಕುಡಿದು ಜೀವಿಸುತ್ತಿದ್ದರೂ ಅವರು ಲೋಕವನ್ನೇ ಅಲುಗಾಡಿಸಲು ಸಮರ್ಥರಾಗಿದ್ದಾರೆ. ಇನ್ನೊಂದು ಮುಷ್ಟಿ ಅನ್ನವನ್ನು ಅವರಿಗೆ ನೀಡಿ, ಅವರ ಶಕ್ತಿಯನ್ನು ಒಳಗೊಳ್ಳಲು ಜಗತ್ತು ಸಾಲದಾಗುತ್ತದೆ'' (ಪರಿವ್ರಾಜಕ : ಪುಟಗಳು ೩೧-೩೪).

ಮುಂದೆ ಶೂದ್ರ ಶಕ್ತಿಯೇ ಜಗತ್ತನ್ನು ಆಳುತ್ತದೆ ಎಂಬುದು ದ್ರಷ್ಟಾರರಾದ ಸ್ವಾಮಿ ವಿವೇಕಾನಂದರ ಭವಿಷ್ಯವಾಣಿ. ಶೂದ್ರರು ಎಂದರೆ ಸಮಸ್ತ ದಲಿತ ವರ್ಗವೂ ಅದರಲ್ಲಿ ಸೇರಿದೆ ಎಂಬುದನ್ನು, ಅವರ ಮನಸ್ಸಿನಲ್ಲಿರುವುದು ಎಲ್ಲ ಸ್ತರಗಳಲ್ಲಿಯೂ ಇರುವ ಶ್ರಮಿಕ ವರ್ಗ ಎಂಬುದನ್ನು ನಾವು ಮರೆಯುವಂತಿಲ್ಲ. ಸ್ವಾಮಿ ವಿವೇಕಾನಂದರು ತಮ್ಮ ಈ ವಿಶ್ಲೇಷಣೆಯಲ್ಲಿ ಭಾರತ ಮಾತ್ರವಲ್ಲದೆ ಇಡೀ ಜಗತ್ತಿನ ಇತಿಹಾಸವನ್ನು ಗಮನಕ್ಕೆ ತಂದುಕೊಂಡಿದ್ದಾರೆ. ''ವರ್ತಮಾನ ಭಾರತ'' ಎಂಬ ಲೇಖನದಲ್ಲಿ ಅವರು ಹೇಳುತ್ತಾರೆ (ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ ; ಸಂ. ೫. ಪು. ೪೮೯):

''...ಇನ್ನೂ ಭರವಸೆ ಇದೆ. ಕಾಲದ ಪ್ರಚಂಡ ಪ್ರವಾಹದಲ್ಲಿ ಬ್ರಾಹ್ಮಣರು ಮತ್ತು ಉಳಿದ ಮೇಲಿನ ವರ್ಣದವರು ಶೂದ್ರರ ಮಟ್ಟಕ್ಕೆ ಇಳಿದು ಶೂದ್ರರು ಮೇಲಿನ ಹಂತಕ್ಕೆ ಏರುವರು. ಒಂದಾನೊಂದು ಕಾಲದಲ್ಲಿ ರೋಮಿನ ಆಳ್ವಿಕೆಗೆ ಒಳಪಟ್ಟಿದ್ದ ಶೂದ್ರರ ದೇಶವಾದ ಯುರೋಪಿನಲ್ಲಿ ಈಗ ಕ್ಷಾತ್ರವೀರ್ಯ ತುಂಬಿದೆ. ನಮ್ಮ ಕಣ್ಣೆದುರಿಗೇ ಹಿಂದೆ ಬಲಾಢ್ಯವಾಗಿದ್ದ ಚೀನಾದೇಶ ಶೂದ್ರರ ಗುಂಪಿಗೆ ಇಳಿಯುತ್ತಿರುವುದು. ಕೆಲಸಕ್ಕೆ ಬಾರದ ಜಪಾನು ಆಕಾಶಬಾಣದಂತೆ ಇದ್ದಕ್ಕಿದ್ದಂತೆ ಮೇಲೇರಿ, ತನ್ನ ಶೂದ್ರ ಸ್ವಭಾವವನ್ನು ಕೊಡಹಿ, ಕ್ರಮೇಣ ಮೇಲಿನ ವರ್ಗದವರ ಹಕ್ಕನ್ನು ಆಕ್ರಮಿಸುತ್ತಿದೆ. ಆಧುನಿಕ ಗ್ರೀಸ್ ಮತ್ತು ಇಟಲಿ ಕ್ಷತ್ರಿಯರ ಸ್ಥಾನಕ್ಕೆ ಬಂದಿರುವುದು. ಟರ್ಕಿ, ಸ್ಪೈಯಿನ್ ಮುಂತಾದ ದೇಶಗಳ ಅವನತಿಯನ್ನು ನಾವಿಲ್ಲಿ ಗಮನಿಸಬೇಕಾಗಿದೆ.

''...ಆದರೂ ಶೂದ್ರರು ಕೇವಲ ತಮ್ಮ ಶೂದ್ರತ್ವದಿಂದಲೇ ಮೇಲೇರುವ ಒಂದು ಕಾಲ ಬರುವುದು, ಆದರೆ ಈಗಿನಂತೆ ಶೂದ್ರರೇ ವೈಶ್ಯ ಅಥವಾ ಕ್ಷತ್ರಿಯರ ಗುಣವನ್ನು ಗಳಿಸಿ ಪ್ರಾಮುಖ್ಯತೆಗೆ ಬರುವಂತೆ ಅಲ್ಲ, ಪ್ರತಿಯೊಂದು ದೇಶದ ಶೂದ್ರರು, ವೈಶ್ಯ ಅಥವಾ ಕ್ಷತ್ರಿಯರಂತೆ ಆಗದೆ, ತಮ್ಮ ಹುಟ್ಟು ಗುಣವಾದ ಶೂದ್ರ ಸ್ವಭಾವ ಮತ್ತು ಅಭ್ಯಾಸಗಳಿಂದಲೇ ಪ್ರತಿಯೊಂದು ಸಮಾಜದಲ್ಲಿಯೂ ನಿರಂಕುಶ ಅಧಿಕಾರವನ್ನು ಪಡೆಯುವ ಒಂದು ಸಮಯ ಬರುವುದು.''

ಶ್ರಮಿಕ ವರ್ಗದ ಜನರು ಅನುಭವಿಸುತ್ತಿದ್ದ ಕಷ್ಟ-ನಷ್ಟ, ಅವಮಾನಗಳನ್ನು ಕಣ್ಣಾರೆ ಕಂಡುದರಿಂದ ವಿವೇಚನಾಶಕ್ತಿ ಜಾಗೃತವಾಗಿದ್ದ ವಿವೇಕಾನಂದರು ತಮ್ಮ ಬರೆಹ, ಭಾಷಣಗಳಲ್ಲಿ ಪದೇ ಪದೇ ಆ ವಿಷಯವನ್ನು ಎತ್ತುತ್ತಾ ಹೋಗಿದ್ದಾರೆ. ಒಂದು ಕಡೆ ಮತ್ತೆ ಹೇಳುತ್ತಾರೆ:

''ನಮ್ಮ ದೇಶದ ಮಹಾನ್ ರಾಷ್ಟ್ರೀಯ ಶಾಪ ಜನಸಮೂಹವನ್ನು ಉಪೇಕ್ಷಿಸಿದ್ದು. ನಮ್ಮ ಅವನತಿಗೆ ಕಾರಣವಾಗಿದ್ದು ಅದೇ. ನಮ್ಮ ದೇಶದ ಜನಸಾಮಾನ್ಯರಿಗೆ ವಿದ್ಯೆ ನೀಡಿ, ಆಹಾರವನ್ನು ಒದಗಿಸುವವರೆಗೆ ಯಾವ ರಾಜಕಾರಣದಿಂದಲೂ ಏನೂ ಪ್ರಯೋಜನವಾಗುವುದಿಲ್ಲ. ಜನಸಾಮಾನ್ಯರು ನಮ್ಮ ವಿದ್ಯಾಭ್ಯಾಸಕ್ಕೆ ಹಣ ತೆರುತ್ತಿದ್ದಾರೆ. ನಮ್ಮ ದೇವಾಲಯಗಳನ್ನು ಕಟ್ಟುತ್ತಿದ್ದಾರೆ. ಇವಕ್ಕೆ ಪ್ರತಿಯಾಗಿ ಅವರಿಗೆ ದೊರಕುತ್ತಿರುವುದು ಒದೆಗಳು ಮಾತ್ರ. ಅವರು ನಮ್ಮ ಗುಲಾಮರು. ಭಾರತವನ್ನು ಪುನರುಜ್ಜೀವನಗೊಳಿಸಬೇಕಾದರೆ ನಾವು ಅವರಿಗಾಗಿ ಶ್ರಮಿಸಬೇಕು'' (ಸ್ವಾಮಿ ವಿವೇಕಾನಂದ ಕೃತಿಶ್ರೇಣಿ ; ಸಂ. ೭. ಪು. ೪೪೪-೪೫).

ತಾವು ಕುಳಿತಿರುವ ಸ್ಥಳಕ್ಕೇ ಜನಸಾಮಾನ್ಯರು ಬಂದು ಸೇವೆಯನ್ನು ಸ್ವೀಕರಿಸಬೇಕು ಎಂದು ನಿರೀಕ್ಷಿಸುವವರನ್ನು ಕಂಡರೆ ಸ್ವಾಮೀಜಿಗೆ ಆಗುತ್ತಿರಲಿಲ್ಲ. ಅವರು ಒತ್ತಿ ಒತ್ತಿ ಹೇಳುತ್ತಿದ್ದರು : ''ನರಳುತ್ತಿರುವ ಲಕ್ಷಾಂತರ ಜನರ ಬಳಿಗೆ ನೀವೇ ಹೋಗಿ. ಅವರ ಗುಡಿಸಲುಗಳಿಗೆ ಹೋಗಿ ಮನೆಯಿಂದ ಮನೆಗೆ ಹೋಗಿ ಮಧ್ಯಾಹ್ನವಾದರೆ ಮಧ್ಯಾಹ್ನ, ಸಂಜೆಯಾದರೆ ಸಂಜೆ, ಅವರಿರುವಲ್ಲಿಗೆ ಹೋಗಿ ಅವರ ಕಣ್ಣು ತೆರೆಯಿಸಿ... ಅವರಿಗೆ ವಿಷಯಗಳನ್ನು ತಿಳಿಸಿ, ಅವರ ಸುತ್ತಣ ಆಗುಹೋಗುಗಳಿಗೆ ಅವರ ಕಣ್ಣು ತೆರೆಯಿಸಿ. ಹಾಗೆ ಮಾಡಿದರೆ ತಮ್ಮ ಉದ್ಧಾರದ ದಾರಿಯನ್ನು ಅವರೇ ಕಂಡುಕೊಳ್ಳುತ್ತಾರೆ... ನಿಮ್ಮ ಕೆಲಸ ಜನರಿಗೆ ತಮ್ಮ ಹಕ್ಕುಗಳು ಏನು ಎಂಬುದನ್ನು ತಿಳಿಸುವುದು, ಅವಕ್ಕಾಗಿ ಅವರು ಹೋರಾಡುತ್ತಾರೆ. ಭಾರತಕ್ಕೆ ಇರುವ ಒಂದೇ ಆಶೋತ್ತರವೆಂದರೆ ಇಲ್ಲಿನ ಜನಸಾಮಾನ್ಯರ ವರ್ಗ. ಉನ್ನತ ವರ್ಗದ ಜನ ಭೌತಿಕವಾಗಿ, ನೈತಿಕವಾಗಿ ಸತ್ತೇ ಹೋಗಿದ್ದಾರೆ.''

ಭಾರತದ ಮಧ್ಯಮ ವರ್ಗದ ಜನರನ್ನು ಸ್ವಾಮೀಜಿ ಮರೆತಿರಲಿಲ್ಲ. ತಾವು ಉದ್ದೇಶಿಸಿ ಮಾತನಾಡುತ್ತಿದ್ದುದು ಈ ಮಧ್ಯಮವರ್ಗದ ಜನರನ್ನೇ ಎಂದು ತೋರುತ್ತದೆ. ಒಂದು ಕಡೆ ಅವರು ಈ ಮಾತನ್ನು ಸ್ಪಷ್ಟವಾಗಿ ಹೇಳಿದ್ದಾರೆ: ''ಯಾವುದಾದರೂ ದೇಶದಲ್ಲಿ ಯಾರಾದರೂ ಶ್ರೀಮಂತರು ಯಾರಿಗೇ ಆದರೂ ಸಹಾಯ ಮಾಡಿರುವುದನ್ನು ತೋರಿಸಿ, ನೋಡೋಣ. ಎಲ್ಲ ದೇಶಗಳಲ್ಲೂ ಮಹತ್ಕಾರ್ಯಗಳನ್ನು ಸಾಧಿಸಿರುವವರು ಮಧ್ಯಮ ವರ್ಗದವರೇ. ಭಾರತದ ಶ್ರೀಮಂತ ಜನರಿಂದ ನಾನು ಏನನ್ನೂ ನಿರೀಕ್ಷಿಸುವುದಿಲ್ಲ.''

ಈ ಮಾತುಗಳು ಪೂರ್ಣ ಸತ್ಯವಲ್ಲ. ಸ್ವಯಂ ಸ್ವಾಮೀಜಿಯೇ ಅಮೆರಿಕದಲ್ಲಿ ಸಾರ್ವಜನಿಕ ಹಿತಾಸಕ್ತಿಯ ಕಾರ್ಯಗಳಿಗೆ ಮುಂದಾಗುವಂತೆ ರಾಕೆಫೆಲ್ಲರ್ ಅವರನ್ನು ಪ್ರೋತ್ಸಾಹಿಸಿದರು. ಅಲ್ಲದೆ ಭಾರತದಲ್ಲೂ ಟಾಟಾ, ಬಿರ್ಲಾ ಮುಂತಾದವರು ಭಾರೀ ಪ್ರಮಾಣದಲ್ಲಿ ಜನಸಾಮಾನ್ಯರಿಗೆ ನೆರವಾಗುವ ಯೋಜನೆಗಳ ಸ್ಥಾಪನೆಗೆ ಕಾರಣಕರ್ತರಾಗಿದ್ದಾರೆ.

ಸಾಮಾನ್ಯ ಜನರ, ತುಳಿತಕ್ಕೆ ಒಳಗಾದ ಜನಸಮೂಹದ ಸುಪ್ತ ಶಕ್ತಿಯನ್ನು ವಿವೇಕಾನಂದರಷ್ಟು ಕರಾರುವಾಕ್ಕಾಗಿ ಅಳೆದ ಇನ್ನೊಬ್ಬರೇ ವ್ಯಕ್ತಿಯೆಂದರೆ ಮಹಾತ್ಮಾ ಗಾಂಧೀಜಿ. ಆ ಸಮೂಹವನ್ನು ಬಳಸಿಕೊಂಡು ಅವರು ಸ್ವಾತಂತ್ರ್ಯ ಹೋರಾಟದಲ್ಲಿ ಯಶಸ್ವಿಯಾದರು. ಆದರೆ ಆಡಳಿತದ ಪ್ರಶ್ನೆ ಬಂದಾಗ, ಕೇಂದ್ರದಲ್ಲೂ ರಾಜ್ಯಗಳಲ್ಲೂ ರಾಕ್ಷಸೀ ಶಕ್ತಿಗಳು ಆಡಳಿತವನ್ನು ಕಸಿದುಕೊಂಡು ಸಾಮಾನ್ಯ ಜನತೆಯನ್ನು ಹಣ, ಹೆಂಡಗಳ ದಾಸರನ್ನಾಗಿ ಮಾಡಿ ಅವರಿಂದ ಪಡೆದ ಓಟುಗಳಿಂದ ರಕ್ತಬೀಜಾಸುರರಾಗಿ, ಅವರನ್ನು ವಿನಾಶದ ಅಂಚಿಗೆ ಒಯ್ದು ತಾವು ಮಾತ್ರ ಸುಖಲೋಲುಪ್ತವಾಗಿವೆ.

ಶ್ರಮಿಕವರ್ಗವನ್ನು ಬಳಸಿಕೊಂಡ ಶ್ರೀಮಂತ ವರ್ಗ ಇನ್ನೂ ಇನ್ನೂ ಶ್ರೀಮಂತರಾಗುವುದಲ್ಲದೆ ಆ ವರ್ಗವನ್ನು ಕಷ್ಟಕಾರ್ಪಣ್ಯಗಳ ಆಳವಾದ ಕಂದಕಕ್ಕೆ ನೂಕುತ್ತಾ ಇದೆ ಎಂಬುದನ್ನು ಸ್ವಾಮೀಜಿ ಸ್ಪಷ್ಟವಾಗಿ ಅರ್ಥಮಾಡಿಕೊಂಡಿದ್ದರು. ಪೂರ್ವದಲ್ಲಾಗಲಿ, ಪಶ್ಚಿಮದಲ್ಲಾಗಲಿ ಸಂಪತ್ತು ಎಂಬುದು ಕೆಲವರ ಕೈಯಲ್ಲಿ ಸಿಕ್ಕಿಕೊಂಡಿದೆ, ಆ ಕೆಲವರು ಯಾವುದೇ ರೀತಿಯ ದೈಹಿಕ ಶ್ರಮವೂ ಇಲ್ಲದೆ ಲಕ್ಷೋಪಲಕ್ಷ ಜನರ ದೈಹಿಕ ಶ್ರಮವನ್ನು ತಮ್ಮ ಸ್ವಂತ ಸಂಪತ್ತಿನ ವೃದ್ಧಿಗಾಗಿ ಬಳಸಿಕೊಳ್ಳುತ್ತಿದ್ದಾರೆ ಎಂಬುದನ್ನು ಸ್ವಾಮೀಜಿ ಹೇಳಿದ್ದಾರೆ. ಪಶ್ಚಿಮಕ್ಕೆ ಉಳ್ಳವರ ಹಿಂಸೆ ಮಾತ್ರ ಇದ್ದರೆ ಪೂರ್ವದ ಜನರಿಗೆ ಉಳ್ಳವರ ದಬ್ಬಾಳಿಕೆಯ ಜೊತೆಗೆ ಪುರೋಹಿತಶಾಹಿಯ ಹಿಂಸೆಯೂ ಸೇರಿಕೊಂಡಿದೆ ಎನ್ನುತ್ತಾರೆ ಸ್ವಾಮೀಜಿ.

ವಿವೇಕಾನಂದರು ಕ್ರಾಂತಿಯ ಹೆಸರಿನಲ್ಲಿ ರಕ್ತಪಾತವನ್ನು ಬಯಸಿದವರಲ್ಲ. ಜನಸಾಮಾನ್ಯರ ತುಡಿತಗಳಿಗೆ ಅನುಕೂಲಕರವಾದ ರೀತಿಯಲ್ಲಿ ಪ್ರತಿಕ್ರಿಯಿಸದಿದ್ದರೆ ಅದರಿಂದಾಗುವ ಪರಿಣಾಮಕ್ಕೆ ಉನ್ನತವರ್ಗಗಳೇ ಕಾರಣವಾಗುತ್ತವೆ ಎಂದು ಅವರು ಎಚ್ಚರಿಸಿದರು : ''ಕೆಳಗಿನ ವರ್ಗಗಳವರಿಗೆ ಸಲ್ಲಬೇಕಾದ ಹಕ್ಕುಬಾಧ್ಯತೆಗಳನ್ನು ಸಲ್ಲಿಸುವುದರಲ್ಲಿದೆ ಉಚ್ಚ ವರ್ಗದವರ ಕ್ಷೇಮ ಸಂರಕ್ಷಣೆ.''

ವಿವೇಕಾನಂದರು ನಡೆಸಿದ ಸಾಮಾಜಿಕ ಚಿಂತನೆಗಳನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡುವ ಅವಶ್ಯಕತೆಯಿದೆ.

---

**ಪ್ರೊ|| ಪ್ರಭುಶಂಕರ**

ನಂ. ೧೦೦೬, ಇ ಅಂಡ್ ಎಫ್ ಬ್ಲಾಕ್, ಕುವೆಂಪುನಗರ, ಮೈಸೂರು - ೫೭೦ ೦೨೩

# ಸೇತುವೆ

## ಗಿರಿಧರ್ ಖಾಸನೀಸ



**ಬೀ**ದಿಯ ಬದಿಯಲ್ಲಿ ಮುದುಕ ಕುಳಿತಿದ್ದ. ಹತ್ತಿರದಲ್ಲೇ ಹರಿಯುತ್ತಿದ್ದ ನದಿಯ ಮೇಲೊಂದು ಸೇತುವೆ. ಗಂಡಸರು ಹೆಂಗಸರು ಮಕ್ಕಳ ಗುಂಪುಗಳಲ್ಲದೆ ಬಂಡಿಗಳು ಟ್ರಕ್ಕುಗಳೂ ಸೇತುವೆ ಮೇಲೆ ಚಲಿಸುತ್ತಿದ್ದವು. ಕಡಿದಾದ ದಡದಲ್ಲಿ ಸೈನಿಕರು ಕುದುರೆ ಬಂಡಿಗಳನ್ನು ನೂಕಿ ಸಾಗಿಸುತ್ತಿದ್ದರು. ಟ್ರಕ್ಕುಗಳು ಚಲಿಸಿದಾಗಲೆಲ್ಲಾ ಧೂಳೆದ್ದು ಬೀದಿ ಮಸುಕಾಗುತ್ತಿತ್ತು. ಗಂಟುಗಳನ್ನು ಹೆಗಲಿಗೇರಿಸಿದ ರೈತರು ಮೊಣಕಾಲವರೆಗಿನ ಮಣ್ಣಲ್ಲೇ ತಡವುತ್ತ ನಡೆದಿದ್ದರು. ಮುದುಕ ಮಾತ್ರ ಬೀದಿಯ ಪಕ್ಕದಲ್ಲಿ ಅಲ್ಲಾಡದೇ ಕೂತುಬಿಟ್ಟಿದ್ದ. ಮುಂದೆ ನಡೆಯಲಾರದಷ್ಟು ದಣಿದಿದ್ದ ಅವನು.

ನಾನು ಸೇತುವೆ ಇಳಿದು ಬೀದಿಗೆ ಬಂದಿದ್ದೆ. ಸೇತುವೆ ಸಮೀಪದಲ್ಲೇ ಕಟ್ಟಿದ್ದ ಬೊಂಬಿನ ಗೋಪುರವನ್ನು ಹತ್ತಿ ಶತ್ರು ಎಷ್ಟು ದೂರದಲ್ಲಿದ್ದಾನೆ ಎಂದು ಗಮನಿಸಿ ನನ್ನ ಅಧಿಕಾರಿಗಳಿಗೆ ತಿಳಿಸುವುದು ನನ್ನ ಕೆಲಸವಾಗಿತ್ತು. ಕೆಲಸ ಮುಗಿಸಿ ಗೋಪುರದಿಂದ ಇಳಿದು ಸೇತುವೆಯ ಕಡೆ ನಡೆಯತೊಡಗಿದೆ. ಈಗ ಸೇತುವೆಯ ಮೇಲೆ ಅಷ್ಟೊಂದು ಬಂಡಿಗಳೂ ಟ್ರಕ್ಕುಗಳೂ ಚಲಿಸುತ್ತಿರಲಿಲ್ಲ. ಕೆಲವು ಜನರು ಮಾತ್ರ ಸೇತುವೆಯನ್ನು ದಾಟುತ್ತಿದ್ದರು. ಮುದುಕ ಇನ್ನೂ ಅಲ್ಲೇ ಕುಳಿತಿದ್ದ. ಅವನ ಬಳಿ ಹೋಗಿ ಯಾವ ಕಡೆಯಾಯ್ತು ಎಂದು ವಿಚಾರಿಸಿದೆ. ತಾನು ಬಂದ ಹಳ್ಳಿಯ ಹೆಸರು ಹೇಳಿದ. ತನ್ನ ಹಳ್ಳಿಯ ಹೆಸರು ಹೇಳಿದಾಗ ಅವನಿಗೆ ಖುಷಿಯಾಗಿರಬೇಕು. ಅವನ ಕಣ್ಣುಗಳು ಒಣತುಟಿಗಳು ನಗುತ್ತಿದ್ದವು.

''ನಾನು ನನ್ನ ಪ್ರಾಣಿಗಳನ್ನು ನೋಡಿಕೊಳ್ಳುತ್ತಿದ್ದೆ''.

ನನಗೆ ಅರ್ಥವಾಗದಿದ್ದರೂ ತಲೆದೂಗಿದೆ.

''ಹೌದು. ನಾನು ಅಲ್ಲೇ ಉಳಿದು ನನ್ನ ಪ್ರಾಣಿಗಳನ್ನ ನೋಡಿಕೊಳ್ಳುತ್ತಿದ್ದೆ. ಕಡೇದಾಗಿ ಊರು ಬಿಟ್ಟವ ನಾನೇ''.

ಅವನನ್ನು ದಿಟ್ಟಿಸಿ ನೋಡಿದೆ. ಗೊಲ್ಲನಂತಾಗಲೀ ಕುರಿದನಗಳ ಯಜಮಾನನಂತಾಗಲೀ ಅವನು ಕಾಣಲಿಲ್ಲ. ಅವನ ಧೂಳು ಹಿಡಿದ ಬಟ್ಟೆಗಳು, ಕಪ್ಪಿಟ್ಟ ಮುಖ, ಮೂಗಿನ ತುದಿಯಲ್ಲಿ ಕೂತ ಹಳೆಯ ಕನ್ನಡಕ ಅವನೊಬ್ಬ ಸಿರಿವಂತನೆಂದು ಸಾರಲಿಲ್ಲ. ಗೆರೆಗಳು ತುಂಬಿದ್ದ ಕನ್ನಡಕವನ್ನು ದಿಟ್ಟಿಸಿ ಕೇಳಿದೆ :

''ಯಾವ ಪ್ರಾಣಿಗಳಿದ್ದವು ?''

''ಬೇರೆ ಬೇರೆ...''

ಒಂದು ಕ್ಷಣ ಬಿಟ್ಟು ಅವನೇ ಹೇಳಿದ :

''ನಾನು ಅವುಗಳನ್ನು ಬಿಟ್ಟು ಬರಬೇಕಾಯಿತು''.

ಸೇತುವೆಯ ಕಡೆ ನೋಡಿದೆ. ನನ್ನ ಸಹೋದ್ಯೋಗಿ ಗೋಪುರವನ್ನು ಹತ್ತಿ ಶತ್ರು ಬರಬಹುದಾದ ದಿಕ್ಕನ್ನು ನೋಡುತ್ತಿದ್ದ. ಶತ್ರುವಿನ ದಾಳಿ ಯಾವ ಸಮಯದಲ್ಲಾದರೂ ಆಗಬಹುದಾಗಿತ್ತು.

''ಎಷ್ಟು ಪ್ರಾಣಿಗಳಿದ್ದವು ?''

''ಮೂರು. ಎರಡು ಮೇಕೆ. ಒಂದು ಬೆಕ್ಕು. ಅದು ಬಿಟ್ಟರೆ, ನಾಲ್ಕು ಜತೆ ಪಾರಿವಾಳ.''

''ನೀನು ಅವುಗಳನ್ನು ಬಿಟ್ಟು ಬರಬೇಕಾಯ್ತು ?''

''ಹೌದು. ಸೈನಿಕರು ಬಂದ ಕೂಡಲೆ ಹಳ್ಳಿಯನ್ನ ಖಾಲಿ ಮಾಡಿ ಅಂತ ಡಂಗುರ ಹೊಡೆದರಲ್ಲಾ''

''ನಿನ್ನ ಸಂಸಾರ ?''

ಕೊನೆಯ ಬಂಡಿಗಳು ಸೇತುವೆಯನ್ನು ದಾಟಿ ಮರೆಯಾಗುತ್ತಿದ್ದವು.

''ಇಲ್ಲ ನನಗೆ ಇದ್ದದ್ದು ಅಂದರೆ ನನ್ನ ಪ್ರಾಣಿಗಳು ಮಾತ್ರ.''

''.........''

''ಬೆಕ್ಕು ಹೇಗೋ ತಪ್ಪಿಸಿಕೊಳ್ಳುತ್ತೆ. ತನ್ನನ್ನು ಹೇಗೆ ರಕ್ಷಿಸಿಕೊಳ್ಳಬೇಕು ಅಂತ ಬೆಕ್ಕಿಗೆ ಚೆನ್ನಾಗಿ ಗೊತ್ತು. ಆದರೆ ಮಿಕ್ಕವು? ಅವುಗಳಿಗೆ ಏನಾಗುತ್ತೆ. ನಾನಂತೂ ಊಹಿಸಲಾರೆ.''

''........''

''ನನಗೀಗ ಎಪ್ಪತ್ತಾರು ವರ್ಷ. ಹನ್ನೆರಡು ಮೈಲಿ ನಡೆದು ಬಂದೀನಿ. ಇದಕ್ಕೂ ಹೆಚ್ಚು ನಡೀಲಾರೆ.''

''ನೋಡಪ್ಪ, ನೀನು ಇಲ್ಲಿ ನಿಲ್ಲೋದು ಒಳ್ಳೇದಲ್ಲ. ಹೇಗಾದರೂ ಮಾಡಿ ಸೇತುವೆ ದಾಟಿ ಹೋದರೆ ಅಲ್ಲಿಂದ ಒಂದು ಟ್ರಕ್ಕನ್ನ ಹಿಡಿದು ಮುಂದೆ ಹೋಗಬಹುದು.''

''ಟ್ರಕ್ಕುಗಳು ಯಾವ ಕಡೆ ಹೋಗ್ತವೆ ?''

ನಾನು ಅವುಗಳು ಹೋಗುವ ದಿಕ್ಕನ್ನು ಸೂಚಿಸಿದೆ.

''ಆ ದಿಕ್ಕಿನಲ್ಲಿ ನನಗೆ ತಿಳಿದೋರು ಯಾರೂ ಇಲ್ಲ. ಆದರೂ ನಿಮ್ಮಿಂದ ಬಹಳ ಉಪಕಾರವಾಯ್ತು. ನಮಸ್ಕಾರ.''

ನಾನು ಅವನ ಎದುರಿಗೇ ಅಲ್ಲಾಡದೇ ನಿಂತಿದ್ದದ್ದು ನೋಡಿ ಅವನಿಗೆ ತನ್ನ ಆತಂಕವನ್ನು ನನ್ನ ಬಳಿ ಹೇಳಬೇಕೆನಿಸಿರಬೇಕು.

''ಬೆಕ್ಕಿಗೆ ಏನೂ ಆಗುವುದಿಲ್ಲ. ಆದರೆ ಮಿಕ್ಕವು.... ನಿಮಗೇನನಿಸುತ್ತೆ ?''

''ಹೇಗೋ ಬಚಾವಾಗ್ತವೆ ಬಿಡು.'' ಸಮಾಧಾನ ಮಾಡಲು ಹಾಗಂದೆ.

''ಬಚಾವಾಗ್ತವೆ ಅಂತ ನಿಮಗೆ ನಿಜವಾಗ್ಲೂ ಅನಿಸುತ್ತಾ ?''

''ಯಾಕಿಲ್ಲ ?''

ಅವನ ನೋಟವನ್ನು ಎದುರಿಸಲಾಗದೆ ಗೋಣು ತಿರುಗಿಸಿದೆ. ಕೊನೆಯ ಬಂಡಿಗಳೂ ಕಾಣದಾಗಿ ಸೇತುವೆ ನಿರ್ಜನವಾಗಿತ್ತು.

''ಆದರೆ ಶತ್ರುಗಳು ಮೇಲೆ ಬೀಳ್ತಾರೆ, ಹಳ್ಳಿಯನ್ನ ಖಾಲಿ ಮಾಡಿ ಅಂತ ಡಂಗುರ ಹೊಡೆದರಲ್ಲಾ? ಶತ್ರುಗಳು ದಾಳಿ ಮಾಡಿದರೆ, ಪ್ರಾಣಿಗಳು ಹೇಗೆ ಬಚಾವಾಗ್ತವೆ ?''

''........''

''........''

''ಹಕ್ಕಿ ಗೂಡನ್ನು ಚಿಲಕ ಹಾಕದೆ ಬಿಟ್ಟಿದ್ದೀ ತಾನೇ ?''

''ಹುಂ.''

''ಹಾಗಾದರೆ ಅವುಗಳು ಹಾರಿಹೋಗ್ತವೆ ಬಿಡು.''

''ಹೌದು ಅವುಗಳು ಹಾರಿಹೋಗ್ತವೆ. ಆದ್ರೆ ಮಿಕ್ಕವು.....''

ನನಗೆ ಉತ್ತರಿಸಲಾಗಲಿಲ್ಲ. ಎರಡು ಕ್ಷಣ ಬಿಟ್ಟು ''ನಿನ್ನ ದಣಿವು ತೀರಿದ್ದರೆ ಏಳು. ಕೊಂಚ ನಡೆಯಲು ಯತ್ನಿಸು'' ಎನ್ನುತ್ತಾ ಅವನನ್ನು ಎಬ್ಬಿಸಿದೆ. ಅವನು ನನಗೆ ಪದೇ ಪದೇ ವಂದಿಸುತ್ತ ಎದ್ದ. ಬಹಳ ಕಷ್ಟಪಟ್ಟು ಎರಡು ಮೂರು ಹೆಜ್ಜೆ ನಡೆದು ಸುಸ್ತಾಗಿ ಮತ್ತೆ ಮಣ್ಣಿನ ರಾಶಿಯ ಮೇಲೆ ಕೂತುಬಿಟ್ಟ.

ಎರಡು ಕ್ಷಣ ಬಿಟ್ಟು ಅವನೇ ಮಾತನಾಡತೊಡಗಿದ. ಆದರೆ ಈಗ ಅವನು ಯಾರನ್ನೂ ಉದ್ದೇಶಿಸಿ ಮಾತನಾಡುತ್ತಿರಲಿಲ್ಲ. ಅವನ ಮಾತು ತನಗೆ ತಾನೇ ಹೇಳಿಕೊಂಡ ಸ್ವಗತದಂತಿತ್ತು.

''ನಾನು ಪ್ರಾಣಿಗಳನ್ನು ನೋಡಿಕೊಳ್ಳುತ್ತಿದ್ದೆ. ನಾನು ನನ್ನ ಪ್ರಾಣಿಗಳನ್ನ ನೋಡಿಕೊಳ್ಳುತ್ತಿದ್ದೆ ಅಷ್ಟೆ''

ನನ್ನಿಂದ ಏನೂ ಮಾಡಲು ಸಾಧ್ಯವಿರಲಿಲ್ಲ. ನಾಜಿ ಶತ್ರುಗಳು ಮುನ್ನುಗ್ಗಿ ಬರುತ್ತಿದ್ದರು. ಮುಗಿಲಲ್ಲಿ ಕಾರ್ಮೋಡ ಕವಿದಿತ್ತು. ಇನ್ನೂ ಶತ್ರುಗಳ ದಾಳಿ ಶುರುವಾಗದೆ ಇದ್ದದ್ದು ಮತ್ತು ಬೆಕ್ಕುಗಳು ತಮ್ಮನ್ನು ತಾವೇ ಕಾಪಾಡಿಕೊಳ್ಳುವ ಸಂಗತಿಯನ್ನು ಬಿಟ್ಟರೆ ನಾನು ಆ ಮುದುಕನಿಗೆ ಇನ್ಯಾವ ವಿಚಾರದಲ್ಲಿಯೂ ಶುಭ ಕೋರುವ ಹಾಗಿರಲಿಲ್ಲ.

ಆಕಾಶದಲ್ಲಿ ನಾಲ್ಕಾರು ಪಾರಿವಾಳಗಳು ಹಾರಿದ ಹಾಗೆ ಕಂಡವು.

*(ಆಧಾರ: ಅರ್ನೆಸ್ಟ್ ಹೆಮಿಂಗ್ವೆ)*

ಗಿರಿಧರ್ ಖಾಸನೀಸ
ಸಂ. ೪/೧, ಸರ್ಪೆಂಟೈನ್ ರಸ್ತೆ, ಕುಮಾರ ಪಾರ್ಕ್ ಪಶ್ಚಿಮ
ಬೆಂಗಳೂರು - ೫೬೦ ೦೨೦

# ಫ್ಯಾಸಿಸಂ ಸೋಲು

## ೬೦ ವರ್ಷಗಳ ನಂತರ ಮರುವೀಕ್ಷಣೆ

ಡಾ|| ಬಿ. ಆರ್. ಮಂಜುನಾಥ್

ಫ್ಯಾಸಿಸ್ಟ್ ಶಕ್ತಿಗಳು ಎರಡನೇ ಯುದ್ಧದಲ್ಲಿ ಮಿಲಿಟರಿ ಸೋಲನ್ನು ಅನುಭವಿಸಿವೆ. ಆದರೆ ಫ್ಯಾಸಿಸಂ ಒಂದು ರಾಜಕೀಯ ಶಕ್ತಿಯಾಗಿ ನಮ್ಮ ನಡುವೆ ಬದುಕಿಯೇ ಇದೆ. ಬಂಡವಾಳಶಾಹಿಗಳು, ಕ್ರಾಂತಿಕಾರಿ ಹಾಗೂ ಪ್ರಗತಿಶೀಲ ಶಕ್ತಿಗಳನ್ನು ಬಗ್ಗುಬಡಿಯಲು ಮತ್ತೆ ಮತ್ತೆ ಫ್ಯಾಸಿಸಂಗೆ ಮೊರೆಹೋಗುವುದು ಖಂಡಿತ. ಆಗೆಲ್ಲಾ ನಮಗೆ ಚರಿತ್ರೆಯ ಈ ಪಾಠಗಳನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ.

ಚರಿತ್ರೆಯನ್ನು ತಿರುಚುವ ಪ್ರತಿಭೆ ಮತ್ತು ಸಾಮರ್ಥ್ಯ ಅಪ್ಪಟ ಹಿಂದುತ್ವವಾದಿಗಳಲ್ಲಿ ಮಾತ್ರ ಕಂಡುಬರುವ ದೈವಿಕಶಕ್ತಿ ಎಂದು ಮುರಳಿ ಮನೋಹರ ಜೋಷಿಯವರೇನೂ ಬೀಗಬೇಕಾಗಿಲ್ಲ. ಅವರೊಡನೆ ಸ್ಪರ್ಧಿಗಿಳಿಯಬಲ್ಲ 'ಮೇಧಾವಿ'ಗಳು 'ಮ್ಲೇಚ್ಛ' ದೇಶಗಳಲ್ಲೂ ಸಿಗುತ್ತಾರೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಇತ್ತೀಚೆಗೆ ನಡೆದ ಘಟನೆಯೊಂದು ಇದಕ್ಕೆ ಉತ್ತಮ ದೃಷ್ಟಾಂತ.

ಮೊನ್ನೆ, ೨೦೦೪ರ ಜೂನ್ ೬ರಂದು ಅಮೆರಿಕಾ ಮತ್ತು ಯೂರೋಪಿನ ಕೆಲವು ರಾಷ್ಟ್ರಗಳಲ್ಲಿ ಅದರಲ್ಲೂ ವಿಶೇಷವಾಗಿ ಫ್ರಾನ್ಸ್‌ನಲ್ಲಿ ಒಂದು ಉತ್ಸವವನ್ನು ಸಂಭ್ರಮದಿಂದ ಅಲ್ಲಿನ ಸರ್ಕಾರಗಳು ಆಚರಿಸಿದವು. ಫ್ರಾನ್ಸ್‌ನ ನಾರ್ಮಂಡಿಯಲ್ಲಿ ಅಮೆರಿಕಾ ಮತ್ತು ಇಂಗ್ಲೆಂಡಿನ ಸೈನ್ಯಗಳು ಸನ್ನದ್ಧರಾಗಿ ಯುದ್ಧ ನಡೆಸಲು ಬಂದಿಳಿದು ಅಂದಿಗೆ ಅರವತ್ತು ವರ್ಷಗಳಾದವು, ಅಲ್ಲಿಂದ ಎರಡನೆಯ ಮಹಾಯುದ್ಧದಲ್ಲಿ ಜರ್ಮನಿಯನ್ನು ನಿರ್ಣಾಯಕವಾಗಿ ಸೋಲಿಸುವ ಸಮರದ ಹೊಸ ಹಂತ – ಸೆಕೆಂಡ್ ಫ್ರಂಟ್ – ಆರಂಭವಾಯಿತು ಎಂಬುದು ಉತ್ಸವದ ಸಂಘಟನಾಕಾರರ ಅಂಬೋಣ. ಕಡಲ್ಗಳ್ಳ ಸಾಮ್ರಾಜ್ಯಶಾಹಿಗಳ ತುತ್ತೂರಿಗಳಾದ ಸುದ್ದಿಮಾಧ್ಯಮಗಳು ಅದನ್ನೇ ಸಾವಿರ ಸಲ ಪ್ರಚಾರ ಮಾಡಿದವು. ಆದರೆ ಇದು ಸತ್ಯವೇ ? ಇದೇ ಚರಿತ್ರೆಯೇ ? ನಿಜವಾಗಿಯೂ ಯುದ್ಧ ಆರಂಭವಾದದ್ದು ಯಾರಿಂದ ಹಾಗೂ ಏತಕ್ಕಾಗಿ ? ಯುದ್ಧವನ್ನು ನಿಜಕ್ಕೂ ಗೆದ್ದದ್ದು ಯಾರು ಮತ್ತು ಹೇಗೆ ? – ಎಂಬ ಪ್ರಶ್ನೆಗಳಿಗೆ ನಿಜವಾದ ಉತ್ತರವನ್ನು ಚರಿತ್ರೆ ಮಾತ್ರ ನೀಡಬಲ್ಲದು. ಅಂತಹ ಚರಿತ್ರೆ ಸುಳ್ಳುಬಡುಕರ ಭಾಷಣಗಳಿಂದ, ಲೇಖನಿಗಳಿಂದ ಸೃಷ್ಟಿಸಲ್ಪಟ್ಟಿದ್ದಲ್ಲ; ಅದು ಕೋಟ್ಯಂತರ ಧೀರರ ತ್ಯಾಗ-ಬಲಿದಾನಗಳಿಂದ ರಚಿತವಾದದ್ದು. ಅದನ್ನು ಉಪೇಕ್ಷಿಸಲೆತ್ನಿಸಿದವರನ್ನು ಅದು ಕ್ಷಮಿಸುವುದಿಲ್ಲ.

ನಿಜಕ್ಕೂ ಹೇಳಬೇಕೆಂದರೆ ನಾರ್ಮಂಡಿಯಲ್ಲಿ ೧೯೪೪ರ ಜೂನ್ ೬ರಂದು ತೆರೆಯಲ್ಪಟ್ಟ 'ಸೆಕೆಂಡ್ ಫ್ರಂಟ್' ಅಥವಾ ಜರ್ಮನಿಯ ಪಶ್ಚಿಮ ರಣಾಂಗಣ ಕಡೆಯ ಪಕ್ಷ ಎರಡು ವರ್ಷಗಳಷ್ಟು ತಡವಾಗಿ ಆರಂಭವಾಯಿತು. ಪೂರ್ವ ರಣಾಂಗಣದಲ್ಲಿ ಏಕೈಕವಾಗಿ ಜರ್ಮನಿಯ ದೈತ್ಯ ಸೇನೆಯನ್ನು ೧೯೪೧ರಿಂದಲೂ ಸೋವಿಯತ್ ಒಕ್ಕೂಟ ಎದುರಿಸುತ್ತಾ ಬಂದಿತ್ತು. ಸೋವಿಯತ್ ಒಕ್ಕೂಟದ ನಾಯಕರು ಹಾಗೂ ಕೆಂಪುಸೈನ್ಯದ ಮಹಾದಂಡನಾಯಕರೂ ಆಗಿದ್ದ ಜೋಸೆಫ್. ಸ್ಟಾಲಿನ್, ಇಂಗ್ಲೆಂಡಿನ ಪ್ರಧಾನಿಗಳಾಗಿದ್ದ ವಿನ್‌ಸ್ಟನ್ ಚರ್ಚಿಲ್‌ರಿಗೂ ಹಾಗೂ ಅಮೆರಿಕಾದ ಅಧ್ಯಕ್ಷರಾಗಿದ್ದ ಫ್ರಾಂಕ್ಲಿನ್ ರೂಸ್‌ವೆಲ್ಟ್‌ರಿಗೂ ಪದೇ ಪದೇ ಕಳುಹಿಸಿದ ತಾರುಗಳಲ್ಲಿ ಹಾಗೂ ಪತ್ರಗಳಲ್ಲಿ ಕಂಡುಬರುವ ಒಂದು ಸಾಮಾನ್ಯ ಅಂಶವೆಂದರೆ 'ಬೇಗನೆ ಸೆಕೆಂಡ್ ಫ್ರಂಟನ್ನು ಆರಂಭಿಸಬೇಕು' ಎಂಬ ಮನವಿ. ಆದರೆ



ಎರಡು ವರ್ಷಗಳಷ್ಟು ದೀರ್ಘ ಕಾಲ ಈ ಪಶ್ಚಿಮದ ರಣಾಂಗಣ ಆರಂಭವಾಗಲಿಲ್ಲ! ಆ ಅವಧಿಯಲ್ಲಿ ಸೋವಿಯತ್ ಒಕ್ಕೂಟ ಅನುಭವಿಸಿದ ಯಾತನೆ, ದುರಂತಗಳಿಗೆ ಇತಿಹಾಸದಲ್ಲಿ ಸಮಾನಾಂತರ ಉದಾಹರಣೆಯೇ ಇಲ್ಲ. ಹೀಗಿರುವಾಗ ಈ ಕ್ರೂರ 'ವಿಳಂಬ'ವನ್ನು ಜಗತ್ತು ಮಹಾನ್ ವಿದ್ಯಮಾನ ಎಂದು ಆಚರಿಸುವುದು ಹೇಗೆ ?

ಒಟ್ಟಿನಲ್ಲಿ ಈ ಪ್ರಶ್ನೆಗಳ ಪಟ್ಟಿಯನ್ನು ಸಮರ್ಪಕವಾಗಿ ಉತ್ತರಿಸಿಕೊಳ್ಳಬೇಕೆಂದರೆ ನಾವು ಇತಿಹಾಸವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಬೇಕು, ವಾಸ್ತವಾಂಶಗಳನ್ನು ಹೆಕ್ಕಿ ಹೆಕ್ಕಿ ತೆಗೆಯಬೇಕು. ಏಕೆಂದರೆ ಇಂದು ಆ ಭೀಕರ ಯುದ್ಧವನ್ನು ನೋಡಿದ, ಆ ಕಾಲದಲ್ಲಿ ಆ ದುರಂತವನ್ನು ಸರಿಯಾಗಿ ಗ್ರಹಿಸಬಲ್ಲಷ್ಟು ಪ್ರೌಢರಾಗಿದ್ದವರು ಅಷ್ಟೇನೂ ಹೆಚ್ಚಿನ ಸಂಖ್ಯೆಯಲ್ಲಿ ಉಳಿದಿಲ್ಲ. ಹೊಸ ತಲೆಮಾರು ಆ ಪ್ರಗಾಢ ಅನುಭವದಿಂದ ವಂಚಿತವಾಗಿದೆ. ಫ್ಯಾಸಿಸಂಅನ್ನೇ ವೈಭವೀಕರಿಸುವ ಪಾತಕಿಗಳು ನಮ್ಮ ಎಳೆಯರ ತಲೆ ತೊಳೆಯುವ ಕೆಲಸಕ್ಕೆ ಇಳಿದಿದ್ದಾರೆ. ಸೋವಿಯತ್ ಒಕ್ಕೂಟದ ಪತನವಾದ ನಂತರವಂತೂ ಪ್ರತಿಗಾಮಿಗಳ ಅಬ್ಬರ ಗಟ್ಟಿಯಾಗಿದೆ. ಈ ಹಿನ್ನೆಲೆಯಲ್ಲಿ ಚರಿತ್ರೆಯ ಹಲವು ಸಂಗತಿಗಳನ್ನು, ಪಾಠಗಳನ್ನು ನೆನಪಿಸಿಕೊಳ್ಳಲೇಬೇಕು.

ಅದರಲ್ಲಿ ಮೊದಲನೆಯ ಪ್ರಶ್ನೆ, ೫ ಕೋಟಿ ಜನರನ್ನು ಆಹುತಿ ತೆಗೆದುಕೊಂಡು, ಎಲ್ಲ ಖಂಡಗಳ ಇನ್ನೂ ಹಲವು ಕೋಟಿ ಜನರನ್ನು ವಿನಾಶಕ್ಕೆ ತಳ್ಳಿದ ಎರಡನೆಯ ಮಹಾಯುದ್ಧದ ಹಿಂದಿನ ನೈಜ ಕಾರಣವಾದರೂ ಏನು ?

**ಆಧುನಿಕ ಯುದ್ಧಗಳ ಹಿಂದಿನ ಕಾರಣ ಮಾರುಕಟ್ಟೆ ಪೈಪೋಟಿ**

ಸುಂದರಿ ಪದ್ಮಿನಿಗಾಗಿ ಅಲ್ಲಾವುದ್ದೀನನು ಯುದ್ಧ ಮಾಡಿದನೆಂಬುದಾಗಲೀ, ವತ್ಸರಾಜ ಉದಯನನು ವಾಸವದತ್ತೆಯೊಂದಿಗೆ ಓಡಿಹೋದುದಕ್ಕಾಗಿ ರಾಜಾ ಚಂಡ ಮಹಾಸೇನನೊಂದಿಗೆ ಸೆಣಸಾಡಬೇಕಾಗಿ ಬಂತೆಂಬುದಾಗಲೀ ಹಳೆಯ ಕಾಲದ ಕಥೆಗಳು. ರಾಜರು ತಮ್ಮ ಅಹಂಕಾರದ ತೃಪ್ತಿಗಾಗಿ ಇನ್ನೊಬ್ಬರ ಮೇಲೆ ಜಗಳವಾಡುತ್ತಿದ್ದರೂ ಊಳಿಗಮಾನ್ಯ ಪದ್ಧತಿಯಲ್ಲಿ ಅದು ಬೇರೆ ಅಧಿಕಾರದ ಕಾರಣಗಳಿಗೆ ಆಗಿರಲಿಕ್ಕೆ ಸಾಕು.

ಆದರೆ ಆಧುನಿಕ ಯುದ್ಧಗಳು ಇಂತಹ ಕಾರಣಕ್ಕಾಗಿ ನಡೆದಾವೆಯೇ. ಖಂಡಿತಾ ಇಲ್ಲ. ವಿವಿಧ ಬಂಡವಾಳಶಾಹಿ ದೇಶಗಳು, ಸರ್ಕಾರಗಳು ತಮ್ಮ ತಮ್ಮ ಬಂಡವಾಳಗಾರರಿಗೆ ಹೊಸ ಹೊಸ ಮಾರುಕಟ್ಟೆಗಳನ್ನು ಗೆದ್ದುಕೊಡಲು ಯುದ್ಧಕ್ಕೆ ತೊಡಗುತ್ತವೆ. ಮೊದಲನೆ ಹಾಗೂ ಎರಡನೇ ಮಹಾಯುದ್ಧಗಳು ಕೂಡ ನಡೆದದ್ದು ಇದೇ ಕಾರಣಕ್ಕಾಗಿಯೇ. ತಮ್ಮ ದೇಶದೊಳಗಿನ ಮಾರುಕಟ್ಟೆಯನ್ನು ಸಂಪೂರ್ಣವಾಗಿ ಶೋಷಿಸಿಕೊಂಡು ಹೆಚ್ಚುವರಿ ಬಂಡವಾಳವನ್ನು ಹೂಡಲು ಹೊಸ ಕಾರ್ಯಕ್ಷೇತ್ರಗಳನ್ನು ಹುಡುಕುತ್ತಾ ಹೊರಟ ಬಂಡವಾಳಶಾಹಿಯು ಸಾಮ್ರಾಜ್ಯಶಾಹಿ ಆಯಾಮವನ್ನು ಪಡೆಯುತ್ತದೆ. ಮಹಾಯುದ್ಧಕ್ಕೆ ಮುನ್ನ ಇಡಿಯ ಜಾಗತಿಕ ಮಾರುಕಟ್ಟೆಯನ್ನು ಇಂಗ್ಲೆಂಡ್ ಮತ್ತು ಫ್ರಾನ್ಸ್ ಹಂಚಿಕೊಂಡಿದ್ದವು. ಈ ಮಾರುಕಟ್ಟೆಯ ಮರುವಿಭಜನೆಗೆ ಮತ್ತೊಂದು ಪ್ರಬಲ ಬಂಡವಾಳಶಾಹಿ ರಾಷ್ಟ್ರವಾಗಿದ್ದ ಜರ್ಮನಿ ಆಗ್ರಹಿಸಲಾರಂಭಿಸಿತು. ಇತ್ತ ಅಮೆರಿಕಾ, ಇಟಲಿ, ಜಪಾನ್ ಮುಂತಾದ ದೇಶಗಳಿಗೂ ಮಾರುಕಟ್ಟೆಯ ಮರುವಿಭಜನೆ ಬೇಕಾಗಿತ್ತು. ಈ ಮಾರುಕಟ್ಟೆ ಜಗಳವೇ ಯುದ್ಧಗಳಿಗೆ ಕಾರಣ ಎಂಬುದನ್ನು ಲೆನಿನ್ ಬಹಳ ಹಿಂದೆಯೇ ಕರಾರುವಾಕ್ಕಾಗಿ ಪ್ರತಿಪಾದಿಸಿದ್ದರು.

**ಫ್ಯಾಸಿಸಂನ ಉಗಮ**

ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿಯೇ ಬಂಡವಾಳಶಾಹಿಗಳ ಬಿಕ್ಕಟ್ಟು ತೀವ್ರವಾಗುತ್ತಾಹೋಯಿತು. ಅವರು ನಡೆಸಿದ ನಿರಂತರ ಶೋಷಣೆಯಿಂದಾಗಿ ದರಿದ್ರರಾದ ಜನತೆ ತಮ್ಮ ಕೊಳ್ಳುವ ಶಕ್ತಿಯನ್ನೇ ಕಳೆದುಕೊಳ್ಳುತ್ತಾ ಹೋದರು. ಕೊಳ್ಳುವವರಿಲ್ಲದೆ ಉತ್ಪಾದಿತ ವಸ್ತುಗಳು ಕೊಳೆಯುತ್ತಾ ರಾಶಿರಾಶಿಯಾಗಿ ಬಿದ್ದುಕೊಂಡವು. ಹೀಗಾಗಿ ಹೊಸ ಉತ್ಪಾದನೆಗೆ ಇನ್ನು ಪ್ರೇರಣೆ ಇಲ್ಲ, ಹೊಸ ಕೈಗಾರಿಕೆಗಳು ಆರಂಭವಾಗುವುದಿರಲಿ, ನಡೆಯುತ್ತಿದ್ದವು ಕೂಡಾ ಮುಚ್ಚಿಹೋಗುವ ಪರಿಸ್ಥಿತಿ. ಹೀಗೆ ತೀವ್ರವಾದ ಆರ್ಥಿಕ ಹಿಂಜರಿತದಿಂದಾಗಿ ವಿಶ್ವಮಾರುಕಟ್ಟೆಯ ಮರುವಿಭಜನೆಗಾಗಿ ಮುಗಿಯದ ಜಗಳಗಳು ಆರಂಭವಾದವು. ಇದು ಮೊದಲನೆಯ ಮಹಾಯುದ್ಧಕ್ಕೆ ಎಡೆಮಾಡಿಕೊಟ್ಟಿತು. ಇದರಲ್ಲಿ ಸೋತು ಸುಣ್ಣವಾದ ಜರ್ಮನಿಯ ಬಂಡವಾಳಗಾರರು ಹತಾಶರಾದರು. ಕಾರ್ಮಿಕ ವರ್ಗದ ಕ್ರಾಂತಿಗೆ ಜರ್ಮನಿ ಪಕ್ವವಾಗಿತ್ತಾದರೂ ಅಲ್ಲಿನ ಕಮ್ಯುನಿಸ್ಟ್ ಪಕ್ಷ ಕ್ರಾಂತಿಗೆ ಅಗತ್ಯವಾದ ನಿರ್ಣಾಯಕ ಹೆಜ್ಜೆಗಳನ್ನು ತೆಗೆದುಕೊಳ್ಳುವಲ್ಲಿ ಸಂಪೂರ್ಣವಾಗಿ ವಿಫಲವಾಯಿತು.

ಇಂಥ ಸಂದರ್ಭದಲ್ಲಿ ಹಿಟ್ಲರ್ ನೇತೃತ್ವದ ನ್ಯಾಷನಲ್ ಸೋಷಲಿಸ್ಟ್ ಪಾರ್ಟಿಯನ್ನು ಬಂಡವಾಳಗಾರರು ಶಕ್ತಿಮೀರಿ ಬೆಂಬಲಿಸಿದರು. ಯುದ್ಧದಲ್ಲಿ ಸೋತು ಹತಾಶರಾಗಿದ್ದ ಜರ್ಮನರಲ್ಲಿ ಪೊಳ್ಳು ಆತ್ಮಾಭಿಮಾನವನ್ನು ಹಿಟ್ಲರ್ ಕೆರಳಿಸಿದ. ಹೊಸ ಭ್ರಮೆಗಳನ್ನು ಸೃಷ್ಟಿಸಿದ. ಒಬ್ಬ ಲೇಖಕ ಹೇಳುವಂತೆ "ವಿಧವೆಯರಿಗೆ ಗಂಡಂದಿರನ್ನು ಕೊಡಿಸುವ ಆಶ್ವಾಸನೆಯೂ ಸೇರಿದಂತೆ ಆತ ಎಲ್ಲರಿಗೂ ಎಲ್ಲವನ್ನೂ ನೀಡಬಲ್ಲವನಂತೆ ನಟಿಸಿದ." ಜರ್ಮನರನ್ನು ಕೆರಳಿಸಲು ಉಗ್ರ ಜ್ಯೂ ವಿರೋಧಿ ಭಾವನೆಗಳನ್ನು ಬಡಿದೆಬ್ಬಿಸಿದ. ಒಂದು ವ್ಯಾಧಿಗ್ರಸ್ತ, ಸಮೂಹ ಸನ್ನಿಯನ್ನು ಸೃಷ್ಟಿಸುವಂಥ ಉನ್ಮಾದದ ಅಲೆ ಇಡಿಯ ಜರ್ಮನಿಯನ್ನೇ ಆವರಿಸಿತು. ಮಹಾನ್ ಚಿಂತಕರು, ಲೇಖಕರು, ಕ್ರಾಂತಿಕಾರಿಗಳಿಗೆ ಜನ್ಮಕೊಟ್ಟಿದ್ದ ಜರ್ಮನಿಯ ಉನ್ನತ ಪರಂಪರೆಗೆ ಸಂಪೂರ್ಣವಾಗಿ ಪರಕೀಯವಾಗಿದ್ದ ಉಗ್ರ ಆರ್ಯನ್ ಅಂಧಾಭಿಮಾನವನ್ನು ಆ ದೇಶದಲ್ಲಿ ಸೃಷ್ಟಿಸಲಾಗಿದ್ದು ಚರಿತ್ರೆಯ ಮಹಾನ್ ವಿರೋಧಾಭಾಸಗಳಲ್ಲಿ ಒಂದು.

ಆದರೆ ನಿಜಕ್ಕೂ ಇದರಲ್ಲಿ ಆಶ್ಚರ್ಯ ಪಡಬೇಕಾದದ್ದೇನೂ ಇಲ್ಲ. ಒಂದು ದೇಶದ ಜನತೆ ತನ್ನಲ್ಲಿನ ಪ್ರಗತಿಶೀಲ ಶಕ್ತಿಗಳನ್ನು ಗುರುತಿಸಿ ಸಕಾಲದಲ್ಲಿ ಬಲಪಡಿಸದಿದ್ದರೆ, ಪ್ರತಿಗಾಮಿಗಳು ಬಲಿಷ್ಠರಾಗಿಯೇ ಆಗುತ್ತಾರೆ. ಆನಂತರ ಬಹುದೊಡ್ಡ ಬೆಲೆ ತೆರಬೇಕಾಗುತ್ತದೆ.

ಬಂಡವಾಳಗಾರರ ಸಂಪೂರ್ಣ ಬೆಂಬಲದೊಂದಿಗೆ ದೈತ್ಯರಾಗಿ ಬೆಳೆದ ಹಿಟ್ಲರ್ ಮತ್ತು ಆತನ ನಾಜಿ ಪಕ್ಷ ರಾಜ್ಯದ ಮೇಲೆ ತಮ್ಮ ಹಿಡಿತವನ್ನು ಬಲಪಡಿಸುತ್ತಾ ಹೋದರು. ಫ್ಯಾಸಿಸಂ ಘೋರ ಶಕ್ತಿಯಾಗಿ ರೂಪುಗೊಂಡಿತು. ಜರ್ಮನಿಯಲ್ಲಿ ಆಗಮಿಸಲಿದ್ದ ಕಾರ್ಮಿಕವರ್ಗ ಕ್ರಾಂತಿಯನ್ನು ಹಿಮ್ಮೆಟ್ಟಿಸಲು ರೂಪುಗೊಂಡ ಫ್ಯಾಸಿಸಂ, ಆದ್ದರಿಂದಲೇ ಕಮ್ಯುನಿಸಂನ ಕಟ್ಟಾ ವಿರೋಧಿ. ಅದು ಸಮೂಹ ಸನ್ನಿಯ ಮೂಲಕ ಜನತೆಯನ್ನೇ ತೊಡಗಿಸಿಕೊಂಡ ಪ್ರತಿಕ್ರಾಂತಿಕಾರಿ ದಂಗೆ. ಫ್ಯಾಸಿಸಂ ಎಲ್ಲ ಪ್ರಗತಿಶೀಲರನ್ನು, ಮುಖ್ಯವಾಗಿ ಕಮ್ಯುನಿಸ್ಟರನ್ನು, ಬೇಟೆಯಾಡಿತು.

ಹೀಗೆ ದೇಶದೊಳಗೆ ಅಧಿಕಾರ ಬಲಪಡಿಸಿಕೊಂಡ ನಾಜಿಗಳು ನಂತರ ತಮ್ಮ ಅಗಾಧ ಮಿಲಿಟರಿ ಶಕ್ತಿಯನ್ನು ಉಪಯೋಗಿಸಿಕೊಂಡು ಹೊರದೇಶಗಳ ಮೇಲೂ ಆಕ್ರಮಣವನ್ನು ಆರಂಭಿಸಿದರು. ಕಾಲಿಟ್ಟ ಕಡೆಯಲ್ಲೆಲ್ಲಾ ಅವರು ತಮ್ಮ ಜನಾಂಗೀಯ ದ್ವೇಷದ, ಪ್ರಗತಿವಿರೋಧಿ ವಿಷದ ದಾವಾನಲವನ್ನೇ ಹರಿಸಿದರು. ಮಿಲಿಯಾಂತರ ಜನಗಳನ್ನು ಯಾತನಾ ಶಿಬಿರಗಳಿಗೆ ತಳ್ಳಿದರು. ಇದು ಎಲ್ಲರಿಗೂ ಗೊತ್ತಿರುವ ಇತಿಹಾಸ.

**ಅಮೆರಿಕಾ, ಇಂಗ್ಲೆಂಡ್, ಫ್ರಾನ್ಸ್‌ಗಳ ಧೂರ್ತ ಪಾತ್ರ**

ಆದರೆ ಯುದ್ಧ ಪಿಪಾಸು ಜರ್ಮನಿ ಹೀಗೆ ಸಮರಕ್ಕೆ ಸಜ್ಜಾಗುತ್ತಿದ್ದಾಗ ಅಮೆರಿಕಾ ಇಂಗ್ಲೆಂಡ್ ಹಾಗೂ ಫ್ರಾನ್ಸ್‌ಗಳು ಏನು ಮಾಡುತ್ತಿದ್ದವು ? ಅಮೆರಿಕಾ ಅಂತು ಮೊದಲ ಯುದ್ಧದ ನಂತರ ಜರ್ಮನಿಯ ಆರ್ಥಿಕತೆ ಅದರಲ್ಲೂ ಮಿಲಿಟರಿ ಉತ್ಪಾದನೆ ಮತ್ತೆ ಚೇತರಿಸಿಕೊಳ್ಳಲು ಎಲ್ಲಾ ಅಗತ್ಯ ಬೆಂಬಲವನ್ನೂ ನೀಡಿತ್ತು. ಇನ್ನೊಂದೆಡೆ ೧೯೩೬ರಲ್ಲಿ ಜರ್ಮನಿಯ ಹಿಟ್ಲರ್ ಮತ್ತು ಇಟಲಿಯ ಮುಸೊಲಿನಿ ಸ್ಪೇನ್‌ನಲ್ಲಿ ಅಲ್ಲಿನ ಭಯಂಕರ ಪ್ರತಿಗಾಮಿ ಜನರಲ್ ಫ್ರಾಂಕೋನೊಂದಿಗೆ ಸೇರಿ ಎಲ್ಲಾ ಜನತಾಂತ್ರಿಕ ಹಾಗೂ ಪ್ರಗತಿಶೀಲ ಶಕ್ತಿಗಳನ್ನು ಸದೆಬಡಿದಾಗ ಇಂಗ್ಲೆಂಡ್ ಮತ್ತು ಫ್ರಾನ್ಸ್ ನಾವು 'ಹಸ್ತಕ್ಷೇಪ ಮಾಡಲಾರೆವು' ಎಂಬ ನೆಪವೊಡ್ಡಿ ಮೂರೂ ಜನ ಫ್ಯಾಸಿಸ್ಟರನ್ನು ತುಷ್ಟೀಕರಿಸಿದವು. ೧೯೩೮ರಲ್ಲಿ ತಾವೇ ಮಾಡಿಕೊಂಡ ಎಲ್ಲಾ ಒಪ್ಪಂದಗಳನ್ನೂ ಮುರಿದು ಇದೇ ಇಂಗ್ಲೆಂಡ್ ಮತ್ತು ಫ್ರಾನ್ಸ್ ದೇಶಗಳು, ಜೆಕೊಸ್ಲೊವಾಕಿಯಾದ ಮೇಲೆ ಹಿಟ್ಲರ್ ಆಕ್ರಮಣ ನಡೆಸಿದಾಗ ಆ ದೇಶವನ್ನು ಬಲಿಗೊಟ್ಟು ತೆಪ್ಪಗೆ ಕುಳಿತಿದ್ದವು.

ಬರಲಿರುವ ಯುದ್ಧ ಮುಖ್ಯವಾಗಿ ಸಾಮ್ರಾಜ್ಯಶಾಹಿಗಳ ಮಧ್ಯದ ಮಾರುಕಟ್ಟೆ ಹಂಚಿಕೆ ಕುರಿತಾದ ಯುದ್ಧ, ಇದರಲ್ಲಿ ಕಾರ್ಮಿಕವರ್ಗದ ಹಿತಾಸಕ್ತಿ ಏನೂ ಇಲ್ಲ ಎಂಬುದನ್ನು ಅರಿತಿದ್ದರೂ ಸೋವಿಯತ್ ಒಕ್ಕೂಟವು ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗಳೊಂದಿಗೆ ಸ್ನೇಹದ ಕರಾರನ್ನು ಮಾಡಿಕೊಳ್ಳಲು ಮುಂದಾಯಿತು. ಕಾರಣ ಇಷ್ಟೇ – ಫ್ಯಾಸಿಸಂ ಬಲಿಷ್ಠವಾದರೆ ಅದು ವಿಶ್ವದ ಎಲ್ಲಾ ಪ್ರಗತಿಶೀಲ ಶಕ್ತಿಗಳಿಗೂ ವಿಶಿಷ್ಟವಾಗಿ ಸಮಾಜವಾದಕ್ಕೂ ಘೋರ ಅಪಾಯವಾಗುತ್ತದೆ ಎಂದು. ಆದರೆ ಇಂಗ್ಲೆಂಡ್, ಫ್ರಾನ್ಸ್ ಹಾಗೂ ಅಮೆರಿಕಾಗಳ ಹುನ್ನಾರ ಬೇರೆಯೇ ಇತ್ತು. ಅದೇನೆಂದರೆ ಅವರ ಪಾಲಿಗೆ ಪರಮಶತ್ರುವಾದ ಸಮಾಜವಾದಿ ಸೋವಿಯತ್ ಒಕ್ಕೂಟ ಇಂದಲ್ಲ ನಾಳೆ ನಿರ್ನಾಮವಾಗಬೇಕು. ಅದನ್ನು ಹಿಟ್ಲರ್ ಮಾಡಲು ಸಾಧ್ಯವಾದರೆ ಅವರ ಅಭ್ಯಂತರವೇನೂ ಇಲ್ಲ. ಆದ್ದರಿಂದಲೇ ಸ್ನೇಹದ ಕರಾರು ಸಾಧ್ಯವಾಗಲೇ ಇಲ್ಲ. ಈ ಹಿನ್ನೆಲೆಯಲ್ಲಿ ಕಡೆಗೆ ಸೋವಿಯತ್ ಒಕ್ಕೂಟ ಜರ್ಮನಿಯೊಂದಿಗೆ ಅನಾಕ್ರಮಣ ಒಪ್ಪಂದಕ್ಕೆ ಬರಬೇಕಾಯಿತು.

೧೯೪೦ರ ಹೊತ್ತಿಗೆ ಬಲಿಷ್ಠವಾದ ಹಿಟ್ಲರ್ ಒಂದರ ನಂತರ ಇನ್ನೊಂದರಂತೆ ಎಲ್ಲಾ ರಾಷ್ಟ್ರಗಳನ್ನೂ ಕಬಳಿಸಲಾರಂಭಿಸಿದ. ೧೯೩೯ರಲ್ಲಿ ಪೋಲೆಂಡ್‌ನನ್ನು ನುಂಗಿ ನೀರು ಕುಡಿದ. ಡೆನ್ಮಾರ್ಕ್ ಮೇಲಿನ ಯುದ್ಧ ಒಂದು ದಿನದಲ್ಲಿ ಮುಗಿಯಿತು ! ಬೆಲ್ಜಿಯಂಅನ್ನು ಕಬಳಿಸಲು ೧೯ ದಿನಗಳು ಸಾಕಾಯಿತು. ವಿಶ್ವದ ಎರಡನೇ ದೊಡ್ಡ ಸಾಮ್ರಾಜ್ಯಶಾಹಿಯಾಗಿದ್ದು ಜಗತ್ತಿನಾದ್ಯಂತ ವಸಾಹತುಗಳನ್ನು ಹೊಂದಿದ್ದ ಫ್ರಾನ್ಸ್ ೪೪ ದಿನಗಳಲ್ಲಿ ಸಂಪೂರ್ಣ ಕುಸಿದುಹೋಯಿತು. ೧೯೪೧ರ ಆದಿಭಾಗದ ಒಳಗೆ ಹಾಲೆಂಡ್, ನಾರ್ವೆ, ಯುಗೊಸ್ಲಾವಿಯಾ, ಗ್ರೀಸ್ ಎಲ್ಲವೂ ಜರ್ಮನಿಯ ವಶವಾಗಿತ್ತು. ಡನ್‌ಕಿರ್ಕ್‌ನಲ್ಲಿ ಮಾರಣಾಂತಿಕ ಪೆಟ್ಟುತಿಂದ ಇಂಗ್ಲೆಂಡ್ ತನ್ನ ಗಾಯಗಳನ್ನು ನೆಕ್ಕಿಕೊಳ್ಳುತ್ತಾ ಮುದಿ ಹುಲಿಯಂತೆ ನಿತ್ರಾಣವಾಗಿ ಮಲಗಿತ್ತು. ಇಡೀ ಯುರೋಪು ಹಿಟ್ಲರ್‌ನ ಹಿಡಿತದಲ್ಲಿ ನಲುಗಿಹೋಗಿತ್ತು. ಮಿತ್ರಶಕ್ತಿಗಳ ದ್ರೋಹ ಅವರಿಗೇ ಮುಳುವಾದದ್ದು ಚರಿತ್ರೆಯ ನಿಷ್ಠುರ ನ್ಯಾಯ ತೀರ್ಮಾನಕ್ಕೆ ಸಾಕ್ಷಿ.

**ರಷ್ಯಾದ ಮೇಲೆ ರಣಹದ್ದುಗಳು**

ತಾವೇ ಮಾಡಿಕೊಂಡಿದ್ದ ಆಕ್ರಮಣ ಮಾಡುವುದಿಲ್ಲವೆಂಬ ಒಪ್ಪಂದವನ್ನು ಮುರಿದು ೧೯೪೧ರ ಜೂನ್ ೨೨ರಂದು ನಾಜಿಗಳು ರಷ್ಯಾದ ಮೇಲೆ ಬಿದ್ದರು. ಪಶ್ಚಿಮದಲ್ಲಿ ಎಲ್ಲರನ್ನೂ ಮುಗಿಸಿದ್ದೇನೆ; ಇನ್ನು ರಷ್ಯಾವನ್ನು ಮುಗಿಸಿದರೆ ಇಡಿಯ ಯುರೋಪು ನನ್ನದು, ನಂತರ ಸೋವಿಯತ್ ಒಕ್ಕೂಟದ ಇನ್ನುಳಿದ ತೈಲ ಸಂಪದ್ಭರಿತ ನಾಡುಗಳನ್ನು ಆಕ್ರಮಿಸಿಕೊಳ್ಳಬಹುದು; ನಂತರ ಭಾರತದತ್ತ ಧಾವಿಸಬಹುದು ಎಂಬುದು ಹಿಟ್ಲರನ ಇರಾದೆಯಾಗಿತ್ತು. ಅದಕ್ಕಾಗಿ ಅವನು ಮನುಕುಲ ಇದುವರೆಗೂ ಕಂಡು ಕೇಳರಿಯದಂಥ ಸೈನ್ಯದೊಂದಿಗೆ ಸೋವಿಯತ್ ಒಕ್ಕೂಟದ ಮೇಲೆ ಎರಗಿದ.

ಹಿಟ್ಲರನ ದಾಳಿಯ ಮಾದರಿಗೆ ಬ್ಲಿಟ್ಸ್‌ಕ್ರೀಗ್ ಎನ್ನುತ್ತಿದ್ದರು. ಕ್ಷಣಾರ್ಧದಲ್ಲಿ ದೊಡ್ಡ ಬಯಲುಸೀಮೆಯೊಂದನ್ನು ಹಿಮಗಾಳಿ ಆವರಿಸುವ ಹಾಗೆ ಅದು. ವಿಮಾನಗಳು ಹಾಗೂ ಟ್ಯಾಂಕುಗಳ ಮೂಲಕ ಮೊದಲು ವ್ಯಾಪಕ ದಾಳಿ ಮಾಡಿ ನಂತರ ಪದಾತಿಗಳು ಮುಂದೆ ಬಂದು ಪ್ರದೇಶಗಳನ್ನು ಮಿಂಚಿನ ವೇಗದಲ್ಲಿ ಗೆದ್ದುಕೊಳ್ಳುವ ರೀತಿ ಅದು. ಅದರ ಎದುರು ಹಿಂದುಳಿದ ರಷ್ಯಾ ಎರಡು ತಿಂಗಳೂ ತಡೆಯದು ಎಂದು ಲಂಡನ್ ಹಾಗೂ ವಾಷಿಂಗ್ಟನ್ನಿನ ಸಮರ ವಿಶಾರದರು ಭವಿಷ್ಯ ನುಡಿದಿದ್ದರು. ಹಾಗೆಯೇ ಯುದ್ಧದ ಮೊದಲ

ದಿನಗಳಲ್ಲಿ ಅಪಾರವಾದ ಸೋವಿಯತ್ ಪ್ರದೇಶ ಹಿಟ್ಲರನ ಕೈಸೇರಿತು. ವ್ಯಾಪಕ ಹಾನಿಯೂ ಉಂಟಾಯಿತು.

ಆದರೆ ನಂತರ ನಡೆದದ್ದು ಮಾತ್ರ ಯಾರ ಎಣಿಕೆಗೂ ಮೀರಿದ್ದು. ಒಂದೊಂದು ಇಂಚು ಸೋವಿಯತ್ ನೆಲಕ್ಕೂ ಸೋವಿಯತ್ ಕೆಂಪು ಸೈನ್ಯ ಪ್ರಾಣಾರ್ಪಣೆ ಮಾಡಿತು. ಸಮರ್ಪಣಾಭಾವದಿಂದ ಕೂಡಿದ ಆಧುನಿಕ ಸೈನ್ಯವೊಂದರ ಪ್ರತಿರೋಧ ಎಂದರೆ ಹೇಗಿರುತ್ತದೆ ಎಂಬುದು ಹಿಟ್ಲರ್‌ಗೆ ಅರ್ಥವಾದದ್ದು ಆಗಲೇ.

**ಬೂದಿ ಭೂಮಿಯ ಯುದ್ಧತಂತ್ರ**

ರಷ್ಯಾದ ಕೆಂಪುಸೈನ್ಯವು ಕಮ್ಯುನಿಸ್ಟ್ ಪಕ್ಷ ಮತ್ತು ಸ್ಟಾಲಿನ್‌ರ ನೇತೃತ್ವದಲ್ಲಿ ಒಂದು ಹೊಸ ಯುದ್ಧ ತಂತ್ರವನ್ನು ರೂಪಿಸಿತು. ಅದೇ ಬೂದಿ ಭೂಮಿಯ ಯುದ್ಧತಂತ್ರ – ಸ್ಕಾರ್ಚ್‌ಡ್ ಅರ್ತ್ ಟ್ಯಾಕ್ಟಿಕ್ಸ್. ಗೆದ್ದ ನಾಜಿಗಳಿಗೆ ಏನೂ ಸಿಗಲಾರದಂತೆ ಕೆಂಪುಸೈನ್ಯ ಮತ್ತು ಜನಸಾಮಾನ್ಯರು ಆಕ್ರಮಿತ ಪ್ರದೇಶಗಳಲ್ಲಿನ ಜಲಾಶಯಗಳನ್ನೇ ಸ್ಫೋಟಿಸಿದರು, ಕೈಗಾರಿಕೆಗಳನ್ನು ನಾಶಮಾಡಿದರು, ಹೊಲಗಳನ್ನು ಕೈಲಾದಷ್ಟು ಸುಗ್ಗಿ ಮಾಡಿ ಉಳಿದದ್ದನ್ನು ಸುಟ್ಟರು. ಹೀಗಾಗಿ ಜರ್ಮನ್ ಸೈನಿಕರಿಗೆ ಬೇಕಾದ ಪ್ರತಿಯೊಂದು ವಸ್ತುವೂ ಜರ್ಮನಿಯಿಂದ ಬರಬೇಕಾಗುತ್ತಿತ್ತು. ಆದರೆ ಆ ದೀರ್ಘ ಸರಕು ಸಾಗಾಣಿಕೆಯ ಮಾರ್ಗಗಳು ಸತತವಾಗಿ ಗೆರಿಲ್ಲಾ ದಾಳಿಗೆ ತುತ್ತಾಗುತ್ತಿದ್ದವು.

ರಷ್ಯಾದ ಸಮಾಜವಾದಿ ಆರ್ಥಿಕ ವ್ಯವಸ್ಥೆ ಇಂಥ ಯುದ್ಧತಂತ್ರಕ್ಕೆ ಹೇಳಿ ಮಾಡಿಸಿದ ಹಾಗಿತ್ತು. ಕಾರ್ಕೋವ್ ಟ್ರಾಕ್ಟರ್ ಕಾರ್ಖಾನೆಯ ಕಾರ್ಮಿಕರು ಯುದ್ಧಕ್ಕೆ ಟ್ಯಾಂಕ್‌ಗಳನ್ನು ತಯಾರಿಸುತ್ತಿದ್ದರು. ಶತ್ರು ಬಾಗಿಲಿಗೆ ಬರುವಾಗ ಕೂಡ ಅವರು ಟ್ಯಾಂಕ್ ಮಾಡುತ್ತಿದ್ದರು. ಅಷ್ಟರಲ್ಲಿ ಅವರ ಇನ್ನೊಂದು ಭಾಗ ಸಾವಿರಾರು ಕಿ.ಮೀ ಪೂರ್ವಕ್ಕೆ ಹೋಗಿ ಹೊಸ ಕಾರ್ಖಾನೆ ಆರಂಭಿಸಿದ್ದು, ಇಲ್ಲಿ ಟ್ಯಾಂಕ್ ಉತ್ಪಾದನೆ ನಿಲ್ಲುವ ವೇಳೆ ಅಲ್ಲಿ ಮೊದಲನೆಯ ಟ್ಯಾಂಕ್ ಹೊರಗೆ ಬಂದಿತ್ತು. ಸಾಮೂಹಿಕ ಕೃಷಿ ವಲಯ (ಕಲೆಕ್ಟಿವ್ ಫಾರಂ)ದ ರೈತರಂತೂ ಸಮರ್ಥ ಗೆರಿಲ್ಲಾಗಳಾಗಿ, ಹಾಗೇ ರೈತರಾಗಿ ಕೆಲಸ ಮಾಡುತ್ತಿದ್ದರು. ಉತ್ಪಾದನೆಯ ಪ್ರಮಾಣ ಕೂಡ ಅದ್ಭುತವಾಗಿತ್ತು. ಯುದ್ಧದ ಅವಧಿಯಲ್ಲಿ ಸರಾಸರಿ ವಾರ್ಷಿಕ ಉತ್ಪಾದನೆ ೨೪ ಸಾವಿರ ಟ್ಯಾಂಕ್ (ಜರ್ಮನಿಯ ಎರಡರಷ್ಟು), ೨೪ ಸಾವಿರ ಫಿರಂಗಿಗಳು (ಜರ್ಮನಿಯ ಎರಡರಷ್ಟು), ೨೭ ಸಾವಿರ ವಿಮಾನಗಳು (ಜರ್ಮನಿಯ ಎರಡರಷ್ಟು). ಹಲವಾರು ರಾಷ್ಟ್ರಗಳನ್ನು ಲೂಟಿ ಹೊಡೆದ ಜರ್ಮನಿಗೂ ಮಿಗಿಲಾದ ಈ ಉತ್ಪಾದನೆಯ ಪ್ರಮಾಣಕ್ಕೆ ಮುಖ್ಯ ಕಾರಣ ಅಲ್ಲಿನ ಸಮಾಜವಾದಿ ಆರ್ಥಿಕ ವ್ಯವಸ್ಥೆ.

ಇನ್ನು ಹೋರಾಟನಿರತ ಸೈನಿಕರ ಆತ್ಮಸ್ಥೈರ್ಯವಂತೂ ಅದ್ಭುತವಾಗಿತ್ತು. ಮೈ ಉದ್ದಕ್ಕೂ ಬಾಂಬುಗಳನ್ನು ಕಟ್ಟಿಕೊಂಡು ಶತ್ರುಗಳ ಟ್ಯಾಂಕ್ ಸರಣಿಗಳನ್ನೇ ನಾಶಮಾಡಿದವರು, ವಿಮಾನಗಳಲ್ಲಿ ಬಾಂಬ್ ತುಂಬಿಕೊಂಡು ಶತ್ರುಗಳ ಮೇಲೆ ಎರಗಿದವರು ಅಸಂಖ್ಯಾತ ಮಂದಿ. ಯುದ್ಧದ ಆರಂಭದಲ್ಲೇ ಸ್ಟಾಲಿನ್ ನುಡಿದದ್ದು "ಅಜೇಯ ಎಂಬಂಥ ಯಾವ ಸೈನ್ಯವೂ ಇಲ್ಲ, ಅದು ಸಾಧ್ಯವೂ ಇಲ್ಲ– ಈ ಯುದ್ಧವನ್ನು ಇಡಿಯ ಜನತೆಯ ಯುದ್ಧವನ್ನಾಗಿ ಪರಿವರ್ತಿಸಿ" ಎಂದು. ಇದನ್ನು ಸೋವಿಯತ್ ಜನತೆ ಅಕ್ಷರಶಃ ನೆರವೇರಿಸಿದರು.

**ಸ್ಟಾಲಿನ್‌ಗ್ರಾಡ್‌ನ ವೀರಗಾಥೆ**

ಇಡೀ ಯುದ್ಧದಲ್ಲಿ ಮಾಸ್ಕೋ, ಲೆನಿನ್‌ಗ್ರಾಡ್, ಸ್ಟಾಲಿನ್‌ಗ್ರಾಡ್ ನಗರಗಳ ಸಮರಗಳು ಅನನ್ಯವಾದವು. ಮಾಸ್ಕೋದ ಬಳಿ ಹಿಟ್ಲರ್ ಮೊದಲಬಾರಿ ಸೋಲಿನ ರುಚಿ ನೋಡಿದ. ಆದರೆ ಇಡೀ ಯುದ್ಧದ ದಿಕ್ಕನ್ನೇ ಬದಲಿಸಿದ್ದು ಮಾತ್ರ ಸ್ಟಾಲಿನ್‌ಗ್ರಾಡ್‌ನ ಯುದ್ಧ.

ಸ್ಟಾಲಿನ್‌ಗ್ರಾಡ್‌ನ ಒಂದು ಬದಿಯಲ್ಲಿ ವೋಲ್ಗಾನದಿ ಹರಿಯುತ್ತದೆ. ಸೋವಿಯತ್ ಸೈನಿಕರು 'ವೋಲ್ಗಾದ ಆಚೆಗೆ ನೆಲವೇ ಇಲ್ಲ' ಎಂಬ ಘೋಷಣೆಯೊಂದಿಗೆ ಹೋರಾಡಿದರು. ಅವರನ್ನುದ್ದೇಶಿಸಿ ಸ್ಟಾಲಿನ್‌ರು ಮಾಡಿದ "ಇನ್ನು ಹೆಜ್ಜೆ ಹಿಂದಿಡುವುದಿಲ್ಲ" ಎಂಬ ಭಾಷಣ ಜನರ ತುಟಿಗಳ ಮೇಲೆ ನಲಿದಾಡುತ್ತಿತ್ತು. ೩೦ ತಿಂಗಳ ಆ ಮುತ್ತಿಗೆಯಲ್ಲಿ ಜೀವಚ್ಛವದಂತೆ ಕಾಣುತ್ತಿದ್ದ, ಹಸಿವಿನಿಂದ ಕಂಗೆಟ್ಟಿದ್ದ ಜನಸಾಮಾನ್ಯರು ದೈತ್ಯರಂತೆ ಕಾದಾಡಿದರು. ೧೮೨ ದಿನಗಳ ಯುದ್ಧದಲ್ಲಿ ಇಡೀ ನಗರ ಪಾಳು ಬಿತ್ತು, ಸ್ಮಶಾನವಾಯಿತು. ಅಂತಿಮವಾಗಿ ನಾಜಿಗಳು ಸಂಪೂರ್ಣವಾಗಿ ಸೋತು ಮೂರು ಲಕ್ಷದ ಮೂವತ್ತು ಸಾವಿರ ಸೈನಿಕರು ಶರಣಾದರು. ಅಲ್ಲಿಂದ ಹಿಟ್ಲರನ ಪಲಾಯನ ಆರಂಭವಾಯಿತು.

**ಸೋವಿಯತ್ ನಷ್ಟದ ಪ್ರಮಾಣ**

ಸೋವಿಯತ್ ಒಕ್ಕೂಟದ ಮಹಾನ್ ಹೋರಾಟವನ್ನು ಮುಚ್ಚಿಡಲು ಎಲ್ಲಾ ತಂತ್ರವನ್ನೂ ಮಾಡಲಾಗುತ್ತದೆ. ಆದರೆ ಅದು ಎಂತಹ ಅಸಾಮಾನ್ಯ ತ್ಯಾಗ ಹಾಗೂ ಬಲಿದಾನ! ಸೋವಿಯತ್ ಒಕ್ಕೂಟದ ೧೭೭೧೦ ನಗರ ಹಾಗೂ ಪಟ್ಟಣಗಳು, ೩೨ ಸಾವಿರ ಕೈಗಾರಿಕೆಗಳು, ೧ ಲಕ್ಷ ಸಾಮೂಹಿಕ ಕೃಷಿ ಕ್ಷೇತ್ರಗಳು ನಾಶವಾದವು. ಎರಡು ಕೋಟಿ ಜನ – ಎಂದರೆ ಜನಸಂಖ್ಯೆಯಲ್ಲಿ ಪ್ರತಿ ಹತ್ತಕ್ಕೆ ಒಬ್ಬರು ಜೀವ ತೆತ್ತರು. ಅದರಲ್ಲಿ ೨೦ ಲಕ್ಷ ಜನ ಕಮ್ಯುನಿಸ್ಟ್ ಪಾರ್ಟಿಯ ಸದಸ್ಯರು. ೬೫ ಸಾವಿರ ಕಿಲೋಮೀಟರ್ ರೈಲ್ವೇ ಮಾರ್ಗ ನಾಶವಾಗಿತ್ತು!

ಪಾಶ್ಚಿಮಾತ್ಯ ಬಂಡವಾಳಶಾಹಿ ರಾಷ್ಟ್ರಗಳು ತಾವು ಜಂಭ ಕೊಚ್ಚಿಕೊಳ್ಳುವ ಸೆಕೆಂಡ್ ಫ್ರಂಟ್‌ಅನ್ನು ಆರಂಭಿಸಿದಾಗ ಕೂಡ ಯುದ್ಧಕ್ಕೆ ಇಳಿಸಿದ್ದು ೭೪ ಡಿವಿಶನ್‌ಗಳನ್ನು, ೧೯ ಲಕ್ಷ ಸೈನಿಕರನ್ನು. ಸೋವಿಯತ್ ಒಕ್ಕೂಟ ಎದುರಿಸಿದ್ದು ೧೯೬೫ ಡಿವಿಶನ್‌ಗಳನ್ನು ಹಾಗೂ ೩.೭ ಲಕ್ಷ ಸೈನಿಕರನ್ನು. ಸೋವಿಯತ್ ಒಕ್ಕೂಟ ಒಂದೇ ನಾಜಿ ಹಾಗೂ ಮಿತ್ರಪಡೆಗಳ ೬೦೭ ಡಿವಿಶನ್‌ಗಳನ್ನು ಸೋಲಿಸಿ ನಿಷ್ಕ್ರಿಯಗೊಳಿಸಿದರೆ, ಮಿತ್ರಪಕ್ಷಗಳು ಯುರೋಪ್ ಹಾಗೂ ಆಫ್ರಿಕದಾದ್ಯಂತ ಸೋಲಿಸಿದ್ದು ಕೇವಲ ೧೭೬ ಡಿವಿಶನ್‌ಗಳನ್ನು.

ಆದರೆ ಈ ಸೆಕೆಂಡ್ ಫ್ರಂಟನ್ನು ಕೂಡ ಮಿತ್ರಪಕ್ಷಗಳು ಆರಂಭಿಸಿದ್ದು ಯಾವಾಗ? ಸೋವಿಯತ್ ಒಕ್ಕೂಟಕ್ಕೆ ನಾಜಿಗಳನ್ನು ಸೋಲಿಸಿದ ಪೂರ್ಣ ಕೀರ್ತಿ ಲಭಿಸುತ್ತದೆ ಎನ್ನುವಂಥ ಪರಿಸ್ಥಿತಿ ಬಂದಾಗ ಮಾತ್ರ. ಅಲ್ಲಿಯವರೆಗೂ ಸ್ಟಾಲಿನ್ ಪದೇ ಪದೇ ಮನವಿ ಮಾಡಿಕೊಂಡರೂ, ಆಗ್ರಹಿಸಿದರೂ ಚರ್ಚಿಲ್ ಹಾಗೂ ರೂಸ್‌ವೆಲ್ಟ್ ಸೆಕೆಂಡ್ ಫ್ರಂಟನ್ನು ಆರಂಭಿಸಲೇ ಇಲ್ಲ. ಸೆನೆಟರ್ ಹ್ಯಾರಿ ಟ್ರೂಮನ್ (ಮುಂದೆ ಈತ ಅಮೆರಿಕಾದ ಅಧ್ಯಕ್ಷನಾದವನು) ಹೇಳಿದ ಹಾಗೆ "ಜರ್ಮನರು ಗೆಲ್ಲುವ ಹಾಗಿದ್ದರೆ ರಷ್ಯನ್ನರನ್ನು, ರಷ್ಯನ್ನರು ಗೆಲ್ಲುವ ಹಾಗಿದ್ದರೆ ಜರ್ಮನರನ್ನು ನಾವು ಬೆಂಬಲಿಸಬೇಕು. ಈ ರೀತಿ ಅವರಿಬ್ಬರೂ ಒಬ್ಬರನ್ನೊಬ್ಬರು ನಾಶಗೊಳಿಸಿಕೊಳ್ಳಲಿ" ಎಂಬುದೇ ಮಿತ್ರಶಕ್ತಿಗಳ ನಿಲುವಾಗಿತ್ತು. ನಿಜವಾಗಿ ಹೇಳಬೇಕೆಂದರೆ ಸೆಕೆಂಡ್ ಫ್ರಂಟ್ ಎಂಬುದೇ ಒಂದು ದ್ರೋಹದ ಕಥೆ.

**ಸ್ಟಾಲಿನ್‌ರ ಮಹಾನ್ ನಾಯಕತ್ವ**

ಸೋವಿಯತ್ ಒಕ್ಕೂಟದ ಗೆಲುವಿಗೆ ರಷ್ಯಾದ ಕ್ರೂರ ಚಳಿಯೇ ಕಾರಣ ಎಂದು ಗಳಹುವ ಖದೀಮ ಚರಿತ್ರಕಾರರು ಇವತ್ತಿಗೂ ಇದ್ದಾರೆ. ಅವರೆಲ್ಲಾ ಸಮಾಜವಾದಿ ವ್ಯವಸ್ಥೆ, ಕೆಂಪುಸೈನ್ಯ ಹಾಗೂ ಕಮ್ಯುನಿಸ್ಟ್ ಪಕ್ಷ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಸ್ಟಾಲಿನ್‌ರ ಮಹಾನ್ ಪಾತ್ರವನ್ನು ಮರೆಮಾಚಲೆತ್ನಿಸುತ್ತಾರೆ.

ಆದರೆ ಪ್ರತಿಯೊಂದು ಮಹಾನ್ ಸೈನ್ಯದ ಗೆಲುವಿನ ಹಿಂದೆ ನಾಯಕತ್ವದ ಪಾತ್ರವಿದ್ದೇ ಇರುತ್ತದೆ. ಇದಕ್ಕೆ ಸೂಕ್ತ ಮಾನ್ಯತೆ ನೀಡುವುದೆಂದರೆ ಉಳಿದವರ ಪಾತ್ರ ಗೌಣವಾಗುವುದಿಲ್ಲ. ಆದರೆ ನಾಯಕರ ನೇತಾರ ಪಾತ್ರವನ್ನು ಗುರುತಿಸಲೇಬೇಕು.

ಮಹಾನ್ ಸಂಘಟನಾಕಾರರಾಗಿ, ದಂಡನಾಯಕರಾಗಿ, ಮಿಲಿಟರಿ ತಂತ್ರಜ್ಞರಾಗಿ ಯುದ್ಧದಾದ್ಯಂತ ಸ್ಟಾಲಿನ್ ಕಂಗೊಳಿಸಿದರು. ದಣಿವರಿಯದ ಶ್ರಮ, ಗಾಢ ಮುಂದಾಲೋಚನೆ, ಅಪಾರ ಆತ್ಮಸ್ಥೈರ್ಯ ಇವುಗಳನ್ನು ಅವರು ಉಳಿದವರಿಗೂ ಧಾರೆ ಎರೆದರು. ನಾಜಿ ಪಡೆಗಳು ಮಾಸ್ಕೋ ನಗರವನ್ನು ಸುತ್ತುವರೆದು, ಹಿಟ್ಲರ್ "ಮಾಸ್ಕೋವನ್ನು ಹಿಡಿದುಕೊಂಡಿದ್ದೇವೆ" ಎಂದು ಘೋಷಿಸಿದಾಗ ಸಹ ಸ್ಟಾಲಿನ್ ಮಾಸ್ಕೋ ಬಿಟ್ಟು ಹೋಗಿರಲಿಲ್ಲ. ಬದಲಿಗೆ ನವೆಂಬರ್ ೭ರಂದು ಕ್ರೆಮ್ಲಿನ್‌ನಲ್ಲಿ ಗೌರವರಕ್ಷೆ ಸ್ವೀಕರಿಸಿದರು. ಇದು ಇಡಿಯ ಜನತೆಯಲ್ಲಿ ಪ್ರತಿರೋಧದ ಹುಮ್ಮಸ್ಸನ್ನು ತುಂಬಿತು. ಅವರ ಮಗ ಯಾಕೋವ್‌ನನ್ನು ಶತ್ರುಗಳು ಸೆರೆಹಿಡಿದರು. ಆತನ ಬಿಡುಗಡೆಗೆ ಪ್ರತಿಯಾಗಿ ಜರ್ಮನ್ ಸೈನ್ಯದ ಉನ್ನತ ಅಧಿಕಾರಿಗಳನ್ನು ಸೆರೆಯಿಂದ ಬಿಡಬೇಕೆಂಬ ಷರತ್ತಿಗೆ ಸ್ಟಾಲಿನ್ ಒಪ್ಪಲಿಲ್ಲ, ಮಗನನ್ನೇ ತ್ಯಾಗಮಾಡಿದರು. ಅಂತರರಾಷ್ಟ್ರೀಯ ಮಟ್ಟದಲ್ಲಿ ಚರ್ಚಿಲ್, ರೂಸ್‌ವೆಲ್ಟ್, ಟ್ರೂಮನ್‌ರಂಥ ಚಾಣಾಕ್ಷ ರಾಜಕಾರಣಿಗಳನ್ನು ಅವರು ಮಕ್ಕಳಾಟದಂತೆ ನಿಯಂತ್ರಿಸಿದರು. ಇಡಿಯ ಜಗತ್ತು ಫ್ಯಾಸಿಸಂನಿಂದ ಉಳಿದುಕೊಂಡ ಈ ಹೋರಾಟದಲ್ಲಿ ಗಮನಾರ್ಹ ಪಾತ್ರ ವಹಿಸಿದ ಅವರ ಬಗ್ಗೆ ಗೌರವ ಹಾಗೂ ಕೃತಜ್ಞತೆ ಸಹಜ ಮತ್ತು ಅನಿವಾರ್ಯ. ಅಂಥ ನಾಯಕತ್ವವನ್ನು ಮರೆತದ್ದರಿಂದ ಹಾಗೂ ಸಾಮ್ರಾಜ್ಯಶಾಹಿಗಳ ವಿರುದ್ಧ ಸಮರಶೀಲ ಹೋರಾಟದ ನಿಲುವನ್ನು ಕೈಬಿಟ್ಟದ್ದರಿಂದಲೇ ಸೋವಿಯತ್ ಒಕ್ಕೂಟ ಅಂತಿಮವಾಗಿ ಪತನದ ಹಾದಿಯಲ್ಲಿ ಜಾರಿಬಿಟ್ಟಿತು. ಇದೀಗ ರಷ್ಯಾದಲ್ಲಿ ಮತ್ತು ಜಾರ್ಜಿಯಾದಲ್ಲಿ ಸ್ಟಾಲಿನ್‌ರವರ ಪ್ರತಿಮೆಗಳನ್ನು ಜನತೆ ಮತ್ತೆ ಸ್ಥಾಪಿಸುತ್ತಿದ್ದಾರೆ. ಸ್ಟಾಲಿನ್‌ಗ್ರಾಡ್‌ನ್ನು ಕಳೆದ ೫೦ ವರ್ಷ ವೋಲ್ಗೊಗ್ರಾಡ್ ಎಂದು ಕರೆದು ಅವರ ಹೆಸರನ್ನು ಹಿಂದಕ್ಕೆ ಸರಿಸಲಾಗಿತ್ತು. ಆದರೆ ಅದಕ್ಕೆ ಇದೀಗ ಮತ್ತೆ ಸ್ಟಾಲಿನ್‌ಗ್ರಾಡ್ ಎಂದು ಮರುನಾಮಕರಣವಾಗುತ್ತಿದೆ. ಜನಸಾಮಾನ್ಯರಲ್ಲಿ ಅವರ ಬಗ್ಗೆ ಇರುವ ಗೌರವದ ದ್ಯೋತಕವಲ್ಲವೇ ಇದು.

**ಭವಿಷ್ಯದಲ್ಲಿ**

ಫ್ಯಾಸಿಸ್ಟ್ ಶಕ್ತಿಗಳು ಎರಡನೇ ಯುದ್ಧದಲ್ಲಿ ಮಿಲಿಟರಿ ಸೋಲನ್ನು ಅನುಭವಿಸಿವೆ. ಆದರೆ ಫ್ಯಾಸಿಸಂ ಒಂದು ರಾಜಕೀಯ ಶಕ್ತಿಯಾಗಿ ನಮ್ಮ ನಡುವೆ ಬದುಕಿಯೇ ಇದೆ. ಬಂಡವಾಳಶಾಹಿಗಳು, ಕ್ರಾಂತಿಕಾರಿ ಹಾಗೂ ಪ್ರಗತಿಶೀಲ ಶಕ್ತಿಗಳನ್ನು ಬಗ್ಗುಬಡಿಯಲು ಮತ್ತೆ ಮತ್ತೆ ಫ್ಯಾಸಿಸಂಗೆ ಮೊರೆಹೋಗುವುದು ಖಂಡಿತ. ಆಗೆಲ್ಲಾ ನಮಗೆ ಚರಿತ್ರೆಯ ಈ ಪಾಠಗಳನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ.

ಡಾ|| ಬಿ. ಆರ್. ಮಂಜುನಾಥ್
ಎಸ್. ಯು. ಸಿ. ಐ.,ನಂ ೩೧, ೩ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು – ೫೬೦ ೦೦೩

# ಮೊನಾಂಗಾಂಬಾ

ದೊಡ್ಡ ತೋಟದಲ್ಲಿ ಮಳೆಯ ಸುಳಿವಿಲ್ಲ
ಆ ಬೆಳೆಗೆ ನೀರುಣಿಸು ನನ್ನ ಹಣೆ ಬೆವರು.
ಆ ತೋಟದ ಗಿಡಗಿಡದಲಿ ಚೆರ್‍ರಿಕೆಂಪು ಕಾಫಿ
ಹಣ್ಣುಹಣ್ಣು, ನನ್ನ ರಕ್ತ ತುಂಬಿದಂಥ ಕಾಫಿ

ಕಾಫಿಯನ್ನು ಹುರಿಯುತ್ತಾರೆ, ಅಗೋ ಅದನು ಅರೆಯುತಾರೆ
ಪುಡಿಪುಡಿಪುಡಿ ಮಾಡುತಾರೆ. ಕಪ್ಪು ಕಾಫಿ ಮಾರುತಾರೆ
ನನ್ನ ಮೈಯ ಕಪ್ಪು ಅದು
ನಮ್ಮ ಮೈಯ ಕಪ್ಪು.

ಹಾಡು ಹಕ್ಕಿಗಳನು ಕೇಳಿ.
ತಡೆಯಿಲ್ಲದೆ ಹರಿವ ಹೊಳೆಯ
ಮಳೆನಾಡಿನ ಗಾಳಿ ಸುಳಿಯ
ಕೇಳಿ ಕೇಳಿ ಕೇಳಿ :

ಮುಂಜಾನೆಯ ಮಂಜಿನಲ್ಲಿ ಏಳುವವರು ಯಾರು ?
ಹಳಸುತಿಂದು ದುಡಿಮೆಗೆಂದು ಹೊರಡುವವರು ಯಾರು ?
ನಡೆದು ಸವೆದ ಹಾದಿ ಮೇಲೆ ಕಾಫಿ ಮೂಟೆ ತಲೆಯ ಮೇಲೆ
ನರಳುವವರು ಯಾರು ?
ದುಡಿದ ರಟ್ಟೆ ಹಸಿದ ಹೊಟ್ಟೆ
ಕೂಲಿಗೆಂದು ಏನು ಕೊಟ್ಟೆ?
ಕೊಳೆತ ಮೀನು, ಹುಳಿತ ಕಾಳು
ಹರಿದ ಬಟ್ಟೆ, ಕಾಸು ಕೊಟ್ಟೆ
ತುಟಿಕ್‌ಪಿಟಿಕ್, ಏಟುಕೊಟ್ಟೆ.
ಇವರು ಯಾರು ? ಯಾರು ?

ಯಾರು ?
ಕರಿಯ ಮಣ್ಣು ಕೆಂಪು ಹಣ್ಣು
ಬರಡು ನೆಲದಿ ರಾಗಿಯನ್ನು
ಬೆಳೆಯುವವರು
ಯಾರು ?

ಕಾರಿಗೆಂದು, ಯಂತ್ರಕೆಂದು, ಹೆಣ್ಣಿಗೆಂದು, ಮಣ್ಣಿಗೆಂದು
ಹಣವ ತಂದು ದಣಿಯ ಮುಂದೆ ಸುರಿಯುವವರು
ಯಾರು ?

ಬಿಳಿಯ ದಣಿಯ ನಡುಗುಡಾಣ
ತಡೆಯಿಲ್ಲದೆ ಬೆಳೆಯಲೆಂದು
ಸಾಯುವವರು ಯಾರು ?

ಹಾಡುವ ಹಕ್ಕಿಗಳು ಹೇಳುತ್ತವೆ,
ತಡೆಯಿಲ್ಲದೆ ಹರಿಯುವ ಹೊಳೆ ಹೇಳುತ್ತದೆ,
ಮಳೆನಾಡಿನ ಗಾಳಿ ಹೇಳುತ್ತದೆ :

ಮೊನಾಂಗಾಂಬೀ ಮೋನಾಂಗಾಂಬೀ

ಅಯ್ಯೋ, ಹೋಗಲಿ ಬಿಡಿ.
ಕೊನೆಯ ಪಕ್ಷ ನನಗೆ ನೀವು ತಾಳೆಯಮರ ಹತ್ತಬಿಡಿ

ತಾಳೆಹೆಂಡ ಕುಡಿಯಬಿಡಿ. ಅಮಲಿನಲ್ಲಿ
ತೊದಲಿನಲ್ಲಿ ಎಲ್ಲ ಮರೆತು ಸಾಯಬಿಡಿ.

ಮೋನಾಂಗಾಂಬೀ... ... ...

ಆಂತೋನಿಯೋ ಜಸಿಂತೋ, ಅಂಗೋಲಾ
ಕನ್ನಡಕ್ಕೆ : **ಡಾ॥ ಎಚ್. ಎಸ್. ರಾಘವೇಂದ್ರರಾವ್**
೭, 'ಶ್ರೀಮಾತಾ', ೧೫ನೇ ಕ್ರಾಸ್ (ರಿಂಗ್ ರಸ್ತೆ), ಜೆ. ಪಿ.ನಗರ ೫ನೆಯ ಬ್ಲಾಕ್, ಬೆಂಗಳೂರು - ೫೬೦ ೦೭೮

**ಆಂತೋನಿಯೋ ಜಸಿಂತೋ (೧೯೨೪-೧೯೯೧)** : ಅಂಗೋಲಾ ದೇಶದ ಲುಆಂಡಾದಲ್ಲಿ ಜನನ. ಸ್ವಾತಂತ್ರ್ಯ ಹೋರಾಟಕ್ಕಿಂತ ಮೊದಲು ನಡೆದ ಸಾಂಸ್ಕೃತಿಕ ರಾಷ್ಟ್ರೀಯತೆಯ ಆಂದೋಲನದಲ್ಲಿ ಭಾಗವಹಿಸಿದರು. ಎಂ.ಪಿ.ಎಲ್.ಎ.ದ (ಅಂಗೋಲಾ ಸ್ವಾತಂತ್ರ್ಯ ಸಂಗ್ರಾಮ ಆಂದೋಲನ) ಸದಸ್ಯರಾಗಿದ್ದಕ್ಕಾಗಿ ಹದಿನಾಲ್ಕು ವರ್ಷಗಳ ಸೆರೆಮನೆವಾಸದ ಶಿಕ್ಷೆ. ೧೯೭೩ರಲ್ಲಿ ಪೋರ್ಚುಗಲ್‌ನಿಂದ ತಪ್ಪಿಸಿಕೊಂಡು ಹೋರಾಟವನ್ನು ಮುಂದುವರಿಸಿದರು. ೧೯೬೧ರಲ್ಲಿ ಕವನ ಸಂಕಲನ ಪ್ರಕಟವಾಯಿತು.



# ಪುರಾಣ-ಇತಿಹಾಸಗಳ ಗೊಂದಲ

## (ಪುರಾಣವನ್ನು ಇತಿಹಾಸಗೊಳಿಸುವ ಪ್ರಕ್ರಿಯೆ)

*ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।*
*ವಂಶಾನುಚರಿತಂ ಚಾಪಿ ಪುರಾಣಂ ಪಂಚಲಕ್ಷಣಂ ॥*

– ಎಂದು ಅಮರಕೋಶದಲ್ಲಿ ಪುರಾಣದ ಲಕ್ಷಣವನ್ನು ಸೂತ್ರೀಕರಿಸಲಾಗಿದೆ. ಇಲ್ಲಿ ಸರ್ಗ ಪ್ರತಿಸರ್ಗಗಳೆಂದರೆ ಪ್ರಥಮ ಸೃಷ್ಟಿ ಮತ್ತು ಪುನರ್ ಸೃಷ್ಟಿ ಅಥವಾ ವಿಶ್ವವಿಕಾಸ; ವಂಶವೆಂದರೆ ಋಷಿಗಳ ಮತ್ತು ಅವರ ಪೂರ್ವಜರ ಚರಿತೆಗಳು; ಮನ್ವಂತರವೆಂದರೆ ವಿವಿಧ ಮನುಗಳ ಕಾಲಾವಧಿ; ವಂಶಾನುಚರಿತವೆಂದರೆ ರಾಜರುಗಳ ವಂಶಾವಳಿಯನ್ನು ನಿರೂಪಿಸುವುದು; ಈ ಐದು ಲಕ್ಷಣಗಳಿಂದ ಕೂಡಿದುದು ಪುರಾಣ. ಆದರೆ ಪ್ರಚಲಿತವಾಗಿರುವ ಎಲ್ಲ ಪುರಾಣಗಳಲ್ಲಿ ಈ ಐದೂ ಲಕ್ಷಣಗಳು ಇಡಿಯಾಗಿ ಕಂಡುಬರುವುದಿಲ್ಲ.

ಪುರಾಣವೆಂದೊಡನೆ ನಮಗೆ ನೆನಪಿಗೆ ಬರುವುದು ವ್ಯಾಸ ಮಹರ್ಷಿಗಳು ರಚಿಸಿದರೆಂದು ಹೇಳಲಾಗುವ ಹದಿನೆಂಟು ಪುರಾಣಗಳು ಮತ್ತು ಅವುಗಳ ಉಪಪುರಾಣಗಳು.

*ಅಷ್ಟಾದಶ ಪುರಾಣಾನಿ ಕೃತ್ವಾ ಸತ್ಯವತೀ ಸುತಃ*
*ಭಾರತಾಖ್ಯಾನ ಮೂಲಂ ಚಕ್ರೇ ತದುಪಬೃಹ್ಮಣಂ ॥*

*(ಮತ್ಸ್ಯಪುರಾಣ – ಅಧ್ಯಾಯ ೫೩, ಶ್ಲೋಕ – ೭೦)*

ವಿಪುಲವಾಗಿರುವ ಪುರಾಣಗ್ರಂಥಗಳ ಪೈಕಿ ಕೆಲವನ್ನು ಪ್ರತ್ಯೇಕಿಸಿ 'ಮಹಾಪುರಾಣ'ಗಳೆಂದು ಕರೆಯಲಾಗಿದೆ. ಇವು ಸರ್ವಜನಾದರಣೀಯವಾದವು ಎಂಬುದೇ ಈ ವಿಂಗಡಣೆಗೆ ಆಧಾರವಾಗಿರಬೇಕು. ಇವುಗಳಲ್ಲಿ ಒಂದೊಂದು ಪುರಾಣವೂ ಸಹ, ತನ್ನನ್ನೂ ಸೇರಿಸಿಕೊಂಡಂತೆ ಎಲ್ಲ ಹದಿನೆಂಟನ್ನೂ ಪಟ್ಟಿಮಾಡುತ್ತದೆ. ಇಂಥ ಪಟ್ಟಿಗಳಲ್ಲಿ ಒಟ್ಟನ ಮೇಲೆ ಹೊಂದಾಣಿಕೆಯಿರುವುದಾದರೂ ಸಣ್ಣಪುಟ್ಟ ಕೆಲವು ವ್ಯತ್ಯಾಸಗಳೂ ಇವೆ. ಆದ್ದರಿಂದ ವಾಸ್ತವವಾಗಿ ಪಟ್ಟಿಮಾಡಬಹುದಾದ ಪುರಾಣಗಳ ಸಂಖ್ಯೆ ಇಪ್ಪತ್ತಾಗುತ್ತದೆ. ಅವುಗಳನ್ನು ಅಕ್ಷರಾನುಕ್ರಮವಾಗಿ ಹೀಗೆ ಹೆಸರಿಸಬಹುದು :

ಅಗ್ನಿ, ಕೂರ್ಮ, ಗರುಡ, ನಾರದ, ಪದ್ಮ, ಬ್ರಹ್ಮ, ಬ್ರಹ್ಮಾಂಡ, ಬ್ರಹ್ಮ ವೈವರ್ತ, ಭಾಗವತ, ಭವಿಷ್ಯ, ಮತ್ಸ್ಯ, ಮಾರ್ಕಾಂಡೇಯ, ಲಿಂಗ, ವಾಮನ, ವಾಯು, ವರಾಹ, ವಿಷ್ಣು, ಶಿವ, ಸ್ಕಾಂದ ಮತ್ತು ಹರಿವಂಶ.

ಒಂದು ಪುರಾಣದ ಹೆಸರಾಗಲಿ ಅಥವಾ ಅದು ಸೇರುವ ಗುಂಪಾಗಲಿ ಅದರ ವಸ್ತುವಿಷಯಗಳನ್ನು ನಿರ್ದಿಷ್ಟವಾಗಿ ತಿಳಿಯಲು ಸಹಾಯಕವಾಗುವುದಿಲ್ಲ. ಆದ್ದರಿಂದ ಈ ವಿಂಗಡಣೆಯನ್ನು ಗಂಭೀರವಾಗಿ ಪರಿಗಣಿಸಬೇಕಾಗಿಲ್ಲ.

ಒಂದು ನಿಲುವಿನಿಂದ ನೋಡಿದರೆ ಪುರಾಣಗಳ ಕಾಲ ನಿರ್ಣಯ ಅಪ್ರಸ್ತುತ; ಏಕೆಂದರೆ ಅವು ಹೊಸದನ್ನು ಹೇಳುವವೆಂದು ಕೊಚ್ಚಿಕೊಳ್ಳದೆ ಹಿಂದಿನಿಂದ ನಡೆದು ಬಂದುದನ್ನೆ ಪುನರುಚ್ಚರಿಸುತ್ತವೆ. ಪುರಾಣಗಳ ವಸ್ತುವಿಷಯಗಳಾಗಲಿ, ಅವುಗಳ ಆಕೃತಿಯಾಗಲಿ ನಿರ್ದಿಷ್ಟವಿಲ್ಲದಿರುವುದರಿಂದ, ಸಡಿಲವಾದ ಈ ಬಂಧದೊಳಗೆ ಹೊಸಹೊಸ ಅಂಶಗಳನ್ನು ಸೇರಿಸಿ ಅವುಗಳಿಗೆ ಪ್ರಾಚೀನತೆಯ ನಿಗೂಢತೆಯನ್ನು ಕಲ್ಪಿಸುವ ಕೆಲಸ ನಡೆಯುತ್ತಲೇ ಇರುತ್ತದೆ. ಕಾಳಿದಾಸ ಕವಿಯು ತನ್ನ ಮಾಳವಿಕಾಗ್ನಿಮಿತ್ರ ನಾಟಕದಲ್ಲಿ ''ಪುರಾಣಮಿತ್ಯೇವ ನ ಸಾಧು ಸರ್ವಂ ನ ಚಾಪಿ ಕಾವ್ಯಂ ನವಮಿತ್ಯವದ್ಯಂ...'' ಎನ್ನುವಾಗ ಪುರಾಣವೆಂದರೆ ಪ್ರಾಚೀನವಾದುದು, ನವ ಎಂದರೆ ವಿನೂತನವಾದುದು ಎಂದಷ್ಟೇ ಅರ್ಥವಿಟ್ಟುಕೊಂಡಿದ್ದಾನೆಂಬುದು ಸ್ಪಷ್ಟ. ಸಂಸ್ಕೃತ ವಿದ್ವಾಂಸರಾದ ರಾಘವಾಚಾರ್ಯರು ಪುರಾಣವನ್ನು ಪುರಾ+ನವ ಎಂದು ಬಿಡಿಸಿ 'ಪ್ರಾಚೀನವಾದರೂ ಸದಾ ನೂತನವಾದುದು' – ಎಂದು ಅರ್ಥೈಸಿದ್ದಾರೆ.

ಪುರಾಣಗಳ ಗುಣಲಕ್ಷಣಗಳು ಏನೇ ಇರಲಿ; ಸಾಂಪ್ರದಾಯಿಕವಾದ 'ಅಷ್ಟಾದಶ' ಪುರಾಣಗಳ ವಿಚಾರವು ಪುರೋಹಿತವರ್ಗದ ಕೆಲವೊಂದು ಆಚರಣೆಗಳು ಮತ್ತು ವಿದ್ವಜ್ಜನರ ಜಿಜ್ಞಾಸೆಯ ಹೊರತಾಗಿ ಇತರತ್ರ ಚರ್ಚೆಗೊಳಗಾಗುವುದು ಅಪರೂಪ. ಆದರೆ ಮಹಾಭಾರತ, ರಾಮಾಯಣಗಳಂತಹ ಮಹಾಕಾವ್ಯಗಳು ಮತ್ತಿತರ ಸಾಹಿತ್ಯಕೃತಿಗಳಲ್ಲಿ ಅಂತರ್ಗತವಾಗಿರುವ ಪೌರಾಣಿಕ ಕಲ್ಪನೆಗಳು ಭಾರತದಲ್ಲಿ ಜನಸಾಮಾನ್ಯರ ಜ್ಞಾನಭಂಡಾರದಲ್ಲಿ ಇಂದಿನ ನಮಗೆ ಅಸಂಭಾವ್ಯವೆನಿಸುವ ಆಚರಣೆಗಳು ಮತ್ತು ನಂಬಿಕೆಗಳ ರೂಪದಲ್ಲಿ ವಿಪುಲವಾಗಿ ಸೇರಿಹೋಗಿವೆ.

ದೇವತೆಗಳು ಮತ್ತು ರಾಕ್ಷಸರನ್ನು ಕುರಿತ ಕತೆಗಳು ಎಂಬ ಅರ್ಥದಲ್ಲಿ ಮಹಾಭಾರತವು ಪುರಾಣ ಶಬ್ದವನ್ನು ಬಳಸಿದೆ. ಪುರಾಣಗಳು 'ವೇದಗಳ ಮೇಲಿನ ವ್ಯಾಖ್ಯಾನ' ಎಂದು ಸ್ಮೃತಿಗಳು ಹೇಳುತ್ತವೆ. ಈ ಎಲ್ಲ ಹೇಳಿಕೆಗಳ ಆಧಾರದಿಂದ ಮೂಡುವ ಒಂದು ಅಭಿಪ್ರಾಯವೆಂದರೆ, ಪುರಾಣಗಳಿಗೆ ಒಂದು ಪ್ರಾಚೀನ ಪವಿತ್ರತೆಯ (hoary past) ಆಯಾಮವು ಬಹು ಹಿಂದೆಯೆ ಲಭ್ಯವಾಗಿದೆ ಎಂಬುದು. ಹಾಗೆಯೇ ಪುರಾಣವೆಂದರೆ 'ಕಟ್ಟುಕತೆ', ಬಹಳ ಬಹಳ ಹಳೆಯದು (ಬಾದರಾಯಣ ಪುರಾಣ), ಕಾಲಾತೀತವಾದುದು, ಅತಿಲಂಬಿತವಾದುದು, ಬೇಸರ ಉಂಟುಮಾಡುವ ಮಾತುಗಾರಿಕೆ, ಸುಳ್ಳಿನ ಕಂತೆ ಇತ್ಯಾದಿ ಹೀನಾರ್ಥಗಳಲ್ಲಿ ಜನಸಾಮಾನ್ಯರು ಬಳಸುವುದೂ ಉಂಟು.

ಅತಿಪ್ರಾಚೀನ ಜನರ ನಡವಳಿಕೆಗಳು, ಆದಿಮರ (primitives) ನಂಬಿಕೆಗಳು, ಅತಿಮಾನುಷ-ಅಮಾನುಷ ಸಂಗತಿಗಳ ಬಗೆಗೆ ಪುರಾತನರ ಚಿಂತನೆಗಳು, ಪ್ರಕೃತಿಯಲ್ಲಿನ ಗೋಚರ ಮತ್ತು ಅಗೋಚರ ಶಕ್ತಿಗಳ ಬಗೆಗೆ ಜನಜನಿತ ಅನಿಸಿಕೆಗಳು – ಇವೆಲ್ಲವನ್ನೂ ತಿಳಿಯಲು ಆಯಾ ಜನಾಂಗದ ಪುರಾಣಗಳು ಸಹಾಯಕವಾಗುತ್ತವೆಯೆಂದು ಸಂಸ್ಕೃತಿ ಶಾಸ್ತ್ರಜ್ಞರು (cultural anthropologists) ಅಭಿಪ್ರಾಯಪಟ್ಟರೆ, ಪುರಾಣಗಳು ಒಂದು ಬಗೆಯಲ್ಲಿ ಸಮಷ್ಟಿಯ ಕನಸು, 'ಸಮುದಾಯ ಸುಪ್ತಪ್ರಜ್ಞೆಯ ಪ್ರತೀಕಾತ್ಮಕ (symbolic) ಅಭಿವ್ಯಕ್ತಿ'ಯೆಂದು ಮನೋವಿಜ್ಞಾನಿಗಳು ವಿಶ್ಲೇಷಿಸುತ್ತಾರೆ. ಆಧುನಿಕ ಅಧ್ಯಯನಗಳ ಹಿನ್ನೆಲೆಯಲ್ಲಿ ಇಂಗ್ಲಿಷ್‌ನ myth ಎಂಬುದಕ್ಕೆ ಸಂವಾದಿಯಾಗಿ ಪುರಾಣಶಬ್ದವನ್ನು ಬಳಸುವುದು ಈಚೆಗೆ ರೂಢಿಯಾಗುತ್ತಿದೆ. 'Myth is an

ಪುರಾಣಗಳ ಗುಣಲಕ್ಷಣಗಳು ಏನೇ ಇರಲಿ; ಸಾಂಪ್ರದಾಯಿಕವಾದ 'ಅಷ್ಟಾದಶ' ಪುರಾಣಗಳ ವಿಚಾರವು ಪುರೋಹಿತವರ್ಗದ ಕೆಲವೊಂದು ಆಚರಣೆಗಳು ಮತ್ತು ವಿದ್ವಜ್ಜನರ ಜಿಜ್ಞಾಸೆಯ ಹೊರತಾಗಿ ಇತರತ್ರ ಚರ್ಚೆಗೊಳಗಾಗುವುದು ಅಪರೂಪ. ಆದರೆ ಮಹಾಭಾರತ, ರಾಮಾಯಣಗಳಂತಹ ಮಹಾಕಾವ್ಯಗಳು ಮತ್ತಿತರ ಸಾಹಿತ್ಯಕೃತಿಗಳಲ್ಲಿ ಅಂತರ್ಗತವಾಗಿರುವ ಪೌರಾಣಿಕ ಕಲ್ಪನೆಗಳು ಭಾರತದಲ್ಲಿ ಜನಸಾಮಾನ್ಯರ ಜ್ಞಾನಭಂಡಾರದಲ್ಲಿ ಇಂದಿನ ನಮಗೆ ಅಸಂಭಾವ್ಯವೆನಿಸುವ ಆಚರಣೆಗಳು ಮತ್ತು ನಂಬಿಕೆಗಳ ರೂಪದಲ್ಲಿ ಸೇರಿಹೋಗಿವೆ.

ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ

extremely complex cultural reality' ಎನ್ನುತ್ತದೆ, ಬ್ರಿಟಾನಿಯಾ ವಿಶ್ವಕೋಶ.

ಪುರಾಣಗಳೆಂದು ಸಾಮಾನ್ಯವಾಗಿ ಪರಿಗಣಿಸುವ ಗ್ರಂಥಗಳಲ್ಲಿ ವೈದಿಕ ಸಂಸ್ಕೃತಿಯ ಪುರೋಹಿತ ವರ್ಗವಾದ ಬ್ರಾಹ್ಮಣರ ಕರ್ಮಾಚರಣೆಗಳು, ಅವರ ಸಾಮಾಜಿಕ ಮೌಲ್ಯಗಳು ಮತ್ತು ಕ್ಷತ್ರಿಯ ವರ್ಗದವರಾದ ರಾಜರು, ಸೇನಾಪತಿಗಳ ಶೌರ್ಯಸಾಹಸಗಳು ಹಾಗೂ ಅವರ ಸಾಮಾಜಿಕ ಮೌಲ್ಯಗಳು ಬಿಂಬಿತವಾಗಿರುತ್ತವೆ. ಬ್ರಾಹ್ಮಣ ಮತ್ತು ಕ್ಷತ್ರಿಯರೆಂಬ ಈ ಎರಡು ವರ್ಗಗಳ ಮೌಲ್ಯಗಳು ಸದಾಕಾಲ ಒಂದೇ ರೀತಿಯಾಗಿರಲಿಲ್ಲ ವೆಂಬುದು ಗಮನಿಸಬೇಕಾದ ಸಂಗತಿ. ಮೂಲದಿಂದಲೂ ಇವು ಎರಡು ಪ್ರತ್ಯೇಕ ಮೌಖಿಕ ಸಂಪ್ರದಾಯ ಗಳಾಗಿದ್ದು, ಬ್ರಾಹ್ಮಣರು ಮತ್ತು ಕ್ಷತ್ರಿಯರು ತಮ್ಮ ತಮ್ಮ ವರ್ಗಗಳನ್ನು ಸಂಬೋಧಿಸಿ ಮಾತಾಡುತ್ತಿದ್ದರೆ ಅಥವಾ ಉಭಯ ಸಂಪ್ರದಾಯಗಳಿಗೂ ಮೂಲವಾದ ಅಂಗಾಂಶಗಳನ್ನು ಒಳಗೊಂಡ ಒಂದೇ ಸಂಯುಕ್ತ ಸಮಾಜವಿದ್ದಿತೆ ಎಂಬುದು ಸ್ಪಷ್ಟವಿಲ್ಲ. ಬಹುಶಃ ಮೂಲದಿಂದ ಇವು ತೀರ ಪ್ರತ್ಯೇಕವಿದ್ದಿರಲಾರವು. ಪುರಾಣ ಕತೆಗಳು ಸಂಪೂರ್ಣವಾಗಿ ಪ್ರತ್ಯೇಕವಲ್ಲದ ಆದರೆ ಎರಡು ವಿಭಿನ್ನ ಮೌಖಿಕ ಸಂಪ್ರದಾಯಗಳ ಬೆಸುಗೆಯನ್ನು ಪ್ರತಿನಿಧಿಸುವಂತೆ ತೋರುತ್ತದೆ. ವೇದ ಪಾಠಕರಿಂದ ಪ್ರಚಲಿತವಾಗಿದ್ದ ಬ್ರಾಹ್ಮಣ ಪುರೋಹಿತ ವರ್ಗದ ಸಂಪ್ರದಾಯಗಳು ಮತ್ತು ಸೂತರು ಪಠಿಸುತ್ತಿದ್ದ 'ಚಾರಣ ಕಾವ್ಯ'ದ ಮೂಲಕ ಹರಿದುಬಂದ ಕ್ಷತ್ರಿಯ ಸಂಪ್ರದಾಯಗಳು ಇವೇ ಆ ಎರಡು ಸಂಪ್ರದಾಯಗಳು. ಈ ಎರಡೂ ಪರಂಪರೆಗಳು ಸಾಕಷ್ಟು ಪ್ರಾಚೀನವಾದುವೇ ಸರಿ.

ಪುರಾಣಗಳಲ್ಲಿ ನಿರೂಪಿತವಾಗಿರುವ ಪ್ರಾಚೀನ ಕತೆಗಳು ಮೇಲೆ ಪ್ರಸ್ತಾಪಿಸಿದ ಎರಡು ಸಂಪ್ರದಾಯ ಗಳಿಂದ ಬಂದಿವೆಯೆನ್ನುವುದಾದರೆ ಅವುಗಳನ್ನು ಪ್ರಖ್ಯಾತವಾದ ಹದಿನೆಂಟು ಪುರಾಣಗಳಾಗಿ ಸಂಕಲನ ಮಾಡಿದ ಸಂದರ್ಭವಾವುದು, ಎಂಬ ಪ್ರಶ್ನೆ ಏಳುತ್ತದೆ. ಮಹಾಭಾರತ ಯುದ್ಧವು ದಾಖಲೆಯಾದ ಸಂದರ್ಭದಲ್ಲಿ ಅಂದರೆ ಕ್ರಿ. ಶ. ಸುಮಾರು ೧೦೦೦ದಲ್ಲಿ ಇಂಥ ಸಂಕಲನವೊಂದಕ್ಕೆ ಮೊದಲ ಪ್ರಚೋದನೆಯೊದಗಿರ ಬೇಕು. ಏಕೆಂದರೆ, ಈ ಯುದ್ಧದ ತರುವಾಯವೇ ಮಹಾಭಾರತವು ಒಂದು 'ಪುರಾಣ ಕಾವ್ಯ'ವಾಗಿಯೂ ರೂಪತಾಳಿತು. ಪುರಾಣಗಳಲ್ಲಿ ದಾಖಲಾಗಿರುವ ವಂಶಾನುಕ್ರಮಣಿಕೆಯು ಈ ಕಾಲದಲ್ಲಿ ಮೂಲ ಪುರಾಣಗಳು ಸಂಕಲನಗೊಂಡುದನ್ನು ಸಮರ್ಥಿಸುತ್ತದೆ. ಉತ್ತರ ಭರತಖಂಡದ ಸಂಸ್ಕೃತ ಭಾಷಿಕರ ಮೊಟ್ಟ ಮೊದಲ ಸ್ವಯಂ ಸ್ಪಷ್ಟೀಕರಣ (self-definition) ಪ್ರಯತ್ನ ಇದಾಗಿತ್ತು. ಅಂದರೆ ಮಹಾಯುದ್ಧದ ಕಥೆಯೊಂದರ ಮೂಲಕ ಆ ಜನಾಂಗ ಜೀವನದ ಮೂಲಸೂತ್ರಗಳು, ಮೌಲ್ಯಗಳು ಸಾಹಿತ್ಯಕ ಅಭಿವ್ಯಕ್ತಿ ಯನ್ನು ಪಡೆದವು, ಇತಿಹಾಸದಂತೆ ದಾಖಲಾದವು. ಹೀಗೆ ತಮ್ಮ ಇತಿಹಾಸವನ್ನು ಸ್ಮರಿಸಿಕೊಳ್ಳುವುದು ಮತ್ತು ದಾಖಲಿಸುವುದೆಂದರೆ, ಒಂದು ವಿಶಿಷ್ಟ ಜನಾಂಗವಾಗಿ ತಮ್ಮ ಸಾಂಸ್ಕೃತಿಕ ಅಸ್ಮಿತೆ, ಅಹಮಿಕೆಗಳನ್ನು ಮತ್ತು ಐಕ್ಯತೆಯನ್ನು ಸ್ಥಾಪಿಸಿಕೊಂಡಂತೆ ಆಗುತ್ತದೆ.

ಈಗ ಲಭ್ಯವಿರುವ ರೂಪದಲ್ಲಿ ಸ್ವಯಂ ಮಹಾಭಾರತವು ಪುರಾಣಗಳ ಹಲವು ಲಕ್ಷಣಗಳನ್ನೊಳ ಗೊಂಡಿದೆಯಾದರೂ ಅದನ್ನು 'ಇತಿಹಾಸ ಕಾವ್ಯ' ಅಥವಾ ಘಟನೆಗಳ ನಿರೂಪಣೆಯೆಂದು ಪರಿಗಣಿಸು ವುದು ರೂಢಿಯಾಗಿದೆ. ಈ ವಿಂಗಡಣೆ ಕೂಡ ಅಸ್ಪುಟವಾದುದು; ಏಕೆಂದರೆ ಮಹಾಭಾರತವನ್ನು 'ಇತಿಹಾಸ ಪುರಾಣ'ವೆಂದು ಹೆಸರಿಸಲಾಗಿದೆಯಲ್ಲದೆ ಉಪನಿಷತ್ತುಗಳು ಅದನ್ನು 'ಪಂಚಮವೇದ'ವೆಂದು ಪರಿಗಣಿಸಿವೆ (Cornelia Dimitt & J.A.B. Van Buitenew - Ed. and Tr. 1978-Classical Hindu Mythology-p.3). ಮಹಾಭಾರತ ಕಥೆಗೆ ಪೂರಕವಾಗಿ ಬಂದಿರುವ, ಶ್ರೀಕೃಷ್ಣ ಮತ್ತು ಅವನ ಕೌಟುಂಬಿಕ ವ್ಯವಹಾರಗಳನ್ನು ಚಿತ್ರಿಸುವ, 'ಹರಿವಂಶ' (ಅಥವಾ 'ಹರಿವಂಶಪುರಾಣ')ವು ಪುರಾಣ ಮತ್ತು ಇತಿಹಾಸಗಳು ಸಂಗಮಿಸುವ ಸಂಧಿಕಾಲವನ್ನು ಪ್ರತಿನಿಧಿ ಸುತ್ತದೆಯೆನ್ನಬಹುದು. ಮಹಾಭಾರತವನ್ನು ಪುರಾಣ ವೆಂದೂ, ಇತಿಹಾಸವೆಂದೂ ಭಾವಿಸುವುದುಂಟು. ಇಲ್ಲಿ 'ಇತಿಹಾಸ' ಎಂದರೆ, (ಇತಿ+ಹ+ಆಸ) ಹೀಗೆ ಇತ್ತಂತೆ, ಹೀಗೆ ನಡೆಯಿತಂತೆ ಎಂದು ಹೇಳುವ ಗ್ರಂಥ; ಹಿಂದಿನ ಚರಿತ್ರೆ. ಆದರೆ, ಈಗಿನ ಕಾಲದಲ್ಲಿ ನಮಗೆ ಪರಿಚಿತ ವಾಗಿರುವಂಥ, ಘಟನೆಗಳನ್ನು ಆಧರಿಸಿದ ಚರಿತ್ರೆಯಲ್ಲ, ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಅದರ ಲಕ್ಷಣವನ್ನು ಹೇಳಿರುವುದು ಹೀಗೆ: ಪುರಾಣಂ ಇತಿವೃತ್ತಂ ಆಖ್ಯಾಯಿಕೋದಾಹರಣಂ ಧರ್ಮಶಾಸ್ತ್ರಂ ಅರ್ಥಶಾಸ್ತ್ರಂ ಚೇತಿಹಾಸಃ। (೧.೫.೧೪). ಎಂದರೆ, ಇತಿಹಾಸದಲ್ಲಿ ಪುರಾಣ, ಚರಿತ್ರೆ, ಕಥೆ ಉದಾಹರಣೆ, ಧರ್ಮಶಾಸ್ತ್ರ, ಅರ್ಥಶಾಸ್ತ್ರ ಎಲ್ಲವೂ ಸೇರುತ್ತವೆ ಎಂದು ಅರ್ಥ. (ಎ. ಆರ್. ಕೃಷ್ಣಶಾಸ್ತ್ರೀ – ವಚನಭಾರತ, ೧೯೭೧, ಪೀಠಿಕೆ ಪು. ೩೬).

ಅಂದರೆ ಪುರಾಣ, ಇತಿಹಾಸ, ಧರ್ಮಶಾಸ್ತ್ರಗಳನ್ನು ಮಿಶ್ರಮಾಡುವುದು ಮತ್ತು ಅವುಗಳ ಪರಸ್ಪರ ಅಂತರ ವನ್ನು ಅಲಕ್ಷಿಸುವುದು ನಮ್ಮ ಪೂರ್ವಸೂರಿಗಳಿಂದಲೆ ಬಂದ ಕೊಡುಗೆಯಾಗಿದೆ.

> ಪರಂಪರಾಗತ ಪುರಾಣಗಳಲ್ಲಿನ ಅಸಾಧಾರಣ ಸಂದರ್ಭಗಳು ಐತಿಹಾಸಿಕ ಸತ್ಯವೆಂದು ಸಾರಿ ಹೇಳುವ ಮೂಲಕ ಒಂದು ಜನಾಂಗವು ತನ್ನ ಅಸ್ಮಿತೆಯನ್ನು ದೃಢೀಕರಿಸಿಕೊಳ್ಳಲು ಪೂರ್ವಕಾಲದ ಔನ್ನತ್ಯ, ವೈಶಾಲ್ಯಗಳನ್ನು ಖಚಿತಗೊಳಿಸಲು ಪ್ರಯತ್ನಿಸುತ್ತದೆಯೆಂಬ ಮಾತಿದೆ. ಇಪ್ಪತ್ತನೆ ಶತಮಾನದ ಉತ್ತರಾರ್ಧದಲ್ಲಿ ಭಾರತ ಜನಸಮುದಾಯದಲ್ಲಿನ ಒಂದು ವರ್ಗಕ್ಕೆ ಪ್ರಾಚೀನ ಪರಂಪರೆಯ ಹಿರಿಮೆಗರಿಮೆಗಳನ್ನು ಜಾಹೀರಾತು ಗೊಳಿಸುವ ಅಗತ್ಯ ತಲೆದೋರಿದಂತೆ ಕಾಣುತ್ತದೆ. ಕೆಲವೊಂದು ರಾಜಕೀಯ ಮಹತ್ವಾಕಾಂಕ್ಷೆಗಳು ಇಂತಹ ಪ್ರಯತ್ನಕ್ಕೆ ಮೂಲಪ್ರೇರಣೆಯಾಗಿರಬಹುದು.

– ಹೀಗೆ ವ್ಯಾಸಭಾರತವೆಂಬ ಹೆಸರಿನಿಂದ ಈಗ ನಮಗೆ ಪರಿಚಿತವಾಗಿರುವ ಕೃತಿಯಲ್ಲಿಯೆ ತೊಡಗಿ ಕೊಂಡಿದ್ದ ಪುರಾಣ ಇತಿಹಾಸಗಳ ಸಂಮಿಶ್ರಣವು ಕನ್ನಡದ ಮಟ್ಟಿಗೆ ಒಂದು ಸ್ಪಷ್ಟರೂಪ ತಾಳಿದುದು ಹತ್ತನೇ ಶತಮಾನದ ರಾಜಾಶ್ರಯದಲ್ಲಿದ್ದ ಹಿರಿಯ ಕವಿಗಳಿಂದ.

ಆದಿಕವಿ ಪಂಪನು ವ್ಯಾಸಭಾರತ ಕಥೆಯನ್ನು ಸಂಗ್ರಹಿಸಿ ಕನ್ನಡದಲ್ಲಿ ಪುನರ್‌ರಚಿಸುವಾಗ ತನ್ನ ಉದ್ದೇಶಕ್ಕೆ ತಕ್ಕಂತೆ ಅದನ್ನು ಸಾಕಷ್ಟು ಮಾರ್ಪಡಿಸಿ 'ವಿಕ್ರಮಾರ್ಜುನ ವಿಜಯ'ವಾಗಿಸಿದ್ದಾನೆ. ತನ್ನ ಆಶ್ರಯದಾತನಾದ ಚಾಲುಕ್ಯರ ಎರಡನೇ ಅರಿಕೇಸರಿಯನ್ನು ಕೀರ್ತಿಸುವುದು ಅವನ ಕಾವ್ಯರಚನೆಯ ಉದ್ದೇಶವಾಗಿತ್ತು. ಪೀಠಿಕಾ ಪದ್ಯಗಳಲ್ಲಿಯೇ ಅರಿಕೇಸರಿಯ ವಂಶಾವಳಿಯನ್ನು, ಅವನ ಶೌರ್ಯಸಾಹಸಗಳನ್ನು ಕೊಂಡಾಡಿ ಆತನನ್ನು ಮಹಾಭಾರತದ ಅರ್ಜುನನೊಡನೆ ಸಮನ್ವಯ ಗೊಳಿಸಿದ್ದಾನೆ. ಅಲ್ಲದೆ ಅರಿಕೇಸರಿ ಅಥವಾ ಅರ್ಜುನನೇ ಪಂಪಭಾರತದ ನಾಯಕ. ವಿಕ್ರಮಾರ್ಜುನ ವಿಜಯ ವೆಂದರೆ ಅರ್ಜುನನ ವಿಜಯವೇ. ಅರಿಕೇಸರಿಯ ಬಿರುದು ಬಾವಲಿಗಳೆಲ್ಲ ಅರ್ಜುನನಿಗೂ ಅಂಟಿ ಕೊಂಡಿವೆ. ಅರ್ಜುನನೂ ಅರಿಕೇಸರಿಯಂತೆ 'ಸಾಮಂತ ಚೂಡಾಮಣಿ'ಯಾಗಿದ್ದಾನೆ. ಪಂಚಪಾಂಡವರ ಪತ್ನಿ ಆದ ದ್ರೌಪದಿಯು ಇಲ್ಲಿ ಅರ್ಜುನನಿಗೆ ಮಾತ್ರ ಹೆಂಡತಿಯಾಗಿದ್ದಾಳೆ; ಅವಳು ಪಾಂಡವರೊಡನೆ ವನವಾಸ ಅಜ್ಞಾತವಾಸಗಳ ನಾನಾ ಬಗೆಯ ಸಂಕಟ ಗಳನ್ನನುಭವಿಸುತ್ತಾಳೆ. ಭಾರತಯುದ್ಧದಲ್ಲಿ ಭೀಮಸೇನ ನಿಂದ ದುಶ್ಯಾಸನ ದುರ್ಯೋಧನಾದಿಗಳು ಹತರಾಗಿ ಪಾಂಡವರು ಜಯಶಾಲಿಗಳಾದ ಅನಂತರ ರಾಜ ಮುಕುಟವನ್ನು ಧರಿಸಿ ಪಟ್ಟಾಭಿಷಿಕ್ತನಾಗುವವನು ಅರ್ಜುನ! ಅವನೊಡನೆ ಪಟ್ಟ ಮಹಿಷಿಯ ಪದವಿ ಗೇರುವವಳು, ಈವರೆಗೆ ತೌರುಮನೆಯಲ್ಲಿ ಹಾಯಾಗಿ ಕುಳಿತಿದ್ದ, ಅರ್ಜುನನ ಎರಡನೆಯ ಹೆಂಡತಿ ಸುಭದ್ರೆ! ಹೀಗೆ ಪಂಪನ ಕೈವಾಡದಿಂದ ಮಹಾಭಾರತ ಕಥೆಯು ಹತ್ತನೇ ಶತಮಾನದ ರಾಜಕೀಯ ಸನ್ನಿವೇಶಗಳನ್ನು ಗರ್ಭೀಕರಿಸಿಕೊಂಡಿದೆ. ಕವಿಯ ರಾಜಭಕ್ತಿ ಮತ್ತು ತತ್ಕಾಲೀನ ರಾಜಕೀಯ ಧ್ವನಿಯಿಂದ ಕಾವ್ಯ ರಚನೆಯಲ್ಲಿ ಉಂಟಾಗಿರುವ ಅನೌಚಿತ್ಯಗಳನ್ನು ವಿಮರ್ಶಕರು ವಿವರವಾಗಿ ಚರ್ಚಿಸಿದ್ದಾರೆ. ಆ ಚರ್ಚೆ ಇಲ್ಲಿ ಅಪ್ರಸ್ತುತ.

ಕೃತಿ ರಚನೆಯಲ್ಲಿ ಪಂಪಕವಿಯ ಮಾರ್ಗವನ್ನೇ ಅನುಸರಿಸಿದ ರನ್ನ ಕವಿಯು ತನ್ನ ಆಶ್ರಯದಾತನೂ ತೈಲಪ ಚಕ್ರವರ್ತಿಯೂ ಆದ ಸತ್ಯಾಶ್ರಯ ಅಥವಾ ಇಱಿವ ಬೆಡಂಗನನ್ನು ಕಾವ್ಯದ ನಾಯಕನನ್ನಾಗಿ ಮಾಡಿ ಕೊಂಡು 'ಸಾಹಸಭೀಮವಿಜಯ' (ಗದಾಯುದ್ಧ) ವೆಂಬ ಚಂಪೂ ಕೃತಿಯನ್ನು ರಚಿಸಿದ್ದಾನೆ. ಪಂಪನು ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿ, ಕೀರ್ತಿಸಿ ದಂತೆಯೇ ರನ್ನನು ಸತ್ಯಾಶ್ರಯನನ್ನು ಮಹಾಭಾರತದ ಭೀಮಸೇನನೊಡನೆ ಸಮನ್ವಯಗೊಳಿಸಿದ್ದಾನೆ. ಪಂಪನು ಕಡೆಯಲ್ಲಿ ಅರ್ಜುನನಿಗೆ ರಾಜ್ಯದ ಪಟ್ಟಾಭಿಷೇಕ ಮಾಡಿಸಿದರೆ ರನ್ನನು ಭೀಮನಿಗೆ ಪಟ್ಟಗಟ್ಟಿದ್ದಾನೆ; ಭೀಮನಿಗೆ ಸಲ್ಲದ ವಂಶಾವಳಿಯನ್ನು ಅವನಿಗೆ

ಆರೋಪಿಸಿದ್ದಾನೆ. ಹೀಗೆ ಪುರಾಣ ಪುರುಷರಿಗೂ ಚಾರಿತ್ರಿಕ ಪುರುಷರಿಗೂ ಅಭೇದ ಕಲ್ಪನೆ ಮಾಡಿರುವ ಸಾಹಿತ್ಯ ಕೃತಿಗಳು ಇನ್ನಿತರ ಭಾಷೆಗಳಲ್ಲಿಯೂ ಇರಬಹುದೇನೋ!

ಏನೇ ಇರಲಿ; ಕಾಲದ ದೃಷ್ಟಿಯಿಂದ ನಮಗೆ ಬಹುದೂರದ್ದೆನಿಸುವ ಇಂತಹ ಕೃತಿಗಳು ಇಂದು ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಮಾತ್ರ ಪ್ರಸ್ತುತವೆನಿಸಬಹುದು. ಆದರೆ, ಸಮಕಾಲೀನ ಬರವಣಿಗೆಯ ವಿಚಾರ ಹಾಗಲ್ಲ. ಪೌರಾಣಿಕ ಸಂದರ್ಭಗಳನ್ನು ಐತಿಹಾಸಿಕವೆಂಬಂತೆ ವ್ಯಾಖ್ಯಾನಿಸುವುದು ಮತ್ತು ತಮ್ಮದೇ ವ್ಯಾಖ್ಯಾನವನ್ನು ಆಧರಿಸಿ ಕೃತಿರಚನೆ ಮಾಡುವುದು ಇಂದಿನ ಸಾಮಾಜಿಕ, ರಾಜಕೀಯ ಸ್ಥಿತಿಗತಿಗಳ ಮೇಲೆ ಪ್ರಭಾವ ಬೀರುತ್ತದೆ. ಆದ್ದರಿಂದ ಅವುಗಳನ್ನು ಅಪ್ರಸ್ತುತವೆಂದು ನಿರ್ಲಕ್ಷಿಸಲಾಗುವುದಿಲ್ಲ.

ಮತಧಾರ್ಮಿಕ ನಂಬಿಕೆ, ಶ್ರದ್ಧೆಗಳನ್ನು ಊರ್ಜಿತಗೊಳಿಸಲು ಪುರಾಣಗಳು ಸಹಾಯಕವಾಗುವುದರಿಂದ ಕಾಲಕಾಲಕ್ಕೆ ಪುರಾಣಗಳ ಸಂಕಲನ, ಪುನರ್ ನಿರ್ಮಾಣಗಳು ನಡೆಯುತ್ತಿರುತ್ತವೆ. ವೈದಿಕ ಪುರಾಣಗಳಲ್ಲಿ ಬರುವ ವಂಶಾನುಕ್ರಮಣಿಕೆಯ ಆಧಾರದಿಂದ ಹೇಳುವುದಾದರೆ, ಗುಪ್ತ ಚಕ್ರವರ್ತಿಗಳ ಆಳ್ವಿಕೆಯಲ್ಲಿ ಅಂದರೆ, ಕ್ರಿ. ಶ. ೪-೬ನೆಯ ಶತಮಾನಗಳಲ್ಲಿ ಪುರಾಣಗಳು ಮತ್ತೊಮ್ಮೆ ಸಂಕಲನಗೊಂಡಂತೆ ತಿಳಿದುಬರುತ್ತದೆ. ಈ ಕಾಲವನ್ನು 'ಹಿಂದುಧರ್ಮದ ಪುನರುಜ್ಜೀವನಕಾಲ' ಎಂದು ಕರೆದಿರುವುದು ಯಥೋಚಿತವಾಗಿದೆ. ಏಕೆಂದರೆ ಸುಮಾರು ಸಾವಿರ ವರ್ಷಗಳಿಂದ ತೀವ್ರವಾಗಿ ಕ್ಷೀಣಿಸುತ್ತ ಬಂದಿದ್ದ ಬ್ರಾಹ್ಮಣ ವರ್ಗದ ಆಚಾರಗಳು (ವೈದಿಕ ಧರ್ಮ) ಮತ್ತು ರಾಜಕೀಯ ಪ್ರಭಾವವನ್ನು ಮತ್ತೊಮ್ಮೆ ಪ್ರತಿಷ್ಠಾಪಿಸಿ ಪುಷ್ಟೀಕರಿಸಿ ಅದಕ್ಕೆ ಹಿಂದುಧರ್ಮ ಎಂಬ ನಾಮಾಂಕಿತವನ್ನು ನೀಡಲಾರಂಭಿಸಿದ್ದು ಈ ಅವಧಿಯಲ್ಲಿ. ವೈದಿಕಧರ್ಮದ ಪ್ರಭಾವ ಮತ್ತು ಬ್ರಾಹ್ಮಣವರ್ಗದ ಪ್ರತಿಷ್ಠೆಯು ಕುಂಠಿತಗೊಳ್ಳಲು ಹಲವು ಕಾರಣಗಳಿರಬಹುದಾದರೂ ಅವುಗಳ ಪೈಕಿ ಪ್ರಭುತ್ವದಿಂದ ಬೌದ್ಧಧರ್ಮಕ್ಕೆ ದೊರೆತ ಪ್ರೋತ್ಸಾಹ ಮತ್ತು ವಿದೇಶೀ ಬಣಗಳ ದಂಡಯಾತ್ರೆ ಇವು ಮುಖ್ಯವಾದವು. ರಾಜ್ಯಗಳನ್ನು ಆಕ್ರಮಿಸಿ, ಆಡಳಿತ ನಿರ್ವಹಿಸತೊಡಗಿದ ವಿದೇಶೀ ಬಣಗಳಾದ ಹೂಣರು ಶಕರು ಮೊದಲಾದವರನ್ನು ಹಿಂದುಧರ್ಮದ ಕಕ್ಷೆಯೊಳಗೆ ತಂದುಕೊಳ್ಳುವ ಸಲುವಾಗಿ ಪರಂಪರಾಗತ ಚಾತುರ್ವರ್ಣ್ಯದ, ಅದರಲ್ಲಿಯೂ ಕ್ಷತ್ರಿಯವರ್ಣದ ವ್ಯಾಪ್ತಿಯನ್ನು ಹಿಗ್ಗಿಸಿ 'ಅಗ್ನಿಕುಲ' ಕ್ಷತ್ರಿಯರು, ಸೂರ್ಯಕುಲ ಕ್ಷತ್ರಿಯರು ಮೊದಲಾದ ಕ್ಷತ್ರಿಯ ವರ್ಗಗಳನ್ನು ಕಲ್ಪಿಸಲಾಯಿತು. ಇದೇ ಸಂದರ್ಭದಲ್ಲಿ ಗುಪ್ತವಂಶವು ಹಿಂದುಧರ್ಮದ ಪ್ರಾಧಾನ್ಯವನ್ನು ಪ್ರತಿಷ್ಠಾಪಿಸಲು, ಪುರೋಹಿತವರ್ಗದ ನೆರವಿನಿಂದ ಹಲವು ಸುಧಾರಣೆಗಳನ್ನು ಅಳವಡಿಸಿತು. ಇಂಥ ಸಮನ್ವಯ ಸುಧಾರಣೆಗಳಲ್ಲಿ ಚಾರಿತ್ರಿಕ ಪುರುಷರನ್ನು ಪುರಾಣದ ಕತೆಗಳಲ್ಲಿ ಅಂತರ್ಗತಗೊಳಿಸಿದುದು ಕೂಡ ಒಂದು. ಭರತಖಂಡದಲ್ಲಿ ಹುಟ್ಟಿ ಬೌದ್ಧ ಮತ ಸ್ಥಾಪಕನಾದ ಶಾಕ್ಯ ರಾಜಕುಮಾರ ಸಿದ್ಧಾರ್ಥನು ಹಿಂದು ಪುರಾಣಗಳ ದಶಾವತಾರಗಳ ಪೈಕಿ ಮಹಾವಿಷ್ಣುವಿನ ಒಂಬತ್ತನೆಯ ಅವತಾರ ಪುರುಷನಾದ ಕತೆ ಕುತೂಹಲಕಾರಿಯಾಗಿದೆ.

ಕ್ರಿ. ಪೂ. ೫೬೦ರಲ್ಲಿ ಹಿಮಾಲಯ ತಪ್ಪಲಿನ ಕಪಿಲವಸ್ತು ಎಂಬ ನಗರದಲ್ಲಿ ಶುದ್ಧೋದನನೆಂಬ ರಾಜನ ಮಗನಾಗಿ ಹುಟ್ಟಿ, ಚಿಕ್ಕಂದಿನಲ್ಲೆ ಸಂಸಾರ ಜೀವನವನ್ನು ತ್ಯಜಿಸಿ, ದೀರ್ಘಕಾಲ ತಪೋನಿರತನಾಗಿದ್ದು ಜ್ಞಾನೋದಯ ಪಡೆದು (ಬುದ್ಧನಾಗಿ), ಬೌದ್ಧಮತವನ್ನು ಸ್ಥಾಪಿಸಿ ತನ್ನ ಎಂಬತ್ತನೆ ವಯಸ್ಸಿನಲ್ಲಿ ಅಸುನೀಗಿದನೆಂಬ ವ್ಯಕ್ತಿಯ ವಿವರಗಳು ಇತಿಹಾಸದಲ್ಲಿ ದಾಖಲಾಗಿರುವುದು ಎಲ್ಲರಿಗೂ ಗೊತ್ತಿರುವ ಸಂಗತಿ. ಈ ಸಂಗತಿಗೆ ಪೂರಕವಾದ (ಅಥವಾ ಅದನ್ನು ತಿದ್ದಿದ) ಕಥೆಯೊಂದು ಅಗ್ನಿಪುರಾಣ (ಅಧ್ಯಾಯ ೧೬)ದಲ್ಲಿ ಬರುತ್ತದೆ.

ದೇವಾಸುರ ಯುದ್ಧದಲ್ಲಿ ಅಸುರರಿಂದ ಸೋಲಿಸಲ್ಪಟ್ಟ ದೇವತೆಗಳು ಮಹಾವಿಷ್ಣುವಿನ ಬಳಿಗೆ ಬಂದು ತಮ್ಮ ಅಳಲನ್ನು ತೋಡಿಕೊಳ್ಳುತ್ತಾರೆ. ಆಗ ಮಹಾವಿಷ್ಣುವು ಭೂಮಿಯ ಮೇಲೆ ಮನುಷ್ಯಾವತಾರದಲ್ಲಿ ಜನಿಸಿ ದೇವತೆಗಳ ಸಂಕಟವನ್ನು ಪರಿಹರಿಸುವುದಾಗಿ ಭರವಸೆ ಕೊಡುತ್ತಾನೆ. ಅದರಂತೆ ಕಪಿಲವಸ್ತುವಿನ ಶುದ್ಧೋದನ ಮಹಾರಾಜನ ಮಗನಾಗಿ ಹುಟ್ಟಿ ಗೌತಮಬುದ್ಧ (ಸಿದ್ಧಾರ್ಥ)ನೆಂಬ ಹೆಸರು ತಾಳಿದನು. ಆಮೇಲೆ ಇವನು ಅಸುರರ ಬಳಿಗೆ ಹೋಗಿ ವೈದಿಕ ಮತಧರ್ಮವನ್ನು ತಿರಸ್ಕರಿಸುವಂತೆಯೂ ವೇದಗಳನ್ನೂ ಅಲ್ಲಿನ ಆಚರಣೆಗಳನ್ನೂ

ಅನುಸರಿಸದಂತೆಯೂ ಬೋಧಿಸಿದನು. ಆಗ ಅಸುರರೆಲ್ಲರೂ 'ವೇದ ವಿರೋಧಿಗಳಾದ ಬೌದ್ಧ'ರಾದರು. ಹೀಗೆ ಪ್ರತಿಯೊಬ್ಬ ಅಸುರನೂ 'ಬುದ್ಧ'ನಾದ ಮೇಲೆ ಅವರನ್ನೆಲ್ಲ ನರಕಕ್ಕೆ ಕಳಿಸಿದನು; ಬೌದ್ಧ ಮತವನ್ನು ಸ್ಥಾಪಿಸಿದನು (ಉಲ್ಲೇಖ – Puranic Encyclopaedia - Vettammani -1993). ಹೀಗೆ ಅಸುರರನ್ನು (ಬುದ್ಧ ಮತಾನುಯಾಯಿಗಳನ್ನು) ನರಕಕ್ಕೆ ಕಳುಹಿಸುವುದೇ ಗೌತಮಬುದ್ಧನ ಅವತಾರ ಮತ್ತು ಬೌದ್ಧಿಕ ಮತಸ್ಥಾಪನೆಯ ಕಾರಣ ಮತ್ತು ಉದ್ದೇಶವಾಗಿತ್ತು – ಎನ್ನುತ್ತದೆ ಪುರಾಣಕತೆ!

ಪ್ರಾಚೀನ ಕಾಲಗಳಲ್ಲಿ ಹೀಗೆ ಪುರಾಣಕತೆಗಳನ್ನು ತಮ್ಮ ತಮ್ಮ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ಪುನರ್ನಿರ್ಮಾಣ ಮಾಡುತ್ತಿದ್ದಿರಬಹುದು. ಆದರೆ ಆಧುನಿಕ ಕಾಲದಲ್ಲಿ ಪರಂಪರಾಗತ ಪುರಾಣಗಳನ್ನು ತಿದ್ದುವುದಕ್ಕಿಂತ ಹೆಚ್ಚಾಗಿ ಬಗೆಬಗೆಯ ವ್ಯಾಖ್ಯಾನಗಳನ್ನು ಅಳವಡಿಸಿ ಪುರಾಣಕತೆಗಳ ಮೂಲಕವೇ ಈ ಉದ್ದೇಶ ಸಾಧನೆಯ ಪ್ರಯತ್ನ ನಡೆಯುತ್ತಿರುವುದೊಂದು ವಿಶೇಷ.

ಪುರಾಣಗಳ ವ್ಯಾಖ್ಯಾನದ ಸಮಸ್ಯೆ ಪುರಾಣಗಳಷ್ಟೇ ಹಳೆಯದು. ಭರತಖಂಡದಲ್ಲಿ ಪುರಾಣಗಳ ವ್ಯಾಖ್ಯಾನವು ಬಹುಮಟ್ಟಿಗೆ ವೈದಿಕಧರ್ಮದ ವಿವರಣೆಯ ರೂಪದಲ್ಲಿ ಬೆಳೆದುಬಂದಿದೆ. ಪುರಾಣಗಳಲ್ಲಿನ ವಿವಿಧ ಬಗೆಯ ಹೆಸರುಗಳನ್ನು ಮತ್ತು ವಿಶೇಷಣಗಳನ್ನು ನಿರ್ವಚನ ಮಾಡುವುದು 'ನಿರುಕ್ತಿ' ಅಥವಾ 'ನಿರ್ವಚನ' ಮಾರ್ಗ; ಈ ಮಾರ್ಗದ ಅತಿಪ್ರಾಚೀನ ವ್ಯಾಖ್ಯಾನವೆಂದರೆ, ಯಾಸ್ಕರ 'ನಿರುಕ್ತ'. ಇದರಲ್ಲಿ ಅವರು ಪದಗಳಿಗೆ ವೈದಿಕ ಧರ್ಮ ಪರವಾದ ಅರ್ಥ ಮತ್ತು ಅಂದಿನ ಸಂಸ್ಕೃತದಲ್ಲಿ ಸಾಧಾರಣವಾಗಿ ಪ್ರಚಲಿತವಿದ್ದ ಅರ್ಥಗಳೆರಡನ್ನೂ ಕೊಟ್ಟಿದ್ದಾರೆ. ಆದ್ದರಿಂದ ನಿರ್ವಚನವು ಕೆಲವು ಬಾರಿ 'ಶಬ್ದಾನುಸಾರಿ'ಯಾದರೆ ಮತ್ತೆ ಕೆಲವು ಬಾರಿ 'ಅರ್ಥಾನುಸಾರಿ'ಯಾಗುತ್ತದೆ. ಅಂದಿನ ವೇದ, ಪುರಾಣಗಳ ಸಂಸ್ಕೃತ ಭಾಷೆಯು ಮುಂದಿನ ಕಾಲದ 'ಗ್ರಂಥಸ್ಥ ಸಂಸ್ಕೃತ' ಭಾಷೆಯಾಗುವಲ್ಲಿ ಸಾಕಷ್ಟು ಬದಲಾವಣೆಗಳಾಗಿರುವುದು ಸಹಜ. ಅಲ್ಲದೆ ಶಬ್ದಾರ್ಥಗಳಲ್ಲಿ ಅತ್ಯಂತ ಕುಂಚನಶೀಲ (flexible)ವಾದ ಸಂಸ್ಕೃತ ಭಾಷೆಯನ್ನು ಕಾಲಕಾಲದ ವಿದ್ವಾಂಸರು ತಮ್ಮ ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡು ವ್ಯಾಖ್ಯಾನಿಸುವುದೂ ಉಂಟು.

ಆಧುನಿಕ ಕಾಲದಲ್ಲಿ ಹಲವು ಜ್ಞಾನಶಾಖೆಗಳ ವಿದ್ವಾಂಸರು ಪುರಾಣಗಳನ್ನು ತಮ್ಮ ತಮ್ಮ ನಿಲುವಿನಿಂದ ವ್ಯಾಖ್ಯಾನಿಸುತ್ತಾರೆ. ಸದ್ಯದ ನಮ್ಮ ಚರ್ಚೆಯ ದೃಷ್ಟಿಯಿಂದ ಹಲವು ಬಗೆಯ ವ್ಯಾಖ್ಯಾನಗಳ ಪೈಕಿ 'ಚಾರಿತ್ರಿಕ ಪುರುಷರ ದೈವೀಕರಣ' (euhemerism)ವೆನ್ನುವುದು ಮುಖ್ಯವಾಗುತ್ತದೆ. ಈ ವ್ಯಾಖ್ಯಾನ ಸಿದ್ಧಾಂತವನ್ನು ಮೊದಲು ಪ್ರತಿಪಾದಿಸಿದ ಯಹೆಮರಸ್ (Euhemerous) ಎಂಬಾತನ ಹೆಸರಿನಿಂದ ಈ ಬಗೆಯ ವ್ಯಾಖ್ಯಾನವು ಪ್ರಚಲಿತವಾಗಿದೆ. "ಒಂದಾನೊಂದು ಕಾಲದಲ್ಲಿ ವಾಸ್ತವವಾಗಿಯೂ ಅಸ್ತಿತ್ವದಲ್ಲಿದ್ದ ಚಾರಿತ್ರಿಕ ವ್ಯಕ್ತಿಗಳನ್ನೇ ಕಾರಣಾಂತರಗಳಿಂದ ದೈವತ್ವಕ್ಕೇರಿಸಲಾಗಿದೆ ಮತ್ತು ಚಾರಿತ್ರಿಕ ಸಂಗತಿಗಳನ್ನೇ ದೈವೀಕರಿಸಲಾಗಿದೆ" ಎಂಬುದು ಈ ಬಗೆಯ ವ್ಯಾಖ್ಯಾನದ ಮೂಲಸೂತ್ರ. ಗ್ರೀಕ್ ಪುರಾಣಗಳ ಜ್ಯೂಸ್ (Zeus) ಮೊದಲಾದವರೂ, ಹಿಂದು ಪುರಾಣಗಳ ಇಂದ್ರಾದಿಗಳೂ ಒಂದಾನೊಂದು ಕಾಲದಲ್ಲಿ ಬದುಕಿದ್ದ ಮನುಷ್ಯರೇ ಎಂಬುದು 'ಯುಹೆಮೆರಿಸ್'ವಾದ. ಪುರಾಣಕತೆಗಳಲ್ಲಿ ಉಲ್ಲೇಖಗೊಂಡಿರುವ ಖಗೋಳಶಾಸ್ತ್ರೀಯ ಮತ್ತು ಜ್ಯೋತಿಷ್ಯಶಾಸ್ತ್ರೀಯ ಸಂಗತಿಗಳನ್ನು – ಭೂಕಂಪ, ಜಲಪ್ರಳಯ, ಮರುಭೂಮಿ, ಪರ್ವತಶ್ರೇಣಿಗಳು ಅಸ್ತಿತ್ವಕ್ಕೆ ಬಂದುದು, ಧೂಮಕೇತು, ಗ್ರಹಣ, ಗ್ರಹಕೂಟಗಳು ಇತ್ಯಾದಿ – ಆಧಾರವಾಗಿಟ್ಟುಕೊಂಡು ಇವರು ವ್ಯಕ್ತಿ ಮತ್ತು ಘಟನೆಗಳ ಕಾಲದೇಶಾದಿಗಳನ್ನು ನಿರ್ಣಯಿಸುತ್ತಾರೆ.

ಚರಿತ್ರೆ ಮತ್ತು ಪುರಾಣಗಳ ಸಂಬಂಧವನ್ನು ಮೇಲೆ ಹೇಳಿದ ರೀತಿಗೆ ವಿರುದ್ಧವಾದ ದಿಕ್ಕಿನಿಂದ ನೋಡುವುದೂ ಸಾಧ್ಯ. ಉದಾ: ಪ್ರಾಚೀನ ರೋಮನರ ಅಧಿಕಾರದ ಕಚ್ಚಾಟವು ಅಲ್ಲಿನ ಪುರಾಣಗಳಲ್ಲಿ ಉಲ್ಲೇಖಗೊಂಡಿದೆಯಷ್ಟೆ. ಇದರ ಆಧಾರದ ಮೇಲೆ 'ಜನರು ಮೊದಲು ಪುರಾಣವನ್ನು ಸೃಷ್ಟಿಸಿ ಅನಂತರ ಅದಕ್ಕೆ ಅನುಗುಣವಾಗಿ ಚರಿತ್ರೆಯನ್ನು ಬರೆಯುತ್ತಾರೆ' ಎಂದು ಕೆಲವು ವಿದ್ವಾಂಸರು ವಾದಿಸಿದರು. ಭಾರತೀಯ ಪುರಾಣಗಳಲ್ಲಿ ಬರುವ ಪುಷ್ಪಕವಿಮಾನದ ಕಲ್ಪನೆಯು ಆಧುನಿಕ ವಿಮಾನಯಂತ್ರವು ರೂಪುಗೊಳ್ಳಲು ಕಾರಣವಾಯಿತೆಂಬ ಊಹೆ; ಯಾದವಕೃಷ್ಣನ ವಂಶಸ್ಥರು ಮೈಸೂರು ಅರಸರಾದುದು; ಪಾರ್ವತಿಯ ಅವತಾರವಾದ ದುರ್ಗಾದೇವಿಯು ಚಾಮುಂಡಾಂಬಿಕೆ, ಮಹಿಷಾಸುರ ಮರ್ದಿನಿಯಾಗಿ ಮೈಸೂರು ಅರಸರ ರಕ್ಷಕಿಯಾದದ್ದು – ಇವೆಲ್ಲ ಈ ಮನೋಭಾವಕ್ಕೆ ಉದಾಹರಣೆಗಳಾಗಬಹುದೇನೋ!

ಒಟ್ಟಿನ ಮೇಲೆ ಪುರಾಣ ಮತ್ತು ಇತಿಹಾಸಗಳ ಸಂಬಂಧವು ಹಲವು ಬಗೆಗಳಲ್ಲಿ ತೊಡಗಿಕೊಂಡು ಸತ್ಯಸ್ಥಿತಿಯನ್ನರಿಯಬಯಸುವವರಿಗೆ ಸವಾಲಾಗುತ್ತದೆ ಎಂಬುದಂತೂ ನಿಜ. ಅಲ್ಲದೆ, ಪುರಾಣ ಪುರುಷರನ್ನು ಚಾರಿತ್ರಿಕ ವ್ಯಕ್ತಿಗಳಾಗಿಸಿದರೆ, ಅದೇ ಪುರಾಣ ಕತೆಗಳಲ್ಲಿ ಬರುವ ಹಲವು ಬಗೆಯ ಅತಿಮಾನುಷ ಘಟನೆಗಳನ್ನು ವಿವರಿಸುವುದು ಹೇಗೆ, ಎಂಬ ಪ್ರಶ್ನೆ ಕೂಡ ಉದ್ಭವಿಸುತ್ತದೆಯಷ್ಟೆ.

ಭಾರತೀಯರ ಪವಿತ್ರಗ್ರಂಥವಾದ ರಾಮಾಯಣ ಕತೆಯ ನಾಯಕ ಪಾತ್ರ ಶ್ರೀರಾಮನನ್ನು ಚಾರಿತ್ರಿಕ ಪುರುಷನೆನ್ನುವುದಾದರೆ ಆತನ ಕಾಲದೇಶಾದಿಗಳನ್ನು ನಿರ್ಣಯಿಸುವುದು ಹೇಗೆ? ಪುರಾಣಕತೆಗೆ ಯಾವುದೋ ಒಂದು ರೀತಿಯ ವ್ಯಾಖ್ಯಾನವನ್ನು ಹೊಂದಿಸಿ ಕಾಲ ದೇಶಾದಿಗಳನ್ನು ನಿರ್ಣಯಿಸಿ ಶ್ರೀರಾಮನು ಚಾರಿತ್ರಿಕ ವ್ಯಕ್ತಿಯೆಂದು ಸಾಧಿಸಲಾಯಿತೆನ್ನೋಣ. ಆಗ ಅದೇ ರಾಮಾಯಣದಲ್ಲಿ ಬರುವ ಅತಿಮಾನುಷ ಕಲ್ಪನೆಗಳನ್ನು – ದಶರಥ ಪತ್ನಿಯರು ಋಷಿಗಳು ಕೊಟ್ಟ ಪಾಯಸ ಕುಡಿದದ್ದರಿಂದ (ಅಥವಾ ಹಣ್ಣನ್ನು ಹಂಚಿ ತಿಂದಿದ್ದರಿಂದ) ಶ್ರೀರಾಮಾದಿಗಳು ಜನಿಸಿದ್ದು, ಕಪಿಸೈನ್ಯವು ಸಮುದ್ರಕ್ಕೆ ಸೇತುವೆ ಕಟ್ಟಿದ್ದು, ಸೀತೆಯ ಅಗ್ನಿ ಪ್ರವೇಶ ಇತ್ಯಾದಿ – ವಿವರಿಸುವುದು ಹೇಗೆ? ಇಂತಹ ಸಂದಿಗ್ಧಗಳೊದಗಿದಾಗ ಆಧುನಿಕ ಕೃತಿಕಾರರು ಪುರಾಣಕತೆಗಳನ್ನು ಇಡಿಯಾಗಿ ಸ್ವೀಕರಿಸದೆ ತಮ್ಮ ಅನುಕೂಲಕ್ಕೆ ತಕ್ಕ ಸಂದರ್ಭಗಳನ್ನು ಆರಿಸಿಕೊಂಡು ಹೊಸ ಕತೆ ಕಟ್ಟುತ್ತಾರೆ. ಇಂತಹ ಒಂದೆರಡು ನಿದರ್ಶನಗಳನ್ನು ಈಗ ಪರಿಶೀಲಿಸಬಹುದು.

ಶಂಕರ ಮೊಕಾಶಿ ಪುಣೇಕರ ಅವರು ತಮ್ಮ 'ಅವಧೇಶ್ವರಿ' ಕಾದಂಬರಿಯನ್ನು (ಪ್ರಥಮ ಮುದ್ರಣ ೧೯೮೭, ಗೀತಾ ಬುಕ್ ಹೌಸ್, ಮೈಸೂರು) "ವೇದಕಾಲೀನ ರಾಜಕೀಯ ಕಾದಂಬರಿ" ಎಂದು ಪರಿಚಯಿಸಿದ್ದಾರೆ. ಅಯೋಧ್ಯೆಯ ಪ್ರಾಚೀನ ಹೆಸರು ಅವಧಪುರಿ; ಅಲ್ಲಿಯ ರಾಣಿಯೊಬ್ಬಳ ಅಸಾಧಾರಣ ಚರಿತ್ರೆಯನ್ನು ವರ್ಣಿಸುವುದು ಕಾದಂಬರಿಯ ವಸ್ತು, ವಿನ್ಯಾಸ. ಕತೆಯ ಪ್ರಮುಖ ಪಾತ್ರಗಳಾದ ಪುರಕತ್ಸು, ತ್ರಸದಸ್ಯು, ವೃಶಜಾನ, ಪುರಕುತ್ಸಾನಿ, ಶಂಬರಾಸುರ – ಇವರೆಲ್ಲ ಋಗ್ವೇದದಲ್ಲಿ ಉಲ್ಲೇಖಗೊಂಡವರು ಮತ್ತು ಅಯೋಧ್ಯೆಯ ಶ್ರೀರಾಮನ ೪೨ನೆಯ ತಲೆಮಾರಿನ ಪೂರ್ವಜರು. ತ್ರಸದಸ್ಯು ಮತ್ತು ವೃಶಜಾನರ ವಿರಸದ ಪ್ರಸಂಗವು 'ಬೃಹದ್ದೇವತಾ'ದ ಹತ್ತು ಹನ್ನೆರಡು ಶ್ಲೋಕಗಳಲ್ಲಿ ಬಂದಿದೆ.

ವೇದ ಪುರಾಣಗಳ ಆಧಾರದ ಜೊತೆಗೆ ಲೇಖಕರು ತಮ್ಮದೇ ಆದ ಸಂಶೋಧನೆಯನ್ನು ಬಳಸಿಕೊಂಡಿದ್ದಾರೆ. ಈ ಸಂಶೋಧಕರ ಪ್ರಕಾರ ಸಂಸ್ಕೃತಕ್ಕಿಂತಲೂ ಮುಂಚಿತವಾಗಿ 'ಅಕ್ಷಪಾದ' ಎಂಬ ಲಿಪಿಯು (ಅರಾಬಿಕ್‌ನ ಹಾಗೆ ಬಲದಿಂದ ಎಡಕ್ಕೆ ಬರೆಯುವಂಥದು) ಅಭಿವೃದ್ಧಿಗೊಂಡಿತ್ತು; ಮತ್ತು ಹರಪ್ಪ, ಮೊಹೆಂಜೊದಾರೊಗಳ ಭೂಶೋಧನೆಯಿಂದ ದೊರೆತ ಮುದ್ರಿಕೆ (seal - ಸೀಲು)ಗಳ ಮೇಲಿರುವುದು ಈ ಅಕ್ಷಪಾದಲಿಪಿ. ಅಕ್ಷಪಾದ ಲಿಪಿಯನ್ನು ಕಲಿತು ಸುಮಾರು ೧೦೦ ಮೊಹೆಂಜೊದಾರೊ ಸೀಲುಗಳನ್ನು ಓದಿದರೆನ್ನಲಾದ ವಿದ್ವಾಂಸರು ತಲುಪಿರುವ ತೀರ್ಮಾನಗಳನ್ನು ಹೀಗೆ ಸಂಗ್ರಹಿಸಬಹುದು: "ಆರ್ಯರು ಖೈಬರ್ ಕಣಿವೆಯ ಮೂಲಕ ಭಾರತಕ್ಕೆ ಬಂದರೆಂಬ ಅಭಿಪ್ರಾಯವು ಕೇವಲ ಭಾಷಾಶಾಸ್ತ್ರದ ಆಧಾರದಿಂದ ಜರ್ಮನ್-ಇಂಗ್ಲಿಷ್ ವಿದ್ವಾಂಸರು ಹುಟ್ಟಿಸಿದ ದಿವ್ಯಭ್ರಮೆ. ಹರಪ್ಪನ್ ಸೀಲುಗಳಲ್ಲಿ ಅನೇಕ ಋಗ್ವೇದಕಾರರ ಹೆಸರು ಬಂದಿದೆ; ವೇದಗಳಲ್ಲಿ ಬಂದ ರಾಜರ ಹೆಸರೆಲ್ಲ ಇಸ್ಲಾಂಪೂರ್ವದ ಮಧ್ಯಪ್ರಾಚ್ಯದಲ್ಲೂ ಇವೆ. ಉದಾ: ಇಕ್ಷ್ವಾಕು (ಇಸಾಕ), ಪುರುಕತ್ಸ (ಫರೂಕ), ತ್ರಸದಸ್ಯು (ತಾಸೀಫ), ನಾಭಾನೇದಿಷ್ಟ (ನೆಬುಚೆಡ್‌ನಝರ), ನರಸಿಂಹ (Naran - Sin, ಬ್ಯಾಬಿಲೋನದ ರಾಜ) ಇತ್ಯಾದಿ. ಒಂದು ಕಾಲಕ್ಕೆ ಈಜಿಪ್ತದ ಐತಿಹಾಸಿಕ ನೆಲ ಕರ್ನಾಕ ಭಾರತದಲ್ಲಿ 'ಕರ್ನಾಟಕ'; Elam ದೇವಿ ಯಲ್ಲಮ್ಮ; ಥೀಬ್ಸ್ ನಗರದೇವತೆ ಇಲ್ಲಿ ಥಿಬ್ಬಾದೇವಿ; ಗ್ರೀಕ್ ಒಯಿದ್ದಿಪಸ್ ಇಲ್ಲಿ ಅಯ್ಯಪ್ಪ (ಸೀಲುಗಳಲ್ಲಿ ನಮೂದಾಗಿದೆ). ಅಲೆಗ್ಸಾಂಡರ್ ಇಲ್ಲಿ ಶಿವಪುತ್ರ ಸ್ಕಂದನಾಗಿ ಪುರಾಣನಾಮವಾದದ್ದು – ಈ ಭೌಗೋಳಿಕ – ಚಾರಿತ್ರಿಕ ಪಲ್ಲಟಗಳಿಗೆ ಒಂದೇ ಉತ್ತರ Drift of Continents; ಖಂಡಾಂತರ, ...ಇದನ್ನು ಪ್ರತ್ಯಕ್ಷ ನೋಡಿದವರು ಮನು (ಭಾರತ), ನೋವಾ (ಹಳೆಯ ಬೈಬಲ್)... ನಮ್ಮ ಅವತಾರ ಕಲ್ಪನೆಯನ್ನು Geological Phenomenon ಎಂದು ಇತಿಹಾಸದಲ್ಲಿ ಸೇರಿಸಿಕೊಳ್ಳಬೇಕು ಇತ್ಯಾದಿ."

ಹೀಗೆ ಸಂಶೋಧನೆಯಿಂದ ಸಂಗ್ರಹಿಸಿದ ವೇದ ಪುರಾಣಗಳ ತಥಾಕಥಿತ ಮಾಹಿತಿಗಳ ಜೊತೆಗೆ ಸಮಕಾಲೀನ ರಾಜಕೀಯದಲ್ಲಿ ತೋರುವ ತಂತ್ರಗಳು, ಆಧುನಿಕ 'ಟ್ಯಾಂಕರ್'ಗಳನ್ನು ಹೋಲುವ ಬಿಸುಂಡಿಯೆಂಬ ಸ್ಫೋಟಕ ಯಂತ್ರ (ಶಂಬರಾಸುರನು ಬಳಸಿದ್ದು) ಇವೆಲ್ಲವೂ ಕೃತಿಯ ವಸ್ತುವಿನ್ಯಾಸದಲ್ಲಿ ಸೇರಿವೆ. ಕಾದಂಬರಿಯ ಬೀಜ ರೂಪವಾಗಿರುವ ಶ್ರೀಪುರುಕುತ್ಸ – ಪುರುಕುತ್ಸಾನಿಯರೆಂಬ ಅಣ್ಣತಂಗಿಯರ ಮದುವೆಯು ಆಧುನಿಕ ಪರಿಭಾಷೆಯಲ್ಲಿ ಒಂದು 'ಪುರಾಣ ಕಥೆ' (ಮಿಥ್ – ಗ್ರೀಕ್ ಪುರಾಣದ

ಒಯಿಡಿಪಸ್ ದೊರೆಯ ಮಾತೃಗಮನ ಪ್ರವೃತ್ತಿ – Oedipus complex ಇದ್ದ ಹಾಗೆ), ನಿಷಿದ್ಧ ವಿವಾಹ ಪ್ರಸಂಗ. ವೈದಿಕ ಸಾಹಿತ್ಯದಲ್ಲಿ ಬರುವ ಇಂತಹ ಹಲವು ಪ್ರಸಂಗಗಳನ್ನು ಸಂಗ್ರಹಿಸಿದ ಬೃಹದ್ದೇವತಾ ಇವುಗಳನ್ನೆಲ್ಲ ಕತೆಗಳೆಂದೇ ದಾಖಲಿಸಿದೆ.[7] ಆದರೆ ಶಂಕರ ಮೊಕಾಶಿಯವರು ಇವುಗಳನ್ನು ಐತಿಹಾಸಿಕ ದಾಖಲೆಗಳಂತೆ ಸಂಗ್ರಹಿಸಿ ತಮ್ಮ ಕೃತಿಯಲ್ಲಿ ಬಳಸಿಕೊಂಡಿದ್ದಾರೆ. ಮೊಕಾಶಿಯವರು ಹೇಳುವ "ವೇದಕಾಲೀನ ರಾಜಕೀಯ ಸ್ಥಿತಿಗತಿಗಳಿಗೂ ಕಾದಂಬರಿಯಲ್ಲಿ ಚಿತ್ರಿತವಾಗಿರುವ ಸನ್ನಿವೇಶಗಳಿಗೂ ಇರುವ ಅಸಾಂಗತ್ಯವನ್ನು ವಿಮರ್ಶಕರು ಚರ್ಚಿಸಿದ್ದಾರೆ.[8] ಆ ಎಲ್ಲ ವಿವರಗಳಿಗೆ ಇದು ಸ್ಥಳವಲ್ಲ. ಇಷ್ಟರ ಮೇಲೆ ತಮ್ಮ ಈ ಕೃತಿಯನ್ನು "ಕಾದಂಬರಿಯಾಗೇ ಓದಬೇಕು; ಸಂಶೋಧನೆಯೆಂದಲ್ಲ" ಎಂದು ಲೇಖಕರು ಕೋರಿರುವುದರಿಂದ ಪುರಾಣ ಮತ್ತು ಇತಿಹಾಸಗಳ ಬಗೆಗೆ ಹೆಚ್ಚಿನ ಹೋಲಿಕೆಯನ್ನು ಸದ್ಯಕ್ಕೆ ಬದಿಗಿರಿಸಬಹುದು.

ಪರಂಪರಾಗತ ಪುರಾಣಗಳಲ್ಲಿನ ಅಸಾಧಾರಣ ಸಂದರ್ಭಗಳು ಐತಿಹಾಸಿಕ ಸತ್ಯವೆಂದು ಸಾರಿ ಹೇಳುವ ಮೂಲಕ ಒಂದು ಜನಾಂಗವು ತನ್ನ ಅಸ್ಮಿತೆಯನ್ನು ದೃಢೀಕರಿಸಿಕೊಳ್ಳಲು ಪೂರ್ವಕಾಲದ ಔನ್ನತ್ಯ, ವೈಶಾಲ್ಯಗಳನ್ನು ಖಚಿತಗೊಳಿಸಲು ಪ್ರಯತ್ನಿಸುತ್ತದೆಯೆಂಬ ಮಾತು ಹಿಂದೆ ಬಂದಿದೆ. ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಭಾರತ ಜನಸಮುದಾಯದಲ್ಲಿನ ಒಂದು ವರ್ಗಕ್ಕೆ ಪ್ರಾಚೀನ ಪರಂಪರೆಯ ಹಿರಿಮೆಗರಿಮೆಗಳನ್ನು ಜಾಹೀರಾತುಗೊಳಿಸುವ ಅಗತ್ಯ ತಲೆದೋರಿದಂತೆ ಕಾಣುತ್ತದೆ. ಕೆಲವೊಂದು ರಾಜಕೀಯ ಮಹತ್ವಾಕಾಂಕ್ಷೆಗಳು ಇಂತಹ ಪ್ರಯತ್ನಕ್ಕೆ ಮೂಲಪ್ರೇರಣೆಯಾಗಿರಬಹುದು.

ಭರತಖಂಡವೆಂದೂ, ಹಿಂದೂದೇಶವೆಂದೂ ಪರಿಚಿತವಾಗಿರುವ ಈ ಭೂ ಭಾಗದಲ್ಲಿ ಬಹುಪ್ರಾಚೀನ ಕಾಲದಿಂದ ವಿವಿಧ ಜನಾಂಗಗಳಿಗೆ ಸೇರಿದ ಜನ ಸಮುದಾಯಗಳು ನೆಲೆಸಿವೆ. ಇವುಗಳ ಪೈಕಿ ಯಾರು ಈ ದೇಶದ ಮೂಲನಿವಾಸಿಗಳು, ಯಾರು ಹೊರಗಿನಿಂದ ಬಂದವರು ಎಂದು ಗುರುತಿಸಿ ಹೇಳುವುದು ಸದ್ಯದ ಸ್ಥಿತಿಯಲ್ಲಿ ಕಷ್ಟಸಾಧ್ಯ. ಆದರೂ ಈಗ ದಕ್ಷಿಣಭಾರತದಲ್ಲಿ ಹೆಚ್ಚಾಗಿ ನೆಲೆಸಿರುವ, ಕನ್ನಡ, ತಮಿಳು, ತೆಲುಗು, ಮಲೆಯಾಳಂ ಮೊದಲಾದ ಸೋದರ ಭಾಷೆಗಳನ್ನು ಬಳಸುವ ಜನರನ್ನು ದ್ರಾವಿಡರೆಂದೂ (ದ್ರಾವಿಡ ಎಂಬುದರಿಂದ ತಮಿಳು ಎಂಬ ಶಬ್ದವು ಬಂದಿತೆ ಅಥವಾ ತಮಿಳು ಎಂಬುದೆ ದ್ರಾವಿಡವಾಯಿತೆ ಎಂಬ ವಿಚಾರದಲ್ಲಿ ಇಂದಿಗೂ ವಿದ್ವಾಂಸರಲ್ಲಿ ಜಿಜ್ಞಾಸೆಯಿದೆ), ಉತ್ತರಭಾರತದಲ್ಲಿ ಹೆಚ್ಚಾಗಿ ನೆಲೆಸಿ ಸಂಸ್ಕೃತ ಮೂಲದಿಂದ ಬಂದ ಭಾಷೆಗಳಾದ ಹಿಂದಿ, ಪಂಜಾಬಿ, ಬಂಗಾಳಿ, ಗುಜರಾತಿ ಮೊದಲಾದ ಭಾಷೆಗಳನ್ನು ಬಳಸುವ ಜನರನ್ನು ಆರ್ಯರೆಂದೂ ಗುರುತಿಸುವುದು ರೂಢಿಯಾಗಿದೆ. ಇಂದಿನ ದ್ರಾವಿಡ ಜನರ ಪೂರ್ವಿಕರು ಕೂಡ ಮೊದಲು ಉತ್ತರದ ಸಿಂಧು, ಗಂಗಾ ಬಯಲುಗಳಲ್ಲೆ ನೆಲೆಸಿದ್ದು, ಹೊರಗಿನಿಂದ ಬಂದ, ಸಂಸ್ಕೃತ ಭಾಷೆಯನ್ನು ಮಾತನಾಡುವ ಆರ್ಯ ಜನಾಂಗದವರು ಸಿಂಧು, ಗಂಗಾಬಯಲುಗಳಲ್ಲಿ ಹೆಚ್ಚು ಹೆಚ್ಚಾಗಿ ನೆಲೆಸುತ್ತ ಹೋದಂತೆ, ಕಾಲಕ್ರಮದಲ್ಲಿ ದ್ರಾವಿಡರು ದಕ್ಷಿಣದತ್ತ ಸರಿದರೆಂಬುದನ್ನು ಚರಿತ್ರಕಾರರು ಸಾಧಾರವಾಗಿ ಪ್ರತಿಪಾದಿಸಿದ್ದಾರೆ. ಸಂಸ್ಕೃತ ಭಾಷಿಕರಾದ ಆರ್ಯರು ಈ ಭೂಭಾಗಕ್ಕೆ ಬರುವ ವೇಳೆಗಾಗಲೆ ಸಿಂಧೂನದಿ ಕಣಿವೆಗಳಲ್ಲಿ ಉನ್ನತವಾದ ನಗರ ಸಂಸ್ಕೃತಿಯೊಂದು ಅಸ್ತಿತ್ವ ದಲ್ಲಿತ್ತೆಂಬುದು ಈಗಲೂ ದೊರೆಯುವ ಅವಶೇಷಗಳಿಂದ ತಿಳಿದುಬರುತ್ತದೆ. ಹರಪ್ಪ ಮೊಹೆಂಜೊದಾರೊಗಳಲ್ಲಿನ ಭೂಗರ್ಭ ಶೋಧನೆಯಿಂದ ನೂರಾರು ಮುದ್ರಿಕೆಗಳು (Harappan Seals) ದೊರಕಿವೆಯಾದರೂ ಈ ಮುದ್ರಿಕೆಗಳ ಮೇಲಿರುವ ಲಿಪಿಗಳ ಸ್ವರೂಪವನ್ನು ನಿರ್ಣಯಿಸುವುದು, ಅವುಗಳನ್ನು ಅರ್ಥೈಸುವುದು ಮತ್ತು ಮುದ್ರಿಕೆಗಳನ್ನು ಯಾವ ಉದ್ದೇಶದಿಂದ ತಯಾರಿಸಿ, ಬಳಸುತ್ತಿದ್ದರೆಂಬುದೂ ಸ್ಪಷ್ಟವಿಲ್ಲ. ಆದರೂ ಒಟ್ಟಿನ ಮೇಲೆ ಮುದ್ರಿಕೆಗಳಲ್ಲಿರುವ ಲಿಪಿಯು ವೇದಕಾಲೀನ ಸಂಸ್ಕೃತಕ್ಕಿಂತ ಪ್ರಾಚೀನವಾದುದು, ಹರಪ್ಪ ಸಂಸ್ಕೃತಿಯು ಆರ್ಯೇತರವಾದುದು (ಪ್ರಾಯಶಃ ದ್ರಾವಿಡ ಜನಾಂಗದ್ದು) ಎಂಬುದು ಹಲವು ಪ್ರಖ್ಯಾತ ವಿದ್ವಾಂಸರ ತೀರ್ಮಾನವಾಗಿದೆ.

ಮೇಲಿನ ತೀರ್ಮಾನಗಳು ಈಚಿನ ದಿನಗಳಲ್ಲಿ ಒಂದು ವರ್ಗದ ಜನರಲ್ಲಿ ಅಸಮಾಧಾನವನ್ನು ಕೆರಳಿಸಿವೆ. ಆದ್ದರಿಂದ ಇವರು ಹರಪ್ಪ ಮುದ್ರಿಕೆಗಳು ಸಂಸ್ಕೃತ ಲಿಪಿ-ಭಾಷೆಗಳಲ್ಲಿಯೆ ಇವೆ; ಹರಪ್ಪ ಸಂಸ್ಕೃತಿಯನ್ನು ಬೆಳೆಸಿದವರು ಭಾರತದ ಮೂಲನಿವಾಸಿಗಳಾದ ವೇದಕಾಲೀನ ಆರ್ಯರೆ ಸರಿ ಎಂಬುದನ್ನು ಅತ್ಯುತ್ಸಾಹದಿಂದ ಸಾಧಿಸಹೊರಟಿದ್ದಾರೆ. ತಮ್ಮ ಉದ್ದೇಶ ಸಾಧನೆಗಾಗಿ ಈ ವಿದ್ವಾಂಸರು ವೇದ ಪುರಾಣ ಗಳಲ್ಲಿ ಉಲ್ಲೇಖಗೊಂಡಿರುವ ಹಲವು ಹೆಸರು ಮತ್ತು ಸಂದರ್ಭಗಳನ್ನು 'ಐತಿಹಾಸಿಕ ಸತ್ಯ'ವೆಂಬಂತೆ ಭಾವಿಸಿ ವಿವರಿಸುತ್ತಾರೆ. ಹೀಗೆ ಪುರಾಣಗಳನ್ನು ಇತಿಹಾಸಗೊಳಿಸುವ ಪ್ರಕ್ರಿಯೆಯಲ್ಲಿ ತೊಡಗಿರುವ ವಿದ್ವಾಂಸರ ಪೈಕಿ, ಬಹುಕಾಲದಿಂದ ಅಮೇರಿಕ ದೇಶದಲ್ಲಿ ನೆಲೆಸಿರುವ, ಕಂಪ್ಯೂಟರ್ ತಜ್ಞರಾದ ಎನ್. ಎಸ್. ರಾಜಾರಾಂ ಪ್ರಮುಖರು.[9]

ಸಾಮಾನ್ಯ ಶಕಪೂರ್ವ (ಸಾಮಾನ್ಯ ಶಕಪೂರ್ವ ಎಂದರೂ ಕ್ರಿಸ್ತಪೂರ್ವ ಎಂದರೂ ಒಂದೇ ಅರ್ಥ; ಆದರೆ, ಕ್ರಿ. ಪೂ. ಎಂಬಲ್ಲಿ ಒಂದು ಮತಧರ್ಮದ ಸೋಂಕಿದೆಯೆಂಬ ಕಾರಣದಿಂದ ಕೆಲವು ವಿದ್ವಾಂಸರು ಸಾಮಾನ್ಯ ಶಕಪೂರ್ವ – Before Common Era - BCE ಎಂದು ಬಳಸುತ್ತಾರೆ. ಇಲ್ಲಿನ ಬರವಣಿಗೆಯಲ್ಲಿ ಸಾ. ಶ. ಪೂ. ಎಂಬ ಸಂಕೇತವನ್ನಿಟ್ಟುಕೊಳ್ಳಲಾಗಿದೆ) ಸುಮಾರು ೨೬೦೦ರಿಂದ ೧೯೦೦ಕ್ಕೆ ಸೇರಬಹುದಾದ ಸಿಂಧೂ ಕಣಿವೆಯ ಮುದ್ರಿಕೆಗಳಲ್ಲಿನ ಬರಹಗಳನ್ನು ಓದುವ ಬಹಳಷ್ಟು ಪ್ರಯತ್ನಗಳು ನಡೆದಿವೆ. ಅಮೇರಿಕದ ಪುರಾತತ್ವಶಾಸ್ತ್ರಜ್ಞ ಗ್ರಿಗೊರಿ ಪೊಸೆಲ್ (Gregory Possehl) ಎಂಬಾತನು ೧೯೯೬ರ ತನ್ನ ಪುಸ್ತಕವೊಂದರಲ್ಲಿ ಮುದ್ರಿಕೆಗಳ ಅರ್ಥವಿವರಣೆಯ ಮೂವತ್ತೈದು ಪ್ರಯತ್ನಗಳನ್ನು (ಅವರೆಗಿನ ಒಟ್ಟು ಪ್ರಯತ್ನಗಳ ಸುಮಾರು ಮೂರನೆಯ ಒಂದು ಭಾಗ) ಪ್ರಸ್ತಾಪಿಸಿದ್ದಾನೆ. ಆದರೆ, ಕ್ರಿ. ಶ. ೨೦೦೦ದ ಸುಮಾರಿನಲ್ಲಿ ಪ್ರಕಟವಾದ 'ಸಿಂಧೂ ಲಿಪಿಯ ನಿರ್ವಚನ' (The Deciphered Indian Script) ಎಂಬ ಪುಸ್ತಕದಲ್ಲಿ ಡಾ॥ ಎನ್. ಎಸ್. ರಾಜಾರಾಂ ಮತ್ತು ಡಾ॥ ನಟವರ ಝಾ ಇವರು ಜೊತೆಯಾಗಿ ೨೦೦೦ಕ್ಕಿಂತಲೂ ಹೆಚ್ಚು ಹರಪ್ಪ ಮುದ್ರಿಕೆಗಳನ್ನು ಓದಿ ಅರ್ಥೈಸಿರುವುದಾಗಿ ಹೇಳಿಕೊಂಡಿದ್ದಾರೆ. ಇದು ಬೇರೆಲ್ಲ ವಿದ್ವಾಂಸರ ಸಂಶೋಧನೆಗಳಿಗಿಂತಲೂ ಅತಿಶಯವಾದದ್ದು ಮತ್ತು ಅತಿರಂಜಿತವಾದದ್ದು ಎಂದು ತೋರುತ್ತದೆ.

ತಮ್ಮ ಸಂಶೋಧನೆಯನ್ನಾಧರಿಸಿ ರಾಜಾರಾಂ ಅವರು "ಸರಸ್ವತೀ ನದಿಯಿಂದ ಸಿಂಧೂ ಲಿಪಿಯವರೆಗೆ" (ಸ. ನ. ಸಿ. ಲಿ) ಎಂಬ ಪುಸ್ತಕವನ್ನು ಬರೆದಿದ್ದಾರೆ. ಈ ಪುಟ್ಟ ಪುಸ್ತಕವನ್ನು ಕೈಗೆತ್ತಿಕೊಂಡು ಪುಟಗಳನ್ನು ತಿರುವಿದಂತೆ ನಮ್ಮನ್ನು ಮೊದಲಿಗೆ ತಳಮಳಗೊಳಿಸುವ ಹಲವಾರು ಅಂಶಗಳು ಎದ್ದು ಕಾಣುತ್ತವೆ. ಲೇಖಕರ ಭಾವಾವೇಶ, ಭಿನ್ನಾಭಿಪ್ರಾಯ ಉಳ್ಳವರ ಬಗೆಗೆ ಇವರ ತಾತ್ಸಾರ, ಆಕ್ರೋಶ ಮತ್ತು ಲೇಖಕರ ಪ್ರಚೋದಕ ಶೈಲಿ ಇವು ಅಂಥ ಸಂಗತಿಗಳು. ಓದುಗರನ್ನು ಕೆಣಕಲೆಂದೇ ಕೆಲವು ಶೀರ್ಷಿಕೆಗಳನ್ನು ಹೆಣೆದಂತಿದೆ. 'ಸತ್ಯದಿಂದ ತಪ್ಪಿಸಿಕೊಳ್ಳುತ್ತೀರಾ ? ಎಷ್ಟು ದಿನ ?'; '(ಆರ್ಯರ) ಆಕ್ರಮಣವಾದಕ್ಕೆ ಆಘಾತ ನೀಡಿದ ಸರಸ್ವತಿ', 'ನಿಡುದಲೆ ಮೋಟುದಲೆಯ ಢೋಂಗಿ ವಿಜ್ಞಾನ', 'ಬಿದ್ದ ಆಕ್ರಮಣವಾದ, ಮೂಡಿದ ಹೊಸ ವಿಶ್ವ ಇತಿಹಾಸ' – ಇವು ಕೆಲವು ಉದಾಹರಣೆಗಳು ಮಾತ್ರ.

ಕಳೆದ ನೂರೈವತ್ತು ವರ್ಷಗಳಲ್ಲಿ ನಿರೂಪಿಸಿದ ಮತ್ತು ಕಲಿಸಿದ ಭಾರತೀಯ ಇತಿಹಾಸವೆಲ್ಲ ಮತೀಯವಾದ, ವಸಾಹತುವಾದ ಮತ್ತು ಮಾರ್ಕ್ಸ್‌ವಾದ ಪ್ರೇರಿತವೆಂದು ಖಂಡಿಸುವ ಲೇಖಕರು ಭಾರತದ ನಿಜವಾದ ಇತಿಹಾಸವನ್ನು ಪುರಾಣ ಮತ್ತು ವೇದಗಳ ಆಧಾರದ ಮೇಲೆ ರಚಿಸಬೇಕೆಂಬ ಅಮೂಲ್ಯ ಸಲಹೆ ನೀಡುತ್ತಾರೆ![10] ವೇದ ಪುರಾಣಗಳ ಮಾರ್ಗದರ್ಶನದಲ್ಲಿಯೆ ನಡೆದು ಡಾ॥ ರಾಜಾರಾಂ ಸೃಷ್ಟಿಸಿರುವ 'ಭಾರತ ಇತಿಹಾಸದ' ಒಂದೆರಡು ಸಂದರ್ಭಗಳನ್ನು ಮಾತ್ರ ಇಲ್ಲಿ ಪರಿಶೀಲಿಸಬಹುದು.

ಡಾ॥ ರಾಜಾರಾಂ ಹೇಳುತ್ತಾರೆ – "ಋಗ್ವೇದದ ಏಳನೆಯ ಮಂಡಲದ ವಸಿಷ್ಠರು ಸಮುದ್ರಯಾನದ ಚಟುವಟಿಕೆಗಳನ್ನು ವಿವರಿಸಿದ್ದರಲ್ಲಿ ಯಾವ ಆಶ್ಚರ್ಯವೂ ಇಲ್ಲ; ಋಗ್ವೇದ ಸಮಾಜವು ಪ್ರಮುಖವಾಗಿ ಸಮುದ್ರಯಾನೀ ಜೀವನ ನಡೆಸುತ್ತಿತ್ತು ಎಂದು ಹೇಳಲು ಹಿಂಜರಿಕೆಯೇನೂ ಇಲ್ಲ... ಇತ್ಯಾದಿ."

ವಸಿಷ್ಠನೆಂಬ ಈ ವೇದಪುರುಷನಿಗೆ ಸಂಬಂಧಿಸಿದ ಸಮಗ್ರ ಮಾಹಿತಿಗಳು ಮಹಾ ಭಾರತದ ಆದಿಪರ್ವ, ಸಭಾಪರ್ವ, ದ್ರೋಣಪರ್ವ, ಶಲ್ಯಪರ್ವ, ಅನುಶಾಸನಿಕಪರ್ವ, ಶಾಂತಿಪರ್ವಗಳಲ್ಲೂ, ವಾಲ್ಮೀಕಿ ರಾಮಾಯಣದ ಬಾಲಕಾಂಡದಲ್ಲಿಯೂ, ದೇವಿ ಭಾಗವತ, ಸ್ಕಾಂದಪುರಾಣ, ವಿಷ್ಣು ಪುರಾಣ, ಅಗ್ನಿ ಪುರಾಣಗಳಲ್ಲೂ ದೊರೆಯುತ್ತವೆ.

– ಋಗ್ವೇದದ ಹತ್ತು ಮಂಡಲಗಳ ಪೈಕಿ ಏಳನೆಯ ಮಂಡಲವು ವಸಿಷ್ಠ ಮತ್ತು ಅವನ ಆಶ್ರಮದಲ್ಲಿದ್ದ ಋಷಿಗಳಿಂದ ರಚಿಸಲ್ಪಟ್ಟಿತು. ವಸಿಷ್ಠ ಋಷಿಯು ಬ್ರಹ್ಮ ಮಾನಸಪುತ್ರರಲ್ಲಿ ಒಬ್ಬನಾಗಿದ್ದಾನೆ. ತನ್ನ ಬ್ರಹ್ಮ ತೇಜಸ್ಸಿನಿಂದಾಗಿ ವಸಿಷ್ಠನು ಪುರಾಣ ಪ್ರಸಿದ್ಧನಾಗಿದ್ದಾನೆ. ವಸಿಷ್ಠನಿಗೆ ಮೂರು ಜನ್ಮಗಳು... ಬ್ರಹ್ಮದೇವನ ತೊಡೆಯಿಂದ ನಾರದನೂ, ಬಲಗೈ ಹೆಬ್ಬೆರಳಿನಿಂದ ದಕ್ಷನೂ, ಪ್ರಾಣ (ಉಸಿರು)ದಿಂದ ವಸಿಷ್ಠನೂ, ಚರ್ಮದಿಂದ ಭೃಗುವೂ, ಬ್ರಹ್ಮನ ಹಸ್ತದಿಂದ ಕ್ರತುವೂ ಹುಟ್ಟಿ ಬಂದರು. ಈ ಜನ್ಮದಲ್ಲಿ ಅರುಂಧತಿಯು ವಸಿಷ್ಠನ ಪತ್ನಿಯಾದಳು. ವಸಿಷ್ಠ-ಅರುಂಧತಿಯರಿಗೆ ಸಂಬಂಧಿಸಿದಂತೆ ಪುರಾಣ ಕತೆಯೊಂದಿದೆ. ಮೂರು ಜನ್ಮಗಳಲ್ಲಿ ಬೇರೆ ಬೇರೆ ಹೆಸರುಗಳನ್ನು ಪಡೆದ ವಸಿಷ್ಠ ಅರುಂಧತಿಯರು ಪತಿಪತ್ನಿಯರಾದರು ಇತ್ಯಾದಿ. ಈ ಎಲ್ಲ ವಿವರಗಳ ಜೊತೆಗೆ ಬ್ರಾಹ್ಮಣ ಅನಾಗರಿಕ ಕೆಲಸಗಾರರಲ್ಲಿ ವಸಿಷ್ಠನೂ ಒಬ್ಬನಾಗಿದ್ದ (Vasista was one of the hermits who were tribal workers) ಎಂಬ ಮಾಹಿತಿಯೂ

ದೊರೆಯುತ್ತದೆ. ಅಲ್ಲದೆ, ವಸಿಷ್ಠನ ಕಾಮಧೇನು, ವಿಶ್ವಾಮಿತ್ರ-ವಸಿಷ್ಠರ ದ್ವೇಷಾಸೂಯೆಗಳು, ತ್ರಿಶಂಕು – ಹರಿಶ್ಚಂದ್ರ-ವಿಶ್ವಾಮಿತ್ರರ ಕಥೆ ಇತ್ಯಾದಿಗಳೆಲ್ಲ ಪುರಾಣ ಪ್ರಸಿದ್ಧವಿವೆ (ಈ ಎಲ್ಲ ವಿವರಗಳನ್ನು Puranic Encyclopaedia by Vettammani - ಎಂಬ ವಿಶ್ವಕೋಶದಲ್ಲಿ ನೋಡಬಹುದು).

ಹೀಗೆ ವೇದ ಪುರಾಣಗಳಲ್ಲಿ ಉಲ್ಲೇಖಗೊಂಡಿರುವ ವಸಿಷ್ಠ ಋಷಿಯ 'ಐತಿಹಾಸಿಕತೆ'ಯನ್ನು ಸ್ಥಾಪಿಸಲು ಡಾ|| ರಾಜಾರಾಂ ಅನುಸರಿಸಿದ "ಸಂಶೋಧನಾ ಮಾರ್ಗ"ವನ್ನು ಈಗ ಗಮನಿಸಬಹುದು – "ಸ್ಯಾನ್‌ಫ್ರಾನ್ಸಿಸ್ಕೋದ ಹ್ಯಾರಿಹಿಕ್ಸ್ ಎಂಬ ಸಂಗ್ರಹಕಾರನಿಗೆ ಗುಜರಿ ಅಂಗಡಿಯೊಂದರಲ್ಲಿ ದೊರಕಿದ ಒಂದು ಶಿರಶಿಲ್ಪವು ಈ ಸಂಶೋಧಕರು ನಂಬುವ ಗಟ್ಟಿ ಆಧಾರ.[೫]

"ಈ ಶಿರವು ಒಬ್ಬ ಕ್ಷತ್ರಿಯ ದೊರೆಯದಿರಬಹುದೆಂಬ ವಾದದ ಮೂಲಕ ಮಹತ್ವದ ಸಂಶೋಧನಾ ಮಾರ್ಗಗಳು ತೆರೆದುಕೊಂಡವು. ... ಹಲವು ಬಗೆಯ ಪರೀಕ್ಷೆಗಳ ಮೂಲಕ ಈ ಲೋಹ ಶಿಲ್ಪವನ್ನು ಕನಿಷ್ಠ ಪಕ್ಷ ಕ್ರಿ. ಪೂ. ಮೂರನೆಯ ಶತಮಾನದಲ್ಲಿ ಎರಕಹೊಯ್ಯಲಾಗಿದೆಯೆಂದು ಖಚಿತವಾಯಿತು... ಈ ಎಲ್ಲ ಪರೀಕ್ಷೆಯ ನಂತರ ಋಗ್ವೇದದ ಏಳನೆಯ ಪುಸ್ತಕದಲ್ಲಿ ವಸಿಷ್ಠ ಮುನಿಯ ಉಲ್ಲೇಖವಿರುವುದನ್ನು ಮಹಾಭಾರತದಲ್ಲಿ ಸರಸ್ವತಿಯ ಉತ್ತರ ಭಾಗದಲ್ಲಿರುವ ಹಲವು ಪವಿತ್ರ ತೀರ್ಥಗಳಲ್ಲಿ ಉಲ್ಲೇಖಿಸಲಾಗಿರುವ ತೀರ್ಥದಲ್ಲಿ ತುಂಬ ಮಹತ್ವದ್ದು ವಸಿಷ್ಠ ತೀರ್ಥ (ಈ ತೀರ್ಥದಲ್ಲಿ ಯಾರು ಸ್ನಾನ ಮಾಡುತ್ತಾರೋ ಅವನು ಬ್ರಾಹ್ಮಣನಾಗುತ್ತಾನೆ – He who bathes in this thirtha would become a Brahmin – ಮಹಾಭಾರತ ವನಪರ್ವ, ಅಧ್ಯಾಯ ೮೪) ಎಂಬುದನ್ನೆಲ್ಲ ಹುಡುಕಿ ಇದು ವಸಿಷ್ಠನ ಶಿರವೇ ಎಂದು ನಿರ್ಧರಿಸಲಾಯಿತು" (ಸ. ನ. ಸಿ. ಲಿ. – ಪು. ೪೬–೪೮).

ಶಿರಶಿಲ್ಪವು ಯಾವ ಪ್ರಾಕ್ತನ ನೆಲೆಯಲ್ಲಿ ಲಭ್ಯವಾಯಿತು? ಅದೇ ನೆಲೆಯಲ್ಲಿ ದೊರೆತ ಇತರ ಸಾಂದರ್ಭಿಕ ಪುರಾವೆಗಳಾವುವು? ಕಲಾ ಇತಿಹಾಸಕಾರರು, ಲೋಹತಜ್ಞರು ಈ ಶಿಲ್ಪಕ್ಕೆ ಅದರ ಶೈಲಿ, ಸಂಯೋಜಕತೆಗಳ ಮೇಲೆ ಯಾವ ಕಾಲದೇಶಗಳನ್ನು ನಿರ್ಧರಿಸುತ್ತಾರೆ? ಪ್ರಾಕ್ತನ ಶೋಧಕ್ಕೆ ಸಂಬಂಧಿಸಿದ ಇಂತಹ ಯಾವ ವೈಜ್ಞಾನಿಕ ಪ್ರಶ್ನೆಗಳ ಬಗೆಗೂ ಈ ಸಂಶೋಧಕರು ಮಂಡೆ ಬಿಸಿ ಮಾಡಿಕೊಂಡಂತಿಲ್ಲ. "ಭಾರತದ ಪ್ರಾಚೀನ ಇತಿಹಾಸ ರಚನೆಗೆ ವೇದ ಪುರಾಣಗಳನ್ನು ಅವಲಂಬಿಸಬಹುದು, ಅವಲಂಬಿಸಬೇಕು" ಎಂದು ಇವರು ಮೊದಲೆ ನಿಶ್ಚಯ ಮಾಡಿಕೊಂಡುಬಿಟ್ಟಿದ್ದಾರೆ. "ಆರ್ಯರ ಇತಿಹಾಸವು ವೇದಗಳಲ್ಲಿಲ್ಲ (?) ಪುರಾಣಗಳಲ್ಲಿದೆ. ಪುರಾಣಗಳು ಎಂದರೆ ಪ್ರಾಚೀನ ಘಟನಾವಳಿಗಳು ಎಂದರ್ಥ" – ಹೀಗೆ ಹೇಳುವ ರಾಜಾರಾಂ ಪುರಾಣಕ್ಕೂ ಇತಿಹಾಸಕ್ಕೂ ಇರುವ ಅಂತರವನ್ನೇ ಮರೆತುಬಿಟ್ಟಿದ್ದಾರೆಂಬುದು ಸ್ಪಷ್ಟ.

ಇತಿಹಾಸ ನಿರೂಪಣೆಯಲ್ಲಿ ಸಂಪೂರ್ಣ ವಸ್ತುನಿಷ್ಠತೆ ಸಾಧ್ಯವಿಲ್ಲವೆಂಬ ಅಭಿಪ್ರಾಯವನ್ನು ಸ್ವಲ್ಪಮಟ್ಟಿಗೆ ಒಪ್ಪಬಹುದು. ದೇಶ, ಭಾಷೆ, ಸ್ವಜನ ಪಕ್ಷಪಾತ – ಮೇಲಿನ ಅಭಿಮಾನ, ಪೂರ್ವಗ್ರಹಗಳು ಎಂತಹ ವಿದ್ವಾಂಸನನ್ನೂ ಪೂರ್ತಿಯಾಗಿ ಬಿಡುವುದಿಲ್ಲವೇನೋ! ಆದರೂ ಕೆಲವು ವಿದ್ವಾಂಸರಿಗೆ ಪ್ರಾಚೀನ ಭಾರತ, ಸಂಸ್ಕೃತ ಭಾಷೆ, ವೇದ ಪುರಾಣಗಳು, ಆರ್ಯ ಜನಾಂಗ – ಎಂಬ ಮಾತುಗಳು ಕಿವಿಗೆ ಬಿದ್ದೊಡನೆ ಒಂದು ರೀತಿಯ ಆವೇಶ ಉಕ್ಕಿಬಿಡುತ್ತದೆ. ಇಂಥವರ ಪೈಕಿ ಡಾ|| ರಾಜಾರಾಂ ಒಬ್ಬರೆಂಬುದು ನಿರ್ವಿವಾದ. ಇವರು ಬರೆಯುತ್ತಾರೆ – "ಸರಸ್ವತೀ ನದಿಯ ಇತಿಹಾಸದಿಂದ ಸಿಂಧೂ ಲಿಪಿಯ ರಹಸ್ಯಭೇದನದವರೆಗೆ ಎಲ್ಲಿ ನೋಡಿದರೂ ಭಾರತೀಯರ ಅಪ್ರತಿಮ ಸಾಧನೆ, ನಿಖರ ಜೀವನ ಶೈಲಿ, ಶಿಸ್ತಿನ ಆಚರಣೆ ವಿಧಿ ವಿಧಾನಗಳೇ ಕಾಣುತ್ತವೆ. ಇಂಥ ಮಹಾನ್ ಇತಿಹಾಸವನ್ನು ಹೊಂದಿರುವ ನಾವು ಯಾವ ಕೀಳರಿಮೆಯನ್ನೂ ಇಟ್ಟುಕೊಳ್ಳುವುದು ಅಸಮರ್ಥನೀಯ" ಎಂದು. ನಿಜ ಈ ದೇಶದ ಅಸಂಖ್ಯಾತ ಜನಸಾಮಾನ್ಯರಿಗೆ ತಮ್ಮ ದೇಶದ ಬಗೆಗೆ ವಾಸ್ತವವಾಗಿ ಯಾವ ಕೀಳರಿಮೆಯೂ ಇಲ್ಲ. ಆದರೆ, ರಾಜಾರಾಂ ಅಂಥ ಸಂಶೋಧಕರು ಇಲ್ಲಿನ ಜನಕೋಟಿಗೆ ಒಂದು ಕೀಳರಿಮೆಯನ್ನು ಆರೋಪಿಸಿ ಅನಂತರ ಪುರಾಣಗಳ ಮೂಲಕ ಸೃಷ್ಟಿಸಿದ ಇತಿಹಾಸದಿಂದ ಆ ಕೀಳರಿಮೆಯನ್ನು ನಿವಾರಿಸಲು ಯತ್ನಿಸುವಂತೆ ತೋರುತ್ತದೆ. ಇದೊಂದು ರೀತಿಯಲ್ಲಿ ನಿಜವಾಗಿಯೂ ಇತಿಹಾಸದ ರಾಜಕೀಯ!

ಕಡೆಯದಾಗಿ ಒಂದು ಮಾತು: 'ಸರಸ್ವತೀ ನದಿಯಿಂದ ಸಿಂಧೂ ಲಿಪಿಯವರೆಗೆ' ಪುಸ್ತಕದಲ್ಲಿ ಆರ್ಯರನ್ನೂ ಅನಾರ್ಯರನ್ನೂ ವಿಂಗಡಿಸುವ ಸೂತ್ರವೊಂದನ್ನು ಕೊಡಲಾಗಿದೆ. "ಆರ್ಯ ಪದವನ್ನು ಹುಟ್ಟುಹಾಕಿದವರ ಪ್ರಕಾರ ಈ ಪದವನ್ನು, ನೀತಿ ಸಂಹಿತೆಯನ್ನು ಪಾಲಿಸುವವರಿಗಾಗಿ ಬಳಸಬೇಕು. ಜನರು ಅವರವರ ವರ್ತನೆಗಳಿಗೆ ಅನುಸಾರವಾಗಿ ಆರ್ಯರೋ ಅನಾರ್ಯರೋ ಆಗುತ್ತಿದ್ದರು. ಮನುಸ್ಮೃತಿಯಲ್ಲಿ ಈ ಬಗ್ಗೆ ಖಚಿತವಾದ ವಿವರಣೆಯಿದೆ. ಪವಿತ್ರ ಆಚರಣೆಗಳನ್ನು ಮಾಡದ, ಮುನಿಗಳ ಮಾತು ಕೇಳದ ಆರ್ಯಕ್ಷತ್ರಿಯರಾಗಿದ್ದ ಈ ಜನರು ಪೌಂಡ್ರಕ, ಚೋಡ(ಳ), ದ್ರಾವಿಡ, ಕಾಂಭೋಜ, ಯವನ, ...ಕಿರಾತ ಇತ್ಯಾದಿ ಸೇವಕ ಸ್ತರಕ್ಕೆ ಇಳಿದಿದ್ದಾರೆ; ಅಂದರೆ ಆರ್ಯರ ವ್ಯಾಪ್ತಿಯಿಂದ ಹೊರಗೆ ಬರುವುದಕ್ಕೆ ಜನಾಂಗವೆಂದೂ ಕಾರಣವಾಗಿರಲಿಲ್ಲ. ಹುಟ್ಟಾಗಲಿ ರಾಷ್ಟ್ರೀಯತೆಯಾಗಲಿ ಕಾರಣವಾಗಿರಲಿಲ್ಲ. ಅದಕ್ಕೆ ಕೆಲವು ಪವಿತ್ರ ಆಚರಣೆಗಳ ವೈಫಲ್ಯವು ಕಾರಣವಾಯಿತು" (ಪು. ೭೭).

ಈ ಮಹಾನ್ ದೇಶದ ಪ್ರಜಾಕೋಟಿಯನ್ನು ಯಾವುದೇ ಬಗೆಯಲ್ಲಿ ಛಿದ್ರಿಸುವುದು, 'ಪವಿತ್ರ ಆಚರಣೆಗಳನ್ನು ಪಾಲಿಸದವರನ್ನು' ನಾನಾ ಬಗೆಯಲ್ಲಿ ಹಳಿದು ಹೀಗೆ ಪ್ರಚೋದನಕಾರಿಯಾಗಿ ಬರೆಯುವುದು ಹಲವು ಅನರ್ಥಗಳಿಗೆ, ಅನಾಹುತಗಳಿಗೆ ಕಾರಣವಾದೀತು. ಈ ಬಗೆಗೆ ಜನರು ಎಚ್ಚರದಿಂದಿರುವುದು ಅಗತ್ಯ.

* * *

೧. ನೋಡಿ: *THE BRIHAD DEVATA;* A. A. MACDONELL - Part II (1965) P. 169. F. N.

೨. ಡಾ|| ಕೀರ್ತಿನಾಥ ಕುರ್ತಕೋಟಿ; ಅವಧೇಶ್ವರಿ (ಒಂದು ಸಮೀಕ್ಷೆ); ತುಷಾರ ಯುಗಾದಿ ವಿಶೇಷಾಂಕ, ಏಪ್ರಿಲ್ ೧೯೮೯.

೩. ರಾಜಾರಾಂ ಅವರ ಅಭಿಪ್ರಾಯಗಳ ಮಂಡನೆ, ಚರ್ಚೆ ಮೊದಲಾದ ವಿವರಗಳನ್ನು ಇದೇ ಲೇಖಕನ 'ಇತಿಹಾಸದ ರಾಜಕೀಯ' (೨೦೦೨, ನವಕರ್ನಾಟಕ ಪ್ರಕಾಶನ, ಬೆಂಗಳೂರು) ಎಂಬ ಪುಸ್ತಕದಲ್ಲೂ 'ಹೊಸತು' ವಿಶೇಷ ಸಂಚಿಕೆ ೨೦೦೪ರಲ್ಲಿ ಪ್ರಕಟವಾಗಿರುವ ಬಿ. ವಿ. ವೀರಭದ್ರಪ್ಪನವರ 'ಪುರಾಣವನ್ನು ಇತಿಹಾಸಗೊಳಿಸುವ ಪ್ರಕ್ರಿಯೆ' ಎಂಬ ಲೇಖನದಲ್ಲೂ ನೋಡಬಹುದು.

೪. ಕೇಂದ್ರ ಸರ್ಕಾರದ ಅದ್ಯತನ ಪೂರ್ವ ಮಾನವ ಸಂಪನ್ಮೂಲ ಸಚಿವರಾಗಿದ್ದ ಮುರಳಿ ಮನೋಹರ ಜೋಶಿಯವರು "ಇತಿಹಾಸದ ಪಠ್ಯ ಭಾಗಗಳನ್ನು ಸಾಧುಗಳು ಮತ್ತು ಇಮಾಂಗಳ ಪರಿಶೀಲನೆಗೆ ಒಳಪಡಿಸಬೇಕೆಂದು" ಸಲಹೆಯಿತ್ತುದನ್ನೂ ಇಲ್ಲಿ ನೆನೆಯಬಹುದು. ಈ ಅಮೋಘ ಸಲಹೆ ಮತ್ತು ಅದರ ಬಗೆಗೆ ನೊಬೆಲ್ ಪ್ರಶಸ್ತಿ ವಿಜೇತ ಅಮರ್ತ್ಯ ಸೇನ್ ಅವರ ಟೀಕೆಗಳಿಗಾಗಿ ಜನವರಿ ೨೧, ೨೦೦೨ರ Outlook ಪತ್ರಿಕೆ ಮತ್ತು 'ಇತಿಹಾಸದ ರಾಜಕೀಯ' ಎಂಬ ಪುಸ್ತಕದಲ್ಲಿ 'ಲೇಖಕನ ಅರಿಕೆ' ಭಾಗಗಳನ್ನು ನೋಡಬಹುದು.

೫. 'ಸರಸ್ವತೀ ನದಿಯಿಂದ ಸಿಂಧೂ ಲಿಪಿಯವರೆಗೆ' ಎಂಬ ತಮ್ಮ ಪುಸ್ತಕದಲ್ಲಿ ಲೇಖಕರು ಈ ಶಿರಶಿಲ್ಪದ ಒಂದು ಛಾಯಾಚಿತ್ರವನ್ನು ಒದಗಿಸಿದ್ದಾರೆ. ನೆತ್ತಿಯ ಮೇಲೆ ಗೂಟವಿರುವ ಒಂದು ಶಿರಸ್ತ್ರಾಣ, ದಪ್ಪ ಗಡ್ಡ ಮೀಸೆ, ಒರಟಾದ ಮುಖಾಕೃತಿಯುಳ್ಳ ಈ ಚಿತ್ರವನ್ನು ನೋಡಿದರೆ ಪ್ರಾಯಶಃ ಇದು ಒಬ್ಬ ವೀರಸೈನಿಕನದು –ಬಹುತೇಕ ಅಲೆಗ್ಸಾಂಡರನ ಕಾಲದ ಗ್ರೀಕ್ ಸೈನಿಕನದು – ಎಂಬ ಅಭಿಪ್ರಾಯವು ಯಾರಲ್ಲಿಯಾದರೂ ಮೂಡುತ್ತದೆ.

ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ
೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦



ನಮ್ಮ ಸಾಲ ಮನ್ನಾ ಮಾಡಿಬಿಡಿ ಬುದ್ದೀ...
ಸಮುದ್ರದಿಂದ ಒಂದು ಕೊಡ ನೀರು ತೆಗೆದಾಗೇ ನಿಮ್ಮ ಒಂದು
ದಿನದ ವೇತನ, ಭತ್ಯೆ ರೈತರಿಗೆ ಕೊಡಿ – ಸಾಲ ಮನ್ನಾ ಆಗುತ್ತೇ...

# ಐನ್‌ಸ್ಟೈನ್ ಮತ್ತು ೧೯೦೫ನೇ ಸಂವತ್ಸರ

೧೯೧೯ರ ನವೆಂಬರ್ ೭ರಂದು ಬೋಲ್ಷೆವಿಕ್ ಕ್ರಾಂತಿಯ ದ್ವಿತೀಯ ವಾರ್ಷಿಕೋತ್ಸವವನ್ನು ಜಗತ್ತಿನಾದ್ಯಂತ ಆಚರಿಸುತ್ತಿದ್ದಾಗ ಅದೇ ದಿನ ಬೆಳಿಗ್ಗೆ 'ಲಂಡನ್ ಟೈಮ್ಸ್' ಪತ್ರಿಕೆಯು ಪ್ರಕೃತಿ ವಿಜ್ಞಾನದಲ್ಲಾದ ಮತ್ತೊಂದು ಕ್ರಾಂತಿಯ ವಿಷಯ ಪ್ರಕಟಿಸಿತು. ಬೆಳಕು ಗುರುತ್ವಾಕರ್ಷಣೆಗೆ ಒಳಗಾಗಿ ಬಾಗುತ್ತದೆ. ಐನ್‌ಸ್ಟೈನ್‌ರ ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತದ ಮುನ್ಸೂಚನೆ ಸಮರ್ಥಿತವಾದುದನ್ನು ಅದು ಪ್ರಕಟಿಸಿದ್ದಿತು. ಹಿಂದಿನ ಸಂಜೆ ಲಂಡನ್ನಿನ ರಾಯಲ್ ಸೊಸೈಟಿಯ ಸಭೆ ಇದನ್ನು ಅಧಿಕೃತವಾಗಿ ಘೋಷಿಸಿದ್ದಿತು. ಸೂರ್ಯನ ಅಂಚಿಗೆ ಸಮೀಪದಲ್ಲಿದ್ದ ನಕ್ಷತ್ರಜ್ಯೋತಿಯು ಅಂಚಿನಿಂದ ಉಜ್ಜಿಕೊಂಡು ಹೊರ ಹೊರಟಾಗ ೧.೭" (೦.೦೦೦೪೭ ಡಿಗ್ರಿಗಳು) ಅಷ್ಟು ಬಾಗುತ್ತದೆ ಎಂದು ಐನ್‌ಸ್ಟೈನ್‌ರು ೧೯೧೫ರಲ್ಲಿ ಪೂರ್ಣಗೊಳಿಸಿದ ಸಿದ್ಧಾಂತವು ಮುನ್ಸೂಚಿಸಿದ್ದಿತು. ಇದೇ ಮಾದರಿಯ ಪರಿಣಾಮವನ್ನು ನ್ಯೂಟನ್‌ರ ಯಂತ್ರಶಾಸ್ತ್ರ ದಿಂದಲೂ ನಿಗಮಿಸುವ ಸಾಧ್ಯತೆ ಇದೆ. ಆದರೆ ಅಲ್ಲಿ ದೊರೆಯುವ ಸಂಖ್ಯೆ ೦.೮೫" (೦.೦೦೦೨೩೬ ಡಿಗ್ರಿಗಳು). ನ್ಯೂಟನ್‌ರ ಸಿದ್ಧಾಂತ ಸೂಚಿಸುವ ಸಂಖ್ಯೆಯ ಎರಡರಷ್ಟಾದ ಐನ್‌ಸ್ಟೈನ್ ಸಂಖ್ಯೆಯು (೧.೭") ತುಂಬ ಮುಖ್ಯವಾಗಿದ್ದಿತು. ಏಕೆಂದರೆ ದೇಶ-ಕಾಲ ಸಂರಚನೆಯು ದ್ರವ್ಯದ ಸಮೀಪದಲ್ಲಿ ವಿಕೃತಿಗೊಳ್ಳುತ್ತದೆ ಎಂಬ ಐನ್‌ಸ್ಟೈನ್‌ರ ವಿಚಾರವು ಸಮರ್ಥಿತವಾದುದನ್ನು ಅದು ತೋರಿಸಿಕೊಡುತ್ತಿದ್ದಿತು. ಈ ವೀಕ್ಷಿತ ಪರಿಣಾಮವು ಐನ್‌ಸ್ಟೈನ್‌ರು ಮುನ್ಸೂಚಿಸಿದ್ದ ಸಿದ್ಧಾಂತಕ್ಕೆ ಆಶ್ಚರ್ಯಪಡುವಷ್ಟು ಸಮೀಪವಾಗಿದ್ದಿತು.

ವಿಜ್ಞಾನದ ಅದ್ಭುತ ಜಗತ್ತಿನಲ್ಲಿ ಮಹಾಕಾಯನಂತೆ ದಾಪುಗಾಲು ಹಾಕಿಕೊಂಡು ನಡೆದ ಐನ್‌ಸ್ಟೈನ್‌ರ ಜೀವನದಲ್ಲಿ ಅವರ ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತವು ನಿಜಕ್ಕೂ ಒಂದು ಮಹೋನ್ನತ ಸಾಧನೆ ಆಗಿದ್ದಿತು. ಇದು ಆರಂಭವಾದದ್ದು ಸ್ವಿಟ್ಸರ್ಲೆಂಡಿನ ನಗರ ಬೆರ್ನ್‌ನ ಒಂದು ತೀರ ಸಾಮಾನ್ಯ ಪೇಟೆಂಟ್ ಕಾರ್ಯಾಲಯದಲ್ಲಿ. ಅಲ್ಲಿದ್ದಾಗ ಐನ್‌ಸ್ಟೈನ್ ೧೯೦೫ರಲ್ಲಿ ಐದು ಯುಗಪ್ರವರ್ತಕ ಬೃಹತ್ ಪ್ರಬಂಧಗಳನ್ನು ರಚಿಸಿದರು. ಅವು ಭೌತ ಜಗತ್ತನ್ನು ಕುರಿತು ಮಾನವ ಕುಲದ ವಿಚಾರಗಳನ್ನೇ ಬದಲಿಸಿದವು. ಪರ್ವಕಾಲದ ಸಂದಿಗ್ಧ ಪರಿಸ್ಥಿತಿಯಲ್ಲಿದ್ದ ಭೌತವಿಜ್ಞಾನದಲ್ಲಿ ಒಂದು ಕ್ರಾಂತಿಯಾಗಲಿದ್ದಿತು. ೧೮೯೭ರಲ್ಲಿ ಸರ್ ಜೆ. ಜೆ. ಥಾಮ್ಸನ್‌ರು ಎಲೆಕ್ಟ್ರಾನ್‌ಅನ್ನು ಆವಿಷ್ಕರಿಸಿದುದು ಈ ಕ್ರಾಂತಿಗೆ ಪರಿಸ್ಥಿತಿಯನ್ನು ಪಕ್ವಗೊಳಿಸಿದ್ದಿತು. ೧೯೦೦ರಲ್ಲಿ ಪ್ಲಾಂಕ್‌ರು ತಮ್ಮ ಕ್ವಾಂಟಮ್ ಊಹಾ ಸಿದ್ಧಾಂತದಿಂದ ಕ್ರಾಂತಿಯನ್ನು ಆಗುಗೊಳಿಸುವ ಪ್ರಕ್ರಿಯೆಯನ್ನು ಪ್ರಾರಂಭಿಸಿದ್ದರು. ಪ್ಲಾಂಕ್‌ರೇನೋ ಕೃಷ್ಣಕಾಯ ವಿಕಿರಣ ಸೂತ್ರವನ್ನು ಯಶಸ್ವಿಯಾಗಿ ವಿವರಿಸಿ ಕ್ರಾಂತಿಯನ್ನು ಆರಂಭಗೊಳಿಸಿದ್ದರೂ ಐನ್‌ಸ್ಟೈನ್‌ರು ತೋರಿದ ದಿಟ್ಟತನದ ಉಪಕ್ರಮ ವಿಲ್ಲದಿದ್ದಲ್ಲಿ ಅದು ತನ್ನ ದಿಶೆಯನ್ನೇ ಕಳೆದುಕೊಳ್ಳುತ್ತಿದ್ದಿತು. ಐನ್‌ಸ್ಟೈನ್‌ರ ಈ ಮಹೋನ್ನತ ಕಾಣಿಕೆಗೆ ಮನ್ನಣೆ ನೀಡಿಯೇ ಈಗ ೨೦೦೫ನೇ ವರ್ಷವನ್ನು, ಅಂದರೆ ೧೯೦೫ರ ಪ್ರಬುದ್ಧ ಪ್ರಬಂಧಗಳ ಶತಮಾನೋತ್ಸವದ ವರ್ಷವನ್ನು 'ಅಂತಾರಾಷ್ಟ್ರೀಯ ಭೌತ ವಿಜ್ಞಾನ ವರ್ಷ'ವನ್ನಾಗಿ ಆಚರಿಸಲು ತೀರ್ಮಾನಿಸಲಾಗಿದೆ.



ವಿಜ್ಞಾನದ ಅದ್ಭುತ ಜಗತ್ತಿನಲ್ಲಿ ಮಹಾ ಕಾಯನಂತೆ ದಾಪುಗಾಲು ಹಾಕಿಕೊಂಡು ನಡೆದ ಐನ್‌ಸ್ಟೈನ್‌ರ ಜೀವನದಲ್ಲಿ ಅವರ ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತವು ನಿಜಕ್ಕೂ ಒಂದು ಮಹೋನ್ನತ ಸಾಧನೆ ಆಗಿದ್ದಿತು. ಇದು ಆರಂಭವಾದದ್ದು ಸ್ವಿಟ್ಸರ್ಲೆಂಡ್‌ನ ನಗರ ಬೆರ್ನ್‌ನ ಒಂದು ತೀರ ಸಾಮಾನ್ಯ ಪೇಟೆಂಟ್ ಕಾರ್ಯಾಲಯದಲ್ಲಿ. ಅಲ್ಲಿದ್ದಾಗ ಐನ್‌ಸ್ಟೈನ್ ೧೯೦೫ರಲ್ಲಿ ಐದು ಯುಗಪ್ರವರ್ತಕ ಬೃಹತ್ ಪ್ರಬಂಧಗಳನ್ನು ರಚಿಸಿದರು. ಅವು ಭೌತ ಜಗತ್ತನ್ನು ಕುರಿತು ಮಾನವ ಕುಲದ ವಿಚಾರಗಳನ್ನೇ ಬದಲಿಸಿದವು.

ಡಾ॥ ಎಸ್. ಚಟರ್ಜಿ

ಐನ್‌ಸ್ಟೈನ್‌ರು ೧೯೦೫ರಲ್ಲಿ ಪ್ರಕಟಿಸಿದ ಐದು ಪ್ರಬುದ್ಧ ಪ್ರಬಂಧಗಳು ನಾಲ್ಕು ವಿಭಿನ್ನ ಕ್ಷೇತ್ರಗಳಿಗೆ ಸಂಬಂಧಿಸಿದ್ದವು – (೧) ಸ್ನಿಗ್ಧತೆ ಹಾಗೂ ದ್ರಾವಣಗಳ ವಿಸರಣ; (೨) ಬ್ರೌನಿಯನ್ ಚಲನೆ; (೩) ದ್ಯುತಿವಿದ್ಯುತ್ ಪರಿಣಾಮ ಹಾಗೂ (೪) ವಿಶೇಷ ಸಾಪೇಕ್ಷತಾ ಸಿದ್ಧಾಂತ. ಈ ಕೊನೆಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಅವರು ೧೯೦೫ರಲ್ಲಿ ಎರಡು ಪ್ರಬುದ್ಧ ಪ್ರಬಂಧಗಳನ್ನು ರಚಿಸಿದರು.

ದ್ಯುತಿವಿದ್ಯುತ್ ಪರಿಣಾಮವು ಎಲೆಕ್ಟ್ರಾನ್‌ನ ಆವಿಷ್ಕಾರದನಂತರ ಕೂಡಲೇ ಪ್ರಕಟ ವಾಯಿತು. ಲೋಹಗಳನ್ನು ಹ್ರಸ್ವ ಅಲೆಯುದ್ದದ ಬೆಳಕು (ಉದಾಹರಣೆಗೆ, ಹಸಿರು, ನೀಲಿ, ನೇರಳೆ, ಅತಿ ನೇರಳೆ ಅಥವಾ ಎಕ್ಸ್ ಕಿರಣಗಳು) ಬೆಳಗಿದಾಗ ಆ ಲೋಹಗಳಿಂದ ಎಲೆಕ್ಟ್ರಾನ್‌ಗಳು ಹೊರದೂಡ ಲ್ಪಡುತ್ತಿದ್ದವು. ಆದರೆ ಬಳಸಿದ ಬೆಳಕು ದೀರ್ಘ ಅಲೆಯುದ್ದದ್ದಾಗಿದ್ದರೆ (ಉದಾಹರಣೆಗೆ, ಕೆಂಪು, ಅವಕೆಂಪು ಇತ್ಯಾದಿ) ಬೆಳಕು ಎಷ್ಟು ಉಜ್ವಲವಾಗಿದ್ದರೂ ಎಲೆಕ್ಟ್ರಾನ್‌ಗಳು ಲೋಹದಿಂದ ಹೊರ ಬರುತ್ತಿರಲಿಲ್ಲ. ಇದು ಅಭಿಜಾತ ಭೌತವಿಜ್ಞಾನಿಗಳಿಗೆ ಒಂದು ಒಗಟಾಗಿದ್ದಿತು. ಅವರು ಈ ವಿದ್ಯಮಾನವನ್ನು ಮ್ಯಾಕ್ಸ್‌ವೆಲ್‌ರ ವಿಚಾರಗಳ ಮೂಲಕ ವಿವರಿಸಲು ಯತ್ನಿಸಿದರು. ರಾಕೆಟ್ಟೊಂದು ಭೂಮಿಯ ಗುರುತ್ವಾಕರ್ಷಣ ಕ್ಷೇತ್ರದಿಂದ ಹೊರ ಹೊರಡಬೇಕಾದಲ್ಲಿ ಅದಕ್ಕೆ ವಿಮೋಚನಾ ವೇಗವನ್ನು ನೀಡಬೇಕಾದ ರೀತಿಯಲ್ಲೇ ಎಲೆಕ್ಟ್ರಾನ್ ಒಂದು ಲೋಹದ ಮೇಲ್ಮೈನಿಂದ ಹೊರ ಹೊಮ್ಮಬೇಕಾದಲ್ಲಿ ಬೆಳಕು ಅದಕ್ಕೆ ತನ್ನ ಶಕ್ತಿ ನೀಡಬೇಕಿದ್ದಿತು ಎಂಬುದೇನೋ ಅರ್ಥವಾಗಿದ್ದಿತು. ಆದರೆ ಎಲೆಕ್ಟ್ರಾನ್ ಈ ಶಕ್ತಿಯನ್ನು ಪಡೆದುಕೊಳ್ಳಬೇಕಾದಲ್ಲಿ ಬೆಳಕು ಹೆಚ್ಚು ಉಜ್ವಲವಾಗಿರಬೇಕು, ಅಂದರೆ ಬೆಳಕಿನ ವಲಯ ವಿಶಾಲ ವಾಗಿರಬೇಕು, ಬೆಳಕಿನ ಅಲೆಯುದ್ದ ಅಪ್ರಸ್ತುತ, ಎಂದು ಮ್ಯಾಕ್ಸ್‌ವೆಲ್‌ರ ವಿಚಾರ ತಿಳಿಸುತ್ತಿದ್ದಿತು. ಆದರೆ ವಸ್ತುಸ್ಥಿತಿ ಬೇರೆಯೇ ಆಗಿದ್ದಿತು. ಬೆಳಕಿನ ಅಲೆಯುದ್ದದ ಪರಿಗಣನೆ ಅತ್ಯವಶ್ಯವಾಗಿದ್ದಿತು. ಮ್ಯಾಕ್ಸ್‌ವೆಲ್‌ರ ಭೌತವಿಜ್ಞಾನ ಇದಕ್ಕೆ ವಿವರಣೆ ನೀಡದಾಗಿದ್ದಿತು.

ಭೌತ ವಿಜ್ಞಾನ ಈಗೊಂದು

ನಿಲುಕೊನೆ ತಲುಪಿದ್ದಿತು. ಈ ಪರಿಸ್ಥಿತಿಯಿಂದ ಐನ್‌ಸ್ಟೈನ್ ಅದನ್ನು ಹೊರತಂದರು. ಇದಕ್ಕಾಗಿ ಅವರು ಕ್ವಾಂಟಮ್ ಪ್ರಕಲ್ಪನೆಗಳನ್ನು ಅನ್ವಯಿಸಿದರು. ಪ್ಲಾಂಕ್‌ರು ಈ ಪ್ರಕಲ್ಪನೆಗಳನ್ನು ಬೇರೆ ಸಂದರ್ಭದಲ್ಲಿ ಬಳಸಿದ್ದರು. ಪ್ಲಾಂಕ್‌ರ ಮುಖ್ಯ ಕಾಳಜಿಯೆಲ್ಲ ಕೃಷ್ಣಕಾಯ ವಿಕಿರಣ ಪ್ರಶ್ನೆಯಾಗಿದ್ದಿತು. ಅಂದರೆ, ಕಾಸಿದ ಕಬ್ಬಿಣದ ತುಂಡೊಂದು ಮೊದಲು ಕೆಂಪಾಗಿ, ಮತ್ತಷ್ಟು ಕಾಸಿದಾಗ ಬೂದು ಬಣ್ಣಕ್ಕೆ ತಿರುಗುವುದೇಕೆ, ಎಂಬುದು ಅವರ ಕಾಳಜಿಯಾಗಿದ್ದಿತು. ಮ್ಯಾಕ್ಸ್‌ವೆಲ್‌ರ ಭೌತವಿಜ್ಞಾನ ಇದಕ್ಕೆ ಉತ್ತರ ನೀಡದಾಗಿದ್ದಿತು. ದ್ರವ್ಯವು ಬೆಳಕನ್ನು ಹೀರಿಕೊಳ್ಳುವುದು ಅಥವಾ ಹೊರಹಾಕುವುದು ನಿರಂತರವಾಗಿಯೇನೂ ನಡೆಯುವುದಿಲ್ಲ. ಆದರೆ ಶಕ್ತಿ ಪರಿಮಾಣ (ಕ್ವಾಂಟ) ಎಂದು ಕರೆಯಲಾಗುವ ಪ್ರಕ್ರಿಯೆಯ ಮೂಲಕ ಹೆಜ್ಜೆಹೆಜ್ಜೆಗಳಲ್ಲಾಗುತ್ತದೆ, ಎಂದು ಪ್ಲಾಂಕ್ ಅದಕ್ಕೆ ವಿವರಣೆ ನೀಡಿದರು. ಅವರ ಪ್ರಕಾರ ಈ ಶಕ್ತಿ ಪರಿಮಾಣ (ಕ್ವಾಂಟಂ ಆಫ್‌ಎನರ್ಜಿ) $E = h\upsilon$ ಆಗಿರುತ್ತದೆ. ಇಲ್ಲಿ $\upsilon$ ಬೆಳಕಿನ ಆವೃತ್ತಿ. ಇದು $c/\lambda$ಗೆ ಸಮ. ಇಲ್ಲಿ $c$ ಬೆಳಕಿನ ವೇಗ, $\lambda$ ಅದರ ಅಲೆಯುದ್ದ. ಪ್ಲಾಂಕ್‌ರ ಈ ಪ್ರಬುದ್ಧ ಪ್ರಬಂಧಗಳನ್ನೆಲ್ಲ ಎಚ್ಚರಿಕೆಯಿಂದ ಓದಿದ್ದ ಐನ್‌ಸ್ಟೈನ್ ಕೇಳಿದರು : ಈ ಎನರ್ಜಿ ಕ್ವಾಂಟಮ್ ಅನ್ನು (ಇದನ್ನು ಐನ್‌ಸ್ಟೈನ್ ಫೋಟಾನ್ ಎಂದು ಕರೆದರು) ದ್ರವ್ಯದೊಂದಿಗೆ ವಿನಿಮಯವಾಗಿಸುವುದು ಸಾಧ್ಯವೇ? ಅದು ಸಾಧ್ಯ ಎಂದು ಅವರು ದಿಟ್ಟತನದಿಂದ ಸಲಹೆ ಮಾಡಿದರು. ಕ್ವಾಂಟಮ್ ಆಫ್ ಎನರ್ಜಿ (ಶಕ್ತಿ ಪರಿಮಾಣ)ವನ್ನು ಎಲೆಕ್ಟ್ರಾನ್‌ಗೆ ನೀಡುವಂತೆ ಮಾಡುವುದು ಸಾಧ್ಯ ಎಂದವರು ಹೇಳಿದರು. ಲೋಹದ ಮೇಲ್ಮೈನಿಂದ ಎಲೆಕ್ಟ್ರಾನ್‌ಅನ್ನು ಹೊರಗೆಳೆಯಲು $w$ ಶಕ್ತಿ ಬೇಕಾಗಿದ್ದಲ್ಲಿ ಉಳಿದದ್ದು $(h\upsilon\text{-}w)$ ಲೋಹದ ಮೇಲ್ಮೈನಿಂದ ಆಚೆ ಎಲೆಕ್ಟ್ರಾನ್‌ನ ಚಲನಶಕ್ತಿ $(1/2)mu^2$ ಆಗಿ ಕಾಣಿಸಿಕೊಳ್ಳಲೇಬೇಕು. ಇದು ದ್ಯುತಿ ಎಲೆಕ್ಟ್ರಾನ್‌ಗಳು ಲೋಹವನ್ನು ಬಿಟ್ಟು ಹೊರಬಂದಾಗ ಹೊಂದಿರುವ ವೇಗವನ್ನು ಸೂಚಿಸುತ್ತದೆ. ಹಾಗಿದ್ದ ಮೇಲೆ ಬೆಳಕಿನ ಉಜ್ವಲತೆ ಏನು ಮಾಡುತ್ತದೆ ? ಹೆಚ್ಚು ಉಜ್ವಲವಾದ ಬೆಳಕು ಹೆಚ್ಚು ಸಮೃದ್ಧವಾದ ಫೋಟಾನ್‌ಗಳ, ಹಾಗಾಗಿ ಹೆಚ್ಚು ಸಮೃದ್ಧ ಫೋಟೋ ಎಲೆಕ್ಟ್ರಾನ್‌ಗಳ ಹೊಳೆಯ ಆಕರವಾಗಿರುತ್ತದೆ. ಆದರೆ ಅವುಗಳ ವೇಗ ಇನ್ನೂ $(1/2)\, mu^2 = (h\upsilon^2\text{-}w)$ ಎಂಬ ನಿಯಮವನ್ನೇ ಅನುಸರಿಸುತ್ತದೆ.

ತಾವು ೧೯೦೫ರಲ್ಲಿ ಬರೆದ ಪ್ರಬುದ್ಧ ಪ್ರಬಂಧಗಳಲ್ಲೆಲ್ಲ ದ್ಯುತಿವಿದ್ಯುತ್ ಪರಿಣಾಮ ಕುರಿತ ಪ್ರಬಂಧವನ್ನಷ್ಟೇ ಐನ್‌ಸ್ಟೈನ್ ಕ್ರಾಂತಿಕಾರಿ ಎಂದು ಕರೆದರು. (ಆಶ್ಚರ್ಯಗೊಳಿಸುವಂತೆ, ಸಾಪೇಕ್ಷತಾವಾದ ಕುರಿತ ಸಿದ್ಧಾಂತವನ್ನು ಅವರು ಹಾಗೆ ಕರೆಯಲಿಲ್ಲ!) ದ್ಯುತಿವಿದ್ಯುತ್ ಪರಿಣಾಮ ಕುರಿತ ಅವರ ಕೃತಿಯು ಅವರಿಗೆ ೧೯೨೧ರಲ್ಲಿ ಭೌತವಿಜ್ಞಾನದಲ್ಲಿ ನೊಬೆಲ್ ಪಾರಿತೋಷಕ ತಂದುಕೊಟ್ಟಿತು. ಈ ಪ್ರಬಂಧವು ದ್ರವ್ಯಕಣಗಳ ಅಂದರೆ ಎಲೆಕ್ಟ್ರಾನ್‌ಗಳ ಗತಿವಿಜ್ಞಾನದಲ್ಲಿ ಕ್ವಾಂಟಮ್ ಪ್ರಕಲ್ಪನೆಗಳನ್ನು ಮೊತ್ತಮೊದಲ ಬಾರಿಗೆ ಬಳಕೆಗೆ ತಂದಿತು ಮತ್ತು ಅದರಲ್ಲಿನ ಎಲ್ಲ ಮುನ್ಸೂಚನೆಗಳೂ ದಿಟವೆಂದು ಸಾಧಿತವಾದವು, ಎಂಬುದರಿಂದಲೇ ಅದರ ಕ್ರಾಂತಿಕಾರಿ ಸ್ವರೂಪವನ್ನು ಅರ್ಥ ಮಾಡಿಕೊಳ್ಳಬಹುದು. ಇದಾದ ನಂತರ ಐನ್‌ಸ್ಟೈನ್‌ರು ಕ್ವಾಂಟಮ್ ಗತಿವಿಜ್ಞಾನದ ವಿಚಾರಗಳನ್ನು ಘನ ಪದಾರ್ಥವೊಂದರಲ್ಲಿರುವ ಪರಮಾಣುಗಳಿಗೂ ಅನ್ವಯಿಸಿ ಘನಪದಾರ್ಥಗಳ ವಿಶಿಷ್ಟ ಉಷ್ಣದ ವರ್ತನೆಯನ್ನು ಯಶಸ್ವಿಯಾಗಿ ವಿವರಿಸುವ ಮೂಲಕ ಮತ್ತಷ್ಟು ಮುನ್ನಡೆ ಸಾಧಿಸಿದರು. ೧೯೧೩ರಲ್ಲಿ ನೀಲ್ಸ್ ಬೋರ್‌ರವರೇ ಮೊದಲಬಾರಿಗೆ ಕ್ವಾಂಟಮ್ ಭೌತ ವಿಜ್ಞಾನದ ವಿಚಾರಗಳನ್ನು ಪರಮಾಣುವೊಂದರ ಬೀಜಕೇಂದ್ರದ ಸುತ್ತ ಎಲೆಕ್ಟ್ರಾನ್‌ಗಳ ಗ್ರಹಗತಿೀಯ ಚಲನೆಗೆ ಅನ್ವಯಿಸಿದುದು. ದ್ಯುತಿವಿದ್ಯುತ್ ಪರಿಣಾಮ ಸೂತ್ರದ ಮೂಲಕ ಮೊದಲ ಬಾರಿಗೆ ವ್ಯಕ್ತಪಡಿಸಲಾದ ಬೆಳಕು ಮತ್ತು ಎಲೆಕ್ಟ್ರಾನ್‌ಗಳ ನಡುವಿನ ಅಂತರಕ್ರಿಯೆ ಕುರಿತ ಐನ್‌ಸ್ಟೈನ್‌ರ ವಿಚಾರಗಳು ೧೯೧೯ರಲ್ಲಿ ಪೂರ್ಣರೂಪ ಪಡೆದುಕೊಂಡವು. ಬೋಸ್-ಐನ್‌ಸ್ಟೈನ್ ಸಂಖ್ಯಾಕಲನ ವಿಜ್ಞಾನಕ್ಕೆ ಸಂಬಂಧಿಸಿ ಐನ್‌ಸ್ಟೈನ್‌ರು ಸಿದ್ಧಗೊಳಿಸಿದ ಕ್ವಾಂಟಮ್ ಸಿದ್ಧಾಂತವೇ ಅವರ ಕೊನೆಯ ಮಹಾಕೃತಿಯಾಗಿದ್ದಿತು. ಬೋಸ್‌ರವರು ಢಾಕಾದಲ್ಲಿ ಕೆಲಸ ಮಾಡುತ್ತ ಬೋಸ್-ಐನ್‌ಸ್ಟೈನ್ ಸಂಖ್ಯಾಕಲನ ವಿಜ್ಞಾನದ ಮೂಲಾಂಶಗಳನ್ನು ಆವಿಷ್ಕರಿಸಿದ್ದರು. ಐನ್‌ಸ್ಟೈನ್‌ರು ಭೌತವಿಜ್ಞಾನದಲ್ಲಿ ಈ ಆವಿಷ್ಕರಣದ ಪ್ರಾಮುಖ್ಯವನ್ನು ಅರ್ಥಮಾಡಿಕೊಂಡಿದ್ದರು. ಫೋಟಾನ್‌ನಂಥ ದ್ರವ್ಯರಹಿತ ಕಣಗಳಲ್ಲಷ್ಟೇ ಅಲ್ಲ, ಪರಮಾಣು ವ್ಯವಸ್ಥೆಗಳಲ್ಲೂ ಅದರ ಕಾರ್ಯಾಚರಣೆ ಕಂಡುಬರುತ್ತದೆಂಬುದನ್ನು ಅವರು ತಿಳಿದಿದ್ದರು.

ಐನ್‌ಸ್ಟೈನ್‌ರ ಸಾಪೇಕ್ಷತಾ ಸಿದ್ಧಾಂತವೇ ಅವರ ಖ್ಯಾತಿಯ ಆಧಾರಸ್ತಂಭ. ಶಕ್ತಿ $E$ಯನ್ನು ದ್ರವ್ಯ $m$ನೊಂದಿಗೆ ಸಂಬಂಧಿಸುವ $E=mc^2$ ಎಂಬ ಸೂತ್ರವು ಸುಪ್ರಸಿದ್ಧವಾದುದು. ಅದನ್ನು ವಿಜ್ಞಾನಿಗಳಷ್ಟೇ ಅಲ್ಲ ಸಾಮಾನ್ಯ ಜನರೂ ಬಲ್ಲರು. ಅದರ ಬಗೆಗೆ ಎಲ್ಲರಿಗೂ ಅರ್ಥವಾಗುವಂತೆ ವಿಪುಲವಾಗಿ ಲೇಖನಗಳನ್ನು ಬರೆಯಲಾಗಿದೆ. ನ್ಯೂಟನ್‌ರ ಭೌತ ವಿಜ್ಞಾನವೂ ಮ್ಯಾಕ್ಸ್‌ವೆಲ್‌ರ ವಿದ್ಯುತ್‌ಗತಿವಿಜ್ಞಾನವೂ ಆಧರಿಸಿದಂಥ ಗೆಲಿಲಿಯೋನ ಸಾಪೇಕ್ಷತಾ ಸಿದ್ಧಾಂತವು, ಬೆಳಕಿಗೆ ಅನ್ವಯಿಸಿದಾಗ, ಅಸಿಂಧುವಾಗುತ್ತದೆ ಎಂಬುದು ಕಂಡುಬಂದಿತಾದ ಕಾರಣ ಐನ್‌ಸ್ಟೈನ್‌ರ ಸಾಪೇಕ್ಷತಾ ಸಿದ್ಧಾಂತಕ್ಕೆ ಆದ್ಯತೆ ಒದಗಿತು. ವೀಕ್ಷಕನೊಬ್ಬ ಬೆಳಕಿನ ಆಕರದ ಕಡೆಗೆ ಅಥವಾ ಅದರಿಂದ ದೂರ ಪ್ರಯಾಣ ಮಾಡಿದಾಗ ಬೆಳಕಿನ ಪಲ್ಲಟ ಒಂದೇ ವೇಗದಲ್ಲಿ c=೩೦೦,೦೦೦ ಕಿ.ಮೀ./ಸೆ. ವೇಗದಲ್ಲಿ ಚಲಿಸುತ್ತದೆಂದು ಅವನು ಯಾವತ್ತೂ ಕಂಡುಕೊಳ್ಳುತ್ತಾನೆ. ಇಲ್ಲಿ ಅವನು

## ಭೂಮಿ ತೂಗುವ ಹಕ್ಕಿ

ಮೂಡಣ ಬಾನ ತಾಂಬಾಣದಲಿ ರಂಗು ಚೆಲ್ಲುತ್ತಿರಲು
ಬಂಗಾರ ತೊಟ್ಟು ಶೃಂಗಾರಗೊಂಡವು ಬೆಟ್ಟ ಕಣಿವೆಗಳೆಲ್ಲ
ಹಾಡತೊಡಗಲು ಹಕ್ಕಿಗಳು ಮೋಹನ ರಾಗದಲಿ
ಹೊಂಬಿಸಿಲು ಕೋಲಾಟವಾಡಿತು ನಾಟ್ಯದಲ್ಲಿ.

ಬಿಸಿಲ ಕೋಲಾಟಕೆ ತೇಲಿಬರೆ ಮಂಜುಮಳೆ
ಅಂಗಳದಿ ತುಂಬಿತು ಕೆನ್ನೀರ ರಂಗವಲ್ಲಿ,
ಹೂಗಂಪು ಬೆರೆತ ತಣ್ಣನೆಯ ಮೆಲುಗಾಳಿ ಬೀಸುತಿರೆ,
ನೆನೆಯುತ್ತ ಹನಿಮಳೆಯ ಲಾಸ್ಯದಲ್ಲಿ
ಎತ್ತಲಿಂದಲೊ ಹಾರಿ ಪುರ್ರನಿಳಿದಿತ್ತೊಂದು
ಭೂಮಿತೂಗುವ ಹಕ್ಕಿ ಇಲ್ಲಿ ಅಂಗಳದಲ್ಲಿ.

ನೀಲ ಸಾಗರದುದ್ದ ನೀಳ ರೆಕ್ಕೆಗಳ ಚಾಚಿ
ಖಂಡಖಂಡಗಳ ದಾಟಿ ಬಂದಾ
ವಲಸೆ ಜಂಗಮವಿದುವೆ ಭೂಮಿತೂಗುವ ಹಕ್ಕಿ
ತೂಗಿರೇ ತೂಗಿರೇಯೆಂದು ಮಧುರ ಜೋಗುಳದಲ್ಲಿ
ಬಾಲ ಕುಣಿಸುತ್ತ ಮುದ್ದಿಸುತ ಭೂಮಿಯ
ತೂಗುತ್ತಲಿತ್ತು ಹಗುರ ಸಾನುರಾಗದಲ್ಲಿ.

ಹಾಡುತ್ತ ತೂಗುತ್ತಲಿರಲು ಹಕ್ಕಿ
ನುಡಿದಿತ್ತು ಕಳವಳದಲ್ಲಿ ಬಿಕ್ಕಿ:
ನನ್ನಂಥ ಬಡಪಾಯಿ ಕವಿಯೇ,
ನಿನಗಿರಲಿ ನನಗಿರಲಿ, ಅಣುರೇಣು ತೃಣಕಾಷ್ಠ
ಗಳಿಗಿರಲಿ, ಇರುವುದೊಂದೇ ಭೂಮಿ !
ದೇಶಾಂತರ ಸುತ್ತಿ ಬಂದಿರಲು ನಾನು
ಶಾಂತಿಯ ನೆಲೆ ಕಾಣಲಿಲ್ಲ ಅಲ್ಲಿ !
ಕಾಣಲಿಲ್ಲ ಇಲ್ಲಿ!

ಇನ್ನಿಲ್ಲಿ ಇರಲಾರೆ ಕವಿಯೇ,
ಹೋಗಲಾರೆನು ಮತ್ತೆ ಅಲ್ಲಿಗೆ,
ಹೋಗಲಿ ಇನ್ನೆಲ್ಲಿಗೆ ?

ಮೈದಣಿಯುವಂತೆ, ಮೈತಣಿಯುವಂತೆ
ಕೊರಳಕೊಳಲಲ್ಲಿ ಹಕ್ಕಿ ಒಳದನಿಯ ನುಡಿಸಿದಂತೆ
ಭೂಮಿ ಹಕ್ಕಿಯನು, ಹಕ್ಕಿ ಭೂಮಿಯನು
ತೂಗಿದವು ಒಲುಮೆಯಿಂದ ಸಾಂಗತ್ಯದಲ್ಲಿ.

ಜಿ. ಎಸ್. ಉಬರಡ್ಕ
'ಕಾರ್ತಿಕ', ಅಂಚೆ : ದೊಡ್ಡತೋಟ - ೫೭೪ ೨೪೮
ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ

ಆದರತ್ತ ಸರಿಯುವ ಅಥವಾ ಅದರಿಂದ ಹೊರನಡೆಯುವ ಚಲನೆಯ ವೇಗ ಅಪ್ರಸ್ತುತ. ಐನ್‌ಸ್ಟೈನ್‌ರು ಈ ಸಮಸ್ಯೆಯನ್ನು ಎರಡು ನಿರೂಪಣೆಗಳ ಮೂಲಕ ಪರಿಹರಿಸಿದರು. ಮೊದಲನೆಯದು, ಬೆಳಕಿನ ವೇಗ ಸಾರ್ವತ್ರಿಕವಾಗಿ ಸ್ಥಿರವಾದುದು. ಬೆಳಕಿನ ಆಕರ ಅಥವಾ ವೀಕ್ಷಕ ಏಕರೀತಿಯ ವೇಗದಲ್ಲಿ ಚಲಿಸುತ್ತಿದ್ದರೂ ಬೆಳಕಿನ ವೇಗ ಸ್ಥಿರ ಎಂಬುದು ಸತ್ಯ. ಎರಡನೆಯದು, ವೀಕ್ಷಕನ ಪರಿವೆ ಇಲ್ಲದೆ, ಭೌತವಿಜ್ಞಾನ ನಿಯಮಗಳು ಒಂದೇ ಆಗಿರುತ್ತವೆ. ೧೯೦೫ರಲ್ಲಿ ಬರೆದ ಎರಡು ಪ್ರಬಂಧಗಳಲ್ಲಿ ವ್ಯಕ್ತಪಡಿಸಿರುವ ಈ ವಿಚಾರಗಳು ದೇಶ, ಕಾಲ, ರಾಶಿ ಹಾಗೂ ಶಕ್ತಿಗೆ ಸಂಬಂಧಿಸಿ ಮಾನವನ ಪ್ರಕಲ್ಪನೆಗಳಲ್ಲಿ ಮೂಲಭೂತ ಬದಲಾವಣೆಗಳನ್ನು ಉಂಟುಮಾಡಿ ತನ್ಮೂಲಕ ಇಡೀ ಭೌತವಿಜ್ಞಾನದ ದಿಶೆಯನ್ನು ಬದಲಿಸಿದವು. ಅದು ನಿಜಕ್ಕೂ ಒಂದು ಕ್ರಾಂತಿಯಾಗಿದ್ದಿತು. ಏಕೆಂದರೆ, ಈ ವಿಚಾರಗಳನ್ನು ನ್ಯೂಟನ್ನನ ಭೌತವಿಜ್ಞಾನ ಸೂತ್ರಗಳನ್ನು ವಿಸ್ತರಿಸುವುದರಿಂದ ಅವಕಲಿಸುವುದು ಎಂದಿಗೂ ಸಾಧ್ಯವಿರಲಿಲ್ಲ. ವಿದ್ಯುತ್ ಗತಿವಿಜ್ಞಾನ ದಲ್ಲಿನ ಸಂದಿಗ್ಧತೆಯೊಂದನ್ನು ಪರಿಹರಿಸಲು ತಂದ ಪ್ರಕಲ್ಪನೆಗಳು ವಿದ್ಯುತ್‌ಗತಿ ವಿಜ್ಞಾನವನ್ನಷ್ಟೆ ಅಲ್ಲ ಯಂತ್ರವಿಜ್ಞಾನವನ್ನೂ ಬದಲಿಸಿದವು! ಅದು ಈ ಎರಡೂ ವಿಜ್ಞಾನಗಳ ನಡುವಿನ ಗಡಿ ರೇಖೆಗಳನ್ನು ಮುರಿದುಹಾಕಿತು. ಬೆಳಕು ಅವುಗಳ ನಡುವಿನ ಸೇತುವೆಯಾಗಿ ರೂಪುಗೊಂಡಿತು. ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತದೊಂದಿಗೆ ಈ ವಿಚಾರಗಳನ್ನು ಅವುಗಳ ತರ್ಕಬದ್ಧ ತೀರ್ಮಾನದತ್ತ ಒಯ್ಯಲಾಗಿದ್ದಿತು. ಅದು ಸಂಪ್ರದಾಯಶರಣರಿಗೆ ಎಷ್ಟು ವಿನಾಶಕಾರಿಯಾಗಿ ಕಂಡುಬಂದಿತೆಂದರೆ ಖಗೋಳ ಯಂತ್ರವಿಜ್ಞಾನದ ಪ್ರಾಧ್ಯಾಪಕರೊಬ್ಬರು ಉದ್ಗರಿಸಿದರು: ''ಈಗ ಕೆಲವು ವರ್ಷಗಳಿಂದ ಇಡೀ ಜಗತ್ತು ಭೌತಿಕವಾಗಿಯೂ ಮಾನಸಿಕ ವಾಗಿಯೂ ಪ್ರಕ್ಷುಬ್ಧ ಸ್ಥಿತಿಯಲ್ಲಿದೆ. ಯುದ್ಧ, ಮುಷ್ಕರಗಳು, ಬೋಲ್ಷೆವಿಕ್ ಬಂಡಾಯ ಇತ್ಯಾದಿಗಳು ಈ ಪ್ರಕ್ಷುಬ್ಧತೆಯ ಭೌತಿಕ ಸ್ವರೂಪಗಳಾಗಿವೆ. ಅವು ವಾಸ್ತವವಾಗಿ ಯಾವುದೇ ಹೆಚ್ಚು ಗಾಢವಾದ ಪ್ರಕ್ಷೋಭೆಯ ದೃಗ್ಗೋಚರ ಅಂಶಗಳಾಗಿವೆ. ಈ ಪ್ರಕ್ಷೋಭೆ ವಿಶ್ವವ್ಯಾಪಿಯಾಗಿದೆ. ಇಂತಹುದೇ ಪ್ರಕ್ಷೋಭೆ ವಿಜ್ಞಾನ ಜಗತ್ತಿನ ಮೇಲೂ ದಾಳಿ ನಡೆಸಿದೆ...'' ನಿಜಕ್ಕೂ, ದ್ರವ್ಯವು ರಾಶಿರಹಿತ ಅಲೆಗಳನ್ನು ಅಂದರೆ ಬೆಳಕನ್ನು ಕ್ಷೋಭೆಗೊಳಿಸಬಲ್ಲದು (ಗುರುತ್ವಾಕರ್ಷಣೆಯಿಂದ ಬೆಳಕು ಬಾಗುವುದು ಸಾಧಿಸಿ ತೋರಿರುವಂತೆ) ಎಂಬುದು ಸಂಪ್ರದಾಯ ಶರಣರಿಗೆ ಭಾರಿ ಆತಂಕದ ವಿಷಯವೇ ಆಗಿದ್ದಿತು. ಆದರೆ ಈ ಸಾಧ್ಯತೆಯನ್ನು ತೋರಿಸಿಕೊಟ್ಟ ವ್ಯಕ್ತಿಯೋ ತಮ್ಮ ಆವಿಷ್ಕರಣೆಯ ಮಹೋನ್ನತ ವಿಜಯವನ್ನು ಜಗತ್ತಿನೊಂದಿಗೆ ಕೂಡಿಕೊಂಡು ಆಚರಿಸದಾಗಿದ್ದರು. ೧೯೧೯ರ ನವೆಂಬರ್ ೭ರಂದು ಅವರು ನಿದ್ರಾನಂತರ ಎಚ್ಚರಗೊಂಡಾಗ ಬರ್ಲಿನ್ನಿನಲ್ಲಿ ಅವರ ಮನೆಯ ಮುಂದಿನ ಬೀದಿಯಲ್ಲಿ ಕಾರ್ಮಿಕರಿಗೂ ಸರಕಾರೀ ಸೈನ್ಯದಳಗಳಿಗೂ ನಡುವೆ ಘರ್ಷಣೆ ನಡೆದು ತಡೆಗಟ್ಟುಗಳನ್ನು ನಿರ್ಮಿಸಲಾಗಿದ್ದುದನ್ನು ಕಂಡರು. ಕಾರ್ಮಿಕರ ಈ ಬಂಡಾಯ ಪರಾಭವಗೊಂಡು ರೋಸಾ ಲುಕ್ಸೆಂಬರ್ಗ್‌ರು ಅದರಲ್ಲಿ ತಮ್ಮ ಪ್ರಾಣವನ್ನೇ ಕಳೆದುಕೊಂಡರು.

ಐನ್‌ಸ್ಟೈನ್‌ರು ೧೯೦೫ರಲ್ಲಿ ರಚಿಸಿದ ಇನ್ನೆರಡು *ಕೃತಿಗಳು ಮೂಲಭೂತ ಪ್ರಶ್ನೆಯೊಂದನ್ನು ಗಾಢವಾಗಿ ಪರಿಶೀಲಿಸಿದ್ದವು. ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಎಲ್ಲರೂ ಈ ಪ್ರಶ್ನೆ ಕುರಿತು ಏಕಾಭಿಪ್ರಾಯ ಹೊಂದಿರಲಿಲ್ಲ. ಅದೇ ಪರಮಾಣುವಿನ ಅಸ್ತಿತ್ವದ ಪ್ರಶ್ನೆಯಾಗಿದ್ದಿತು. ಅಣುಗಳ ಹಾಗೂ ಪರಮಾಣುಗಳ ದ್ರಾವಣಗಳಲ್ಲಿ ಅವುಗಳ ಸ್ನಿಗ್ಧತೆ ಹಾಗೂ ವಿಸರಣ ನಿಯತಾಂಕಗಳನ್ನು ಅಳೆಯುವ ಮೂಲಕ ಅಣುಗಳ ಹಾಗೂ ಪರಮಾಣುಗಳ ಗಾತ್ರಗಳನ್ನು ನಿರ್ಧರಿಸುವ ಹೊಸ ವಿಧಾನವೊಂದನ್ನು ಐನ್‌ಸ್ಟೈನ್‌ರ ಪ್ರಬುದ್ಧ ಪ್ರಬಂಧ ವಿವರಿಸಿದ್ದಿತು. ಪರಮಾಣುಗಳು ಅಸ್ತಿತ್ವದಲ್ಲಿವೆಯಷ್ಟೆ ಅಲ್ಲ, ಅವು ಎಷ್ಟು ದೊಡ್ಡ ಗಾತ್ರದವು ಎಂಬುದನ್ನು ಈ ಕೃತಿ ತೋರಿಸಿಕೊಟ್ಟಿದ್ದಿತು. ಮತ್ತೊಂದು ಕೃತಿ ಬ್ರೌನಿಯನ್ ಚಲನ ಸಿದ್ಧಾಂತಕ್ಕೆ ಸಂಬಂಧಿಸಿದ್ದಿತು. ದ್ರಾವಣಗಳಲ್ಲಿ ನಿಲಂಬಿತವಾದ ಕಣಗಳು ಏಕೆ ಯಾದೃಚ್ಛಿಕ ಚಲನೆಗಳಿಗೆ ಒಳಗಾಗುತ್ತವೆಂಬುದನ್ನು ಅದು ವಿವರಿಸಿದ್ದಿತು. ನಿಲಂಬಿತ ಕಣಗಳು ತರಲದಲ್ಲಿ ಪರಮಾಣುಗಳ ಯಾದೃಚ್ಛಿಕ ಬಡಿತಗಳಿಗೆ ಒಳಗಾಗಿರುತ್ತವೆ ಮತ್ತು ತರಲದ ಖರತ್ವ ಹೆಚ್ಚಾದಂತೆ ಈ ಬಡಿತಗಳು ಹೆಚ್ಚು ಆಗಾಗ್ಗೆ ಮತ್ತು ಹೆಚ್ಚು ಪ್ರಬಲವಾಗಿ ಆಗತೊಡಗುತ್ತವೆ ಎಂದು ಐನ್‌ಸ್ಟೈನ್ ಇದಕ್ಕೆ ವಿವರಣೆ ನೀಡಿದ್ದರು. ನಿಲಂಬಿತ ಕಣಗಳು ಒಂದು ನಿರ್ದಿಷ್ಟ ಕಾಲದಲ್ಲಿ ಸಂಚರಿಸಬಲ್ಲ ದೂರದ ಕುರಿತೂ ಈ ಸಿದ್ಧಾಂತ ಒಂದು ಸೂತ್ರವನ್ನು ನೀಡಿದ್ದಿತು. ಇದೇ ಸುಪ್ರಸಿದ್ಧ ಐನ್‌ಸ್ಟೈನ್-ಸ್ಮೊಲುಚೋವ್‌ಸ್ಕಿ ಸೂತ್ರ. ಇದು ಯಾದೃಚ್ಛಿಕ ಪ್ರಕ್ರಿಯೆಗಳ ಅಧ್ಯಯನಕ್ಕೆ ಮೂಲೆಗಲ್ಲಾಗಿದೆ. ಪಾಲಿಮರ್‌ಗಳು, ಕ್ರೊಮೋಸೋಮ್‌ನಲ್ಲಿ ಜೀನ್‌ಗಳ ನಾಕ್ಷಿಕ ದೂರ, ನಕ್ಷತ್ರೀಯ ಗತಿವಿಜ್ಞಾನ – ಇವುಗಳ ಅಧ್ಯಯನದಲ್ಲಷ್ಟೆ ಅಲ್ಲ, ಸ್ಟಾಕ್ ಎಕ್ಸ್‌ಚೇಂಜ್‌ನಲ್ಲಿ ಷೇರು ಬೆಲೆಗಳು ಯಾದೃಚ್ಛಿಕವಾಗಿ ಏರುಪೇರಾಗುವುದರ ಅಧ್ಯಯನದಲ್ಲೂ ಮೇಲಿನ ಸೂತ್ರ ಅನ್ವಯಕ್ಕೆ ಬರುತ್ತದೆ. ಇಪ್ಪತ್ತನೆಯ ಶತಮಾನದ ಆರಂಭಿಕ ಘಟ್ಟದ ಸಂದರ್ಭದಲ್ಲಿ ಈ ಸೂತ್ರವು – ಪರಮಾಣುಗಳು ಅಸ್ತಿತ್ವದಲ್ಲಿವೆಯಷ್ಟೆ ಅಲ್ಲ ದ್ರವ್ಯವು ಚಲನೆಯಲ್ಲಿರುತ್ತದೆ; ಯಾವುದೇ ವಸ್ತುವಿನಲ್ಲಿ ದ್ರವ್ಯದ ಯಾದೃಚ್ಛಿಕ ಸಂಚಲನೆಯ ಚಲನಶಕ್ತಿಯೇ ಉಷ್ಣಶಕ್ತಿಯಾಗಿ ತೋರ್ಪಡಿಸಿಕೊಳ್ಳುವುದು; ಈ ಯಾದೃಚ್ಛಿಕ ಸಂಚಲನೆಯೇ ಭೌತ ವ್ಯವಸ್ಥೆಗಳನ್ನು ಅವಿಪರ್ಯೇಯಗಳನ್ನಾಗಿ ಮಾಡುವುದು, ಅಂದರೆ, ಅವು ಮೊದಲು ಸಿದ್ಧಗೊಳಿಸಿದಾಗ ಇದ್ದಂಥ ಸ್ಥಿತಿಗೆ ಹಿಂದಿರುಗವು – ಇವೆಲ್ಲವುಗಳ ಬಗೆಗೆ ಮುನ್ಸೂಚನೆ ನೀಡಿತು.

ದ್ರವ್ಯವೂ ಅದರ ಸಂಚಲನೆಯೂ ಈ ಪ್ರಾಕೃತಿಕ ಜಗತ್ತಿನ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆಂಬುದನ್ನು ಅಲ್ಲಗಳೆದ ಮಾಕ್‌ರಂಥ ಅತೀಂದ್ರೀಯವಾದಿಗಳ ಭಾವನೆಗಳನ್ನು ಐನ್‌ಸ್ಟೈನ್‌ರ ಮೇಲಿನ ಎರಡು ಕೃತಿಗಳು ಖಂಡತುಂಡರಿಸಿದವು. ದ್ರವ್ಯವು ವಾಸ್ತವವಾದುದು ಎಂದು ಐನ್‌ಸ್ಟೈನ್ ಸಾಧಿಸಿ ತೋರಿದರು. ಅವರ ದ್ಯುತಿವಿದ್ಯುತ್ ಸೂತ್ರವು ದ್ರವ್ಯವು ನಾನಾ ರೂಪಗಳಲ್ಲಿ (ಲೆನಿನ್‌ರ ಪ್ರಕಾರ ಅಕ್ಷಯವಾಗಿ) ಅಸ್ತಿತ್ವದಲ್ಲಿರಬಲ್ಲುದು ಎಂಬುದನ್ನು ಒಪ್ಪಿಕೊಂಡು ಇನ್ನೂ ಒಂದು ಹೆಜ್ಜೆ ಮುಂದೆ ಹೋಯಿತು. ಇದಕ್ಕೆ ಅವರು ಎಲೆಕ್ಟ್ರಾನ್‌ಅನ್ನು ಉದಾಹರಿಸಿದರು. ಎಲೆಕ್ಟ್ರಾನ್‌ನ ಒಂದೊಂದು ರೂಪವೂ ವಾಸ್ತವ ಎಂದು ಅವರ ಸೂತ್ರ ತೋರಿಸಿಕೊಟ್ಟಿತು. ೧೯೩೦ರಲ್ಲಿ ಅಂತಿಮ ರೂಪ ಪಡೆದ ಕ್ವಾಂಟಮ್ ಗತಿ ವಿಜ್ಞಾನಕ್ಕೆ ಐನ್‌ಸ್ಟೈನ್‌ರು ನೀಡಿದ ಕಾಣಿಕೆ ಅಪರಿಮಿತವಾದುದು. ಆದರೆ ಅವರು ಕ್ವಾಂಟಮ್ ಗತಿವಿಜ್ಞಾನದ ಕುರಿತು ಬೋರ್ನ್-ಹೈಸೆನ್‌ಬರ್ಗ್ ಮತ್ತು ಬೋರ್‌ರು ನೀಡಿದ್ದ ವಿವರಣೆಯನ್ನು ಒಪ್ಪಲಿಲ್ಲ. ಹಾಗಾಗಿ ಅವರ ಸಾಪೇಕ್ಷತಾ ಸಿದ್ಧಾಂತವನ್ನು ಅವರು ಹೆಚ್ಚು ಕಡಿಮೆ ಒಂಟಿಯಾಗಿಯೇ ಸ್ಥಾಪಿತಗೊಳಿಸಿದರೆಂದು ಹೇಳಬಹುದು. ಅವರು ಸ್ಥಾಪಿಸಿದ ಈ ಎರಡು ಕ್ಷೇತ್ರಗಳು – ಕ್ವಾಂಟಮ್ ಗತಿವಿಜ್ಞಾನ ಹಾಗೂ ಸಾಪೇಕ್ಷತಾ ಸಿದ್ಧಾಂತ – ಇಪ್ಪತ್ತನೆಯ ಶತಮಾನದಲ್ಲಿ ಭೌತವಿಜ್ಞಾನದಲ್ಲಾದ ಕ್ರಾಂತಿಯ ತಿರುಳನ್ನು ರೂಪಿಸಿದವು. ಅವು ನ್ಯೂಟನ್‌ನ ಬಲವಿಜ್ಞಾನವನ್ನೇನೂ ಅಸಿಂಧುವೆಂದು ಹೇಳಲಿಲ್ಲ (ಬಹುವೇಳೆ ಹಾಗೆಂದೇ ತಪ್ಪಾಗಿ ನಂಬಲಾಗಿದೆ), ಆದರೆ ನ್ಯೂಟನ್‌ರ ವಿಜ್ಞಾನ ನಿಜಕ್ಕೂ ಅನ್ವಯವಾಗುವ

ಇತಿಮಿತಿಗಳನ್ನಷ್ಟೆ ಅವು ತೋರಿಸಿಕೊಟ್ಟವು.

ಮೇಲಿನ ಎರಡು ಕ್ಷೇತ್ರಗಳೂ ಆಧ್ಯಾತ್ಮಿಕ ವ್ಯಾಖ್ಯಾನಕ್ಕೆ ಒಳಗಾಗುವ ಅಪಾಯವೂ ಇದೆ. ಅವು 'ಮಾಯಾ' ಎಂದು ಹೇಳುವಂಥ ಯಾವುದೋ ಭಾವನೆ ವ್ಯಕ್ತಪಡಿಸುತ್ತವೆಂದು ಅಧ್ಯಾತ್ಮವಾದಿಗಳು ವ್ಯಾಖ್ಯಾನಿಸುವ ಅವಕಾಶವೂ ಇದೆ. ಕೆಲವರಂತೂ ಉದ್ದೇಶಪೂರ್ವಕವಾಗಿಯೇ ಅಂಥ ವ್ಯಾಖ್ಯಾನ ಮಾಡುತ್ತಿದ್ದಾರೆ. ವಿಜ್ಞಾನದ ಮುನ್ನಡೆ ಈಗ ಯಾವ ಘಟ್ಟ ಮುಟ್ಟಿದೆಯೆಂದರೆ, ಅದರಲ್ಲಿನ ಅನೇಕ ವಿಚಾರಗಳನ್ನು ದಿನನಿತ್ಯದ ಅನುಭವಗಳ ಆಧಾರದ ಮೇಲೆ ಅರ್ಥ ಮಾಡಿಕೊಳ್ಳಲಾಗದುದರಿಂದ ಅವುಗಳನ್ನು ಆಧ್ಯಾತ್ಮಿಕವಾಗಿ ವ್ಯಾಖ್ಯಾನಿಸುವವರ ಸಂಖ್ಯೆ ಸಾಕಷ್ಟು ಹೆಚ್ಚಾಗುತ್ತಿದೆ. ಐನ್‌ಸ್ಟೈನ್‌ರೇ ಈ ವಿಷಯವನ್ನೊಮ್ಮೆ ತಿಳಿಸಿದ್ದರು. ತಮ್ಮ ಸಿದ್ಧಾಂತವು ಸಾಮೂಹಿಕ ಜನಪ್ರಿಯತೆ ಗಳಿಸಿರುವುದಕ್ಕೆ ಹೆಚ್ಚು ಕಾರಣ ಅವು ಸುಲಭವಾಗಿ ಅರ್ಥವಾಗದಿರುವುದಾಗಿದೆ. ಯಾವುದು ಸುಲಭವಾಗಿ ಅರ್ಥವಾಗುವುದಿಲ್ಲವೋ ಅದಕ್ಕೆ ಕೆಲವರು 'ಮಾಯೆ'ಯ ಆಧ್ಯಾತ್ಮಿಕ ರಂಗು ನೀಡಿ ವ್ಯಾಖ್ಯಾನಿಸಹೊರಟಿರುವುದು ಅದಕ್ಕೆ ಈ ಜನಪ್ರಿಯತೆ ತಂದುಕೊಟ್ಟಿದೆ, ಎಂದವರು ನುಡಿದಿದ್ದರು. ಸಾಪೇಕ್ಷತಾ ಸಿದ್ಧಾಂತವನ್ನು ಕೆಲವು ಆಸಕ್ತ ಜನರು ಇಚ್ಛಾ ಸ್ವಾತಂತ್ರ್ಯಕ್ಕೆ ನೀಡಿದ ಪರವಾನಗಿ ಎಂದು ವ್ಯಾಖ್ಯಾನಿಸಿದ್ದಾರೆ. ದೇಶ, ಕಾಲ, ರಾಶಿ ಹಾಗೂ ಶಕ್ತಿ ಸಾಪೇಕ್ಷವಾದ ಮತ್ತು ವೀಕ್ಷಕನ ವೇಗವನ್ನು ಅವಲಂಬಿಸಿರುತ್ತವಾದ್ದರಿಂದ ಅವರು ಹಾಗೆ ವ್ಯಾಖ್ಯಾನಿಸಿದ್ದಾರೆ. ಆದರೆ ಸಾಪೇಕ್ಷತಾವಾದದ ಮೂಲಭೂತ ಸೂತ್ರಗಳತ್ತ ಗಮನಹರಿಸಿದಲ್ಲಿ (ಇವನ್ನು ಈ ಮುನ್ನ ವಿವರಿಸಲಾಗಿದೆ) ಅಂಥ ವ್ಯಾಖ್ಯಾನ ಎಷ್ಟು ತಪ್ಪಾದುದು ಎಂಬುದು ತಿಳಿದುಬರುತ್ತದೆ. ನೈಸರ್ಗಿಕ ಜಗತ್ತಿನ ಎಲ್ಲ ನಿಯಮಗಳೂ, ವೀಕ್ಷಕನ ಪರಿಗಣನೆಯಿಲ್ಲದೆಯೇ, ಒಂದೇ (ಅಪರಿವರ್ತನೀಯ) ಆಗಿರುತ್ತವೆ. ನಿಸರ್ಗವು ಬೆಳಕಿನ ವೇಗಕ್ಕೆ ಸಂಬಂಧಿಸಿ ಇಚ್ಛಾ ಸ್ವಾತಂತ್ರ್ಯಕ್ಕೇನೂ ಅವಕಾಶ ನೀಡುವುದಿಲ್ಲ. ಅಷ್ಟೇ ಅಲ್ಲ, ಒಂದೇ ವೇಗದಲ್ಲಿ ಪ್ರಯಾಣಿಸುತ್ತಿರುವ ಇಬ್ಬರು ವೀಕ್ಷಕರು ರಾಶಿ, ಶಕ್ತಿ, ದೇಶ ಹಾಗೂ ಕಾಲಗಳನ್ನು ತಮಗಿಷ್ಟ ಬಂದಂತೆ ಕಾಣುವ ಇಚ್ಛಾ ಸ್ವಾತಂತ್ರ್ಯವನ್ನೇನೂ ಹೊಂದಿರುವುದಿಲ್ಲ. ಅವುಗಳ ಪ್ರಮಾಣಗಳು ಒಂದೇ ಆಗಿರುವುದನ್ನೇ ಅವರು ಕಾಣುತ್ತಾರೆ. ಅದೇ ರೀತಿ, ಕ್ವಾಂಟಮ್ ಯಂತ್ರ ವಿಜ್ಞಾನದೊಂದಿಗೆ ಲಗತ್ತಾದ ಅನಿಶ್ಚಿತತಾ ಸ್ಥಿತಿಯೂ ಸಂಪೂರ್ಣವಾಗಿ ಭೌತಿಕವಾದಿಯೇ ಆಗಿದೆ. ಯಾವುದೇ ವ್ಯವಸ್ಥೆಯನ್ನು ನೀವು (ಅಥವಾ ನಿಮ್ಮ ಸಲಕರಣೆಗಳು) ಪಾರಸ್ಪರಿಕ ಕ್ರಿಯೆ ಜರುಗಿಸುವ ಮೂಲಕವಷ್ಟೆ ಅರ್ಥ ಮಾಡಿಕೊಳ್ಳಲು ಸಾಧ್ಯ. ಆದ್ದರಿಂದ ನಿಮ್ಮ ವೀಕ್ಷಣೆಯ ಪ್ರಕ್ರಿಯೆಯು ನೀವು ಅಧ್ಯಯನ ಮಾಡುತ್ತಿರುವ ವ್ಯವಸ್ಥೆಯನ್ನು ಅಸ್ತವ್ಯಸ್ತಗೊಳಿಸುವುದು ಸಹಜವೇ. ಹಾಗಾಗಿ ನಾವು ವೀಕ್ಷಣೆಗೆ ಮುನ್ನ ಇದ್ದ ವ್ಯವಸ್ಥೆಗಿಂತ ಸ್ವಲ್ಪಮಟ್ಟಿಗೆ ಭಿನ್ನವಾದುದನ್ನೇನೋ ಕಾಣುತ್ತೇವೆ. ಇಲ್ಲಿನ ಪ್ರಶ್ನೆ, ತಪ್ಪು ಅಥವಾ ದೋಷ ಎಷ್ಟು ದೊಡ್ಡದು, ಎಂಬುದಾಗಿದೆ. ನಾವು ಅಣುಗಳಿಗಿಂತ ಹೆಚ್ಚು ದೊಡ್ಡದಾದ ವಸ್ತುಗಳೊಂದಿಗೆ ವ್ಯವಹರಿಸುವಾಗ ಈ ದೋಷ ಅಷ್ಟು ದೊಡ್ಡದೇನೂ ಅಲ್ಲ ಎಂದು ಕ್ವಾಂಟಮ್ ಯಂತ್ರವಿಜ್ಞಾನ ತಿಳಿಸುತ್ತದೆ. ಅಣು ಅಥವಾ ಅದಕ್ಕಿಂತ ಚಿಕ್ಕದಾದ ವಸ್ತು ವ್ಯವಸ್ಥೆಗಳೊಂದಿಗೆ ವ್ಯವಹರಿಸುವಾಗ ಈ ದೋಷ ಸಾಕಷ್ಟು ದೊಡ್ಡದಾಗಿರುವ ಸಾಧ್ಯತೆ ಇದೆ. ಆಗ ಸ್ಥಿತಿ ಹಾಗೂ ಸಂವೇಗಗಳ ಮೌಲ್ಯಗಳನ್ನು ಏಕಕಾಲದಲ್ಲೇ ಕರಾರುವಾಕ್ಕಾಗಿ ನಿರ್ಧರಿಸುವುದು ಸಾಧ್ಯವಿಲ್ಲ. ಆದರೆ ಈ ದೋಷವು ಬೇರೆ ಬೇರೆ ವೀಕ್ಷಕರಿಗೆ ಬೇರೆ ಬೇರೆ ಆಗಿರುತ್ತದೆಯೆ? ಇಲ್ಲ. ಒಂದೇ ರೀತಿಯ ಸಲಕರಣೆಗಳನ್ನು ಬಳಸಿಕೊಂಡು ವೀಕ್ಷಣೆ ನಡೆಸುತ್ತಿರುವವರು ಒಂದೇ ಮಟ್ಟದ ನಿಖರ ಮಾಹಿತಿಯನ್ನಷ್ಟೆ ಪಡೆಯುತ್ತಾರೆ. ಅವರು ತಮ್ಮ ಮಾಹಿತಿಗಳ ಬಗೆಗೆ ತೀರ್ಮಾನಿಸಲು ಇಚ್ಛಾ ಸ್ವಾತಂತ್ರ್ಯವನ್ನು ಬಳಸಹೊರಟರೆ, ಆಗ ಅದು ಬೇರೆಯೇ ಮಾತು.

ಈ ಸಮಸ್ಯೆಗೆ ಪರಿಹಾರ ಹುಡುಕುವ ಅತ್ಯುತ್ತಮ ಮಾರ್ಗವೆಂದರೆ ಐನ್‌ಸ್ಟೈನ್‌ರ ಮಾತುಗಳನ್ನೇ ಬಳಸುವುದು. ೧೯೩೦ರ ಜುಲೈ ೧೪ರಂದು ಟಾಗೋರರೊಂದಿಗಿನ ಸುಪ್ರಸಿದ್ಧ ಸಂದರ್ಶನದಲ್ಲಿ ಅವರು ಹೀಗೆ ಹೇಳಿದರು: ''ಸತ್ಯವು ನಮ್ಮ ಪ್ರಜ್ಞೆಯಿಂದ ಸ್ವತಂತ್ರವಾದುದೇ ಎಂಬುದರಿಂದ ಸಮಸ್ಯೆ ಪ್ರಾರಂಭವಾಗುತ್ತದೆ... ನಮ್ಮ ಅನುದಿನದ ಬಾಳಿನಲ್ಲೂ ನಾವು ಬಳಸುವ ವಸ್ತುಗಳಿಗೆ ಸಂಬಂಧಿಸಿ, ಮನುಷ್ಯನಿಂದ ಸ್ವತಂತ್ರವಾದ ವಾಸ್ತವಿಕತೆಯನ್ನು ಅವಕ್ಕೆ ಆರೋಪಿಸುವ ಒತ್ತಾಯಕ್ಕೊಳಗಾಗುತ್ತೇವೆ. ನಮ್ಮ ಇಂದ್ರಿಯಗಳ ಅನುಭವಗಳನ್ನು ತರ್ಕಬದ್ಧವಾದ ರೀತಿಯಲ್ಲಿ ಸಂಯೋಜಿಸಲೋಸುಗ ನಾವು ಹೀಗೆ ಮಾಡುತ್ತೇವೆ. ಉದಾ: ಮನೆಯಲ್ಲಿ ಯಾರೂ ಇಲ್ಲದಿದ್ದಾಗ ಮೇಜು ಎಲ್ಲಿ ಇದ್ದಿತೋ ಅಲ್ಲೇ ಇರುತ್ತದೆ.'' ಗಮನಿಸಬೇಕಾದ ಅಂಶವೆಂದರೆ, ಪರಮಾಣು ಜಗತ್ತಿನಲ್ಲಿ ಅನಿರ್ಧರಣೀಯತೆಯನ್ನು ನೈಸರ್ಗಿಕ ಜಗತ್ತನ್ನು ಹೆಚ್ಚು ಉತ್ತಮವಾಗಿ ಅರ್ಥಮಾಡಿಕೊಳ್ಳಲಿಲ್ಲ, ಆದರೆ ಅದನ್ನು ಹಿಗ್ಗಲಿಸಿ, ಸಾಮಾಜಿಕ ಜಗತ್ತು ಅವೇದ್ಯ ಆದ್ದರಿಂದಾಗಿ ಅಪರಿವರ್ತನೀಯ ಎಂದು ತೋರಿಸಲಷ್ಟೆ ಈ ಆಧ್ಯಾತ್ಮಿಕವಾದಿಗಳು ಬಳಸಿಕೊಳ್ಳುತ್ತಿರುವುದಾಗಿದೆ. ಆದರೆ ಸಾಮಾಜಿಕ ಜಗತ್ತೇ ನಮಗೆ ಕೆಲವು ವಾಸ್ತವಾಂಶಗಳನ್ನು ಬೋಧಿಸಿದೆ. ಮನುಷ್ಯನು ಹಸಿವನ್ನು ಎರಡು ರೀತಿಗಳಲ್ಲಿ ಹಿಂಗಿಸಿಕೊಳ್ಳಬಹುದು – ಆಹಾರವನ್ನು ತಿನ್ನುವ ಮೂಲಕ; ಇಲ್ಲವೇ ಆತ್ಮಹತ್ಯೆಯ ಇಚ್ಛಾ ಸ್ವಾತಂತ್ರ್ಯವನ್ನು ಆಚರಣೆಗೆ ತರುವ ಮೂಲಕ. ಪರಿಪೂರ್ಣವಾಗಿ ನಿರ್ಧರಿತವಾದ ಹಾಗೂ ನಿರಪೇಕ್ಷವಾದ ಇಂಥ ಸತ್ಯಾಂಶ, ಮಾನವನಿಗೆ ಪರಮಾಣು ವ್ಯವಸ್ಥೆಗಳ ಅನಿರ್ಧರಣೀಯತೆಯಾಗಲೀ ದೇಶ-ಕಾಲಗಳ ಸಾಪೇಕ್ಷತೆಯಾಗಲೀ ತಿಳಿದುಬರುವುದಕ್ಕೆ ಮುನ್ನವೇ, ತಿಳಿದಿದ್ದಿತು. ಆ ಸತ್ಯ ಏನೂ ಬದಲಾಗಿಲ್ಲ.

**ಡಾ|| ಎಸ್. ಚಟರ್ಜಿ**
ಭಾರತೀಯ ಖಭೌತ ವಿಜ್ಞಾನ ಸಂಸ್ಥೆ, ಬೆಂಗಳೂರು - ೫೬೦ ೦೩೪
**ಅನು: ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಕ್ರಾಸ್, ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು - ೨೮

# ಸಹಕವಿ ಬತೀಕ್‌ಗೆ



೧

ಹಾರುವ ಹಕ್ಕಿಗೆ ಆಕಾಶವೇ ರಕ್ಷೆ
ಬಲ, ಒಲವು.
ನೆಚ್ಚಿದವಗೆ ಚಂದ್ರ, ನಕ್ಷತ್ರ
ತಾನೇ ತಾನಾಗಿ.

ಪ್ರೀತಿ ಹುಡುಕುವ ಕಣ್ಣಿಗೆ :
ಪ್ರೀತಿ ಮಾತ್ರವೇ ತುಂಬುವುದು;
ಎಲೆ ಮರೆಯಲ್ಲಡಗಿದ ಕೋಗಿಲೆ
ಹಾಡು
ಹೃದಯ ತುಂಬುವುದು;
ಚರಿತ್ರೆಗಳ ಹೊಲದೊಳಗೆ ಹಾಯ್ದು
ತೆನೆಗಳ ಮುಟ್ಟುವುದು;
ಖಡ್ಗದ ಅಲಗು ಲೇಖನಿಯ ಮೊನಚು
ಸವರುವುದು;
ಗದ್ದುಗೆಯ ಎದೆ ಬಡಿತವನ್ನು
ನೇಗಿಲ ಮೊನೆ ಹೊಳಪನ್ನು
ಹುಡುಕುವುದು;
ಸುರಗಿ-ಸುರಹೊನ್ನೆಯ ಬುಡವನ್ನು
ತಡಹುವುದು;
ಹೊಳೆಯ ತಿಳಿಜಲಮುಟ್ಟಿ ಅಲೆಯ
ಸೋಕುವುದು;
ಮಣ್ಣು-ಮುಗಿಲ ಬಂಗಾರ ರೇಖೆಗೆ
ಬೆಳಕಾಡುವುದು;
ಕೋಟೆ-ಕೊತ್ತಲದ ಗುಟ್ಟುಗಳಿಗೆ
ಕಿರಣವಾಗುವುದು;

ಕಾಲಾಂತರದ ಮೌನ ಗಡಣಕ್ಕೆ
ನುಡಿಯಾಗುವುದು;
ಛಿದ್ರ ಹೃದಯಗಳ ಬೆಸುಗೆಗೆ
ಗಜಲ್ಲಾಗುವುದು.

೨

ವರ್ತಮಾನದ ಮುಖಗಳಲ್ಲಿ
ಅಸಹನೆ, ಕ್ರೌರ್ಯ
ದಬಾಯಿಸಿಕೊಂಡು ಬರುವ
ಬೆಳಕಿನ ಅಲೆಗಳಲ್ಲಿ
ಮತ್ತವೇ ತಿರುಚಿದ ಚರಿತ್ರೆಗಳು
ಗಾಯಗೊಂಡ ಹೃದಯಗಳು
ಮುರಿದು ಬಿದ್ದ ಚಂದ್ರ ತೊಟ್ಟಿಲುಗಳು
'ಕಳಚಿದ ಕೊಂಡಿಗಳು...'

ಅಧಿಕಾರ ದಂಡ ಹಿಡಿದ,
ನೊಂದವರ
ಕಣ್ಣೀರ ಒರೆಸಬಲ್ಲ
ಸಹಕವಿಯೇ,

ನನ್ನ ಕಣ್ಣೆದುರು ಸೂಜಿಮಲ್ಲಿಗೆ
ಅರಳಿ ನಿಂತಿದೆ; ಮೋಡ ಕವಿದಿದೆ
ಒಂದು ಕಡೆ ಅಳು ಕೇಳಿ
ಇನ್ನೊಂದೆಡೆ ನಗು ಈಗಷ್ಟೇ
ಆರಿದೆ.

ಎಲ್ಲೋ ಒಂದು ಕಡೆ ಬಿಸಿಲು
ಬಂಡೆಯೇರಿ ಕೂತಂತೆ
ನಮ್ಮ ಮಾತು ಕೂತಿದೆ.
ನೆರಳು ಮಲಗಿದಂತೆ
ನಮ್ಮ ಮೌನ ಮಲಗಿದೆ.
ನದಿ ಸೇರಲೇಬೇಕಾದ ದಡ ಸೇರಿದಂತೆ
ಸೌಹಾರ್ದದ ಕವಿತೆ ಸಾಗಿ ನಿಂತಿದೆ.

೩

ಕೊನೆಯಿರದ
ನಮ್ಮ ತಳಮಳಗಳಲ್ಲಿ
ಮರಿ ಸೂರ್ಯರು ಚಿಗುರು ಚಂದಿರೆಯರು
ಕುಡಿಯೊಡೆಯುತ್ತಲೇ
ಇರುವಾಗ್ಯೆ-

ಹೊಗೆ ಹಿಡಿದ ಚಿಂದಿ ತಾಳೆ ಪತ್ರಗಳ
ಬಿಚ್ಚಿ
ದೊಂದಿಯ ಬೆಳಕಲ್ಲಿ -
ನಮ್ಮ ಕಾಲ ಎಲ್ಲಿ
ಶುರುವಾಯಿತು
ಎಂದು
ಹುಡುಕುವಲ್ಲಿ -

ಅಲ್ಲಿ ಎಲ್ಲರ ಸೂರ್ಯ ಚಂದ್ರರು
ಎಲ್ಲರ ಪ್ರಾರ್ಥನೆಗಳು
ಒಂದೇ ಬಿಂದುವಲಿ
ತಂಗಿರುವವು.

**ಕೆ. ಪಿ. ಮೃತ್ಯುಂಜಯ**
ಮುಖ್ಯ ವರದಿಗಾರ, 'ಆಂದೋಲನ' ದೈನಿಕ
ಹೊಸ ಎಂ.ಎ.ಜೆ. ಬೇಕರಿ ಕಟ್ಟಡ
ಬೆಂಗಳೂರು-ಮೈಸೂರು ರಸ್ತೆ, ಮಂಡ್ಯ-೫೭೧ ೪೦೧

# ಲೋಕಾಯತ ಮತ್ತು ಲೋಕಸಂಗ್ರಹ

ಲೋಕಾಯತವು ವೈಚಾರಿಕತೆ, ಸಮಾನತೆ, ಮನುಷ್ಯಪ್ರೀತಿ ಮತ್ತು ಸಮುದಾಯದ ಒಳಿತನ್ನು ಸಾಧಿಸುವ ಲೋಕಸಂಗ್ರಹವನ್ನು ಪ್ರತಿಪಾದಿಸುತ್ತದೆ. ಬಂಡವಾಳವಾದವನ್ನು ಸಮರ್ಥಿಸುವ ಭಾವನಾವಾದ ವ್ಯಕ್ತಿಪಾರಮ್ಯ, ಅಸಮಾನತೆ, ಭಯ, ಮೌಢ್ಯಗಳನ್ನು ಆಧರಿಸಿದ ಧಾರ್ಮಿಕತೆಯ ಮೂಲಕ ತಾರತಮ್ಯಯುಕ್ತ ಲೋಕಕಲ್ಯಾಣದ ಸೋಗನ್ನು ಹಾಕುತ್ತದೆ. ವಿಶ್ವದ ಆಧ್ಯಾತ್ಮಿಕತೆ, ಧಾರ್ಮಿಕತೆಗಳಲ್ಲಿ ಕೆಲವು ಬಡವರ ಪರವಾಗಿದ್ದು ಶ್ರೀಮಂತರ ಜೊತೆಗಿವೆ. ಇನ್ನು ಕೆಲವು ಬಡವರ ಜೊತೆಗಿದ್ದು ಶ್ರೀಮಂತರ ಪರವಾಗಿವೆ. ಆದರೆ ಬಡವರ ಜೊತೆಗಿದ್ದು ಬಡವರ ಪರವಾಗಿರುವ, ಸಾಮಾಜಿಕ ಮತ್ತು ರಾಜಕೀಯ ನೆಲೆಗಳಲ್ಲಿ ಸಾಕ್ಷಾತ್ಕರಿಸಿಕೊಳ್ಳಬಹುದಾದ ಧಾರ್ಮಿಕತೆ ಮತ್ತು ಆಧ್ಯಾತ್ಮಿಕತೆ ಮಾತ್ರ ನಿಜವಾದ ಲೋಕಸಂಗ್ರಹ ಆಗಿರುವುದು ಸಾಧ್ಯ. ಇದು ರಾಜಕೀಯವಾಗಿರಬೇಕಾದ್ದು ಅನಿವಾರ್ಯ.

■

### ವಿ. ಎನ್. ಲಕ್ಷ್ಮೀನಾರಾಯಣ

ಲೋಕ ಶಬ್ದಕ್ಕೆ ರೂಢಿಯಲ್ಲಿರುವ ಎರಡು ಅರ್ಥಗಳು ಪ್ರಪಂಚ ಮತ್ತು ಜನ ಸಮುದಾಯ. ಲೋಕಕಥೆ, ಲೋಕಶಕ್ತಿ, ಲೋಕಾಯತ ಇವುಗಳಲ್ಲಿ ಸ್ಫುಟವಾಗುವ ಜನಸಮುದಾಯ ಎಂಬ ಅರ್ಥಕ್ಕೆ ಈ ಲೇಖನದಲ್ಲಿ ಹೆಚ್ಚು ಒತ್ತು ಕೊಡಲಾಗಿದೆ. ಭಾರತದಲ್ಲಿ ಮಾತ್ರವಲ್ಲ ಪ್ರಪಂಚದ ಎಲ್ಲ ಸಮಾಜಗಳಲ್ಲಿ ಭಾಷೆಗಳಲ್ಲಿ ಜನ ಶಬ್ದ ನಿಕೃಷ್ಟ ಮೌಲ್ಯವನ್ನು ಪಡೆದುಕೊಂಡಿದೆ. ಧಾರ್ಮಿಕ ಮತ್ತು ತಾತ್ವಿಕ ಚರ್ಚೆಗಳಲ್ಲಂತೂ ಲೌಕಿಕ ಎಂದು ಕರೆಯಬಹುದಾದ ಎಲ್ಲವನ್ನೂ ನಿಕೃಷ್ಟವಾಗೇ ಕಾಣಲಾಗುತ್ತದೆ. ಜನಗಳನ್ನು ಅಗತ್ಯ ಬಿದ್ದಾಗಲೆಲ್ಲ ಮಹಾಜನಗಳೆಂದು ಎತ್ತರಕ್ಕೇರಿಸಿ ಅವರಿಂದ ಪೂರ್ಣ ಪ್ರಯೋಜನ ಪಡೆದ ಮೇಲೆ ಸಾಮಾನ್ಯ ಜನಗಳೆಂದು ಕೆಳಕ್ಕಿಳಿಸುವುದು ರೂಢಿಯಲ್ಲಿರುವ ಮೌಲ್ಯಕ್ರಮ. ಆದರೆ ಮನುಷ್ಯ ಪ್ರಪಂಚದ ಪ್ರಾರಂಭಿಕ ಸಂಪತ್ತಾದ ಆಹಾರ, ತದನಂತರದ ಬೇಟೆಯ ಸಾಧನಗಳು, ವ್ಯವಸಾಯ ಸಲಕರಣೆಗಳು, ಲೋಹಗಳು, ಯಂತ್ರ ಪರಿಕರಗಳು, ತಂತ್ರಜ್ಞಾನ ಮತ್ತು ಇತ್ತೀಚಿನ ರೂಪವಾದ ಮಾಹಿತಿ ತಂತ್ರಜ್ಞಾನಕ್ಕೆ ಆಧಾರವಾದ ಮೂಲಭೂತ ಸೌಕರ್ಯಗಳೂ ಸೇರಿದಂತೆ ಎಲ್ಲಾ ಸಂಪತ್ತು ಜನಸಮುದಾಯದ ಶ್ರಮಶಕ್ತಿಯಿಂದ ಹುಟ್ಟಿದವುಗಳೇ ಆಗಿವೆ. ಒಟ್ಟಿನಲ್ಲಿ ಎಲ್ಲರಿಗೂ ಬದುಕಲು ಬೇಕಾದ ಮೂಲಭೂತ ಅಗತ್ಯಗಳು, ಅಂದರೆ ಆಹಾರ, ವಸತಿ ಮತ್ತು ವಸ್ತ್ರ ಇತ್ಯಾದಿಗಳು ಜನಸಾಮಾನ್ಯರ ಶ್ರಮದಿಂದ ಹುಟ್ಟಿದವುಗಳಾಗಿವೆ. ಹೀಗಿದ್ದರೂ ಜನಸಾಮಾನ್ಯರನ್ನು ಲೋಗಿಗರು ಅಥವಾ ಲೌಕಿಕರು ಎಂದು ಏಕೆ ನಿಕೃಷ್ಟವಾಗಿ ಕಾಣುತ್ತಾರೆ ಮತ್ತು ಈ ನಿಕೃಷ್ಟತೆಯನ್ನು ನಿರ್ಧರಿಸುವವರು ಯಾರು, ಎಂಬ ಪ್ರಶ್ನೆಗಳು ಇಲ್ಲಿ ಎದುರಾಗುತ್ತವೆ.

ಹುಟ್ಟಿದ ಎಲ್ಲರನ್ನೂ ಸಾವಿನ ಭಯ ನಾನಾರೀತಿಯಲ್ಲಿ ನಾನಾ ಹಂತಗಳಲ್ಲಿ ಕಾಡುತ್ತದೆ. ಸಾಧ್ಯವಾದಷ್ಟೂ ಹೆಚ್ಚುಕಾಲ ಬದುಕಿರಬೇಕೆಂಬ ಅದಮ್ಯ ಆಸೆ ಸಹಜವಾಗಿ ಎಲ್ಲರಲ್ಲೂ ಇರುತ್ತದೆ. ಹಾಗೆ ಬದುಕಿರಲು ಅತ್ಯಗತ್ಯವಾದ ಆಧಾರ ಆಹಾರವೆಂಬುದು ಎಲ್ಲರಿಗೂ ತಿಳಿದ ವಿಷಯವೇ. ಆಹಾರವನ್ನು ಸಂಪಾದಿಸುವ ಅಥವಾ ಉತ್ಪಾದಿಸುವ ಕೆಲಸ ಸಾಮುದಾಯಿಕವಾದದ್ದು. ಅಂದರೆ ಬಣ, ಕುಲ, ಪಂಗಡ, ಬುಡಕಟ್ಟು ಅಥವಾ ಕುಟುಂಬಗಳ ನೆಲೆಯಲ್ಲಿ ವ್ಯವಸಾಯ ಸಾಧ್ಯವಾಗಿದೆ. ಇದಲ್ಲದೇ ಉತ್ಪಾದನಾ ಸಲಕರಣೆಗಳು, ಯಂತ್ರ, ತಂತ್ರ, ಜ್ಞಾನವಿಜ್ಞಾನಗಳು, ಮೂಲಭೂತ ಸೌಕರ್ಯಗಳನ್ನು ಏರ್ಪಡಿಸಿಕೊಳ್ಳಲು ಬೇಕಾದ ಎಲ್ಲ ಕ್ರಿಯೆಗಳು, ಸಾಮುದಾಯಿಕವಾಗೇ ನಡೆಯುವುದರಿಂದ ಮನುಷ್ಯ - ಮನುಷ್ಯರ ನಡುವಿನ ಸಂಬಂಧಗಳು, ಸಂಸ್ಕೃತಿ, ನಾಗರಿಕತೆ ಇವೇ ಮುಂತಾದ ಸಂಬಂಧಜಾಲ ಮನುಷ್ಯ ಪ್ರಪಂಚದಲ್ಲಿ ಏರ್ಪಟ್ಟಿವೆ. ಇವುಗಳಲ್ಲಿ ಹಾಸುಹೊಕ್ಕಾಗಿರುವ ಬದುಕಿನ ಅದಮ್ಯ ಪ್ರೀತಿ ಮತ್ತು ಅನಿವಾರ್ಯವಾದ ಸಾವಿನ ಭಯ ಒಟ್ಟಿಗೇ ಅಥವಾ ಬೇರೆಬೇರೆಯಾಗಿ ಮನುಷ್ಯ ಸಮಾಜದ ಧರ್ಮಗಳನ್ನು, ತತ್ವ, ಲೋಕದೃಷ್ಟಿಗಳನ್ನು ರೂಪಿಸಿವೆ. ಮನುಷ್ಯನಲ್ಲಿ ಮಾತ್ರ ವಿಶೇಷವಾಗಿ ರೂಪುಗೊಂಡಿರುವ ಪ್ರಜ್ಞೆಯು ಸೃಷ್ಟಿಯ ರಹಸ್ಯ, ಉದ್ದೇಶ, ಅರ್ಥಗಳನ್ನು ವಿವರಿಸಲು ಕುತೂಹಲ, ಅನ್ವೇಷಣೆಗಳ ಜ್ಞಾನದಾಹಕ್ಕೆ ಕಾರಣ ವಾಗಿದೆ. ಪಂಡಿತರಿಂದ ಹಿಡಿದು ಪಾಮರರವರೆಗೆ ಏಕಪ್ರಕಾರವಾಗಿ ಕಂಡು ಬರುವ ಸಾಮಾನ್ಯಪ್ರಶ್ನೆ ನಾವು ಸತ್ತ ಮೇಲೂ ಇರುತ್ತೇವೆಯೇ ಅಥವಾ ಸಾವು ಸಂಭವಿಸಿದ ಮೇಲೆ ಸತ್ತ ವ್ಯಕ್ತಿ ಏನಾಗುತ್ತಾನೆ? ಎಲ್ಲಿರುತ್ತಾನೆ? ಎಂಬುದು. ಕಠೋಪನಿಷತ್ತಿನಲ್ಲಿ ನಚಿಕೇತನ ಬಾಯಿಂದ ಹೊರಡಿಸುವ ಈ ಪ್ರಶ್ನೆಗೆ ಮರಣ ದೇವತೆಯಾದ ಯಮನಿಂದಲೇ ಉತ್ತರ ಪಡೆದಂತೆ ಕಲ್ಪಿಸಲಾಗಿದೆ. ಇದರ ಇನ್ನೊಂದು ಮುಖ ಬದುಕಿಗೆ ಅರ್ಥವಿದೆಯೇ? ಉದ್ದೇಶವಿದೆಯೇ? ಈ ಸೃಷ್ಟಿಯ ಹಿಂದೆ ಯಾರಾದರೂ ಸೃಷ್ಟಿಕರ್ತನಾಗಲೀ, ಶಕ್ತಿಯಾಗಲೀ, ಇವೆಯೇ? ಎಂಬುದು.

ಲಿಖಿತ ಚರಿತ್ರೆ ಪೂರ್ವದ ಜೀವನದ ಬಗೆಗೆ ನಮಗೆ ದಕ್ಕಿರುವ ನಂಬಿಕೆ, ಪುರಾಣ, ಐತಿಹ್ಯ, ಜಾನಪದ, ಚಿತ್ರಕಲೆ, ಶಿಲ್ಪಕಲೆ, ತಂತ್ರಜ್ಞಾನ, ನಾಗರಿಕತೆ ಮತ್ತು ವಸ್ತುಸ್ಥಿತಿಗಳನ್ನಾಧರಿಸಿದ ಊಹೆಗಳಿಂದ ನಮ್ಮ ಮತ-ಧರ್ಮಗಳ ಮೂಲವನ್ನು ಸಾವಿನ ಭಯದಲ್ಲಿ ಗುರುತಿಸಬಹುದು. ಸ್ವರ್ಗ ನರಕಗಳು, ಸತ್ತ ಮೇಲೂ ಇರಬಹುದೆಂದು ನಂಬಲಾದ ಪೂರ್ವಿಕರು ವಾಸಿಸುವ ಕಲ್ಪನಾ ಲೋಕಗಳು. ದೇವರುಗಳು ವಾಸ್ತವವಾಗಿ ಜನಸಮುದಾಯಕ್ಕಾಗಿ ಪ್ರಾಣಕೊಟ್ಟ ವೀರರು ಅಥವಾ ಮಾಗಿದ ಅನುಭವವನ್ನು ಸಮುದಾಯಕ್ಕೆ ಬಿಟ್ಟುಹೋದ ಹಿರಿಯರು. ಬೇರೆ ಬೇರೆ ಬುಡಕಟ್ಟುಗಳ ಶ್ರೇಷ್ಠತೆಯ ಪೈಪೋಟಿಗನುಗುಣವಾಗಿ ಕ್ಷುದ್ರದೇವತೆಗಳು ಅಥವಾ ಸರ್ವಶಕ್ತರಾದ ತಾಯಿ-ತಂದೆಯ ರೂಪದ ಏಕ ದೇವರುಗಳು ಕಾಲಕ್ರಮದಲ್ಲಿ ಮನುಷ್ಯನ ಸಾವಿನ ಭಯದ ನಿವಾರಣಾ ಶಕ್ತಿಗಳಾಗಿ ರೂಪುಗೊಂಡಿವೆ. ಪ್ರಾರಂಭದ ಹಂತಗಳಲ್ಲಿ, ಗತಿಸಿದ ಹಿರಿಯರು ಪ್ರೇತರೂಪದಲ್ಲಿದ್ದು ಪಿತೃಲೋಕಗಳಲ್ಲಿ ವಾಸಿಸುತ್ತಾ ತಮ್ಮತಮ್ಮ ಬುಡಕಟ್ಟುಗಳನ್ನು ಸೂಕ್ಷ್ಮ ರೂಪಗಳಲ್ಲಿ ಕಾಪಾಡುತ್ತಾ ಅವರಿಂದ ಸಿಗುವ ಬಲಿಗಳ ಮೂಲಕ ಸುಪ್ರೀತರಾಗಿ ತಮ್ಮ ಆರಾಧಕರ ಇಷ್ಟಗಳನ್ನು ನೆರವೇರಿಸುವವರು, ಅವರ ಶತ್ರುಗಳಿಗೆ ನಾಶಕರಾಗಿಯೂ ಇರುವ ಪಿತೃದೇವತೆಗಳು.

ಮನೆಗೆ ಬಂದ ಅತಿಥಿಯನ್ನು ಆಯಾ ಕಾಲದ, ಪದ್ಧತಿಗನುಗುಣವಾದ ಆಹಾರ, ವಸ್ತ್ರ, ಪಾನೀಯ ಇವೇ ಮುಂತಾದ ಭೌತಿಕ ವಸ್ತುಗಳಿಂದ ಸುಪ್ರೀತಗೊಳಿಸುವಂತೆಯೇ ಶ್ರಾದ್ಧ ಮತ್ತು ಪಿತೃಪೂಜೆಗಳಲ್ಲಿ ಸತ್ತ ಹಿರಿಯರನ್ನು ಸಾಂಕೇತಿಕವಾಗಿ ಅಥವಾ ಪ್ರತಿಮಾರೂಪದಲ್ಲಿ ಸತ್ಕರಿಸುವ ಕ್ರಮವೇ ಪೂಜೆ. ಪೂಜೆಯ ಎಲ್ಲಾ ಕ್ರಮಗಳು ಅವುಗಳ ಮೂಲರೂಪದಲ್ಲಿ ಬಲಿ ಕೊಡುವ ವಿಧಾನಗಳೆ. ಬಲಿ ಎಂದರೆ ತಾನು ತಿನ್ನಬಹುದಾದ ಆಹಾರ ಮತ್ತು ಪಾನೀಯವನ್ನು ಪಿತೃಗಳಿಗೆ ಅರ್ಪಿಸಿ ಸಾಮುದಾಯಿಕವಾಗಿ ಹಂಚಿಕೊಂಡು

ತಿನ್ನುವುದೇ ಆಗಿದೆ. ಶಿಷ್ಟ ಧಾರ್ಮಿಕ ಆಚರಣೆಗಳಲ್ಲಿನ ತೀರ್ಥ-ಪ್ರಸಾದ ಎಂಬುವು, ಜಾನಪದ ಮತ್ತು ಬುಡಕಟ್ಟಿನ ಆಚರಣೆಗಳಲ್ಲಿ ಮಾಂಸ-ಮದ್ಯದ ರೂಪದಲ್ಲಿ ಈಗಲೂ ಇರುವುದನ್ನು ಗಮನಿಸಬಹುದು. ಪಿತೃಪೂಜೆಯಲ್ಲಿ ಇರುವ ಬಹುಮುಖ್ಯವಾದ ಅಂಶವೆಂದರೆ ದೇವರ ಸ್ಥಾನಕ್ಕೆ ಏರಿದ ಎಲ್ಲಾ ಹಿರಿಯರೂ ಆರೋಪಿತ ವಿಶೇಷ ಆಸಕ್ತಿಗಳನ್ನು ಪಡೆದ ಮನುಷ್ಯರೇ ಎನ್ನುವುದು ಮತ್ತು ಬದುಕಿರುವ ಮನುಷ್ಯರಿಗೂ ಪಿತೃಗಳಿಗೂ ಇರುವ ಸಂಬಂಧ ಆಹಾರ ಪಾನೀಯಗಳ ಮೂಲಕ. ಅಂದರೆ ದೇವರು ಮತ್ತು ಮನುಷ್ಯರ ನಡುವಿನ ಸಂಬಂಧ ಮೂಲ ಅರ್ಥದಲ್ಲಿ ಲೌಕಿಕವಾದದ್ದೇ. ದೇವರು ತನ್ನ ಪ್ರತಿರೂಪವಾಗಿ ಮನುಷ್ಯನನ್ನು ಸೃಷ್ಟಿಸಿದನೆಂದು ಹೇಳುವ ಧಾರ್ಮಿಕರ ಮಾತು ಚಾರಿತ್ರಿಕವಾಗಿ ಮತ್ತು ಸಾಮಾಜಿಕವಾಗಿ ತಿರುವುಮುರುವಾದ ವಾಸ್ತವವೆಂದು ಯಾರಿಗಾದರೂ ಅರ್ಥವಾಗುತ್ತದೆ. ಮನುಷ್ಯ ದೇವರನ್ನು ಸೃಷ್ಟಿಸಿರುವುದರಿಂದಲೇ ಪ್ರಪಂಚದ ಯವುದೇ ಭಾಗಕ್ಕೆ ಹೋದರೂ ಆಯಾ ಜನರ ದೇವರು ಅವರದೇ ಉಡುಪು ಧರಿಸಿ, ಅವರದೇ ಭಾಷೆಯಲ್ಲಿ ಮಾತಾಡುವ, ಅವರಷ್ಟೇ ಜ್ಞಾನಿ ಅಥವಾ ಅಜ್ಞಾನಿಯಾಗಿರುವ ಮನುಷ್ಯ ನಿರ್ಮಿತ ಪ್ರತೀಕವಾಗಿರುವುದು ಕಂಡುಬರುತ್ತದೆ. ಮನುಷ್ಯನ ಆದಿಮ ಭಯ ಮತ್ತು ಮಹೋನ್ನತ ಕಲ್ಪನೆಗಳು ಅತಿಮಾನುಷ ಆಕಾರ ಪಡೆದು ದೇವರ ರೂಪವನ್ನು ತಾಳಿವೆ. ತನ್ನನ್ನು ಪೂಜಿಸುವ ಜನಸಮುದಾಯದ ಆಹಾರ ಪಾನೀಯಗಳನ್ನು ಬಿಟ್ಟು ಬೇರೆಯದನ್ನು ಬೇಡುವ ಯಾವ ದೇವರೂ ಈ ಭೂಮಿಯ ಮೇಲಿಲ್ಲ.

ಸೃಷ್ಟಿಯ ರಹಸ್ಯ, ಉದ್ದೇಶ ಮತ್ತು ಕರ್ತೃತ್ವದ ಬಗೆಗಿನ ಕುತೂಹಲ ಹಾಗೂ ಅನ್ವೇಷಣಾತ್ಮಕ ಯೋಚನೆಗಳು ಸಾವಿನ ಪ್ರಶ್ನೆಯೊಂದಿಗೆ ಸೇರಿ ಆತ್ಮವಾದವನ್ನು, ಅಮರತ್ವದ ನಂಬಿಕೆಗಳನ್ನು ರೂಪಿಸಿವೆ. ಮೇಜಿನ ಹಿಂದೆ ಒಬ್ಬ ಬಡಗಿ ಇರುವಂತೆ ಸೃಷ್ಟಿಯ ಹಿಂದೆ ಒಬ್ಬ ಸೃಷ್ಟಿಕರ್ತನಿರಲೇಬೇಕೆಂಬ ತರ್ಕದಿಂದ ಹುಟ್ಟುವ ತಾರ್ಕಿಕ ದೇವರಿಂದ ಹಿಡಿದು ಪ್ರಪಂಚದ ಒಳಿತು, ಕೆಡಕುಗಳನ್ನು ನಿರ್ಧರಿಸುವ ಜಗನ್ನಿಯಾಮಕ ಶಕ್ತಿ ಆಗಿರಬಹುದಾದ ನೈತಿಕ ದೇವರವರೆಗಿನ ನೂರಾರು ಬಗೆಯ ನಂಬಿಕೆಗಳಿವೆ. ಇವುಗಳ ಹಿಂದೆ ಬದುಕಿನ ಕಷ್ಟಕೋಟಲೆಗಳಿಂದ ಪಾರಾಗಬಯಸುವ, ಸಾವಿನ ದವಡೆಯಿಂದ ತಪ್ಪಿಸಿಕೊಂಡು ಎಂದೆಂದಿಗೂ ಇರಲು ಸಾಧ್ಯವಾಗಬಹುದೆಂಬ ಸ್ಥಿತಿಗೆ ಹಂಬಲಿಸುವ ಮನುಷ್ಯನ ನಂಬಿಕೆಗಳಲ್ಲಿ ಮಗುವಿನ ಮುಗ್ಧತೆಯಿದೆ, ಅಸಹಾಯಕತೆಯಿದೆ.

ತರ್ಕದ ಎಲ್ಲ ಸಾಧ್ಯತೆಗಳು ಬರಿದಾದಾಗ, ಕಾರ್ಯಕಾರಣ ಸಂಬಂಧಗಳ ದಾರಿಗಳು ಮುಚ್ಚಿದಾಗ, ಯಾವ ತರ್ಕಕ್ಕೂ ಸಿಗದ ಅಗೋಚರವಾದ, ಸರ್ವವ್ಯಾಪಿಯಾದ ನಿರ್ಗುಣವಾದ ಪರಬ್ರಹ್ಮದ ಪರಿಕಲ್ಪನೆ ಮನುಷ್ಯನ ತಾತ್ವಿಕ ಆಲೋಚನಾ ಸಾಧ್ಯತೆಗಳ ಅತ್ಯುನ್ನತ ಫಲವಾಗಿ ಮೂಡಿಬಂದಿದೆ. ವ್ಯಕ್ತಿ ಸತ್ತ ಮೇಲೂ ಸಾಯದೇ ಉಳಿಯುವ ಆತ್ಮ, ಪರಬ್ರಹ್ಮದ ಅಂಶ, ಬಿಂಬ ಅಥವಾ 'ಅದೇ ಆಗಿದೆ' ಎಂಬ ವಾದಗಳು ಉಪನಿಷತ್ತುಗಳಲ್ಲಿ, ಭಾರತೀಯ ತತ್ವಶಾಸ್ತ್ರದ ಬೇರೆ ಬೇರೆ ಶಾಖೆಗಳಲ್ಲಿ, ಕಾಣಸಿಗುತ್ತವೆ. ಏನೇನು ಇದೆಯೋ ಅದೆಲ್ಲವನ್ನು ಪ್ರಕೃತಿ ಪುರುಷರೆಂದು ಸೀಳಿ ನೋಡುವ ಸಾಂಖ್ಯ ದರ್ಶನದಲ್ಲಿ ದೇವರಿಗೆ ಸ್ಥಾನವಿಲ್ಲ. ಯೋಗ, ನ್ಯಾಯ, ವೈಶೇಷಿಕ, ಮೀಮಾಂಸಾ ಮತ್ತು ವೇದಾಂತ ದರ್ಶನಗಳಲ್ಲಿ ಮನುಷ್ಯನು ಏರಬಹುದಾದ ಪರಮಗತಿಯಾಗಿ ಪರಬ್ರಹ್ಮದ ನಿರ್ವಚನದ ಶೋಧವಿದೆಯೇ ಹೊರತು ಸರ್ವಶಕ್ತನಾದ ದೇವರ ನಿರ್ವಚನವಿಲ್ಲ. ದುಃಖ, ಯಾತನೆ ಮತ್ತು ಸಾವಿನ ಭಯಗಳನ್ನು ನೇರವಾಗಿ ಎದುರಿಸಿದ ಬೌದ್ಧ ದರ್ಶನದಲ್ಲೂ ದೇವರ ಪ್ರಸ್ತಾಪವಿಲ್ಲ. ಲೋಕಾಯತದಲ್ಲಂತೂ ಆತ್ಮದ ಅಸ್ತಿತ್ವವನ್ನೇ ನಿರಾಕರಿಸಲಾಗಿದೆ. ಹುಳಿ-ಸಿಹಿ ಪದಾರ್ಥಗಳನ್ನು ನಿರ್ದಿಷ್ಟ ರೀತಿಯಲ್ಲಿ ಸಂಯೋಜಿಸಿ ಕೊಳೆಸಿದಾಗ ಅವುಗಳ ಸಾರವಿಶೇಷವಾಗಿ ಮದ್ಯ ಹುಟ್ಟುವಂತೆ, ಪಂಚಭೂತಗಳು ವಿಶೇಷ ರೀತಿಯಲ್ಲಿ



## ಬನ್ನಿ ಗುಬ್ಬಚ್ಚಿಗಳೇ ಸಾಲುಗಟ್ಟಿ

ಎಲ್ಲಿ ಹಾರಿದಿರೋ ಏನೋ
ಕಣ್ಣ ಮೇರೆಯ ಮೀರಿ,
ಯಾವ ಕಾಡಿನ ಸ್ನೇಹ
ಅರಸಿ ಗುಬ್ಬಚ್ಚಿಗಳೆ ?

ಈ ಹಸಿರಿಗುಸಿರಾಗಿರುವ
ಗಿಡ ಮರದ ಹಬ್ಬಗಳೆ,
ಎಲ್ಲಿ ಹೋದಿರಿ ನಮ್ಮ
ಬೆಳಗಿನಾ ಕಬ್ಬಗಳೆ ?

ಬೆಳಗು ಬರಿದೊ ಬರಿದು
ಸಂಜೆ ಹೋಯಿತು ಉರಿದು,
ಕಿಟಕಿ ಬಾಗಿಲಿಗುಲಿವ
ಚಿಲಿಪಿಲಿ ದಿಬ್ಬಣಗಳೆ;

ಬದುಕ ಸುಗ್ಗಿಯೊಳಗೊಂದಿಷ್ಟು
ಪ್ರೀತಿ-ತೆನೆಗಟ್ಟಲಿಲ್ಲವೆ ?
ನಮ್ಮ ಪ್ರಗತಿಯಬ್ಬರದಲ್ಲಿ
ಸ್ವಾರ್ಥವೇ ಮನೆ ಕಟ್ಟಿತೆ ?

ಸೌಧಗಳೆಷ್ಟೋ
ಮುಗಿಲ ಮುಟ್ಟಿದರೇನು
ನೀವಿಲ್ಲದಾ ಸ್ವರ್ಗ
ಬೇಕಿಲ್ಲ ಸ್ನೇಹಿಗಳೆ;

ಎಂಥ ಸಭ್ಯರು ನಾವು
ಸಹಬಾಳ್ವೆ ತುಳಿದವರು,
ಅದೆಂಥ ಸಾಧನೆ ಇದು
ನಿಮ್ಮ ಮನೆಯನ್ನೇ ದೋಚಿದ್ದು;

ಹೆಸರಿಗೆ ಗುಬ್ಬಚ್ಚಿಗಳು
ಬ್ರಹ್ಮಾಂಡ ಶಕ್ತಿಗಳೇ,
ನೀವಿಲ್ಲದಾ ಸೃಷ್ಟಿ
ಉಳಿವುದೇನು ?

ಜೀವ ಸಂಬಂಧಗಳು
ಅಳಿದು ಹೋಗುವ ಮುನ್ನ
ಬನ್ನಿ ಗುಬ್ಬಚ್ಚಿಗಳೆ,
ಮತ್ತೆ ಸಾಲು ಸಾಲು ಗಟ್ಟಿ

ಸಹಬಾಳ್ವೆಯರಮನೆಗೆ
ಚಿಲಿಪಿಲಿ ತೋರಣ ಕಟ್ಟಿ
ಕೊಡಬನ್ನಿ ಬಾಳು
ಭರವಸೆ ಬುತ್ತಿ ಕಟ್ಟಿ

ಮಾಲತಿ ಪಟ್ಟಣಶೆಟ್ಟಿ, ಫ್ಲಾಟ್ ನಂ. ೩, ಗಣೇಶ್ ಅಪಾರ್ಟ್‌ಮೆಂಟ್ಸ್, ರಜತಗಿರಿ, ಧಾರವಾಡ-೫೮೦ ೦೦೪

ಸಂಯೋಗಗೊಂಡಾಗ ದೇಹ-ಪ್ರಜ್ಞೆಗಳು ಹುಟ್ಟುತ್ತವೆ. ವಿಯೋಗಗೊಂಡಾಗ ದೇಹದೊಂದಿಗೆ ಪ್ರಜ್ಞೆಯೂ ನಾಶವಾಗುತ್ತದೆ. ಇದನ್ನುಳಿದು ಆತ್ಮವೆಂಬ ಯಾವ ವಿಶೇಷವೂ ಅಸ್ತಿತ್ವದಲ್ಲಿಲ್ಲವೆಂದು ಲೋಕಾಯತರು ನಿಸ್ಸಂದಿಗ್ಧವಾಗಿ ಹೇಳುತ್ತಾರೆ. ಆದರೆ, ವಿಶ್ವದ ಮೂಲ ಅವಿನಾಶಿಯೂ, ಅಚಿಂತ್ಯವೂ, ಅಗ್ರಾಹ್ಯವೂ ಆಗಿದೆ. ಇದೇ ವ್ಯಕ್ತಿಯಲ್ಲಿ ಆತ್ಮವೆಂದೂ, ಸಮಷ್ಟಿಯಾಗಿ ಬ್ರಹ್ಮವೆಂದೂ ಕರೆಸಿಕೊಳ್ಳುತ್ತದೆ. ಕ್ಷಣಿಕವಾಗಿ ನಿರಂತರ ಪರಿವರ್ತನೆಗೊಳಪಡುತ್ತಿದ್ದರೂ ಒಟ್ಟಿನಲ್ಲಿ ಸ್ಥಿರವಾಗಿದೆ. ಎಲ್ಲವನ್ನೂ ಒಳಗೊಳ್ಳುವ ಕಾಲಾತೀತ ಸತ್ಯವಾಗಿದೆ. ಇದೇ ಮನುಷ್ಯನ ಪ್ರಜ್ಞೆಯ ಮೂಲವೂ ಹೌದು ಎಂದು ಅನುಭಾವಿಗಳು ಹೇಳುತ್ತಾರೆ. ಮನುಷ್ಯನ ಎಲ್ಲ ಜ್ಞಾನವೂ, ಎಲ್ಲ ಅನುಭವಗಳೂ, ಎಲ್ಲಾ ಪ್ರಶ್ನೆ-ಭಯಗಳೂ ಅವನ ಪ್ರಜ್ಞೆಯ ಮೂಲದಿಂದಲೇ ಹುಟ್ಟುವುದರಿಂದ ಎಲ್ಲಾ ಬಗೆಯ ದುಃಖ, ಯಾತನೆ ಮತ್ತು ಸಾವಿನ ಭಯಗಳಿಂದ ಮುಕ್ತರಾಗಲು ಪ್ರಜ್ಞೆಯ ಮೂಲಕ್ಕೆ ಮರಳುವುದೊಂದೇ ದಾರಿ ಎಂದು ಎಲ್ಲ ಯೋಗಿಗಳು, ಅನುಭಾವಿಗಳು ನಿಸ್ಸಂದಿಗ್ಧವಾಗಿ ಹೇಳುತ್ತಾರೆ. ಯೋಗಮಾರ್ಗದ ವಿವಿಧ ಶಾಖೆಗಳಲ್ಲಿ ಪ್ರಜ್ಞೆಯ ಮೂಲಕ್ಕೆ ಮರಳುವ ವಿವಿಧ ಧ್ಯಾನಮಾರ್ಗಗಳನ್ನು ಈ ಅನುಭಾವಿಕರು ರೂಪಿಸಿದ್ದಾರೆ. ಬುದ್ಧನದೂ ಇಂತಹ ಒಂದು ಬಗೆಯ ಧ್ಯಾನ ಮಾರ್ಗವೇ.

ತಂತ್ರ ಮತ್ತು ಭಕ್ತಿ ಮಾರ್ಗಗಳಲ್ಲಿ ಆಹಾರ ಪಾನೀಯ ಮತ್ತು ಮನುಷ್ಯ -ಮನುಷ್ಯರ ನಡುವಿನ ಭಾವನಾತ್ಮಕ ಸಂಬಂಧಗಳಿಗೆ ಹೆಚ್ಚಿನ ಮಹತ್ವ ಇದೆ. ಜ್ಞಾನ ಮಾರ್ಗದಲ್ಲಿ ಬೌದ್ಧಿಕ ಮತ್ತು ತಾರ್ಕಿಕ ಪರಾಕಾಷ್ಠೆಗೆ ತಲುಪುವುದು ಎಲ್ಲಕ್ಕಿಂತ ಮುಖ್ಯವಾಗುತ್ತದೆ. ಧ್ಯಾನಮಾರ್ಗದಲ್ಲಿ ದೇಹವನ್ನು ನಿರ್ದಿಷ್ಟ ರೀತಿಯಲ್ಲಿ ದಂಡಿಸುವುದರ ಮೂಲಕ ಪ್ರಜ್ಞೆಯ ಮೂಲಕ್ಕೆ ಮರಳಿ, ಸಮಾಧಿ ಸ್ಥಿತಿಯಲ್ಲಿ ನೋಟ-ನೋಟಕ, ಜ್ಞಾತೃ-ಜ್ಞೇಯ, ವ್ಯಕ್ತಿ-ಸಮಷ್ಟಿ ಇವೇ ಮುಂತಾದ ದ್ವಂದ್ವಗಳಿಲ್ಲದ ಅಖಂಡ ಸ್ಥಿತಿಯನ್ನು ಸಾಧಿಸುವುದು ಚರಮ ಗುರಿ. ವಾಸ್ತವವೆಂದರೆ ಅನ್ವೇಷಕ ಯಾವುದೇ ಮಾರ್ಗವನ್ನು ಅನುಸರಿಸಲಿ ಬದುಕಿನಲ್ಲಿ ಕಡೆಗೂ ಮರಳಬೇಕಾದ್ದು ಆಹಾರ ಪಾನೀಯಗಳನ್ನವಲಂಬಿಸಿದ ಬದುಕಿಗೆ. ಮೂಲಭೂತ ಅಗತ್ಯಗಳಿಂದ ಬಾಧಿತವಾದ, ಶ್ರಮದಿಂದ ಹುಟ್ಟುವ ಸಂಪತ್ತಿನ ಅನೇಕ ರೂಪಗಳನ್ನು ಬಳಸಿಕೊಂಡು ಬದುಕಬೇಕಾದ ಅನಿವಾರ್ಯತೆಗೆ, ಜನಸಾಮಾನ್ಯರು ಬದುಕುವ ಸಾಮುದಾಯಿಕ ಜೀವನಕ್ಕೆ, ಅಂದರೆ, ಯೋಗಿವರೇಣ್ಯರು, ವೈರಾಗ್ಯಧನರು, ಸಾಧು ಸಂನ್ಯಾಸಿಗಳು ಅತ್ಯಂತ ನಿಕೃಷ್ಟವಾಗಿ ಕಾಣುವ ಲೌಕಿಕತೆಗೆ. ಗುಹೆಗಳಲ್ಲಿ ಏಕಾಕಿಯಾಗಿ ಉಳಿದು ಅಲ್ಲೇ ಮರಣ ಹೊಂದುವ ಮಹಾತ್ಮರೂ ಸಹ ಒಂದಲ್ಲಾ ಒಂದು ರೀತಿಯಲ್ಲಿ ಪರ್ಯಾಯ ಮಾರ್ಗಗಳಿಂದಾದರೂ ಲೌಕಿಕ ಪ್ರಪಂಚದ ಜೊತೆ ಅಂದರೆ ಜನಸಮುದಾಯದ ಜೊತೆ ಸಂಪರ್ಕವಿರಿಸಿಕೊಂಡವರೇ. ಜನಸಾಮಾನ್ಯರ ಪ್ರೀತಿ, ಮನ್ನಣೆಗಳನ್ನು ಪಡೆದು ಜನರ ರೋಗ-ರುಜಿನ, ಕಷ್ಟ-ಸುಖಗಳಿಗೆ ಸ್ಪಂದಿಸುತ್ತಾ ಜನರ ನಡುವೆಯೇ ಬದುಕಿ ಸತ್ತು ದೇವರಾಗುವ ಎಲ್ಲ ಸಾಧುಸಂತರೂ ಮನುಷ್ಯರ ದುಃಖ, ಯಾತನೆ ಮತ್ತು ಸಾವಿನ ಭಯಗಳಿಗೆ ಪ್ರಜ್ಞೆಯ ಮಟ್ಟದಲ್ಲಿ ಮಾತ್ರ ಪರಿಹಾರವಿದೆ ಎಂದು ಹೇಳುವವರು. ಸೂಕ್ಷ್ಮವಾಗಿ ನೋಡಿದರೆ ಅವರಾರೂ ದೇವರನ್ನು ವಿಶ್ವದ ಆತ್ಯಂತಿಕ ಸತ್ಯವೆಂದು ನಂಬಿದವರಲ್ಲ. ಹಸಿವು, ಬಡತನಗಳಿಗೆ ನೈತಿಕ ಪರಿಹಾರವನ್ನು, ದುಃಖ ಯಾತನೆಗಳಿಗೆ ಸಹನೆಯ ಪರಿಹಾರವನ್ನು ಸೂಚಿಸುವ ಮೂಲಕ ತಮ್ಮ ಸುತ್ತಲಿನ ದುಃಖಿಗಳಿಗೆ, ಬಡವರಿಗೆ ಒಂದು ಬಗೆಯ ರಕ್ಷಾಕವಚವನ್ನು ಪ್ರಜ್ಞೆಯ ಮಟ್ಟದಲ್ಲಿ ಕಲಿಸಿ ತತ್ಕಾಲದ ಉಪಶಮನವನ್ನು ನೀಡಲು ಅವರು ಶಕ್ತರಾಗಿದ್ದಾರೆ. ಏಸುಕ್ರಿಸ್ತ, ಬುದ್ಧ, ಅಲ್ಲಮಪ್ರಭು, ಪರಮಹಂಸ, ರಮಣಮಹರ್ಷಿ ಮತ್ತು ಇಂತಹ ಅನೇಕ ಸಂತರಲ್ಲಿ ಕಾಣಬಹುದಾದ ಸಾಮಾನ್ಯ ಅಂಶ ಇದು. ಸಾಮಾಜಿಕ ಕಳಕಳಿಯನ್ನು ಆಧ್ಯಾತ್ಮಿಕ ಮಾರ್ಗದೊಂದಿಗೆ ಬೆಸೆದ ವಿವೇಕಾನಂದರು ಮೂಲತಃ ಕ್ರೈಸ್ತ ಪಾದ್ರಿಗಳ ಸಾಮಾಜಿಕ ಸೇವೆಯ ಮಾದರಿಯನ್ನು ವೈದಿಕ ಧರ್ಮದ ಲೋಕದೃಷ್ಟಿಯೊಂದಿಗೆ ಬೆರೆಸಿದವರು. ತಮ್ಮ ಜೀವನದ ಪರಮೋದ್ದೇಶ ಪರಮಹಂಸರೂ ಅಲ್ಲ, ವೇದಾಂತವೂ ಅಲ್ಲ, ಭಾರತದ ದರಿದ್ರ ನಾರಾಯಣರ ಸೇವೆ ಎಂದು ಘೋಷಿಸಿದರು. ಪ್ರಪಂಚದಲ್ಲಿ ಒಂದೇ ಒಂದು ಜೀವಿಯು ದುಃಖಿಯಾಗಿರುವ ತನಕ ತನಗೆ ಮುಕ್ತಿ ಬೇಡ ಎಂದು ಸಾರಿದರು. ಭಕ್ತಿಮಾರ್ಗದ ಅನೇಕ ಸಂತರು, ಕನ್ನಡದಲ್ಲಿ ಬಸವಣ್ಣರಾದಿಯಾದ ವಚನಕಾರರೂ ದೇವರನ್ನು ಮುಂದಿಟ್ಟುಕೊಂಡೇ ಸಾಮಾಜಿಕ ವಿಷಮತೆಗಳ ವಿರುದ್ಧ ಹೋರಾಡಿ, ತಮಗಿದ್ದ ಆಯಾಕಾಲದ ಮಿತಿಗಳೊಳಗೇ ಜನಪರವಾದ ಚಳುವಳಿಗಳ ಹರಿಕಾರರಾದರು.

ಪ್ರಪಂಚದ ಅನೇಕ ಸಾಧು ಸಂತರು, ಸಾಧಕರಾಗಿ, ಅನ್ವೇಷಕರಾಗಿ ಜನಸಾಮಾನ್ಯರಿಂದ ದೂರ ಉಳಿದರೂ, ತಮ್ಮ ಪ್ರಶ್ನೆಗಳಿಗೆ ಆತ್ಯಂತಿಕ ಸಮಾಧಾನವನ್ನು, ಪ್ರಜ್ಞೆಯ ಮೂಲಕ್ಕೆ ಹಿಂದಿರುಗುವುದರ ಮೂಲಕ ಕಂಡುಕೊಂಡಾದ ಮೇಲೆ ನಿಜವಾದ ಅರ್ಥದಲ್ಲಿ ನಿರೀಶ್ವರವಾದಿಗಳಾಗೇ ಸಮಾಜಕ್ಕೆ ಮರಳಿ ಲೋಕಸಂಗ್ರಹದಲ್ಲಿ ತೊಡಗಿದ್ದಾರೆ. ಅವರಿರುವ ಧಾರ್ಮಿಕ ಆವರಣ ಮತ್ತು ಅವರನ್ನು ಅನುಸರಿಸ ಬಯಸುವ ಜನರ ಧಾರ್ಮಿಕ ಅಗತ್ಯಗಳಿಂದಾಗಿ ದೇವರು ಅವರ ಚಟುವಟಿಕೆಗಳ ಕೇಂದ್ರ ಸ್ಥಾನದಲ್ಲಿರುವಂತೆ ತೋರುತ್ತದೆ. ವಾಸ್ತವವಾಗಿ ಮನುಷ್ಯನನ್ನು ಬಿಟ್ಟು ಪ್ರಕೃತಿಯ ಆಚೆಗೆ ಇರುವ ಯಾವ ದೈವಿಕತೆಯನ್ನೂ ಈ ಸಾಧುಸಂತರು ಜನಸಾಮಾನ್ಯರಿಗೆ ಹೇಳಿಲ್ಲ. ಬುದ್ಧನಂಥವರು ದೇವರ ಬಗ್ಗೆ ಮೌನ ವಹಿಸಿ ಮಾನವ ಪ್ರೀತಿ ಮತ್ತು ಸಾಮೂಹಿಕ ನೆಮ್ಮದಿಯನ್ನು ಸ್ಪಷ್ಟ ಮಾತುಗಳಲ್ಲಿ ಪ್ರತಿಪಾದಿಸಿದ್ದಾರೆ. ಜೈನಧರ್ಮ ಅಹಿಂಸಾ ಜೀವನ ಪದ್ಧತಿಗೆ ಅತ್ಯಂತ ಹೆಚ್ಚಿನ ಮಹತ್ವವನ್ನು ಕೊಡುತ್ತದೆ. ಪೈಗಂಬರರು ಸಾಮಾಜಿಕ ಸಂಬಂಧಗಳು ಮತ್ತು ಕೌಟುಂಬಿಕ ನೆಮ್ಮದಿಗೆ ಒತ್ತು ಕೊಡುತ್ತಾರೆ. ಕುರಾನಿನ ದೇವರು ಅನಾಗರಿಕ ಮತ್ತು ಮೂಢಜನರನ್ನು ಮಕ್ಕಳಂತೆ ಹೆದರಿಸಿ ಹದ್ದುಬಸ್ತಿನಲ್ಲಿಡುವ ಹಿರಿಯರ ಪ್ರತೀಕ. ಏಸುಕ್ರಿಸ್ತ ಮನುಷ್ಯ ಪ್ರೀತಿಯೇ ಮೂರ್ತಿವೆತ್ತಂತಿರುವ ಅಪರೂಪದ ಸಂತ; ಹಳೆಯ ಒಡಂಬಡಿಕೆಯ ಕೋಪಿಷ್ಠ ಮುದಿ ದೇವರ ಸ್ಥಾನದಲ್ಲಿ ಪ್ರೇಮಮಯಿ, ಎಂಥ ತಪ್ಪುಗಳನ್ನೂ ಕ್ಷಮಿಸುವ ಪೋಷಕ ತಾಯಿ -ತಂದೆಯ ಪ್ರತೀಕವನ್ನು ಪ್ರತಿಷ್ಠಾಪಿಸಿದ ಸಾಮಾಜಿಕ ಪ್ರಜ್ಞೆಯ ಮನುಷ್ಯ; ದುಃಖಿಗಳು, ಬಡವರು, ಗುಲಾಮರು ಹೀಗೆ ಅಂದಿನ ರಾಜಕೀಯ ವ್ಯವಸ್ಥೆಯಲ್ಲಿ ಅಭದ್ರತೆಯನ್ನು ಅನುಭವಿಸುತ್ತಿದ್ದ ಜನರ ಮುಂದಾಳು.

ಆದರೆ ವ್ಯಕ್ತಿಗೆ ಹುಟ್ಟು, ಬೆಳವಣಿಗೆ, ಸಾವು ಸಹಜವಾಗಿರುವಂತೆ ತತ್ವ-ತಿಳುವಳಿಕೆಗಳಿಗೂ ಪ್ರಗತಿ-ಅವನತಿಯ ಸ್ಥಿತ್ಯಂತರಗಳಿವೆ. ಎಲ್ಲ ಸಂತರೂ ಮನುಷ್ಯರೇ ಆಗಿರುವುದರಿಂದ ಮತ್ತು ಅವರು ಕಂಡುಕೊಂಡ ದರ್ಶನಗಳಿಗೆ ನಿರ್ದಿಷ್ಟವಾದ ಕಾಲ, ದೇಶ, ಸಂದರ್ಭಗಳ ಮಿತಿಗಳಿವೆಯಾದ್ದರಿಂದ ಈ ದರ್ಶನಗಳನ್ನು ವಿರೋಧಿಸುವ ಶಕ್ತಿಗಳಷ್ಟೇ ಅಲ್ಲ ಪೂಜಿಸುವ ಜನರೂ ಇವುಗಳ ಅವನತಿಗೆ, ವಿಕೃತಿಗೆ ಮತ್ತು ಮೂಲೋತ್ಪಾಟನೆಗೆ ಕಾರಣರಾಗುತ್ತಾರೆ. ಯಾವುದೇ ತತ್ವ ಅಥವಾ ದರ್ಶನ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಕಾಲಕ್ರಮೇಣ ವಿಕೃತಗೊಳ್ಳುವುದು, ಅವನತಿ ಹೊಂದುವುದು ಅನಿವಾರ್ಯ. ಆಗೆಲ್ಲ ಆ ತತ್ವಗಳನ್ನು ಬೋಧಿಸಿದ ಸಂತರು ಹೊಸಹೊಸ ದೇವರುಗಳಾಗಿ ಪೂಜೆಗೊಳ್ಳುತ್ತಾರೆ. ಸತ್ತ ಹಿರಿಯರು ಹೇಗೆ ದೇವರಾಗುತ್ತಾರೋ ಹಾಗೆಯೇ ಅವನತಿಗೊಳಪಟ್ಟ ಸಂತರೂ ದೇವರೆನಿಸಿಕೊಳ್ಳುತ್ತಾರೆ. ಅವರ ತತ್ವಗಳು ಹೊಸ ಮತ-ಧರ್ಮಗಳಾಗಿ ರೂಪುಗೊಳ್ಳುತ್ತವೆ. ಮನುಷ್ಯ ಸಮಾಜಗಳನ್ನು ಉತ್ಪಾದನಾ ಸಂಬಂಧಗಳ ಮೂಲಕ ನಿಯಂತ್ರಣಕ್ಕೊಳಪಡಿಸುವ ಆಳುವ ವರ್ಗಗಳು ಯಾವುದೇ ಧರ್ಮ, ತತ್ವ, ದರ್ಶನ, ಸಂತರನ್ನು ತನ್ನ ಉದ್ದೇಶಗಳಿಗಾಗಿ ಬಳಸಿಕೊಳ್ಳಬಹುದು. ಹೀಗಾಗಿಯೇ ಬಡವರು, ದುಡಿಮೆಗಾರರು ತಮ್ಮ ದುಃಖ ನಿವಾರಣೆಗಾಗಿ ಧಾರ್ಮಿಕತೆ ಸುಲಭವಾಗಿ ಒದಗಿಸುವ ಭ್ರಾಮಕ ಪರಿಹಾರಗಳನ್ನು ಮೊರೆಹೋಗುತ್ತಾರೆ. ಈ ಮೂಲಕ ಜನಸಾಮಾನ್ಯರನ್ನು ನಿಯಂತ್ರಣದಲ್ಲಿಟ್ಟುಕೊಳ್ಳುವುದು ಆಳುವ ವರ್ಗಗಳಿಗೆ ಸುಲಭ. ಪಿತೃಲೋಕದ ತಾರತಮ್ಯಯುಕ್ತ ಸಂಬಂಧಗಳು, ದೇವರ ಭಯ ಮತ್ತು ದೈವಿಕತೆಗಳನ್ನು ಬಳಸಿ ಜೀವನವನ್ನು ಲೌಕಿಕ-ಅಲೌಕಿಕ ಎಂದು ಭಾಗಮಾಡಿ, ಧರ್ಮದ ದಳ್ಳಾಳಿಗಳಾದ ಪುರೋಹಿತವರ್ಗದ ಸಹಾಯದಿಂದ ಜನಸಮುದಾಯವನ್ನು ಲೌಕಿಕರೆಂದು ಕರೆದು ನಿಕೃಷ್ಟತೆಯ ಭಾವನೆಯನ್ನು ಅವರಲ್ಲಿ ಹಾಸುಹೊಕ್ಕಾಗುವಂತೆ ಆಳುವ ವರ್ಗಗಳು ಮಾಡಿವೆ. ಪ್ರಾರಂಭದಲ್ಲಿ ಜನಸಮುದಾಯದ ಪರವಾಗೇ ಇದ್ದ ಎಲ್ಲ ಧರ್ಮಗಳು ಕಾಲಕ್ರಮೇಣ ಆಳುವ ವರ್ಗಗಳ ನಿಯಂತ್ರಣಕ್ಕೆ ಸಿಕ್ಕು ಶ್ರೀಮಂತ ಪರವಾದ, ವ್ಯವಸ್ಥೆಯನ್ನು ಬೆಂಬಲಿಸುವ ಸಂಸ್ಥೆಗಳಾಗಿ ಮಾರ್ಪಟ್ಟಿರುವುದನ್ನು ಪ್ರಪಂಚದ ಚರಿತ್ರೆಯುದ್ದಕ್ಕೂ ಕಾಣಬಹುದು. ಹೀಗಾಗಿಯೇ ಹಬ್ಬ-ಉಪವಾಸಗಳ ವ್ರತಾಚರಣೆಗಳು ಎಲ್ಲ ಧರ್ಮಗಳ ಅವಿಭಾಜ್ಯ ಅಂಗಗಳಾಗಿವೆ. ಉಳ್ಳವರಿಗೆ ಹೋಳಿಗೆ, ಇಲ್ಲದವರಿಗೆ ಉಪವಾಸ. ಸಮಾನತೆಯನ್ನು ಸಾರುವ, ಯಾವುದೇ ಬಗೆಯ ತಾರತಮ್ಯವನ್ನು ಒಪ್ಪದ, ಜನಸಮುದಾಯದ ಪರವಾಗೇ ಉಳಿಯಲು ಹೆಣಗಿದ ಧರ್ಮ-ದರ್ಶನಗಳು ಅವು ಹುಟ್ಟಿದ ನಾಡಿನಿಂದಲೇ ಗಡಿಪಾರಾಗಿವೆ, ಅಥವಾ ವಿಕೃತಗೊಂಡು ನಾಶವಾಗಿವೆ. ಬೌದ್ಧಧರ್ಮ, ಮತ್ತು ಚಾರ್ವಾಕ ಅಥವಾ ಲೋಕಾಯತ ದರ್ಶನಗಳು ಇದಕ್ಕೆ ಉತ್ತಮ ನಿದರ್ಶನ. ಲೌಕಿಕ ಅಲೌಕಿಕವೆಂದು ಭಾಗ ಮಾಡಿ ಇಹದಲ್ಲಿ ಅಸಮಾನತೆಯನ್ನು ಪರದಲ್ಲಿ ಸಮಾನತೆಯನ್ನು ಪ್ರತಿಪಾದಿಸುವ ಇಬ್ಬಂದಿ ಧರ್ಮಗಳು ಮಾತ್ರ ಅವು ಹುಟ್ಟಿದ ನಾಡಿನಲ್ಲೇ ಬಲಿಷ್ಠವಾಗಿ ಆಳುವ ವರ್ಗದ ಪೋಷಣೆಯಲ್ಲಿ

ಬದುಕಿ ಇಂದಿಗೂ ಉಳಿದಿವೆ. ವೈದಿಕ ಧರ್ಮ ಮತ್ತು ಕ್ರೈಸ್ತಧರ್ಮಗಳು ಇಂಥ ಕೆಲವು ಉದಾಹರಣೆಗಳು. ಸಾವಿನ ಭಯಕ್ಕೆ ತತ್ಕಾಲದ ಉಪಶಮನವನ್ನು ಅಥವಾ ಭ್ರಮಾತ್ಮಕ ಪರಿಹಾರಗಳನ್ನು ಸೂಚಿಸಲೊಪ್ಪದ ಯಾವ ಧರ್ಮವೂ ಜನಸಮುದಾಯದಲ್ಲಿ ನೆಲೆಯೂರಿ ನಿಲ್ಲಲು ಸಾಧ್ಯವಾಗಿಲ್ಲ. ಈ ಎಲ್ಲ ಧರ್ಮ, ತತ್ವ, ದರ್ಶನಗಳ ಸಾಮಾಜಿಕ ಆಚರಣೆಗಳಲ್ಲಿ ವಿಶೇಷವಾಗಿ ಗಮನಿಸಬೇಕಾದ ಅಂಶವೆಂದರೆ ಬೇಟೆ ಆಧಾರಿತ ಅಥವಾ ಇನ್ನೂ ಹೆಚ್ಚು ವ್ಯಾಪಕವಾದ ಕೃಷಿ ಆಧಾರಿತ ಹಬ್ಬಗಳು. ಪೂಜೆಯಂತೆ ಹಬ್ಬವು ಸಹ ಮುಖ್ಯವಾಗಿ, ಸಂಪಾದಿಸಿದ ಆಹಾರವನ್ನು ಸಾಮುದಾಯಿಕವಾಗಿ ಹಂಚಿ ತಿನ್ನುವ ಕ್ರಮ.

ಸಮಷ್ಟಿಯಲ್ಲಿ ಏನಿದೆಯೋ ಅದೇ ವ್ಯಕ್ತಿಯಲ್ಲಿ ಇದೆ. ಮನುಷ್ಯ, ಪಶು, ಪಕ್ಷಿ, ಪ್ರಾಣಿ, ಕೀಟ, ಮರ, ಗಿಡ, ಬಳ್ಳಿ , ಜೀವ, ನಿರ್ಜೀವ, ಎಲ್ಲ ವಸ್ತುಗಳ ಮೂಲ ತತ್ವ ಅದೇ. ಅದು ನಿರಂತರವಾಗಿ ಪರಿವರ್ತನೆಗೊಳ್ಳುತ್ತದೆಯೇ ಹೊರತು ಇರುವುದು ನಾಶವಾಗುತ್ತಲೂ ಇಲ್ಲ ಹೊಸದಾಗಿ ಸೃಷ್ಟಿಯಾಗುತ್ತಲೂ ಇಲ್ಲ. ಅದರ ಸ್ಥಿತ್ಯಂತರಗಳು ನಾಮರೂಪಗಳಾಗಿ ಮನುಷ್ಯ ಪ್ರಜ್ಞೆಗೆ ಪ್ರಪಂಚವೆಂದು ಗೋಚರಿಸುತ್ತಿವೆ. ಪ್ರಜ್ಞೆಯೂ ಸಹ ಪ್ರಾಕೃತಿಕ ಮೂಲ ತತ್ವಗಳ ಸಂಯೋಗದಿಂದ ಫಲಿತವಾದ ಶಕ್ತಿ ವಿಶೇಷ. ಮನುಷ್ಯರೂ ಸೇರಿದಂತೆ ಎಲ್ಲ ವಸ್ತುಗಳೂ ವಿರೋಧಗಳ ಸಂಯೋಗವಾಗಿದ್ದು ಸಂಘಟನೆಯಿಂದ ವಿಘಟನೆಯ ಕಡೆಗೆ; ವಿಘಟನೆಯಿಂದ ಸಂಘಟನೆಯ ಕಡೆಗೆ ಚಲಿಸುವುದರಿಂದ ಇಡೀ ವಿಶ್ವ ದ್ವಂದ್ವಾತ್ಮಕವೂ ಪರಿವರ್ತನಶೀಲವೂ ಆಗಿದೆ. ಇದನ್ನು ವ್ಯಕ್ತೀಕರಿಸಿ ನೋಡಿದಾಗ ಹುಟ್ಟು-ಸಾವು, ಜನ್ಮ-ಪುನರ್ಜನ್ಮಗಳ ಚಕ್ರ ಕಾಣಸಿಗುತ್ತದೆ. ಈ ದ್ವಂದ್ವಾತ್ಮಕ ಪರಿವರ್ತನಶೀಲ ನಿರಂತರ ಅಖಂಡತೆಗೆ ಉದ್ದೇಶವಾಗಲಿ, ಅರ್ಥವಾಗಲಿ ಇಲ್ಲ. ಆದರೆ ವ್ಯಕ್ತಿಮಟ್ಟದಲ್ಲಿ ಈ ಪ್ರಕ್ರಿಯೆಗೆ ಪ್ರತಿಯೊಂದು ಜನಾಂಗವೂ ತನ್ನದೇ ಆದ ಅರ್ಥ, ಉದ್ದೇಶಗಳನ್ನು ಆಯಾ ಕಾಲ, ದೇಶ, ಸಂದರ್ಭಗಳಿಗನುಗುಣವಾಗಿ ಆರೋಪಿಸಿ ತನ್ನ ಧರ್ಮವನ್ನು ರೂಪಿಸಿಕೊಂಡಿದೆ. ಬದುಕಿನ ಜಂಜಾಟಗಳಿಂದ ಮುಕ್ತಿಪಡೆಯಲು, ತನ್ನ ಆಸೆಗಳನ್ನು ಮಾಂತ್ರಿಕ ರೀತಿಯಲ್ಲಿ ಈಡೇರಿಸಿಕೊಳ್ಳುವುದಕ್ಕಾಗಿ ಸರ್ವಶಕ್ತನಾದ ದೇವರನ್ನು, ಸಾವಿನ ಭಯವನ್ನು ಎದುರಿಸಲು ಅವಿನಾಶಿಯಾದ ಆತ್ಮನನ್ನು, ವ್ಯಕ್ತಿ ಮಟ್ಟದ ಅಮರತ್ವವನ್ನೂ ಸೃಷ್ಟಿಸಿಕೊಂಡಿದೆ. ಕೆಳಹಂತದ ಜೀವಿಗಳಲ್ಲಿ ವಿರಳವಾಗುತ್ತಾ ಹೋಗುವ, ಮನುಷ್ಯರಲ್ಲಿ ದಟ್ಟವಾಗಿ ಸಂಭವಿಸಿರುವ ಪ್ರಜ್ಞೆ ಇದರಲ್ಲಿ ಅತ್ಯಂತ ನಿರ್ಣಾಯಕ ಪಾತ್ರವನ್ನು ವಹಿಸಿದೆ.

ಮನುಷ್ಯ-ಮನುಷ್ಯರ ನಡುವಿನ ತಾರತಮ್ಯಗಳು ಚಾರಿತ್ರಿಕ ಮತ್ತು ಭೌಗೋಳಿಕವಾದವುಗಳು. ಬುಡಕಟ್ಟು ಸಮಾಜದ ಮಂತ್ರ-ತಂತ್ರದ ನಂಬಿಕೆಗಳು, ಪಿತೃಪೂಜೆ ಮತ್ತು ವರ್ಗಪೂರ್ವ ಸಮಾನತೆಗಳು ಉತ್ಪಾದನಾ ಸಲಕರಣೆ, ಸಂಪತ್ತಿನ ಒಡೆತನ ಮತ್ತು ಉತ್ಪಾದನಾ ಸಂಬಂಧಗಳಲ್ಲಿ ಉಂಟಾದ ಬದಲಾವಣೆಗಳಿಗನು ಸಾರವಾಗಿ ಬದಲಾಗುತ್ತಾ ಹೋದವು. ತಾರತಮ್ಯವನ್ನು ಪ್ರತಿಪಾದಿಸುವ, ಅಸಮಾನತೆ ಯನ್ನು ಸಹಜವೆಂದು ಸಾಧಿಸುವ, ಕೀಳರಿಮೆ-ಉತ್ತಮಿಕೆಗಳನ್ನು ಪ್ರತಿಷ್ಠಾಪಿಸುವ ದೇವರು-ಧರ್ಮಗಳು ಬೇರೆ ಬೇರೆ ಸಮಾಜಗಳಲ್ಲಿ ಕಾಣಿಸಿಕೊಂಡವು. ಬುಡಕಟ್ಟಿನ ದೇವರುಗಳು ಕಲ್ಲು, ಮಣ್ಣು, ಮರ, ಗಿಡ, ಪಶು, ಪಕ್ಷಿರೂಪದ ಹಿರಿಯರು. ಬೆತ್ತಲೆ ಅಥವಾ ಸೊಪ್ಪಿನುಡುಗೆಯ ಮುಖ-ಮೂತಿಯಿಲ್ಲದ ಮೂರ್ತಿಗಳು. ಊಳಿಗಮಾನ್ಯ ಪದ್ಧತಿಯ ದೇವರುಗಳು ನೇತಾರರನ್ನು ಹೋಲುವ ಶಿಲ್ಪಗಳು. ಅವರು ಬಳಸುವ ವಾಹನ, ತಿನ್ನುವ ಆಹಾರ, ತೊಡುವ ವಸ್ತ್ರ ಮತ್ತು ಗುಡಿ-ಗೋಪುರಗಳು ಅಂದಿನ ತಂತ್ರಜ್ಞಾನವನ್ನು ಅವಲಂಬಿಸಿದವುಗಳು. ಶಸ್ತ್ರಾಸ್ತ್ರಗಳು ಮತ್ತು ಯುದ್ಧ ಸಾಮಗ್ರಿಗಳು ಸಹ ಅಂದಿನ ಲೋಹ ವಿದ್ಯೆಯನ್ನಾಧರಿಸಿ ರೂಪಿತವಾದವು. ಅಂದಿನ ಮನುಷ್ಯರು ಏನೇನು ಬಳಸುತ್ತಿದ್ದರೋ ಅವುಗಳನ್ನೇ ಸಹಜವಾಗಿ ಅಂದಿನ ದೇವರುಗಳು ಬಳಸುವಂತೆ ದೇವರುಗಳ ಸೃಷ್ಟಿಯಾಗಿತ್ತು. ಹಿಂದು ದೇವರುಗಳಲ್ಲಿ ಬ್ರಹ್ಮ ಸರಸ್ವತಿಯಂಥ ಒಂದೆರಡು ದೇವರುಗಳನ್ನು ಬಿಟ್ಟರೆ ಉಳಿದೆಲ್ಲವೂ ಒಂದಲ್ಲ ಒಂದು ಮಾರಕಾಸ್ತ್ರಗಳನ್ನು ಹಿಡಿದಿರುವುದನ್ನು ಗಮನಿಸಬಹುದು. ಯುದ್ಧ, ಶೌರ್ಯ, ಪರಾಕ್ರಮಗಳು ಉನ್ನತ ಮೌಲ್ಯಗಳಾಗಿದ್ದ ಆ ಕಾಲದಲ್ಲಿ ಸ್ವರ್ಗ-ನರಕಗಳ ಕಲ್ಪನೆಗಳೂ ಸಹ ಅದಕ್ಕನುಗುಣವಾಗೇ ಇದ್ದವು. ಮನುಷ್ಯಸಮಾಜ ವಿಕಾಸ ಹೊಂದಿದಂತೆ ದೇವರುಗಳ ಸ್ವರೂಪದಲ್ಲಿಯೂ ನಿರ್ಣಾಯಕ ಬದಲಾವಣೆಗಳಾಗುತ್ತಾ ಬಂದಿವೆ. ವರ್ಗ ಸಂಬಂಧಗಳು ತೀಕ್ಷ್ಣವಾಗುತ್ತ ಹೋದ ಹಾಗೆ ದೇವರುಗಳಲ್ಲಿಯೂ ಬಲಿಷ್ಠ

ದೇವರು-ಅಶಕ್ತ ದೇವರು, ಕ್ರೂರ-ಸೌಮ್ಯ, ಉತ್ತಮ-ನೀಚ ಅಷ್ಟೇ ಏಕೆ, ಶ್ರೀಮಂತ-ಬಡವ ದೇವರುಗಳು ಜನ್ಮತಾಳಿದವು.

ಬಂಡವಾಳಶಾಹಿ ಪದ್ಧತಿಗೆ ತನ್ನದೇ ಆದ ದೇವರಿಲ್ಲವೆನ್ನುವುದನ್ನು ಗಮನಿಸಬೇಕು. ಇಲ್ಲಿ ಸಿಗುವ ಎಲ್ಲ ದೇವರುಗಳು ಸುಧಾರಿತ ತಂತ್ರಜ್ಞಾನವನ್ನು ಬಳಸಿಕೊಂಡು ವೇಷ ಬದಲಿಸಿದ ಊಳಿಗಮಾನ್ಯ ಪದ್ಧತಿಯ ದೇವರುಗಳೇ. ಆದರೆ ಮೂರ್ತರೂಪದ ದೇವರುಗಳ ಜಾಗದಲ್ಲಿ ಅಮೂರ್ತವಾದ ತತ್ವ-ದರ್ಶನಗಳು ಹೆಚ್ಚು ವ್ಯಾಪಕವಾಗಿ ನೆಲೆಯೂರಿರುವುದನ್ನು ಗಮನಿಸಬಹುದು. ಹಿಂದಿನ ಪದ್ಧತಿಗಳಲ್ಲಿ ಜನಸಮುದಾಯಕ್ಕೆ ತಮ್ಮ ರೂಪ, ಆಕಾರ, ವಸ್ತ್ರ, ಆಯುಧ ಮತ್ತು ವಾಹನಗಳಿಂದ ಅತ್ಯಂತ ಹತ್ತಿರವಾಗಿದ್ದ ಜನಪದೀಯ, ಪ್ರಾಕೃತ ದೇವರುಗಳು ಬಂಡವಾಳಶಾಹಿ ಪದ್ಧತಿಯಲ್ಲಿ ಕ್ಷುದ್ರದೇವತೆಗಳಾಗಿ ಕೆಳತಳ್ಳಲ್ಪಟ್ಟವು. ಆಳುವ ವರ್ಗದ ಅಮೂರ್ತ ದೇವರು ನಿರ್ಗುಣ, ನಿರಾಕಾರ ಅಥವಾ ತಾತ್ವಿಕ ಪ್ರತೀಕವಾದ ಸಗುಣ-ಸರ್ವೋತ್ತಮ ದೇವರೆಂದು ಪರಿಗಣಿಸಲ್ಪಟ್ಟು ವರ್ಗ-ಜಾತಿ-ಮತಗಳ ತಾರತಮ್ಯ ದೇವರುಗಳಲ್ಲೂ ಕಾಣಿಸಿಕೊಂಡಿತು. ಆಳುವ ವರ್ಗದ ದೇವರು ಶ್ರೇಷ್ಠವೆಂದೂ ಆಳಿಸಿಕೊಳ್ಳುವವರ ದೇವರುಗಳು ಕೀಳೆಂದೂ ಪರಿಗಣಿಸುವಲ್ಲಿ ದೇವರಲ್ಲಿನ ಮನುಷ್ಯತನವನ್ನು ಸ್ಪಷ್ಟವಾಗಿ ಗುರುತಿಸಬಹುದು. ಸಂತರು ಹೇಳುವ ವ್ಯಕ್ತಿ-ಸಮಷ್ಟಿಗಳ ಅಖಂಡತೆ ಏಕ ಕಾಲಕ್ಕೆ ಎರಡು ತದ್ವಿರುದ್ಧವಾದ ದೃಷ್ಟಿಕೋನಗಳಿಗೆ ದಾರಿಮಾಡಿಕೊಟ್ಟಿದೆ. ಮನುಷ್ಯ ಸಮಾಜಕ್ಕೆ ನಿರ್ದಿಷ್ಟಗೊಳಿಸಿ ಹೇಳುವುದಾದರೆ ತಾನು ಎಲ್ಲರಲ್ಲಿಯೂ ಇರುವುದರಿಂದ ಎಲ್ಲರ ಸುಖ ನೆಮ್ಮದಿಗಳನ್ನು ಸಾಧಿಸಿದಲ್ಲದೇ ತನ್ನ ಸುಖ ನೆಮ್ಮದಿಗಳು ಸಾಧ್ಯವಾಗುವುದಿಲ್ಲ, ಅಥವಾ ಸಾಮಾಜಿಕ ನೆಲೆಯಲ್ಲಿ ಸಾಧ್ಯವಾಗದ ಸುಖ ನೆಮ್ಮದಿಗಳ ನ್ಯಾಯ-ಸಮಾನತೆಗಳಿಗೆ ಅರ್ಥವಿಲ್ಲ. ಆದ್ದರಿಂದ ಸಾಮಾಜಿಕ ಜವಾಬ್ದಾರಿ ಕೇವಲ ನೈತಿಕ ಅಗತ್ಯ ಮಾತ್ರವಲ್ಲ ಇಹ-ಪರಗಳ, ಲೌಕಿಕತೆ-ಪರಮಾರ್ಥಗಳ ಅಖಂಡತೆಯ ನಿಜವಾದ ಆಧ್ಯಾತ್ಮಿಕತೆಯಾಗುತ್ತದೆ. ಈ ದೃಷ್ಟಿಕೋನ ಸಮಾಜವಾದೀ ಚಿಂತನೆಗೆ ದಾರಿ ಮಾಡಿಕೊಡುವಂತಹದು. ಈ ಬಗೆಯ ಲೋಕಸಂಗ್ರಹ ಎಲ್ಲ ಸಂತರಲ್ಲೂ ಕಂಡುಬರುತ್ತದೆ. ಇದು ವ್ಯಕ್ತಿಯಿಂದ ಸಮಾಜದ ಕಡೆಗೆ ಹರಿಯುವ ಬಹಿರ್ಮುಖಿ ಪ್ರಜ್ಞೆ.

ಇದಕ್ಕೆ ತದ್ವಿರುದ್ಧವಾಗಿ, ಎಲ್ಲವೂ-ಎಲ್ಲರೂ ತನ್ನಲ್ಲೇ ಇರುವುದರಿಂದ ತನ್ನ ಸುಖನೆಮ್ಮದಿಯನ್ನು ಸಾಧಿಸಿದರೆ ಎಲ್ಲರ ಸುಖ ನೆಮ್ಮದಿಯನ್ನು ಸಾಧಿಸಿದಂತೆ ಆಗುತ್ತದೆ ಎಂಬ ದೃಷ್ಟಿಕೋನ ಸಮಾಜ ವಿಮುಖತೆಯನ್ನು ತಂದುಕೊಡುವ, ವ್ಯಕ್ತಿಪಾರಮ್ಯವನ್ನು ಪ್ರತಿಪಾದಿಸುವ, ಸಮಾಜದಿಂದ ವ್ಯಕ್ತಿಯ ಕಡೆಗೆ ಹರಿಯುವ ಅಂತರ್ಮುಖಿ ಪ್ರಜ್ಞೆಯ ವೈಯಕ್ತಿಕ ಮಟ್ಟದ ಆಧ್ಯಾತ್ಮಿಕತೆಗೆ ಕೊಂಡೊಯ್ಯುತ್ತದೆ. ಸಾಮಾಜಿಕವಾಗಿ ಬಂಡವಾಳಶಾಹೀ ದೃಷ್ಟಿಕೋನವನ್ನು ಒಪ್ಪಿಕೊಳ್ಳುತ್ತದೆ. ಜೀವನವನ್ನು ಇಹ-ಪರವೆಂದು ಭಾಗಿಸಿ, ಆಧ್ಯಾತ್ಮಿಕತೆಯ ಹಿರಿಮೆಯನ್ನು, ಲೌಕಿಕತೆಯ ಹೀನತೆಯನ್ನು ಎತ್ತಿ ಹಿಡಿಯುತ್ತದೆ. ತಾತ್ವಿಕವಾಗಿ ಸಮಾನತೆಯನ್ನು ಒಪ್ಪಿಯೂ ವಾಸ್ತವವಾಗಿ ಅಸಮಾನತೆಯನ್ನು ಪುರಸ್ಕರಿಸುವ ಇಬ್ಬಂದಿತನದ ಜೀವನದೃಷ್ಟಿ ಪ್ರಾಪ್ತವಾಗುತ್ತದೆ. ಪುರೋಹಿತವರ್ಗಕ್ಕೆ ಸೇರಿದ ಬಹುಮಂದಿ ಧಾರ್ಮಿಕರು ತಾವೇ ತಂದುಕೊಳ್ಳುವ ಇಂಥ ಇಬ್ಬಂದಿತನವನ್ನು ಸಾಮಾಜಿಕ ನೆಲೆಗಳಲ್ಲಿ ಸಮರ್ಥಿಸಿಕೊಳ್ಳಲು ಬಂಡವಾಳವಾದವನ್ನು ಮೊರೆಹೋಗುತ್ತಾರೆ. ಎಷ್ಟೋ ಜನ 'ಮಹಾತ್ಮರು', ಸಾಧು-ಸನ್ಯಾಸಿಗಳು, ಜಗದ್ಗುರುಗಳು, ಅಧ್ಯಾತ್ಮವಾದಿಗಳು ಮತ್ತು ಬಲಪಂಥೀಯ ತತ್ವಜ್ಞಾನಿಗಳು ಈ ಗುಂಪಿಗೆ ಸೇರಿದವರಾಗಿರುತ್ತಾರೆ. ಮೇಲುನೋಟಕ್ಕೆ ಸಮಾಜವಾದದಲ್ಲಿ ದೇವರು, ಧರ್ಮ, ಅಧ್ಯಾತ್ಮಕ್ಕೆ ಸ್ಥಾನವಿಲ್ಲವೆಂಬಂತೆ ತೋರುತ್ತದೆ. ಆದರೆ ನಿಜವಾದ ಅಧ್ಯಾತ್ಮ ಸಾಧ್ಯವಾಗುವುದು ಜನಸಮುದಾಯದ ಸುಖ ನೆಮ್ಮದಿಗಳಲ್ಲಿ ವ್ಯಕ್ತಿಯ ಸುಖ ನೆಮ್ಮದಿಗಳನ್ನು ಕಂಡುಕೊಳ್ಳುವ ಸಮಾಜವಾದದಲ್ಲಿ. ದೇವರು, ಧರ್ಮ, ಆಧ್ಯಾತ್ಮಿಕತೆ ಮತ್ತು ಸಾವಿನ ಭಯವನ್ನು ಸಹ ಬಂಡವಾಳ ಮಾಡಿಕೊಂಡು ನಗದೀಕರಿಸಿಕೊಳ್ಳುವ ಬಂಡವಾಳಶಾಹೀ ಪದ್ಧತಿ ನಿಜವಾದ ಅರ್ಥದಲ್ಲಿ ಧರ್ಮ ವಿರೋಧಿ. ಜನಸಮುದಾಯದ ಹಿತವನ್ನು ಕಾಯದ, ಮೌಢ್ಯ-ಅಜ್ಞಾನಗಳನ್ನು ಆಧರಿಸಿದ, ಸರ್ವಶಕ್ತ ಸರ್ವಾಧಿಕಾರಿ ದೇವರನ್ನು ಮುಂದಿಟ್ಟುಕೊಂಡು ತಾನೆ ಜನರ ನಂಬಿಕೆಗಳ ರಕ್ಷಕನೆಂಬಂತೆ ತೋರಿಸಿಕೊಳ್ಳುತ್ತದೆ.

ಲೋಕಾಯತವು, ವೈಚಾರಿಕತೆ, ಸಮಾನತೆ, ಮನುಷ್ಯಪ್ರೀತಿ ಮತ್ತು ಸಮುದಾಯದ ಒಳಿತನ್ನು ಸಾಧಿಸುವ ಲೋಕಸಂಗ್ರಹವನ್ನು ಪ್ರತಿಪಾದಿಸುತ್ತದೆ. ಬಂಡವಾಳವಾದವನ್ನು ಸಮರ್ಥಿಸುವ ಭಾವನಾವಾದ ವ್ಯಕ್ತಿಪಾರಮ್ಯ, ಅಸಮಾನತೆ, ಭಯ, ಮೌಢ್ಯಗಳನ್ನು ಆಧರಿಸಿದ ಧಾರ್ಮಿಕತೆಯ ಮೂಲಕ ತಾರತಮ್ಯಯುಕ್ತ ಲೋಕಕಲ್ಯಾಣದ ಸೋಗನ್ನು ಹಾಕುತ್ತದೆ.

ಬಡತನ, ಅಸಮಾನತೆ, ಶೋಷಣೆ ಮುಂತಾದ ಮೂಲಭೂತ ಸಾಮಾಜಿಕ ವಿಷಮತೆಗಳು ಪ್ರಜ್ಞೆಯ ಮಟ್ಟದಲ್ಲಿ ಬಗೆಹರಿಯುವಂಥವಲ್ಲ. ಕೆಲವೇ ವ್ಯಕ್ತಿಗಳ ಹೃದಯ ಪರಿವರ್ತನೆಯಿಂದ ಅಥವಾ ಬೆರಳೆಣಿಕೆಯ ದಯಾಳುಗಳ ಅನುಕಂಪದಿಂದ ಶೋಷಣಾಯುಕ್ತ ಸಮಾಜ ಸಾಧ್ಯವಾಗುವುದಿಲ್ಲ. ತಾತ್ವಿಕ ಆಶಯಗಳು ಎಷ್ಟೇ ಉನ್ನತವಾಗಿದ್ದರೂ, ಪ್ರಾಮಾಣಿಕವಾಗಿದ್ದರೂ ಅವುಗಳನ್ನು ಸಾಮಾಜಿಕ ನೆಲೆಗಳಲ್ಲಿ ಸಾಕ್ಷಾತ್ಕರಿಸಿಕೊಳ್ಳಲಾಗದಿದ್ದರೆ ಅವು ಹುಸಿ ಮೌಲ್ಯಗಳನ್ನು, ಭ್ರಮಾತ್ಮಕ ನಿಲುವುಗಳನ್ನು ಜನಸಮುದಾಯಗಳಲ್ಲಿ ಬಿತ್ತುತ್ತವೆ. ಸಂಪತ್ತಿನ ಹಂಚಿಕೆ ಮತ್ತು ಉತ್ಪಾದನಾ ಸಂಬಂಧಗಳಲ್ಲಿ ಜನಸಮುದಾಯ ಪರವಾದ ಮೂಲಭೂತ ಬದಲಾವಣೆಗಳಾಗದಿದ್ದರೆ ಧರ್ಮ, ಆಧ್ಯಾತ್ಮಿಕತೆ, ತತ್ವಶಾಸ್ತ್ರಗಳು ಜನರ ಮೈಮರೆಸುವ ಅಮಲುಕಾರಕಗಳಾಗುತ್ತವೆ. ದೇವರು ಶೋಷಣೆಯ ಸಾಧನವಾಗುತ್ತಾನೆ. ಸಾಧು ಸಂನ್ಯಾಸಿಗಳು ಆಳುವ ವರ್ಗದ ಕ್ರೌರ್ಯವನ್ನು ಮರೆಮಾಚುವ ಮುಖವಾಡಗಳಾಗುತ್ತಾರೆ. ಆಧ್ಯಾತ್ಮಿಕತೆಯನ್ನು ಸಾಮಾಜಿಕ ನೆಲೆಗಳಲ್ಲಿ ಅನುಷ್ಠಾನಕ್ಕೆ ತರಲು ಯತ್ನಿಸಿದಾಗಲೆಲ್ಲ ವರ್ಗ-ಜಾತಿ ಸಂಬಂಧಗಳು ಮುರಿದು ರಾಜಕೀಯ ಕ್ಷೋಭೆ ಕಾಣಿಸಿಕೊಂಡಿದೆ. ಅಂಥ ಬದಲಾವಣೆಯನ್ನು ಪ್ರತಿಪಾದಿಸಿದ ಸಾಧು ಸಂತರನ್ನು, ಪ್ರವಾದಿಗಳನ್ನು ಆಳುವ ವರ್ಗಗಳು ಶಿಲುಬೆಗೇರಿಸಿದ, ವಿಷವಿಟ್ಟು ಕೊಂದ ಅಥವಾ ದೇಶಭ್ರಷ್ಟಗೊಳಿಸಿದ ನಿದರ್ಶನಗಳು ಈ ಅಂಶವನ್ನು ಸ್ಪಷ್ಟಪಡಿಸುತ್ತವೆ. ಬಸವಣ್ಣನವರ ಸಾಮಾಜಿಕ ಕ್ರಾಂತಿ ಧಾರ್ಮಿಕ ಮೂಲದ್ದಾಗಿದ್ದು ಜನಸಮುದಾಯದ ಸಮಾನತೆಯನ್ನು ಸಾಮಾಜಿಕವಾಗಿ ಸಾಕ್ಷಾತ್ಕರಿಸಲು ಹೊರಟಿದ್ದರಿಂದಲೇ ಅದು ಆಳುವ ವರ್ಗಗಳಿಂದ ತೀವ್ರ ಪ್ರತಿರೋಧವನ್ನು, ಹಿಂಸೆಯನ್ನು ಎದುರಿಸಬೇಕಾಯಿತು. ಅಂದರೆ ಸಂತ ಮೂಲದ ಅಥವಾ ಆಧ್ಯಾತ್ಮಿಕತೆಯ ಮೂಲದ ಸಮಾಜವಾದ ರಾಜಕೀಯ ಬದಲಾವಣೆಯಾಗಿ ಪರಿವರ್ತನೆಗೊಳ್ಳದೆ ತನ್ನ ಗುರಿಯನ್ನು ಸಾಧಿಸಲಾಗದ ಅನಿವಾರ್ಯತೆ ಇರುವುದರಿಂದಲೇ ಅದು ಸಾಮಾಜಿಕ ನೆಲೆಯಲ್ಲಿ ಪೂರ್ಣಗೊಳ್ಳದೇ ಹಿಮ್ಮೆಟ್ಟುತ್ತದೆ ಅಥವಾ ಆಳುವ ವರ್ಗದೊಂದಿಗೆ ರಾಜಿ ಮಾಡಿಕೊಂಡು ವಿಕೃತಗೊಳ್ಳುತ್ತದೆ. ಆದ್ದರಿಂದ ಸಂತರ ಸಮಾಜವಾದದ ಲೋಕಸಂಗ್ರಹಕ್ಕೆ ತನ್ನದೇ ಆದ ತೀವ್ರ ಸ್ವರೂಪದ ಮಿತಿಗಳಿವೆ. ಉಳಿದಿರುವ ಪರ್ಯಾಯ ಒಂದೇ. ಅದು ಲೋಕಾಯತ ಮೂಲದ ರಾಜಕೀಯ ಸ್ವರೂಪದ ಲೋಕಸಂಗ್ರಹ. ತತ್ವ, ಪ್ರಣಾಳಿಕೆ ಮತ್ತು ಕಾರ್ಯತಂತ್ರ ಲೋಕಾಯತದ ನೆಲೆಯಿಂದ ಸಾಮಾಜಿಕವಾಗಿ, ರಾಜಕೀಯವಾಗಿ ಅನುಷ್ಠಾನಗೊಂಡಾಗ ಮಾತ್ರ ನಿಜವಾದ ಬದಲಾವಣೆ ಸಮುದಾಯದ ಲೋಕ ಸಂಗ್ರಹವಾಗಿ ಸಾಧ್ಯವಾಗುತ್ತದೆ. ಕೇವಲ ಜನರ ಸಂಕಷ್ಟಗಳನ್ನು ಅರ್ಥಮಾಡಿಕೊಳ್ಳುವುದರಿಂದ ಅಥವಾ ಜನಪರವಾದ ಆಶಯಗಳನ್ನು ಘೋಷಿಸುವುದರಿಂದ ಮಾತ್ರ ಅಲ್ಲ.

ವಿಶ್ವದ ಆಧ್ಯಾತ್ಮಿಕತೆ, ಧಾರ್ಮಿಕತೆಗಳಲ್ಲಿ ಕೆಲವು ಬಡವರ ಪರವಾಗಿದ್ದು ಶ್ರೀಮಂತರ ಜೊತೆಗಿವೆ. ಇನ್ನು ಕೆಲವು ಬಡವರ ಜೊತೆಗಿದ್ದು ಶ್ರೀಮಂತರ ಪರವಾಗಿವೆ. ಆದರೆ ಬಡವರ ಜೊತೆಗಿದ್ದು ಬಡವರ ಪರವಾಗಿರುವ, ಸಾಮಾಜಿಕ ಮತ್ತು ರಾಜಕೀಯ ನೆಲೆಗಳಲ್ಲಿ ಸಾಕ್ಷಾತ್ಕರಿಸಿಕೊಳ್ಳಬಹುದಾದ ಧಾರ್ಮಿಕತೆ ಮತ್ತು ಆಧ್ಯಾತ್ಮಿಕತೆ ಮಾತ್ರ ನಿಜವಾದ ಲೋಕಸಂಗ್ರಹ ಆಗಿರುವುದು ಸಾಧ್ಯ. ಇದು ರಾಜಕೀಯವಾಗಿರಬೇಕಾದ್ದು ಅನಿವಾರ್ಯ.

ಮನುಷ್ಯನ ಬದುಕಿಗೆ ಅತ್ಯಗತ್ಯವಾದ ವ್ಯವಸಾಯ, ವಾಣಿಜ್ಯ, ಜ್ಞಾನ, ವಿಜ್ಞಾನ, ತಂತ್ರಜ್ಞಾನಗಳು ಪರಸ್ಪರ ಪೂರಕವಾದ ಸಾಮಾಜಿಕ ಕ್ರಿಯೆಗಳು. ಇವುಗಳನ್ನು ಒಂದರಿಂದ ಮತ್ತೊಂದನ್ನು ಬೇರ್ಪಡಿಸಿ ಪರಸ್ಪರ ಸಂಬಂಧವಿಲ್ಲದ ಘಟಕಗಳೆಂಬಂತೆ ವರ್ಗೀಕರಿಸಿ, ನಿಯಂತ್ರಿಸುವ ಪ್ರಯತ್ನಗಳಲ್ಲಿ ಮನುಷ್ಯ ವಿರೋಧಿ ಹಿತಾಸಕ್ತಿಗಳಿವೆ. ಮೌಢ್ಯ, ಅಜ್ಞಾನಗಳೇ ದೇವರು, ಧರ್ಮಗಳಲ್ಲ, ಅವಿಚಾರ, ಭಯಗಳೇ ಅನುಭಾವ, ಆಧ್ಯಾತ್ಮಿಕತೆಗಳಲ್ಲ, ಸಾವಿನ ಭಯದಿಂದ ಹುಟ್ಟಿ ಬದುಕಿನ ಪ್ರೀತಿಯತ್ತ ಸಾಗುವ ಸೃಷ್ಟಿಯ ನಿರಂತರತೆಯನ್ನು ವಿಶ್ವದ ಅಖಂಡತೆಯನ್ನು ಅರ್ಥಮಾಡಿಕೊಳ್ಳುವ ವೈಚಾರಿಕ ದೃಷ್ಟಿ, ಪ್ರಜ್ಞೆಯನ್ನು ಪ್ರಜ್ಞೆಯ ಮೂಲಕ್ಕೆ ಕೊಂಡೊಯ್ಯುವ ಧ್ಯಾನದ ಮಹತ್ವವನ್ನು ಅರ್ಥಮಾಡಿಕೊಳ್ಳಬಲ್ಲದು. ಪ್ರಜ್ಞೆಯ ಮಟ್ಟದಲ್ಲಿ ಮಾತ್ರವಲ್ಲದೆ ಭೌತಿಕವಾಗಿ ರಾಜಕೀಯವಾಗಿ ಸಮುದಾಯದೊಂದಿಗೆ ತನ್ನನ್ನು ಗುರುತಿಸಿಕೊಳ್ಳುವ ಸಾಮಾಜಿಕತೆಯಲ್ಲಿ ಬದುಕಿನ ಸಾರ್ಥಕತೆ ಇದೆ.

ವಿ. ಎನ್. ಲಕ್ಷ್ಮೀನಾರಾಯಣ
ಎಂ-೧೨೩೭, ೨ನೇ ಮುಖ್ಯರಸ್ತೆ, ವಿವೇಕಾನಂದನಗರ
ಮೈಸೂರು - ೫೭೦೦೨೩

# ಪ್ರಾಚೀನ ಭಾರತೀಯ ಸಮಾಜದಲ್ಲಿ ಸಾಮಾಜಿಕ ಚಲನಶೀಲತೆ

ವಿದೇಶಿ ಆಕ್ರಮಣಗಳಿಂದ, ಭೌಗೋಳಿಕ ಪರಿಸರದ ಪ್ರಭಾವದಿಂದ, ಜನ ಸಮುದಾಯಗಳು ಬೇರೆಡೆಗೆ ವಲಸೆ ಹೋಗುವುದರಿಂದ, ಸಾಮಾಜಿಕ ಪರಿಸ್ಥಿತಿಯ ಒತ್ತಡಗಳಿಂದ, ಪಾರಂಪರಿಕ ವೃತ್ತಿಗಳು ಬದಲಾಗುವುದರಿಂದ ಹೀಗೆ ಹಲವು ಕಾರಣಗಳಿಂದ ಭಾರತೀಯ ಸಮಾಜದಲ್ಲಿ ಬದಲಾವಣೆಗಳಾಗಿವೆ. ಸಾವಿರಾರು ವರ್ಷಗಳ ಇತಿಹಾಸದ ಭಾರತೀಯ ಸಮಾಜದಲ್ಲಿ ಕೆಲವು ಜಾತಿಗಳು ಮೇಲ್‌ಮುಖ ಚಲಿಸಿವೆ, ಹೆಚ್ಚು ಪ್ರತಿಷ್ಠೆಯ ಸ್ಥಾನಮಾನವನ್ನು ಪಡೆದಿವೆ. ಹಾಗೆಯೇ ಇನ್ನು ಕೆಲವು ಜಾತಿಗಳು ತಮ್ಮ ಉನ್ನತ ಸ್ಥಾನಮಾನವನ್ನು ಕಳೆದುಕೊಂಡು ಸಮಾಜದ ಕೆಳಸ್ತರಕ್ಕೆ ಇಳಿದಿವೆ. ವರ್ಣಾಶ್ರಮ ವ್ಯವಸ್ಥೆಯ ಪೋಷಕರೂ, ರಕ್ಷಕರೂ ಆದ ಪುರೋಹಿತಶಾಹಿಗಳು ಕೂಡ ಕೆಲವೊಮ್ಮೆ ಕೆಳಜಾತಿಗಳು ರಾಜಕೀಯ ಮತ್ತು ಆರ್ಥಿಕ ಬಲ ಗಳಿಸಿದಾಗ, ಸಮಾಜದಲ್ಲಿ ಉನ್ನತ ಸ್ಥಾನಮಾನ ಮತ್ತು ಗೌರವಕ್ಕಾಗಿ ಹಂಬಲಿಸಿದಾಗ ಅವರಿಂದ ಬೇಕಾದಷ್ಟು ಪ್ರಯೋಜನ ಪಡೆದುಕೊಂಡು ಅವರನ್ನು ಉನ್ನತ ಜಾತಿಗಳೊಂದಿಗೆ ಸಮೀಕರಿಸಲು ಪ್ರಯತ್ನ ಪಟ್ಟಿದ್ದಾರೆ. ಈ ವರ್ಣಾಶ್ರಮ ವ್ಯವಸ್ಥೆಯಲ್ಲಿ ಮೇಲಕ್ಕೆ ಚಲಿಸಿದ ಮತ್ತು ಮೇಲಿನಿಂದ ಕೆಳಕ್ಕೆ ಚಲಿಸಿದ ಕೆಲವು ಗುಂಪುಗಳನ್ನು ಈಗ ನೋಡೋಣ.

**ರಾಮದಾಸ ಪ್ರಭು ಸಿಂಗನಕೋಡಿ**

**ಭಾ**ರತೀಯ ಸಮಾಜ ಎಂದಾಕ್ಷಣ ನಮಗೆ ನೆನಪಾಗುವುದು ವರ್ಣಾಶ್ರಮ ವ್ಯವಸ್ಥೆ. ಹೆಚ್ಚಿನ ನಮ್ಮ ಪಠ್ಯಪುಸ್ತಕಗಳು ಕೂಡ ಭಾರತೀಯ ಸಮಾಜ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳಾಗಿ ವಿಂಗಡಿಸಲ್ಪಟ್ಟಿದೆ ಎಂದು ಬಹಳ ಸರಳವಾಗಿ ಹೇಳುತ್ತವೆ. ಪ್ರತೀ ಹಂತದಲ್ಲೂ ಇದನ್ನೇ ಓದುವ ನಮಗೆ ಭಾರತೀಯ ಸಮಾಜ ವೇದಗಳ ಕಾಲದಿಂದ ಇಂದಿನವರೆಗೂ ಬದಲಾಗಿಲ್ಲ ಎಂಬ ತಪ್ಪು ಕಲ್ಪನೆ ಬರುವುದು ಸಹಜ. ಆದರೆ ಇಂದು ವರ್ಣಾಶ್ರಮ ವ್ಯವಸ್ಥೆ ಬಹಳ ಸಂಕೀರ್ಣವಾಗಿ ಬೆಳೆದು ಜಟಿಲವಾಗಿದೆ. ಇಂದು ನಾವು ನಾಲ್ಕು ಜಾತಿಗಳ ಬದಲು, ಸಾವಿರಾರು ಜಾತಿಗಳನ್ನು ಭಾರತೀಯ ಸಮಾಜದಲ್ಲಿ ನೋಡುತ್ತಲಿದ್ದೇವೆ. ಸಮಾಜ ನಿರ್ಜೀವ ವಸ್ತುವಲ್ಲ, ಸಮಾಜ ಎಂದರೆ ವ್ಯಕ್ತಿಗಳ ಸಮೂಹ. ವ್ಯಕ್ತಿಗಳು ಬದಲಾದಂತೆ ಸಮಾಜ ಕೂಡ ಬದಲಾಗುತ್ತದೆ. ಈ ಜಗತ್ತಿನ ಯಾವುದೇ ಸಮಾಜವೂ ಬದಲಾಗದೇ ಉಳಿಯಲು ಸಾಧ್ಯವಿಲ್ಲ. ಬದಲಾವಣೆಯ ವೇಗ ಕೆಲವು ಸಮಾಜಗಳಲ್ಲಿ ಕಡಿಮೆ ಇರಬಹುದು ಇನ್ನು ಕೆಲವು ಕಡೆ ಹೆಚ್ಚಾಗಿರಬಹುದು.

ವಿದೇಶೀ ಆಕ್ರಮಣಗಳಿಂದ, ಭೌಗೋಳಿಕ ಪರಿಸರದ ಪ್ರಭಾವದಿಂದ, ಜನಸಮುದಾಯಗಳು ಬೇರೆಡೆಗೆ ವಲಸೆ ಹೋಗುವುದರಿಂದ, ಸಾಮಾಜಿಕ ಪರಿಸ್ಥಿತಿಯ ಒತ್ತಡಗಳಿಂದ, ಪಾರಂಪರಿಕ ವೃತ್ತಿಗಳು ಬದಲಾಗುವುದರಿಂದ, ಹೀಗೆ ಹಲವು ಕಾರಣಗಳಿಂದ ಭಾರತೀಯ ಸಮಾಜದಲ್ಲಿ ಬದಲಾವಣೆಗಳಾಗಿವೆ. ಸಾವಿರಾರು ವರ್ಷಗಳ ಇತಿಹಾಸದ ಭಾರತೀಯ ಸಮಾಜದಲ್ಲಿ ಕೆಲವು ಜಾತಿಗಳು ಮೇಲ್‌ಮುಖ ಚಲಿಸಿವೆ. ಹೆಚ್ಚು ಪ್ರತಿಷ್ಠೆಯ ಸ್ಥಾನಮಾನವನ್ನು ಪಡೆದಿವೆ. ಹಾಗೆಯೇ ಇನ್ನು ಕೆಲವು ಜಾತಿಗಳು ತಮ್ಮ ಉನ್ನತ ಸ್ಥಾನಮಾನವನ್ನು ಕಳೆದುಕೊಂಡು ಸಮಾಜದ ಕೆಳಸ್ತರಕ್ಕೆ ಇಳಿದಿವೆ. ವರ್ಣಾಶ್ರಮ ವ್ಯವಸ್ಥೆಯ ಪೋಷಕರೂ, ರಕ್ಷಕರೂ ಆದ ಪುರೋಹಿತಶಾಹಿಗಳು ಕೂಡ ಕೆಲವೊಮ್ಮೆ ಕೆಳಜಾತಿಗಳು ರಾಜಕೀಯ ಮತ್ತು ಆರ್ಥಿಕ ಬಲ ಗಳಿಸಿದಾಗ, ಸಮಾಜದಲ್ಲಿ ಉನ್ನತ ಸ್ಥಾನಮಾನ ಮತ್ತು ಗೌರವಕ್ಕಾಗಿ ಹಂಬಲಿಸಿದಾಗ, ಅವರಿಂದ ಬೇಕಾದಷ್ಟು ಪ್ರಯೋಜನ ಪಡೆದುಕೊಂಡು ಅವರನ್ನು ಉನ್ನತ ಜಾತಿಗಳೊಂದಿಗೆ ಸಮೀಕರಿಸಲು ಪ್ರಯತ್ನಪಟ್ಟಿದ್ದಾರೆ. ಈ ವರ್ಣಾಶ್ರಮ ವ್ಯವಸ್ಥೆಯಲ್ಲಿ ಮೇಲಕ್ಕೆ ಚಲಿಸಿದ ಮತ್ತು ಮೇಲಿನಿಂದ ಕೆಳಕ್ಕೆ ಚಲಿಸಿದ ಕೆಲವು ಗುಂಪುಗಳನ್ನು ಈಗ ನೋಡೋಣ.

ವೇದಕಾಲೀನ ಸಮಾಜ ಪಶುಪಾಲನಾ ಸಮಾಜವಾಗಿತ್ತು. ಗೋವುಗಳೇ ಅಂದಿನ ಜನರ ಸಂಪತ್ತಾಗಿದ್ದವು. ವೇದಕಾಲೀನ ಸಮುದಾಯಗಳು ಆಗಿಂದಾಗ್ಗೆ ಗೋಗ್ರಹಣದಲ್ಲಿ ತೊಡಗಿರುತ್ತಿದ್ದವು. ಗೋಗ್ರಹಣಗಳೇ ಅಂದಿನ ಸಮುದಾಯಗಳ ಆರ್ಥಿಕ ಚಟುವಟಿಕೆಗಳಾಗಿದ್ದವು. ಆರ್ಯರ ಜೀವನ ಪದ್ಧತಿಯಲ್ಲಿ ಕುದುರೆ ಮತ್ತು ರಥದ ಉಪಯೋಗ ಬಹಳಷ್ಟಿದೆ. ರಥಗಳಿಗೆ ವಿಶೇಷ ಬೇಡಿಕೆ ಇರುವ ರಥವನ್ನು ಪ್ರತಿಷ್ಠೆಯ ವಸ್ತುವೆಂದು ಪರಿಗಣಿಸುವ ಸಮಾಜದಲ್ಲಿ ಸಹಜವಾಗಿ ರಥಕಾರನಿಗೂ ವಿಶೇಷ ಮಹತ್ವ, ಸ್ಥಾನಮಾನಗಳಿರುತ್ತವೆ. ವೇದಕಾಲೀನ ಯುಗದಲ್ಲಿ ರಥಕಾರನಿಗೂ ಕರಕುಶಲಕರ್ಮಿಗಳಿಗೂ ಸಮಾಜದಲ್ಲಿ ಉನ್ನತ ಸ್ಥಾನಮಾನವಿದ್ದದ್ದು ಕಂಡುಬರುತ್ತದೆ. ಆದರೆ ಮುಂದೆ ಸೈನ್ಯದಲ್ಲಿ ರಥಗಳ ಪ್ರಾಧಾನ್ಯತೆ ಕಡಿಮೆಯಾಗಿ ಇನ್ನಿತರ ಅಂಗಗಳೇ ಪ್ರಧಾನವಾಗುತ್ತಾ ಬಂದಂತೆ ರಥಕಾರನಿಗೂ ಸಮಾಜದಲ್ಲಿ ಸ್ಥಾನಮಾನ ಕುಸಿಯುತ್ತಾ ಬಂದಂತೆ ಕಾಣುತ್ತದೆ. ಗುಪ್ತ ಮತ್ತು ಗುಪ್ತಾನಂತರದ ಕಾಲದಲ್ಲಿ ಧರ್ಮಶಾಸ್ತ್ರಕಾರರು ಕರಕುಶಲಕರ್ಮಿಗಳನ್ನು ಶೂದ್ರ ವರ್ಣವೆಂದೇ ಪರಿಗಣಿಸಿದ್ದಾರೆ. ಕುಶಲಕರ್ಮಿಗಳು ಸಮಾಜದಲ್ಲಿ ಕೆಳಸ್ತರಕ್ಕೆ ಚಲಿಸಿರುವುದನ್ನು ಇಲ್ಲಿ ಗಮನಿಸಬಹುದು.

ವೇದಗಳ ಕಾಲದಲ್ಲಿ ಅಗಾಧವಾದ ಸಾಹಿತ್ಯ ರಚನೆಯಾಗಿದ್ದರೂ, ಲಿಪಿಯ ಉಲ್ಲೇಖ ನಮಗೆ ಕಾಣಸಿಗುವುದಿಲ್ಲ. ವೇದಗಳನ್ನು ಕಂಠಪಾಠ ಮಾಡಿ ಸ್ಮರಣೆಯಲ್ಲಿಟ್ಟುಕೊಳ್ಳುತ್ತಿದ್ದರೆ ವಿನಾ ಬರೆದಿಡುತ್ತಿರಲಿಲ್ಲ. ವೈದಿಕ ಸಾಹಿತ್ಯ ಮೌಖಿಕ ಸಾಹಿತ್ಯವಾಗಿತ್ತು. ಈ ಸಾಹಿತ್ಯದಲ್ಲಿ ಗಾಥಾ, ನಾರಾಶಂಸಿ, ದಾನಸ್ತುತಿ, ಆಖ್ಯಾನ, ಮುಂತಾದ ಪ್ರಕಾರಗಳಿವೆ. ಇವುಗಳಲ್ಲಿ ನಾವು ವೀರಾದಿವೀರರ, ಋಷಿಮುನಿಗಳ ವಂಶಾವಳಿಗಳನ್ನು ಸಾಧನೆಗಳನ್ನು ನೋಡಬಹುದಾಗಿದೆ. ವೀರಯೋಧರ ಮತ್ತು ಋಷಿಗಳ ವಂಶಾವಳಿಗಳನ್ನೂ, ಸಾಧನೆಗಳನ್ನೂ ಹೊಗಳಿ, ಅವರ ಮೇಲೆ ಕಾವ್ಯ ರಚನೆ ಮಾಡಿ ಅದನ್ನು ನೆನಪಿಟ್ಟುಕೊಂಡು ಬೇರೆ ಬೇರೆ ಸಂದರ್ಭದಲ್ಲಿ ಅದನ್ನು ಹಾಡಿ ಹೊಗಳುವ ವರ್ಗ ಒಂದಿತ್ತು. ಅವರನ್ನು ಸೂತ – ಮಾಗಧರು ಎನ್ನುತ್ತಿದ್ದರು. ಈ ಗಾಥಾ, ನಾರಾಶಂಸಿ, ಆಖ್ಯಾನ, ದಾನಸ್ತುತಿಗಳನ್ನು ಬರೆದಿಡಲು ಲಿಪಿ ಇರಲಿಲ್ಲ, ಆದುದರಿಂದ ಸೂತ–ಮಾಗದರಂಥ ಸ್ಮರಣೆಕಾರರ ಸೇವೆ ಅಂದಿನ ಸಮಾಜಕ್ಕೆ ಅಗತ್ಯ ಇತ್ತು. ಆದುದರಿಂದಲೇ ಸೂತ ಮಾಗಧರಿಗೆ ವೇದಕಾಲೀನ ಸಮಾಜದಲ್ಲಿ ಬ್ರಾಹ್ಮಣರಷ್ಟೇ ಗೌರವದ ಸ್ಥಾನಮಾನಗಳಿದ್ದವು. ಆದರೆ ವೇದೋತ್ತರ ಕಾಲದಲ್ಲಿ ಬ್ರಾಹ್ಮೀ ಲಿಪಿಯ ಬಳಕೆ ಜನಪ್ರಿಯವಾಯಿತು. ಅಂದಿನಿಂದ ಸಮಾಜದಲ್ಲಿ ಬರಹಗಾರರಿಗೆ ಗೌರವ, ಸ್ಥಾನಮಾನಾದಿಗಳು ದೊರೆತವು. ಸೂತ–ಮಾಗಧರಂತಹ ಸ್ಮರಣೆಕಾರರ ಅವಶ್ಯಕತೆ ಸಮಾಜಕ್ಕೆ ಇನ್ನಿಲ್ಲ. ಅವರು ಉದ್ಯೋಗ ಕಳೆದುಕೊಂಡು ಬೇರೆ ಬೇರೆ ವೃತ್ತಿ ಅನುಸರಿಸಿರಬೇಕು. ಆಗ ಅವರ ಸ್ಥಾನಮಾನಗಳು ಕುಸಿದವು. (ಮಹಾಭಾರತದಲ್ಲಿ ಕರ್ಣನನ್ನು ಸೂತ ಪುತ್ರ ಎಂದು

ಅವಮಾನಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು).

ಪ್ರಾಚೀನ ತಮಿಳ್ ಸಾಹಿತ್ಯ, ಸಂಗಮ್ ಸಾಹಿತ್ಯದಲ್ಲಿ ಆ ಕಾಲದ ಕವಿಗಳು ಮತ್ತು ಹಾಡುಗಾರರಾದ 'ಪಾಣಾರ್' ರಚಿಸಿದ ಗೀತೆಗಳಿವೆ. ಈ 'ಪಾಣಾರ್' ವೇದಕಾಲೀನ ಸೂತ-ಮಾಗಧರನ್ನು ಬಹಳಷ್ಟು ಹೋಲುತ್ತಾರೆ. ಸಂಗಮ್ ಕಾಲದ ಬುಡಕಟ್ಟು ನಾಯಕರ ಶೌರ್ಯ, ಸಾಧನೆ, ದಾನಪ್ರಿಯತೆ, ಬಲಿದಾನ ಮುಂತಾದವುಗಳನ್ನು ಹಾಡಿ ಹೊಗಳುತ್ತಾ ಊರಿಂದೂರಿಗೆ ಚಲಿಸುವ ವರ್ಗವೇ ಈ ಪಾಣಾರ್. ಇವರು ಬುಡಕಟ್ಟು ನಾಯಕರಿಂದ ಬಹುಮಾನವನ್ನು ಪಡೆಯುತ್ತಿದ್ದರು. ಇಂತಹ ಗೀತೆಗಳ ಸಂಗ್ರಹವೇ ಸಂಗಮ್ ಸಾಹಿತ್ಯ. ಇದು ಕೂಡ ಮೌಖಿಕ ಸಾಹಿತ್ಯವಾಗಿತ್ತು. ಸಮಾಜದಲ್ಲಿ ಈ ಪಾಣಾರ್ ವರ್ಗದವರಿಗೆ ಲಿಪಿ ಇಲ್ಲದ ಕಾಲದಲ್ಲಿ ವಿಶೇಷ ಗೌರವವಿತ್ತು. ಮುಂದೆ ಕಬ್ಬಿಣದ ಬಳಕೆಯಿಂದ ಕೃಷಿಯ ವಿಸ್ತರಣೆಯಾಗಿ ಬುಡಕಟ್ಟುಗಳು ಜಾತಿಗಳಾಗಿ ಪರಿವರ್ತನೆಯಾಗಿ ಸಮಾಜದಲ್ಲಿ ವರ್ಗಭೇದ ತೀವ್ರಗೊಂಡಿತು. ಆಗ ಚೋಳ, ಚೇರ, ಪಾಂಡ್ಯರ ರಾಜ್ಯಗಳು ಹುಟ್ಟಿಕೊಂಡವು. ಉತ್ತರದಿಂದ ಬಂದ ಬ್ರಾಹ್ಮಣರು ಈ ಪಾಣಾರ್‌ರ ಸ್ಥಾನವನ್ನು ಪಡೆದುಕೊಂಡರು. ಅವರು ತಮಿಳ್ ಬ್ರಾಹ್ಮೀ ಲಿಪಿಯನ್ನು ಪ್ರಾರಂಭ ಮಾಡಿದರು. ಬ್ರಾಹ್ಮಣರಿಂದ ತಮ್ಮ ವಂಶಾವಳಿಗಳನ್ನು ಬರೆಯಿಸಿ, ಯಜ್ಞಗಳನ್ನು ಮಾಡಿಸಿ ತಮಗೆ ಕ್ಷತ್ರಿಯ ಸ್ಥಾನವನ್ನು ಪಡೆಯುವುದರಲ್ಲಿ ಚೋಳ, ಪಾಂಡ್ಯರು ಸಫಲರಾದರು. ಇದರ ಪರಿಣಾಮವಾಗಿ ಪಾರಂಪರಿಕ ಹಾಡುಗಾರರಾದ ಪಾಣಾರ್, ಸಮಾಜದಲ್ಲಿ ತಮ್ಮ ಸ್ಥಾನಮಾನವನ್ನು ಕಳೆದುಕೊಂಡು ವರ್ಣಾಶ್ರಮ ವ್ಯವಸ್ಥೆಯಲ್ಲಿ ಕೆಳಜಾತಿಗಳಾಗಿ ಪರಿಗಣಿಸಲ್ಪಟ್ಟರು. ಪಾರಂಪರಿಕ ವೃತ್ತಿ ಕಳೆದುಕೊಂಡ ರಥಕಾರ, ಸೂತ-ಮಾಗಧ ಮತ್ತು ಪಾಣಾರ್ ವರ್ಗಗಳು ಸಮಾಜ ವ್ಯವಸ್ಥೆಯಲ್ಲಿ ಕೆಳಮುಖ ಚಲಿಸಿದ್ದು ಕುತೂಹಲಕರವಾಗಿದೆ.

ವರ್ಣಾಶ್ರಮ ವ್ಯವಸ್ಥೆಯಂತೆ ರಾಜ್ಯಭಾರ ಮಾಡುವ ಅಧಿಕಾರ ಕ್ಷತ್ರಿಯರಿಗೆ ಮಾತ್ರ. ಆದರೆ ಇತಿಹಾಸದಲ್ಲಿ ಘಟನೆಗಳು ಮನುಷ್ಯ ನಿರ್ಧರಿತ ರೀತಿಯಲ್ಲಿ ನಡೆಯುವುದಿಲ್ಲ. ಇತಿಹಾಸಕ್ಕೆ ಅದರದ್ದೇ ಆದ ಗತಿ ಇದೆ. ಭಾರತವನ್ನು ಆಳ್ವಿಕೆ ಮಾಡಿದ ಬಹುತೇಕ ರಾಜವಂಶಗಳು ಕ್ಷತ್ರಿಯ ವಂಶಗಳಲ್ಲ ಎಂಬುದು ಆಶ್ಚರ್ಯಕರ ಸಂಗತಿ. ಮೌರ್ಯರ ಸಾಮ್ರಾಜ್ಯ ಪತನವಾದ ನಂತರ ಭಾರತದಲ್ಲಿ ಚಿಕ್ಕ ಪುಟ್ಟ ಪ್ರಾದೇಶಿಕ ರಾಜ್ಯಗಳದ್ದೇ ಕಾರುಬಾರು. ಆಗ ಹಲವು ವಿದೇಶೀ ಪಂಗಡಗಳು ಭಾರತದ ಮೇಲೆ ಧಾಳಿ ಮಾಡಿದವು. ಇಂಡೋ-ಗ್ರೀಕರು, ಪಾರ್ಥಿಯನ್ನರು, ಶಕರು, ಕುಶಾನರು ಮತ್ತು ಹೂಣರು ಭಾರತದ ಭೂಪ್ರದೇಶಗಳನ್ನು ಗೆದ್ದು ಇಲ್ಲಿ ರಾಜ್ಯಾಡಳಿತ ಮಾಡಲು ಪ್ರಾರಂಭಿಸಿದರು. ಈ ಹಿಂದೆ ವಿದೇಶೀಯರನ್ನು ಧರ್ಮಶಾಸ್ತ್ರಕಾರರು ಮ್ಲೇಚ್ಛರೆಂದೂ ಅಶುದ್ಧರೆಂದೂ ವರ್ಣಾಶ್ರಮ ವ್ಯವಸ್ಥೆಯ ಹೊರಗಿರುವರೆಂದೂ ಬಣ್ಣಿಸಿದ್ದಾರೆ. ರಾಜ್ಯಾಡಳಿತ ವಿದೇಶೀಯರ ಕೈಯಲ್ಲಿದ್ದರೂ ಅವರು ಭಾರತದಲ್ಲಿ ಅಲ್ಪಸಂಖ್ಯಾತರಾಗಿದ್ದರು. ಅವರಿಗೆ ಬಹುಸಂಖ್ಯಾತ ಭಾರತೀಯರೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಬೇಕಿತ್ತು. ಹಾಗೂ ಭಾರತೀಯ ಸಮಾಜದಲ್ಲಿ ಗೌರವದ ಸ್ಥಾನ ಬೇಕಿತ್ತು. ಅದಕ್ಕಾಗಿ ವಿದೇಶಿ ವಂಶಗಳು ಪ್ರಖ್ಯಾತ ಭಾರತೀಯ ರಾಜವಂಶಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಏರ್ಪಡಿಸಿಕೊಂಡವು. ಉದಾಹರಣೆಗೆ ಚಾತುರ್ವರ್ಣ್ಯದ ರಕ್ಷಕರೂ, ವರ್ಣಸಂಕರವನ್ನು ತಡೆಗಟ್ಟಿದವರೂ ತಾವೆಂದು ಹೇಳಿಕೊಂಡ ಶಾತವಾಹನರು ವಿದೇಶೀ ಶಕರೊಂದಿಗೆ ವೈವಾಹಿಕ ಸಂಬಂಧ ಮಾಡಿಕೊಂಡರು. ತಮ್ಮನ್ನು ಬ್ರಾಹ್ಮಣ ವಂಶದವರೆಂದು ಹೇಳಿಕೊಳ್ಳುವ ಗುಹಿಲ ವಂಶಸ್ಥರು ಹೂಣರ ರಾಜಕುಮಾರಿಯನ್ನು ವಿವಾಹ ಮಾಡಿಕೊಂಡರು. ಈ ವಿದೇಶೀ ಪಂಗಡಗಳು ಕ್ರಮೇಣ ವೈದಿಕ ಅಥವಾ ಬೌದ್ಧ ಧರ್ಮವನ್ನು ಸ್ವೀಕರಿಸಿದವು. ಸಂಸ್ಕೃತಕ್ಕೆ ಪ್ರೋತ್ಸಾಹ ಕೊಟ್ಟವು. ಬ್ರಾಹ್ಮಣರಿಗೆ ಭೂದಾನ ಮಾಡಿ ಅವರಿಂದ ಯಜ್ಞ ಯಾಗಾದಿಗಳನ್ನು ಮಾಡಿಸಿದವು.

ಇಂಡೋ-ಗ್ರೀಕರ ದೊರೆ ಮೆನಾಂಡರ್ ಬೌದ್ಧ ಧರ್ಮ ಸ್ವೀಕರಿಸಿ 'ಮಿಲಿಂದ'ನಾದ. ಗ್ರೀಕರ ರಾಯಭಾರಿ ಹೆಲಿಯೊಡೊರಸ್ ಭಾಗವತ ಪಂಥ ಸ್ವೀಕರಿಸಿದ. ಶಕ ವಂಶದ ದೊರೆ ನಹಪನ, ಇವನ ಮಗಳು ದಕ್ಷಮಿತ್ರ ಅಳಿಯ ಋಷಭದತ್ತ ಬ್ರಾಹ್ಮಣರಿಗೆ ದಾನ, ಧರ್ಮ ಮಾಡಿರುವುದು ನಮಗೆ ನಾಸಿಕ್ ಶಾಸನದಿಂದ ತಿಳಿಯುತ್ತದೆ. ಇನ್ನೊಬ್ಬ ಶಕ ದೊರೆ ರುದ್ರದಾಮನ್. ಇವನು ಶೈವ ಧರ್ಮೀಯ. ಭಾರತದಲ್ಲಿ ಪ್ರಥಮ ಸಂಸ್ಕೃತ ಶಾಸನ (ಜುನಾಗಢ) ಹೊರಡಿಸಿದ ಕೀರ್ತಿ ಇವನಿಗೆ ಸಲ್ಲುತ್ತದೆ. ಕುಶಾನರು ಮೂಲತಃ ಚೀನೀಯರು. ಇವರಲ್ಲಿ ವೇಮಾಕಡಫೀಸಸ್ ಶಿವನ ಭಕ್ತ; ಕಾನಿಷ್ಕ ಬೌದ್ಧ ಧರ್ಮೀಯ. ಇವನ ನಂತರದ ದೊರೆ ವಾಸುದೇವ ವೈಷ್ಣವ ಹಾಗೆಯೇ ಹೂಣರ ದೊರೆ ತೋರಮಾನ ವಿಷ್ಣು ಭಕ್ತ. ಇವನ ಉತ್ತರಾಧಿಕಾರಿ ಮಿಹಿರಕುಲ ಶಿವ ಮತ್ತು ಸೂರ್ಯನ ಆರಾಧಕ.

ಈ ಮೇಲಿನ ಉದಾಹರಣೆಗಳಿಂದ ವಿದೇಶಿ ಪಂಗಡಗಳು ಬಹಳ ಬೇಗನೆ ಭಾರತೀಯ ಸಮಾಜದಲ್ಲಿ ವಿಲೀನಗೊಳ್ಳುತ್ತಿರುವುದು ಗೋಚರಿಸುತ್ತದೆ. ಈಗ ಧರ್ಮಶಾಸ್ತ್ರಕಾರರಿಗೆ ಬಹಳ ಕಷ್ಟದ ಪರಿಸ್ಥಿತಿ. ರಾಜಕೀಯ ಮತ್ತು ಆರ್ಥಿಕ ಬಲವಿರುವ ವೈದಿಕ ಧರ್ಮ ಮತ್ತು ಬ್ರಾಹ್ಮಣರಿಗೆ ವಿಶೇಷ ಪ್ರೋತ್ಸಾಹ, ದಾನ, ಧರ್ಮ ನೀಡುತ್ತಿರುವ ವಿದೇಶೀಯರನ್ನು ಇನ್ನು ಮ್ಲೇಚ್ಛರೆಂದು ತಿರಸ್ಕರಿಸುವಂತಿಲ್ಲ. ಹಾಗೆಯೇ ಇವರಿಗೆ ಚಾತುರ್ವರ್ಣ್ಯ ವ್ಯವಸ್ಥೆಯೊಳಗೆ ಎಲ್ಲಿ ಜಾಗ ಕಲ್ಪಿಸುವುದು ? ಪುರೋಹಿತಶಾಹಿಗಳಿಗೆ ದೊರೆಗಳ ಪ್ರೋತ್ಸಾಹ ಬೇಕು. ವಿದೇಶೀಯರಿಗೆ ಸಮಾಜದಲ್ಲಿ ಉನ್ನತ ಸ್ಥಾನಮಾನಗಳು ಬೇಕು. ಈಗ ಒಬ್ಬರಿಗೊಬ್ಬರು ಸಹಕರಿಸಬೇಕು. ಆಗ ಪುರೋಹಿತಶಾಹಿಗಳು 'ವ್ರಾತ್ಯಸ್ತೋಮ' ಎಂಬ ಯಜ್ಞವನ್ನು ಆವಿಷ್ಕರಿಸಿ ಅದರಿಂದ ಮ್ಲೇಚ್ಛರನ್ನು ಶುದ್ಧೀಕರಿಸಿ ಅವರಿಗೆ 'ವ್ರಾತ್ಯಕ್ಷತ್ರಿಯ' ಸ್ಥಾನಮಾನವನ್ನು ನೀಡಿದರು. ವ್ರಾತ್ಯಕ್ಷತ್ರಿಯ ಎಂದರೆ ಕೆಳದರ್ಜೆಯ ಕ್ಷತ್ರಿಯ ಎಂದು. ಅಂತೂ ಮ್ಲೇಚ್ಛರಾಗಿದ್ದವರು ವ್ರಾತ್ಯಕ್ಷತ್ರಿಯರಾದರು.

ಗುಪ್ತರ ಕಾಲದಿಂದ (ಕ್ರಿ.ಶ. ೪ನೇ ಶತಮಾನ) ನಾವು ಕೆಲವು ಹೊಸ ಬೆಳವಣಿಗೆಗಳನ್ನು ಗುರುತಿಸಬಹುದು. ರೋಮನ್ ಸಾಮ್ರಾಜ್ಯದ ನಾಶದಿಂದ ಭಾರತದ ವಿದೇಶೀ ವ್ಯಾಪಾರದಲ್ಲಿ ಕುಸಿತ. ಇದರಿಂದಾಗಿ ವ್ಯಾಪಾರ, ವ್ಯವಹಾರ ಮತ್ತು ನಗರಗಳ ಅವನತಿ ಪ್ರಾರಂಭವಾಯಿತು. ಪುನಃ ಭಾರತದ ಆರ್ಥಿಕತೆಯ ಗ್ರಾಮೀಣೀಕರಣ ಪ್ರಕ್ರಿಯೆ ಪ್ರಾರಂಭವಾಯಿತು. ಇದು ಮುಂದೆ ಭಾರತೀಯ ಊಳಿಗಮಾನ್ಯ ವ್ಯವಸ್ಥೆಗೆ ನಾಂದಿ ಹಾಡಿತು. ಇದರ ಇನ್ನೊಂದು ಪರಿಣಾಮ ಭಾರತದ ದಕ್ಷಿಣ ಮತ್ತು ಪೂರ್ವ ಭಾಗಗಳಿಗೆ ಕೃಷಿ ವಿಸ್ತರಣೆ. ಈ ಪ್ರದೇಶಗಳಲ್ಲಿದ್ದ ಬುಡಕಟ್ಟು ಸಮುದಾಯಗಳು ಕೃಷಿಯ ವಿಸ್ತರಣೆಯಿಂದಾಗಿ ತಮ್ಮ ತಮ್ಮೊಳಗೆ ವಿಘಟನೆಯಾಗತೊಡಗಿದ್ದವು. ಬುಡಕಟ್ಟು ಸಮುದಾಯದ ನಾಯಕತ್ವ ತನ್ನನ್ನು ಇತರರಿಂದ ಪ್ರತ್ಯೇಕಿಸಲು ಪ್ರಯತ್ನ ಪಡುತ್ತಿತ್ತು. ಹಾಗೆ ಮಾಡುವುದರಿಂದ ಅವರಿಗೆ ಸಮುದಾಯದ ಮೇಲೆ ಹೆಚ್ಚು ಹಕ್ಕುಗಳು ಸಿಗುತ್ತಿದ್ದವು. ಸಮುದಾಯದ ನಾಯಕರೆಲ್ಲ ಒಂದು ವ್ಯವಸ್ಥಿತ ವರ್ಗಗಳಾಗಿ ಬದಲಾದವು. ಗುಪ್ತೋತ್ತರ ಕಾಲದಲ್ಲಿ ನಾವು ಅಸಂಖ್ಯಾತ ಸಣ್ಣ ಪುಟ್ಟ ರಾಜ್ಯಗಳನ್ನು ನೋಡುತ್ತೇವೆ. (ಚಂದೇಲರು, ವಾಕಟಕರು, ಪಾಲರು, ಪಲ್ಲವರು, ಗುಹಿಲರು, ಗುಪ್ತರು, ಹೊಯ್ಸಳ, ಚೋಳ). ಇದು ಬುಡಕಟ್ಟು ಸಮುದಾಯಗಳಲ್ಲಿ ಕೃಷಿಕ ವರ್ಗಸಮಾಜವು ವಿಸ್ತರಿಸಿದ ಫಲ ಸ್ವರೂಪ.

ಈ ಬುಡಕಟ್ಟು ಸಮುದಾಯದ ನಾಯಕತ್ವ ಕ್ಷತ್ರಿಯ ಸ್ಥಾನಮಾನಕ್ಕಾಗಿ ಹಂಬಲಿಸುತ್ತಿತ್ತು. ಅದೇ ಹೊತ್ತಿಗೆ (ಗುಪ್ತೋತ್ತರ ಯುಗ) ಉತ್ತರದಿಂದ ಬ್ರಾಹ್ಮಣರು ಭೂ ದಾನಕ್ಕಾಗಿಯೊ ಅಥವಾ ರಾಜಾಶ್ರಯವನ್ನು ಹುಡುಕುತ್ತಾ ಭಾರತದ ವಿವಿಧೆಡೆ ಚಲಿಸಿದರು. ಬುಡಕಟ್ಟಿನ ಪ್ರಭಾವೀ ನಾಯಕರು ಬ್ರಾಹ್ಮಣರಿಗೆ ರಾಜಾಶ್ರಯ ನೀಡಿ ಅವರಿಂದ ತಮ್ಮ ವಂಶವನ್ನು ಸೂರ್ಯ, ಚಂದ್ರ ಅಥವಾ ದೇವಾಧಿದೇವತೆಗಳೊಂದಿಗೆ ಸಂಬಂಧವಿರುವಂತೆ ವಂಶಾವಳಿಗಳನ್ನು ಬರೆಯಿಸಿದರು. ಈ ವಂಶಗಳು ಪ್ರಖ್ಯಾತ ರಾಜವಂಶಗಳೊಂದಿಗೆ ವೈವಾಹಿಕ ಸಂಬಂಧವನ್ನು ಮಾಡಿಕೊಂಡವು. ಹಾಗೆಯೇ ಅಶ್ವಮೇಧದಂತಹ, ಯಜ್ಞ ತುಲಾಭಾರದಂತಹ ದಾನ, ದೊಡ್ಡ ದೊಡ್ಡ ಅಗ್ರಹಾರಗಳ ನಿರ್ಮಾಣ, ಬೃಹತ್ ದೇವಾಲಯಗಳ ನಿರ್ಮಾಣ, ಸಂಸ್ಕೃತ ಭಾಷೆಗೆ ಪ್ರೋತ್ಸಾಹ ಮುಂತಾದ ಕಾರ್ಯಗಳು ಈ ಅರಸರಿಂದ ಪ್ರಾರಂಭವಾಯಿತು.

ಇದಕ್ಕೆ ಬದಲಾಗಿ ಬ್ರಾಹ್ಮಣರು ಈ ಅರಸರಿಗೆ ಏನಾದರೂ ಮಾಡಬೇಕು. ಇದಕ್ಕಾಗಿ ಹಿರಣ್ಯಗರ್ಭ ಎಂಬ ಧಾರ್ಮಿಕ ವಿಧಿಯನ್ನು ಪ್ರಾರಂಭಿಸಲಾಯಿತು. ಕ್ಷತ್ರಿಯ ಪದವಿ ಬಯಸುವವರು ಇದನ್ನು ಮಾಡಬೇಕು. ಇದರಲ್ಲಿ ಒಂದು ಚಿನ್ನದ ಕುಂಭದಲ್ಲಿ ಕ್ಷತ್ರಿಯದ ಪದವಿ ಬಯಸುವವನು ಕುಳಿತುಕೊಳ್ಳಬೇಕು. ಅವನಿಗೆ ಎಲ್ಲಾ ವೈದಿಕ ಸಂಸ್ಕಾರಗಳನ್ನೂ ನೆರವೇರಿಸಿ ಹೊಸ ಹೆಸರು, ಗೋತ್ರ ಜಾತಿ ಮುಂತಾದವನ್ನು ಕೊಟ್ಟು ಅವನನ್ನು ಕ್ಷತ್ರಿಯ ಪದವಿಗೇರಿಸಲಾಗುತ್ತದೆ. ದಂತಿದುರ್ಗ, ಶಿವಾಜಿ ಮುಂತಾದವರು 'ಹಿರಣ್ಯಗರ್ಭ'ವನ್ನು ಮಾಡಿಯೇ ಕ್ಷತ್ರಿಯರಾಗಿರುವುದು. ಹಾಗಾಗಿ ಕ್ಷತ್ರಿಯರಲ್ಲದ ಎಲ್ಲಾ ಬುಡಕಟ್ಟು ನಾಯಕರು ಕ್ಷತ್ರಿಯರೆಂದೆನಿಸಿದರು.

ಈ ಪ್ರಕ್ರಿಯೆಯಲ್ಲಿ ಕೆಲವೊಮ್ಮೆ ಬ್ರಾಹ್ಮಣರು ಬುಡಕಟ್ಟುಗಳ ಪೂಜಾ ಪದ್ಧತಿ, ಧಾರ್ಮಿಕ ಆಚರಣೆಗಳನ್ನು ತಾವೇ ನೆರವೇರಿಸಿದ್ದಿದೆ. ಆಗ ಬ್ರಾಹ್ಮಣ ಸಮಾಜದಲ್ಲಿ ಈ ಬ್ರಾಹ್ಮಣರು ಹೀನರೆಂದು ಪರಿಗಣಿಸಲ್ಪಟ್ಟರು. ಇನ್ನು ಕೆಲವೊಮ್ಮೆ ಬುಡಕಟ್ಟು ಸಮಾಜದಲ್ಲಿದ್ದ ತಾಂತ್ರಿಕ ಮಾಂತ್ರಿಕರನ್ನೇ ಬ್ರಾಹ್ಮಣ ವರ್ಗವೆಂದು ಪರಿಗಣಿಸಿದ್ದು ಇದೆ. ಇವರನ್ನು ಅಂಬಷ್ಠ, ಆಭೀರ, ದ್ರಾವಿಡ ಮುಂತಾದ ಹೆಸರಿನೊಂದಿಗೆ ಕರೆಯಲಾಗುತ್ತದೆ. ಬುಡಕಟ್ಟಿನ ಬಡವರು ಶ್ರಮಿಕರನ್ನು ಹಲವು ತರಹದ ಶೂದ್ರ ವರ್ಗಗಳಾಗಿ ವರ್ಣಾಶ್ರಮ ವ್ಯವಸ್ಥೆಯೊಳಗೆ ತರಲಾಯಿತು. ಇದರಿಂದಾಗಿ ಜಾತಿ, ಉಪಜಾತಿಗಳು ಹೆಚ್ಚಾಗುತ್ತಾ ಬಂದವು. ವಿದೇಶಿಯರು, ಪಶುಪಾಲಕರು, ಬೇಡರು, ಅರಣ್ಯವಾಸಿಗಳು ವರ್ಣಾಶ್ರಮ

ವ್ಯವಸ್ಥೆಯೊಳಗೆ ವಿಲೀನಗೊಳ್ಳುತ್ತಾ ಬಂದಂತೆ ಜಾತಿ ಉಪಜಾತಿಗಳು ಬೆಳೆದವು.

ಗುಪ್ತಾನಂತರದ ಕಾಲದಲ್ಲಿ ಉತ್ತರ ಭಾರತದ ಹಲವು ಪ್ರಾದೇಶಿಕ ರಾಜ್ಯಗಳಲ್ಲಿ ಲಿಪಿಕಾರರಾಗಿ, ಕಂದಾಯದ ಲೆಕ್ಕಪತ್ರ ನಿರ್ವಾಹಕರಾಗಿ, ದಾಖಲೆ ಪತ್ರಗಳ ಬರಹಗಾರರಾಗಿ ಹಲವಾರು ಜನರು ಸೇವೆ ಸಲ್ಲಿಸುತ್ತಿರುವುದು ನಮಗೆ ಕಂಡು ಬರುತ್ತದೆ. ಇವರೆಲ್ಲ ಬ್ರಾಹ್ಮಣರಾಗಿರಲಿಲ್ಲ. ಒಂಭತ್ತನೇ ಶತಮಾನಕ್ಕೆ ಬರುವಾಗಲೇ ಇವರೆಲ್ಲಾ 'ಕಾಯಸ್ಥ' ಎನ್ನುವ ಜಾತಿಯಾಗಿ ರೂಪುಗೊಂಡಿದ್ದರು. ಮುಂದಿನ ಶತಮಾನಗಳಲ್ಲಿ ಕಾಯಸ್ಥರು ರಾಜ್ಯದ ಪ್ರಮುಖ ಹುದ್ದೆಗಳನ್ನು ತಮ್ಮದಾಗಿಸಿ, ಸಾಮಂತ ಅರಸರಾಗಿಯೂ ಬೆಳೆದರು. ತಮ್ಮ ರಾಜಕೀಯ ಮತ್ತು ಆರ್ಥಿಕ ಬಲದಿಂದ ಸಮಾಜದಲ್ಲಿ ಬ್ರಾಹ್ಮಣರಿಗೆ ಪ್ರತಿಸ್ಪರ್ಧಿಗಳಾಗುವ ಮಟ್ಟಕ್ಕೆ ಕಾಯಸ್ಥರು ಬೆಳೆದದ್ದು ಮಹತ್ವದ ಸಂಗತಿ. ಇಂದು ಉತ್ತರಭಾರತದಲ್ಲಿ ಕಾಯಸ್ಥರು ಬ್ರಾಹ್ಮಣರನ್ನು ಎಲ್ಲ ಕ್ಷೇತ್ರಗಳಲ್ಲಿ ಮೀರಿಸಿದ್ದು ಇದೆ.

ಕಾಶ್ಮೀರದ ಇತಿಹಾಸದಲ್ಲಿ ತಂತ್ರಿನ್ ಮತ್ತು ಏಕಾಂಗ ಎಂಬ ಎರಡು ವರ್ಗಗಳನ್ನು ನಾವು ಕ್ರಿ.ಶ. ೧೨ನೇ ಶತಮಾನದಲ್ಲಿ ನೋಡಬಹುದು. ಇವರು ಕ್ಷತ್ರಿಯರಲ್ಲ, ಇವರು ರಾಜನ ಅಂಗರಕ್ಷಕ ಪಡೆಯವರು. ಆದರೆ ಕ್ರಮೇಣ ಈ ಅಂಗರಕ್ಷಕರು ಎಷ್ಟು ಪ್ರಭಾವಿಗಳೂ, ಬಲಿಷ್ಠರೂ ಆದರೆಂದರೆ ತಾವೇ ರಾಜನನ್ನು ನೇಮಿಸುವವರೂ ಅಥವಾ ಅಧಿಕಾರದಿಂದ ಕೆಳಗಿಳಿಸುವವರೂ ಆಗಿದ್ದರು. ಇದು ಈ ವರ್ಗ ಹೊಂದಿದ್ದ ರಾಜಕೀಯ ಮತ್ತು ಆರ್ಥಿಕ (ಭೂಮಾಲಿಕತ್ವ) ಶಕ್ತಿಯಿಂದ ಸಾಧ್ಯವಾಯಿತು.

ಗುಪ್ತರ ಕಾಲದ ಮಂಡ್‌ಸೋರ್ ಶಾಸನ ರೇಷ್ಮೆ ನೇಕಾರರ ಸಂಘ ಸೂರ್ಯ ದೇವಾಲಯ ಕಟ್ಟಿಸಿದನ್ನು ಉಲ್ಲೇಖಿಸುತ್ತದೆ. ಈ ಶಾಸನ ಇನ್ನೊಂದು ವಿಷಯ ತಿಳಿಸುತ್ತದೆ. ಅದೇನೆಂದರೆ ರೇಷ್ಮೆ ನೇಕಾರಿಕೆಯಲ್ಲಿ ನಷ್ಟವಾದಾಗ ನೇಕಾರರು ತಮ್ಮ ಸ್ಥಳವನ್ನು ಬಿಟ್ಟು ಬೇರೆಡೆಗೆ ವಲಸೆ ಹೋಗಿ ಸೈನಿಕರಾಗಿ, ಕವಿಗಳಾಗಿ, ಬಿಲ್ಲುಗಾರರಾಗಿ, ವಿದ್ವಾಂಸರಾಗಿ ಜೀವನ ಸಾಗಿಸಿದರಂತೆ. ವಲಸೆ ಹೋಗುವುದರಿಂದ ಕೆಲವು ವರ್ಗಗಳು ಸಮಾಜದಲ್ಲಿ ಮೇಲಕ್ಕೊ ಅಥವಾ ಕೆಳಕ್ಕೊ ಚಲಿಸಿದರೆಂಬುದು ಕೌತುಕದ ವಿಷಯ.

ಈ ಪ್ರಕ್ರಿಯೆ ಪ್ರಾಚೀನ ಭಾರತಕ್ಕೆ ಮಾತ್ರ ಸೀಮಿತವಲ್ಲ, ಮಧ್ಯಯುಗದಲ್ಲಿ ಮಧ್ಯಭಾರತದ ಬುಡಕಟ್ಟುಗಳು ವರ್ಗಾಧಾರಿತ ಸಮಾಜವಾಗಿ ಬೆಳೆದಾಗ ಸಣ್ಣ ಸಣ್ಣ ರಾಜ್ಯಗಳನ್ನು ಕಟ್ಟಿದವು. ಆಗ ಭೂಮಿಜ, ಮುಂಡ, ಗೊಂಡ ಮುಂತಾದ ಬುಡಕಟ್ಟುಗಳ ನಾಯಕರು ಬ್ರಾಹ್ಮಣರ ನೆರವು ಪಡೆದು ತಾವು ರಜಪೂತ ಕ್ಷತ್ರಿಯರೆಂದು ಹೇಳಿಕೊಂಡವು. ಹಾಗೆಯೇ ವಿಜಯನಗರದ ಪತನಾನಂತರ ಬೆಳೆದು ಬಂದ ಕೆಳದಿ, ಚಿತ್ರದುರ್ಗ, ಯಲಹಂಕ, ಮೈಸೂರು ರಾಜ್ಯಗಳ ಅರಸರು, ಕೃಷಿಕರು, ಬೇಡರು, ಕುರುಬರು ಆಗಿದ್ದರು. ಪುನಃ ತಮ್ಮ ರಾಜಕೀಯ ಮತ್ತು ಆರ್ಥಿಕ ಬಲದಿಂದ, ಪುರೋಹಿತಶಾಹಿಗಳ ನೆರವಿನಿಂದ, ಧಾರ್ಮಿಕ ಆಚರಣೆಗಳಿಂದ ತಮ್ಮನ್ನು ಬ್ರಾಹ್ಮಣರೆಂದೂ, ಕ್ಷತ್ರಿಯರೆಂದೂ, ಯಾದವರೆಂದೂ ಕರೆದುಕೊಂಡಿದ್ದಾರೆ.

ಭಾರತೀಯ ಸಮಾಜದಲ್ಲಿ ಸಾವಿರಾರು ವರ್ಷಗಳಿಂದ ಎಷ್ಟೇ ಬದಲಾವಣೆಗಳಾದರೂ ಆ ಬದಲಾವಣೆಗಳನ್ನೆಲ್ಲಾ ವರ್ಣಾಶ್ರಮ ವ್ಯವಸ್ಥೆಯೊಳಗೆ ಸರಿಹೊಂದುವಂತೆ ಜೋಡಿಸುವ ಪ್ರಯತ್ನವನ್ನು ಶಾಸ್ತ್ರಕಾರರು ಮಾಡಿದ್ದಾರೆ. ವರ್ಣಾಶ್ರಮ ವ್ಯವಸ್ಥೆಯ ಹೊರಗಿದ್ದ ವಿದೇಶೀಯರಾಗಲೀ ಸ್ಥಳೀಯ ಬುಡಕಟ್ಟುಗಳಾಗಲೀ ವರ್ಣಾಶ್ರಮ ವ್ಯವಸ್ಥೆಯೊಳಗೆ ಪ್ರವೇಶಿಸಿದಾಗ ಸಾವಿರಾರು ಜಾತಿ ಉಪಜಾತಿ ಮಿಶ್ರಜಾತಿಗಳ ಸೃಷ್ಟಿಯಾಯಿತು. ಇವುಗಳ ಸೃಷ್ಟಿಗೆ ಅನುಲೋಮ (ಮೇಲ್ಜಾತಿಯ ಪುರುಷ, ಕೆಳಜಾತಿಯ ಸ್ತ್ರೀಯನ್ನು ವಿವಾಹವಾಗುವುದು) ಮತ್ತು ಪ್ರತಿಲೋಮ (ಮೇಲ್ಜಾತಿಯ ಸ್ತ್ರೀ ಕೆಳಜಾತಿಯ ಪುರುಷನನ್ನು ವಿವಾಹವಾಗುವುದು) ವಿವಾಹಗಳೆ ಅಂದರೆ ವರ್ಣ ಸಂಕರಗಳೇ ಕಾರಣ ಎಂದು ಶಾಸ್ತ್ರಕಾರರು ವಾದಿಸುತ್ತಾರೆ. ಯಾಕೆಂದರೆ ಸಮಸ್ತ ಭಾರತೀಯರನ್ನು ಚತುರ್ವರ್ಣಗಳಾಗಿ ವರ್ಗೀಕರಿಸುವುದು ಅವರ ಅವಶ್ಯಕತೆಯಾಗಿತ್ತು. ಈ ಕೆಲಸವನ್ನು ಧರ್ಮಶಾಸ್ತ್ರಕಾರರು ಬಹಳ ಬುದ್ಧಿವಂತಿಕೆಯಿಂದ ನೆರವೇರಿಸಿದ್ದಾರೆ.

ಈ ಪ್ರಕ್ರಿಯೆಗಳು ಪೂರ್ವಯೋಜಿತವಲ್ಲ, ಇತಿಹಾಸದ ಗತಿಗನುಗುಣವಾಗಿ ಮಾಡಲ್ಪಟ್ಟ ಹೊಂದಾಣಿಕೆಗಳು. ಈ ಪ್ರಕ್ರಿಯೆಗಳು ಇಂದೂ ಕೊನೆಗೊಂಡಿಲ್ಲ, ಇಂದಿನ ಆಧುನಿಕ ಕಾಲದ ಕ್ಷಿಪ್ರ ಬದಲಾವಣೆಗಳನ್ನೂ ಕೂಡ ಎದುರಿಸಲು ವರ್ಣಾಶ್ರಮ ವ್ಯವಸ್ಥೆ ಇನ್ನಿಷ್ಟು ಹೊಂದಾಣಿಕೆಯ ಮಾರ್ಗಗಳನ್ನು ಕಂಡುಕೊಂಡಿವೆ. ಆದರೆ ತನ್ನ ಮೂಲ ಸ್ವರೂಪವನ್ನು ಅವ್ಯಕ್ತರೂಪದಲ್ಲಿ ಉಳಿಸಿಕೊಂಡಿದೆ.


ರಾಮದಾಸ ಪ್ರಭು ಸಿಂಗನಕೋಡಿ
ಚೇರ್ಕಾಡಿ ಅಂಚೆ, ಉಡುಪಿ-೫೭೬೨೧೫

**ಜಿ. ಟಿ. ನಾರಾಯಣರಾವ್**

# ಪರಂಪರೆ ಮತ್ತು ವ್ಯತ್ಯಯ

### ಪರಂಪರೆ, ವ್ಯತ್ಯಯ ವ್ಯಾಖ್ಯೆ

ಜೀವಂತ ಜನಾಂಗವೊಂದು ಬದುಕನ್ನು ಪ್ರಾಮಾಣಿಕವಾಗಿ ಸ್ವೀಕರಿಸಿ ಕಾಲದೊಂದಿಗೆ ಮುನ್ನಡೆಯುತ್ತಿರುವ ವೇಳೆ ಎದುರಿಸಬೇಕಾಗುವ ಸಮಸ್ಯೆಗಳನ್ನು ಪ್ರೀತಿ-ನೀತಿ ಪಾತಳಿಯಲ್ಲಿ ಪರಿಹರಿಸಲು ಪ್ರಯತ್ನಿಸಿದರೆ ಅಲ್ಲಿ ಹಲವಾರು ಜೀವನಮೌಲ್ಯಗಳು ಕೆನೆಗಟ್ಟುತ್ತವೆ : ಸತ್ಯಂ ವದ, ಧರ್ಮಂ ಚರ (ನಿಜವನ್ನು ನುಡಿ, ಧರ್ಮವನ್ನು ಆಚರಿಸು), ಸರ್ವೇಜನಾಸ್ಸುಖಿನೋ ಭವಂತು (ಎಲ್ಲರೂ ಸುಖವಾಗಿರಲಿ), ಇತ್ಯಾದಿ. ಪುರಾಣಕಾಲದಲ್ಲಿ ರಾಮ, ಕೃಷ್ಣ, ಇತಿಹಾಸ ಸಂದರ್ಭದಲ್ಲಿ ಬುದ್ಧ, ಅಶೋಕ, ಆಧುನಿಕ ಯುಗದಲ್ಲಿ ಮಾರ್ಟಿನ್ ಲ್ಯೂಥರ್, ಮಹಾತ್ಮ ಗಾಂಧಿ ಮೊದಲಾದ ಮಾನವಶ್ರೇಷ್ಠರು ಇಂಥ ಮೌಲ್ಯಗಳ ಸಾಕಾರ ರೂಪಿಗಳು. ಆಯಾ ಕಾಲಘಟ್ಟದಲ್ಲಿಯ ಮೌಲ್ಯಗಳ ಮೊತ್ತಕ್ಕೆ **ಸಂಸ್ಕೃತಿ** ಎಂದು ಹೆಸರು.

ಸಂಸ್ಕೃತಿ ನಿಂತ ನೀರಲ್ಲ, ಕಾಲದೊಂದಿಗೆ ಪ್ರವಹಿಸುವ ಜೀವನಸಾರ. ಸಂಸ್ಕೃತಿಯ ಪ್ರವಹನವೇ **ಪರಂಪರೆ**. ಪ್ರಾಚೀನವನ್ನು ಅರ್ವಾಚೀನದೊಂದಿಗೆ ಬೆಸೆಯುವ ಕೊಂಡಿ ಇದು. ಎಂದೇ ಅಂದಿನ ಮಹಾವ್ಯಕ್ತಿಗಳು ನಡೆದು ಬೆಳಗಿದ ಹಾದಿ ಇಂದಿನ ನಮಗೆ ಮಾರ್ಗದರ್ಶಕ ಜ್ಯೋತಿಯಾಗಿರುವುದಾಗಿದೆ, ಪ್ರವರ್ತನಶೀಲ ಸ್ಫೂರ್ತಿಯನ್ನು ಒದಗಿಸುವುದಾಗಿದೆ ಮತ್ತು ಬದುಕಿಗೆ ಅರ್ಥ ಮತ್ತು ಗುರಿ ಕೊಡುವುದಾಗಿದೆ. ಇದು ಪರಂಪರೆಯ ವರ್ತಮಾನ ಮುಖ. ರೂಢಿಯ ಮಾತಿನಲ್ಲಿ ಇದು **ಸಂಪ್ರದಾಯ.** ವಾಸ್ತವವಾಗಿ ಪರಂಪರೆಯಲ್ಲಿ ಕಂಡುಬರುವ ಬದಲಾವಣೆ ಅಥವಾ ತಿದ್ದುಪಡಿ ಇದು. –ಇಂದಿನ ಸನ್ನಿವೇಶದಲ್ಲಿ ಅಂದಿನ ಮೌಲ್ಯಗಳನ್ನು (ಮತ್ತೆ ಪ್ರೀತಿ-ನೀತಿ ಪಾತಳಿಯಲ್ಲಿ) ವ್ಯಾಖ್ಯಾನಿಸುವ ಪರಿ, ವರ್ತಮಾನದಲ್ಲಿ ಆಚರಣೆಯಲ್ಲಿರುವ ವಿಧಿ-ನಿಷೇಧಗಳ ಮೊತ್ತ, ಇದಕ್ಕೆ **ವ್ಯತ್ಯಯ** ಎಂದು ಹೆಸರು. ಪರಂಪರೆಯನ್ನು ಆದ್ಯಂತರಹಿತ ಮಾರ್ಗವೆಂದು ಭಾವಿಸಿದರೆ ವ್ಯತ್ಯಯವನ್ನು ಅದರ ಮೇಲಿನ ಏರು-ಇಳಿಗಳು, ಬಳುಕು-ತಿರುವುಗಳು ಅಥವಾ ವರ್ತಮಾನ ಛಾಪುಗಳು ಎನ್ನಬಹುದು.

ಜೀವಿಯನ್ನು ಒಂದು ಜೀನ್-ಆಶಯ ಎಂದು ಭಾವಿಸಿ ಪೀಳಿಗೆಗಳನ್ನು ಜೀನ್-ಪ್ರವಾಹವೆಂದು ಪರಿಗಣಿಸುವುದುಂಟು. ವಿವಿಧ ಬಾಹ್ಯ ಮತ್ತು ಆಂತರಿಕ ಕಾರಣಗಳಿಂದ ಜೀನ್‌ನಲ್ಲಿ ವಿಕೃತಿಗಳು ಹಣುಕಿ ನೂತನ ಪ್ರಭೇದಗಳು ಮೈದಳೆಯುತ್ತವೆ. ತಳಿವಿಜ್ಞಾನದ ಒಂದು ಅಂಗೀಕೃತ ಸಿದ್ಧಾಂತವಿದು. ಜೀನ್‌ಪ್ರವಾಹವನ್ನು ಪರಂಪರೆ ಎಂದು ಭಾವಿಸೋಣ, ಆಗ ವಿಕೃತಿಯನ್ನು ಸಹಜವಾಗಿ ವ್ಯತ್ಯಯದೊಡನೆ ಸಮೀಕರಿಸಬೇಕಾಗುತ್ತದೆ. ಆದ್ದರಿಂದ ಪೀಳಿಗೆಗಳ ಪುನರ್ನವೀಕರಣಕ್ಕೆ ವಿಕೃತಿ ಹೇಗೋ ಪರಂಪರೆಯ ನಿತ್ಯನೂತನತೆಗೆ ವ್ಯತ್ಯಯ ಹಾಗೆ ಎಂದು ಹೇಳಬಹುದು.

### ಬುದ್ಧವಾಣಿ

ಒಬ್ಬ ಪಂಡಿತ ಬುದ್ಧನಿಗೆ ಹೇಳಿದ, ''ಗುರುವೇ! ನೀನು ಬೋಧಿಸುತ್ತಿರುವ ಸೂಕ್ತಿಗಳು ಧರ್ಮಗ್ರಂಥಗಳಲ್ಲಿಲ್ಲ.''

ಬುದ್ಧ ನುಡಿದ, ''ಹಾಗಾದರೆ ಅವನ್ನು ಅಲ್ಲಿ ಅಳವಡಿಸು.''

ಪಂಡಿತನಿಗೆ ತುಂಬ ಮುಜುಗರವಾಯಿತು. ತುಸುಕಾಲ ತಡೆದು ಅಳುಕಿನಿಂದ ನಿವೇದಿಸಿದ, ''ಗುರುವೇ! ನಾನೊಂದು ಅರಿಕೆ ಸಲ್ಲಿಸಲೇ? ನೀನು ಬೋಧಿಸುತ್ತಿರುವ ಹಲವಾರು ಸೂಕ್ತಿಗಳು ಧರ್ಮಗ್ರಂಥಗಳಲ್ಲಿ ವಿಧಿಸಲ್ಪಟ್ಟಿರುವವನ್ನು ವಿರೋಧಿಸುತ್ತವೆ.''

''ಹಾಗಾದರೆ ಧರ್ಮಗ್ರಂಥಗಳಿಗೆ ತಿದ್ದುಪಡಿ ಅಗತ್ಯ,'' ಬುದ್ಧ ಸಮಾರೋಪಿಸಿದ.

ಇಲ್ಲಿ ಧರ್ಮಗ್ರಂಥಗಳು 'ಪರಂಪರೆ' ಎಂಬ ಸಿದ್ಧ ಮಾರ್ಗವನ್ನೂ ಬುದ್ಧ ಅದರ ಮೇಲೆ ವರ್ತಮಾನದಲ್ಲಿ ಪ್ರೀತಿ-ನೀತಿಯುಕ್ತವಾಗಿ ನಡೆಯುತ್ತಿರುವ ಯುಗಪ್ರವರ್ತಕ ವ್ಯಕ್ತಿಯನ್ನೂ ಪಂಡಿತ ವರ್ತಮಾನ ದೇಹದಲ್ಲಿ ಪ್ರಾಚೀನಮತಿ ಅಥವಾ ವ್ಯತ್ಯಯಶೀಲತೆಗೆ ಒಳಪಡದ ಜಡತ್ವವನ್ನೂ ಪ್ರತೀಕಿಸುತ್ತವೆ. ಅಂದ ಮೇಲೆ ವ್ಯತ್ಯಯಶೀಲವಲ್ಲದ ಪರಂಪರೆ ನಿರ್ಜೀವ ವಿಧಿನಿಷೇಧಗಳ ಒತ್ತಾಯ (ಕೋಠಿ). ಹೀಗೆ ಪರಂಪರೆಯಿಂದ ವ್ಯತ್ಯಯಕ್ಕೆ ಅಸ್ತಿತ್ವವೂ ವ್ಯತ್ಯಯದಿಂದ ಪರಂಪರೆಗೆ ಅರ್ಥವೂ ಪ್ರಾಪ್ತವಾಗುತ್ತವೆ. ಅರ್ಥಾತ್ ಪರಂಪರೆ-ವ್ಯತ್ಯಯ ಅವಿನಾ ಸಂಬಂಧಿಗಳು. ಇವು ಪ್ರಗತಿಪಥದಲ್ಲಿ ನಿರಂತರ ಪರಿಕ್ರಮಣಶೀಲನಾಗಿರುವ ಕಾಲಪುರುಷನ ಎರಡು ಕಾಲುಗಳು – ಜೀನ್-ವಿಕೃತಿ ಯುಗ್ಮದಂತೆ. (ಜೀನ್-ವಿಕೃತಿ ಪರಸ್ಪರ ಅವಲಂಬನೆಯತ್ತ ನನ್ನ ಲಕ್ಷ್ಯ ಸೆಳೆದವರು ಮಾನಸ ಗಂಗೋತ್ರಿಯಲ್ಲಿ ಸಂಖ್ಯಾಕಲನ ವಿಜ್ಞಾನ ಪ್ರಾಧ್ಯಾಪಕರಾಗಿರುವ ಡಾ. ಆರ್. ವಾಸುದೇವ.)

''ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ'' – ಇಂಥ ಮೌಲ್ಯಗಳು ಸಾರ್ವಕಾಲಿಕವಲ್ಲವೇ, ಅವ್ಯತ್ಯಯಶೀಲವಲ್ಲವೇ ಎಂಬ ಸಹಜ ಸಂದೇಹಗಳಿಗೆ ಜವಾಹರಲಾಲ್ ನೆಹರೂ (೧೮೮೯-೧೯೬೪) ನೀಡಿರುವ ವಿವರಣೆ ಮನನೀಯವಾಗಿದೆ : ''ಪ್ರಾಚೀನ ಜೀವನಶೈಲಿಯನ್ನು ವರ್ತಮಾನ ಮೌಲ್ಯಗಳಿಂದ ಅಳೆಯಬಾರದು ಎಂದಾಗ ಎಲ್ಲರೂ ಒಪ್ಪುತ್ತಾರೆ, ಆದರೆ ವಿಲೋಮವಾಗಿ, ವರ್ತಮಾನ ಜೀವನಶೈಲಿಯನ್ನು ಪ್ರಾಚೀನ ಮೌಲ್ಯಗಳಿಂದ ಅಳೆಯಬಾರದು ಎಂದರೆ ಎಲ್ಲರೂ ತೀವ್ರವಾಗಿ ಪ್ರತಿಭಟಿಸುತ್ತಾರೆ. ಏಕೆಂದರೆ ಈ ಸಂದರ್ಭದಲ್ಲಿ ನಮ್ಮ ಹೆಚ್ಚಿನ ಧರ್ಮಗ್ರಂಥಗಳು ಪೂರ್ತಿ ಅಪ್ರಸ್ತುತವಾಗುತ್ತವೆ.''

ಪ್ರಾಚೀನವಾದದ್ದೆಲ್ಲವೂ ಆ ಒಂದೇ ಕಾರಣಕ್ಕಾಗಿ ಪುರಸ್ಕೃತವಾಗಬೇಕಾಗಿಲ್ಲ ಅಥವಾ ತಿರಸ್ಕೃತವೂ ಆಗಬೇಕಾಗಿಲ್ಲ. ವರ್ತಮಾನದ ನಿರಪೇಕ್ಷ ನಿಕಷದಲ್ಲಿ ಅದನ್ನು ಒರೆಹಚ್ಚಿ ಯುಕ್ತ ತೀರ್ಮಾನ ತಳೆಯಬೇಕು. ಡಿವಿಜಿಯವರು ಬರೆದಿದ್ದಾರೆ :

ಸಂದೇಹವೀ ಕೃತಿಯೊಳಿನ್ನಿಲ್ಲವೆಂದಲ್ಲ
ಇಂದು ನಂಬಿದುದೆ ಮುಂದೆಂದುಮೆಂದಲ್ಲ
ಕುಂದು ತೋರ್ದಂದದನು ತಿದ್ದಿಕೊಳೆ ಮನವುಂಟು
ಇಂದಿಗೀ ಮತವುಚಿತ ಮಂಕುತಿಮ್ಮ

### ಪರಂಪರೆ-ವ್ಯತ್ಯಯ ಅಂತರಸಂಬಂಧ

ಇಂದಿನ ಒಬ್ಬ ತಂದೆ ತನ್ನ ಅವಿಧೇಯ ಮಗನಿಗೆ ಬುದ್ಧಿ ಹೇಳುತ್ತ, ''ರಾಮನಂಥ ಮಗ ನೀನಾಗಿರಬೇಕು'' ಎನ್ನುತ್ತಾನೆ. ಮಗನ ತತ್‌ಕ್ಷಣದ ಪ್ರತಿಕ್ರಿಯೆ, ''ಆದರೆ ನೀನು ದಶರಥನಂಥ ಅಪ್ಪನಲ್ಲ!'' ಧ್ವನಿ ಏನು? ವ್ಯತ್ಯಯವನ್ನು ಪರಿಗಣಿಸದ ಪರಂಪರೆ ಕುರುಡು, ಪರಂಪರೆಯನ್ನು ಲೆಕ್ಕಿಸದ ವ್ಯತ್ಯಯ ಕುಂಟು. ಉಭಯ ಸಂದರ್ಭಗಳಲ್ಲೂ ಬದುಕು

ಜೀವಿಯನ್ನು ಒಂದು ಜೀನ್-ಆಶಯ ಎಂದು ಭಾವಿಸಿ ಪೀಳಿಗೆಗಳನ್ನು ಜೀನ್-ಪ್ರವಾಹವೆಂದು ಪರಿಗಣಿಸುವುದುಂಟು. ವಿವಿಧ ಬಾಹ್ಯ ಮತ್ತು ಆಂತರಿಕ ಕಾರಣಗಳಿಂದ ಜೀನ್‌ನಲ್ಲಿ ವಿಕೃತಿಗಳು ಹಣುಕಿ ನೂತನ ಪ್ರಭೇದಗಳು ಮೈದಳೆಯುತ್ತವೆ. ತಳಿವಿಜ್ಞಾನದ ಒಂದು ಅಂಗೀಕೃತ ಸಿದ್ಧಾಂತವಿದು. ಜೀನ್‌ಪ್ರವಾಹವನ್ನು ಪರಂಪರೆ ಎಂದು ಭಾವಿಸೋಣ, ಆಗ ವಿಕೃತಿಯನ್ನು ಸಹಜವಾಗಿ ವ್ಯತ್ಯಯದೊಡನೆ ಸಮೀಕರಿಸಬೇಕಾಗುತ್ತದೆ. ಆದ್ದರಿಂದ ಪೀಳಿಗೆಗಳ ಪುನರ್ನವೀಕರಣಕ್ಕೆ ವಿಕೃತಿ ಹೇಗೋ ಪರಂಪರೆಯ ನಿತ್ಯನೂತನತೆಗೆ ವ್ಯತ್ಯಯ ಹಾಗೆ ಎಂದು ಹೇಳಬಹುದು.

ವಿರೋಧಾಭಾಸಮಯವಾಗಿರುವುದು.

ಮ್ಯಾಕ್ಸ್ ಪ್ಲಾಂಕ್ (೧೮೫೮-೧೯೪೭) ಆಧುನಿಕ ಭೌತವಿಜ್ಞಾನದ ಪ್ರಥಮ ಹರಿಕಾರ, ಪರಮಾಣು ಪ್ರಪಂಚದ ಭೌತವಿದ್ಯಮಾನಗಳಿಗೆ ವೈಜ್ಞಾನಿಕ ಅಂತರ್ದೃಷ್ಟಿ ನೀಡಿದ (೧೯೦೦) ಯುಗಪುರುಷ. ಆದರೆ ಅವರ ವೈಜ್ಞಾನಿಕ ವಿಶ್ಲೇಷಣೆ ಸಮಕಾಲೀನ ಮುಂಚೂಣಿ ವಿಜ್ಞಾನಿಗಳಿಂದ ಒಪ್ಪಿಗೆ ಪಡೆಯಲಿಲ್ಲ. ಏಕೆ ? ಅವರೇ ವಿವರಿಸಿದ್ದಾರೆ : "ನೂತನ ವೈಜ್ಞಾನಿಕ ಸತ್ಯವೊಂದು ತನ್ನ ವಿರೋಧಿಗಳನ್ನು ತನ್ನತ್ತ ಒಲಿಸಿಕೊಂಡು ಅವರಿಗೆ ಬೆಳಕು ಬೀರಿ ಆ ಮೂಲಕ ಜಯಭೇರಿ ಮೊಳಗಿಸುವುದಿಲ್ಲ, ಬದಲು, ಈ ವಿರೋಧಿಗಳು ಕ್ರಮೇಣ ಅಳಿದು ಹೊಸತೊಂದು ಪೀಳಿಗೆಯೇ ಅದರ ಜೊತೆ ಸಹಜವಾಗಿ ಅರಳಿ ಪರಮಳಿಸುವುದರಿಂದ ತನ್ನ ಅಸ್ತಿತ್ವವನ್ನು ಛಾಪಿಸುತ್ತದೆ." ಇದರ ಅರ್ಥ ವ್ಯತ್ಯಯವನ್ನು ಅಂಗೀಕರಿಸದ ಪರಂಪರೆ ಕ್ರಮೇಣ ನಶಿಸಿ ನಾಶವಾಗುತ್ತದೆ.

ಪ್ರೊ. ಸಿ.ಎನ್. ರಾಮಚಂದ್ರನ್ 'ಪರಂಪರೆ-ಪ್ರತಿರೋಧ' ಎಂಬ ತಮ್ಮ ಕೃತಿಯಲ್ಲಿ ಬರೆದಿದ್ದಾರೆ, "ಒಂದು ಸಾಹಿತ್ಯದಲ್ಲಿ/ಕಲೆಯಲ್ಲಿ 'ಸಾತತ್ಯ'ವನ್ನು ರೂಪಿಸುವುದು 'ಪರಂಪರೆ' ಮತ್ತು ಒಂದು ಪರಂಪರೆಯನ್ನು ಕಟ್ಟಿಕೊಡುವುದು ಸಾಹಿತ್ಯ/ಕಲಾಚರಿತ್ರೆ. ಸಾಹಿತ್ಯವೂ ಸೇರಿದಂತೆ ಎಲ್ಲಾ ಕಲೆಗಳಲ್ಲಿಯೂ ಇರುವ ಮತ್ತು ಕಾಲ ಕಾಲಕ್ಕೆ ಬದಲಾಗುವ 'ಸಂಪ್ರದಾಯಗಳು' (ವ್ಯತ್ಯಯಗಳು) ಮೂರ್ತಸ್ವರೂಪದವು, ಮತ್ತು ಅವುಗಳನ್ನು ವಸ್ತುನಿಷ್ಠವಾಗಿ ಗುರುತಿಸುವುದು ಸಾಧ್ಯ. ಆದರೆ ಸಂಪ್ರದಾಯಗಳಿಗಿಂತ (ವ್ಯತ್ಯಯಗಳಿಗಿಂತ) ಭಿನ್ನವಾದ 'ಪರಂಪರೆ' ಎನ್ನುವುದು ಒಂದು ಅಮೂರ್ತ ಪರಿಕಲ್ಪನೆ – ಒಂದು ಕಾಲಘಟ್ಟದಲ್ಲಿ ಸಮುದಾಯವೊಂದು ತನ್ನ ತತ್ಕಾಲೀನ ಆವಶ್ಯಕತೆ, ಒತ್ತಡಗಳಿಗನುಸಾರವಾಗಿ ಕಟ್ಟಿಕೊಳ್ಳುವ ಒಂದು ಅಮೂರ್ತ ರಚನೆ."

ವಿಜ್ಞಾನದ ಇತಿಹಾಸದಲ್ಲಿ ಈ ಹೇಳಿಕೆಗೆ ಸಾಕಷ್ಟು ನಿದರ್ಶನಗಳು ದೊರೆಯುತ್ತವೆ. ಖಗೋಳವಿಜ್ಞಾನ ಪರಂಪರೆಯಲ್ಲಿ ಮಾನವಕೇಂದ್ರ ವಿಶ್ವ, ಭೂಕೇಂದ್ರ ವಿಶ್ವ, ಸೂರ್ಯಕೇಂದ್ರ ವಿಶ್ವ ಮತ್ತು ಕೇಂದ್ರರಹಿತ ವಿಶ್ವ ಎಂಬ ಘಟ್ಟಗಳು ಸರ್ವಪರಿಚಿತ. ವಿಶ್ವ ಒಂದೇ ಆಗಿದ್ದರೂ ಅದನ್ನು ಕುರಿತ ನಮ್ಮ ಅರಿವಿನ ವಿಸ್ತಾರವನ್ನು ಈ ವ್ಯತ್ಯಯಗಳು ಸೂಚಿಸುತ್ತವೆ.

ಹಾಗಾದರೆ ಸಾತತ್ಯ ಅಥವಾ ಅವಿಚ್ಛಿನ್ನತೆ ಪರಂಪರೆಯ ಒಂದು ಲಕ್ಷಣವೇ ? ಈ ಪ್ರಶ್ನೆಗೆ ನೇರ ಉತ್ತರ "ಹೌದು, ಅಲ್ಲ." ಹೌದು ಏಕೆಂದರೆ, ಜೀವ ಅವಿಚ್ಛಿನ್ನ ಆದರೆ ಜೀವಿ ವಿಚ್ಛಿನ್ನ ಅಲ್ಲವೇ ? ಅದೇ ರೀತಿ ಪರಂಪರೆ ಅವಿಚ್ಛಿನ್ನ ಆದರೆ ವ್ಯತ್ಯಯ ವಿಚ್ಛಿನ್ನ. ಅಲ್ಲ ಏಕೆಂದರೆ, ಒಂದು ಯುಗದ ಸಂಪ್ರದಾಯ ತದನಂತರದ ಇನ್ನೊಂದು ಯುಗದ ಪರಂಪರೆ ನಿಜ. ಆದರೆ ಈ ಎರಡು ಯುಗಗಳ ನಡುವೆ ಆಂತರಿಕ ರಾಜಕೀಯ ವಿಪ್ಲವ, ಪರಕೀಯರಿಂದ ಆಕ್ರಮಣ ಅಥವಾ ಭೌಗೋಲಿಕ ದುರಂತ ಘಟಿಸಿದರೆ ಆಗ ಪರಂಪರೆ ಸ್ಥಗಿತಕಾಲದಲ್ಲಿ ಇರುತ್ತದೆ ಅಥವಾ ಗುಪ್ತಗಾಮಿಯಾಗಿರುತ್ತದೆ. ಮುಂದೆ ಶಾಂತಿ ಸುವ್ಯವಸ್ಥೆ ನೆಲೆಸಿದಾಗ ಪರಂಪರೆಯ ಮುನ್ನಡೆ ಮತ್ತೆ ಆರಂಭವಾಗುತ್ತದೆ. ಭಾರತೀಯ ಇತಿಹಾಸದಲ್ಲಿ, ಆದ್ದರಿಂದ ಭಾರತೀಯ ವಿಜ್ಞಾನದ ಪ್ರಗತಿಯಲ್ಲಿ ಈ ಹೇಳಿಕೆಗೆ ಸಾಕಷ್ಟು ಪುರಾವೆ ದೊರೆಯುತ್ತದೆ. ಖಗೋಳ ವಿಜ್ಞಾನ ಕುರಿತ ನಿದರ್ಶನವನ್ನು ಹಿಂದೆ ಉಲ್ಲೇಖಿಸಿದೆ.




**ನವಕರ್ನಾಟಕ ಪುಸ್ತಕ ಪ್ರದರ್ಶನ**

ಬೆಂಗಳೂರಿನ ನಾಗರಭಾವಿ ರಸ್ತೆಯಲ್ಲಿರುವ ಪ್ರಶಾಂತ ನಗರದಲ್ಲಿ ನಡೆದ ಪುಸ್ತಕ ಪ್ರದರ್ಶನದ ಒಂದು ದೃಶ್ಯ.

### ಐನ್‌ಸ್ಟೈನ್ ವಾಣಿ

ನಿಕೊಲಾಸ್ ಕೊಪರ್ನಿಕಸ್ (೧೪೭೩-೧೫೪೩) ಎಂಬ ವೃತ್ತಿ ಪಾದ್ರಿ (ಧರ್ಮಗುರು) ಆಧುನಿಕ ವಿಜ್ಞಾನದ ಮುಂಗೋಳಿ. ಇಂದಿನ ಅನುಕೂಲ ಮಂಚಿಕೆಯಿಂದ ಆತನಲ್ಲಿ ಪರಂಪರೆ ಅಭಿವ್ಯಕ್ತಿಗೊಂಡ ಪರಿಯನ್ನು ಗಮನಿಸಿದರೆ ವ್ಯತ್ಯಯದ (ಅಥವಾ ಜೀನ್‌ಪ್ರವಾಹದಲ್ಲಿ ವಿಕೃತಿಯ) ನಿರ್ಣಾಯಕ ಪಾತ್ರವೇನೆಂಬುದು ಸ್ಪಷ್ಟವಾಗುತ್ತದೆ. ಆತನ ನಾನೂರಹತ್ತನೆಯ ಪುಣ್ಯತಿಥಿಯ ಸಂದರ್ಭದಲ್ಲಿ, ೧೯೫೩, ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) ನೀಡಿದ ಸಂದೇಶ ಮನನೀಯವಾಗಿದೆ : "ಸೂರ್ಯಕೇಂದ್ರ ಪರಿಕಲ್ಪನೆಯ ಶ್ರೇಷ್ಠತೆಯನ್ನು ಮನಂಬುಗುವಂತೆ ಬಿತ್ತರಿಸಲು ಅತ್ಯಪೂರ್ವವಾದ ಸ್ವತಂತ್ರ ಚಿಂತನೆ ಮತ್ತು ಅಂತರ್ಬೋಧೆ ಜೊತೆಗೆ ಖಗೋಳವೈಜ್ಞಾನಿಕ ವಾಸ್ತವಾಂಶಗಳ ಪ್ರಭುತ್ವ ಕೂಡ ಅಗತ್ಯವಾಗಿದ್ದುವು." ಅರ್ಥಾತ್ ಕೊಪರ್ನಿಕಸ್ ಎಂಬಾತ ಖಗೋಳವಿಜ್ಞಾನ ಪರಂಪರೆಯಲ್ಲಿ ಮೈದಳೆದ ನಿರ್ಣಾಯಕ ವ್ಯತ್ಯಯ, ಅಥವಾ ಆ ಜೀನ್‌ಪ್ರವಾಹದಲ್ಲಿ ಉದ್ಭವಿಸಿದ ವಿಕೃತಿ.

ಕೊಪರ್ನಿಕಸನ ಐನೂರನೆಯ ಜನ್ಮದಿನೋತ್ಸವದ ಸಂದರ್ಭದಲ್ಲಿ, ೧೯೭೩, ಐನ್‌ಸ್ಟೈನ್ ಸಮಾನ ಪ್ರತಿಭಾಶಾಲಿ ವಿಜ್ಞಾನಿ ವರ್ನರ್ ಹೈಸನ್‌ಬರ್ಗ್ (೧೯೦೧-೭೬) 'ವಿಜ್ಞಾನದಲ್ಲಿ ಪರಂಪರೆ' ವಿಷಯ ಕುರಿತು ಒಂದು ಉಪನ್ಯಾಸವಿತ್ತರು. ಇದರಲ್ಲಿ ಅವರು ವಿಜ್ಞಾನದ ಮುನ್ನಡೆಗೆ ಪರಂಪರೆ ಒಡ್ಡುವ ಸಾಧಕ ಬಾಧಕಗಳನ್ನು ಮೂರು ಮುಖ್ಯ ಭಾಗಗಳಲ್ಲಿ ಚರ್ಚಿಸಿದ್ದಾರೆ : ಸಮಸ್ಯೆಗಳ ಆಯ್ಕೆಯಲ್ಲಿ ಪರಂಪರೆ, ವೈಜ್ಞಾನಿಕ ವಿಧಾನದಲ್ಲಿ ಪರಂಪರೆ ಮತ್ತು ಪರಿಕಲ್ಪನೆಗಳ ರೂಪಣೆಯಲ್ಲಿ ಪರಂಪರೆ. ಈ ಸುದೀರ್ಘ ಲೇಖನಗಳನ್ನು 'ಕೊಪರ್ನಿಕಸ್ ಕ್ರಾಂತಿ' ಪುಸ್ತಕದಲ್ಲಿ ಒಂದು ಅನುಬಂಧವಾಗಿ ಪ್ರಕಟಿಸಲಾಗಿದೆ. ಅವರು ತೀರ್ಮಾನಿಸಿದ್ದಾರೆ, "ಪರಂಪರೆಯಿಂದ ಪಾರಾಗುವುದು ಪರಮ ಜಟಿಲ ಸಮಸ್ಯೆ.... ನಿಜಕ್ಕೂ ಬೇಕಾಗಿರುವುದು ಮೂಲಭೂತ ಪರಿಕಲ್ಪನೆಗಳಲ್ಲಿಯೇ ಬದಲಾವಣೆ.... ವೈಜ್ಞಾನಿಕ ಪರಂಪರೆ, ಅಂದರೆ ಐತಿಹಾಸಿಕ ಪ್ರಕ್ರಿಯೆ, ನಮ್ಮ ಮುಂದೆ ಅಸಂಖ್ಯ ಸಮಸ್ಯೆಗಳನ್ನು ಎಸೆದು ನಮ್ಮ ಪ್ರಯತ್ನಗಳನ್ನು ಪ್ರೋತ್ಸಾಹಿಸುತ್ತದೆ. ಇದು ವಿಜ್ಞಾನದ ಚಟುವಟಿಕೆಗಳಲ್ಲಿ ಅಂತರ್ಗತವಾಗಿರುವ ಉತ್ತಮ ಆರೋಗ್ಯಸ್ಥಿತಿಯ ಚಿಹ್ನೆ."

### ಸಮಾರೋಪ

ಮೇಲಿನ ವಿಶ್ಲೇಷಣೆಯಿಂದ ಅನುಗತವಾಗುವ ಮುಖ್ಯ ಅಂಶಗಳು ಮೂರು : (೧) ಪರಂಪರೆಯಿಂದ ಪ್ರಭಾವಿತವಾಗದ ಮಾನವಚಿಂತನ ಪ್ರಕಾರವೇ ಇಲ್ಲ, ಹೇಗೆ ಗುರುತ್ವಬಲ ಸಾರ್ವದೈಶಿಕ ಮತ್ತು ಸಾರ್ವಕಾಲಿಕವೋ ಹಾಗೆ; (೨) ವರ್ತಮಾನ ಚಿಂತನೆಯ ಬೆಳಕಿನಲ್ಲಿ ಪರಂಪರೆಗೆ ತಿದ್ದುಪಡಿ ಇಲ್ಲವೇ ಸೇರ್ಪಡೆ ಜೋಡಿಸುವುದು, ಖುದ್ದು ಮಾನವನ ಉಳಿವಿಗೋಸ್ಕರ ಅನಿವಾರ್ಯವಾಗುತ್ತದೆ, ಹೇಗೆ ಐಸಾಕ್ ನ್ಯೂಟನ್ (೧೬೪೨-೧೭೨೭) ಗುರುತ್ವಬಲದ ಗಣನೆಗೆ ಗಣಿತ ಸೂತ್ರವಿತ್ತು ಚಿಂತನೆಯ ಮುನ್ನಡೆಗೆ ಕಾರಣನಾದನೋ ಹಾಗೆ; (೩) ಪರಂಪರೆಯ ಪಥ, ವೇಗ ಮತ್ತು ಭವಿಷ್ಯಗಳನ್ನು ವರ್ತಮಾನದಲ್ಲಿ ಮಾನವ ಅದಕ್ಕೆ ಜೋಡಿಸುವ ತಿದ್ದುಪಡಿ ಅಥವಾ ಸೇರ್ಪಡೆಗಳಿಂದ ನಿರ್ಣಯಿಸಲ್ಪಡುತ್ತವೆ, ಹೇಗೆ ಐನ್‌ಸ್ಟೈನ್ ಗುರುತ್ವಬಲಕ್ಕೆ ನೂತನ ಗಣಿತವ್ಯಾಖ್ಯಾನ ಬರೆದು (೧೯೧೫) ವಿಶ್ವವಿಜ್ಞಾನದಲ್ಲಿ ಕ್ರಾಂತಿಗೆ ಕಾರಣರಾದರೋ ಹಾಗೆ.

*ಪೊರೆ ಪರಂಪರೆ ಮುಸುಕುವುದು ನಿನ್ನ,*
*ಹಳೆಯದನು*
*ತರಿದೊಗೆಯುತಿರೆ ಹೊಸತು ಕವಿಯುವುದು*
*ಸುತ್ತ,*
*ಎಚ್ಚರವಿರಲಿ: ಕೀಟದಾ ಸ್ವಾತಂತ್ರ್ಯ ಮೃಗಶಾಲೆ*
*ಹರಿಗಿಲ್ಲ! ಕತ್ತರಿಸು ಪೊರೆಗಳನು ಆತ್ರಿಸೂನು*

**ಜಿ. ಟಿ. ನಾರಾಯಣರಾವ್**
೮, ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ
ಮೈಸೂರು-೫೭೦ ೦೦೯

# ಯಂತ್ರಕಲೆಯ ಕಪಿಮುಷ್ಟಿಯಿಂದ ಬಿಡುಗಡೆಯತ್ತ

ಮೂಲ : ಸಮರ್ ಬಾಗ್‌ಚಿ
ಅನು : ಕೆ. ಎಲ್. ಗೋಪಾಲಕೃಷ್ಣ ರಾವ್

ಅಮೆರಿಕದ ಪ್ರಾಚ್ಯ ಕಡಲತೀರದ ಫ್ಲಾರಿಡಾ ನಗರದಲ್ಲಿ 'ಡಿಸ್ನಿ ವರ್ಲ್ಡ್'ನ ಪಕ್ಕದಲ್ಲಿ 'ಎಪ್ಕಾಟ್' ಎಂಬ ಹೆಸರಿನ ಒಂದು ಅತ್ಯದ್ಭುತ ಪ್ರದರ್ಶನ ಕೇಂದ್ರವಿದೆ. 'ನಾಳಿನ ಜನಸಮುದಾಯದ ಪ್ರಾಯೋಗಿಕ ಮಾತೃಕೆ' ಎಂಬುದು ಅದರ ಹೆಸರಿನ ಅರ್ಥ. ಯಂತ್ರಕಲೆಯೇ ಕೊನೆಯ ನಿರ್ಧಾರಕ ಅಂಶ ಎಂಬುದು ಈ ಪ್ರದರ್ಶನ ನೀಡುವ ಸಂದೇಶ. ಭವಿಷ್ಯತ್ತಿನಲ್ಲಿ ವಿಜ್ಞಾನ ಯಂತ್ರಕಲೆಗಳ ಮಹೋನ್ನತ ಸಾಧನೆಗಳನ್ನು ಈ ಪ್ರದರ್ಶನ ಎತ್ತಿತೋರಿಸುತ್ತದೆ. ಯಂತ್ರಕಲೆಯ ಪ್ರಗತಿಯಷ್ಟೆ ಇಳೆಯ ಮೇಲೆ ಸ್ವರ್ಗವನ್ನು ತರಬಲ್ಲುದು ಎಂದು ಅದು ಘೋಷಿಸುತ್ತದೆ. ಅದರ ಪ್ರಕಾರ ಯಂತ್ರಕಲೆಯು ಈ ಜಗತ್ತಿನಲ್ಲಿ ಉಪಯುಕ್ತ ಭೋಗವಸ್ತುಗಳ ಮಹಾಪೂರವನ್ನೇ ಹರಿಸಲಿದೆ. ಹೊಸತು ಹಳತಿಗಿಂತ ಮೇಲು, ವೇಗ ನಿಧಾನಗತಿಗಿಂತ ಮೇಲು, ಸಂಕೀರ್ಣತೆ ಸರಳತೆಗಿಂತ ಮೇಲು ಎಂಬುದು ಅದರ ದಿವ್ಯಮಂತ್ರ. ಅದೆಲ್ಲ ಸರಿ, ಭವಿಷ್ಯತ್ತಿನಲ್ಲಿ ಮನುಷ್ಯನ ಗತಿ ಏನು ಎಂದು ಕೇಳಿದಲ್ಲಿ 'ಎಪ್ಕಾಟ್' ಹೇಳುತ್ತದೆ : ''ಮನುಷ್ಯ ಹಿಂದೆ ದೇವರನ್ನು ಆರಾಧಿಸುತ್ತಿದ್ದಂತೆಯೇ ಭವಿಷ್ಯತ್ತಿನಲ್ಲಿ ಯಂತ್ರಕಲೆಯನ್ನು ಆರಾಧಿಸುತ್ತ ಪರಿಪೂರ್ಣತೆ ಸಾಧಿಸುತ್ತಾನೆ!'' ಇಂತಹ ಚಿಂತನೆಯಲ್ಲಡಗಿರುವ ವಿಕೃತತೆಯನ್ನು ಚಾರ್ಲಿ ಚಾಪ್ಲಿನ್ ತಮ್ಮ 'ಮಾಡರ್ನ್ ಟೈಮ್ಸ್' ಎಂಬ ಚಲಚ್ಚಿತ್ರದಲ್ಲಿ ಮಾರ್ಮಿಕವಾಗಿ ಎತ್ತಿತೋರಿಸಿದ್ದಾರೆ. ಇಂದು ವೈಯಕ್ತಿಕ ಕಂಪ್ಯೂಟರ್ ಇಲ್ಲದ ಯಾವೊಬ್ಬ ಶ್ರೀಮಂತನ ಮನೆಯೂ ಇಲ್ಲ. ಈ ಮನೆಗಳಲ್ಲಿ ಸಣ್ಣ ಮಗುವೊಂದು ಕಂಪ್ಯೂಟರ್ ಮುಂದೆ ಗಂಟೆಗಟ್ಟಲೆ ಸಮಯ ಕಳೆಯುತ್ತದೆ. ಹಾಗೆ ಅದು ಇಡೀ ಪ್ರಪಂಚವನ್ನೇ ಒಂದು 'ಸಮಗ್ರ ಗ್ರಾಮ'ವನ್ನಾಗಿ ಮಾಡಿಕೊಂಡು ಮಾಹಿತಿಯ ಮಹಾಸಮಷ್ಟಿಯನ್ನೇ ತನ್ನ ಅಂಗೈಯಲ್ಲಿರಿಸಿಕೊಂಡಿರುತ್ತದೆ. ಆದರೆ ಇದರ ಮತ್ತೊಂದು ಮುಖವೇನು ? ಇದರಿಂದಾಗಿ ಮಗು ಇತರರಿಂದ ಬೇರ್ಪಟ್ಟಿರುತ್ತದೆ. ಮಗು ಪರಕೀಯತೆಯ ಮರುಭೂಮಿಯಲ್ಲಿ ಮುಳುಗಿರುತ್ತದೆ. ಹಾಗೆಂದೇ, 'ಮರುಭೂಮಿ ಇರುವುದು ದಕ್ಷಿಣದ ಉಷ್ಣವಲಯದಲ್ಲಷ್ಟೆ ಅಲ್ಲ, ಅದು ಇಲ್ಲೇ ಮೂಲೆಮೂಲೆಯಲ್ಲೂ ಹರಡಿದೆ, ಟ್ಯೂಬ್ ಟ್ರೈನಿನಲ್ಲೂ ಅಡಗಿದೆ. ನಿಮ್ಮ ನೆರೆಯವನ ಹೃದಯದಲ್ಲೂ ಮನೆಮಾಡಿದೆ' ಎಂದು ಖ್ಯಾತ ಕವಿ ಟಿ. ಎಸ್. ಎಲಿಯಟ್ ಹೇಳಿರುವುದು.

ಯಂತ್ರಕಲೆ ಇಂದು ಉಸಿರುಕಟ್ಟಿಸುವಷ್ಟು ಭಾರಿ ಪ್ರಮಾಣಗಳಲ್ಲಿ ಉತ್ಪಾದಿಸುತ್ತಿದೆ. ಸುಮಾರು ಇನ್ನೂರು ವರ್ಷಗಳ ಹಿಂದೆ ಜರುಗಿದ ಕೈಗಾರಿಕಾ ಕ್ರಾಂತಿಯಿಂದ ಇದು ಪ್ರಾರಂಭವಾಯಿತು. ೧೮೦೦ರಲ್ಲಿ, ಕೈಗಾರಿಕಾ ಕ್ರಾಂತಿಯ ನಡುಗಾಲದಲ್ಲಿ, ಅಮೆರಿಕನೊಬ್ಬ ಮಾರುಕಟ್ಟೆಗೆ ಹೋದಾಗ ಅದು ಸುಮಾರು ೧೩೦ಚ.ಮೀ. ವಿಸ್ತೀರ್ಣ ಹರಡಿತ್ತು. ಅದರಲ್ಲಿ ಕೊಳ್ಳಲು ಸುಮಾರು ೩೦೦ ವಿವಿಧ ಮಾದರಿಯ ವಸ್ತುಗಳ ಆಯ್ಕೆ ಇದ್ದಿತು. ಇಂದಾದರೇ, ೧೦,೦೦೦ ಜನಸಂಖ್ಯೆಯ ಸಣ್ಣ ಅಮೆರಿಕನ್ ಗ್ರಾಮದಲ್ಲೂ ಮಾರುಕಟ್ಟೆ ೧.೩ ಮಿಲಿಯ ಚ.ಮೀ. ವಿಸ್ತೀರ್ಣ ಉಳ್ಳದ್ದಾಗಿದೆ. ಅದರಲ್ಲಿ ಕೊಳ್ಳಲು ಹತ್ತುಲಕ್ಷಕ್ಕೂ ಹೆಚ್ಚು ವಿವಿಧ ಮಾದರಿಯ ವಸ್ತುಗಳಿರುತ್ತವೆ. ಈ ಬೃಹತ್ ಸಂಖ್ಯಾ ಆಳ್ವಿಕೆ ಮಾನವರನ್ನು, ನಿಸರ್ಗವನ್ನು, ಇಡೀ ಭೂಮಂಡಲವನ್ನೇ ಕಬಳಿಸಿ ನಜ್ಜುಗುಜ್ಜು ಮಾಡುತ್ತಿದೆ. ಆದರೆ ಈ ಭೋಗವಸ್ತುಗಳು ಜಗತ್ತಿನ ಅಲ್ಪಸಂಖ್ಯಾತ ಜನರಿಗಷ್ಟೆ ಲಭ್ಯವಿವೆ. ಇಂದು ಭಾರತ, ಚೀಣಾ, ಇಂಡೋನೇಷ್ಯ ಹಾಗೂ ರಷ್ಯದ ಜನರೂ ಅಮೆರಿಕದಂತೆ ಭೋಗಜೀವನ ಮಾದರಿಯನ್ನೇ ಅನುಸರಿಸಲು ನಿರ್ಧರಿಸಿದಲ್ಲಿ ಇಡೀ ಜಗತ್ತು ಬೃಹತ್ ಮರುಭೂಮಿಯಂತೆ ಬರಿದಾಗುವುದು ನಿಶ್ಚಿತ. ಅದಕ್ಕೇ ಗಾಂಧೀಜಿ ಬರೆದರು : ''ಭಾರತವು ಪಾಶ್ಚಿಮಾತ್ಯ ದೇಶಗಳಂತೆ ಕೈಗಾರಿಕೀಕರಣದ ಮಾರ್ಗ ಹಿಡಿಯದಂತೆ ದೇವರೇ ಕಾಪಾಡಬೇಕು. ಸಣ್ಣ ದ್ವೀಪರಾಜ್ಯವೊಂದರ ಆರ್ಥಿಕ ಶೋಷಣೆಯ ನೀತಿ ಇಡೀ ಜಗತ್ತನ್ನೇ ದಾಸ್ಯದಲ್ಲಿರಿಸಿದೆ. ೩೦೦ ಮಿಲಿಯ ಜನರ ರಾಜ್ಯವೊಂದು ಇಂದು ಅದೇ ರೀತಿಯ ಆರ್ಥಿಕ ಶೋಷಣೆಯ ನೀತಿಯನ್ನು ಅನುಸರಿಸಿದಲ್ಲಿ ಅದು ಇಡೀ ಜಗತ್ತನ್ನೇ ಮಿಡತೆಯಂತೆ ಸರ್ವನಾಶಕ್ಕೀಡುಮಾಡುವುದು.'' ರವೀಂದ್ರನಾಥ ಟಾಗೂರರೂ 'ಪ್ರಗತಿ' ಹಾಗೂ 'ನಾಗರಿಕತೆ'ಗಳಿಗೆ ಸಂಬಂಧಿಸಿ ಮೂಲಭೂತ ಪ್ರಶ್ನೆಯನ್ನೆತ್ತಿದ್ದರು. ೧೯೨೪ರಲ್ಲಿ ಚೀಣಾದಲ್ಲಿ ನೀಡಿದ ಉಪನ್ಯಾಸವೊಂದರಲ್ಲಿ ಅವರು ಹೇಳಿದರು : ''ಈಗ ಒಂದು ಶತಮಾನಕ್ಕೂ ಹೆಚ್ಚು ಕಾಲದಿಂದ ಸಮೃದ್ಧತೆಯ ಪಾಶ್ಚಿಮಾತ್ಯ ಜಗತ್ತು ನಮ್ಮನ್ನು ತನ್ನ ರಥದ ಹಿಂದೆ ಕಟ್ಟಿ ಎಳೆದುಕೊಂಡು ಹೋಗುತ್ತಿದೆ. ಅದರ ಧೂಳು ನಮ್ಮ ಉಸಿರುಕಟ್ಟಿಸುತ್ತಿದೆ. ಅದರ ಸದ್ದು ನಮ್ಮನ್ನು ಕಿವಿಡಾಗಿಸಿದೆ. ನಮ್ಮ ನಿಸ್ಸಹಾಯಕತೆ ನಮ್ಮನ್ನು ಶಕ್ತಿಹೀನರನ್ನಾಗಿಮಾಡಿದೆ. ಅದರ ವೇಗ ನಮ್ಮನ್ನು ಪರವಶರನ್ನಾಗಿ ಮಾಡಿದೆ. ಈ ರಥವು ನಮ್ಮನ್ನು ಪ್ರಗತಿಯತ್ತ ಕರೆದೊಯ್ಯುತ್ತಿದೆ ಮತ್ತು ಈ ಪ್ರಗತಿಯೇ ನಾಗರಿಕತೆ ಎಂಬ ಅವರ ವಾದವನ್ನು ನಾವು ಒಪ್ಪಿಕೊಂಡಿದ್ದೇವೆ. 'ಪ್ರಗತಿ ಯಾತಕ್ಕೆ ಮತ್ತು ಯಾರಿಗೆ ?' ಎಂದು ನಾವು ಕೇಳುವ ಸಾಹಸ ಮಾಡಿದಲ್ಲಿ, ಪ್ರಗತಿಯ ನಿರಪೇಕ್ಷತೆಯ ಬಗೆಗೆ ಇಂತಹ ಸಂದೇಹಗಳನ್ನು ಹೊಂದಿರುವುದು ಪೌರ್ವಾತ್ಯ ಸಹಜ ಅಸಂಬದ್ಧತೆ ಹಾಗೂ ನಾಚಿಕೆಗೇಡಿತನ ಎಂದು ಭಾವಿಸಲಾಗುತ್ತದೆ. ಆದರೆ, ರಥದ ವೈಜ್ಞಾನಿಕ ಪರಿಪೂರ್ಣತೆಯನ್ನಷ್ಟೆ ಅಲ್ಲ ಅದರ ಮಾರ್ಗದಲ್ಲಿರುವ ಹಳ್ಳಕೊಳ್ಳಗಳನ್ನೂ ನಾವು ಗಮನಕ್ಕೆ ತಂದುಕೊಳ್ಳಬೇಕೆಂದು ಇತ್ತೀಚೆಗೆ ನಮಗೆ ಎಚ್ಚರಿಕೆಯ ಧ್ವನಿ

ಯಂತ್ರಕಲೆ ಇಂದು ಉಸಿರುಕಟ್ಟಿಸುವಷ್ಟು ಭಾರಿ ಪ್ರಮಾಣಗಳಲ್ಲಿ ಉತ್ಪಾದಿಸುತ್ತಿದೆ. ಸುಮಾರು ಇನ್ನೂರು ವರ್ಷಗಳ ಹಿಂದೆ ಜರುಗಿದ ಕೈಗಾರಿಕಾ ಕ್ರಾಂತಿಯಿಂದ ಇದು ಪ್ರಾರಂಭವಾಯಿತು....

ಮಾನವ ಶರೀರದಲ್ಲಿ ಯಾವುದೇ ಭಾಗ ತಕ್ಷಣವೇ ಹಿಗ್ಗಿದಲ್ಲಿ ಅದೇನೂ ಆರೋಗ್ಯದ ಲಕ್ಷಣವಾಗುವುದಿಲ್ಲ, ಬದಲು ರೋಗದ ಲಕ್ಷಣವಾಗುತ್ತದೆ. ಅದನ್ನು ಕತ್ತರಿಸಿ ಹಾಕಲು ನಾವು ಶಸ್ತ್ರವೈದ್ಯರ ಬಳಿಗೆ ಹೋಗಬೇಕಾಗುತ್ತದೆ. ಆಧುನಿಕ ಸಮಾಜದಲ್ಲೂ ನಾವು ಯಂತ್ರಕಲೆಯ ಶೀಘ್ರ ಹಿಗ್ಗನ್ನು ಕಾಣುತ್ತಿದ್ದೇವೆ. ಇಂದು ವಿಜ್ಞಾನ ಯಂತ್ರಕಲೆಗಳು ಬಂಡವಾಳದ ಹಾಗೂ ಬಳಕೆಗಾರ ಜೀವನವಿಧಾನದ ಕೈವಶವಾಗಿಬಿಟ್ಟಿವೆ. ಇಂದು ಮಾನವ ಪ್ರಗತಿಗೆ ಯಾವುದು ಉತ್ತಮ ಹಾಗೂ ಅಪೇಕ್ಷಣೀಯ ಎಂಬ ಬಗೆಗೆ ಮಾನವರು ನಿರ್ಧಾರ ಕೈಗೊಳ್ಳಬೇಕಾಗಿದೆ. ಈ ಬಳಕೆಗಾರ ಸಮಾಜಕ್ಕೆ ಒಂದು ಬದಲಿಯನ್ನು, ಸಮಾನತೆ ಹಾಗೂ ನ್ಯಾಯಪರತೆಯ, ಸರಳ ಜೀವನ ಹಾಗೂ ಆತ್ಮಾವಲಂಬನೆಯ, ರಾಜಕಾರಣ ಹಾಗೂ ಆರ್ಥಿಕತೆಯ ವಿಕೇಂದ್ರೀಕರಣದ ಗುರಿಯುಳ್ಳ ಒಂದು ಬದಲಿಯನ್ನು, ಶೋಧಿಸಬೇಕಾಗಿದೆ. ಆಗಷ್ಟೇ ವಿಜ್ಞಾನ ಯಂತ್ರಕಲೆಗಳು ಸಮರ್ಥನೀಯ ವಿಕಸನವನ್ನು ತೋರಬಲ್ಲವು.

ಕೇಳಿಬರುತ್ತಿದೆ...'' ರವೀಂದ್ರನಾಥ ಟಾಗೂರರು ಇಲ್ಲಿ ಉಲ್ಲೇಖಿಸಿರುವ ರಥವೇ ಯಂತ್ರಕಲೆ ಮತ್ತು ಹಳ್ಳಕೊಳ್ಳಗಳೇ ನಾವು ನಮ್ಮ ಸುತ್ತಮುತ್ತ ಕಾಣುತ್ತಿರುವ ಸಾಮಾಜಿಕ ಹಾಗೂ ಪರಿಸರ ಅವನತಿ. ಟಾಗೂರರೂ ಗಾಂಧಿಯವರೂ ಈ 'ಪರಿಮಾಣದ ಪ್ರಭುತ್ವ'ದ ಬಗೆಗೆ ತುಂಬ ಸೂಕ್ಷ್ಮವಾಗಿಯೇ ಪ್ರಶ್ನೆಗಳನ್ನು ಎತ್ತಿದ್ದಾರೆ.

ಇಂದು ನಮ್ಮ ಭೂಮಂಡಲದ ಸ್ಥಿತಿಯತ್ತ ಕ್ಷಣನೋಟ ಹರಿಸೋಣ. ಜಗತ್ತಿನ ಜನಸಂಖ್ಯೆಯಲ್ಲಿ ಅತ್ಯಲ್ಪ ಪ್ರಮಾಣದ ಜನರ ಹೊಟ್ಟೆಬಾಕ ಬಳಕೆಗಾರ ಜೀವನ ಶೈಲಿಯನ್ನು ತೃಪ್ತಿಗೊಳಿಸಲೋಸುಗ ಇಳೆಯ ಮೇಲಿನ ಬಾಳಿನ ಜೀವನಾಧಾರವಾದ ನಿಸರ್ಗದ ಐದು ಸಂಪನ್ಮೂಲಗಳನ್ನು – ಅರಣ್ಯ, ಭೂಮಿ, ಜಲ, ಜೀವವೈವಿಧ್ಯತೆ ಹಾಗೂ ವಾಯು ಸಂಪನ್ಮೂಲಗಳನ್ನು – ಭಾರಿ ಅಪಾಯಕ್ಕೀಡುಮಾಡಲಾಗುತ್ತಿರುವುದನ್ನು ನಾವು ಕಾಣುತ್ತೇವೆ. ಜಗತ್ತಿನ ಕಾಡುಗಳು, ಜೀವವೈವಿಧ್ಯತೆ ಹಾಗೂ ಆರ್ದ್ರ ಭೂಮಿಗಳು ಶೀಘ್ರವಾಗಿ ಕಣ್ಮರೆಯಾಗುತ್ತಿವೆ. ಕೊಳ, ನದಿ, ಸಾಗರಗಳ ನೀರು ಮಲಿನಗೊಳ್ಳುತ್ತಿದೆ. ಇದರಿಂದಾಗಿ ನೀರಿನೊಳಗಿನ ಜೀವವೈವಿಧ್ಯತೆ ನಾಶಗೊಳ್ಳುತ್ತಿದೆ. ಭೂಮಿಯ ಮೇಲ್ಮೈ ಮೇಲಿನ ಮಣ್ಣಿನ ಸ್ತರ ಅಭೂತಪೂರ್ವ ಪ್ರಮಾಣಗಳಲ್ಲಿ ನಶಿಸುತ್ತಿದೆ. ಪ್ರತಿವರ್ಷವೂ ೨೫ ಬಿಲಿಯನ್ ಟನ್‌ಗಳಷ್ಟು ಮಣ್ಣು (ಇದರಲ್ಲಿ ಭಾರತದ ಪಾಲು ೬ ಬಿಲಿಯನ್ ಟನ್) ಕೊಚ್ಚಿಕೊಂಡು ಹೋಗಿ ನದಿ ಸಾಗರಗಳ ತಳ ಸೇರುತ್ತಿದೆ. ಆಧುನಿಕ ಕೃಷಿಪದ್ಧತಿ ಹಾಗೂ ಅರಣ್ಯನಾಶ ಇದಕ್ಕೆ ಕಾರಣ. ಜಗತ್ತಿನಾದ್ಯಂತ ಮರುಭೂಮಿಗಳು ವಿಸ್ತರಿಸುತ್ತಿವೆ. ಭೂಸವೆತದಿಂದಾಗಿ ಪ್ರತಿವರ್ಷವೂ ೨೦ ಮಿಲಿಯನ್ ಹೆಕ್ಟೇರುಗಳಷ್ಟು ಭೂಮಿ ಬರಡಾಗುತ್ತಿದೆ. ಪ್ರತಿ ವರ್ಷವೂ ೫ ಮಿಲಿಯನ್ ಹೆಕ್ಟೇರುಗಳಷ್ಟು ಭೂಮಿಯನ್ನು ಮರಳುಗಾಡುಗಳು ಕಬಳಿಸುತ್ತಿವೆ. ಪ್ರತಿವರ್ಷವೂ ಸುಮಾರು ೧೭ ಮಿಲಿಯ ಹೆಕ್ಟೇರುಗಳಷ್ಟು ಕಾಡುಗಳು ಕಣ್ಮರೆಯಾಗುತ್ತಿವೆ. ಇದರಲ್ಲಿ ಉಷ್ಣವಲಯದ ಕಾಡುಗಳ ಪ್ರಮಾಣ ೧೫.೪ ಮಿಲಿಯ ಹೆಕ್ಟೇರುಗಳು. ಶೇ.೫೦ರಷ್ಟು ಜೀವವೈವಿಧ್ಯತೆ ಇರುವುದು ಈ ಉಷ್ಣವಲಯದ ಕಾಡುಗಳಲ್ಲೇ. ೨೦೫೦ನೆಯ ವರ್ಷದ ಹೊತ್ತಿಗೆ ಉಷ್ಣವಲಯದ ಕಾಡುಗಳೆಲ್ಲ ಕಣ್ಮರೆಯಾಗಲಿರುವುದೆಂದು ಅಂದಾಜು ಮಾಡಲಾಗಿದೆ. ಕಾಡುಗಳೂ ಕೃಷಿಭೂಮಿಗಳೂ ಕಣ್ಮರೆಯಾದಾಗ ನೀರು ಮಲಿನಗೊಳ್ಳುತ್ತದೆ, ಜೀವವೈವಿಧ್ಯತೆ ನಾಶವಾಗುತ್ತದೆ. ೧೯೮೦ರಲ್ಲಿ ದಿನಕ್ಕೊಂದು ಜೀವಜಾತಿ ಕಣ್ಮರೆಯಾಗುತ್ತಿತ್ತು. ೧೯೯೦ರಲ್ಲಿ ಇದು ಗಂಟೆಗೊಂದಾಯಿತು. ಆದರೂ ವಿಜ್ಞಾನಿಗಳು ಇಳೆಯ ಮೇಲೆ ಜೀವವೈವಿಧ್ಯತೆಯ ಬಗೆಗೆ ತಿಳಿದಿರುವುದು ತುಂಬ ಕಮ್ಮಿಯೇ. ಇಳೆಯ ಮೇಲೆ ೫ ಮಿಲಿಯದಿಂದ ಹಿಡಿದು ೫೦ ಮಿಲಿಯವರೆಗೆ ಜೀವಜಾತಿಗಳಿವೆ. ವಿಜ್ಞಾನಿಗಳು ೧.೪ ಮಿಲಿಯ ಇಲ್ಲವೇ ೧.೫ ಮಿಲಿಯ ಜೀವಜಾತಿಗಳ ಅಧ್ಯಯನವನ್ನಷ್ಟೆ ಮಾಡಿದ್ದಾರೆ. ಕೈಗಾರಿಕಾ ಕ್ರಾಂತಿ ವಿಸ್ತಾರಗೊಳ್ಳುತ್ತಿರುವುದರಿಂದಾಗಿ ಭೂಮಿ ಮೇಲಿನ ವಾತಾವರಣದ ಹೊದಿಕೆ ಮಲಿನಗೊಳ್ಳುತ್ತಿದೆ. ವಾತಾವರಣದ ಉಷ್ಣತೆ ಹೆಚ್ಚುತ್ತಿರುವುದೂ ಓಜೋನ್ ಪದರ ತೆಳುವಾಗಿ ಅದರಲ್ಲಿ ರಂಧ್ರ ಮೂಡುತ್ತಿರುವುದೂ ನಿಸರ್ಗದ ಮೇಲೆ ಬಲುಭಾರಿ ಪ್ರಭಾವ ಬೀರುತ್ತಿದೆ. ಹವಾಗುಣ ಬದಲುತ್ತಿದೆ. ೧೯೮೦ರ ದಶಕದ ವರ್ಷಗಳಲ್ಲಿ ಉಷ್ಣ ಸಂಚಲನ ಇದ್ದಕ್ಕಿದ್ದಂತೆ ನಿಧಾನವಾಯಿತು. ಇದು ಭೂಮಿ ಮೇಲಿನ ಹವಾಗುಣದಲ್ಲೂ ಉಷ್ಣ ಸಂತುಲನದಲ್ಲೂ ಬಹು ವಿಪತ್ಕಾರಿ ಬದಲಾವಣೆಗಳನ್ನು ಉಂಟುಮಾಡಬಹುದು. ಇವೆಲ್ಲ ಜರುಗುತ್ತಿರುವುದು ಹೊಟ್ಟೆಬಾಕ ಬಳಕೆಗಾರ ಸಮಾಜ ನಿರ್ಮಾಣದಿಂದಾಗಿಯೇ. ಆಧುನಿಕ ಯಂತ್ರಕಲೆ ಇದಕ್ಕೆ ಉತ್ತೇಜನ ನೀಡುತ್ತಿದೆ.

ಆಧುನಿಕ ಯಂತ್ರಕಲೆಯು ಹೇಗೆ ಮಾನವಜೀವನಕ್ಕೂ ಜೀವವೈವಿಧ್ಯತೆಗೂ ಅಪಾಯ ತಂದೊಡ್ಡುತ್ತಿದೆ ಎಂಬುದಕ್ಕೆ ಕೆಲವು ನಿದರ್ಶನಗಳನ್ನು ನೀಡುತ್ತೇನೆ. ೧೯೬೦ರ ದಶಕದ ಮಧ್ಯದಲ್ಲಿ ಭಾರತಕ್ಕೆ ಹಸಿರು ಕ್ರಾಂತಿ ಬಂದಿತು. ಇದನ್ನು ಉಂಟುಮಾಡುವ ಉನ್ನತ ಫಲದಾಯಕ ಬೀಜಗಳಿಗೆ ತುಂಬ ನೀರು ಬೇಕು. ಗುಜರಾತಿನ ಕಡಲತೀರ ಪ್ರದೇಶಗಳಲ್ಲಿ ಮಳೆ ತೀರ ಕಮ್ಮಿ. ಗುಜರಾತಿನಲ್ಲಿ ಸರಾಸರಿ ಮಳೆ ಪ್ರಮಾಣ ೬೦ ಸೆಂ.ಮೀ. ಅಷ್ಟೆ. ಆದರೆ ಕರಾವಳಿ ಪ್ರದೇಶ ತುಂಬ ಫಲವತ್ತಾದುದು. ಇದರಿಂದಾಗಿ ಜನ ಶತಮಾನಗಳಿಂದ ಅಲ್ಪಸ್ವಲ್ಪ ಬೀಳುತ್ತಿದ್ದ ಮಳೆನೀರನ್ನೇ ಬಾವಿ ಕೊಳಗಳನ್ನು ತೋಡಿ ಶೇಖರಿಸಿಟ್ಟು ಬೇಳೆಕಾಳುಗಳಂಥ ಶುಷ್ಕ ಬೆಳೆಗಳ ಸಾಗುವಳಿ ಮಾಡುತ್ತಿದ್ದರು. ಈ ಪಾರಂಪರಿಕ ಜ್ಞಾನ ಅನುಭವಗಳ ಪ್ರಯೋಜನ ಪಡೆದು ಬಡಜನ ಜೀವನ ನಡೆಸುತ್ತಿದ್ದರು. ಆದರೆ ಹಸಿರು ಕ್ರಾಂತಿ ಹಾಗೂ ಯಂತ್ರಕಲೆಗಳು ಬಂದ ಕೂಡಲೇ ಗುಜರಾತಿನ ಶ್ರೀಮಂತ ರೈತರು ಕರಾವಳಿ ಪ್ರದೇಶಗಳಲ್ಲಿ ಶೇಂಗಾ, ಧನಿಯ ಮುಂತಾದ ರೊಕ್ಕದ ಬೆಳೆಗಳನ್ನು ಬೆಳೆಯಲೋಸುಗ ಟ್ಯೂಬ್‌ವೆಲ್ಸ್ (ನಳಿಕೆ ಬಾವಿ) ತೋಡತೊಡಗಿದರು. ೧೯೫೦ರ ದಶಕದಲ್ಲಿ ಕೇವಲ ೯೦೦ ವಿದ್ಯುತ್ ನಳಿಕೆ ಬಾವಿಗಳಿದ್ದರೆ, ೧೯೯೦ರ ದಶಕದಲ್ಲಿ ಅವುಗಳ ಸಂಖ್ಯೆ ೪.೫ ಲಕ್ಷಕ್ಕೂ ಮೀರಿದ್ದಿತು. ಇದರ ಫಲವಾಗಿ ನೆಲದಡಿಯ ನೀರಿನ ಮಟ್ಟ ಕುಸಿಯಿತು. ಕೊಳಗಳೂ ಬಾವಿಗಳೂ ಒಣಗಿದವು. ಕೊಳ ಬಾವಿಗಳ ನೀರನ್ನೇ ಅವಲಂಬಿಸಿದ್ದ ಬಡಜನರು ತಮ್ಮ ನೈಸರ್ಗಿಕ ಸಂಪನ್ಮೂಲವನ್ನು ಕಳೆದುಕೊಂಡು ನಿರಾಶ್ರಿತರಾದರು. ಜೋಪಡಿಗಳಲ್ಲೂ, ನಗರಗಳ ಕಾಲುದಾರಿಗಳಲ್ಲೂ ವಾಸಿಸುವಂತಾದರು. ನಳಿಕೆ ಬಾವಿಗಳನ್ನು ಹೆಚ್ಚು ಹೆಚ್ಚು ಆಳಕ್ಕೆ ತೋಡಿದುದರಿಂದಾಗಿ ಸಮುದ್ರದ ನೀರು ತೀರ ಒಳಸರಿದು ೧೨ಲಕ್ಷ ಹೆಕ್ಟೇರುಗಳಷ್ಟು ಭೂಮಿ ಬಂಜರಾಯಿತು. ನಿರ್ದಿಷ್ಟ ಯೋಜನೆ ಇಲ್ಲದೆ ಆಧುನಿಕ ಯಂತ್ರಕಲೆಯನ್ನು ಬಳಸತೊಡಗಿದುದು ನಿಸರ್ಗದ ಉತ್ಪಾದಕತೆಯ ಸಾಮರ್ಥ್ಯವನ್ನು ಕಸಿದುಕೊಂಡಿತು. ಇಂತಹ ವಾತಾವರಣದ ಅವನತಿಯಿಂದಾಗುವ ಖರ್ಚನ್ನು ಗಮನಕ್ಕೆ ತಂದುಕೊಳ್ಳದಿರುವುದರಿಂದ ಆಧುನಿಕ ಬೆಳವಣಿಗೆಯ ಅರ್ಥಶಾಸ್ತ್ರಕ್ಕೆ ಆಧುನಿಕ ಯಂತ್ರಕಲೆಯು ತುಂಬ ಸಮರ್ಥವೆಂದು ಕಂಡುಬರುತ್ತದೆ. ಭಾರತಕ್ಕೆ ಸ್ವಾತಂತ್ರ್ಯ ಬಂದ ಕಳೆದ ೫೭ಕ್ಕೂ ಹೆಚ್ಚು ವರ್ಷಗಳಲ್ಲಿ ನಿರ್ಮಿಸಿದ ಬೃಹತ್ ಅಣೆಕಟ್ಟೆ ಕೈಗಾರಿಕೆ ಹಾಗೂ ಗಣಿ ಇತ್ಯಾದಿಗಳನ್ನು ಜಾರಿಗೆ ತಂದು ಆಧುನಿಕ ಯಂತ್ರಕಲೆಯು ೫ ಕೋಟಿಗೂ ಹೆಚ್ಚು ಜನರ ಜೀವನೋಪಾಯವನ್ನು ಕಸಿದುಕೊಂಡು ಅವರನ್ನು ನಿರ್ಗತಿಕರನ್ನಾಗಿ ಮಾಡಿದೆ.

೨೧ನೆಯ ಶತಮಾನವು ಜೈವಿಕತಂತ್ರಜ್ಞಾನದ ಯುಗವಾಗಲಿರುವುದೆಂದು ಹೇಳಲಾಗುತ್ತಿದೆ. ಆಧುನಿಕ ಕೃಷಿತಂತ್ರ ಹಾಗೂ ಯಂತ್ರಕಲೆಯು ಆಹಾರ ಸುಭದ್ರತೆಯನ್ನು ಒದಗಿಸುವಲ್ಲಿ ಎಂತಹ ಮುಗ್ಗಟ್ಟನ್ನು ಉಂಟುಮಾಡಿದೆ ಅನ್ನುವುದನ್ನು ನೋಡೋಣ. ೧೦,೦೦೦ ವರ್ಷಗಳ ಹಿಂದೆ ಆದಿಮಾನವ ಮೊದಲು ಬತ್ತದ ಮಾದರಿಯನ್ನು ಕಂಡುಹಿಡಿದಂದಿನಿಂದ ಈ ಸಹಸ್ರಾರು ವರ್ಷಗಳಲ್ಲಿ ಭಾರತದ ರೈತರು ತಮ್ಮ ಅನುಭವಜನ್ಯ ಹಾಗೂ ಪಾರಂಪರಿಕ ಜ್ಞಾನ ಬಳಸಿಕೊಂಡು ಕೃತಕ ಆಯ್ಕೆಯ ಮೂಲಕ ಸುಮಾರು ೪೨,೦೦೦ ಮಾದರಿ ಬೆಳೆಗಳನ್ನು ಸುಮಾರು ೧,೨೦,೦೦೦ ಬತ್ತದ ತಳಿಗಳನ್ನು ವಿಕಾಸಗೊಳಿಸಿದ್ದರು. ಪಶ್ಚಿಮ ಬಂಗಾಳದಲ್ಲಿ ಉನ್ನತ ಫಲದಾಯಕ ಬೀಜಗಳು ಬಂದ ೧೯೬೫ಕ್ಕೆ ಮುನ್ನಿನ ವರ್ಷಗಳಲ್ಲಿ ಸುಮಾರು ೪,೮೦೦ ಮಾದರಿ ಬತ್ತ ಬೆಳೆಯಲಾಗುತ್ತಿದ್ದಿತು. ಇಂದು ಇಂಥ ಸಾವಿರಾರು ಬತ್ತದ ಮಾದರಿಗಳು ಮಾಯವಾಗಿವೆ. ಪಶ್ಚಿಮ ಬಂಗಾಳದಲ್ಲಿ ಇಂದು ೩೯೦–೪೦೦ಕ್ಕಿಂತ ಹೆಚ್ಚು ಬತ್ತದ ಮಾದರಿಗಳು ಕಾಣಸಿಗವು. ೨೦೦೭ರ ಹೊತ್ತಿಗೆ ಭಾರತದ ಬತ್ತದ ಕ್ಷೇತ್ರಗಳ ಮುಕ್ಕಾಲು ಭಾಗಗಳಲ್ಲಿ ಕೇವಲ ೧೦ ಮಾದರಿಯ ಉನ್ನತ ಫಲದಾಯಕ ಬೀಜಗಳನ್ನಷ್ಟೆ ಬಳಸಲಾಗುವುದೆಂದು ಅಂದಾಜು ಮಾಡಲಾಗಿದೆ. ಇಂದು ತಳಿವಿಜ್ಞಾನ ರೀತ್ಯಾ ಮಾರ್ಪಡಿಸಿದ ಬೆಳೆಗಳು ಭಾರತ ಪ್ರವೇಶಿಸಿವೆ. ವರ್ಷಕ್ಕೊಮ್ಮೆಯಷ್ಟೆ ಫಲನೀಡಿ ಆಮೇಲೆ ನಿಷ್ಫಲವಾಗುವ ಸಾವಧಿಕ (ಟರ್ಮಿನೇಟರ್) ಬೀಜಗಳೂ ಬೇಗನೆಯೇ ಬಳಕೆಗೆ ಬರಬಹುದು. ಹಾಗಾಗಿ ಭಾರತೀಯ ಕೃಷಿಯು ಬೇಗನೆಯೇ ಮೊನ್ಸಾಂಟೋ ಗಳಂಥ ಬಹುರಾಷ್ಟ್ರೀಯ ಬೀಜ ಕಂಪನಿಗಳಿಗೆ ಗುಲಾಮನಾಗಬಹುದು. ತಳಿಯೊಂದರ ಆರೋಗ್ಯ ಸ್ಥಿರತೆಗಳು ಅದನ್ನು ಬಳಸುವ ಜನರ ಸಂಖ್ಯೆ ವೈವಿಧ್ಯತೆಯನ್ನು ಅವಲಂಬಿಸಿರುತ್ತವೆ. ತಳಿ ನಿಧಿ ಸವೆತದ ಕಾರಣದಿಂದಾಗಿ ಸಮೀಪ ಭವಿಷ್ಯತ್ತಿನಲ್ಲೇ ನಾವು ಒಂದು ತಳಿಯಾಗಿ ಬತ್ತದ ಬೆಳೆಯನ್ನು ಕಳೆದುಕೊಳ್ಳಬಹುದು – ಇದನ್ನು ತಪ್ಪಿಸಲು ತಕ್ಷಣವೇ ತುರ್ತಿನ ಕ್ರಮ ಕೈಗೊಳ್ಳದಿದ್ದಲ್ಲಿ, ಇತರ ಬೆಳೆಗಳಿಗೆ ಸಂಬಂಧಿಸಿಯೂ ಇದೇ ಅಪಾಯ ಎದುರಾಗಬಹುದು. ಇದರಿಂದಾಗಿ ಭಾರತದ ಆಹಾರ ಸುಭದ್ರತೆಯೇ ಗಂಡಾಂತರಕ್ಕೀಡಾಗಬಹುದು.

ಯಂತ್ರಕಲೆಯನ್ನು ಯಥೇಚ್ಛವಾಗಿ ಅನ್ವಯಿಸಿದುದರಿಂದಾಗಿ ಮುಂದುವರಿದ ದೇಶಗಳಲ್ಲಿ ಎಂಥ ಪರಿಸ್ಥಿತಿ ಉಂಟಾಗಿದೆ ಅನ್ನುವುದನ್ನು ನೋಡೋಣ. ೧೯೮೯ರಲ್ಲಿ ಹಾಲೆಂಡ್‌ನ ಡೇನ್ ಹೇಗ್ ನಗರದಲ್ಲಿ ಅಂತರರಾಷ್ಟ್ರೀಯ ವಸ್ತು ಸಂಗ್ರಹಾಲಯ ಸಮಾಲೋಚನ ಸಮಿತಿಯ ತ್ರೈವಾರ್ಷಿಕ ಮಹಾಧಿವೇಶನ ಜರುಗಿತು. ಈ ಲೇಖನ ಕರ್ತೃವೂ ಅದರಲ್ಲಿ ಭಾಗವಹಿಸಿದ್ದರು. ಅಮೆರಿಕದ ಚಿಂತನಕಾರ ಹಾಗೂ ಮಾಹಿತಿ ತಂತ್ರಜ್ಞಾನ ತಜ್ಞ ನೀಲ್ ಪೋಸ್ಟ್‌ಮನ್ ಪ್ರಮುಖ ಭಾಷಣಕಾರರಾಗಿದ್ದರು. ಅವರು ಹೇಳಿದರು : ''ಸಾಧ್ಯವಿರುವ ಪ್ರತಿಯೊಂದು ಯಂತ್ರಕಲಾ ನಾವೀನ್ಯತೆಯನ್ನೂ ಒಳಗೊಳ್ಳುವಂತೆ ನಾವಾಗಲೇ ನಮ್ಮ ಸಮಾಜವನ್ನು ಸಂಘಟಿಸಿಬಿಟ್ಟಿದ್ದೇವೆ. ಆದರೆ ನಮ್ಮ ಈ ಕ್ರಿಯೆಯ ಪರಿಣಾಮಗಳನ್ನು ಬೇಕಂತಲೇ ಹಾಸ್ಯಾಸ್ಪದ ರೀತಿಯಲ್ಲಿ ಹಾಗೂ ನಿಶ್ಚಿಂತೆಯಿಂದ ಉಪೇಕ್ಷಿಸಿದ್ದೇವೆ. ಯಂತ್ರಕಲೆಯ ಆಗತ್ಯದ ಕಾರಣವಾಗಿ ನಾವು ನಮ್ಮ ಧರ್ಮ, ಕುಟುಂಬ, ಮಕ್ಕಳು, ಇತಿಹಾಸ ಹಾಗೂ ಶಿಕ್ಷಣ, ಇವೆಲ್ಲವುಗಳಿಂದ ವಿಮುಖರಾಗಿದ್ದೇವೆ. ಇದರ ಫಲವಾಗಿ ಅಮೆರಿಕದ ನಾಗರಿಕತೆ ಕುಸಿದುಬೀಳುತ್ತಿದೆ. ಈ

ಕಠೋರ ಸತ್ಯವನ್ನು ಎಲ್ಲರೂ ಬಲ್ಲರು, ಆದರೆ ಅದರ ಮುಂದೆ ನಿಶ್ಶಕ್ತರಾಗಿದ್ದಾರೆ. ನಮ್ಮ ಯಂತ್ರಕಲಾ ಕನಸಿನ ಒಂದು ಅಂಶ ಇಂತಿದೆ: ೧೯೯೫ರ ಹೊತ್ತಿಗೆ ಶೇ. ೮೫ರಷ್ಟು ನಮ್ಮ ಮಕ್ಕಳು ಒಂಟಿ-ತಂದೆ ಇಲ್ಲವೇ ಒಂಟಿ-ತಾಯಂದಿರ ಮನೆಗಳಲ್ಲಿ ವಾಸಿಸಲಿರುವರು. ನಮ್ಮ ದೊಡ್ಡ ನಗರಗಳಲ್ಲಿ ಶೇ. ೫೦ಕ್ಕೂ ಕಮ್ಮಿ ವಿದ್ಯಾರ್ಥಿಗಳು ಉನ್ನತ ಶಾಲಾ ಶಿಕ್ಷಣ ಪಡೆಯಲಿರುವರು. ಜನಸಮೂಹಗಳಿಗಾಗಿ ಶಿಕ್ಷಣ ಎಂಬ ವಿಚಾರವನ್ನು ಆವಿಷ್ಕರಿಸಿದ ಸಂಸ್ಕೃತಿಯಿಂದ, ನೋಡಿ, ಇಂಥ ಪರಿಣಾಮ ಹೊರಬರಲಿರುವುದು! ಸಾಮಾನ್ಯ ಅಮೆರಿಕನ್ ಯುವಕನೊಬ್ಬ ೧೮ನೆಯ ವಯಸ್ಸಿನವರೆಗೂ ೧೬,೦೦೦ ಗಂಟೆಗಳ ಕಾಲ ದೂರದರ್ಶನ ನೋಡುತ್ತ ೨೧ನೆಯ ವಯಸ್ಸಿನವರೆಗೆ ಒಂದು ಮಿಲಿಯ ಟಿವಿ ವಾಣಿಜ್ಯ ಕಾರ್ಯಕ್ರಮಗಳನ್ನು ವೀಕ್ಷಿಸುತ್ತ ಕಾಲ ಕಳೆಯುತ್ತಿದ್ದಾನೆ. ಇದರಿಂದಾಗಿ ನಮ್ಮ ಜನಸಂಖ್ಯೆಯ ಕಾಲುಭಾಗ ೬೦ ಮಿಲಿಯ ಜನ ನಿರಕ್ಷರ ಕುಕ್ಷಿಗಳಾಗಿದ್ದಾರೆ. ಪ್ರತಿ ವರ್ಷ ೪೦ ಮಿಲಿಯ ಜನ ತಮ್ಮ ವಾಸಸ್ಥಾನ ಬದಲಿಸುತ್ತಿದ್ದಾರೆ. ಹಲವಾರು ಮಿಲಿಯ ಜನರಿಗೆ ವಾಸಗೃಹಗಳೇ ಇಲ್ಲ, ಅವರು ಬೀದಿಗಳಲ್ಲೂ ಸುರಂಗ ಮಾರ್ಗಗಳಲ್ಲೂ ವಾಸಿಸುತ್ತಿದ್ದಾರೆ. ೧೯೫೦ ರಿಂದೀಚೆಗೆ ಹಿಂಸಾತ್ಮಕ ಪಾತಕ ಕೃತ್ಯಗಳ ಸಂಖ್ಯೆ ಶೇ. ೧೧೦೦೦ರಷ್ಟು ಹೆಚ್ಚಿದೆ. ಪ್ರತಿ ೧೦ ಅಮೆರಿಕನ್ನರಲ್ಲಿ ಇಬ್ಬರು ತಮ್ಮ ಬಾಳಿನಲ್ಲಿ ಕೆಲಕಾಲ ಮಾನಸಿಕ ಚಿಕಿತ್ಸಾಲಯಗಳಲ್ಲಿ ಕಳೆಯಲಿರುವರು... ನಮ್ಮ ನಗರಗಳ ಬೀದಿಗಳು ಉಸಿರುಕಟ್ಟಿಸುವಷ್ಟು ವಾಹನ ಸಂಚಾರದಿಂದ ಕೂಡಿವೆ. ನಾವು ಬಳಸುವ ನೀರು ಸೀಸದಿಂದ ಹಾಗೂ ವೈದ್ಯಕೀಯ ವ್ಯರ್ಥೋತ್ಪನ್ನಗಳಿಂದ ವಿಷಪೂರಿತವಾಗಿದೆ. ನಮ್ಮ ಮಳೆ ಆಮ್ಲೀಯವಾಗಿದೆ. ನಮ್ಮ ಜನ ಜಗತ್ತಿನ ಬೇರಾವ ಜನರೂ ಬಳಸದಷ್ಟು ಆಸ್ಪಿರಿನ್ ಬಳಸುತ್ತಿದ್ದಾರೆ. ನಮ್ಮಲ್ಲಿ ಶಿಶು ಮರಣದ ಸಂಖ್ಯೆ ಪಾಶ್ಚಿಮಾತ್ಯ ಜಗತ್ತಿನಲ್ಲೇ ಅತಿ ಹೆಚ್ಚಿನದಾಗಿದೆ. ನಮ್ಮ ಹದಿ ಹರೆಯದವರು ತಮ್ಮ ಮಿದುಳನ್ನು ಮಾದಕವಸ್ತುಗಳಿಗೆ ಮಾರಿಕೊಂಡಿದ್ದಾರೆ.'' ಅವರು ಹೇಳಿದುದು ಅಮೆರಿಕಕ್ಕಷ್ಟೆ ಅಲ್ಲ ಇಡೀ ಪಾಶ್ಚಿಮಾತ್ಯ ಜಗತ್ತಿಗೇ ಅನ್ವಯವಾಗುತ್ತಿದ್ದಿತೆಂಬುದು ಎಲ್ಲರಿಗೂ ಸ್ಪಷ್ಟವಿದ್ದಿತು. ಮೈಕ್ರೋವೇವ್, ಕಂಪ್ಯೂಟರ್, ಟೆಲಿವಿಷನ್, ಸ್ಟೀರಿಯೋಗಳು, ಮೋಟಾರು ಕಾರುಗಳಲ್ಲಿ ಟೆಲಿವಿಷನ್ ಇಂಥ ಯಂತ್ರಗಳ ಆಧಿಪತ್ಯವನ್ನು ಕೇವಲ ವೀಕ್ಷಿಸಿ ಪಾಶ್ಚಿಮಾತ್ಯ ನಾಗರಿಕತೆಯಲ್ಲಿ ಉಂಟಾಗಿರುವ ವಿಷಮ ಸ್ಥಿತಿಯನ್ನು ಅರ್ಥಮಾಡಿಕೊಳ್ಳಲಾಗುವುದಿಲ್ಲ.



ಕಮ್ಯೂನಿಸಂನಲ್ಲಿ ಮನುಷ್ಯನು ಬೆಳಿಗ್ಗೆ ಬೇಟೆಯಾಡುವನು, ಅಪರಾಹ್ನ ಮೀನು ಹಿಡಿಯುವನು, ಸಂಜೆ ದನಕರು ಮೇಯಿಸುವನು, ರಾತ್ರಿ ಊಟದ ನಂತರ ಕಲಾಭ್ಯಾಸದಲ್ಲಿ ತೊಡಗುವನು, ಎಂದು ಕಾರ್ಲ್ ಮಾರ್ಕ್ಸ್ ಕನಸಿದ್ದರು. ಆದರೆ ಆರ್ಕ್‌ರೈಟ್‌ನ ಹಲವು ಕದಿರುಗಳ ರಾಟೆಯಿಂದ ಹಿಡಿದು ಬಿಲ್‌ಗೇಟ್‌ನ ವೆಬ್ ಬ್ರೌಸರ್ ಎಕ್ಸ್‌ಪ್ಲೋರರ್‌ವರೆಗಿನ ಈಚೆಗಿನ ಆವಿಷ್ಕರಣಗಳು ಕೆಲಸವನ್ನು ನಿಧಾನವಾಗಿ ಮಾಡುವುದಕ್ಕಿಂತ ಹೆಚ್ಚು ಶೀಘ್ರವಾಗಿ ಮಾಡುವುದು ಉತ್ತಮ, ಅದೇ ಪ್ರಗತಿಯ ದ್ಯೋತಕ, ಎಂದು ನಂಬಿಕೆ ಮೂಡಿಸಿವೆ. ಸಮಯದ ಉಳಿತಾಯವೇ ಇಂದಿನ ಉತ್ಪಾದನಾ ಕ್ರಾಂತಿಯ ಒಂದು ಅತಿಮುಖ್ಯ ಲಕ್ಷಣ. ಇದು ಉತ್ಪಾದನೆಯ ಹಾಗೂ ಬಳಕೆಯ ಸ್ವರೂಪವನ್ನೇ ಬದಲಿಸಿದೆ. ಆದರೆ ಮನುಷ್ಯರು ನಿಜಕ್ಕೂ ತಮ್ಮ ವಿಶ್ರಾಂತಿಯ ಸಮಯ ಉಳಿತಾಯ ಮಾಡಿದ್ದಾರೆಯೆ? ಕೈಗಾರಿಕಾ ಕ್ರಾಂತಿಯಾದ ನಂತರದ ಈ ಇನ್ನೂರಕ್ಕೂ ಹೆಚ್ಚು ವರ್ಷಗಳ ನಂತರ ನಾವು ಈಗ ನಮ್ಮ ಗಮನವನ್ನು ಸಾರಿಗೆಯಿಂದ ಹಿಡಿದು ಸಂಪರ್ಕದವರೆಗೆ, ಉತ್ಪಾದನೆಯಿಂದ ಹಿಡಿದು ಮನರಂಜನೆಯವರೆಗೆ ಎತ್ತ ಕಡೆಗೆ ಹರಿಸಿದರೂ, ನಾವು ಸಾಧಿಸಿರುವ ಯಾವುದೇ ಸಮಯದ ಉಳಿತಾಯವೂ ದೂರವನ್ನಷ್ಟೆ ಹೆಚ್ಚಿಸಿದೆ ಎಂದು ಕಾಣುತ್ತೇವೆ. ಉತ್ಪಾದನೆ ಹೆಚ್ಚುತ್ತಿದೆ ಆದರೆ ಸಮಯದ ಕಳವಾಗುತ್ತಿದೆ. ಉದಾಹರಣೆಗೆ, ಸ್ವಯಂಚಾಲಿತ ಸಾರಿಗೆಯಲ್ಲಾಗಿರುವ ಕ್ರಾಂತಿಯು ಪ್ರಯಾಣದ ವೇಳೆಯನ್ನೇನೋ ಕಮ್ಮಿ ಮಾಡಿದೆ. ಆದರೆ ಇದು ಸಾರಿಗೆ ಚಾಲಕನ ದುಡಿಮೆಯ ವೇಳೆಯನ್ನೇನಾದರೂ ಕಮ್ಮಿ ಮಾಡಿದೆಯೆ? ಇಲ್ಲ, ಪ್ರಯಾಣದ ವೇಗ ಹೆಚ್ಚಿರುವುದರ ಕಾರಣವಾಗಿ ಅವನು ಹೆಚ್ಚಿನ ಸಮಯವನ್ನು ಚಾಲನೆಯಲ್ಲೇ ಕಳೆಯುತ್ತಿದ್ದಾನೆ. ಸಾಮಾನ್ಯ ಜರ್ಮನನೊಬ್ಬ ೧೯೫೦ರಲ್ಲಿ ವರ್ಷದಲ್ಲಿ ೨೦೦೦ ಕಿ.ಮೀ. ಪ್ರಯಾಣ ಮಾಡುತ್ತಿದ್ದರೆ ಇಂದು ೧೫,೦೦೦ ಕಿ.ಮೀ. ಪ್ರಯಾಣ ಮಾಡುತ್ತಾನೆ. ಏರೋಪ್ಲೇನ್, ಟೆಲಿಫೋನ್, ಇಂಟರ್‌ನೆಟ್, ಈ-ಮೈಲ್ ಇವುಗಳೆಲ್ಲ ದೂರವನ್ನೇನೋ ಕಮ್ಮಿ ಮಾಡಿವೆ. ಆದರೆ ವಿರಾಮ ವೇಳೆಯನ್ನೇನೂ ಹೆಚ್ಚಿಸಿಲ್ಲ, ಬದಲು ಅದನ್ನು ಕಸಿದುಕೊಂಡಿವೆ.

ಮನುಷ್ಯರು ಅಪಾರ ಸೃಜನಾತ್ಮಕ ಸಾಮರ್ಥ್ಯ ಹೊಂದಿರುವುದೇ ಅವರನ್ನು ಪ್ರಾಣಿಗಳಿಂದ ಭಿನ್ನವಾಗಿಸಿದೆ. ಅವರ ಈ ಸಾಮರ್ಥ್ಯವೇ ವಿಜ್ಞಾನ, ಕಲೆ, ಸಾಹಿತ್ಯ, ವಾಸ್ತುಶಿಲ್ಪ, ನೃತ್ಯ ಇತ್ಯಾದಿಗಳನ್ನು ಸೃಷ್ಟಿಸಲು ಸಹಾಯ ಮಾಡಿದೆ. ಮಾನವ ಇತಿಹಾಸದ ವಿವಿಧ ಕಾಲಘಟ್ಟಗಳಲ್ಲಿ ಈ ಸೃಜನಾತ್ಮಕತೆಯು ತತ್ತ್ವಜ್ಞಾನ, ವಿಜ್ಞಾನ ಹಾಗೂ ಕಲಾ ಕ್ಷೇತ್ರಗಳಲ್ಲಿ ಅಪಾರ ಸಾಧನೆ ಮಾಡಲು ನೆರವಾಗಿರುವುದನ್ನು ನಾವು ಕಾಣುತ್ತೇವೆ. ತಾಜ್‌ಮಹಲ್, ಅಜಂತ-ಎಲ್ಲೋರ, ಗುಹ್ಯಾಂತರ ಚಿತ್ರರಚನೆ, ಕಾಳಿದಾಸನ ಮೇಘದೂತ ಇವುಗಳ ಸೃಷ್ಟಿಗೆ ಆಟೊಮೊಬೈಲ್‌ಗಳ, ಏರೋಪ್ಲೇನ್‌ಗಳ, ಇಂಟರ್‌ನೆಟ್, ಕೋಕಾ-ಕೋಲಾ ಅಥವಾ ಪೆಪ್ಸಿ-ಕೋಲಾಗಳ ಅಗತ್ಯವೇನೂ ಇರಲಿಲ್ಲವಲ್ಲ.

ಮಾನವ ಶರೀರದಲ್ಲಿ ಯಾವುದೇ ಭಾಗ ತಕ್ಷಣವೇ ಹಿಗ್ಗಿದಲ್ಲಿ ಅದೇನೂ ಆರೋಗ್ಯದ ಲಕ್ಷಣವಾಗುವುದಿಲ್ಲ, ಬದಲು ರೋಗದ ಲಕ್ಷಣವಾಗುತ್ತದೆ. ಅದನ್ನು ಕತ್ತರಿಸಿ ಹಾಕಲು ನಾವು ಶಸ್ತ್ರವೈದ್ಯರ ಬಳಿಗೆ ಹೋಗಬೇಕಾಗುತ್ತದೆ. ಆಧುನಿಕ ಸಮಾಜದಲ್ಲೂ ನಾವು ಯಂತ್ರಕಲೆಯ ಶೀಘ್ರ ಹಿಗ್ಗನ್ನು ಕಾಣುತ್ತಿದ್ದೇವೆ. ಇಂದು ವಿಜ್ಞಾನ ಯಂತ್ರಕಲೆಗಳು ಬಂಡವಾಳದ ಹಾಗೂ ಬಳಕೆಗಾರ ಜೀವನವಿಧಾನದ ಕೈವಶವಾಗಿ ಬಿಟ್ಟಿವೆ. ಇಂದು ಮಾನವ ಪ್ರಗತಿಗೆ ಯಾವುದು ಉತ್ತಮ ಹಾಗೂ ಅಪೇಕ್ಷಣೀಯ ಎಂಬ ಬಗೆಗೆ ಮಾನವರು ನಿರ್ಧಾರ ಕೈಗೊಳ್ಳಬೇಕಾಗಿದೆ. ಈ ಬಳಕೆಗಾರ ಸಮಾಜಕ್ಕೆ ಒಂದು ಬದಲಿಯನ್ನು, ಸಮಾನತೆ ಹಾಗೂ ನ್ಯಾಯಪರತೆಯ, ಸರಳ ಜೀವನ ಹಾಗೂ ಆತ್ಮಾವಲಂಬನೆಯ, ರಾಜಕಾರಣ ಹಾಗೂ ಆರ್ಥಿಕತೆಯ ವಿಕೇಂದ್ರೀಕರಣದ ಗುರಿಯುಳ್ಳ ಒಂದು ಬದಲಿಯನ್ನು, ಶೋಧಿಸಬೇಕಾಗಿದೆ. ಆಗಷ್ಟೆ ವಿಜ್ಞಾನ ಯಂತ್ರಕಲೆಗಳು ಸಮರ್ಥನೀಯ ವಿಕಸನವನ್ನು ತೋರಬಲ್ಲವು. ಮಾನವರು ಸಮೀಪ ಭವಿಷ್ಯತ್ತಿನಲ್ಲೇ ಈಗಿನ ನಿಸರ್ಗ-ವಿನಾಶಕ ಯಂತ್ರಕಲೋನ್ನತಿಯ ಜೀವನಶೈಲಿಯಿಂದ ದೂರ ಸರಿಯುವರು, ವಿಮುಖರಾಗಲಿರುವರು ಎಂದು ಈ ಲೇಖನಕರ್ತೃ ದೃಢವಾಗಿ ನಂಬಿದ್ದಾರೆ.


ಮೂಲ : **ಸಮರ್ ಬಾಗ್‌ಚಿ**

ನಂ. ೧೧ ಎ, ಸುಲ್ತಾನ್ ಆಲಮ್ ರಸ್ತೆ, ಕೊಲ್ಕತ

ಅನುವಾದ : **ಕೆ. ಎಲ್. ಗೋಪಾಲಕೃಷ್ಣ ರಾವ್**

ನಂ. ೨೬೧, ೨ನೇ ಕ್ರಾಸ್, ಪಿ. ಟಿ. ಬೆಡ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

**ವಿಶ್ವದಲ್ಲಿ ಯಾಂತ್ರಿಕತೆ**

ನಂಬಲಾರದ ಯಾವುದಾದರೂ ಆಶ್ಚರ್ಯಕರ ಸಂಗತಿ ಸಂಭವಿಸಿದಾಗ ನಾವು ಅದನ್ನು ಸೂರ್ಯ ಪಶ್ಚಿಮದಲ್ಲಿ ಹುಟ್ಟುವುದಕ್ಕೆ ಹೋಲಿಸುತ್ತೇವೆ. ಏಕೆಂದರೆ, ನಾಳೆ ಮತ್ತೆ ಸೂರ್ಯ ಪೂರ್ವದಲ್ಲೇ ಹುಟ್ಟುವನೆಂದು ನಾವೆಲ್ಲಾ ಆಳವಾಗಿ ನೆಚ್ಚಿಕೊಂಡಿದ್ದೇವೆ. ಇದು ನಮ್ಮೆಲ್ಲರ ಅನುಭವದ ಅಡಿಪಾಯ. ಇದಕ್ಕೆ ಕುಂದುಬಂದಿರುವುದನ್ನು ಯಾರೂ ಕಂಡಿಲ್ಲ. ಹೀಗೆಯೇ, ವಿಶ್ವದಲ್ಲಿ ನಡೆಯುವ ಹೆಚ್ಚಿನ ಘಟನೆಗಳು ನಿಶ್ಚಿತ ನಿಯಮಗಳಿಗೆ ಬದ್ಧವಾಗಿ, ಯಾಂತ್ರಿಕವಾಗಿ, ನಮ್ಮ ಬುದ್ಧಿಶಕ್ತಿಗೆ ಹೊಳೆಯುವ ಕ್ರಮಕ್ಕೆ ಒಳಪಟ್ಟು ನಡೆಯುತ್ತಿವೆ. ವಿಜ್ಞಾನದ ಬೆಳವಣಿಗೆಗೆ, ಅದು ಪ್ರತಿಪಾದಿಸುವ ನಿಯಮಗಳಿಗೆ ಈ ಸಾರ್ವತ್ರಿಕ ಅನುಭವಗಳೇ ಆಧಾರ. ''ತೇನ ವಿನಾ ತೃಣಮಪಿ ನ ಚಲತಿ''ಯಲ್ಲಿ 'ತೇನ' ಭೌತಿಕ ನಿಯಮಗಳನ್ನು ಸೂಚಿಸುತ್ತದೆ ಎಂದಿಟ್ಟುಕೊಂಡರೆ, ವಿಜ್ಞಾನದ ಯಾಂತ್ರಿಕತೆ ಲಭಿಸುತ್ತದೆ. ಈ ನಿಯಮಗಳು ಏಕಿವೆ ಎಂದು ವಿಜ್ಞಾನ ಹೇಳುವುದಿಲ್ಲವಾದರೂ ಪ್ರಪಂಚದಲ್ಲಿ ಈ ನಿಯಮಗಳನ್ನು ಸಾರ್ವತ್ರಿಕವಾಗಿ ಸರ್ವಕಾಲದಲ್ಲೂ ಕಾಣುತ್ತೇವೆ ಎನ್ನುತ್ತದೆ. ಈ ನಿಯಮಗಳ ಆಳ ಪರಿಚಯದಿಂದಲೇ ವಿಜ್ಞಾನ ನಮಗೆ ಲಕ್ಷಾಂತರ ಅನುಕೂಲತೆಗಳನ್ನು ಒದಗಿಸುವ ಸಾಮರ್ಥ್ಯ ಪಡೆದಿದೆ. ವಿಜ್ಞಾನ ಕಂಡುಕೊಂಡಿರುವ ನಿಯಮಗಳನ್ನು ಬಳಸಿ, ಹತ್ತು ವರ್ಷಗಳ ನಂತರ ಸಂಭವಿಸುವ ಚಂದ್ರ, ಸೂರ್ಯರ ಗ್ರಹಣ ಕಾಲವನ್ನು ನಾವು ಇಂದೇ ನಿಖರವಾಗಿ ಹೇಳಬಲ್ಲೆವು. ಇಂತಹ ತೀರ್ಮಾನಕ್ಕೆ ಬರಲು, ನಾವು ಇಂದು ಭೂಮಿ, ಚಂದ್ರ, ಸೂರ್ಯರ ಸ್ಥಾನ, ಅವುಗಳ ಚಲನೆಯ ವೇಗ ಮತ್ತು ದಿಕ್ಕುಗಳು, ನ್ಯೂಟನ್ನನ ಗುರುತ್ವಾಕರ್ಷಣ ನಿಯಮ ಹಾಗೂ ಚಲನೆಯ ನಿಯಮಗಳನ್ನು ಗಣನೆಗೆ ತೆಗೆದುಕೊಳ್ಳುತ್ತೇವೆ. ಈ ನಿಯಮಗಳ ಸಹಾಯದಿಂದ ಸೂರ್ಯ ಭೂಮಿಗಳ ನಡುವೆ, ಭೂಮಿ, ಚಂದ್ರರ ನಡುವೆ ಇರುವ ಆಕರ್ಷಣ ಶಕ್ತಿಯ, ಈ ಆಕರ್ಷಣೆಯಿಂದ ಅವುಗಳ ಪರಸ್ಪರ ಚಲನೆಯ ಮೇಲುಂಟಾಗುವ ಪರಿಣಾಮಗಳ ಪರಿಶೀಲನೆ ಸಾಧ್ಯವಾಗುತ್ತದೆ. ಈ ಆಕಾಶ ಕಾಯಗಳ ಇಂದಿನ ಚಲನೆಯ ದಿಕ್ಕು ಮತ್ತು ವೇಗಗಳು ಗುರುತ್ವಾಕರ್ಷಣೆಯಿಂದ ಬದಲಾಗುವುದನ್ನು, ಅವುಗಳು ಮುಂದೆ ಹೊಂದುವ ಸಾಪೇಕ್ಷ ಸ್ಥಾನಗಳನ್ನು ಗುಣಿಸಲು ಸಾಧ್ಯವಾಗುತ್ತದೆ. ಇದರಿಂದಲೇ, ಮುಂದೆ ಯಾವಾಗ ಭೂಮಿಯ ನೆರಳಿನಲ್ಲಿ ಚಂದ್ರನೂ, ಚಂದ್ರನ ನೆರಳಿನಲ್ಲಿ ಭೂಮಿಯೂ ಪ್ರವೇಶಿಸುತ್ತವೆಂದು ಲೆಕ್ಕ ಹಾಕಲು ಸಾಧ್ಯವಾಗುತ್ತದೆ. ಇವುಗಳನ್ನೇ ನಾವು ಚಂದ್ರಗ್ರಹಣ ಹಾಗೂ ಸೂರ್ಯಗ್ರಹಣ ಎನ್ನುತ್ತೇವೆ. ನಮಗೆ ತಿಳಿದಿರುವಂತೆ ಭೂಮಿ, ಸೂರ್ಯ, ಚಂದ್ರ ಈ ನಿಯಮಗಳನ್ನು ಮೀರಿ ಯಾವಾಗಲೂ ಚಲಿಸಿಲ್ಲ. ಈ ಚಲನೆಯ ನಿಯಮಗಳನ್ನು ನಮಗೆ ಅನೇಕ ಉಪಯುಕ್ತ ರೀತಿಗಳಲ್ಲಿ ಬಳಸಿಕೊಳ್ಳಲು ಸಾಧ್ಯ. ಇದೇ ಚಲನೆಯ ನಿಯಮಗಳ ಆಧಾರದ ಮೇಲೆ, ದೂರ ಸಂವೇದಿ ಉಪಗ್ರಹಗಳನ್ನು ಭೂಸ್ಥಿರ ಕಕ್ಷೆಗಳಿಗೆ ದೂಡಲು ಸಾಧ್ಯವಾಗುತ್ತದೆ. ಭೂಮಿಯ ದ್ರವ್ಯರಾಶಿಯನ್ನು ಗಣನೆಗೆ ತೆಗೆದುಕೊಂಡರೆ ಸುಮಾರು ೩೦,೦೦೦ ಕಿಲೋಮೀಟರ್ ಎತ್ತರದಲ್ಲಿರುವ ಉಪಗ್ರಹ, ಭೂಮಿ ತನ್ನ ಕಕ್ಷೆಯ ಸುತ್ತ ತಿರುಗುತ್ತಿರುವ ಆವರ್ತನ ವೇಗದಲ್ಲೇ ಭೂಮಿಯ ಸುತ್ತ ತಿರುಗುತ್ತದೆ. ಅದರ ಚಲನೆಯ ದಿಕ್ಕು ಭೂಮಿ ತನ್ನ ಕಕ್ಷೆಯ ಸುತ್ತ ತಿರುಗುತ್ತಿರುವ ದಿಕ್ಕೇ ಆಗಿದ್ದಲ್ಲಿ, ಉಪಗ್ರಹ ಭೂಸ್ಥಿರ ಕಕ್ಷೆಯಲ್ಲಿರುತ್ತದೆ. ಎಂದರೆ, ಯಾವಾಗಲೂ ಭೂಮಿಯ ಒಂದೇ ಬಿಂದುವಿನ ಮೇಲಿದ್ದು, ಭೂಮಿಗೆ ಸಾಪೇಕ್ಷವಾಗಿ ಸ್ಥಿರವಾಗಿರುವಂತೆ ತೋರುತ್ತದೆ. ಇಂತಹ ಉಪಗ್ರಹಗಳನ್ನು ಟೀವಿ, ರೇಡಿಯೋ, ಟೆಲಿಫೋನ್ ಸಂಕೇತಗಳನ್ನು ಭೂಮಿಯ ಒಂದೆಡೆಯಿಂದ ಇನ್ನೊಂದೆಡೆಗೆ ರವಾನಿಸಲು ಬಳಸಿಕೊಳ್ಳಲಾಗುತ್ತಿದೆ. ಗಡಿಯಾರಕ್ಕಿಂತಲೂ ಮಿಗಿಲಾದ ವ್ಯವಸ್ಥಿತ ಚಲನೆಯನ್ನು ನಾವು ಈ ಆಕಾಶ ಕಾಯಗಳ ಚಲನೆಯಲ್ಲಿ ಕಾಣುತ್ತೇವೆ.

**ಯಾಂತ್ರಿಕತೆಯ ಸೂಚಿತಾರ್ಥ**

ಯಾಂತ್ರಿಕತೆ ಎಂದರೆ, ಒಂದು ಕ್ಷಣದ ಪರಿಸ್ಥಿತಿಗೂ, ಅದರ ಹಿಂದಿನ ಕ್ಷಣದ ಸ್ಥಿತಿಗೂ ಏಕೈಕ ಹಾಗೂ ತಪ್ಪಿಸಿಕೊಳ್ಳಲಾರದ ಸಂಬಂಧ ಇರುತ್ತದೆನ್ನುವುದು. ಇದು ನಿಜವೇ ಆಗಿದ್ದ ಪಕ್ಷದಲ್ಲಿ, ವಿಶ್ವದ ಇಂದಿನ ಪರಿಸ್ಥಿತಿ ನೆನ್ನೆಯ ಪರಿಸ್ಥಿತಿಯಿಂದ ಅವಶ್ಯವಾಗಿ ಬಂದಿದೆ. ಹಾಗೆಯೇ, ನೆನ್ನೆ ಇದ್ದ ಪರಿಸ್ಥಿತಿ ಮೊನ್ನೆಯ ಪರಿಣಾಮವಾಗಿ ಬಂದಿತ್ತು. ಹೀಗೆಯೇ, ತರ್ಕವನ್ನು ಬೆಳೆಸುತ್ತಾ ಹೋದರೆ, ವಿಶ್ವದ ಇಂದಿನ ಪರಿಸ್ಥಿತಿ, ವಿಶ್ವ ಹುಟ್ಟಿದಾಗಲೇ ನಿರ್ಧಾರವಾಗಿತ್ತು ಎಂದು ತೀರ್ಮಾನಿಸಬೇಕಾಗುತ್ತದೆ. ವರ್ತಮಾನ ಭೂತದಲ್ಲಿ, ಭವಿಷ್ಯ ವರ್ತಮಾನದಲ್ಲಿ ಅಡಗಿದೆ ಎನ್ನುವುದೇ ಯಾಂತ್ರಿಕತೆ. ನಮ್ಮ ಇಂದ್ರಿಯ ಗೋಚರ ಪ್ರಪಂಚ ನ್ಯೂಟನ್ನನ ಯಾಂತ್ರಿಕ ನಿಯಮಗಳನ್ನು ಚಾಚೂ ತಪ್ಪದಂತೆ ನಡೆದುಕೊಳ್ಳುತ್ತಿರುವಂತೆ ತೋರುತ್ತದೆ. ಆದ್ದರಿಂದ ನಮ್ಮ ವಿಶ್ವವ್ಯಾಪಾರದಲ್ಲಿ, ನಾಳಿನ ಸ್ಥಿತಿ ಇಂದಿನ ಸ್ಥಿತಿಯಲ್ಲೇ ಅಡಗಿದೆ ಎನ್ನಬೇಕಾಗುತ್ತದೆ. ಹಾಗಾದರೆ, ಇಂದಿನ ಪರಿಸ್ಥಿತಿಯಿಂದ ನಾಳಿನ ಪರಿಸ್ಥಿತಿಯನ್ನು ಊಹಿಸಲು ಸಾಧ್ಯವಾಗಬೇಕು. ಗ್ರಹಗಳ ಚಲನೆಯಲ್ಲಿ, ಉಪಗ್ರಹಗಳನ್ನು ಉಡಾಯಿಸುವುದರಲ್ಲಿ, ಈ ಊಹೆಗಳು ಬಹುಮಟ್ಟಿಗೆ ಸರಿ.

**ನಿತ್ಯ ಅನುಭವದಲ್ಲಿ ಯಾಂತ್ರಿಕತೆಯನ್ನು ಕಾಣುತ್ತೇವೆಯೇ?**

ಹಲವಾರು ದಿನನಿತ್ಯದ ನಮ್ಮ ಅನುಭವಗಳನ್ನು ಮುಂಚಿತವಾಗಿ ಊಹಿಸಲು ಸಾಧ್ಯವೇ ಇಲ್ಲ. ನೀವು ಮುಂದಿನ ಸಲ ಹೋಟೆಲಿಗೆ ಹೋದಾಗ ಯಾವ ತಿಂಡಿ ತಿನ್ನಬಹುದೆಂದು ನಿಮಗೆ ತಿಳಿಯದೆ ಇರಬಹುದು. ನೀವು ಚಿಕ್ಕ ಮಕ್ಕಳನ್ನು ಉಳ್ಳವರಾದರೆ, ನಿಮ್ಮ ಮಕ್ಕಳು ಮುಂದೆ ಏನು ಓದಬಹುದು? ಎಲ್ಲಿ ಕೆಲಸ ಮಾಡಬಹುದು? ನಿಮ್ಮ ಇಳಿ ವಯಸ್ಸನ್ನು (ಅಲ್ಲಿಯವರೆಗೆ ಬದುಕಿರುತ್ತೀರಾ?) ಹೇಗೆ, ಎಲ್ಲಿ ಕಳೆಯಬಹುದು ಮುಂತಾದುವೆಲ್ಲ ನಿಮಗೆ ತಿಳಿದಿರುವುದಿಲ್ಲ. ಇದೇ ರೀತಿ, ಬರುವ ತಿಂಗಳು ಬೆಂಗಳೂರಿನ ಹವೆ ಹೇಗಿರಬಹುದೆಂದು ಯಾರೂ ನಿಖರವಾಗಿ ಹೇಳಲಾರರು. ಮುಂಬರುವ ವರ್ಷಗಳಲ್ಲಿ ಮಳೆಯ ಪ್ರಮಾಣ ಎಷ್ಟಿದ್ದೀತು?, ನಮ್ಮ

**ಪ್ರೊ|| ಎಮ್. ಆರ್. ಎನ್. ಮೂರ್ತಿ**

# ಗೊಂದಲ, ಯಾಂತ್ರಿಕತೆ, ಇಚ್ಛಾಶಕ್ತಿ

ನಮ್ಮ ಮನಸ್ಸು ನಮಗೆ ಇಚ್ಛಾಶಕ್ತಿ ಇಲ್ಲವೆಂದು ನಂಬಲು ಬಿಡುವುದಿಲ್ಲ. ''ಮುಂದಿನ ಕ್ಷಣ ನಾನೇನು ಮಾಡಬೇಕೆಂಬುದನ್ನು ನಾನೇ ನಿರ್ಧರಿಸುತ್ತೇನೆ. ಅದನ್ನು ನನಗೆ ಇಷ್ಟಬಂದಂತೆ ಆರಿಸಿಕೊಳ್ಳುವ ಹಕ್ಕು ನನಗಿದೆ'' ಎನ್ನುತ್ತದೆ ಮನಸ್ಸು. ಆದರೆ ಈ ಇಚ್ಛಾಶಕ್ತಿಯ ಸ್ವರೂಪವೇನೆಂಬುದು ಮಾತ್ರ ಯಾರಿಗೂ ತಿಳಿದಿಲ್ಲ. ನಮ್ಮ ಆಯ್ಕೆ ಯಾವುದೇ ಪೂರ್ವ ಕಾರಣಗಳಿಂದ ಬಂದಿಲ್ಲ ಎನ್ನೋಣ. ಹಾಗಾದರೆ ನಾವು ಕೈಗೊಳ್ಳುವ ಕೆಲಸಗಳೆಲ್ಲಾ ಹುಚ್ಚರ ಕ್ರಿಯೆಗಳೇ? ಹುಚ್ಚರು ಕೆಲವೊಮ್ಮೆ ನಗುತ್ತಾರೆ, ಕೆಲವೊಮ್ಮೆ ಅರಚಿಕೊಳ್ಳುತ್ತಾರೆ. ಇದೆಲ್ಲಾ ಹೊರನೋಟಕ್ಕೆ ಏನೂ ಕಾರಣವಿಲ್ಲದೇ ಮಾಡುವ ಕ್ರಿಯೆಗಳು ಎನ್ನಿಸುತ್ತವೆ. ನಿಜವಾಗಿಯೂ ನಮ್ಮ ಕ್ರಿಯೆಗಳಿಗೆ ಏನೂ ಕಾರಣಗಳಿಲ್ಲದಿದ್ದರೆ, ಹುಚ್ಚರ ವರ್ತನೆಗಿಂತ ಹೇಗೆ ಬೇರೆಯಾಗುತ್ತವೆ? ನಮ್ಮ ವರ್ತನೆಗಳಿಗೆ ಕಾರಣಗಳಿದ್ದರೆ, ನಾವು ಸಕಾರಣದಿಂದ (ನಮ್ಮ ದೇಹದಲ್ಲಾಗುವ ಭೌತಿಕ, ರಾಸಾಯನಿಕ ಬದಲಾವಣೆಗಳ ಕಾರಣದಿಂದ) ಕ್ರಿಯೆಯಲ್ಲಿ ತೊಡಗಿದ್ದೇವೆಯೇ ಹೊರತು, ಸ್ವ–ಇಚ್ಛೆಯಿಂದಲ್ಲ.

ರಾಜ್ಯದ ಆರ್ಥಿಕ ಬೆಳೆಗಳಾದ ಅಡಿಕೆ, ಕಾಫಿಗಳ ಬೆಲೆ ಹೇಗೆ ಬದಲಾಗಬಹುದೆಂದು ಹೇಳುವುದೂ ನಮಗೆ ಸಾಧ್ಯವಿಲ್ಲ. ನಾಳೆ ಶೇರು ಮಾರುಕಟ್ಟೆ ಹೇಗೆ ಬದಲಾಗುತ್ತದೆಂದು ಖಚಿತವಾಗಿ ತಿಳಿಯಬಲ್ಲ ವ್ಯಕ್ತಿ ಶೇರು ವ್ಯವಹಾರದಲ್ಲಿ ಕೈಸುಟ್ಟುಕೊಳ್ಳುವುದಿಲ್ಲ. ಯಾವ ಕುದುರೆ ಗೆಲ್ಲುತ್ತದೆಂಬುದು ಎಲ್ಲರಿಗೂ ತಿಳಿದುಬಿಟ್ಟರೆ, ಕುದುರೆ ಜೂಜನ್ನು ಯಾರೂ ಆಡುವುದಿಲ್ಲ! ಭವಿಷ್ಯದ ಬಗ್ಗೆ ನಮ್ಮ ಅರಿವು ಹೀಗೆ ಮಿತಿಯಾಗಿರಲು ಏನು ಕಾರಣ? ಇಂದಿನ ಪರಿಸ್ಥಿತಿಯ ಪೂರ್ಣ ಪರಿಚಯ ನಮಗಿಲ್ಲದಿರುವುದೇ ಕಾರಣವೇ? ಹಾಗೆ ತಿಳಿದಿದ್ದರೆ, ನಮಗೆ ನಾಳಿನ ಸ್ಥಿತಿಯನ್ನು ಊಹಿಸಲು ಬಂದೀತೇ? ಹವಾಮಾನವನ್ನು ಮುಂಚಿತವಾಗಿ ಊಹಿಸುವ ಸಮಸ್ಯೆಯನ್ನೇ ಉದಾಹರಣೆಗೆ ತೆಗೆದುಕೊಳ್ಳೋಣ. ಇದು ಅತಿ ಮುಖ್ಯ ಸಮಸ್ಯೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ನಮಗೆ ವರ್ಷವಿಡೀ ಇರಬಹುದಾದ ಹವಾ ಪರಿಸ್ಥಿತಿಯನ್ನು ಮುಂಚಿತವಾಗಿ ಊಹಿಸಲು. ಸಾಧ್ಯವಾದರೆ, ರೈತರು ಅತಿವೃಷ್ಟಿಯಿಂದಲೋ, ಅನಾವೃಷ್ಟಿಯಿಂದಲೋ ಕೈಸುಟ್ಟುಕೊಳ್ಳುವುದನ್ನು ತಪ್ಪಿಸಬಹುದು. ಹವಾಮಾನ ಮುನ್ಸೂಚನೆಗೆ ಹಲವಾರು ಅಡಚಣೆಗಳುಂಟು. ನೆನ್ನೆಯ ಸುತ್ತಮುತ್ತಲ ನೂರಾರು ಸ್ಥಾನಗಳಲ್ಲಿ ಹವೆ ಹೇಗಿತ್ತು, ಎಲ್ಲಿ ಯಾವ ದಿಕ್ಕಿನಲ್ಲಿ, ಎಷ್ಟು ವೇಗದಿಂದ ಗಾಳಿ ಬೀಸಿತು, ಉಷ್ಣತೆಯ ಮಟ್ಟ ಎಷ್ಟಿತ್ತು, ಮೋಡಗಳು ಹೇಗೆ ಚಲಿಸುತ್ತಿದ್ದವು ಎಂಬೆಲ್ಲ ವಿಚಾರಗಳನ್ನು ಗಣನೆಗೆ ತೆಗೆದುಕೊಂಡು ಇಂದಿನ ಹವಾಮಾನವನ್ನು ಗುಣಿಸಬೇಕಾಗುತ್ತದೆ. ಆದ್ದರಿಂದಲೇ, ಹವಾಮಾನ ವರದಿ ಕೇಂದ್ರಗಳು, ದೇಶದ, ಪ್ರಪಂಚದ ಎಲ್ಲ ವೀಕ್ಷಣಾಲಯಗಳ ವರದಿ ಸಂಗ್ರಹಿಸಿ, ಅವುಗಳನ್ನು ಬಳಸಿ, ಉದ್ದನೆಯ ಲೆಕ್ಕಗಳನ್ನು ಮಾಡಿ, ನಾಳಿನ ಹವಾಮಾನದ ಬಗ್ಗೆ ಮುನ್ಸೂಚನೆ ನೀಡುತ್ತವೆ. ಆದರೂ, ಇಷ್ಟೆಲ್ಲ ಪ್ರಯತ್ನಗಳ ನಂತರವೂ ಬರಿಯ ಮುಂದಿನ ೨೪ ತಾಸುಗಳ, ಅದೃಷ್ಟವಿದ್ದರೆ, ಮುಂದಿನ ೪೮ ತಾಸುಗಳಲ್ಲಿ ಒದಗಿಬರುವ ಹವಾಮಾನ ಪರಿಸ್ಥಿತಿಯ ಲೆಕ್ಕ ಸರಿಯಾದೀತು. ಮುಂಬರುವ ವಾರದ ಹವಾಮಾನವನ್ನು ಯಾವ ಆಧುನಿಕ ಕೇಂದ್ರವೂ ತಪ್ಪಿಲ್ಲದೇ ಹೇಳಲಾರದು. ಮುಂಬರುವ ವರ್ಷದ ಹವಾಮಾನವನ್ನು ಲೆಕ್ಕಹಾಕುವುದು ದೂರವೇ ಉಳಿಯುತ್ತದೆ. ಆದ್ದರಿಂದ, ನಿತ್ಯಜೀವನದಲ್ಲಿ ಯಾಂತ್ರಿಕತೆ ಇರಲಿ, ಬಿಡಲಿ, ನಮಗಂತೂ ಯಾಂತ್ರಿಕತೆಯ ಆಧಾರದ ಮೇಲೆ ಭವಿಷ್ಯದ ಬಗ್ಗೆ ಖಚಿತವಾಗಿ ನುಡಿಯುವುದು, ತಿಳಿಯುವುದು ಅಸಾಧ್ಯ.

**ಭವಿಷ್ಯವನ್ನು ಊಹಿಸುವುದರಲ್ಲಿ ಇನ್ನೇನಾದರೂ ಸಮಸ್ಯೆಗಳಿವೆಯೇ?**

ಇಂತಹ ಲೆಕ್ಕಾಚಾರಗಳಲ್ಲಿ ಬಿಡಿಸಲಾರದ ಕಗ್ಗಂಟಿನಂತಹ ಸಮಸ್ಯೆಗಳಿವೆಯೇ? ನಮ್ಮ ಮಾಹಿತಿ ಸಂಗ್ರಹಿಸುವ ಸಾಮರ್ಥ್ಯ ಹಾಗೂ ಗಣಿತದ ಪರಿಶ್ರಮ ಅತ್ಯಂತ ಉನ್ನತಮಟ್ಟದ್ದಾದರೂ, ಪರಿಹರಿಸಲಾರದ ಇನ್ನೇನಾದರೂ ಸಮಸ್ಯೆಗಳಿವೆಯೇ? ಇಂದಿನ ಪರಿಸ್ಥಿತಿಯನ್ನು ಅತ್ಯಂತ ವಿಶದವಾಗಿ ನಮಗೆ ತಿಳಿಯಲು ಸಾಧ್ಯವಾಗಿ, ನಮಗೆ ಲೆಕ್ಕಾಚಾರ ಮಾಡುವ ಅಪರಿಮಿತ ಶಕ್ತಿಯಿದ್ದರೆ, ಭವಿಷ್ಯದ ಬಗ್ಗೆ ಖಚಿತವಾಗಿ ನುಡಿಯ ಬಲ್ಲೆವೇ? ಇಂತಹ ವಿಷಯಗಳನ್ನು ಕುರಿತು ಕೈಗೊಂಡಿರುವ ಸಂಶೋಧನೆಗಳು, ಭವಿಷ್ಯದ ಲೆಕ್ಕಾಚಾರಗಳಲ್ಲಿರುವ ಹಲವಾರು ಸಮಸ್ಯೆಗಳ ಮೇಲೆ ಹೊಸ ಬೆಳಕು ಚೆಲ್ಲಿ, ಇದು ಎಷ್ಟು ಕಷ್ಟ ಸಾಧ್ಯ ಎಂಬುದನ್ನು ಮನವರಿಕೆ ಮಾಡಿಕೊಟ್ಟಿವೆ.

ಈ ಸಮಸ್ಯೆಗಳನ್ನು ತಿಳಿಯಲು ಒಂದು ಸರಳ ಸನ್ನಿವೇಶವನ್ನು ಗಮನಿಸೋಣ. ನಮ್ಮಲ್ಲಿ ವರ್ಷಂಪ್ರತಿ ಅನೇಕ ಕಡೆ ಹೆಂಗಳೆಯರು ಕಾರ್ತಿಕಮಾಸದಲ್ಲಿ ಹೊಳೆಗಳಲ್ಲಿ ದೀಪಗಳನ್ನು ತೇಲಿಬಿಡುತ್ತಾರೆ. ಅಕ್ಕಪಕ್ಕದಲ್ಲಿ ತೇಲಿಬಿಟ್ಟ ಎರಡು ದೀಪಗಳನ್ನು ಗಮನಿಸಿ. ಹೊಳೆಯ ನೀರು ಶಾಂತವಾಗಿ ಹರಿಯುತ್ತಿದ್ದರೆ, ದೀಪಗಳು ಬಹಳ ದೂರ ಅಕ್ಕಪಕ್ಕಗಳಲ್ಲೇ ಚಲಿಸುತ್ತವೆ. ಅದೇ ಪ್ರವಾಹ ಬಂದಾಗ ತೀರ ಸನಿಹದಲ್ಲಿ ದೀಪಗಳನ್ನು ಬಿಟ್ಟರೂ, ಅಲ್ಪಕಾಲದಲ್ಲೇ ದೀಪಗಳು ಅಜಗಜಾಂತರ ಬೇರ್ಪಡಬಹುದು. ಅವುಗಳ ಸಾಪೇಕ್ಷ ಸ್ಥಾನಗಳನ್ನು ನಾವು ನಿಖರವಾಗಿ ಊಹೆ ಮಾಡಲಾರೆವು. ಹಾಗೆಯೇ ಪ್ರವಾಹದ ಒಂದೇ ತಾಣದಲ್ಲಿ ಎರಡು ಚೆಂಡುಗಳನ್ನು ಒಂದರ ನಂತರ ಮತ್ತೊಂದರಂತೆ ತೇಲಿಬಿಟ್ಟರೆ, ಅವೆರಡೂ ಒಂದೇ. ಪಥದಲ್ಲಿ ಚಲಿಸುವ ಸಾಧ್ಯತೆ ಕಡಿಮೆ. ಅವುಗಳು ತೇಲಿಹೋಗುವ ಮಾರ್ಗಗಳು ಬಹಳ ಬೇರೆಯಾಗಬಹುದು. ಭವಿಷ್ಯದ ನಿರ್ಧಾರದಲ್ಲಿ

ಯಾಂತ್ರಿಕ ನಿಯಮಗಳ ಉಪಯೋಗ ಸಾಧ್ಯವಾಗಲು ಒಂದು ಪೂರ್ವ ಶರತ್ತಿದೆ. ಅದೇನೆಂದರೆ, ಇಂದಿನ ಪರಿಸ್ಥಿತಿ ಸ್ವಲ್ಪ ಮಾತ್ರ ಬದಲಿಸಿದರೆ, ನಾಳೆ ಒದಗಿಬರುವ ಪರಿಸ್ಥಿತಿಯಲ್ಲೂ ಸ್ವಲ್ಪ ಮಾತ್ರ ಬದಲಾಗಬೇಕು. ಇಂದಿನ ಪರಿಸ್ಥಿತಿಯಲ್ಲಿ ಕಡಿಮೆ ವ್ಯತ್ಯಾಸವಾದಷ್ಟೂ, ನಾಳೆ ಸಂಭವಿಸುವ ಆಗುಹೋಗುಗಳಲ್ಲಿನ ವ್ಯತ್ಯಾಸವೂ ಕಡಿಮೆಯಾಗುತ್ತಾ ಹೋಗಬೇಕು. ಹೀಗಿದ್ದರೆ ಮಾತ್ರ ಇಂದಿನ ಪರಿಸ್ಥಿತಿಯಿಂದ ನಾಳಿನ ಪರಿಸ್ಥಿತಿ ಊಹಿಸಲು ಸಾಧ್ಯ. ಪ್ರವಾಹದ ನೀರಿನ ರಭಸದ ಓಟದಲ್ಲಿ ಈ ನಿಯಮ ಮುರಿದು ಬೀಳುತ್ತದೆ. ತೀರ ಸನಿಹದಲ್ಲಿ ಎರಡು ತೇಲು ವಸ್ತುಗಳನ್ನು ಬಿಟ್ಟರೂ, ಅವುಗಳ ಭವಿಷ್ಯದ ಸ್ಥಾನಗಳಲ್ಲಿ ಅಜಗಜಾಂತರ ವ್ಯತ್ಯಾಸಗಳು ಏರ್ಪಡುವುದು ಸಾಧ್ಯ. ಆದ್ದರಿಂದ ಇಂದಿನ ಪರಿಸ್ಥಿತಿಯ ಬಗ್ಗೆ ನಮ್ಮ ಮಾಹಿತಿಯಲ್ಲಿ ಅತಿ ಸಣ್ಣ ತಪ್ಪಿದ್ದರೂ, ನಮ್ಮ ಭವಿಷ್ಯದ ಲೆಕ್ಕಾಚಾರ ತಲೆಕೆಳಗಾಗುತ್ತದೆ. ಇದರಿಂದ ಯಾಂತ್ರಿಕತೆ ಮುರಿದು ಬಿದ್ದಿದೆ ಎಂದು ಹೇಳಿದ ಹಾಗಾಗುವುದಿಲ್ಲ. ವಿಶ್ವ ಯಾಂತ್ರಿಕವೇ ಆಗಿದ್ದರೂ, ನಾವು ಇಂದಿನ ಪರಿಸ್ಥಿತಿಯನ್ನು ಎಷ್ಟೇ ಜಾಗರೂಕತೆಯಿಂದ ಗಮನಿಸಿದ್ದರೂ, ನಮ್ಮ ತಿಳಿವು ಭವಿಷ್ಯದ ಲೆಕ್ಕಾಚಾರಕ್ಕೆ ಸಾಕಾಗುವುದಿಲ್ಲ. ಇಂತಹ ಪರಿಸ್ಥಿತಿಗೆ 'ಖೇಯಾಸ್' (chaos) ಅಥವಾ ಗೊಂದಲ ಎನ್ನಬಹುದು. "ಬೆಂಗಳೂರಿನಲ್ಲಿ ಚಿಟ್ಟೆ ರೆಕ್ಕೆ ಬಿಚ್ಚಿದ್ದಕ್ಕೆ ಹಿಮಾಲಯ ನಡುಗಬಹುದು" ಎನ್ನುತ್ತದೆ ಗೊಂದಲ. ಚಿಟ್ಟೆ ರೆಕ್ಕೆ ಬಿಚ್ಚಿದೊಡನೇ ಹಿಮಾಲಯ ನಡುಗಲಾರದು. ಆದರೆ, ರೆಕ್ಕೆ ಬಿಚ್ಚಿದ ಪರಿಣಾಮವಾಗಿ ಒಂದಾನೊಂದು ದಿನ ಹಿಮಾಲಯ ನಡುಗಬಹುದು. ಇದಕ್ಕೆ ಸಮಂಜಸವಲ್ಲದ ಆದರೆ ಸುಲಭವಾಗಿ ತಿಳಿಯಬಹುದಾದ ಒಂದು ಉದಾಹರಣೆಯನ್ನು ಕೊಡಬಹುದು. ಒಂದು ಟನ್ ಭಾರವಿರುವ ಕಬ್ಬಿಣದ ಉಂಡೆಯನ್ನು ಅನೇಕ ತೆಳು ದಾರಗಳಿಂದ ಎತ್ತಿ ಕಟ್ಟಲಾಗಿದೆ ಎನ್ನೋಣ, ಒಂದೊಂದೇ ದಾರವನ್ನು ತುಂಡಿಕ್ಕುತ್ತಾ ಬಂದರೆ, ಒಂದು ನಿರ್ದಿಷ್ಟ ದಾರ ಕಡಿದಾಗ, ಉಳಿದ ದಾರಗಳು ಭಾರ ತಡೆಯಲು ಅಸಮರ್ಥವಾಗಿ ಕಬ್ಬಿಣದ ಉಂಡೆ ಕಳಚಿಬೀಳುತ್ತದೆ. ಕಡೆಯಲ್ಲಿ ಕತ್ತರಿಸಿದ ಒಂಟಿ ತೆಳು ದಾರವೇ ಕಬ್ಬಿಣದ ಉಂಡೆಯನ್ನು ಎತ್ತಿ ಹಿಡಿದಿಲ್ಲವಾದರೂ, ಅದಿದ್ದಾಗ ಕಬ್ಬಿಣ ಕೆಳಗೆ ಬೀಳದೆ ನಿಂತಿರುತ್ತದೆ, ಅದು ತುಂಡಾದೊಡನೇ ಕಳಚಿ ಬೀಳುತ್ತದೆ.

**ನಮ್ಮ ಜೀವನವೂ ಇದೇ ರೀತಿ ಗೊಂದಲಮಯವಾಗಿದೆಯೇ?**

ನಮ್ಮ ಜೀವನವೂ ಕೂಡಾ ಇದೇ ರೀತಿ ಗೊಂದಲಮಯವಾಗಿದೆ ಎಂಬುದು ನಿಮ್ಮ ಅನುಭವವನ್ನೆಲ್ಲಾ ಮೆಲುಕುಹಾಕಿದರೆ ಮನದಟ್ಟಾಗುವುದು. ನೀವು ಏನನ್ನು ಓದಿದಿರಿ ? ಹಣ ಸಂಪಾದಿಸಲು ಯಾವ ವೃತ್ತಿಯನ್ನು ಆರಿಸಿಕೊಂಡಿರಿ ? ಎಷ್ಟರಮಟ್ಟಿಗೆ ನಿಮ್ಮ ನಿರ್ಧಾರದಂತೆ ನಿಮ್ಮ ಜೀವನವೆಲ್ಲಾ ಸಾಗಿದೆ, ಯೋಚಿಸಿ ನೋಡಿ. ಇದರಲ್ಲಿ ಆಕಸ್ಮಿಕಗಳೇ ಹೆಚ್ಚು, ಯಾವುದೋ ಒಂದು ದಿನ ಒಂದು ಶಾಲೆಯ ಬದಲು ಇನ್ನೊಂದು ಶಾಲೆಗೆ ಸೇರಿದಿರಿ. ಇದೇ ನಿಮ್ಮ ಮುಂದಿನ ವೃತ್ತಿ ಜೀವನವನ್ನು ನಿರ್ಧರಿಸಿರಬಹುದು. ಇಂಜಿನಿಯರಿಂಗ್ ಕಾಲೇಜಿನಲ್ಲಿ, ಮೆಡಿಕಲ್ ಕಾಲೇಜಿನಲ್ಲಿ ನಿಮಗೆ ಸೀಟು ದೊರಕಿರಬಹುದು. ಆ ಕ್ಷಣದಲ್ಲಿ ನೀವು ತೆಗೆದುಕೊಂಡ ತೀರ್ಮಾನ, ನೀವು ಜೀವನ ನಡೆಸುವ ಪರಿಯನ್ನು, ನೀವು ವ್ಯವಹಾರ ಇಟ್ಟುಕೊಳ್ಳಬೇಕಾಗುವ ವ್ಯಕ್ತಿಗಳನ್ನು ನಿರ್ಧರಿಸುತ್ತದೆ. ಜೊತೆಗೇ, ಬೇರೆಯವರು ಮಾಡುವ ತೀರ್ಮಾನಗಳು ನಮ್ಮ ಜೀವನವನ್ನು ಬಹಳ ಬದಲಿಸ ಬಹುದು. ಎಷ್ಟೇ ವ್ಯವಸ್ಥಿತವಾಗಿ ಬದುಕಲು ಪ್ರಯತ್ನಿಸಿದರೂ, ನಮ್ಮ ಜೀವನದಲ್ಲಿ ಅನಿರೀಕ್ಷಿತ ಘಟನೆಗಳಾಗುವುದನ್ನು ತಪ್ಪಿಸಲಾಗುವುದಿಲ್ಲ. ಅನಿರೀಕ್ಷಿತ ಅಪಘಾತದಿಂದ ನಮ್ಮ ಅಂಗ ಸ್ವಾಧೀನ್ಯ ಕುಂಠಿತವಾಗ ಬಹುದು. ಇಲ್ಲಿಯ ಆರ್ಥಿಕ ಸ್ವಾಸ್ಥ್ಯ ಪ್ರಪಂಚದ ಬೇರೆಡೆ ನಡೆಯುತ್ತಿರುವ ವಿದ್ಯಮಾನಗಳಿಗೆ ಸ್ಪಂದಿಸುತ್ತದೆ. ಯುದ್ಧ ನಡೆದಿದೆಯೇ, ಕ್ಷಾಮ ಬಡಿದಿದೆಯೇ, ಅಮೆರಿಕಾದ ಅಧ್ಯಕ್ಷರಿಗೆ ಅಜೀರ್ಣವಾಗಿದೆಯೇ ? ಇದೆಲ್ಲಾ ನಮ್ಮ ದೈಹಿಕ, ಮಾನಸಿಕ ಸುಖಗಳ ಮೇಲೆ ತಮ್ಮ ನೆರಳು ಚೆಲ್ಲಬಹುದು. ಆದ್ದರಿಂದ ನಾವೆಲ್ಲಾ ಪ್ರವಾಹದ ನೀರಿನಲ್ಲಿ ತೇಲಿ ಹೋಗುತ್ತಿರುವ ದೀಪದಂತೆ ನಮ್ಮ ಜೀವನವನ್ನು ನಡೆಸುತ್ತೇವೆ. ನಮ್ಮ ಸಣ್ಣ ತೀರ್ಮಾನಗಳೂ ಮುಂದೆ ನಮಗಾಗುವ ಅನುಭವ ಗಳನ್ನು ಪೂರ್ಣ ಬದಲಿಸಿಬಿಡಬಹುದು. ನಮ್ಮದಲ್ಲದ ಇನ್ನಾರದ್ದೋ ತೀರ್ಮಾನ, ಕಾರ್ಯಗಳಿಂದ ನಮ್ಮ ಜೀವನ ಪೂರ್ಣ ಬದಲಾಗಬಹುದು! ಇದೆಲ್ಲದರ ಸೂಚಿತಾರ್ಥವೆಂದರೆ, ಮುಂದಿನ ವರ್ಷದ ಹವಾಮಾನದಂತೆ, ನಮ್ಮ ಭವಿಷ್ಯದಲ್ಲಾಗುವ ಘಟನೆಗಳನ್ನು ನಮಗೆ ತಿಳಿಯಲು ಸಾಧ್ಯವೇ ಇಲ್ಲ. ಆದ್ದರಿಂದಲೇ, ಭವಿಷ್ಯವನ್ನು ಹೇಳುವ ಜಾತಕ ಫಲ ಯಾವುದೋ ಕಾಲದ ಕುರುಡು ನಂಬಿಕೆ ಇಲ್ಲವೇ ಕೆಲವರ ಜೇಬು ತುಂಬಿಸಿಕೊಳ್ಳುವ ಉಪಾಯವಲ್ಲದೆ ಮತ್ತೇನೂ ಆಗಿರಲು ಸಾಧ್ಯವಿಲ್ಲ!

**ಮನುಷ್ಯನ ಇಂದ್ರಿಯಗಳು ಮತ್ತು ಮನಸ್ಸು ಯಾಂತ್ರಿಕವಾಗಿ ನಡೆದುಕೊಳ್ಳುತ್ತವೆಯೇ?**

ಜಡವಸ್ತುಗಳಿಂದ ಕೂಡಿರುವ ವಿಶ್ವದ ಯಾಂತ್ರಿಕತೆಯ ಬಗ್ಗೆ ಯಾರದ್ದೂ ಹೆಚ್ಚು ತಕರಾರಿಲ್ಲ. ವಿಶ್ವ ನಿಯಮಬದ್ಧವಾಗಿ ನಡೆಯುವುದರಿಂದಲೇ ನಾವು ಕೈಗೆತ್ತಿಕೊಳ್ಳುವ ಕೆಲಸಗಳಲ್ಲಿ ನಮಗೆ ನಂಬಿಕೆ ಇರಿಸಲು ಸಾಧ್ಯ. ನೀವು ಭದ್ರವಾಗಿ ಕಪಾಟಿನಲ್ಲಿಟ್ಟ ಹಣ ಯಾರೂ ಅಪಹರಿಸದಿದ್ದರೆ, ಅಲ್ಲಿಯೇ ಇರುತ್ತದೆಂದು ನಂಬದಿದ್ದರೆ ಹುಚ್ಚು ಹಿಡಿದೀತು. ನಮ್ಮ ದೇಹವೂ ಭೌತಿಕ ವಸ್ತುಗಳಿಂದಲೇ ಮಾಡಲ್ಪಟ್ಟಿದೆ. ಆದ್ದರಿಂದ ನಮ್ಮ ದೇಹ ಕೂಡಾ ಯಾಂತ್ರಿಕವಾಗಿಯೇ ನಡೆದು ಕೊಳ್ಳುತ್ತಿದೆಯೇ ? ಹೌದು ಎಂದಾದರೆ, ಇಚ್ಛಾ ಸ್ವಾತಂತ್ರ್ಯಕ್ಕೆ ಅರ್ಥವಿಲ್ಲ, ನಮ್ಮ ಚಟುವಟಿಕೆಗಳೆಲ್ಲಾ ಗಡಿಯಾರದಂತೆ ಹಿಂದಿನ ಪರಿಸ್ಥಿತಿಯನ್ನು ಅನುಸರಿಸಿ ಇಂದಿನ ಕ್ರಿಯೆಯಲ್ಲಿ ಪರ್ಯವಸನಗೊಂಡಿವೆ.

ನಮ್ಮ ಮನಸ್ಸು ನಮಗೆ ಇಚ್ಛಾಶಕ್ತಿ ಇಲ್ಲವೆಂದು ನಂಬಲು ಬಿಡುವುದಿಲ್ಲ. "ಮುಂದಿನ ಕ್ಷಣ ನಾನೇನು ಮಾಡಬೇಕೆಂಬುದನ್ನು ನಾನೇ ನಿರ್ಧರಿಸುತ್ತೇನೆ. ಅದನ್ನು ನನಗೆ ಇಷ್ಟಬಂದಂತೆ ಆರಿಸಿಕೊಳ್ಳುವ ಹಕ್ಕು ನನಗಿದೆ" ಎನ್ನುತ್ತದೆ ಮನಸ್ಸು. ಆದರೆ ಈ ಇಚ್ಛಾಶಕ್ತಿಯ ಸ್ವರೂಪವೇನೆಂಬುದು ಮಾತ್ರ ಯಾರಿಗೂ ತಿಳಿದಿಲ್ಲ. ನಮ್ಮ ಆಯ್ಕೆ ಯಾವುದೇ ಪೂರ್ವ ಕಾರಣಗಳಿಂದ ಬಂದಿಲ್ಲ ಎನ್ನೋಣ. ಹಾಗಾದರೆ ನಾವು ಕೈಗೊಳ್ಳುವ ಕೆಲಸಗಳೆಲ್ಲಾ ಹುಚ್ಚರ ಕ್ರಿಯೆಗಳೇ ? ಹುಚ್ಚರು ಕೆಲವೊಮ್ಮೆ ನಗುತ್ತಾರೆ, ಕೆಲವೊಮ್ಮೆ ಅರಚಿಕೊಳ್ಳುತ್ತಾರೆ. ಇದೆಲ್ಲಾ ಹೊರನೋಟಕ್ಕೆ ಏನೂ ಕಾರಣವಿಲ್ಲದೇ ಮಾಡುವ ಕ್ರಿಯೆಗಳು ಎನ್ನಿಸುತ್ತವೆ. ನಿಜವಾಗಿಯೂ ನಮ್ಮ ಕ್ರಿಯೆಗಳಿಗೆ ಏನೂ ಕಾರಣಗಳಿಲ್ಲದಿದ್ದರೆ, ಹುಚ್ಚರ ವರ್ತನೆಗಿಂತ ಹೇಗೆ ಬೇರೆಯಾಗುತ್ತದೆ ? ನಮ್ಮ ವರ್ತನೆಗಳಿಗೆ ಕಾರಣಗಳಿದ್ದರೆ, ನಾವು ಸಕಾರಣದಿಂದ (ನಮ್ಮ ದೇಹದಲ್ಲಾಗುವ ಭೌತಿಕ, ರಾಸಾಯನಿಕ ಬದಲಾವಣೆಗಳ ಕಾರಣದಿಂದ) ಕ್ರಿಯೆಯಲ್ಲಿ ತೊಡಗಿದ್ದೇವೆಯೇ ಹೊರತು, ಸ್ವ-ಇಚ್ಛೆಯಿಂದಲ್ಲ. ಜೊತೆಗೇ, ಹುಚ್ಚರು ಕಾರಣವಿಲ್ಲದೇ ಭಾವಭಂಗಿಗಳನ್ನು ತೋರ್ಪಡಿಸುತ್ತಾರೆ ಎನ್ನುವುದೂ ಸರಿಯಲ್ಲ. ಬಹುಶಃ ಅವರ ವರ್ತನೆಗೆ ಅವರ ಮೆದುಳಿನ ಅವ್ಯವಸ್ಥಿತ ಕ್ರಿಯೆ ಕಾರಣ. ಅಲ್ಲಿ ನಡೆಯುವ ರಾಸಾಯನಿಕ, ವಿದ್ಯುದಂಶಗಳ ಬದಲಾವಣೆಗಳು ಇತರ ಸಾಮಾನ್ಯ ಜನರ ಮಿದುಳಿ ನಲ್ಲಾಗುವ ಬದಲಾವಣೆಗಳಿಗಿಂತ ಭಿನ್ನವಾಗಿರುವುದೇ ಕಾರಣ. ನನ್ನ ಹಳೆಯ ಕಾರಿನಲ್ಲಿ ಹೊರಟಾಗ, ನಾನು ನನ್ನ ಗುರಿ ಮುಟ್ಟುತ್ತೇನೆಂಬ ಭರವಸೆ ನನಗಿರುವುದಿಲ್ಲ. ಅದು ಯಾವಾಗ, ಎಲ್ಲಿ ತನ್ನ ಅಸಹಕಾರ ಚಳವಳಿ ಪ್ರಾರಂಭಿಸುತ್ತದೆಂದು ಹೇಳುವುದು ಕಷ್ಟ. ಆದರೂ, ಅದಕ್ಕೆ ಸ್ವ-ಇಚ್ಛೆ ಇದೆಯೆಂದು ನಾನು ನಂಬುವುದಿಲ್ಲ. ಶಬ್ದವಿಲ್ಲದೆ ಚಲಿಸುವ ಹೊಸ ಕಾರಿನಷ್ಟೇ, ನನ್ನ ಹಳೆಯ ಕಾರೂ ಯಾಂತ್ರಿಕ. ಆದರೂ ಅದು ಯಾವಾಗ ಏನು ಗುಡುಗುತ್ತದೆಂದು ಹೇಳಲು ಬರುವುದಿಲ್ಲ. ಅದೇ ರೀತಿ, ನಮ್ಮ ಕ್ರಿಯೆಗಳಿಗೂ, ಹುಚ್ಚರ ಕ್ರಿಯೆಗಳಿಗೂ ನಮ್ಮ ಮೆದುಳುಗಳಲ್ಲಿ ಯಾಂತ್ರಿಕವಾಗಿ ನಡೆಯುವ ರಾಸಾಯನಿಕ ಕ್ರಿಯೆಗಳೇ ಕಾರಣವಾಗಿದ್ದು, ನಮ್ಮ ಕ್ರಿಯೆಗಳಲ್ಲಿ ಹುಚ್ಚರಲ್ಲಿಲ್ಲದ ಇಚ್ಛಾಶಕ್ತಿ ಇದೆಯೆಂದು ಹೇಗೆ ತೀರ್ಮಾನಿಸುವುದು ?

**ಜೀವವಿಕಾಸವೂ ಗೊಂದಲಮಯವಾಗಿರಬಹುದು**

ಭೂಮಿಯ ಮೇಲೆ ಜೀವವಿಕಾಸವಾಗಿ ಸುಮಾರು ಮುನ್ನೂರು ಕೋಟಿ ವರ್ಷಗಳೇ ಸಂದಿವೆ. ಜೀವ ವಿಕಾಸದ ಪಥದಲ್ಲಿ ಬದುಕಿ ಉಳಿದಿರುವ ಜೀವಜಾತಿ ಗಳಿಗಿಂತ, ನಶಿಸಿ ಹೋಗಿರುವವೇ ಅತಿ ಹೆಚ್ಚು. ಜೀವಿಗಳಲ್ಲಿ ಕಾಣಿಸಿಕೊಳ್ಳುವ ಬದಲಾವಣೆಗಳೂ ಆಕಸ್ಮಿಕ. ಕಾಸ್ಮಿಕ್ ಕಿರಣಗಳ ಆಘಾತದಿಂದಲೋ, ರಾಸಾಯನಿಕ ವಸ್ತುಗಳ ಸಂಪರ್ಕದಿಂದಲೋ ಅಥವಾ ಕೆಲವೊಮ್ಮೆ ಯಾವ ಕಾರಣವೂ ಇಲ್ಲದೆ, ಜೈವಿಕ ಮಾಹಿತಿಯ ನಕಲಿನಲ್ಲಿ ಕಾಣಿಸಿಕೊಳ್ಳುವ ವ್ಯತ್ಯಾಸ ಗಳಿಂದಲೋ ಈ ಬದಲಾವಣೆಗಳು ಕಾಣಿಸಿಕೊಳ್ಳುತ್ತವೆ. ಆದ್ದರಿಂದ ಮುಂದೆ ಬರಬಹುದಾದ ಜೀವವೈಪರೀತ್ಯ ಗಳನ್ನು ಮುಂಚಿತವಾಗಿ ಊಹಿಸಲು ಬರುವುದಿಲ್ಲ. ಒಂದು ಜೀವಿ ಬದುಕಿ ಬೆಳೆಯುವುದು, ಅದರ ಸ್ವಭಾವವನ್ನಲ್ಲದೆ, ಅದು ಬದುಕಿರುವ ಪರಿಸರದಲ್ಲಿರುವ ಇತರ ಜೀವಿಗಳ ಸ್ವಭಾವಗಳಿಗೂ ಅಂಟಿಕೊಂಡಿರುತ್ತದೆ.

ಒಂದು ಹೊಸ ಜೀವಜಾತಿಯ ಉಗಮ ಹಲವಾರು ಇತರ ಜೀವಜಾತಿಗಳ ವಿನಾಶಕ್ಕೆ ಕಾರಣವಾಗಬಹುದು. ಆದ್ದರಿಂದಲೇ, ಜೀವಿಗಳ ಭವಿಷ್ಯ ಇಡೀ ಪರಿಸರದ ಮೇಲೆ ನಿಂತಿರುತ್ತದೆ; ರಭಸದಿಂದ ಹರಿಯುವ ನದಿಯಲ್ಲಿ ಎರಡು ಚೆಂಡುಗಳನ್ನು ಒಂದರ ನಂತರ ಒಂದರಂತೆ ಒಂದೇ ಸ್ಥಾನದಲ್ಲಿ ಬಿಟ್ಟರೆ, ಅವೆರಡೂ ಚೆಂಡುಗಳು ಒಂದೇ ಪಥದಲ್ಲಿ ಸಾಗದಂತೆ. ಜೀವ ವಿಕಾಸದ ಚರಿತ್ರೆ ತಿರುಗಿ ಇನ್ನೊಂದು ಭೂಮಿಯಂತಹ ಗ್ರಹದಲ್ಲಿ ಪುನರಾವರ್ತನೆಗೊಂಡರೆ, ಜೀವವಿಕಾಸದ ಹಾದಿ ಕೂಡಾ ಇಲ್ಲಿಗಿಂತ ಬಹು ಭಿನ್ನವಾಗಿರುತ್ತದೆ. ಆದ್ದರಿಂದಲೇ, ಇಲ್ಲಿಯ ನಮ್ಮ ಇರವೂ ಬಹು ಆಕಸ್ಮಿಕ ಘಟನೆ, ಎಣಿಕೆಗೆ ಸಿಗದಷ್ಟು ಕಾಕತಾಲೀಯ ಘಟನೆಗಳ ಫಲ, ಗೊಂದಲಮಯ ಪರಿಸರದ ಪರಿಣಾಮ.

**ನಮ್ಮ ವಿಶ್ವ ಯಾಂತ್ರಿಕ ಪ್ರಪಂಚವಾಗಿದ್ದರೆ ನೈತಿಕತೆಗೆ ಬೆಲೆಯುಂಟೆ?**

ನಮ್ಮ ಕ್ರಿಯೆಗಳೆಲ್ಲಾ ಯಾಂತ್ರಿಕ ಎಂದಾದರೆ, ನಾವು ಮಾಡುವ ಕ್ರಿಯೆಗಳನ್ನು ಮಾಡದೆ ನಮಗೆ ಗತ್ಯಂತರವಿಲ್ಲ ಎನ್ನಬೇಕಾಗುತ್ತದೆ. ಇಂದು ನಾನು ಮಾಡುವ ಎಲ್ಲ ಕ್ರಿಯೆಗಳೂ ನಿನ್ನೆ ಈ ಪ್ರಪಂಚದ ಅಣುಗಳು (ನನ್ನ ದೇಹದ ಅಣುಗಳೂ ಸೇರಿ) ಎಲ್ಲಿದ್ದವು, ಎಷ್ಟು ವೇಗದಿಂದ ಚಲಿಸುತ್ತಿದ್ದವು, ಯಾವ ದಿಕ್ಕಿನಲ್ಲಿ ಚಲಿಸುತ್ತಿದ್ದವು, ಅವುಗಳ ಪರಸ್ಪರ ಆಕರ್ಷಣೆ, ವಿಕರ್ಷಣೆ ಎಷ್ಟಿತ್ತು ಎಂಬುದರ ಪರಿಣಾಮವಾಗುತ್ತದೆ. ಆದರೆ ಇದರಿಂದ ನಾವು ಮಾಡುವ ತಪ್ಪುಗಳಿಗೆ ವಿಶ್ವ ಅಥವಾ ಅದರ ರಚನೆ ಹಾಗೂ ಭೌತಿಕ ನಿಯಮಗಳೇ ಹೊಣೆಯಲ್ಲದೆ ನಾವೇ ಅಲ್ಲ ಎಂಬ ಅವಸರದ ತೀರ್ಮಾನಕ್ಕೆ ಬರಲಾಗುವುದಿಲ್ಲ. ಹೊಣೆಗಾರಿಕೆ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ ವಿಷಯ. ಸ್ವಾತಂತ್ರ್ಯ ಇಲ್ಲವೆಂದ ಮೇಲೆ ಹೊಣೆಗಾರಿಕೆ ಇಲ್ಲವೆಂಬುದೂ ನಿಜ. ಆದರೆ, ನಮ್ಮ ಕ್ರಿಯೆಗೆ ಪ್ರತಿಕ್ರಿಯೆ ವ್ಯಕ್ತಪಡಿಸುವುದು ಕೂಡಾ ಯಾಂತ್ರಿಕತೆಯಲ್ಲೇ ಅಡಗಿದೆ. ಈ ಪ್ರತಿಕ್ರಿಯೆ ಶಿಕ್ಷೆಯ ಸ್ವರೂಪವನ್ನು ತಳೆದರೆ, ಅಂತಹ ಶಿಕ್ಷೆ ಕೂಡಾ ಇತರರ ಸ್ವ-ಇಚ್ಛೆಯಾಗಿರುವುದಿಲ್ಲ, ಅದು, ಸಮಾಜ ನಮ್ಮ ಮೇಲೆ ತೆಗೆದುಕೊಳ್ಳುವ ಯಾಂತ್ರಿಕ ಪ್ರತಿಕ್ರಿಯೆ ಎನಿಸುತ್ತದೆ. ಆದ್ದರಿಂದ, ಪ್ರಪಂಚ ಯಾಂತ್ರಿಕ ಎಂದ ಮಾತ್ರಕ್ಕೇ ನಾವು ನೈತಿಕತೆಯ ಕಟ್ಟುಪಾಡುಗಳಿಂದ ಬಿಡಿಸಿಕೊಳ್ಳುವುದಿಲ್ಲ. "ವಿಧಿ ಬರೆದ ಬರಹವ ತಪ್ಪಿಸಲು ಹರಿ, ಹರ, ವಿರಿಂಚಾದ್ಯರಿಗೆ ಸಾಧ್ಯವೇ?" ಎನ್ನುವ ಮಾತನ್ನು ಯಾಂತ್ರಿಕತೆಯಿಂದ ಸಮರ್ಥಿಸಲಾಗುವುದಿಲ್ಲ. ಏಕೆಂದರೆ, ಸ್ವಪ್ರಯತ್ನ ಮಾಡುವುದೂ ವಿಧಿ ಬರೆದ ಬರಹವೇ ಆಗಿರುತ್ತದೆ ಎನ್ನಬಹುದು. ಆದ್ದರಿಂದ ಪ್ರಪಂಚ ಹಾಗೂ ನಮ್ಮ ನಡವಳಿಕೆಗಳು ಯಾಂತ್ರಿಕವೆಂದು ನಂಬಿದರೂ ಸ್ವಪ್ರಯತ್ನದಲ್ಲಿ ವಿಶ್ವಾಸ ಕಳೆದುಹೋಗುವುದಿಲ್ಲ, ನಮ್ಮ ಕೆಲಸಕ್ಕೆ ಜವಾಬುದಾರಿ ವಹಿಸಿಕೊಳ್ಳಬೇಕಾದುದೂ ತಪ್ಪುವುದಿಲ್ಲ.

**ಪ್ರೊ|| ಎಸ್. ಆರ್. ಎನ್. ಮೂರ್ತಿ**
ಮಾಲಿಕ್ಯುಲರ್ ಬಯೋಫಿಸಿಕ್ಸ್ ಯೂನಿಟ್
ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು-೫೬೦೦೧೨



# ಹೊ-ಚಿ-ಮಿನ್‌್ಹರ ಮೂರು ಕವಿತೆಗಳು

## ೧. ಚದುರಂಗದಾಟ

೧

ಹೊತ್ತು ಹೋಗಲು ನಾವು ಕಲಿಯುತ್ತೇವೆ ಚದುರಂಗದಾಟ
ಎಲ್ಲ ಬಗೆ ಸೈನ್ಯಪಡೆ ತೊಡಗಿರಲು ಕೊನೆಯಿರದ ಬೆನ್ನಟ್ಟುವಾಟ
ಚಲಿಸು ಮಿಂಚಿನ ವೇಗದಲ್ಲಿ ಆಕ್ರಮಣಕ್ಕೆ ಅಥವಾ ಸ್ವರಕ್ಷಣೆಗೆ
ಪ್ರತಿಭೆ ಹಾಗೂ ಚುರುಕು ಪಾದಗಳು ನೀಡುವುವು ಮೇಲ್ಮೈಯ ನಿನಗೆ

೨

ಮುಂದಕ್ಕೆ ಇನ್ನೂ ಮುಂದಕ್ಕೆ ನೋಡು— ಯೋಚಿಸು ಆಳವಾಗಿ
ನಿರ್ಧರಿಸು: ಎಡೆಬಿಡದೆ, ಆಕ್ರಮಿಸು ಮತ್ತೂ ಮತ್ತೂ ಆಕ್ರಮಿಸು
ತಪ್ಪು ನಡೆಯಾದರೂ, ನಿನ್ನ ರಥಗಳೆರಡೂ ಉರುಳಿ ಬಿದ್ದರೂ
ಆ ಕಾಲದಲ್ಲಿ– ತಿಳಿ: ಕಾಲಾಳು ತಂದುಕೊಡಬಹುದು ಜಯವ.

೩

ಇಬ್ಬದಿಯ ಪಡೆಗಳಿಗೂ ಸಮಬಲದ ಪಾತ್ರ
ಗೆಲುವು ಸಿಗುವುದು ಕೊನೆಗೂ ಒಬ್ಬನಿಗೆ ಮಾತ್ರ
ಮುನ್ನುಗ್ಗು ಹಿಂದೆ ಸರಿ; ಜತೆಗಿರಲಿ ತಪ್ಪಿರದ ಯುದ್ಧತಂತ್ರ
ಮಹಾನಾಯಕನೆಂದು ಕರೆಯುವರು ನಿನ್ನ ಆಗ ಮಾತ್ರ.

## ೨. ಬೆಳದಿಂಗಳು

ಜೈಲಿನಲ್ಲಿಲ್ಲ ಯಾವುದೇ ಹೂವು ಅಥವಾ ಮದ್ಯ
ಇಷ್ಟೊಂದು ಸುಂದರ ರಾತ್ರಿಯಲ್ಲಿನ್ನೇನು ಮಾಡಲು ಸಾಧ್ಯ ?
ಕಿಟಕಿ ಕಡೆ ನಡೆದು ನೋಡುತ್ತೇನೆ ಚಂದ್ರಮನ ಬೆಳಕ
ಚಂದ್ರನೂ ಕಣ್ಣಿಟ್ಟು ನೋಡುತ್ತಾನೆ ಕವಿಯ ಕಂಬಿಗಳ ಮೂಲಕ.

## ೩. ಗೋಣಸುಗಳು

೧

ಪೆಡಂಭೂತದ ಹಾಗೆ ಹಸಿದಿರುವ ಬಾಯ ತೆರೆಯುತ್ತ ಅಗಲ
ಗೋಣಸುಗಳು ಪ್ರತಿರಾತ್ರಿ ಹಿಡಿಯುವುವು ಖೈದಿ ಕಣಕಾಲ ಗಂಟುಗಳ
ದವಡೆಗಳು ಬಲವಾಗಿ ಅವುಕಿ ಹಿಡಿಯುವುವು ಬಡಪಾಯ ಬಲದ ಕಾಲು
ಚಾಚಿಕೊಳ್ಳುವುದಕ್ಕೆ ಮತ್ತು ಬಾಗುವುದಕ್ಕೆ ಸ್ವತಂತ್ರ ಉಳಿವುದು ಎಡದ ಕಾಲು

೨

ಎಷ್ಟೊಂದು ವಿಚಿತ್ರ ಘಟನೆಗಳು ಸಂಭವಿಸುವುವು ಈ ಜಗದಲ್ಲಿ:
ಜನರು ಮುನ್ನುಗ್ಗುವರು ಆದ್ಯತೆಗೆ ಅನುಗುಣವಾಗಿ ಬಂಧಿಸಲ್ಪಡಲು ಅಲ್ಲಿ
ಬಂಧಿಸಲ್ಪಟ್ಟರೆ ಒಮ್ಮೆ ಶಾಂತಿಯುತ ಮುದ್ರೆಯನು ನಿರೀಕ್ಷಿಸುತ್ತಿರಬಹುದು ಅವರು
ಇಲ್ಲವಾದರೆ ಈ ಜನಜಂಗುಳಿಯ ನಡುವೆ ಅಬಾಧಿತವಾಗೆಲ್ಲಿ ಒರಗಬಹುದವರು ?

*(ಹೊ-ಚಿ-ಮಿನ್‌್ಹರವರ 'ಪ್ರಿಸನ್ ಡೈರಿ'ಯಿಂದ)*

ಕನ್ನಡಕ್ಕೆ : **ಸುಬ್ರಾಯ ಚೊಕ್ಕಾಡಿ**, ಚೊಕ್ಕಾಡಿ- ೫೭೪ ೨೧೨, ದಕ್ಷಿಣ ಕನ್ನಡ

# ಚಿನ್ನದ ಹಲ್ಲು ಕಟ್ಟಿಸಿಕೊಂಡ ಹಾವು



ಮೂಲ : ಜೆ.ಬಿ.ಎಸ್. ಹಾಲ್ಡೇನ್
ಕನ್ನಡಕ್ಕೆ : ಡಾ|| ಬಿ.ಎಸ್. ಶೈಲಜಾ

ಇದು ಬ್ರೆಜಿಲ್ ದೇಶದಲ್ಲಿದ್ದ ಪಾವ್ಲೊ ಮರಿಯಾ ಎನ್‌ಕಾನಾರ್ಕೋ ಎಸ್ಲೊಂಡಿಡೋ ಎಂಬುವವನ ಕಥೆ. ಅದಿಷ್ಟೂ ಅವನೊಬ್ಬನದೇ ಹೆಸರು. ಬಹಳ ಉದ್ದ. ಎಸ್ಲೊಂಡಿಡೋ ಎಂದು ಕರೆದರೆ ಸಾಕಾಗಬಹುದು. ಈ ಹೆಸರೂ ಉಚ್ಚರಿಸಲು ಕಷ್ಟ. ದೊಡ್ಡಪ್ಪ ಎಂದು ಕರೆಯೋಣ. ಈತ ಇದ್ದದ್ದು ಮನಾವೋ ಎಂಬ ಊರಿನಲ್ಲಿ, ಬಹಳ ಶ್ರೀಮಂತ. ಎರಡು ಚಿನ್ನದ ಗಣಿಗಳು ಮತ್ತು ಒಂದು ಬೆಳ್ಳಿಯ ಗಣಿಯ ಒಡೆಯ.

ಚಿನ್ನಕ್ಕೆ ಬೆಳ್ಳಿಗಿಂತ ಬೆಲೆ ಹೆಚ್ಚು ಆದ್ದರಿಂದ ಚಿನ್ನದ ಗಣಿಗಳಿಂದ ಹೆಚ್ಚು ದುಡ್ಡು ಸಿಗುತ್ತದೆ ಎಂದು ನೀವು ತಿಳಿದುಕೊಂಡಿರಬಹುದು. ಅದು ತಪ್ಪು. ಚಿನ್ನ ಸಿಗಬಹುದು ಎಂದು ಜನ ಎಲ್ಲೆಂದರಲ್ಲಿ ಅಗೆದು ಅಗೆದು ದುಡ್ಡು ಖರ್ಚು ಮಾಡುತ್ತಾರೆ. ಚಿನ್ನದ ಗಣಿಗೆ ಬೆಳ್ಳಿಯ ಗಣಿಗಿಂತ ನಿರ್ವಹಣೆಯ ಖರ್ಚೂ ಹೆಚ್ಚು.

ದೊಡ್ಡಪ್ಪನ ಚಿನ್ನದ ಗಣಿಗಳು ಅಂತಹವಲ್ಲ, ಅವನಿಗೆ ಅದರಿಂದ ಸಾಕಷ್ಟು ಉತ್ಪತ್ತಿ ಇತ್ತು. ಬೆಳ್ಳಿಯ ಗಣಿಗಿಂತ ಹೆಚ್ಚೇ ಎನ್ನಬಹುದು. ಅವನು ಜಿಪುಣ; ಕೆಲಸಗಾರರಿಗೆ ಸರಿಯಾಗಿ ಸಂಬಳ ಕೊಡುವುದಿಲ್ಲ ಎಂಬ ಮಾತೂ ಕೇಳಿಬರುತ್ತಿತ್ತು. ಇದ್ದರೂ ಇರಬಹುದು. ಅನೇಕರಿಗೆ ಅವನನ್ನು ಕಂಡರೆ ಅಷ್ಟಕ್ಕಷ್ಟೇ.

ಜನರಿಗೆ ದುಡ್ಡು ಹೆಚ್ಚಾಗಿದ್ದರೆ ಏನು ಮಾಡುತ್ತಾರೆ ? ಕೆಲವರು ಆಸ್ಪತ್ರೆ, ವಿದ್ಯಾಲಯ ಹೀಗೇನಾದರೂ ಕಟ್ಟಿಸಿದರೆ ಮತ್ತೆ ಕೆಲವರು ಉದ್ಯಾನಗಳು, ಮ್ಯೂಸಿಯಂ ಕಟ್ಟಿಸಬಹುದು. ಇಂತಹ ಒಳ್ಳೆಯ ಕೆಲಸಗಳನ್ನೇ ಎಲ್ಲರೂ ಮಾಡುವುದಿಲ್ಲ, ಕೆಲವರು ವಜ್ರ ವೈಢೂರ್ಯಗಳನ್ನು ಕೊಂಡರೆ, ಕೆಲವರು ರೇಸ್‌ಕುದುರೆಗಳನ್ನು ಕೊಳ್ಳುತ್ತಾರೆ. (ಅದರಿಂದ ನಮ್ಮಂತಹವರಿಗೇನೂ ಪ್ರಯೋಜನವಿಲ್ಲ, ಬಿಡಿ). ದೊಡ್ಡಪ್ಪ ಈ ಕೊನೇ ಗುಂಪಿಗೆ ಸೇರಿದವನು. ಅವನಿದ್ದುದು ಬ್ರೆಜಿಲ್‌ನಲ್ಲಿ, ಆದ್ದರಿಂದ ಇಂಗ್ಲೆಂಡ್ ಅಥವಾ ಅಮೆರಿಕದ ಶ್ರೀಮಂತರು ಕೊಳ್ಳುವ ವಸ್ತುಗಳನ್ನು ಅವನು ಕೊಳ್ಳುತ್ತಿರಲಿಲ್ಲ, ಉದಾಹರಣೆಗೆ, ಅಮೆರಿಕದವರು ಡಜನ್‌ಗಟ್ಟಲೆ ಕಾರುಗಳಿಟ್ಟಿರಬಹುದು. ಆದರೆ ಮನಾವೋ ಎಂಬ ಆ ಊರಿನಲ್ಲಿ ರಸ್ತೆಗಳೇ ಚೆನ್ನಾಗಿರಲಿಲ್ಲ, ಕಾರಿಟ್ಟು ಪ್ರಯೋಜನವೇನು ? ಆದರೂ ಇವನು ಒಂದು ಕಾರು ಕೊಂಡಿದ್ದ.

ರಯೋನೆಗ್ರೋ ಎಂಬ ನದಿ ಅಮೆಜಾನ್ ನದಿಯನ್ನು ಸಂಗಮಿಸುವ ಸ್ಥಳವೇ ಮನಾವೋ. ಬ್ರೆಜಿಲ್‌ನ ಆ ಭಾಗದಲ್ಲಿ ರಸ್ತೆಗಿಂತ ದೋಣಿ ಪ್ರಯಾಣವೇ ಜನಪ್ರಿಯವಾಗಿತ್ತು. ಎಲ್ಲ ವಹಿವಾಟು ನೀರಿನ ಮೇಲೆ ನಡೆಯುತ್ತಿತ್ತು. ಆದ್ದರಿಂದ ದೊಡ್ಡಪ್ಪ ತನ್ನ ಶ್ರೀಮಂತಿಕೆಯನ್ನು ಪ್ರದರ್ಶಿಸಲು ಮೂರು 'ಮೋಟಾರ್ ಬೋಟ್' ಇಟ್ಟಿದ್ದುದು ಉಚಿತವೇ ಆಗಿತ್ತು. ಈ ದೋಣಿಗಳೊಳಗಿನ ಎಲ್ಲಾ ನಟ್ಟು ಬೋಲ್ಟುಗಳೂ ಬೆಳ್ಳಿಯವು. ಹಿಡಿಕೆಗಳೂ ಅಷ್ಟೇ. ಅವನ ಹೆಂಡತಿಯ ಬಳೆಗಳೂ ಬೆಳ್ಳಿಯ ಮೇಲೆ ಕಡೆದ ವಜ್ರಗಳು. ಅವು ಬಹಳ ದೊಡ್ಡವು. ಇರಬೇಕಾದದ್ದು ನ್ಯಾಯವೇ! ಅವಳ 'ವಿಶಾಲ'ವಾದ ಆಳತೆಗೆ ತಕ್ಕಂತೆಯೇ ಇದ್ದವು. ಇನ್ನು ಅವನ ಮನೆಯೊಳಗೆ... ಚಿನ್ನವೋ ಚಿನ್ನ. ಬಾಗಿಲಹಿಡಿಗಳು, ಚಮಚಗಳು, ಸಿಗರೇಟ್‌ಬೂದಿ ಉದುರಿಸುವ ಆ್ಯಷ್‌ಟ್ರೇ, ಸಾಬೂನಿನ ತಟ್ಟೆಗಳು, ಹಲ್ಲುಜ್ಜುವ ಬ್ರಷ್‌ಗಳ ಹಿಡಿ.... ಎಲ್ಲವೂ ಚಿನ್ನ. ಅವನ ಬಳಿ ಎಷ್ಟು ಚಿನ್ನದ ಗಡಿಯಾರಗಳಿದ್ದವೋ ಗೊತ್ತಿಲ್ಲ. ದಿನಕ್ಕೊಂದು ಗಡಿಯಾರ ಬಳಸುತ್ತಿದ್ದ.

ದೊಡ್ಡಪ್ಪನಿಗೆ ಪ್ರಾಣಿಗಳನ್ನು ಕಂಡರೆ ವಿಶೇಷ ಮಮತೆ. ಬಹುಶಃ ಇದೊಂದೇ ಅವನ ಒಳ್ಳೆಯ ಗುಣ ಇರಬೇಕು. ಆದ್ದರಿಂದ ಮುಖ್ಯ ವಿಷಯವನ್ನು ಈಗ ಹೇಳಲೇಬೇಕು. ಆತನದೊಂದು ಖಾಸಗೀ ಮೃಗಾಲಯ ಇತ್ತು. ಬ್ರೆಜಿಲ್‌ನ ಎಲ್ಲಾ ಪ್ರಾಣಿಗಳೂ – ಇಲಿಗಿಂತ ದೊಡ್ಡ ಗಾತ್ರದವು – ಅಲ್ಲಿದ್ದವು.

ಕೈಮನ್ ಎಂಬ ಹೆಸರು ನೀವು ಕೇಳಿರಲಾರಿರಿ. ಇದು ಮೊಸಳೆಯ ಜಾತಿಯದು. ಭಾರತದ ಘರಿಯಾಲ್ ಮೊಸಳೆಗಳಂತೆಯೇ ಕಂಡರೂ ಒಂದು ಮುಖ್ಯ ವ್ಯತ್ಯಾಸ ಇದೆ. ಕೆಳ ದವಡೆಯಲ್ಲಿ ಎರಡು ದೊಡ್ಡ ಕೋರೆ ಹಲ್ಲುಗಳಿವೆ. ಇವು ಬಾಯಿಂದ ಹೊರಚಾಚಿಕೊಂಡಿರುತ್ತವೆ (ಬಾಯಿ ಮುಚ್ಚಿದರೂ ಕಾಣುತ್ತಿರುತ್ತವೆ). ಆದ್ದರಿಂದ ಅದು ಬಾಯಿಮುಚ್ಚಿಕೊಂಡಾಗ ಈ ಹಲ್ಲುಗಳು ಮೇಲ್ದುಟಿಯನ್ನು ಒತ್ತುತ್ತವೆ. ಇದರಿಂದ ನೋವಾಗುತ್ತದೆ ಎಂದು ನೀವಂದುಕೊಳ್ಳಬಹುದು. ಇಲ್ಲ, ನೋಯುವುದಿಲ್ಲ, ಏಕೆಂದರೆ ಈ ನೋವು ಪರಿಹಾರಕ್ಕೊಂದು ಉಪಾಯವೂ ಇದೆ. ಈ ಹಲ್ಲುಗಳಿಗಾಗಿ ಮೇಲ್ದುಟಿಯಲ್ಲಿ ಎರಡು ತೂತುಗಳಿವೆ. ಘರಿಯಾಲ್ ಮೊಸಳೆಗಳಿಗೆ ಹೀಗೆ ತೂತುಗಳಿಲ್ಲ. ಅಮೆರಿಕದ ಮೊಸಳೆಗಳಿಗಿಂತಲೂ ಇವು ಭಿನ್ನ. ಅಂದಾಜು ಇಪ್ಪತ್ತು ಅಡಿ ಉದ್ದ ಇರುತ್ತವೆ.

ದೊಡ್ಡಪ್ಪನ ಮೃಗಾಲಯದಲ್ಲಿ ಏಳು ಕೈಮನ್‌ಗಳಿದ್ದವು. ಅಲ್ಲದೆ ಮೂರು ಚಿರತೆಗಳು, ಎರಡು ಅನಕೊಂಡಾಗಳೂ ಇದ್ದವು. ಅನಕೊಂಡಾ ಬಗ್ಗೆ ನೀವು ಕೇಳಿರಬಹುದು. ಇವು ಬ್ರೆಜಿಲ್‌ನಲ್ಲಿ ಮಾತ್ರ ಕಾಣುವ ಹೆಬ್ಬಾವುಗಳು. ವಿಷದ ಹಾವುಗಳಲ್ಲ, ಆದರೆ ಮನುಷ್ಯನನ್ನು ಇರುಕಿಸಿಕೊಂಡು ಪುಡಿಪುಡಿಮಾಡಿಬಿಡುತ್ತವಂತೆ. ಚೆನ್ನಾಗಿ ಈಜಬಲ್ಲುವು.

ಈ ಎರಡು ಅನಕೊಂಡಾಗಳಲ್ಲೊಂದು ಹೆಣ್ಣು, ದಿನಕ್ಕೊಂದು ಮೊಟ್ಟೆ ಸಿಗುತ್ತಿತ್ತು. ದೊಡ್ಡಪ್ಪ ದಿನವೂ ಆ ಮೊಟ್ಟೆಯನ್ನು ಬೇಯಿಸಿ ಚಿನ್ನದ ತಟ್ಟೆಗೆ ಹಾಕಿಕೊಂಡು ಚಿನ್ನದ

ಚಪ್ಪರಿಸಿಂದ ತಿನ್ನುತ್ತಿದ್ದ ಅವು ತುಂಬಾ ರುಚಿ ಎಂದವನ ಹೇಳಿಕೆ. ಆದರೆ ಇದು ನಿಜವಿರಲಾರದು. ನಾನಂತೂ ಇದುವರೆಗೆ ರುಚಿ ನೋಡಿಲ್ಲ. ನನ್ನ ಸ್ನೇಹಿತನೊಬ್ಬ ಇದನ್ನು ತಿಂದಿದ್ದಾನೆ. ಅವನು ಆಗಾಗ್ಗೆ ಹಡಗಿನಲ್ಲಿ ಕಂಡರಿಯದ ದ್ವೀಪಗಳಿಗೆ ಸಾಹಸಯಾತ್ರೆ ಮಾಡುತ್ತಿರುತ್ತಾನೆ. ಅವನು ಒಂದೇಸಲ ಒಟ್ಟಿಗೆ ಮೂರು ಮೊಟ್ಟೆ-ಅನಕೊಂಡಾದ್ದು ತಿಂದನಂತೆ ರುಚಿಯಾಗಿತ್ತಂತೆ. ಅದಕ್ಕೆ ಮುಂಚೆ ಒಂದುವಾರ ಅವನು ಹೊಟ್ಟೆಗಿಲ್ಲದೇ ಪರದಾಡಿದ್ದ ರುಚಿಯಾಗಿದೆ ಎನ್ನಿಸಿದ್ದು ಆಶ್ಚರ್ಯವೇನಲ್ಲ ಅಲ್ಲವೇ ?

ಇರಲಿ ದೊಡ್ಡಪ್ಪನ ವಿಷಯಕ್ಕೆ ಬರೋಣ.

ಕೈಮನ್ ಎಂಬ ಮೊಸಳೆಗಳು ದಡ್ಡಪ್ರಾಣಿಗಳು. ಅವುಗಳಿಗೆ ಏನಾದರೂ ಆಟ ಕಲಿಸುವುದು ಬಹಳ ಕಷ್ಟ. ಅವುಗಳ ತಲೆ ದಪ್ಪ. ಆದರೆ ಮೆದುಳು ಮಾತ್ರ ಮೊಲದ ಮೆದುಳಿಗಿಂತ ಸಣ್ಣ. ಹಾಗೆಂದಮೇಲೆ ನಾಯಿ, ಕೋತಿ, ಮನುಷ್ಯ ಇವರ ಜಾಣತನ ಎಲ್ಲಿಂದ ಬರಬೇಕು ? ದಪ್ಪ ಮೆದುಳಿನ ನಾಯಿ ಸುಮಾರು ಒಂದು ಸಾವಿರ 'ಟ್ರಿಕ್' ಕಲಿಯಬಲ್ಲದು. ಅದಕ್ಕಿಂತ ದಪ್ಪ ಮೆದುಳಿನ ಮನುಷ್ಯನ ವಿಷಯ ನಿಮಗೆ ಗೊತ್ತೇ ಇದೆ.

ಆದರೆ ದೊಡ್ಡಪ್ಪನ ಮೃಗಾಲಯದಲ್ಲಿದ್ದ ಮೊಸಳೆಗಳ ಪೈಕಿ ಒಂದು ಮೊಸಳೆಗೆ ಬಹುಶಃ ದಪ್ಪ ಮೆದುಳು ಇದ್ದಿರಬೇಕು. ಏಕೆಂದರೆ ಅದು ಒಂದೆರಡು 'ಟ್ರಿಕ್' ಮಾಡಲು ಕಲಿತುಬಿಟ್ಟಿತ್ತು. ಈ ಪ್ರಾಣಿಗಳನ್ನೆಲ್ಲಾ ನೋಡಿಕೊಳ್ಳಲು ಪೆಡ್ರೋ ರೋಡ್ರಿಗ್ಸ್ ಎಂಬುವನು ಇದ್ದ. ಇವನನ್ನು ಪೆದ್ದಣ್ಣ ಎಂದು ಕರೆಯೋಣ, ಸುಲಭವಾಗುತ್ತದೆ. ಇವನಿಗೆ ತಾಳ್ಮೆ ಹೆಚ್ಚು ಎಂದು ಬೇರೆಯಾಗಿ ಹೇಳಬೇಕಿಲ್ಲ, ಏಕೆಂದರೆ ಆ ಮೊಸಳೆಗೆ ಟ್ರಿಕ್ ಕಲಿಸಿದವನು ಇವನೇ. 'ರೋಸಾ' ಎಂದು ಇವನು ಕೂಗಿದೊಡನೆ ಅದು ನೀರಿನಿಂದ ತಲೆ ಎತ್ತಿ ಓಡಿಬರುತ್ತಿತ್ತು. ಹೇಳಲು ಮರೆತಿದ್ದೆ – ಅದು ಹೆಣ್ಣು ಮೊಸಳೆ. ಇಂಗ್ಲಿಷ್‌ನಲ್ಲಿ ಏನನ್ನಬಹುದು. ಹೆಣ್ಣು ಏಡಿಗಳಿಗೆ hen lobster ಎನ್ನುತ್ತಾರೆ. ಇವೂ ಏಡಿಗಳ ಹಾಗೆ ನೀರಿನಲ್ಲಿ ಬಿದ್ದುಕೊಂಡಿರುವ ಜೀವಿಗಳು (ಆದರೆ ಅವುಗಳಷ್ಟು ರುಚಿ ಇರುವುದಿಲ್ಲವಂತೆ). ಆದ್ದರಿಂದ hen-crocodile ಎನ್ನಬಹುದು. ಅಥವಾ ಹೆಣ್ಣು ಆನೆಗಳಿಗೆ cow-elephant ಎನ್ನುವಂತೆ cow-crocodile ಎನ್ನಬಹುದು. ಈಗ ಆ ಚಿಂತೆ ಬೇಡ. ರೋಸಾ ಎನ್ನೋಣ.

ರೋಸಾಗೆ ಪೆದ್ದಣ್ಣ ಇನ್ನೆರಡು ಆಟ ಕಲಿಸಿದ್ದ. ಅದು ತನ್ನ ಹಿಂಗಾಲು ಮತ್ತು ಬಾಲದ



ಮೇಲೆ ಕುಳಿತುಕೊಳ್ಳಲು ಕಲಿತಿತ್ತು. ಜನಗಳು ತಿನಿಸು ಎಸೆಯಲು ಅನುಕೂಲ ವಾಗುವಂತೆ ಬಾಯಿ ತೆರೆಯುತ್ತಿತ್ತು. ಇಷ್ಟೇ ಅಲ್ಲ; ತನ್ನ ಬಾಲವನ್ನೇ ಕಚ್ಚಿಹಿಡಿದು (ಕೆಲವೊಮ್ಮೆ ನಾಯಿಗಳು ಮಾಡುವಂತೆ) ಗುಂಡಗೆ ಸುತ್ತುತ್ತಿತ್ತು. ಅದ್ಭುತ ! ಅಲ್ಲವೇ ?

ರೋಸಾಳ ಗಂಡನ ಹೆಸರು ಜೋವೋ – ಇದು ಜಾನ್ ಎಂಬ ಹೆಸರಿನ ಪೋರ್ಚುಗೀಸ್ ಅಪಭ್ರಂಶ. ಇವನು (ಇದು) ತುಂಬಾ ದಡ್ಡ. ಅಷ್ಟೇ ಅಲ್ಲ ಸಿಡುಕ ಕೂಡ. ಪೆದ್ದಣ್ಣನೇ ಮೊದಲಾಗಿ ಯಾರೇ ಹತ್ತಿರ ಹೋದರೂ ಗುರುಗುಟ್ಟುತ್ತಿತ್ತು/ದ್ದ. ಆದರೆ ರೋಸಾ ಇವನನ್ನು ಹದ್ದುಬಸ್ತಿನಲ್ಲಿ ಇಟ್ಟಿದ್ದಳು. ಅವನು ದುರಾಸೆ ಪಟ್ಟರೆ ಬಾಲವನ್ನು ಬೀಸಿ ಹೊಡೆಯುತ್ತಿದ್ದಳು. ಅವನು ಅವಳ ಪಾಲಿನ ಊಟಕ್ಕೆ ಅಪ್ಪಿತಪ್ಪಿಯೂ ಬಾಯಿ ಹಾಕುತ್ತಿರಲಿಲ್ಲ.

ಹೀಗೇ ಒಂದು ದಿನ ದೊಡ್ಡಪ್ಪ ಮೃಗಾಲಯಕ್ಕೆ ಬಂದು ಪ್ರಾಣಿಗಳ ಯೋಗ ಕ್ಷೇಮ ವಿಚಾರಿಸಿದ. ಪೆದ್ದಣ್ಣನ ಉತ್ತರ ಸಿದ್ಧವಾಗಿತ್ತು – "ಎಲ್ಲವೂ ಚೆನ್ನಾಗಿವೆ. ಈ ಅನಕೊಂಡಾ ಮಾತ್ರ ಎರಡು ಹಲ್ಲು ಮುರಿದುಕೊಂಡಿದೆ. ಸಧ್ಯದಲ್ಲೇ ಹೊಸದು

ಹುಟ್ಟಬಹುದು'' ಎಂದ.

''ನಾನ್ಸೆನ್ಸ್'' ಎಂದು ಗುಡುಗಿದ ದೊಡ್ಡಪ್ಪ, ''ಅದಕ್ಕೆ ಸಾಕಷ್ಟು ವಯಸ್ಸಾಗಿದೆ. ಈಗೆಲ್ಲಿ ಹೊಸಹಲ್ಲು ಹುಟ್ಟುತ್ತದೆ ?'' ಎಂದ.

ಪೆದ್ದಣ್ಣ ಮರುಮಾತಾಡಲಿಲ್ಲ. ಅದರಿಂದ ಏನೂ ಪ್ರಯೋಜನವಿಲ್ಲ ಎಂದವನು ಬಲ್ಲ. ಶೀಘ್ರಕೋಪಿ ಒಡೆಯನ ಮಾತಿನಲ್ಲಿ ತಪ್ಪು ಹುಡುಕುವುದಕ್ಕಿಂತ ಘೋರ ಅಪರಾಧ ಇನ್ನೊಂದಿಲ್ಲ ಎಂಬುದೂ ಅವನಿಗೆ ಗೊತ್ತಿತ್ತು.

ಈಗ ದೊಡ್ಡಪ್ಪನಿಗೆ ಒಂದು ಅದ್ಭುತ 'ಐಡಿಯಾ' ಹೊಳೆಯಿತು. ಈ ಹಾವಿಗೆ ಚಿನ್ನದ ಹಲ್ಲು ಕಟ್ಟಿಸಿದರೆ ಹೇಗೆ ? ಜಗತ್ತಿನಲ್ಲೆಲ್ಲಾ ಚಿನ್ನದ ಹಲ್ಲು ಕಟ್ಟಿಸಿಕೊಂಡ ಹಾವು ಇಲ್ಲ. ಇಂತಹ ಅಪರೂಪದ ವಸ್ತು ತನ್ನದಾಗುವುದು! ಚಿನ್ನದ ಚಮಚಗಳು, ಉಪ್ಪಿನಡಬ್ಬಗಳು, ಗಡಿಯಾರಗಳು ಇಂತಹವೆಲ್ಲಾ ಇರಬಹುದು. ಭಾರತದಲ್ಲಿ ಅನೇಕ ರಾಜರು ಚಿನ್ನದಿಂದ ಚಿತ್ರ ವಿಚಿತ್ರವಾದ ಸಾಮಾನುಗಳನ್ನು ಮಾಡಿಸಿಕೊಂಡಿದ್ದಾರಂತೆ. ಸ್ವಾತ್ ಎಂಬ ದೇಶದ ರಾಜನಿಗೆ ಏಳು ಹೆಂಡತಿಯರಂತೆ. ಎಲ್ಲರಿಗೂ ಮೂಗು ಚುಚ್ಚಿಸಿ ಚಿನ್ನದ ಉಂಗುರ ಹಾಕಿದ್ದಾನಂತೆ. ಲಿಸ್ಬೇಲಾ ಎಂಬ ರಾಜ ಹಲ್ಲಿನ ಕೊಳೆ ತೆಗೆಯುವ ಕಡ್ಡಿಗಳನ್ನು ಚಿನ್ನದಿಂದ ಮಾಡಿಸಿದ್ದಾನಂತೆ. ಅಷ್ಟೇ ಅಲ್ಲ, ಐದು ಚಿನ್ನದ ಪಂಜರಗಳು – ಗಿಣಿಗಳಿಗೆ! ಕಾಲೊರೆಸುವ ದಿರಿಸಿಗೂ ಚಿನ್ನದ ಚೌಕಟ್ಟು! ಭೂಪಾಲ್‌ನ ಬೇಗಂನ ಬಳಿ ಚಿನ್ನದ ಹೊಲಿಗೆಯಂತ್ರ ಇದೆಯಂತೆ. ಅವಳು ಬಹಳ ಜಾಣೆಯಂತೆ. ಈಗ ಮುದುಕಿಯಾಗಿದ್ದಾಳೆ. ಯಾರೂ ಮುಖ ನೋಡಬಾರದು ಎಂದು ತಲೆಗೆ ಒಂದು ಚೀಲ ಹೊಲಿದು ಹಾಕಿಕೊಂಡು ಓಡಾಡುತ್ತಾಳಂತೆ. ಸ್ಪಿಟಿ ಎಂಬ ಊರಿನ ರಾಜ – ಅವನ ಹೆಸರು ನೋನೋ – ಅವನು ಉಗುಳಲು ಚಿನ್ನದ ಪೀಕದಾನಿ (spittoon) ಮಾಡಿಸಿಕೊಂಡಿದ್ದಾನಂತೆ. ಇದು ನನ್ನ ಕಲ್ಪನೆಯಲ್ಲ, ಭೂಪಟ ತೆಗೆದುನೋಡಿ. ೩೨ಡಿಗ್ರಿ ಉತ್ತರ ಅಕ್ಷಾಂಶ, ೭೮ ಡಿಗ್ರಿ ಪೂರ್ವ ರೇಖಾಂಶದಲ್ಲಿ ಸ್ಪಿಟಿ (spiti) ಎಂಬ ಹೆಸರಂತೂ ಇದೆ. ಆ ರಾಜ ವಿಚಿತ್ರವಾಗಿ 'ನೋನೋ' ಎಂದು ಹೆಸರು ಇಟ್ಟುಕೊಂಡಿರುವುದು ನನ್ನ ತಪ್ಪಲ್ಲ.

ಇದೆಲ್ಲಾ ಹಾಗಿರಲಿ, ದೊಡ್ಡಪ್ಪ ಏನು ಮಾಡಿದ ಎಂದು ತಿಳಿಯೋಣ. ''ನಾಳೆ ನಾನು ಹಲ್ಲಿನ ಡಾಕ್ಟರರ ಬಳಿ ಹೋಗುತ್ತೇನೆ. ಜಸಿಂತೋಗೆ ಚಿನ್ನದ ಹಲ್ಲು ಕಟ್ಟಿಸುವ ಬಗ್ಗೆ ಮಾತನಾಡುತ್ತೇನೆ'' ಎಂದ. ಜಸಿಂತೋ ಎಂಬುದು (ಹಲ್ಲು ಮುರಿದುಕೊಂಡ) ಅನಕೊಂಡಾದ ಹೆಸರು. ಮನಾವೋನಲ್ಲಿ ಒಬ್ಬ ಹೆಸರಾಂತ ದಂತವೈದ್ಯನಿದ್ದ. ಅವನ ಹೆಸರೇನೋ ಮರೆತುಹೋಗಿದೆ. ಇರಲಿ, ಚಿಂತೆಯಿಲ್ಲ, ಹೆಸರು ತಿಳಿದಿರಲೇಬೇಕಾಗಿಲ್ಲ. ಈತ ದೊಡ್ಡಪ್ಪನಿಗೆ ಬೇಕಾದಷ್ಟು ಚಿನ್ನದ ಹಲ್ಲುಗಳನ್ನು ಕಟ್ಟಿಸಿಕೊಟ್ಟಿದ್ದ. ಆದ್ದರಿಂದಲೇ ದೊಡ್ಡಪ್ಪ ಬಾಯಿಬಿಟ್ಟರೆ ಚಿನ್ನದ ಇಟ್ಟಿಗೆಗಳ ಲಾಕರ್ ತೆರೆದಿಟ್ಟಂತೆ ಕಾಣುತ್ತಿತ್ತು!

ಬಾಯಿತುಂಬಾ ಚಿನ್ನದ ಹಲ್ಲು ತುಂಬಿಸಿಕೊಂಡ ಇನ್ನೊಬ್ಬನನ್ನು ನಾನು ಕೆನಡಾದಲ್ಲಿ ನೋಡಿದ್ದೆ. ಅವನು ಅಲ್ಲಿ ನದಿಯ ಮೇಲಿನ ಸ್ಟೀಮರ್ ಓಡಿಸುತ್ತಿದ್ದ. ಅಲ್ಲಿ ಚಿನ್ನ ತುಂಬಾ ಅಗ್ಗ ಇದ್ದಿರಬೇಕು. ಪುಸ್ತಕ ಅಥವಾ ಬ್ರೆಡ್ ಇಂತಹ ಸಾಧಾರಣ ಸಾಮಾನುಗಳಿಗೆಲ್ಲಾ ಚಿನ್ನ ಕೊಟ್ಟು ತೆಗೆದುಕೊಳ್ಳುತ್ತಾರಂತೆ. ಈ ಸ್ಟೀಮರ್ ಡ್ರೈವರ್ ಯುದ್ಧ ಕಾಲದಲ್ಲಿ ಮೆಸಪೊಟೋಮಿಯಾ ಹತ್ತಿರ ಹಡಗು ಓಡಾಡಿಸಿಕೊಂಡಿದ್ದ. ಚೆನ್ನಾಗಿ ಕುಡಿದು ಹುಚ್ಚು ಹುಚ್ಚಾಗಿ ಬಡಬಡಿಸುತ್ತಿದ್ದ.

ಮನಾವೋದ ದಂತವೈದ್ಯನಿಗೆ ಈ ಹಲ್ಲು ಕಟ್ಟಿಸುವ ವಿಚಾರ ಸರಿ ಕಾಣಲಿಲ್ಲ. ಅವನ ವಾದ ನ್ಯಾಯವಾಗಿಯೇ ಇತ್ತು – ''ನನ್ನ ಕೆಲಸವೆಲ್ಲಾ ಮನುಷ್ಯರೊಂದಿಗೆ ಮಾತ್ರ. ಹಲ್ಲು ಕಿತ್ತು ಹೊಸ ಹಲ್ಲನ್ನು ನಾನು ಕಟ್ಟುತ್ತಿರುವಾಗ ಎಷ್ಟೇ ನೋವಾದರೂ ಈ ಮನುಷ್ಯರಾರೂ ನನ್ನನ್ನು ತಿನ್ನುವುದಿಲ್ಲ. ಆದರೆ ಈ ಅನಕೊಂಡಾ ಹಾಗಲ್ಲ, ನನ್ನನ್ನೇ ನುಂಗಬಹುದು. ಅಥವಾ ನನ್ನನ್ನು ಮಧ್ಯೆ ಇರುಕಿಸಿ, ಗುಂಡಗೆ ಸುತ್ತಿ , ನನ್ನ ಮೂಳೆಗಳನ್ನು ಪುಡಿ ಪುಡಿ ಮಾಡಿಬಿಡಬಹುದು.''

ದೊಡ್ಡಪ್ಪ ಈ ವಾದಕ್ಕೆ ಜಗ್ಗಲಿಲ್ಲ. ''ನೀವು ಈಗ ಬಂದು ಹಾವನ್ನು ನೋಡಿಕೊಂಡು ಹೋಗಿರಿ. ಚಿನ್ನದ ಹಲ್ಲನ್ನು ಸಿದ್ಧ ಮಾಡಿಡಿ. ಹಾವು ನಿಮಗೇನೂ ಮಾಡದಂತೆ ನೋಡಿಕೊಳ್ಳುವ ಜವಾಬ್ದಾರಿ ನನ್ನದು'' ಎಂದ.

ಬಹಳ ವಾದವಿವಾದಗಳಾದ ಮೇಲೆ ದಂತವೈದ್ಯ ಒಪ್ಪಿದ. ಮೂರು ಪಟ್ಟು ಹೆಚ್ಚು ದುಡ್ಡು ಕೊಡಬೇಕೆಂದಾಯಿತು. ದೊಡ್ಡಪ್ಪನ ಮೋಟಾರ್ ಬೋಟಿನಲ್ಲೇ ಕುಳಿತು ಬಂದ. ಹಾವಿನ ಹಲ್ಲಿನ ಆಕಾರ, ಅಳತೆಗಳನ್ನು ಗುರುತು ಹಾಕಿಕೊಂಡು ಚಿನ್ನದ ಹಲ್ಲುಗಳನ್ನು ತಯಾರಿಸಿದ. ಅಷ್ಟರಲ್ಲಿ ಜಸಿಂತೋನನ್ನು ಕರೆತರಲು ಪೆದ್ದಣ್ಣ ದೊಡ್ಡ ಯೋಜನೆ ಹಾಕಿದ.

ಜಸಿಂತೋನ ಉದ್ದ ಹದಿನೆಂಟು ಅಡಿ ಎಂದು ಅಳತೆ ಮಾಡಿದ್ದು ಮೊದಲನೆಯ ಕೆಲಸ. ಸುಮಾರು ಅಷ್ಟೇ ಉದ್ದದ ಕಬ್ಬಿಣದ ಪೈಪ್ ತರಿಸಿದ. ಅದರ ಒಂದು ತುದಿಗೆ ಬಟ್ಟೆಯ ಹಿಡಿಕೆ ಮಾಡಿದ. ಕಸೂತಿಯ ಕೈಚೀಲಗಳನ್ನು ಮುಚ್ಚಲು ಬಳಸುವ ಲಾಡಿಯಂತೆ ಇದಕ್ಕೂ ಒಂದು ಲಾಡಿ ಹಾಕಿದ. ಲಾಡಿ ಎಳೆದರೆ ಪೈಪ್‌ಅನ್ನು ಬಟ್ಟೆ ಮುಚ್ಚುತ್ತಿತ್ತು. ಜಸಿಂತೋ ಮತ್ತದರ ಹೆಂಡತಿ ಒಂದು ಗೂಡಿನಲ್ಲಿ ವಾಸಮಾಡಿ ಕೊಂಡಿದ್ದವು. ಅದಕ್ಕೊಂದು ಬಾಗಿಲು. ಆ ಬಾಗಿಲಿಗೆ ಪೈಪ್‌ತೂರುವಷ್ಟು ತೂತು ಮಾಡಿದ ಪೆದ್ದಣ್ಣ, ಅದರಲ್ಲಿ ಪೈಪ್‌ಅನ್ನು ಸಿಕ್ಕಿಸಿದ. ಜಸಿಂತೋನ ಹೆಂಡತಿಯನ್ನು ಎಳೆದು ಹಿಡಿದುಕೊಂಡ. ಈಗೊಂದು ಸಣ್ಣ ಇಲಿಯನ್ನು ಗೂಡಿನೊಳಗೆ ಬಿಟ್ಟ (ಇಲಿಗಳು ಅಲ್ಲಿ ಹೇರಳವಾಗಿವೆ). ಹಾವನ್ನು ಕಂಡು ಹೆದರಿದ ಇಲಿ ಅತ್ತಿತ್ತ ಓಡಿತು. ಪೈಪ್‌ನೊಳಗೆ ಓಡಿ ತಪ್ಪಿಸಿಕೊಂಡಿತು. (ಅಷ್ಟೇ ಅದರ ಕೆಲಸ, ಆಮೇಲೆ ಅದು ಸುಖವಾಗಿತ್ತು.) ಅದನ್ನು ಹಿಂಬಾಲಿಸಿದ ಜಸಿಂತೋ ಕೂಡ ಪೈಪ್‌ನೊಳಗೆ ನುಗ್ಗಿತು. ಅದರ ಮುಖ ಪೈಪ್‌ನ ಇನ್ನೊಂದು ತುದಿಯ ಹೊರಗೆ ಬಂದ ಕೂಡಲೇ ಪೆದ್ದಣ್ಣ ಲಾಡಿ ಎಳೆದು ಬಟ್ಟೆಯ ಕುಣಿಕೆ ಬಿಗಿಸಿದ. ಈಗದು ಮುಂದಕ್ಕೂ ಬರಲಾರದು, ಹಿಂದಕ್ಕೂ ಹೋಗಲಾರದು. ಪೈಪ್‌ನ ಆಚೆ ಅದರ ಮೂತಿ ಮಾತ್ರ ಕಾಣುತ್ತಿತ್ತು. ಈಗ ನಾಲ್ಕು ಜನ ಸೇರಿದರು. ಪೈಪನ್ನು (ಅದರೊಳಗಿದ್ದ ಹಾವನ್ನೂ) ಎತ್ತಿದರು. ತಕ್ಷಣವೇ ಗೂಡಿನ ಬಾಗಿಲಿನ ತೂತನ್ನು ಮುಚ್ಚಲು ಮರೆಯಲಿಲ್ಲ. ಇಲ್ಲದಿದ್ದರೆ ಜಸಿಂತೋನ ಹೆಂಡತಿ ಹೊರಗೋಡಿ ಬಂದು ಬಿಡುತ್ತಿದ್ದಳಲ್ಲಾ!



ನಾಲ್ಕು ಜನ ಸೇರಿ ಈ ಪೈಪನ್ನು (ಹಾವನ್ನು) ಹೇಗೆ ಹೊತ್ತು ತಂದರು ಎಂದು ಚಿತ್ರದಲ್ಲಿ ಸ್ಪಷ್ಟವಾಗಿದೆ. ಜಸಿಂತೋಗೆ ತುಂಬಾ ಸಿಟ್ಟು ಬಂದಿತ್ತು. ಬುಸುಗುಡುತ್ತಿತ್ತು. ಚಿತ್ರದಲ್ಲಿ ಬುಸುಗುಡುವ ಶಬ್ದವನ್ನು ಬರೆಯಲು ಆಗುವುದಿಲ್ಲ. ಇಲ್ಲದಿದ್ದರೆ ಅದನ್ನೂ ಅಳವಡಿಸಬಹುದಾಗಿತ್ತು. ಹಾವಿನ ತಲೆಯ ಹತ್ತಿರ ಇರುವವನೇ ಪೆದ್ದಣ್ಣ.... ದೂರದಲ್ಲಿ ನಿಂತು ನೋಡುತ್ತಿರುವವನೇ ದೊಡ್ಡಪ್ಪ; ಪಕ್ಕದಲ್ಲಿರುವಾಕೆ ಅವನ ಶ್ರೀಮತಿ.

ಜಸಿಂತೋನ ಮೆರವಣಿಗೆ ಮೋಟರ್‌ಬೋಟ್ ಏರಿತು. ಅಲ್ಲಿಂದ ದಂತವೈದ್ಯನ ಕ್ಲಿನಿಕ್‌ಗೂ ಹೋಯಿತು. ಅವನಿಗೆ ಇದನ್ನು ನೋಡಿ ಭಯವಾಗಿ ಬಿಟ್ಟಿತಾದರೂ ಒಂದು ಲೋಟ ನೀರು ಕುಡಿದು ಧೈರ್ಯ ತಂದುಕೊಂಡ. ಪೈಪನ್ನು ಮೇಜಿಗೆ ಭದ್ರವಾಗಿ ಕಟ್ಟಿದರು. ಜಸಿಂತೋನ ಮುಖ ಮಾತ್ರ ಮೇಜಿನಿಂದ ಆಚೆಗೆ ಚಾಚಿತ್ತು. ಈಗ ಅದರ ಬಾಯಿ ತೆರೆಸಬೇಕಲ್ಲಾ? ಇದಕ್ಕೂ ಪೆದ್ದಣ್ಣ ಸಿದ್ಧವಾಗಿಯೇ ಬಂದಿದ್ದ. ಇಲಿಯೊಂದನ್ನು ಮೂತಿಯ ಮುಂದೆ ಅಲ್ಲಾಡಿಸಿದ ಕೂಡಲೇ ಬಾಯಿ ತಂತಾನೇ ತೆರೆಯಿತು. ಒಂದು ಸೆಕೆಂಡೂ ವ್ಯರ್ಥಮಾಡದೇ ಪೆದ್ದಣ್ಣ ಬಾಯಿಗೆ ಅಡ್ಡವಾಗಿ ಕೋಲನ್ನಿರಿಸಿದ. ಬಾಯಿ ಮುಚ್ಚುವಂತೆಯೇ ಇಲ್ಲ. ಡಾಕ್ಟರನ ಕೆಲಸ ಮುಗಿಯುವವರೆಗೂ ಪೆದ್ದಣ್ಣ, ಮತ್ತೊಬ್ಬ – ಇಬ್ಬರೂ ಹಾವಿನ ಮೂತಿಯನ್ನು ಗಟ್ಟಿಯಾಗಿ ಅದುಮಿ ಹಿಡಿದುಕೊಂಡಿದ್ದರು. ಜಸಿಂತೋನ ಸ್ಥಿತಿಯನ್ನು ಊಹಿಸಿಕೊಳ್ಳಿ – ಪಾಪ! ಬಾಯಿ ಮುಚ್ಚುವಂತಿಲ್ಲ; ತಲೆ ಅಲುಗಿಸುವಂತಿಲ್ಲ; ಅತ್ತಿತ್ತ ಸರಿಯುವಂತೆಯೂ ಇಲ್ಲ. ಸಿಟ್ಟು ಹೆಚ್ಚಿದ್ದು ನ್ಯಾಯವೇ. ನೋವು ಬೇರೆ. ಈಗದು ಭಯಂಕರವಾಗಿ ಭುಸುಗುಟ್ಟತೊಡಗಿತು. ಸ್ಟೇಷನ್‌ನಲ್ಲಿ ನಿಂತಿರುವ ಯಾವುದಾದರೂ ಸ್ಟೀಮ್ ಎಂಜಿನ್ ಬುಸುಗುಡುವುದನ್ನು ಕೇಳಿದ್ದೀರಾ! ಹಾಗೆ ಅದು ಹಬೆಯನ್ನು ಹೊರಗೆ ಹಾಕದಿದ್ದರೆ ಬಾಯ್ಲರ್ ಢಮಾರ್ ಎಂದು ಸ್ಫೋಟವಾಗುವುದಂತೆ. ಜಸಿಂತೋ ಬುಸುಗುಟ್ಟುತ್ತಿದ್ದುದು ಸ್ಟೀಮ್ ಎಂಜಿನ್‌ನಂತೇ ಕೇಳುತ್ತಿತ್ತು – ಅಷ್ಟೇ ಜೋರಾಗಿತ್ತು.

ಡಾಕ್ಟರ್‌ಗೆ ಹೆದರಿಕೆಯೋ ಹೆದರಿಕೆ. ಇನ್ನೊಂದು ಲೋಟ ನೀರು ಕುಡಿದು ಅಂತೂ ಇಂತೂ ಎರಡು ಚಿನ್ನದ ಹಲ್ಲುಗಳನ್ನು ಕಟ್ಟುವಷ್ಟರಲ್ಲಿ ಬೆವರಿಳಿಯಿತು. ಈಗ ಪುನಃ ಜಸಿಂತೋನ ಮೆರವಣಿಗೆ ಹೊರಟಿತು. ದಾರಿಯುದ್ದಕ್ಕೂ 'ಬುಸ್‌ಬುಸ್' ನಡೆದೇ ಇತ್ತು. ಅದರ ಗೂಡು ಸೇರಿದಾಗಲೇ ಅದಕ್ಕೆ ಮುಕ್ತಿ. ದೊಡ್ಡಪ್ಪನಿಗೆ ತುಂಬಾ ಹೆಮ್ಮೆ. ಹೆಂಡತಿ, ಮಕ್ಕಳಾದಿಯಾಗಿ ಸ್ನೇಹಿತರನ್ನೂ ಕರೆದು ಚಿನ್ನದ ಹಲ್ಲಿನ ಹಾವನ್ನು

ತೋರಿಸಿದ್ದೂ ತೋರಿಸಿದ್ದೇ.

ಜಸಿಂತೋಗಾಗಲೀ, ಅದರ ಹೆಂಡತಿಗಾಗಲೀ ಕೊಂಚವೂ ಸಂತೋಷ ಆದಂತೆ ಕಾಣಲಿಲ್ಲ. ಚಿನ್ನಕ್ಕೂ ಕಲ್ಲಿಗೂ ವ್ಯತ್ಯಾಸವನ್ನೇ ತಿಳಿಯದ ಅವು (ಈ ದೃಷ್ಟಿಯಲ್ಲಿ) ಮನುಷ್ಯರಿಗಿಂತ ಎಷ್ಟೋ ವಾಸಿ. ಶತಶತಮಾನಗಳಿಂದ ಸಂತರು ''ಕಲ್ಲು-ಚಿನ್ನ ಒಂದೇ ಎಂದು ತಿಳಿಯಿರಿ'' ಎಂದು ಉಪದೇಶಿಸುತ್ತಾ ಬಂದಿದ್ದಾರೆ. ಅದನ್ನು ಈ ಹಾವುಗಳು ಚೆನ್ನಾಗಿ ಅರ್ಥಮಾಡಿಕೊಂಡಿವೆ. ದುಡ್ಡು, ಸಮಯ ಎಲ್ಲಾ ಹಾಳುಮಾಡಿಕೊಂಡು ಮನುಷ್ಯರು ಚಿನ್ನ ತೆಗೆಯುತ್ತಾರೆ. ಅದರ ಬದಲು ಕಬ್ಬಿಣ ಹೆಚ್ಚು ಉಪಯುಕ್ತ. ಗಾಜಿನಂತೆ ಅಥವಾ ಹೂವುಗಳಂತೆ ಚಿನ್ನ ನೋಡಲು ಸುಂದರವೇನಲ್ಲ. ಆದರೂ.....

ಮುಂದೆ ಏನಾಗಲಿದೆ ಎಂದು ಪೆದ್ದಣ್ಣನಿಗೆ ಗೊತ್ತಿತ್ತು. ಮನುಷ್ಯರಿಗೂ ಹಾವುಗಳಿಗೂ ಹಲ್ಲಿನ ವಿಷಯದಲ್ಲಿ ಏನೇನೂ ಸಾಮ್ಯವಿಲ್ಲ ಎಂದು ಅವನು ಬಲ್ಲ. ಮನುಷ್ಯರಿಗೆ ಒಂದು ಜಾಗದಲ್ಲಿ ಒಂದೇ ಹಲ್ಲು ಹುಟ್ಟುತ್ತದೆ. ಕೆಲವರಿಗೆ ಎರಡು ಹುಟ್ಟಬಹುದು. ಆರೇಳು ವರ್ಷವಾದಾಗ ಮೊದಲ ಹಲ್ಲುಗಳು ಬೀಳುತ್ತವೆ. ಆಮೇಲೆ ಬರುವ ಎರಡನೆಯ ಹಲ್ಲುಗಳೇ ಖಾಯಂ ಸೆಟ್ಟು. ಅವು ಹೋದರೆ ಹೋದಂತೇ ಲೆಕ್ಕ. ಕೆಲವು ವಿಶೇಷ ವ್ಯಕ್ತಿಗಳಿಗೆ (ಉದಾ : ನನ್ನ ಹೆಂಡತಿ) ವಯಸ್ಸಾದ ಮೇಲೂ ಹಲ್ಲು ಹುಟ್ಟುತ್ತದೆ.

ಆದರೆ ಹಾವುಗಳಿಗೆ, ಮೊಸಳೆಗಳಿಗೆ ಹಾಗಲ್ಲ. ಅವುಗಳಿಗೆ ಹಲ್ಲುಗಳು ಬೀಳುತ್ತಿರುತ್ತವೆ, ಹುಟ್ಟುತ್ತಿರುತ್ತವೆ. ಪೆದ್ದಣ್ಣನಿಗೆ ಈ ವಿಷಯ ಚೆನ್ನಾಗಿಯೇ ಗೊತ್ತು. ಅವನು ರೋಸಾ, ಜೋವೋ, ಜಸಿಂತೋ ಮತ್ತು ಇನ್ನೂ ಉಳಿದವುಗಳ ಹಲ್ಲುಗಳನ್ನೆಲ್ಲಾ ಆರಿಸಿಟ್ಟುಕೊಂಡು ತನ್ನ ಹೆಂಡತಿಗೊಂದು ಸರ ಪೋಣಿಸಿಕೊಟ್ಟಿದ್ದ.

ಅದೊಂದು ದಿನ ದೊಡ್ಡಪ್ಪ ಜಸಿಂತೋನ ಹಲ್ಲು ಕಂಡ. ಎರಡು ಚಿನ್ನದ ಹಲ್ಲುಗಳ ಬದಲಾಗಿ ಒಂದೇ ಕಂಡಿತು. ಇನ್ನೊಂದು ಚಿನ್ನದ ಹಲ್ಲು ಇದ್ದ ಜಾಗದಲ್ಲಿ ಸಾಧಾರಣವಾದ ಹಲ್ಲು ಇತ್ತು. ದೊಡ್ಡಪ್ಪನಿಗೆ ಕೋಪ ಉಕ್ಕಿತು. ''ಕಳ್ಳ ಪೆದ್ದಣ್ಣಾ, ಚಿನ್ನದ ಹಲ್ಲು ಕಿತ್ತಿಟ್ಟುಕೊಂಡು ಎಂತದೋ ಕಳಪೆ ಹಲ್ಲು ಅಂಟಿಸಿದ್ದೀಯಾ ? ನಿನ್ನನ್ನು ಸುಮ್ಮನೆ ಬಿಡುವುದಿಲ್ಲ. ಜೈಲಿಗೆ ಹಾಕಿಸುತ್ತೇನೆ'' ಎಂದು ಕೂಗಾಡುತ್ತಾ ಬಾರುಕೋಲು ಹಿಡಿದು ಪೆದ್ದಣ್ಣನನ್ನು ಹುಡುಕಿಕೊಂಡು ಹೊರಟ.

ಪೆದ್ದಣ್ಣನಿಗೆ ವಿಷಯ ಗೊತ್ತಿತ್ತು. ಹೊಸ ಹಲ್ಲು ಹುಟ್ಟಿದ್ದರಿಂದ ಚಿನ್ನದ ಹಲ್ಲು ಜಸಿಂತೋನ ಗೂಡಿನಲ್ಲೇ ಬಿದ್ದಿರಬೇಕು ಎಂದು ಊಹಿಸಿದ್ದ. ಆದರೆ ಗೂಡಿನ ಒಳಗೆ ಕಾಲಿಡಲು ತುಂಬಾ ಭಯ. ಡಾಕ್ಟರನ ಹತ್ತಿರ ಹೋಗಿ ಬಂದ ಮೇಲೆ ಜಸಿಂತೋ ತುಂಬಾ ಸಿಡುಕನಾಗಿಬಿಟ್ಟಿದ್ದ. ಅಂಬೆಗಾಲು ಇಡುತ್ತಾ ಇವನು ಚಿನ್ನದ ಹಲ್ಲನ್ನು ಹುಡುಕುವಾಗ ಜಸಿಂತೋ ಇವನ ಕಾಲು ಕಚ್ಚಿಬಿಟ್ಟರೇ.... ಅದೇ ಭಯ. ಪಾಪ! ಬಡವ – ಬೂಟು ಕೊಳ್ಳಲೂ ದುಡ್ಡಿಲ್ಲ.

ಬಾರುಕೋಲು ಹಿಡಿದು ಒಡೆಯ ಬರುತ್ತಿದ್ದುದನ್ನು ಕಂಡು ಪೆದ್ದಣ್ಣ ಹೊಂಡದತ್ತ ಓಡಿದ. ಆಗ ಎಲ್ಲ ಪ್ರಾಣಿಗಳ ಊಟದ ಸಮಯ. 'ರೋಸಾ' ಎಂದು ಕರೆದೊಡನೆ ಆ ಮೊಸಳೆ ನೀರಿನಿಂದ ಈಚೆಗೆ ಎಗರಿತು. ಹಿಂಗಾಲುಗಳ ಮೇಲೆ ಕುಳಿತು ಬಾಯಿ ತೆರೆಯಿತು. ಪೆದ್ದಣ್ಣ ಮೊಸಳೆಯನ್ನು ಬಳಸಿ ಓಡಿದ. ದೊಡ್ಡಪ್ಪ ಅಟ್ಟಿಸಿಕೊಂಡು ಬಂದ. ಇಬ್ಬರೂ ಮೊಸಳೆಯನ್ನು ಸುತ್ತತೊಡಗಿದರು. ರೋಸಾಗೆ ಸಿಟ್ಟುಬಂದಿತು. ಬಾಯಿಯನ್ನು ದೋ...ಡ್ಡದಾಗಿ ತೆರೆದು ಜೋರಾಗಿ ಅರಚಿತು.

ಮೊಸಳೆಯ ಕಿರುಚಾಟವನ್ನು ಎಂದಾದರೂ ಕೇಳಿದ್ದೀರಾ ? ಅದು ಹಾವಿನಂತೆ ಬುಸುಗುಟ್ಟುವುದಿಲ್ಲ, ಗೂಳಿಯಂತೆ ಗುಟುರು ಹಾಕುವುದಿಲ್ಲ, ನಾಯಿಯಂತೆ ಬೊಗಳುವುದೂ ಇಲ್ಲ. ಆದರೆ ಈ ಎಲ್ಲ ಶಬ್ದಗಳನ್ನೂ ಒಟ್ಟಿಗೇ ಮಾಡಿದಂತೆ ಕೇಳುತ್ತದೆ. ಆದರೆ ಈ ಪ್ರಾಣಿಗಳು ಸಾಧಾರಣವಾಗಿ ಕೂಗುವುದೇ ಇಲ್ಲ. ತಿವಿದು ಕೀಟಲೆ ಮಾಡಿದರೆ ಮಾತ್ರ ಕೂಗಬಹುದೋ ಏನೋ! ಯಾವುದಾದರೂ ಮೃಗಾಲಯಕ್ಕೆ ಹೋದರೆ ಅಲ್ಲಿಯ ಕಾವಲುಗಾರನನ್ನು ಕೇಳಿ. ನೀವೇ ತಿವಿಯಲು ಹೋಗಬೇಡಿ. ಇದರಿಂದ ಎರಡು ಬಗೆಯ ಅಪಾಯಗಳಿಗೆ ಆಹ್ವಾನ. ಮೊದಲನೆಯದು ತೀರಾ ಅಪಾಯಕಾರಿ. ಕಟಕಟೆಯ ಮೇಲಿಂದ ಬಗ್ಗಿ ತಿವಿಯಲು ಹೋಗಿ ನೀವೇ ಹೊಂಡದೊಳಕ್ಕೆ ಬಿದ್ದುಬಿಡಬಹುದು. (ನಾನು ಇದನ್ನು ಬರೆದ ಮೇಲೆ ಮೃಗಾಲಯದ ಅಧಿಕಾರಿಗಳು ತಂತಿ ಬಲೆಯ ಏರ್ಪಾಟು ಮಾಡಿದ್ದಾರೆ. ನೀವು ಈಗ ತಿವಿಯಲು ಸಾಧ್ಯವೇ ಇಲ್ಲ). ಎರಡನೆಯ ಅಪಾಯ ಅಷ್ಟೇನೂ ಗಂಭೀರ ಸ್ವರೂಪದ್ದಲ್ಲ. ಕಾವಲುಗಾರ ನಿಮ್ಮ ಚೇಷ್ಟೆಯನ್ನು ಗಮನಿಸಿ ಒದ್ದು ಹೊರಹಾಕಬಹುದು. ಹೊಂಡಕ್ಕೆ ಬಿದ್ದು ಮೊಸಳೆಗೆ ಆಹಾರವಾಗುವುದಕ್ಕಿಂತ ಇದು ವಾಸಿ.

ಇರಲಿ, ರೋಸಾ ವಿಷಯಕ್ಕೆ ಬರೋಣ. ಇಪ್ಪತ್ತು ಅಡಿ ಉದ್ದದ ರೋಸಾ ಕೋಪದಿಂದ ಬುಸುಗುಟ್ಟಿದಾಗ ಸ್ಟೀಮ್ ಎಂಜಿನ್‌ಗಿಂತ ಜೋರಾದ ಶಬ್ದ ಬಂದಿತು. ಈ ಶಬ್ದ ಕೇಳಿ ಹೆದರಿದ ದೊಡ್ಡಪ್ಪ ಆ ಕಡೆ ತಿರುಗಿದ. ಅಗಲವಾಗಿ ತೆರೆದ ಬಾಯಿ ಯಮನ ಕೋಟೆಯ ಬಾಗಿಲಿನ ಹಾಗೇ ಕಂಡಿತು, ಅವನಿಗೆ. ಗಡಗಡ ನಡುಗಿದ ಅವನು ಆಯತಪ್ಪಿ ಹೊಂಡದೊಳಗೆ ಬಿದ್ದೇ ಬಿಟ್ಟ.

ಅದೇ ಹೊತ್ತಿಗೆ ಜೋವೋ (ಮೊಸಳೆ, ರೋಸಾಳ ಗಂಡ) ಊಟಕ್ಕಾಗಿ ಕಾಯುತ್ತಾ ಬಾಯಿ ತೆರೆದು ಕುಳಿತಿತ್ತು. ಆದ್ದರಿಂದ ದೊಡ್ಡಪ್ಪ ಸೀದಾ ಅದರ ಹೊಟ್ಟೆಗೇ ರವಾನೆಯಾದ. ಜೋವೋಗೆ ಅವಸರ. ತಿನ್ನುವ ಭರದಲ್ಲಿ ಬಾಯಿ ಸುಟ್ಟಿತು. ಹೇಗೆ ಎನ್ನುತ್ತೀರಾ ? ದೊಡ್ಡಪ್ಪನ ಕೈಲಿದ್ದ ಸಿಗಾರ್‌ನಿಂದ. ನಮ್ಮಲ್ಲೂ ಕೆಲವರು ಬಿಸಿಯೂಟವನ್ನು ಬೇಗ ಬೇಗ ತಿನ್ನಲು ಹೋಗಿ ಬಾಯಿ ಸುಟ್ಟುಕೊಳ್ಳುವುದಿಲ್ಲವೇ ? ಜೋವೋಗೂ ಹಾಗೇ ಆಗಿರಬೇಕು.

ಇನ್ನೇನು 'ಊಟ' ಮುಗಿಯಿತು ಎನ್ನುವಾಗ ಜೋವೋಗೆ ರೋಸಾಳ ನೆನಪಾಯಿತು. ಅವಳಿಗೆ ಏನನ್ನಾದರೂ ಉಳಿಸದಿದ್ದರೆ ಬಾಲವನ್ನೆತ್ತಿ ಬಡಿದುಬಿಟ್ಟಾಳು ಎಂದು ಹೆದರಿ ಒಂದು ಕಾಲನ್ನು ಮಾತ್ರ ಉಳಿಸಿದ(ತು).

ಅಲ್ಲಿಗೆ ದೊಡ್ಡಪ್ಪ ಅಲಿಯಾಸ್ ಎಸ್ಟೊಂಡಿಡೋನ ಕತೆ ಮುಗಿಯಿತು. ಅವನ ಹೆಸರು ಇತಿಹಾಸಕ್ಕೆ ಸೇರಿಬಿಟ್ಟಿತು. ಅವನ ಚಿನ್ನದ ಗಡಿಯಾರ ಮೊಸಳೆಯ ಹೊಟ್ಟೆಯೊಳಗೆ ಟಿಕ್‌ಟಿಕ್ ಎನ್ನುತ್ತಿರಬಹುದು. ಜೋವೋ ಹೊಟ್ಟೆ ತುಂಬಿದೊಡನೆ ಹೊಂಡದ ಮಧ್ಯಕ್ಕೆ ಜಾರಿ ನಿದ್ದೆ ಹೊಡೆದ. ಹೊಂಡಕ್ಕಿಳಿದು ನಿದ್ದೆ ಮಾಡುತ್ತಿರುವ 'ನರಭಕ್ಷಕ' ಮೊಸಳೆಯ ಹೊಟ್ಟೆಯ ಮೇಲೆ ಕಿವಿ ಕೇಳಿಸಿಕೊಳ್ಳುವ ಧೈರ್ಯಶಾಲಿ ಯಾರಾದರೂ ಇದ್ದರೆ ಕಳಿಸಿ, ಗಡಿಯಾರದ ಟಿಕ್‌ಟಿಕ್ ಕೇಳಿಸಿಕೊಳ್ಳುವ ಸಾಹಸ ಮಾಡಬಹುದು.

ಪೊಲೀಸರು ಪೆಡ್ರೋ ಅಲಿಯಾಸ್ ಪೆದ್ದಣ್ಣನನ್ನು ಬಂಧಿಸಿದರು. ವಿಚಾರಣೆ ನಡೆಯಿತು. ಕೂಲಂಕಷವಾಗಿ ಪರಿಸ್ಥಿತಿಯನ್ನು ಪರಿಶೀಲಿಸಿದ ನ್ಯಾಯಾಧೀಶರು, ''ಇಲ್ಲಿ ಪೆದ್ದಣ್ಣನದೇನೂ ತಪ್ಪಿಲ್ಲ; ದೊಡ್ಡಪ್ಪನದೇ ಸ್ವಯಂಕೃತಾಪರಾಧ'' ಎಂದು ಖುಲಾಸೆ ಮಾಡಿದರು.

ಯಾರೋ ಒಬ್ಬ ಸರ್ಕಸ್ ಕಂಪೆನಿಯ ಮಾಲೀಕ ರೋಸಾಳನ್ನು ಕೊಂಡ. ಜೊತೆಯಲ್ಲಿ ಪೆದ್ದಣ್ಣನಿಗೂ ಕೆಲಸ ಕೊಟ್ಟ. ಪೆದ್ದಣ್ಣನಿಗೆ ಈಗ ಕೈತುಂಬ ಸಂಬಳ. ದೊಡ್ಡಪ್ಪ ಕೊಡುತ್ತಿದ್ದುದರ ಹದಿನೈದು ಪಟ್ಟು! ಈಗ ಸರ್ಕಸ್‌ನಲ್ಲಿ ಇವರಿಬ್ಬರನ್ನೂ ನೋಡಬಹುದು. ರೋಸಾ ಈಗ ಇನ್ನೆರಡು ಟ್ರಿಕ್ ಕಲಿತಿದೆ. ಸಿಗಾರ್ ಸೇದುತ್ತದೆ. ಅಲ್ಲದೆ ಬ್ಯಾಂಡ್‌ನವರು ಹಾಡು ನುಡಿಸಿದಾಗ ತಾಳಕ್ಕೆ ತಕ್ಕ ಹಾಗೆ ಬಾಲವನ್ನು ಧಪ್‌ಧಪ್ ಎಂದು ಎತ್ತಿಹಾಕುತ್ತದೆ.

ಈ ಸರ್ಕಸ್ ನಿಮ್ಮೂರಿಗೆ ಬಂದರೆ ಮರೆಯದೇ ನೋಡಿ. ರೋಸಾ ಎಂದು ಕೂಗಿಬಿಟ್ಟೀರಿ ಜೋಕೆ!

ಮೂಲಕಥೆ ಮತ್ತು ಚಿತ್ರಗಳು :
**ಜೆ.ಬಿ.ಎಸ್. ಹಾಲ್ಡೇನ್**



**ಡಾ|| ಬಿ.ಎಸ್. ಶೈಲಜಾ**
ಜವಹರಲಾಲ್ ನೆಹರು ತಾರಾಲಯ,
ಬೆಂಗಳೂರು-೫೬೦ ೦೦೧.



ಸ್ಥಾಪನೆ: 1946

ಗಾಂಧೀಜಿಯವರ ಕರೆ, ನೆಹರೂರವರ ವೈಜ್ಞಾನಿಕ ದೃಷ್ಟಿಕೋನ
ಸ್ವಾತಂತ್ರ್ಯ ಹೋರಾಟಗಾರರ ಶ್ರಮ - ತ್ಯಾಗ
ಸಹ್ಯಾದ್ರಿ ಮಡಿಲಿನ ಮಲೆನಾಡು ಪ್ರಾಂತದ ವಿದ್ಯಾಕ್ಷೇತ್ರ

# ರಾಷ್ಟ್ರೀಯ ಶಿಕ್ಷಣ ಸಮಿತಿ (ರಿ.)

**ಬಾಲರಾಜ್ ಅರಸ್ ರಸ್ತೆ, ಶಿವಮೊಗ್ಗ 577201**

**ಫೋನ್: 273469, 272178. ಫ್ಯಾಕ್ಸ್: 08182-222450**

ವೆಬ್‌ಸೈಟ್:www.nes-shimoga.org www.jnnce.ac.in ಇ-ಮೈಲ್:nescec@sancharnet.in

1. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಶಿವಮೊಗ್ಗ 1946
2. ಕಸ್ತೂರಬಾ ಬಾಲಿಕಾ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಶಿವಮೊಗ್ಗ 1954
3. ರಾಷ್ಟ್ರೀಯ ಹಿರಿಯ ಪ್ರಾಥಮಿಕ ಶಾಲೆ, ಶಿವಮೊಗ್ಗ 1956
4. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಕೋಣಂದೂರು. 1960
5. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಬಿ.ಆರ್. ಪ್ರಾಜೆಕ್ಟ್. 1962
6. ಜಯಪ್ರಕಾಶ್‌ನಾರಾಯಣ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಶಿವಮೊಗ್ಗ 1963
7. ರಾಷ್ಟ್ರೀಯ ಶಿಕ್ಷಣ ಮಹಾವಿದ್ಯಾಲಯ, ಶಿವಮೊಗ್ಗ 1963
8. ರಾಷ್ಟ್ರೀಯ ಪ್ರೌಢಶಾಲೆ, ಚೀಲೂರು. 1964
9. ರಾಷ್ಟ್ರೀಯ ಪ್ರೌಢಶಾಲೆ, ಕುಂಸಿ. 1964
10. ಶ್ರೀ ತೀರ್ಥಲಿಂಗೇಶ್ವರ ರಾಷ್ಟ್ರೀಯ ಪ್ರೌಢಶಾಲೆ, ಬೆಳಗುತ್ತಿ. 1964
11. ಶ್ರೀ ಪದ್ಮಾಂಬ ಪೌಢಶಾಲೆ, ಹುಂಚ. 1964
12. ಕಮಲಾ ನೆಹರು ಸ್ಮಾರಕ , ರಾಷ್ಟ್ರೀಯ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಮಹಿಳಾ ಕಾಲೇಜು, ಶಿವಮೊಗ್ಗ 1965
13. ಆಚಾರ್ಯ ತುಳಸಿ ರಾಷ್ಟ್ರೀಯ ವಾಣಿಜ್ಯ ಕಾಲೇಜು, ಶಿವಮೊಗ್ಗ 1966
14. ರಾಷ್ಟ್ರೀಯ ಕಾನೂನು ಕಾಲೇಜು, ಶಿವಮೊಗ್ಗ 1966
15. ರಾಷ್ಟ್ರೀಯ ಸಂಜೆ ವಾಣಿಜ್ಯ ಕಾಲೇಜು, ಶಿವಮೊಗ್ಗ 1968
16. ರಾಷ್ಟ್ರೀಯ ಔಷಧ ಮಹಾವಿದ್ಯಾಲಯ, ಶಿವಮೊಗ್ಗ 1969
17. ಶರಾವತಿ ರಾಷ್ಟ್ರೀಯ ಪ್ರೌಢಶಾಲೆ, ಹರಿಗೆ. 1969
18. ಶಾರದಾದೇವಿ ಬಾಲಿಕ ಪ್ರೌಢಶಾಲೆ , ಶಿವಮೊಗ್ಗ 1970
19. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು,ಶಿವಮೊಗ್ಗ. 1972
20. ಕಸ್ತೂರಬಾ ಬಾಲಿಕಾ ಪದವಿ ಪೂರ್ವ ಕಾಲೇಜು. ಶಿವಮೊಗ್ಗ. 1972
21. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಕೋಣದೂಂರು. 1972
22. ಜವಾಹರಲಾಲ್‌ನೆಹರು ರಾಷ್ಟ್ರೀಯ ತಾಂತ್ರಿಕ ಮಹಾವಿದ್ಯಾಲಯ, ಶಿವಮೊಗ್ಗ. 1980
23. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಬಿ.ಆರ್.ಪ್ರಾಜೆಕ್ಟ್. 1983
24. ಶರಾವತಿ ಪ್ರಥಮ ದರ್ಜೆ ಕಾಲೇಜು, ಕೋಣಂದೂರು. 1983
25. ರಾಷ್ಟ್ರೀಯ ಕಿರಿಯ ಪ್ರಾಥಮಿಕ ಶಾಲೆ, ಶಿವಮೊಗ್ಗ 1983
26. ಇಂಡಿಯನ್ ಪ್ರೌಢಶಾಲೆ, ಶಿವಮೊಗ್ಗ 1983
27. ಜಯಪ್ರಕಾಶನಾರಾಯಣ ಪದವಿ ಪೂರ್ವ ಕಾಲೇಜು, ಶಿವಮೊಗ್ಗ. 1984
28. ಎಸ್.ಆರ್.ನಾಗಪ್ಪ ಶೆಟ್ಟಿ ಸ್ಮಾರಕ ರಾಷ್ಟ್ರೀಯ ಅನ್ವಯಿಕ ವಿಜ್ಞಾನ ಕಾಲೇಜು, ಶಿವಮೊಗ್ಗ 1991
29. ಶ್ರೀ ತೀರ್ಥಲಿಂಗೇಶ್ವರ ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಬೆಳಗುತ್ತಿ. 1994
30. ಎನ್.ಇ.ಎಸ್. ಕಂಪ್ಯೂಟರ್ ಶಿಕ್ಷಣ ಕೇಂದ್ರ, ಶಿವಮೊಗ್ಗ. 1998
31. ರಾಷ್ಟ್ರೀಯ ಸ್ವತಂತ್ರ ವಸತಿ ವಿಜ್ಞಾನ ಕಾಲೇಜು, ಕೋಣಂದೂರು. 2000



Ramadhyani / S.B.WEB-VISION



ನಿಮ್ಮ ಚಿತ್ರ ಹತ್ತು ನಿಮಿಷಗಳಲ್ಲಿ ತಯಾರು



ಪ್ರಕೃತಿ : ತೈಲವರ್ಣ - ಟಿ. ಎಸ್. ದೇಸಾಯಿ

# ಚಿತ್ರ ಸಂತೆ



ಚಿತ್ರಸಂತೆಯಲ್ಲಿ ಕುತೂಹಲದ ಕಣ್ಣು

## ಒಂದು ಕುತೂಹಲಕಾರಿ ಅನುಭವ

ಚಿತ್ರಕಲಾ ಪರಿಷತ್ತಿನಲ್ಲಿ ಆಗಾಗ ನಡೆಯುವ ಕಲಾ ಮೇಳಗಳ ಪೈಕಿ ಪ್ರತಿವರ್ಷ ನಡೆಯುವ ಚಿತ್ರ ಸಂತೆ ಶಿಖರಪ್ರಾಯವಾದದ್ದು.

ದಿನಾಂಕ ೨೬-೧೨-೨೦೦೪ರಂದು ಪರಿಷತ್ತಿನ ಆವರಣದೊಳಗೆ, ಹೊರಗೆ ಕುಮಾರಕೃಪಾ ರಸ್ತೆಯಲ್ಲಿ ಹಬ್ಬದ ಸಡಗರ. ರಸ್ತೆಯಂಚಿನಲ್ಲಿ, ಕಾಂಪೌಂಡು ಮೇಲೆ, ಗಿಡಮರಗಳ ಟೊಂಗೆಗಳಲ್ಲಿ ಅಲಂಕಾರಗೊಂಡ ಕಲಾಕೃತಿಗಳು ! ಚಿತ್ರ ರಚನೆಯ ಎಲ್ಲ ಮಾಧ್ಯಮಗಳನ್ನು ಬಳಸಿಕೊಂಡು ರಚಿಸಲಾದ ಸಾವಿರಾರು ಕಲಾಕೃತಿಗಳು, ಶಿಲ್ಪಗಳು, ಅವುಗಳನ್ನು ರಚಿಸಿರುವ ನೂರಾರು ಕಲಾಕಾರರು. ಇವರ ಪೈಕಿ ಹೊಸಬರಿದ್ದರು, ಹೆಸರಾಂತ ಕುಂಚಬ್ರಹ್ಮರಿದ್ದರು, ಬಾಲಕಲಾವಿದರೂ ಇದ್ದರು !

ಚಿತ್ರ ಸಂತೆಯಲ್ಲಿ ತಿರುಗಾಡುತ್ತ, ಒಂದೇ ಕಡೆ ಪ್ರದರ್ಶನಗೊಂಡಿರುವ ಕಲಾಕೃತಿಗಳನ್ನು ನೋಡಿ ಆನಂದಿಸುವುದು, ಕಲಾಕಾರರನ್ನು ಪರಿಚಯ ಮಾಡಿಕೊಳ್ಳುವುದು ಒಂದು ಅಪೂರ್ವ ಕುತೂಹಲಕಾರಿ ಅನುಭವ.

ಚಿತ್ರಗಳನ್ನು ಮೆಚ್ಚಬಹುದು, ಮೆಚ್ಚಿದ ಚಿತ್ರವನ್ನು ಸ್ವತಃ ಕಲೆಗಾರರಿಂದಲೇ ಖರೀದಿಸಬಹುದು. ಸ್ವಲ್ಪ ಚೌಕಾಶಿ ಮಾಡಬಹುದು ! ನಿಮ್ಮ ಭಾವಚಿತ್ರ ಬರೆಯುವಾಗ ಹತ್ತು ನಿಮಿಷ ಅಲುಗಾಡದೆ ಕುಳಿತರಾಯಿತು. ಕುತೂಹಲದಿಂದ ಇಣುಕುವ ಕಣ್ಣುಗಳನ್ನು ಗಮನಿಸದಿದ್ದರಾಯಿತು. ಕಲಾಕಾರರು ಚಕಚಕ ಬರೆದುಕೊಡುವ ನಿಮ್ಮದೇ ವ್ಯಂಗ್ಯಚಿತ್ರ ನೋಡಿ 'ಹೆ ಹೆ !' ಎಂದು ನಗಬಹುದು.

■ ಕೆ. ಪಿ. ಸ್ವಾಮಿ



ಚಿತ್ರಸಂತೆಯಲ್ಲಿ ಮದರಂಗಿ ಚಿತ್ತಾರ



ಅಜ್ಜಿ : ಜಲವರ್ಣ - ಕಲ್ಲೇಶ್



ಮದರ್‌ಥೆರೇಸಾ : ಶಿಲ್ಪ - ಜಾನ್ ದೇವರಾಜ್

# ವೈಜ್ಞಾನಿಕ ವಿಧಾನ ಒಂದು ಚರ್ಚೆ

ಪ್ರೊ|| ಎಚ್. ಆರ್. ರಾಮಕೃಷ್ಣರಾವ್.

ಇತ್ತೀಚಿನ ದಿನಗಳಲ್ಲಿ ಸಾಹಿತ್ಯಕ, ಸಾಮಾಜಿಕ, ಆರ್ಥಿಕ, ರಾಜಕೀಯ, ಜಾನಪದ ಮುಂತಾದ ಯಾವುದೇ ವಿಷಯದ ಬಗ್ಗೆ ಮಾತಾಡುವಾಗ, ಚರ್ಚಿಸುವಾಗ, ನುಸುಳುವ ಶಬ್ದಗಳು : 'ವೈಜ್ಞಾನಿಕ' ಮತ್ತು 'ಅವೈಜ್ಞಾನಿಕ.' ಹೇಗೆಂದರೆ ಹಾಗೆ ಪಿಗ್ಗಾಮುಗ್ಗ ಎಳೆದಾಡಿ, ಬಳಸಿ ಬಳಸಿ ಹಳೆಯದಾಗಿರುವ ಈ ಶಬ್ದಗಳು ತಮ್ಮ ಚಲನಶೀಲತೆಯನ್ನು ಕಳೆದುಕೊಂಡು ಹಳಸಲು ನುಡಿಗಳಾಗಿವೆ.

**ವಿಜ್ಞಾನದ ಹುಟ್ಟು**

ಸುಮಾರು ೫೦೦೦ ವರ್ಷಗಳ ಹಿಂದಿನ ಬದುಕಿನತ್ತ ಕಣ್ಣು ಹಾಯಿಸುವುದು ಈಗ ಸಾಧ್ಯ. ಸುತ್ತಲಿನ ಪ್ರಪಂಚದ ಅರಿವು ಪಡೆಯಲು ವ್ಯವಸ್ಥಿತವಾದ ಪ್ರಯತ್ನ ನಡೆದಿರುವುದನ್ನು ನಾವು ಪ್ರಾಚೀನ ನಾಗರಿಕತೆಗಳಾದ ಬ್ಯಾಬಿಲೋನಿಯ, ಈಜಿಪ್ಟ್, ಸಿಂಧೂ ಮುಂತಾದೆಡೆ ಕಾಣಬಹುದಾಗಿದೆ. ಈ ಬಗೆಯ ಜ್ಞಾನಾರ್ಜನೆಗೆ ಎರಡು ಮುಖ್ಯ ಕಾರಣಗಳಿದ್ದವು. ಮೊದಲನೆಯದು, ಈ ಅನ್ವೇಷಣೆ ಯಿಂದಾಗಿ ಪಡೆದ ತಿಳಿವನ್ನು ಬಳಸಿಕೊಂಡು ಜೀವನವನ್ನು ಸುಖಮಯಗೊಳಿಸಬಲ್ಲ ಸಾಧನೆಗಳ ಸೃಷ್ಟಿ. ಕ್ರಿ. ಪೂ. ೨೯೫೦ರಲ್ಲಿ ಈಜಿಪ್ಟ್‌ನಲ್ಲಿದ್ದ ಜ್ಞಾನಿ ಇಮ್‌ಹೋಟ್‌ಟೆಪ್‌ನನ್ನು ಇತಿಹಾಸಕಾರರು ವಿಜ್ಞಾನಿ ಎಂದು ಕರೆದಿದ್ದಾರೆ. ಅನೇಕ ಅಂತಸ್ತುಗಳ ಪಿರಮಿಡ್ ನಿರ್ಮಿಸಿದ್ದರಿಂದಾಗಿ ಇವನಿಗೆ 'ವಿಜ್ಞಾನಿ' ಪಟ್ಟ. ಸೂರ್ಯಗ್ರಹಣ ಸಂಭವಿಸುವ ವರ್ಷವನ್ನು ಮೊದಲೇ ಸರಿಯಾಗಿ ಊಹಿಸಿದ ಥೆಲೀಜ್‌ಗೆ ಗ್ರೀಕರು ವಿಜ್ಞಾನಿ ಎಂದು ಕರೆದರು. ಕಾಂತಗಳ ಅಭ್ಯಾಸ ಮಾಡಿದವರಲ್ಲಿ ಇವನು ಮೊದಲಿಗ. ನಾವಿರುವ ವಿಶ್ವ ಯಾವುದರಿಂದಾಗಿದೆ ಎಂಬ ಪ್ರಶ್ನೆಗೆ ದೇವರ ಹೆಸರು ಬಳಸದೆ ಉತ್ತರ ಕಂಡುಕೊಳ್ಳುವ ಪ್ರಯತ್ನ ಮಾಡಿದವರಲ್ಲಿ ಇವನು ಮೊದಲಿಗ. ವಿಶ್ವ ಸೃಷ್ಟಿಗೆ ಮೂಲವಸ್ತುವಾದ ನೀರಿನಲ್ಲಿ ಚಪ್ಪಟೆಯಾದ ಭೂಮಿ ತೇಲುತ್ತಿದೆ ಎಂದು ಊಹಿಸಿದ್ದಕ್ಕೆ ಇವನಿಗೆ ವಿಜ್ಞಾನಿ ಎಂಬ ಹೆಸರು. ಇಲ್ಲಿ ಉತ್ತರಕ್ಕಿರುವ ಪ್ರಶ್ನೆ ಮುಖ್ಯ. ಈ ಪ್ರಶ್ನೆಗೆ ಉತ್ತರ ಹುಡುಕುವ ಪ್ರಯತ್ನ ಹಾಗೆಯೇ ಮುಂದುವರಿದು ಕ್ರಿ. ಶ. ೧೭ನೇ ಶತಮಾನದಲ್ಲಿ ನಾವೀಗ ಕರೆಯುವ 'ಆಧುನಿಕ ವಿಜ್ಞಾನ'ದ ವಿಕಾಸಕ್ಕೆ ಕಾರಣವಾಯಿತು.

**ವಿಶ್ವಸೃಷ್ಟಿ - ಭಾರತೀಯ ಚಿಂತನೆ**

ವಿಶ್ವಸೃಷ್ಟಿಯ ನಿಗೂಢತೆಗೆ ಉತ್ತರ ಕಂಡುಕೊಳ್ಳುವ ಪ್ರಕ್ರಿಯೆ ಋಗ್ವೇದದ ಕಾಲದಲ್ಲಿಯೇ ಪ್ರಾರಂಭವಾಗಿತ್ತು. ಋಷಿಗಳ ಚಿಂತನೆ ಹೀಗಿತ್ತು: ''ಸೃಷ್ಟಿಗೆ ಮೊದಲು ಅಸ್ತಿತ್ವವಿಲ್ಲದ್ದೂ ಇರಲಿಲ್ಲ ಅಥವಾ ಅಸ್ತಿತ್ವವಿರುವುದೂ ಇರಲಿಲ್ಲ. ಆಗ ವಾಯುವಿರಲಿಲ್ಲ ಮತ್ತು ಅದರಾಚೆಗೆ ಆಗಸವೂ ಇರಲಿಲ್ಲ. ಆಸರೆ ನೀಡುವ, ರಕ್ಷಣೆ ನೀಡುವುದಾದರೂ ಇತ್ತೆ? ಆಳ ಅರಿಯಲಾಗದಷ್ಟು ನೀರೇನಾದರೂ ಇತ್ತೆ? ಆಗ ಸಾವಿರಲಿಲ್ಲ, ಅಮರತ್ವವೂ ಇರಲಿಲ್ಲ, ಹಗಲು ಮತ್ತು ರಾತ್ರಿಗಳನ್ನು ವಿಭಾಗಿಸುವ ಸಂಧ್ಯಾಕಾಲವೂ ಇರಲಿಲ್ಲ.. ಆಗಿದ್ದದ್ದು ಕೇವಲ ನಿರಾಕಾರ ಶೂನ್ಯ ಮಾತ್ರ. ಸೃಷ್ಟಿಯಾದದ್ದು ಯಾವಾಗ ? ಯಾರಿಂದ ? ಯಾರು ತಾನೇ ಹೇಳಲು ಸಾಧ್ಯ ? ಪ್ರಚಂಡ ಸೃಷ್ಟಿಯ ನಂತರ ಬಂದವರು ದೇವರುಗಳು. ಯಾವಾಗ ಇದು ಮೊದಲಾಯಿತು, ಯಾರಿಗೆ ಗೊತ್ತು? ಸೃಷ್ಟಿಯ ಮೊದಲ ಘಟಕವಾದ ದೇವರು ನಾವಿರುವ ವಿಶ್ವದ ಸೃಷ್ಟಿಕರ್ತನೆ ? ಯಾರಿಗೆ ಗೊತ್ತು!''

ವ್ಯವಸ್ಥಿತ ಜ್ಞಾನಾರ್ಜನೆಯ ಎರಡನೆಯ ಗುರಿ ವೈವಿಧ್ಯಮಯವಾದ ದೃಗ್ಗೋಚರ ವಿಶ್ವವನ್ನು ಅರ್ಥಮಾಡಿಕೊಳ್ಳುವುದು. ಇದನ್ನು ಸತ್ಯಾನ್ವೇಷಣೆ ಎಂದು ಕರೆಯುವುದು ರೂಢಿ. ವಿಜ್ಞಾನ ಎಂಬ ಶಬ್ದ ಆಗ ಬಳಸಿದ್ದರೂ ಅದು ವಿಶೇಷ ಜ್ಞಾನ ಎನ್ನುವ ಅರ್ಥದಲ್ಲಿ ಬಳಸಲಾಗಿತ್ತು. ನಾವು ಈಗ ಗುರುತಿಸುವ ವಿಜ್ಞಾನಕ್ಕೂ ಅದಕ್ಕೂ ಯಾವ ಸಾಮ್ಯವೂ ಇಲ್ಲ.

ಇಲ್ಲಿ ಸತ್ಯ ಅಂದರೆ ಏನು ಅನ್ನುವ ಪ್ರಶ್ನೆ ಏಳುತ್ತದೆ. ಬಹುತೇಕ ಎಲ್ಲ ಜಿಜ್ಞಾಸುಗಳ ಆಸಕ್ತಿಯ ವಸ್ತು ಮಾನವ ವ್ಯಾಪಾರದ ಅಥವಾ ನಡತೆಯ ತತ್ವಗಳನ್ನು ಕುರಿತ ಜ್ಞಾನ. ನೀತಿಶಾಸ್ತ್ರ, ಧರ್ಮಶಾಸ್ತ್ರ, ವೈರಾಗ್ಯ ಒಟ್ಟಾರೆ ಅಧ್ಯಾತ್ಮ ವಿದ್ಯೆ – ಇವುಗಳೇ ಅವರಿಗೆ ಆಸಕ್ತಿಯ ವಿಷಯಗಳಾಗಿದ್ದವು. ಭೌತ ಜಗತ್ತಿನ ಬಗ್ಗೆ ಚಿಂತಿಸುವುದು ಕೆಳಸ್ತರದ್ದೆಂಬ ಭಾವನೆ ಹೆಚ್ಚಾಗಿತ್ತು. ಭೌತ ವಿಜ್ಞಾನವನ್ನು ತುಚ್ಛವಾಗಿ ಕಂಡು ಅದನ್ನು ತಿರಸ್ಕಾರಯೋಗ್ಯವೆಂದು ಪರಿಗಣಿಸು ತ್ತಿದ್ದವರಲ್ಲಿ ಪ್ರಮುಖನಾದವನು, ಗ್ರೀಕ್ ತತ್ವಜ್ಞಾನಿ ಅರಿಸ್ಟೋಕ್ಲಿಸ್. ಅವನ ವಿಶಾಲ ಬಾಹುಗಳಿಂದಾಗಿ ಶಾಲೆಯಲ್ಲಿ ಅವನಿಗಿಟ್ಟದ್ದ ಅಡ್ಡಹೆಸರು ಪ್ಲೇಟೋ. ಜ್ಞಾನ ಸಂಪಾದನೆ ಮಾಡುವುದು ಯಾವುದೇ ಲೌಕಿಕ ಪ್ರಯೋಜನ ಪಡೆಯಲಿಕ್ಕಲ್ಲ; ಅದು ಅಮೂರ್ತವಾದ ಆತ್ಮದ ಒಳಿತಿಗಾಗಿ ಮಾತ್ರ ಎಂಬುದು ಅವನ ನಿಲುವು.

ಪಾಶ್ಚಿಮಾತ್ಯ ತರ್ಕಶಾಸ್ತ್ರಕ್ಕೆ ಭದ್ರ ಬುನಾದಿ ಹಾಕಿದವನು ಪ್ಲೇಟೋನ ಶಿಷ್ಯ ಅರಿಸ್ಟಾಟಲ್. ೧೯ನೇ ಶತಮಾನದವರೆಗೆ ಇವನು ಪ್ರತಿಪಾದಿಸಿದ್ದ ತರ್ಕ ವಿಧಾನವೇ ಬಳಕೆಯಲ್ಲಿದ್ದು ನಂತರ ಇದು ಗಣಿತಶಾಸ್ತ್ರದ ಒಂದು ಶಾಖೆಯಾಯಿತು. ಸತ್ಯಾನ್ವೇಷಣೆಗೆ ಆಗಿನ ಚಿಂತಕರು ಬಳಸುತ್ತಿದ್ದದ್ದು ಅವಲೋಕನ ಪದ್ಧತಿ ಮತ್ತು ತಾರ್ಕಿಕ ನೆಲೆಯಲ್ಲಿ ಊಹೆ.

ಪ್ರಯೋಗ ನಡೆಸಿ ಪರೀಕ್ಷಿಸುವುದು ತೀರ ಕೆಳವರ್ಗದ ಗುಲಾಮರಿಗೆ ಮಾತ್ರ ಮೀಸಲು ಎಂಬ ಧೋರಣೆ ಅವರಿಗಿತ್ತು. ತಾಂತ್ರಿಕತೆಯನ್ನು ಆವಿಷ್ಕರಿಸಿ ಮುಂದುವರಿಸಿದವರು ಈ ಕೆಳಸ್ತರದ ಜನರೆಂಬುದು ಮಾತ್ರ ಐತಿಹಾಸಿಕ ಸತ್ಯ.

ಭೌತ ವಿಶ್ವದ ಬಗ್ಗೆ ಚಿಂತನೆ ನಡೆಸುವುದನ್ನು ಆಗಿನವರು ತತ್ವಜಿಜ್ಞಾಸೆ ಅಥವಾ ದರ್ಶನ ಎನ್ನುತ್ತಿದ್ದರೇ ಹೊರತು ವೈಜ್ಞಾನಿಕ ಚಿಂತನೆ ಎಂದೇನೂ ಕರೆಯುತ್ತಿರಲಿಲ್ಲ. ಹಾಗೆಂದ ಮಾತ್ರಕ್ಕೆ ಅವರಿಗೆ ಬದುಕಿನ ಬಗ್ಗೆ ಹಾಗೂ ಮಾನವೀಯ ಮೌಲ್ಯಗಳ ಬಗ್ಗೆ ಕಾಳಜಿ ಇರಲಿಲ್ಲವೆಂದಲ್ಲ. ಚಿಂತನೆ, ತಾರ್ಕಿಕತೆ, ವೈಚಾರಿಕತೆ ಹಾಗೂ ಇವೆಲ್ಲದರ ಏಕರೂಪವಾದ ವೈಜ್ಞಾನಿಕ ದೃಷ್ಟಿ ಸಹಸ್ರಮಾನಗಳಿಂದ ಚಲನಶೀಲವಾಗಿದೆ ಎಂಬುದನ್ನು ನೆನಪಿಸಲು ಸ್ಥೂಲ ಪ್ರಸ್ತಾವನೆ ಕೊಡಬೇಕಾಯಿತು, ಅಷ್ಟೆ.

'ವೈಜ್ಞಾನಿಕ' ಶಬ್ದ ವಿಶಿಷ್ಟ ಅರ್ಥ ಪಡೆದುಕೊಳ್ಳಲು ಚಾಲನೆ ನೀಡಿದವನು ಗೆಲಿಲಿಯೊ. ಮುಂದೆ ವೈಜ್ಞಾನಿಕ ವಿಧಾನಕ್ಕೆ ಭದ್ರ ಬುನಾದಿ ಹಾಕಿದವನು ನ್ಯೂಟನ್. ಅಲ್ಲಿಂದ ಮುಂದೆ, ಮಾನವನ ಎಲ್ಲ ಚಟುವಟಿಕೆಗಳಿಗೂ ಮಾನ್ಯತೆ ದೊರಕಿಸಿಕೊಳ್ಳಲು ಎಲ್ಲರೂ ಬಳಸಿದ್ದು 'ವೈಜ್ಞಾನಿಕ' ಎಂಬ ವಿಶೇಷಣ. ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆಗಳ ವಿರುದ್ಧ ದನಿ ಎತ್ತಿ, ದುಡಿಯುವವರ ಮತ್ತು ಶೋಷಿತ

'ವೈಜ್ಞಾನಿಕ' ಶಬ್ದ ವಿಶಿಷ್ಟ ಅರ್ಥ ಪಡೆದುಕೊಳ್ಳಲು ಚಾಲನೆ ನೀಡಿದವನು ಗೆಲಿಲಿಯೊ. ಮುಂದೆ ವೈಜ್ಞಾನಿಕ ವಿಧಾನಕ್ಕೆ ಭದ್ರ ಬುನಾದಿ ಹಾಕಿದವನು ನ್ಯೂಟನ್. ಅಲ್ಲಿಂದ ಮುಂದೆ, ಮಾನವನ ಎಲ್ಲ ಚಟುವಟಿಕೆಗಳಿಗೂ ಮಾನ್ಯತೆ ದೊರಕಿಸಿಕೊಳ್ಳಲು ಎಲ್ಲರೂ ಬಳಸಿದ್ದು 'ವೈಜ್ಞಾನಿಕ' ಎಂಬ ವಿಶೇಷಣ. ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆಗಳ ವಿರುದ್ಧ ದನಿ ಎತ್ತಿ , ದುಡಿಯುವವರ ಮತ್ತು ಶೋಷಿತ ವರ್ಗಕ್ಕೆ ನ್ಯಾಯಬದ್ಧವಾದ ಸಮಬಾಳು ನೀಡುವ ಕ್ರಿಯಾಶೀಲ ಸಮಾಜವಾದವನ್ನು ಕಾರ್ಲ್ ಮಾರ್ಕ್ಸ್ ಜನಪ್ರಿಯಗೊಳಿಸಿದ ನಂತರ ವಿವಿಧ ಮತಗಳ ಮುಖಂಡರುಗಳು ತಮ್ಮ ಮತದ ಶ್ರೇಷ್ಠತೆಯನ್ನು ಎತ್ತಿಹಿಡಿಯಲು ತಮ್ಮದೇ ನಿಜವಾದ ಸಮಾಜವಾದವೆಂದು ಕರೆದುಕೊಂಡದ್ದು ಇಂದು ಇತಿಹಾಸ.



## ಏಕಾಂತ ದುರಂತ

ಬಿತ್ತಿದ್ದೆಲ್ಲ ಹುಲುಸಾಗಿ ಬೆಳೆದು ನದಿಯ ಆಸುಪಾಸು
ತಂಪು ಸೊಂಪಾಗಿದೆ.
ಗಿಡಮರ ಬಳ್ಳಿ ಕಳ್ಳಿ ಪಚ್ಚೆಪೈರು ಹಕ್ಕಿ ಗಾನದಿಂಪಿಗೆ
ಸೊಗಸುತ್ತಿದೆ.
ಧೋ ಸುರಿವ ಮಳೆಗೆ ಕೆರೆಕಟ್ಟೆ ಕುಂಟೆ ತುಂಬಿ ಹರಿದು
ಹೊಳೆಪ್ರಾಯ ಹಿಗ್ಗಿ ಕಾಡುಮೇಡಿನ ಜನಸಮುದಾಯಕ್ಕೆ
ಸುಖಮಯ ಸುಗ್ಗಿ
ತೆರೆ ಎದ್ದು ಬಿದ್ದು ದಂಡೆಗೆ ಮುತ್ತು ಒತ್ತಿದರೆ ಸಾಕು
ಬಂಡೆ ಮನಸು ಕರಗುತ್ತದೆ
ಗಾಳ ಎಸೆದು ಬೆಸ್ತ ಬಲೆ ಬೀಸಿದರು ಸಿಗದೆ
ಅಲ್ಲೆ ಸುಳಿಯುತ್ತವೆ ಮೀನು ನಳ್ಳಿ ಜಲಚರ
ಸಾವ ಸುಳಿಯಲ್ಲಿ ಹೊಂಚುತ್ತಿದೆ ತೆರೆದ ಬಾಯಿಯ
ಮೊಸಳೆ ಶಾರ್ಕ್
ಮೊಲ ಹುಲ್ಲೆ ನವಿಲು ಕುಣಿದು ಸೌಂದರ್ಯದ ಸೊಲ್ಲೆತ್ತಿದೆ
ಗಿಳಿವಿಂಡು ಕೋಗಿಲೆ
ಖಂಡಮಾಂಸ ಗುಂಡಿಗೆಯ ಬಿಸಿರಕ್ತದಾಹದಲಿ
ಸುಳಿದಾಡುತ್ತಿವೆ ಉರಿಗಣ್ಣಿನ ಹುಲಿ ಸಿಂಹ ಚಿರತೆ ತೋಳ
ಬಾಯ್ನೀರು ಬರಿಸುವ ಜೇನು ಟೊಂಗೆಟಿಸಿಲು ಬಂಡೆಗಲ್ಲು
ಗಳಲ್ಲಿ ತೂಗಿ ಜಿನುಗುತ್ತಿವೆ
ನೆಲದೆದೆಯ ಉದ್ದಗಲಕು ಸಾಗಿದೆ ನೇಗಿಲ ಯೋಗಿಯ
ಪರಿಶ್ರಮದ ಗೆರೆ
ಸಮಸ್ಥಿತಿಯ ವನಸಿರಿಗೆ ಕಿಚ್ಚು ಹಬ್ಬಿ ದಹಿಸುತ್ತಿದೆ
ಸತಿ ಸೀತೆ ವಿರಹದಲಿ ರಾಮನೇಕಾಂತ ದುರಂತ.

ಕೆ. ನ. ಶಿವತೀರ್ಥನ್
ನಂ. ೪೩, 'ಎಂ' ಬ್ಲಾಕ್, ಎರಡನೇ ಹಂತ, ಕುವೆಂಪುನಗರ, ಮೈಸೂರು - ೫೭೦ ೦೨೩

ವರ್ಗಕ್ಕೆ ನ್ಯಾಯಬದ್ಧವಾದ ಸಮಬಾಳು ನೀಡುವ ಕ್ರಿಯಾಶೀಲ ಸಮಾಜವಾದವನ್ನು ಕಾರ್ಲ್ ಮಾರ್ಕ್ಸ್ ಜನಪ್ರಿಯಗೊಳಿಸಿದ ನಂತರ ವಿವಿಧ ಮತಗಳ ಮುಖಂಡರುಗಳು ತಮ್ಮ ಮತದ ಶ್ರೇಷ್ಠತೆಯನ್ನು ಎತ್ತಿಹಿಡಿಯಲು ತಮ್ಮದೇ ನಿಜವಾದ ಸಮಾಜವಾದವೆಂದು ಕರೆದುಕೊಂಡದ್ದು ಇಂದು ಇತಿಹಾಸ.

### ಹತ್ತೊಂಬತ್ತನೆಯ ಶತಮಾನದವರೆಗೆ

ಈ ವೇಳೆಗಾಗಲೇ ಭೌತವಿಜ್ಞಾನಕ್ಕೆ ಒಂದು ಕಟ್ಟುನಿಟ್ಟಾದ ಅನಮ್ಯ ಚೌಕಟ್ಟು ಸೃಷ್ಟಿಯಾಗಿತ್ತು. ಸಾಮಾನ್ಯ ಜನರ ಮನೋಭಾವದ ಮೇಲೂ ಈ ದೃಷ್ಟಿಪ್ರಭಾವ ಬೀರಿತ್ತು. ಈ ಚೌಕಟ್ಟಿನ ನಾಲ್ಕು ಆಧಾರ ಪರಿಕಲ್ಪನೆಗಳು : ದೇಶ, ಕಾಲ, ದ್ರವ್ಯ ಮತ್ತು ಕಾರ್ಯಕಾರಣ ಸಂಬಂಧ ವಾದ ಅಥವಾ ಹೇತುವಾದ; ನಿಮಿತ್ತವಾದ. ಒಂದು ಪರಿಕಲ್ಪನೆಯ ಅಸ್ತಿತ್ವವನ್ನು ಅಥವಾ ಅದು ಎಷ್ಟರಮಟ್ಟಿಗೆ ಸತ್ಯ ಎಂದು ಒಪ್ಪಿಕೊಳ್ಳಬೇಕಾದರೆ ವಿಜ್ಞಾನ ಕಂಡು ಹಿಡಿದಿರುವ ಸಾಧನಗಳಿಂದ ಅದನ್ನು ಪರಿಶೀಲಿಸಲು ಸಾಧ್ಯವಾಗಬೇಕು ಅಥವಾ ನಮ್ಮ ಇಂದ್ರಿಯಗಳಿಗೆ ಅದು ಗೋಚರವಾಗಬೇಕು. ದ್ರವ್ಯ (matter) ಒಂದು ಮೂಲಭೂತ ಸತ್ಯ. ಭೌತದ್ರವ್ಯ, ಅದರ ರೂಪಾಂತರಗಳು ಮತ್ತು ಅದರ ಚಲನೆಯ ಮೇಲೆ ಜಯ ಸಾಧಿಸುವ ಪ್ರಕ್ರಿಯೆಗೆ ವೈಜ್ಞಾನಿಕ ಮಾರ್ಗ ಎಂದು ಕರೆಯುವ ವಾದ ಮಾನ್ಯತೆ ಪಡೆಯಿತು. ವೇದಾಂತಿಗಳು ತಮ್ಮದು 'ಪಾರಮಾರ್ಥಿಕ ವಿಜ್ಞಾನ' ಎಂದು ವಿವರಿಸುವ ಪ್ರಕ್ರಿಯೆ ಮೊದಲಾಯಿತು. ವಿಜ್ಞಾನವೆಂದರೆ ಹೆಚ್ಚು ಜನರ ಹೆಚ್ಚಿನ ಸೌಖ್ಯಕ್ಕೆ ನೆರವು ನೀಡುವ ಪ್ರಯೋಜನಕಾರಿ ಜ್ಞಾನವೆಂಬ ಚಿತ್ರಣ ಮೂಡಿತು. ಪ್ರತಿಯೊಂದು ಕಾರ್ಯಕ್ಕೆ ಹೇತುವಾದ ಕಾರಣವಿರಲೇಬೇಕು. ಈ ನೆಲೆಯಲ್ಲಿ ನಿಯತಿವಾದ (Determinism) ವೈಜ್ಞಾನಿಕ. ಸಹಜವಾಗಿಯೇ ಇದು ಆಸ್ತಿಕರಿಗೆ ಒಪ್ಪಿಗೆಯಾಗಲಿಲ್ಲ. ಇದನ್ನು ಒಪ್ಪಿಕೊಂಡರೆ ಮಾನವನ ಬದುಕಿನಲ್ಲಿ ಪ್ರವೇಶ ಮಾಡುವ ದೇವರಿಗೆ ಸ್ಥಾನವಿರಲು ಸಾಧ್ಯವಿಲ್ಲ. ಪ್ರಕೃತಿಯಲ್ಲಿನ ಎಲ್ಲಾ ಘಟನೆಗಳೂ ಒಂದು ನಿರ್ದಿಷ್ಟ ನಿಯಮಾನುಸಾರ ನಡೆದಾಗ ಮನುಷ್ಯನಿಗೆ ಇಚ್ಛಾಸ್ವಾತಂತ್ರ್ಯವೂ ಇರುವುದಿಲ್ಲ. ವೈಜ್ಞಾನಿಕ ವಿಧಾನ ಎಷ್ಟು ಖಚಿತವಾದ ಚೌಕಟ್ಟಿಗೆ ಸೀಮಿತವಾಗಿತ್ತೆಂದರೆ, ಅದರಲ್ಲಿ ಭಾವನಾತ್ಮಕ ಹಾಗೂ ಹೃದಯಸಂಬಂಧಿ ಅನುಭವ ಹಾಗೂ ಅನುಭಾವಗಳಿಗೆ ಸ್ಥಾನವಿರಲಿಲ್ಲ. ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಬಳಸಿಕೊಂಡು ಇಡೀ ಜನತೆಯ ಸಾಮಾಜಿಕ ಪ್ರಭುತ್ವ ನೆಲೆಗೊಳ್ಳಬೇಕೆಂದು ಕಾರ್ಲ್ ಮಾರ್ಕ್ಸ್ ಪ್ರತಿಪಾದಿಸಿದ ತತ್ವಗಳನ್ನು ವೈಜ್ಞಾನಿಕ ಎಂದು ಸಮಾಜಶಾಸ್ತ್ರ ಮತ್ತು ರಾಜ್ಯಶಾಸ್ತ್ರದ ವಿದ್ಯಾರ್ಥಿಗಳು ಕರೆದರು. ಹೀಗಾಗಿ ಈ ಜ್ಞಾನ ಶಾಖೆಗಳಿಗೆ 'ಸಮಾಜ ವಿಜ್ಞಾನ' ಎಂದು ಕರೆದು ಶಾಸನಮುಕ್ತವಾದ ಸ್ವಯಂ ನಿಯಂತ್ರಿತ ಸಹಕಾರಿ ಸಮಾಜದ ವಿಕಾಸಕ್ಕೆ ವೈಜ್ಞಾನಿಕ ವಿಧಾನವೇ ಏಕೈಕ ಮಾರ್ಗ ಎಂಬ ವಾದ ಹೆಚ್ಚು ಜನಪ್ರಿಯವಾಯಿತು. ನಿಯತಿವಾದಕ್ಕೆ ಇದು ಹತ್ತಿರವಾಯಿತು.

### ಇಪ್ಪತ್ತನೆಯ ಶತಮಾನ

ಹತ್ತೊಂಬತ್ತನೆಯ ಶತಮಾನದ ಕೊನೆಯ ಐದು ವರ್ಷಗಳಲ್ಲಾದ ಸಂಶೋಧನೆಗಳು ಆವರೆಗೆ ಪ್ರಚಲಿತವಾಗಿದ್ದ ಕಟ್ಟುನಿಟ್ಟಿನ ಆಧಾರ ಚೌಕಟ್ಟಿನ ಬುಡವನ್ನು ಅಲುಗಾಡಿಸುವಂತಹ ಮಾಹಿತಿಗಳನ್ನು ನೀಡಿದವು. ನಿಗೂಢವಾಗಿದ್ದ ಅಣು ಮತ್ತು ಪರಮಾಣು ಜಗತ್ತು ಅನಾವರಣಗೊಂಡು ಆವರೆಗೆ ಕೇವಲ ಊಹೆಯಾಗಿದ್ದದ್ದು, ಹೊಸ ಚಿಂತನೆ ಹಾಗೂ ತರ್ಕಕ್ಕೆ ಪ್ರಚೋದನೆ ನೀಡಿತು. ಜ್ಞಾತೃವಿಗೆ ಸಂಬಂಧಿಸದೆ ಜ್ಞೇಯಕ್ಕೆ ಮಾತ್ರ ಸಂಬಂಧಿಸಿದ, ವ್ಯಕ್ತಿಗತವಲ್ಲದ, ವಾಸ್ತವ ಜ್ಞಾನವಾಗಿದ್ದ ವಿಜ್ಞಾನ ಆ ಕಠೋರ ಚೌಕಟ್ಟಿನಿಂದಾಚೆಗೆ ಬರಲೇಬೇಕಾದ ಸೂಚನೆಗಳು ಹರಳುಗಟ್ಟಿದ್ದು ಹೈಸನ್‌ಬರ್ಗ್‌ನ ಅನಿಶ್ಚಿತತಾ ತತ್ವ ಪ್ರತಿಪಾದನೆಗೊಂಡ ನಂತರ. ಈ ತತ್ವವನ್ನು ಸಂಕ್ಷೇಪವಾಗಿ ಹೀಗೆ ಹೇಳಬಹುದು. ಎಲೆಕ್ಟ್ರಾನ್ ಅಂತಹ ಒಂದು ಕಣದ ಚಲನೆಯನ್ನು ತೆಗೆದುಕೊಳ್ಳೋಣ. ನಿಯತಿವಾದದ ಪ್ರಕಾರ (ಇದೇ ವೈಜ್ಞಾನಿಕವೆಂದು ಪರಿಗಣಿಸಿದ್ದದ್ದು) ಅದರ ಸ್ಥಾನವನ್ನೂ ಮತ್ತು ಸಂವೇಗ (momentum)ವನ್ನೂ ಏಕಕಾಲದಲ್ಲಿ ನಿಷ್ಕೃಷ್ಟವಾಗಿ ಅಳೆಯುವುದು ಸಾಧ್ಯ. ಆದರೆ ಪ್ರಯೋಗಗಳು ಇದು ಅಸಾಧ್ಯ ಎಂದು ತೋರಿಸಿದವು. ಕಣದ ಸ್ಥಾನವು ಹೆಚ್ಚು ನಿಖರವಾಗಿ ತಿಳಿದಷ್ಟೂ ಅದರ ಸಂವೇಗದ ಅಳತೆಯಲ್ಲಿನ ನಿಖರತೆ ಕಡಿಮೆಯಾಗುತ್ತದೆ. ಸಂವೇಗದ ಅಳತೆ ನಿಖರವಾದಾಗ ಸ್ಥಾನದ ಅಳತೆಯಲ್ಲಿ ಅನಿಶ್ಚಿತತೆ ಹೆಚ್ಚಾಗುತ್ತದೆ. ಈ ಅನಿಶ್ಚಿತತೆಗೆ ಕಾರಣ ದ್ರವ್ಯದ ಕಣ – ತರಂಗ ದ್ವೈತತ್ವ.

ವೈಜ್ಞಾನಿಕ ಚಿಂತನೆಯ ಮೇಲೆ ಈ ತತ್ವದ ಪರಿಣಾಮವೇನು ? ವ್ಯಕ್ತಿಗತವಲ್ಲದ, ವಾಸ್ತವಿಕ ನೆಲೆಯಲ್ಲಿ ಎಷ್ಟು ನಿಖರವಾಗಿ ಪರಮಾಣು ಜಗತ್ತನ್ನು ವಿವರಿಸಲು ಸಾಧ್ಯ ಎಂಬ ಪ್ರಶ್ನೆ ಪ್ರಮುಖವಾಯಿತು. ಇದಕ್ಕೆ ಮೊದಲು ಬೃಹತ್ ಪ್ರಮಾಣದ ಭೌತ ಘಟನೆಗಳನ್ನು ವಿವರಿಸುವಾಗ ವ್ಯಕ್ತಿನಿಷ್ಠವಲ್ಲದ ಸಾರ್ವತ್ರಿಕತೆ ಸಾಧ್ಯವಾಗಿತ್ತು. ವಿಜ್ಞಾನದ ತಳಹದಿಯ

ಮೇಲೆ ಎದ್ದುನಿಂತ ತಾಂತ್ರಿಕತೆಯ ಪ್ರಖರ ಬೆಳಕಿನಲ್ಲಿ ವಾಸ್ತವವಾದವೇ ವೈಜ್ಞಾನಿಕ, ಇದೇ ವೈಚಾರಿಕತೆ, ಉಳಿದದ್ದೆಲ್ಲಾ ಮೂಢನಂಬಿಕೆ ಎನ್ನುವ ಬಾಹ್ಯ ವಿಷಯಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಡುವ ಪ್ರವೃತ್ತಿ ಬೆಳೆದಿತ್ತು. ಅನಿಶ್ಚಿತತಾವಾದ ಕಾರ್ಯ-ಕಾರಣ ನೆಲೆಯ ಮೇಲೆ ಬೇರುಬಿಟ್ಟಿದ್ದ ನಿಯತಿವಾದವನ್ನು ಅಲುಗಾಡಿಸಿತು. ಈ ವಿಶ್ವದಲ್ಲಿನ ಎಲ್ಲಾ ವಸ್ತುಗಳ ಸ್ಥಾನ ಮತ್ತು ವೇಗಗಳನ್ನು ತಿಳಿದಲ್ಲಿ ವಿಶ್ವದ ಭೂತ, ವರ್ತಮಾನ ಹಾಗೂ ಭವಿಷ್ಯತ್ತನ್ನು ಕರಾರುವಾಕ್ಕಾಗಿ ನಿರ್ಧರಿಸಿಬಿಡಬಹುದೆಂಬ ಹಿಂದಿನವರ ವಾದಕ್ಕೆ ಹಿನ್ನಡೆಯಾಯಿತು. ಕ್ರಾಂತಿಕಾರಿ ವೈಚಾರಿಕ ಚಿಂತಕನೆಂದು ಗುರುತಿಸಲ್ಪಟ್ಟಿದ್ದ ಐನ್‌ಸ್ಟೈನ್ ಅಂತಹವನಿಗೇ ಈ ಹೊಸ ದೃಷ್ಟಿಯನ್ನು ಒಪ್ಪಿಕೊಳ್ಳುವುದು ಕಷ್ಟವಾಯಿತು. ತತ್ವಜ್ಞಾನಿ ಮತ್ತು ಚಿಂತಕ ಇಮ್ಯಾನ್ಯುಯಲ್ ಕಾಂಟ್ ಕಾರಣ ಹಿಡಿದು ಕಾರ್ಯವನ್ನು ತರ್ಕಿಸುವ, ಬುದ್ಧಿರೂಢ ತಾರ್ಕಿಕತೆಯಲ್ಲಿ ಭೌತ ನಿಯಮಗಳನ್ನೆಲ್ಲಾ ವಿವರಿಸುವುದೇ ವೈಜ್ಞಾನಿಕ ಚಿಂತನೆ ಎಂಬ ತೀರ್ಮಾನಕ್ಕೆ ಬಂದಿದ್ದ. ಇಪ್ಪತ್ತನೇ ಶತಮಾನದ ಆವಿಷ್ಕಾರಗಳು ಹೊಸದೊಂದು ಚಿಂತನೆಗೆ ಕಾರಣವಾದವು. ಸಾಪೇಕ್ಷತಾ ಸಿದ್ಧಾಂತ, ಅವರೆಗೆ ಒಪ್ಪಿಕೊಂಡಿದ್ದ, ದೇಶ ಮತ್ತು ಕಾಲಗಳ ಪರಿಕಲ್ಪನೆಯನ್ನೇ ಬದಲಾಯಿಸಿತು. ಸಹಜ ಜ್ಞಾನ, ಅಂತರ್ಬೋಧ, ಒಳ ಅರಿವುಗಳಿಂದ ವಿಶ್ವ ರಹಸ್ಯವನ್ನು ಅರಿಯಬಹುದೆಂಬ ವಾದ ತನ್ನ ಮೊನಚನ್ನು ಕಳೆದುಕೊಂಡಿತು. ಕ್ವಾಂಟಮ್ ಸಿದ್ಧಾಂತದಲ್ಲಿ ಕಾರ್ಯ-ಕಾರಣ ವಾದಕ್ಕೆ ಅರ್ಥವೇ ಇಲ್ಲ. ಭೌತ ವಿಶ್ವದಲ್ಲಿನ ಮೂಲ ಕಣಗಳ ಅಭ್ಯಾಸದಲ್ಲಿ ಸಹಜ ಜ್ಞಾನಕ್ಕೆ ಸ್ಥಾನವಿಲ್ಲ.

ಒಂದು ಪುಟ್ಟ ಉದಾಹರಣೆಯಿಂದ ಕಾರ್ಯ-ಕಾರಣ ವಾದದ ಅನುಪಯುಕ್ತತೆಯನ್ನು ವಿವರಿಸಬಹುದು. ಪರಮಾಣು ಪ್ರಪಂಚದಲ್ಲಿ ಒಂದು ರೇಡಿಯಮ್ ಪರಮಾಣು ಆಲ್ಫ ಕಿರಣವನ್ನು ಹೊರಸೂಸುತ್ತದೆ. ಇದು ಯಾವಾಗ ಆಲ್ಫ ಕಿರಣವನ್ನು ಉತ್ಸರ್ಜಿಸುತ್ತದೆ ಎಂದು ವೈಜ್ಞಾನಿಕವಾಗಿ ಪೂರ್ವ ಸೂಚನೆ ಕೊಡುವುದು ಅಸಾಧ್ಯ. ನಾವು ಸರಾಸರಿ ಸಂಭವನೀಯತೆಯನ್ನು ತಿಳಿಸಬಹುದೇ ಹೊರತು, ವೈಜ್ಞಾನಿಕವಾಗಿ ನಿಖರ ನಿರ್ಣಯಕ್ಕೆ ಬರಲಾಗುವುದಿಲ್ಲ. ವಸ್ತುವಿನ ನಿರಪೇಕ್ಷ ಸ್ಥಿತಿಯನ್ನು, ಅದರ ಮೇಲೆ ಯಾವ ಪ್ರಭಾವವನ್ನೂ ಬೀರದೆ, ಅದರ ಸಹಜ ಸ್ಥಿತಿಯನ್ನು ಯಾವ ವಿಜ್ಞಾನಿ ವೀಕ್ಷಕನೂ ತಿಳಿಯಲು ಅಸಾಧ್ಯ ಎಂಬುದು ಈ ಕಾಲದ ವೈಜ್ಞಾನಿಕ ಸತ್ಯ.

**ವೈಜ್ಞಾನಿಕ ಶಬ್ದದ ದುರುಪಯೋಗ**

ವೈಜ್ಞಾನಿಕತೆಯ ತಳಹದಿಯೇ ಮುಕ್ತ ಚಿಂತನೆ. ಆಡಳಿತಶಾಹಿ ಹಾಗೂ ಸಮಾಜದ ಪ್ರಭಾವಿ ಸಂಘಟನೆಗಳು ಉದ್ದೇಶಪೂರ್ವಕವಾಗಿಯೇ ಸುಳ್ಳುಗಳನ್ನು ಸೃಷ್ಟಿಸಿ, ನಿರ್ದಿಷ್ಟ ಕಾಲ ಘಟ್ಟದಲ್ಲಿ ಪ್ರಚಲಿತವಾಗಿದ್ದ ನಂಬಿಕೆಗಳ ಚೌಕಟ್ಟಿನಲ್ಲಿ ಸಾಮಾನ್ಯ ಜನರನ್ನು ಮೋಸ ಗೊಳಿಸುತ್ತಾ ಬಂದಿವೆ. ಹಿಂದಿನ ಕಾಲದಲ್ಲಿ ಆಧ್ಯಾತ್ಮಿಕತೆಯೇ ಪರಮಶ್ರೇಷ್ಠವೆಂದು ಪ್ರತಿಪಾದಿಸಲಾಗುತ್ತಿತ್ತು. ಈಚಿನ ದಿನಗಳಲ್ಲಿ, ಹಳೆಯ ಸರಕನ್ನೇ ಮಾರಾಟ ಮಾಡಲು ತಮ್ಮ ಚಿಂತನೆಗಳು 'ವೈಜ್ಞಾನಿಕ' ಎಂಬ ಲೇಬಲ್ ಹಚ್ಚುವುದು ಹೆಚ್ಚು ಲಾಭದಾಯಕ ದಂಧೆಯಾಗಿದೆ.

ಇಂಗ್ಲಿಷ್ ಶಬ್ದ 'ರಿಲಿಜನ್' ಅನ್ನು ದೇಶೀಯ ಭಾಷೆಯಲ್ಲಿ ಬಳಸುವಾಗ 'ಧರ್ಮ' ಎಂದು ಬರೆಯುವುದು ರೂಢಿ. ಈಗ ಚಾಲ್ತಿಯಲ್ಲಿರುವ 'ರಿಲಿಜನ್'ಗಳೆಲ್ಲಾ 'ಮತ'ಗಳೇ ಹೊರತು ಧರ್ಮ ಅಲ್ಲ. ಧರ್ಮದಲ್ಲಿ ಸಾರ್ವತ್ರಿಕತೆ, ಮಾನವ ಪ್ರೀತಿ, ಚಲನಶೀಲತೆ, ಮೇಲು-ಕೀಳು ಎಂಬ ತಾರತಮ್ಯವಿಲ್ಲದ ಹಾಗೂ ತನ್ನದೇ ಶ್ರೇಷ್ಠವೆಂಬ ಮೂಢನಂಬಿಕೆ ಗಳಿಗೆ ಸ್ಥಾನವಿಲ್ಲ. ವಿಜ್ಞಾನ ಬೆಳೆದು ಬಂದಿರುವುದೂ ಈ ಜಾಡಿನಲ್ಲೆ. ಬದಲಾವಣೆಗೆ ಅವಕಾಶವೇ ಇಲ್ಲದ ಸಾರ್ವಕಾಲಿಕ 'ಸತ್ಯ'ವನ್ನು ವಿಜ್ಞಾನ ಒಪ್ಪುವುದಿಲ್ಲ. ಇದಕ್ಕೆ ವಿರುದ್ಧವಾಗಿ ಮತಗಳು ಮಾಡುತ್ತಿರುವುದಾದರೂ ಏನು? ತಮ್ಮದೇ ಶ್ರೇಷ್ಠವೆಂಬ ಭಾವನೆಯನ್ನು ಅನುಯಾಯಿಗಳಲ್ಲಿ ಮೂಡಿಸಲು ಅನೇಕ ತಂತ್ರಗಳನ್ನು ರೂಪಿಸಿ, ಅನೇಕ ಪವಾಡಗಳನ್ನು ಸೃಷ್ಟಿಸಿ, ಅವೆಲ್ಲಾ ವೈಜ್ಞಾನಿಕ ಸತ್ಯವೆಂದು ಜನರನ್ನು ಮೋಸಗೊಳಿಸುತ್ತಿವೆ.

ಉದಾಹರಣೆಗೆ, ಹೈಸ್ಕೂಲು ತರಗತಿಯ ಸಮಾಜವಿಜ್ಞಾನದ ಗೊಂದಲವನ್ನೇ ತೆಗೆದು ಕೊಳ್ಳೋಣ. ವ್ಯಕ್ತಿಗಳ ಹೆಸರುಗಳ ಬಗ್ಗೆ ಗುದ್ದಾಡುತ್ತಿದ್ದಾರೆಯೇ ಹೊರತು, ಇತಿಹಾಸದಿಂದ ವಿದ್ಯಾರ್ಥಿಗಳು ಕಲಿಯಬೇಕಾದದ್ದಾದರೂ ಏನು ಎಂಬುದರ ಬಗ್ಗೆ ಯಾರೂ ಚಿಂತಿಸುವುದೇ ಇಲ್ಲ. ತಮ್ಮ ಮಾಹಿತಿ ಸಂಗ್ರಹಣೆಯೇ ಅತ್ಯಂತ ವೈಜ್ಞಾನಿಕ ಎಂದು ಹೇಳುವುದನ್ನು ಮಾತ್ರ ಇವರು ಮರೆಯುವುದೇ ಇಲ್ಲ.

ಹದಿಮೂರರಿಂದ ಹದಿನಾರನೆಯ ಶತಮಾನದಲ್ಲಿ ಭಾರತದ ಮೇಲೆ ನಡೆದ ವಿದೇಶೀ ಆಕ್ರಮಣವನ್ನೇ ತೆಗೆದುಕೊಳ್ಳೋಣ. ಈ ಆಕ್ರಮಣಗಳ ಸಮಯದಲ್ಲಿ ಜನಜೀವನ ತಾತ್ಕಾಲಿಕವಾಗಿ ಅಸ್ತವ್ಯಸ್ತಗೊಂಡಿತ್ತು, ನಿಜ. ಕೆಲವೇ ತಿಂಗಳುಗಳಲ್ಲಿ ಜನಜೀವನ ಮತ್ತೆ ಮೊದಲಿನ ಸ್ಥಿತಿಗೇ ವಾಪಸಾಗುತ್ತಿತ್ತು. ಈ ಘಟನೆಗಳು ರೈತರ, ಕುಶಲ ಕರ್ಮಿಗಳ ಬದುಕಿಗೆ ಆಘಾತವಾಗುತ್ತಿರಲಿಲ್ಲ. ಸಾಮಾಜಿಕ ಹಾಗೂ ಆರ್ಥಿಕ ಬದುಕಿನ ಮೇಲೆ ಪರಿಣಾಮ ಬೀರುತ್ತಿರಲಿಲ್ಲ. ಈ ಅಂಶಗಳಿಗೆ ಒತ್ತು ನೀಡುವ ಬದಲು ಮತೀಯ ವಿಷಯಗಳಿಗೇ ಹೆಚ್ಚು ಒತ್ತು ನೀಡಿ ಅದನ್ನು ವೈಜ್ಞಾನಿಕ ವಿವರಣೆ ಎಂದು ಬೇರೆ ವ್ಯಾಖ್ಯಾನಿಸುವುದಕ್ಕೆ ಏನೆಂದು ಕರೆಯಬೇಕು ?

ಅದಕ್ಕೆ ವಿರುದ್ಧವಾಗಿ ಬ್ರಿಟಿಷರ ಆಳ್ವಿಕೆಯಲ್ಲಿ ಈ ದೇಶದ ಸಂಪತ್ತು ಕ್ರಮಬದ್ಧವಾಗಿ ಲೂಟಿಯಾಯಿತು. ಈ ದೇಶದ ಕೈಗಾರಿಕೆ ಮೂಲೆಗುಂಪಾಯಿತು. ಈ ದೇಶದ ಸಂಪತ್ತು ಇಂಗ್ಲೆಂಡಿನ ಕೈಗಾರಿಕೆ ಬೆಳೆಯಲು ಬಳಕೆಯಾಯಿತು. ಬ್ರಿಟಿಷ್ ಇತಿಹಾಸಕಾರರ ಅಭಿಪ್ರಾಯದಂತೆ ಇಂಗ್ಲೆಂಡಿನ ಕೈಗಾರಿಕಾ ಕ್ರಾಂತಿಗೂ ಭಾರತದಲ್ಲಿ ಅವರ ಆಳ್ವಿಕೆಗೂ ನೇರ ಸಂಬಂಧವಿದೆ. ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿ ಅತ್ಯುನ್ನತ ಸ್ಥಿತಿಯಲ್ಲಿದ್ದ ಭಾರತೀಯ ಕೈಗಾರಿಕಾ ವಲಯ ಕೇವಲ ಒಂದೇ ಒಂದು ಶತಮಾನದಲ್ಲಿ ನೆಲಕಚ್ಚಿದ್ದು ಬ್ರಿಟಿಷ್ ಆಳ್ವಿಕೆಯಲ್ಲಿ.

**ವೈಜ್ಞಾನಿಕ ಸತ್ಯ**

ಒಂದು ವೇಳೆ ನಾವು ಯಾವುದೂ ಬದಲಾಗದ ಸ್ಥಾಯಿ ಗ್ರಹದ ಮೇಲೆ ವಾಸಿಸಿದ್ದಲ್ಲಿ ಏನಾಗುತ್ತಿತ್ತು? ಆಗ ಮಾಡಲು ಕೆಲಸವೇ ಇರುತ್ತಿರಲಿಲ್ಲ! ಆಗ ಕಲ್ಪನೆ, ಊಹೆ ಮತ್ತು ಕನಸುಗಳೇ ಇರುತ್ತಿರಲಿಲ್ಲ. ಒಂದು ವೇಳೆ ಯಾವುದೇ ನಿಯಮಕ್ಕೊಳಪಡದ ಯದ್ವಾ-ತದ್ವಾ ಬದಲಾಗುತ್ತಿರುವ ಗ್ರಹದ ಮೇಲಿದ್ದಿದ್ದರೆ? ಆಗಲೂ ಸೃಜನಶೀಲತೆಯಾಗಲೀ, ವಿಜ್ಞಾನವಾಗಲೀ ಇರುತ್ತಿರಲಿಲ್ಲ. ಆದರೆ ನಾವಿರುವುದು ಈ ಎರಡೂ ರೀತಿಯದ್ದಲ್ಲದ, ಒಂದು ನಿರ್ದಿಷ್ಟ ನಿಯಮಾನುಸಾರ ಬದಲಾಗುತ್ತಿರುವ ಗ್ರಹದ ಮೇಲೆ. ಇವೇ ನಿಸರ್ಗ ನಿಯಮಗಳು. ಇವುಗಳ ಆಳವಾದ ಅಭ್ಯಾಸ ನಿಶ್ಚಿತತೆಯಿಂದ ಅನಿಶ್ಚಿತತೆಯ ವಿಸ್ಮಯ ಪ್ರಪಂಚಕ್ಕೆ ನಮ್ಮನ್ನು ಕರೆದೊಯ್ಯುತ್ತದೆ. ಈ ವಿಧಾನದಲ್ಲಿ ಗಂಡು-ಹೆಣ್ಣು ಎಂಬ ಭೇದವಿಲ್ಲ, ಜಾತಿ-ಮತಗಳ ಕಟ್ಟಳೆಯಿಲ್ಲ, ನನ್ನದೇ ಸರಿ ಎಂಬ ಶಠ ಇಲ್ಲ, ಬದುಕೆಂದರೆ ಕೇವಲ ವಿಜ್ಞಾನ ಮಾತ್ರ ಎಂಬ ಅಂಧಶ್ರದ್ಧೆಯೂ ಇಲ್ಲ.

ಬದುಕಿನಲ್ಲಿ ಸಂಗೀತ, ನೃತ್ಯ, ಸಾಹಿತ್ಯ ಮುಂತಾದ ನೂರಾರು ಪ್ರಭೇದಗಳಿವೆ. ಇವೆಲ್ಲವನ್ನೂ ವಿಜ್ಞಾನದ ಚೌಕಟ್ಟಿಗೆ ಸೀಮಿತಗೊಳಿಸುವುದು ಅವಿವೇಕ. ನಮ್ಮ ಜಾನಪದಕ್ಕೆ ಶತಮಾನಗಳ ಇತಿಹಾಸವಿದೆ. ಅದನ್ನು ಸ್ವೀಕರಿಸಲು ವಿಜ್ಞಾನದ ಮುಖವಾಡ ತೊಡಿಸಬೇಕಾಗಿಲ್ಲ. ಬದುಕಿಗೆ ಇರುವ ಸಹಸ್ರ ಆಯಾಮಗಳನ್ನು ಅವುಗಳ ನೆಲೆಯಲ್ಲಿಯೇ ಸ್ವೀಕರಿಸಬೇಕು. ಅದೇ ರೀತಿ ವೈಜ್ಞಾನಿಕ ವಿಧಾನಕ್ಕೂ ತನ್ನದೇ ಆದ ರೀತಿ ರಿವಾಜುಗಳಿವೆ. ಸಮಾಜದ ಶಾಂತಿಯನ್ನು, ಆರೋಗ್ಯವನ್ನು ಹಾಳುಮಾಡುವಂತಹ 'ಪರಂಪರೆ' ಮತ್ತು 'ಸಂಸ್ಕೃತಿ'ಗಳಿದ್ದರೆ ಅವನ್ನು ನಿರಾಕರಿಸುವುದು ವೈಜ್ಞಾನಿಕ ವಿಧಾನ. ಮಾವಿನ ಹಣ್ಣನ್ನು ಸವಿಯುವಾಗ ಅದರ 'ಕೆಮಿಸ್ಟ್ರಿ' ಬಗ್ಗೆ ಚಿಂತಿಸುವುದು ಅವೈಜ್ಞಾನಿಕ. ಅದೇ ರೀತಿ ಊಹಾ ಪ್ರತಿಜ್ಞೆಯೇ ಜಳ್ಳಾಗಿರುವ ಫಲಜ್ಯೋತಿಷ್ಯವನ್ನು ವೈಜ್ಞಾನಿಕ ಲೇಬಲ್ ಹಚ್ಚಿ ಮಾರಾಟ ಮಾಡುವುದೂ ವಿವೇಕವಲ್ಲ. ಅವೈಜ್ಞಾನಿಕವಾದರೂ ಫಲಜ್ಯೋತಿಷ್ಯ ಬದುಕಿರುತ್ತದೆ.

ಜವಾಹರಲಾಲ ನೆಹರು ಹೇಳಿದ್ದರು : ''ಹಸಿವು ಮತ್ತು ದಾರಿದ್ರ್ಯ, ಅನಾರೋಗ್ಯ ಮತ್ತು ಅನಕ್ಷರತೆ, ಮೂಢನಂಬಿಕೆ ಮತ್ತು ಜಡ್ಡುಗಟ್ಟಿದ ಆಚರಣೆಗಳಂತಹ ಸಮಸ್ಯೆಗಳಿಗೆ ಪರಿಹಾರ ಒದಗಿಸಲು ವಿಜ್ಞಾನವೊಂದರಿಂದಲೇ ಸಾಧ್ಯ.'' ಸಾಮಾಜಿಕ ನ್ಯಾಯ ದೊರಕಿಸಲು ಯಾವುದೇ ಮತದಿಂದ ಸಾಧ್ಯವಾಗಿಲ್ಲ. ಯಹೂದಿಗಳಿಗೆ ಮೋಸೆಸ್ ಒಬ್ಬನೇ ಪ್ರವಾದಿ, ಕ್ರೈಸ್ತರಿಗೆ ಜೀಸಸ್, ಮುಸ್ಲಿಮರಿಗೆ ಪ್ರವಾದಿ ಪೈಗಂಬರ್. ಹೀಗೆ ಪ್ರತಿ ಮತದವರಿಗೂ ಅವರದ್ದೇ ಶ್ರೇಷ್ಠ. ಈ ಭಾವನೆ ಅಷ್ಟಕ್ಕೇ ನಿಂತರೆ ಆಗುವ ಅನಾಹುತ ಕಡಿಮೆ. ರೋಮನ್ ಕ್ಯಾಥೋಲಿಕ್ ಚರ್ಚ್ ಬಗ್ಗೆ ಮಾರ್ಟಿನ್ ಲೂಥರ್, ಹಾಗೆಯೇ ಪ್ರಾಟೆಸ್ಟೆಂಟ್‌ರ ಬಗ್ಗೆ ಕ್ಯಾಥೋಲಿಕರು ಬರೆದಿರುವ ಮಾತುಗಳನ್ನು ಓದಿದರೆ ನನ್ನ ಮಾತಿನ ಸತ್ಯ ತಿಳಿಯುತ್ತದೆ. ಇದು ಎಲ್ಲ ಮತಗಳಿಗೂ ಅನ್ವಯಿಸುತ್ತದೆ. ಆದರೆ ಈ ಮತಗಳ ಪುರೋಹಿತಶಾಹಿ ಮಾತ್ರ 'ವಿಜ್ಞಾನ' ಶಬ್ದವನ್ನು ಧಾರಾಳವಾಗಿ ಬಳಸುತ್ತಾರೆ.

ಸತ್ಯಾನ್ವೇಷಣೆಗೆ ಹಲವಾರು ದಾರಿಗಳಿವೆ. ಆದರೆ ಎಲ್ಲರೂ ಸಾಗಬಹುದಾದ ದಾರಿಗಳಲ್ಲಿ ವೈಜ್ಞಾನಿಕ ದಾರಿ ಹೆಚ್ಚು ಅಪೇಕ್ಷಣೀಯ.

**ಪ್ರೊ|| ಎಚ್. ಆರ್. ರಾಮಕೃಷ್ಣ ರಾವ್**
ವಿಶ್ರಾಂತ ಭೌತವಿಜ್ಞಾನ ಪ್ರಾಧ್ಯಾಪಕರು, ನಂ. ೮೦೧, ೧೫ನೇ ಅಡ್ಡರಸ್ತೆ
೭ನೇ ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೮೨

# ಕರ್ನಾಟಕದ ಸಾಮಾಜಿಕ ಆರ್ಥಿಕ ಹೋರಾಟಗಳು

ಒಂದು ನಾಡಿನ ಇತಿಹಾಸವೆಂದರೆ, ಅದರಲ್ಲಿ ಆ ನಾಡಿನಲ್ಲಿ ಯಾವುದೇ ಪ್ರಮುಖ ವಿಷಯಕ್ಕೆ ಸಂಬಂಧಿಸಿದಂತೆ ನಡೆದ ಎಲ್ಲಾ ಸಂಘರ್ಷಗಳು ಮತ್ತು ಆ ಮೂಲಕ ದೊರೆತ ಒಳ್ಳೆಯ ಮತ್ತು ಕೆಟ್ಟ ಫಲಗಳು ಎಲ್ಲಾ ಸೇರಿರುತ್ತವೆ. ಎಲ್ಲಾ ಕಾಲದಲ್ಲೂ, ಎಲ್ಲಾ ವಿಷಯಗಳೂ ಸಂಘರ್ಷಕ್ಕೆ ಅವಕಾಶ ನೀಡುವುದಿಲ್ಲ, ಕೆಲವು ಸೂಕ್ಷ್ಮ ವಿಚಾರಗಳು ಮಾತ್ರ ಸಂಘರ್ಷಕ್ಕೆ ಅವಕಾಶ ನೀಡುತ್ತವೆ. ಅಂತಹ ಸೂಕ್ಷ್ಮ ವಿಚಾರಗಳಲ್ಲಿ ಸಾಮಾಜಿಕ ಮತ್ತು ಆರ್ಥಿಕ ವಿಷಯಗಳು ಸೇರುತ್ತವೆ. ಈವರೆಗಿನ ಅಧ್ಯಯನದಿಂದ ತಿಳಿದಿರುವಂತೆ ಸಾಮಾನ್ಯವಾಗಿ ನಡೆದಿರುವ ಸಂಘರ್ಷಗಳೆಲ್ಲವೂ ಈ ಮೇಲೆ ಸೂಚಿಸಲ್ಪಟ್ಟ ವಿಷಯಗಳನ್ನೇ ಕೇಂದ್ರೀಕರಿಸಿಕೊಂಡಿವೆ. ಆದ್ದರಿಂದ ಒಂದು ಸಮಾಜದ ಒಳ್ಳೆಯ ಅಥವಾ ಕೆಟ್ಟ ವ್ಯವಸ್ಥೆಗೆ ಸಾಮಾಜಿಕ ಮತ್ತು ಅರ್ಥ ವ್ಯವಸ್ಥೆಗಳು ಕಾರಣವಾಗುತ್ತವೆ.

ಕರ್ನಾಟಕದ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನದ ಮಧ್ಯ ಕಾಲದವರೆಗೆ ಯಾವುದೇ ರೀತಿಯ ಸಂಘರ್ಷಗಳು ತೀವ್ರವಾಗಿ ಗಮನ ಸೆಳೆಯುವುದಿಲ್ಲ. ರಾಜಕೀಯ ಕಾರಣಗಳಿಗಾಗಿ, ಸಾಮ್ರಾಜ್ಯ ವಿಸ್ತರಣೆಗಾಗಿ, ಅಧಿಕಾರಗ್ರಹಣಕ್ಕಾಗಿ ಹಲವಾರು ಹೋರಾಟಗಳು ನಡೆದಿವೆಯಾದರೂ, ಅವು ಸಹಜವಾಗಿ ಸಮಾಜ ಮತ್ತು ಅರ್ಥವ್ಯವಸ್ಥೆಯ ಮೇಲೆ ಬೀರಿರಬಹುದಾದ ಪರಿಣಾಮಗಳನ್ನು ಹೊರತುಪಡಿಸಿ ಬೇರೆ ಯಾವುದೇ ರೀತಿಯಲ್ಲೂ ವಿಶೇಷ ಪರಿಣಾಮ ಬೀರಿರುವ ಉದಾಹರಣೆಗಳು ಲಭ್ಯವಿಲ್ಲ. ಅಪರೂಪಕ್ಕೆ ಎಂಬಂತೆ ಕೆಲವು ಘಟನೆಗಳು ಮಾತ್ರ ಶಾಸನಗಳ ಮೂಲಕ ತಿಳಿಯುತ್ತವೆ.

ಕ್ರಿ.ಶ.೯೪೬ರ ಒಂದು ಶಾಸನವು ಜನರು ಆರ್ಥಿಕ ವಿಚಾರಗಳಲ್ಲಿ ಆಳುವ ಅಧಿಕಾರಿಯ ವಿರುದ್ಧ ಪ್ರತಿಭಟಿಸುತ್ತಿದ್ದ ವಿಚಾರವನ್ನು ದಾಖಲಿಸಿದೆ. ಮೇಲೆ ತಿಳಿಸಿದ ಶಾಸನವು ರೋಣದಲ್ಲಿದೆ. ಈ ಶಾಸನವು, ರಾಷ್ಟ್ರಕೂಟ ವಂಶದ ಮೂರನೆಯ ಕೃಷ್ಣನ ಕಾಲದಲ್ಲಿ ಗಂಗವಾಡಿ ತೊಂಭತ್ತಾರು ಸಾವಿರ, ಬೆಳ್ವೊಲ ಮೂರು ನೂರು ಮತ್ತು ಪುಲಿಗೆರೆ ಮೂರು ನೂರು ಪ್ರದೇಶಗಳ ಅಧಿಕಾರ ನಿರ್ವಹಿಸುತ್ತಿದ್ದ ಪೆರ್ಮ್ಮಾಡಿ ಭೂತಾರ್ಯ ಎಂಬ ಮಹಾಮಂಡಳಿಕನು ರೋಣ ಅಗ್ರಹಾರದ ಜನರನ್ನು ಭತ್ತಾಯ ಎಂಬ ಸುಂಕಕ್ಕಾಗಿ ಬಲಾತ್ಕರಿಸಿದಾಗ, ಅಗ್ರಹಾರದ ಪಂಪಯ್ಯನು ಅಧಿಕಾರಿಯ ಬಲಾತ್ಕಾರವನ್ನು ಪ್ರತಿಭಟಿಸಿ, 'ನಾನೊಂದಕ್ಷತೆಯನಪ್ಪಂದಮೀಯೆನೆನ್ದು' ಹೋರಾಡಿ, ಸಾಯುತ್ತಾನೆ. ಆಗ ಅಲ್ಲಿಯ ಮಹಾಜನರು ಪಂಪಯ್ಯನಿಗಾಗಿ ಸ್ಮಾರಕವೆಂದು ವೀರಗಲ್ಲೊಂದನ್ನು ನೆಡಿಸುತ್ತಾರೆ. ಇದು ಪಂಪಾರ್ಯನು ಆರ್ಥಿಕ ವಿಷಯಕ್ಕಾಗಿ, ಆಳುವ ಅಧಿಕಾರಿಯ ವಿರುದ್ಧ ನಡೆಸಿದ ಹೋರಾಟ ಎನ್ನುವುದು ಸ್ಪಷ್ಟ. ಇಂತಹ ಹಲವು ಹೋರಾಟಗಳು ನಡೆದಿರುವ ಸಾಧ್ಯತೆಗಳಿವೆ. ಆದರೆ, ಎಲ್ಲ ಸಂಘರ್ಷ/ಘಟನೆಗಳು ದಾಖಲಾಗಿವೆ ಎಂದು ತಿಳಿಯುವುದು ಕಷ್ಟ. ಆಳುವ ವರ್ಗದ ದಬ್ಬಾಳಿಕೆ, ಅನೀತಿಗಳನ್ನು ನಮ್ಮ ಎಲ್ಲ ಜನರೂ ಸಹಿಸಿಕೊಂಡಿರುತ್ತಿದ್ದರು ಎನ್ನುವಂತಿಲ್ಲ.

ಮನ್ನೆಯ ಬೊಪ್ಪಯ್ಯ ಎಂಬುವವನು ಅಗ್ರಹಾರ ಗಂಡರಾದಿತ್ಯ ಹೊಟಲಿನ ಮೇಲೆ ಆಕ್ರಮಣ ಮಾಡಿ, ಆ ಊರನ್ನು ಸೂರೆ ಮಾಡಿ, ಅಗ್ರಹಾರದ ಬ್ರಾಹ್ಮಣರನ್ನು ಕೊಲ್ಲುತ್ತಾನೆ. ಈ ಬಗ್ಗೆ ಅಗ್ರಹಾರದ ಮಹಾಜನರು ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನಿಗೆ ದೂರು ಸಲ್ಲಿಸುತ್ತಾರೆ. ವಿಚಾರಣೆ ನಡೆಸಿದ ವಿಕ್ರಮಾದಿತ್ಯನು ಬೊಪ್ಪಯ್ಯನಿಗೆ ಮಾನ್ಯವನ್ನು ರದ್ದು ಮಾಡಿ ಶಿಕ್ಷೆ ವಿಧಿಸುತ್ತಾನೆ. ಮನ್ನೆಯದ ಅಧಿಕಾರವನ್ನು ಕಳೆದುಕೊಂಡ ಬೊಪ್ಪಯ್ಯ ತ್ರಿಪುರಾಂತಕ ದೇವರ ತೀರ್ಥವನ್ನು ಕುಡಿದು, ಇನ್ನು ಮುಂದೆ ಅಂತಹ ತಪ್ಪನ್ನು ಮಾಡುವುದಿಲ್ಲ ಎಂದು ಆಣೆಪತ್ರವನ್ನು ಕೊಡುತ್ತಾನೆ.

ಕರ್ನಾಟಕದಲ್ಲಿ ಅಸಂಖ್ಯಾತ ಶಾಸನಸಹಿತ ಮತ್ತು ಶಾಸನರಹಿತ ವೀರಗಲ್ಲುಗಳಿವೆ. ಇವುಗಳ ಬಗ್ಗೆ ಆಯಾ ಭಾಗದ ಜನತೆಗೂ ಸರಿಯಾದ ತಿಳುವಳಿಕೆ ಇಲ್ಲ. ಅಕಸ್ಮಾತ್ ತಿಳುವಳಿಕೆ ಇದ್ದರೂ, ಅದು ಆ ವೀರಗಲ್ಲಿಗೆ ದೈವತ್ವದ ಪಟ್ಟ ಕಟ್ಟುವ ತಿಳುವಳಿಕೆ ಅಷ್ಟೆ. ಕೆಲವು ವೀರಗಲ್ಲುಗಳು ಅತ್ಯಂತ ಮಹತ್ವದ ರಾಜಕೀಯ ಮತ್ತು ಸಾಂಸ್ಕೃತಿಕ ವಿಚಾರಗಳನ್ನು ತಿಳಿಸುತ್ತವೆ. ವೀರಗಲ್ಲುಗಳು ಕೇವಲ ಒಬ್ಬ ವೀರನ ಗೆಲುವು/ಸೋಲು, ಸಾವು/ನೋವುಗಳಿಗೆ ಮಾತ್ರ ಸೀಮಿತವಲ್ಲ. ಅವು ಒಂದು ಕಾಲಕ್ಕೆ ಆಯಾ ಭಾಗದಲ್ಲಿದ್ದ ಪ್ರತಿಭಟನೆ, ಸಂಘರ್ಷಗಳ ಲಿಖಿತ/ಅಲಿಖಿತ ದಾಖಲೆಗಳು. ಈ ಸಂಘರ್ಷಗಳು ರಾಜಕೀಯ/ಸಾಮಾಜಿಕ/ಧಾರ್ಮಿಕ/ಆರ್ಥಿಕ ವಿಚಾರ ಗಳಿಗೇ ಸಂಬಂಧಿಸಿರುವುದನ್ನು ಶಾಸನಗಳು ಸ್ಪಷ್ಟ ಪಡಿಸುತ್ತವೆ. ಎಲ್ಲ ಕಾಲದಲ್ಲೂ ನಮ್ಮ ಹಿಂದಿನ ಜನ ಒಳ್ಳೆಯ ಸಮೃದ್ಧ/ಸುಭಿಕ್ಷ/ಆತಂಕರಹಿತ/ದ್ವೇಷರಹಿತ/ನೆಮ್ಮದಿಯ ಬದುಕನ್ನೇ ಕಂಡರು ಎಂದು ತಿಳಿಯು ವಂತಿಲ್ಲ. ಎಲ್ಲಾ ಕಾಲದಲ್ಲೂ ಎಲ್ಲ ವಿಚಾರಗಳಲ್ಲೂ ಸಾಮರಸ್ಯ ಇತ್ತು ಎಂದು ತಿಳಿಯಬೇಕಾಗಿಲ್ಲ. ಪ್ರತಿ ಕಾಲಘಟ್ಟವೂ ಒಂದಲ್ಲ ಒಂದು ಘರ್ಷಣೆಗೆ ಎಡೆಮಾಡಿ ಕೊಡುವುದು ಅತ್ಯಂತ ಸಹಜ ಎಂದು ತಿಳಿದರೆ, ಅದು ಉತ್ಪ್ರೇಕ್ಷೆಯ ಮಾತಾಗುವಂತಿಲ್ಲ. ಎಲ್ಲ ಕಾಲದ ಎಲ್ಲ ಘರ್ಷಣೆಗಳೂ ದಾಖಲಾಗಿವೆ ಎಂದೂ ಭಾವಿಸುವಂತಿಲ್ಲ. ದಾಖಲಾಗದಿರಲು ಯಾವುದೇ ಕಾರಣವಿದ್ದರೂ, ಆ ಕಾರಣವೂ ಅಧ್ಯಯನಯೋಗ್ಯವಾಗುತ್ತದೆ.

ಆಳುವ ಜನ ಸದಾ ಒಳ್ಳೆಯದನ್ನೇ ಮಾಡುತ್ತಾರೆ ಎಂಬ ನಿರೀಕ್ಷೆ ತಪ್ಪು. ಅವರೂ ತಪ್ಪುಗಳನ್ನು ಮಾಡುತ್ತಾರೆ; ಸಾಧ್ಯವಿದ್ದಷ್ಟೂ ಆ ತಪ್ಪುಗಳನ್ನು ಸಮರ್ಥಿಸಿಕೊಳ್ಳುತ್ತಾರೆ. ಆದರೆ, ಕೆಲವು ಬಾರಿ ತಮ್ಮ ತಪ್ಪು ಗಳನ್ನು ಒಪ್ಪಿಕೊಳ್ಳುವುದು ಮಾತ್ರವಲ್ಲದೆ, ತಪ್ಪಿಗೆ ಕ್ಷಮೆ ಕೋರಿ, ತಪ್ಪನ್ನು ತಿದ್ದಿ ಕೊಳ್ಳುತ್ತಾರೆ. ಅಂತಹ ಒಂದು ಉದಾಹರಣೆಯೂ ನಮಗೆ ಶಾಸನದ ಮೂಲಕವೇ ದೊರೆತಿದೆ.

ಪ್ರಾಚೀನ ಕರ್ನಾಟಕವೇ ಅಲ್ಲದೆ ಭಾರತದಲ್ಲಿ ಮತ್ತು ವಿಶ್ವದ ಎಲ್ಲೆಡೆಯೂ ಗೋವುಗಳು ಸಂಪತ್ತಿನ ಒಂದು ರೂಪ. ಗೋಸಂಪತ್ತಿನ ರಕ್ಷಣೆಯು ಎಲ್ಲ ನಾಗರಿಕರಿಗೂ ಸಂಬಂಧಿಸಿದ ವಿಶಿಷ್ಟ ಜವಾಬ್ದಾರಿ. ಪ್ರಾಚೀನ ಕಾಲದಲ್ಲಿ ಒಂದು ಪ್ರದೇಶವನ್ನು ಆಕ್ರಮಿಸಲು ಅಥವಾ ಯಾರಾದರೊಬ್ಬ ಶತ್ರುವಿನ ಮೇಲೆ ಯುದ್ಧ ಹೂಡಲು ಗೋಗ್ರಹಣವನ್ನು ಒಂದು ಕಾರಣವನ್ನಾಗಿ ಮಾಡಿಕೊಳ್ಳ ಲಾಗುತ್ತಿತ್ತು. ಗೋಗ್ರಹಣ ಅಥವಾ ತುರುಗಾಳಗ, ಪೆಣ್ಬುಯ್ಯಲ್ ಅಥವಾ ಪೆಣ್ಡಿರುಡೆಯುರ್ಚೆ, ಊರಳಿವು ಇತ್ಯಾದಿಗಳು ಯುದ್ಧಾರಂಭದ ಸೂಚನೆಗಳು.

ಡಾ|| ಎಚ್. ಎಸ್. ಗೋಪಾಲ ರಾವ್

ಕರ್ನಾಟಕದಲ್ಲಿ ಅಸಂಖ್ಯಾತ ಶಾಸನಸಹಿತ ಮತ್ತು ಶಾಸನರಹಿತ ವೀರಗಲ್ಲುಗಳಿವೆ. ಇವುಗಳ ಬಗ್ಗೆ ಆಯಾ ಭಾಗದ ಜನತೆಗೂ ಸರಿಯಾದ ತಿಳುವಳಿಕೆ ಇಲ್ಲ. ಅಕಸ್ಮಾತ್ ತಿಳುವಳಿಕೆ ಇದ್ದರೂ, ಅದು ಆ ವೀರಗಲ್ಲಿಗೆ ದೈವತ್ವದ ಪಟ್ಟ ಕಟ್ಟುವ ತಿಳುವಳಿಕೆ ಅಷ್ಟೆ ಕೆಲವು ವೀರಗಲ್ಲುಗಳು ಅತ್ಯಂತ ಮಹತ್ವದ ರಾಜಕೀಯ ಮತ್ತು ಸಾಂಸ್ಕೃತಿಕ ವಿಚಾರಗಳನ್ನು ತಿಳಿಸುತ್ತವೆ. ವೀರಗಲ್ಲುಗಳು ಕೇವಲ ಒಬ್ಬ ವೀರನ ಗೆಲುವು/ಸೋಲು, ಸಾವು/ನೋವುಗಳಿಗೆ ಮಾತ್ರ ಸೀಮಿತವಲ್ಲ. ಅವು ಒಂದು ಕಾಲಕ್ಕೆ ಆಯಾ ಭಾಗದಲ್ಲಿದ್ದ ಪ್ರತಿಭಟನೆ, ಸಂಘರ್ಷಗಳ ಲಿಖಿತ/ಅಲಿಖಿತ ದಾಖಲೆಗಳು. ಈ ಸಂಘರ್ಷಗಳು ರಾಜಕೀಯ/ಸಾಮಾಜಿಕ/ಧಾರ್ಮಿಕ/ಆರ್ಥಿಕ ವಿಚಾರಗಳಿಗೇ ಸಂಬಂಧಿಸಿರುವುದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ. ಎಲ್ಲ ಕಾಲದಲ್ಲೂ ನಮ್ಮ ಹಿಂದಿನ ಜನ ಒಳ್ಳೆಯ ಸಮೃದ್ಧ/ಸುಭಿಕ್ಷ/ಆತಂಕರಹಿತ/ದ್ವೇಷರಹಿತ/ನೆಮ್ಮದಿಯ ಬದುಕನ್ನೇ ಕಂಡರು ಎಂದು ತಿಳಿಯುವಂತಿಲ್ಲ. ಎಲ್ಲಾ ಕಾಲದಲ್ಲೂ ಎಲ್ಲ ವಿಚಾರಗಳಲ್ಲೂ ಸಾಮರಸ್ಯ ಇತ್ತು ಎಂದು ತಿಳಿಯಬೇಕಾಗಿಲ್ಲ. ಪ್ರತಿ ಕಾಲಘಟ್ಟವೂ ಒಂದಲ್ಲ ಒಂದು ಘರ್ಷಣೆಗೆ ಎಡೆ ಮಾಡಿಕೊಡುವುದು ಅತ್ಯಂತ ಸಹಜ ಎಂದು ತಿಳಿದರೆ, ಅದು ಉತ್ಪ್ರೇಕ್ಷೆಯ ಮಾತಾಗುವಂತಿಲ್ಲ. ಎಲ್ಲ ಕಾಲದ ಎಲ್ಲ ಘರ್ಷಣೆಗಳೂ ದಾಖಲಾಗಿವೆ ಎಂದೂ ಭಾವಿಸುವಂತಿಲ್ಲ. ದಾಖಲಾಗದಿರಲು ಯಾವುದೇ ಕಾರಣವಿದ್ದರೂ, ಆ ಕಾರಣವೂ ಅಧ್ಯಯನಯೋಗ್ಯವಾಗುತ್ತದೆ.

ಹೊಯ್ಸಳ ದೊರೆ ೩ನೆಯ ವೀರಬಲ್ಲಾಳನ ರಾಣಿಯರಲ್ಲಿ ಒಬ್ಬಳಾದ ಚೋಳ ಮಹಾದೇವಿ ಎಂಬುವವಳು 'ಮಷ್ಟಕಷ್ಟರ ಮಾತಂ ಕೇಳ' ಬೇಪೂರಿನ ಮೇಲೆ ದಾಳಿ ಮಾಡಲು ತನ್ನ ಸೈನ್ಯಕ್ಕೆ ಆಜ್ಞೆ ಮಾಡುತ್ತಾಳೆ. ಆವಳ ಸೇನೆಯು ಬೇಪೂರನ್ನು ಮುತ್ತಿ ಗೋವುಗಳನ್ನು ಅಪಹರಿಸಿ, ಜನರನ್ನು ಸೆರೆ ಹಿಡಿದು ಕರೆದುಕೊಂಡು ಹೋದರು. ಸೈನಿಕರ ಆ ಕ್ರಮವನ್ನು ವಿರೋಧಿಸಿದ ಕೇತಮಲ್ಲನು ತುರುಗಾಳಗದಲ್ಲಿ ಸಾಯುತ್ತಾನೆ. ವಾಸ್ತವ ಸ್ಥಿತಿಯನ್ನು ಅರಿತ ಚೋಳ ಮಹಾದೇವಿಯು 'ನಮ್ಮ ಮಕ್ಕಳ ನೋಯಿಸಿದೆವು' ಎಂದು ಪಶ್ಚಾತ್ತಾಪಪಟ್ಟು ಜನರ ಮೇಲಿನ ಆರೋಪಗಳನ್ನು ಹಿಂದಕ್ಕೆ ಪಡೆದು, ಕೇತಮಲ್ಲನ ಕುಟುಂಬಕ್ಕೆ ದತ್ತಿಯನ್ನು ಬಿಡುತ್ತಾಳೆ. ಇಂತಹ ಪ್ರಸಂಗಗಳು ಅಪರೂಪವಾದರೂ, ಕಾಲ್ಪನಿಕವಲ್ಲ. ಆಳುವ ಯಾರಾದರೂ ಮಾಡುವಂತಹ ತಪ್ಪನ್ನೇ ಚೋಳ ಮಹಾದೇವಿ ಮಾಡಿದರೂ ಸಹ, ತನ್ನ ತಪ್ಪನ್ನು ಬಹುಬೇಗ ಅರ್ಥಮಾಡಿಕೊಂಡು, ಪಶ್ಚಾತ್ತಾಪ ಪಟ್ಟದ್ದು ಸುಳ್ಳಲ್ಲ. ತಪ್ಪನ್ನು ಅರ್ಥಮಾಡಿಕೊಂಡು, ತನ್ನ ಪ್ರಜೆಗಳಲ್ಲಿ ಕ್ಷಮಾಪಣೆ ಕೇಳಿದ ದೊಡ್ಡ ಮನಸ್ಸಿನ ಚೋಳ ಮಹಾದೇವಿ ಮತ್ತು ಆಳುವ ವರ್ಗದ ಅನ್ಯಾಯವನ್ನು ವಿರೋಧಿಸಿದ ಕೇತಮಲ್ಲ ಇಬ್ಬರೂ ದೊಡ್ಡ ಮನಸ್ಸಿನವರಾಗಿ ಗೋಚರವಾಗುತ್ತಾರೆ.

ಯಾವುದೇ ಸಂದರ್ಭದಲ್ಲಿ ಪ್ರಜ್ಞಾವಂತರು ಅನ್ಯಾಯಗಳನ್ನು ಸಹಿಸಿಕೊಂಡು ಕೂಡುವುದಿಲ್ಲ, ಪ್ರತಿಭಟಿಸುತ್ತಾರೆ. ಯಾವುದೇ ಸಮಾಜದಲ್ಲಿ ದೊಡ್ಡ ಪ್ರಮಾಣದ ಪ್ರತಿಭಟನೆ ಇಲ್ಲ ಎಂದಾದರೆ, ಅಲ್ಲಿ ಅಸಮಾನತೆ, ಅನ್ಯಾಯಗಳು ದೊಡ್ಡ ಪ್ರಮಾಣದಲ್ಲಿ ಇಲ್ಲ ಎಂದೇ ಅರ್ಥ. ಈವರೆಗೆ ನಾವು ಗಮನಿಸಿದ ಶಾಸನಗಳ ಮೂಲಕ ತಿಳಿಯುವಂತೆ, ಅನ್ಯಾಯಗಳ ವಿರುದ್ಧ ಪ್ರತಿಭಟನೆ ಗೋಚರವಾಗಿದ್ದರೂ ಸಹ, ಅದು ಒಬ್ಬ ವ್ಯಕ್ತಿ, ಒಂದು ಗ್ರಾಮಕ್ಕೆ ಮೀಸಲಾಗಿರುವುದು ಸ್ಪಷ್ಟ. ಅಂದರೆ, ಅನ್ಯಾಯ, ಕಿರುಕುಳಗಳು ಇರಲೇ ಇಲ್ಲ ಎಂದಲ್ಲ. ಅವುಗಳ ಪ್ರಮಾಣ ಕಡಿಮೆ ಇರಬಹುದು ಎಂದಷ್ಟೇ ಊಹಿಸಲು ಸಾಧ್ಯ. ಇದು ಕೇವಲ ಒಂದು ಊಹೆ ಎಂಬುದೂ ಸ್ಪಷ್ಟ. ಸಾರ್ವತ್ರಿಕವಾಗಿ, ಹೆಚ್ಚಿನ ಪ್ರಮಾಣದಲ್ಲಿಯೇ ಇದ್ದಿರಬಹುದಾದ ಅನ್ಯಾಯ, ಆತಂಕ ಮತ್ತು ತೊಂದರೆಗಳು ಬಹಿರಂಗವಾಗಿ ವ್ಯಕ್ತವಾಗಲೂ ಸಹ ಕಷ್ಟವಾಗಿರಬಹುದಾದ ಸಂದರ್ಭಗಳು ಇರಬಹುದು. ಆಳುವ ವರ್ಗ ಬಲಿಷ್ಠವಾಗಿದ್ದಾಗ, ನಿಷ್ಠುರವಾಗಿದ್ದಾಗ, ನಿರಂಕುಶರಾಗಿದ್ದಾಗ ಯಾವುದೇ ರೀತಿಯ ಪ್ರತಿಭಟನೆ ಮಾಡಲೂ ಜನ ಅಂಜುತ್ತಾರೆ. ತಮಗೆ ಯಾವುದೇ ರೀತಿಯ ತೊಂದರೆ ಆಗದಿರಲಿ ಎಂದು ಎಚ್ಚರವಹಿಸುತ್ತಾರೆ. ಸಾಮಾಜಿಕ ಅಸಮತೋಲನ, ಅನ್ಯಾಯ, ದುರಾಚಾರಗಳನ್ನು ಸಾರ್ವತ್ರಿಕವಾಗಿ ಪ್ರತಿಭಟಿಸಿ, ತಮ್ಮ ಪ್ರಾಣ/ಮಾನಗಳಿಗೆ ಹಾನಿ ಮಾಡಿಕೊಳ್ಳಲು ಯಾರೂ ಇಷ್ಟಪಡುವುದಿಲ್ಲ. ಬಲಿಷ್ಠರೆನಿಸಿಕೊಂಡವರ ವಿರುದ್ಧ ನಿಲ್ಲುವುದು ಎಲ್ಲ ಕಾಲದಲ್ಲೂ ಕಷ್ಟದ ಮಾತು. ಆಳುವ ವರ್ಗದ ಹಿಡಿತದಲ್ಲಿರುವ ಎಲ್ಲ ವರ್ಗವೂ ಅದರ ಮಾತಿನಂತೆ ನಡೆಯಲೇಬೇಕು. ಇಲ್ಲದಿದ್ದರೆ, ತೊಂದರೆಗಳಿಗೆ ಆಹ್ವಾನ ನೀಡಿದಂತೆ. ಪ್ರಜಾಪ್ರಭುತ್ವ ಪದ್ಧತಿಯಲ್ಲೇ ಇಂತಹ ವ್ಯವಸ್ಥೆ ಇರುವುದನ್ನು ಕಂಡಾಗ, ನಿರಂಕುಶ ಪ್ರಭುತ್ವದಲ್ಲಿ ಆಡಳಿತದ ವಿರುದ್ಧ ನಿಲ್ಲುವುದು ಎಷ್ಟು ಕಷ್ಟ ಎಂಬುದು ಅರಿವಿಗೆ ಬರುತ್ತದೆ. ಹಿಟ್ಲರನ ಆಳ್ವಿಕೆಯನ್ನು ನೆನಪು ಮಾಡುವಂತಹ ಘಟನೆಗಳು ಇತಿಹಾಸದ ಪುಟಗಳಲ್ಲಿ ಅದೆಷ್ಟೋ ಇರಬಹುದು. ಆ ಪುಟಗಳಲ್ಲಿ ಸಾಲುಗಳ ಮಧ್ಯೆ ಅಡಗಿರುವ ಎಷ್ಟೋ ವಿಷಯಗಳು ಸುಲಭವಾಗಿ ಬಹಿರಂಗಗೊಳ್ಳುವುದು ಕಷ್ಟ. ಸಮಕಾಲೀನ ದಾಖಲೆಗಳಲ್ಲಿ ಆಯಾ ಸಮಾಜದ ಎಲ್ಲ ಘಟನೆ, ವಿಚಾರ, ಸಂಘರ್ಷಗಳನ್ನು ಕಾಣಬೇಕೆನ್ನುವುದು ಹಠದ ಮಾತಾಗಬಹುದು. ಈಗಾಗಲೇ ಮೇಲೆ ಪ್ರಸ್ತಾಪಿಸಿರುವ ವಿಚಾರದ ಹಿನ್ನೆಲೆಯಲ್ಲಿ, ಸಮಕಾಲೀನ ದಾಖಲೆಗಳು ಎಲ್ಲಾ ವಿಚಾರಗಳನ್ನೂ ದಾಖಲಿಸಿರುವುದು ಸಾಧ್ಯವಿಲ್ಲ. ಅವುಗಳಿಗೆ ತಮ್ಮದೇ ಆದ ಮಿತಿ ಇರುವುದು ಸ್ವಾಭಾವಿಕ. ಆದರೆ, ಕೆಲವು ದಾಖಲೆಗಳು ನೀಡುವ ವಿಚಾರಗಳನ್ನು ವಿಶ್ಲೇಷಿಸಿದಾಗ, ಅಂದಂದು ನಡೆದಿರಬಹುದಾದ ಎಷ್ಟೋ ವಿಚಾರಗಳನ್ನು ತಾರ್ಕಿಕವಾಗಿ ಊಹಿಸಲು ಸಾಧ್ಯ. ಈಗಾಗಲೇ ಪ್ರಸ್ತಾಪಿಸಿರುವ ಮೂರು ಪ್ರಸಂಗಗಳು ಜನತೆಯಲ್ಲಿ, ಅಂದಂದಿಗೆ ಇದ್ದ ಅಸಮಾಧಾನದ ಸುಳಿವು ನೀಡುತ್ತವೆಯಾದರೂ, ಆ ಅಸಮಾಧಾನದ ವ್ಯಾಪ್ತಿ ಎಷ್ಟರಮಟ್ಟಿನದು ಎಂದು ತಿಳಿಸುವುದಿಲ್ಲ. ಎಲ್ಲ ವಿವರಗಳನ್ನು ಒಂದು ವೀರಗಲ್ಲು ಶಾಸನ ಅಥವಾ ಬೇರಾವುದೇ ವರ್ಗದ ಶಾಸನದ ಮೂಲಕ ನಿರೀಕ್ಷಿಸಲಾಗುವುದಿಲ್ಲ. ಶಾಸನಗಳ ಜೊತೆಗೆ ಸಮಕಾಲೀನ ಸಾಹಿತ್ಯ, ಜಾನಪದ ಮತ್ತು ಇತರ ಮೂಲಗಳಿಂದಲೂ ಮಾಹಿತಿ ಪಡೆದು ಸಮಕಾಲೀನ ಆಗು-ಹೋಗುಗಳನ್ನು ಅರ್ಥೈಸುವುದು ಅವಶ್ಯಕ. ಹಾಗೆ ಅರ್ಥೈಕೆ ಮಾಡಿದಾಗ ಕ್ರಿ. ಶ. ೧೨ನೆಯ ಶತಮಾನದ ವಚನ ಚಳವಳಿ ಅಥವಾ ಶರಣ ಆಂದೋಲನವು ಕೇವಲ ಧಾರ್ಮಿಕ ಎನಿಸುವುದೇ ಇಲ್ಲ, ಅದು ಆರ್ಥಿಕ ಮತ್ತು ಸಮಾನತೆಗಾಗಿ ನಡೆದ ಹೋರಾಟ. ಅಸಮಾನತೆಯನ್ನು ಪೋಷಿಸುತ್ತಿದ್ದ ದೇವಾಲಯ, ಮಠ, ಮಾನ್ಯಗಳ ವಿರುದ್ಧ ನಡೆದ ಆಂದೋಲನ. ಕ್ರಿ. ಶ. ೧೨ನೆಯ ಶತಮಾನದ ಆರಂಭದ ಹಲವು ಶಾಸನಗಳು ಆಡಳಿತಾತ್ಮಕವಾದ ಹಲವು ವೈಪರೀತ್ಯಗಳನ್ನು ದಾಖಲಿಸಿವೆ. ಇಂದಿನ ಆಂಧ್ರ ಪ್ರದೇಶದ ಆಲವಾನಪಲ್ಲಿಯ ಕ್ರಿ. ಶ. ೧೧೧೦ರ ಒಂದು ಶಾಸನವು ತ್ರಿಭುವನಮಲ್ಲನ ಆಳ್ವಿಕೆಯ ಕಾಲದ್ದಾಗಿದ್ದು, ಮಹಾಮಂಡಳೇಶ್ವರ ಯುವರಾಜ ತೈಲಪ ದೇವನು ಕನ್ನೂರು ಸಾಸಿರ ಪ್ರಾಂತ್ಯದ ಆಳ್ವಿಕೆಯ ಜವಾಬ್ದಾರಿ




ವಾತ್ಸಲ್ಯದ ಅಧಿಷ್ಠಾನದಿ
ತನುವನದ್ದಿ
ಮನವನದ್ದಿ
ಕುಳಿತಿಹೆನು
ನಿನ್ನ ಮುಂದೆ

ಈಗ ಹೇಳು
ಯಾವುದು ನನ್ನ ಇರುವಿಕೆ ?
ಹೆಣ್ತನವೋ ?
ತಾಯ್ತನವೋ ?
ಅಥವಾ
ವಿಂಗಡಿಸಲಾರದ ಪ್ರೇಮವೋ ?

ಪ್ರೇಮವನ್ನು ಬಲ್ಲೆಯಾದರೆ ಮಾತ್ರ
ನನ್ನ ಜೊತೆಯಲ್ಲಿ ನೀನು ಇರಬಹುದು
ಇಲ್ಲದಿರೆ
ಬರೀ ಅವರಿವರ ಅಳುಕುಗಳು
ನಿನ್ನೊಡನೆ ಇರುತ್ತವೆ
ಹೆಣ್ಣು–ಗಂಡೆಂಬ ಭೇದದ ಅಂತರ
ನಮ್ಮ ನಡುವಿನ ಗೋಡೆಯಾಗುತ್ತದೆ

ಜೊತೆಯಲ್ಲಿದ್ದೂ ಬೇರೆ ಆಗಿರಬಹುದು
ಬೇರೆ ಆಗಿದ್ದೂ ಜೊತೆಯಲ್ಲಿರಬಹುದು

ಶಕುಂತಲೆಯ ಪರಂಪರೆಯ ಕುಡಿ ನಾನು
ಭರತನ ಜೀವಕ್ಕೆ ಭದ್ರ ಬುನಾದಿ
ಬೇಗ ಹೇಳು
ಯಾವುದು ನಿನ್ನ ಆಯ್ಕೆ ?
ಗೋಡೆಯೋ ?
ಬಯಲೋ ?

ಜ್ಯೋತಿ ಗುರುಪ್ರಸಾದ್
'ಕಾವೇರಿ', ತೆಳ್ಳಾರು ರಸ್ತೆ, ೧೬ನೇ ತಿರುವು, ಕಾರ್ಕಳ - ೫೭೪ ೧೦೪

ಹೊತ್ತಿದ್ದಾಗ ರಾಜಧಾನಿ ಕೋಳೂರಿನ ನವಪುರ ಪಂಚಮಠದ ಮಹಾಜನರ ಒಪ್ಪಿಗೆಯ ಪ್ರಕಾರ ಆ ಸ್ಥಳದಲ್ಲಿ ಹಳೆಯ ಮತ್ತು ಹೊಸ ಮನೆಗಳಿಂದ ವಸೂಲು ಮಾಡಬೇಕಾದ ತೆರಿಗೆಯ ಬಗ್ಗೆ ತಿಳಿಸುವುದಲ್ಲದೆ, ಒಂದು ಪುರದವರು ಮತ್ತೊಂದು ಪುರವನ್ನು ಹೊಕ್ಕು ಅನುಭವಿಸಿದರೆ ನೀಡಬೇಕಾದ ದಂಡ, ಕಿರುಕುಳಗಳ ಬಗ್ಗೆಯೂ ತಿಳಿಸುತ್ತದೆ. ನಿಸ್ಸಂತತಿಯಾದ ಕುಟುಂಬಗಳ ಆಸ್ತಿಯನ್ನು ದೇವರಿಗೆ ಕೊಡಬೇಕು ಎಂಬಂತಹ ವಿಚಾರವನ್ನೂ ತಿಳಿಸುತ್ತದೆ. ಇದರಿಂದ, ಆ ಕಾಲಕ್ಕೆ ಆಸ್ತಿ-ಪಾಸ್ತಿಯ ಹೊಣೆಗಾರಿಕೆ ಇತ್ಯಾದಿಗಳ ಬಗ್ಗೆ ಆಳುವ ವರ್ಗ ತೆಗೆದುಕೊಳ್ಳುತ್ತಿದ್ದ ತೀರ್ಮಾನ ಅಥವಾ ಕ್ರಮಗಳ ಬಗ್ಗೆ ತಿಳಿಯುತ್ತದೆ. ದಂಡವನ್ನು ವಿಧಿಸುವ ಮತ್ತು ವಸೂಲು ಮಾಡುವ ಹಕ್ಕನ್ನು ಮಠಗಳು ಪಡೆದಿದ್ದುವು. ಅಮ್ಮಿನ ಭಾವಿಯ ಕ್ರಿ. ಶ. ೧೧೪೬ರ ಒಂದು ಶಾಸನವು ದೇವಾಲಯದ ಪೂರ್ವಾಪರಗಳ ಬಗ್ಗೆ ಪ್ರಸ್ತಾಪಿಸಿದೆ. ಬಹುತೇಕ ಆ ಹೊತ್ತಿಗಾಗಲೇ ದೇವಾಲಯವನ್ನು ಯಾವ ಕಾರಣಕ್ಕೋ ಒತ್ತೆ ಇಡಲಾಗಿತ್ತು. ಅದನ್ನು ಹಿಂದಿನ ಒಡೆಯರು ಎನಿಸಿಕೊಂಡ ಜನರೇ ಆದರದಿಂದ ಬಿಡಿಸಬೇಕು ಎಂದು ಸಭೆಯಲ್ಲಿ ತೀರ್ಮಾನ ಆಗುತ್ತದೆ. ಅಂದರೆ, ಆ ಹೊತ್ತಿಗಾಗಲೇ ದೇವಾಲಯಗಳನ್ನೇ ಒತ್ತೆ ಇಡುವ ಪರಿಸ್ಥಿತಿ ಎದುರಾಗಿತ್ತು. ಭಾರಂಗಿಯ ಕ್ರಿ. ಶ. ೧೧೫೯ರ ಒಂದು ಶಾಸನವು ಬೀರಿಸೆಟ್ಟಿ ಎಂಬುವವನು ಭಾರಂಗಿಯಲ್ಲಿ ಕೇದಾರೇಶ್ವರ ದೇವರನ್ನು ಪ್ರತಿಷ್ಠೆ ಮಾಡಿಸಿ, ದೇವರ ಅಂಗಭೋಗ, ರಂಗಭೋಗ, ನಿತ್ಯ ನೈವೇದ್ಯ, ಖಂಡಸ್ಫುಟಿತ ಜೀರ್ಣೋದ್ಧಾರ ಇತ್ಯಾದಿ ಕಾರ್ಯಗಳಿಗೆ ದಾನವಾಗಿ ಬಿಟ್ಟಿದ್ದನ್ನು ತಿಳಿಸುತ್ತದೆ. ಈ ಶಾಸನವು ಆ ಸಮಯದಲ್ಲಿ ದೇವರಿಗೆ ಬಿಡಲಾಗಿದ್ದ ಹಲವು ದಾನಗಳ ಬಗ್ಗೆ ತಿಳಿಸುತ್ತದೆ. ಅಲ್ಲದೆ, ಹಲವು ಸುಂಕಗಳ ಪ್ರಸ್ತಾವನೆ ಮಾಡುತ್ತದೆ. ನೆಲ್ಲು, ಉಪ್ಪು, ಎಳ್ಳು, ಕಡಲೆ, ತೊಗರಿ, ಇತ್ಯಾದಿಗಳ ಮೇಲೆ ವಿಧಿಸುತ್ತಿದ್ದ ಸುಂಕವನ್ನು ಪ್ರಸ್ತಾಪಿಸುತ್ತದೆ. ಹೇಱು ಸುಂಕ, ಒಕ್ಕಲುದೆಱೆ, ಮೂಲೆಸುಂಕ, ಹೊಳೆಯ ಬೀಯ ಇತ್ಯಾದಿಗಳನ್ನು ಪ್ರಸ್ತಾಪಿಸಿದೆ. ದಾನ ನೀಡಿಕೆ, ದಾನದ ನಿಬಂಧನೆಗಳು ಇತ್ಯಾದಿಗಳೆಲ್ಲವೂ ದೇವಾಲಯದ ಸ್ಥಾನಪತಿಯ ಸಮ್ಮುಖದಲ್ಲಿ ನಡೆದಿವೆ. ಸಾಮಾನ್ಯವಾಗಿ ದೇವಾಲಯಗಳಿಗೆ ಸಂಬಂಧಿಸಿದ ದಾನ-ದತ್ತಿಗಳನ್ನು ದೇವಾಲಯದ ಸ್ಥಾನಿಕರಿಗೇ ನೀಡಲಾಗುತ್ತಿತ್ತು. ಹಲವಾರು ಜನರಿಂದ ವಿವಿಧ ದಾನ-ದತ್ತಿಗಳನ್ನು ಪಡೆಯುತ್ತಿದ್ದ ದೇವಾಲಯಗಳು ಶ್ರೀಮಂತವಾಗಿದ್ದವು. ಮಠಗಳೂ ಸಹ ದೇವಾಲಯಗಳಿಗೆ ಹೊಂದಿಕೊಂಡೇ ಇರುತ್ತಿದ್ದವು. ಮಠಗಳು ಆಡಳಿತಾತ್ಮಕ ವಿಷಯಗಳಲ್ಲಿ ಹೆಚ್ಚು ಮುತುವರ್ಜಿ ವಹಿಸುತ್ತಿದ್ದಂತೆ ತೋರುತ್ತದೆ. ಜೊತೆಗೆ ಶಿಕ್ಷಣದ ಜವಾಬ್ದಾರಿಯೂ ದೇವಾಲಯಗಳಿಗೆ ಹೊಂದಿಕೊಂಡ ಮಠಗಳದೇ ಆಗಿರುತ್ತಿತ್ತು. ಮಠದ ಆಡಳಿತ ವ್ಯವಸ್ಥೆ ಮತ್ತು ಶಿಕ್ಷಣ ವ್ಯವಸ್ಥೆಗಳು ಪ್ರತ್ಯೇಕಗೊಳ್ಳಲು ೧೨ನೆಯ ಶತಮಾನದಲ್ಲಿ ತಯಾರಿ ನಡೆಸುತ್ತಿದ್ದುದನ್ನು ಬಳ್ಳಿಗಾವೆಯ ಕ್ರಿ. ಶ. ೧೧೨೯ರ ಶಾಸನವೊಂದು ಸ್ಪಷ್ಟಪಡಿಸುತ್ತದೆ. ವಿದ್ಯಾಭರಣ ಮತ್ತು ವಾಮಶಕ್ತಿ ಎಂಬ ಇಬ್ಬರು ಗುರುಗಳ ನಡುವೆ ಅಧಿಕಾರದ ವಿಷಯದಲ್ಲಿ ಸ್ಪರ್ಧೆ ಇದ್ದು, ವಿದ್ಯಾಭರಣನು ತನಗೆ ವಿದ್ಯಾ ಕ್ಷೇತ್ರ ಸಾಕು ಎಂದೂ, ವಾಮಶಕ್ತಿಯು ತನಗೆ ಮಠ ವ್ಯಾಸಂಗ ಬೇಕು ಎಂದೂ ಪರಸ್ಪರ ತೀರ್ಮಾನಿಸಿಕೊಂಡದ್ದನ್ನು ಶಾಸನ ದಾಖಲಿಸಿದೆ. ಇದೇ ವಾಮಶಕ್ತಿಯನ್ನು ಯಾವುದೋ ಕಾರಣಕ್ಕೆ ಬಂಧಿಸಿದ್ದನ್ನು ಬಳ್ಳಿಗಾವೆಯದೇ ಮತ್ತೊಂದು ಶಾಸನ ಸ್ಪಷ್ಟಪಡಿಸಿದೆ. ವಾಮಶಕ್ತಿಯನ್ನು ಬಂಧಿಯನ್ನಾಗಿ ಹಿಡಿದಾಗ ತೊಣವತ್ತಿಯ ಮೆಱೆಗಾಱ ಬಾಬೆಯನಾಯಕ ಹೋರಾಡಿ ಸ್ವರ್ಗಸ್ಥನಾದ ವಿಷಯವನ್ನು ಬಳ್ಳಿಗಾವೆಯ ಕ್ರಿ. ಶ. ೧೧೬೦ರ ಒಂದು ಶಾಸನ ದಾಖಲಿಸಿದೆ. ಮಠ ವ್ಯಾಸಂಗವನ್ನು ಆಯ್ಕೆ ಮಾಡಿಕೊಂಡಿದ್ದ ವಾಮಶಕ್ತಿಯನ್ನು ಬಂಧಿಯಾಗಿ ಹಿಡಿಯಲು ಕಾರಣವೇನು ಎಂದು ಸ್ಪಷ್ಟವಾಗಿ ತಿಳಿಯದಿದ್ದರೂ, ದೇವಾಲಯ ಮತ್ತು ಮಠಗಳ ನಡುವೆ ಸಾಮರಸ್ಯ ತಪ್ಪಿತ್ತು ಎಂದು ಅನುಮಾನಿಸಲು ಅವಕಾಶಗಳಿವೆ. ಅದೇ ಸಮಯಕ್ಕೆ ನೆಲೆದೇಗುಲ ಮತ್ತು ನಡೆದೇಗುಲಗಳ ಪ್ರಸ್ತಾಪವನ್ನು ಒಂದು ಶಾಸನ ಮಾಡಿದೆ. ಬೇಲೂರು ತಾಲ್ಲೂಕಿನ ಹುಲಿಕೆರೆಯ ಕ್ರಿ. ಶ. ೧೧೬೧ರ ಒಂದು ಶಾಸನವು ಚಟ್ಟೆಯ ಎನ್ನುವವನು 'ಪಲರಂ ರಕ್ಷಿಸಿ ಮತ್ತಂ ಪಲವಂ ನಡೆದೇಗುಲಂಗಳ ಮಾಡಿಸಿದಂ ನೆಲನೆಲ್ಲಮಱಿಯೆ ಚಟ್ಟಂ ನೆಲೆದೇಗುಲಮುಮನಿದೊಂದನೊಲ್ದೆಸಿತ್ತಿದಂ'. ಚಟ್ಟೆಯ ಮಾಡಿಸಿದ ಒಂದೇ ಒಂದು ನೆಲೆದೇಗುಲ ಶಂಭು ಮಂದಿರ. ತಾನು ರಕ್ಷಿಸಿದ ಹಲವರೇ ತನ್ನ ನಡೆದೇಗುಲಗಳು ಎಂಬ ಭಾವ ಅವನಿಗಿತ್ತು



ಎಂದು ತಿಳಿಯಬಹುದು. ಹೊಂಬಳದ ಒಂದು ಶಾಸನದ ಕಾಲ ಕ್ರಿ. ಶ. ೧೧೮೯. ಅದು ಬೊಂತೆಯ ಮುನಿ, ಲಕುಳೀಶ್ವರ, ರುದ್ರಶಕ್ತಿ ಇತ್ಯಾದಿ ಅವಧೂತ ಪ್ರಮುಖ ಶಿಷ್ಯರನ್ನು ಹೆಸರಿಸಿದೆ. ಬೊಂತೇಶ್ವರಕ್ಕೆ ಪೊಂಬಳದ ೧೨೦ ಮಹಾಜನರು ಮಾಡಿದ ದ್ರಬ್ಯ ನಿವೇದನವನ್ನು ವಿವರಿಸಿರುವ ಶಾಸನವು ಹೆಡವರ ಐಚಣ, ಬಳಗಾಱ ಕೇತಣ, ಕಮ್ಮಾರ್ಱ ಐಚೋಜ ಇತ್ಯಾದಿ ಹೆಸರುಗಳನ್ನು ಹೇಳುತ್ತಾ ಇವರೆಲ್ಲರೂ ದೇವಾಲಯಕ್ಕೆ ನೀಡಿದ ತಲಾ ಒಂದು ಮತ್ತರು ದಾನವನ್ನು ದಾಖಲಿಸಿದೆ. ಅಂತೆಯೇ ಮಡಿವಾಳರು, ಕುಂಬಾರರು ದೇವಾಲಯಕ್ಕೆ ನೀಡಿದ ದಾನವನ್ನೂ ಶಾಸನ ತಿಳಿಸುತ್ತದೆ. ಇದರಿಂದ ದೇವಾಲಯವು ದಾನದ ನೆಪದಲ್ಲಿ ಎಲ್ಲ ವೃತ್ತಿಗಳವರನ್ನೂ ಶೋಷಿಸುತ್ತಿತ್ತು ಎಂದು ತಿಳಿಯಲು ಅವಕಾಶಗಳಿವೆ. ಬಿಜಾಪುರ ಜಿಲ್ಲೆಯ ಕಡಲೆವಾಡದ ಕ್ರಿ. ಶ. ೧೨ನೆಯ ಶತಮಾನದ ಒಂದು ಶಾಸನವು ವೀರಬಣಂಜು ಧರ್ಮ ಪ್ರತಿಪಾಳರು, ಅಂದರೆ, ವರ್ತಕ ವರ್ಗದವರು ಕಡಲೆ ನಾಡ ಮನೆಯಲ್ಲಿ ಮಹಾನಾಡಾಗಿ ಸೇರಿ ಬಿಟ್ಟ ಧರ್ಮದಲ್ಲಿ ಅಂಗಡಿ ಗಾಣ, ಹೆಡಗೆ ಯಲೆಂಣ್ಣೆ (ಎಳ್ಳೆಣ್ಣೆ), ಉಪ್ಪು, ಇತ್ಯಾದಿ ಮಾರುವವರು ಹೇರಿಗೆ ತಕ್ಕಂತೆ ನೀಡಬೇಕಾದ ಸುಂಕ ಮತ್ತು ಬಡಗಿ, ಕಮ್ಮಾರ, ಅಕ್ಕಸಾಲೆ, ಅಗಸ, ಸಂಮ್ಮಗಾರ, ಕುಂಬಾರ, ಎಡಹೊಲೆಯ ಇತ್ಯಾದಿ ಎಲ್ಲರೂ ಸೇರಿ ಬಿಟ್ಟ ದಾನಗಳ ವಿವರಗಳನ್ನು ನೀಡಿದೆ. ದೇವಾಲಯಗಳು ವರ್ತಕರಿಂದ ಮತ್ತು ವಿವಿಧ ವೃತ್ತಿಗಳವರಿಂದ ವಸೂಲು ಮಾಡುತ್ತಿದ್ದ ಸುಂಕ, ದಂಡ ಇತ್ಯಾದಿಗಳನ್ನು ಗಮನಿಸಿದಾಗ, ಜನತೆ ಎಷ್ಟು ಶೋಷಣೆಗೆ ಒಳಗಾಗಿದ್ದರು ಎಂದು ಸ್ಪಷ್ಟವಾಗುತ್ತದೆ. ಒಂದು ದೇವಾಲಯಕ್ಕೇ ಇಷ್ಟೊಂದು ಸುಂಕ, ತೆರಿಗೆಗಳನ್ನು ನೀಡಬೇಕಾದರೆ, ಉಳಿದಂತೆ ಮತ್ತೆಷ್ಟು ಆರ್ಥಿಕ ಹೊರೆ ಇವರೆಲ್ಲರ ಮೇಲಿತ್ತು ಎಂದು ಊಹಿಸುವುದೂ ಸಹ ಕಷ್ಟ. ಈ ಆರ್ಥಿಕ ಹೊರೆಯ ಜೊತೆಗೇ ಸಾಮಾಜಿಕವಾಗಿ ಕೂಡ ಪ್ರತ್ಯೇಕತೆ ಇದ್ದುದನ್ನು ಮೇಲಿನ ಶಾಸನಗಳ ಸಾಲುಗಳ ನಡುವೆಯೇ ಗುರುತಿಸಲು ಸಾಧ್ಯವಿದೆ. ಇಂತಹ ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆಗಳ ವಿರುದ್ಧವೇ ಬಸವಣ್ಣ ದನಿ ಎತ್ತಿದ್ದು. ಬಸವಣ್ಣನವರು ಧರ್ಮ ವಿರೋಧಿ ಎಂದು ಯಾವ ಸಂದರ್ಭದಲ್ಲೂ ಅನಿಸುವುದಿಲ್ಲ. ಅವರು ಶಿವನನ್ನು ದೂರ ಇಡಲಿಲ್ಲ. ದೇವಾಲಯ ಸಂಸ್ಕೃತಿಯನ್ನು ಅವರು ವಿರೋಧಿಸಿದರು. ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಯನ್ನು ವಿರೋಧಿಸಿದರು. ನೆಲೆದೇಗುಲಗಳ ಶೋಷಣೆಯನ್ನು ತಡೆಯಲು ಶಿವಭಕ್ತರಲ್ಲೇ ನಡೆದೇಗುಲಗಳನ್ನು ಕಾಣುವ ಸುತ್ತ್ಯ ಪ್ರಯತ್ನ ಬಸವಣ್ಣನವರದಾಗಿತ್ತು. 'ಉಳ್ಳವರು ಶಿವಾಲಯವ ಮಾಡುವರು, ನಾನೇನ ಮಾಡಲಿ' ಎಂದು ಹೇಳಿದ ಬಸವಣ್ಣನವರು ಮತ್ತು ಅವರ ದಾರಿಯಲ್ಲಿ ನಡೆದ ಶರಣ ಸಮಾಜವು ಸಮಾನತೆಗಾಗಿ ನಡೆಸಿದ ಆಂದೋಲನವು ಕರ್ನಾಟಕದಲ್ಲಿ ಹೆಚ್ಚು ವ್ಯಾಪ್ತಿ ಕಂಡ ಮತ್ತು ಒತ್ತು ಪಡೆದ ಹೋರಾಟ ಎನ್ನುವುದು ಸ್ಪಷ್ಟ. ಉಳಿದಂತೆ, ಅದಕ್ಕೂ ಮೊದಲಿನ ಹೋರಾಟಗಳು ಹೆಚ್ಚು ಗಮನ ಸೆಳೆದಿಲ್ಲ. ಆದರೆ, ಹೋರಾಟಗಳೇ ಇರಲಿಲ್ಲ ಎಂದು ಹೇಳುವುದು ಸಾಧ್ಯವಿಲ್ಲ. ೧೨ನೆಯ ಶತಮಾನದವರೆಗೆ ಸುಪ್ತವಾಗಿದ್ದ ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆಯ ಬಗೆಗಿನ ಅಸಮಾಧಾನವು ಕರ್ನಾಟಕದಲ್ಲಿ ಬಹಿರಂಗವಾಗಿ ವ್ಯಕ್ತವಾದದ್ದೇ ಕ್ರಿ. ಶ. ೧೨ನೆಯ ಶತಮಾನದಲ್ಲಿ ಎಂದು ತಿಳಿಯುವುದು ಸೂಕ್ತ. ಬಸವಣ್ಣನವರು ಆರಂಭಿಸಿದ ಚಳವಳಿಯು, ಎಲ್ಲಾ ಜಾತಿಗಳನ್ನು ಸಮಾನವಾಗಿ ಕಾಣುವ ಬಹುಮುಖ್ಯ ಪ್ರಯತ್ನ ಮಾತ್ರವಲ್ಲದೆ, ಆರ್ಥಿಕ ಸಮಾನತೆಯನ್ನು ತಂದು ಕೊಡುವ ಪ್ರಯತ್ನವೂ ಆಗಿತ್ತು. ಯಾವುದೇ ವೃತ್ತಿಯಾದರೂ, ಅದಕ್ಕೊಂದು ಗೌರವ ಇದೆ ಎಂಬ ಉದಾತ್ತ ನಿಲುವು ಬಸವಣ್ಣ ಮತ್ತು ಅವರ ಸಮಕಾಲೀನರದಾಗಿತ್ತು. ಆದ್ದರಿಂದಲೇ, ಬಸವಣ್ಣನವರು ಎಲ್ಲ ಜೀವಿಗಳಲ್ಲಿ ಶಿವನನ್ನು ಕಾಣುವ ಪ್ರಯತ್ನ ಮಾಡಿದರು. ಸಾಮಾಜಿಕ ಮತ್ತು ಆರ್ಥಿಕ ಶೋಷಣೆಯ ಕೇಂದ್ರಗಳಾದ ದೇವಾಲಯಗಳನ್ನು ನಿರಾಕರಿಸಿದರು. ಆ ದೇವಾಲಯಗಳ ಜವಾಬ್ದಾರಿ ಹೊತ್ತಿದ್ದ ಪುರೋಹಿತ/ನೆಲೆ ನಿಂತ ಗುರು ವರ್ಗವನ್ನು ನಿರಾಕರಿಸಿದರು.

ಡಾ|| ಎಚ್. ಎಸ್. ಗೋಪಾಲ ರಾವ್
'ಸ್ವಸ್ತಿಶ್ರೀ ಸ್ಕಂದ', ಅರಿಸಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨೧೨೩

# ನಮ್ಮ ಕೃಷಿ

## ಗ್ರಾಮೀಣ ಅಭಿವೃದ್ಧಿ ಜನಪರವೇ ?

ಪ್ರೊ॥ ಬಿ. ವಿ. ವೆಂಕಟರಾವ್

ಕೇವಲ ಒಂದು ಅಥವಾ ಎರಡು ಎಕರೆ ಮಳೆಯಾಧಾರಿತ ಸ್ವಂತ ಭೂಮಿಯನ್ನು ಹೊಂದಿರುವ ಸಣ್ಣ ಹಿಡುವಳಿದಾರರ ಸಂಖ್ಯೆ ೮೦ ದಶಲಕ್ಷ. ಇವರು ಸ್ವಾವಲಂಬನೆಯನ್ನು ಸಾಧಿಸಬಲ್ಲ ಕೃಷಿ ಮಾದರಿ ಅಳವಡಿಸಿಕೊಂಡರೆ ಅದು ಗ್ರಾಮ ಸ್ವರಾಜ್ಯದ ವಾಸ್ತವ ಸಾಧನೆಯಾಗಬಲ್ಲುದು. ಕೃಷಿ ತಜ್ಞರು ಈ ಲೇಖನದಲ್ಲಿ ಅಂಥ ಒಂದು ಕಾರ್ಯ ಸಾಧನವಾದ ಯೋಜನೆಯನ್ನು ಮುಂದಿಟ್ಟಿದ್ದಾರೆ. ಬೆಂಗಳೂರಿನ ಕೃಷಿ ವಿಶ್ವ ವಿದ್ಯಾಲಯದಲ್ಲಿ ಲೇಖಕರು ಸಂಘಟಿಸಿದ್ದ ತಜ್ಞರ ಕಾರ್ಯಾಗಾರದಲ್ಲಿ ಸೂಚಿಸಲಾದ ಪರಿಹಾರ ಮಾರ್ಗಗಳನ್ನು ಇಲ್ಲಿ ಚರ್ಚಿಸಲಾಗಿದೆ. ಸಣ್ಣ ಪ್ರಮಾಣದ್ದೇ ಆದರೂ ಭೂ ಸುಧಾರಣೆಯ ಮೂಲಕ ರೈತನಿಗೆ ಒಂದೆರಡು ಎಕರೆ ಜಮೀನಿನ ಮೇಲೆ ಒಡೆತನ ನೀಡುವ ಹಂಚಿಕೆ ವ್ಯವಸ್ಥೆಯ ಅಗತ್ಯವು ಮೇಲೆ ಪ್ರಸ್ತಾಪಿಸಿದ ಆಧಾರದ ಮೇಲೆ ಸಮರ್ಥನೀಯವಾಗುತ್ತದೆ.

**ದೇ**ಶದ ಸ್ವಾತಂತ್ರ್ಯ ಸಂಗ್ರಾಮದ ಪ್ರಣಾಳಿಕೆಯ ಪ್ರಧಾನ ಅಂಶ ಕೋಟ್ಯಂತರ ಗ್ರಾಮೀಣ ಬಡ ಜನರಿಗೆ ಒಂದು ಮಟ್ಟದ ಆರ್ಥಿಕ, ಸಾಮಾಜಿಕ ಹಾಗೂ ಅದರಿಂದ ಹೊರಹೊಮ್ಮುವ ಮಾನಸಿಕ ನೆಮ್ಮದಿಯ ಸಾಧನೆ. ಗಾಂಧೀಜಿ ಗ್ರಾಮ ಸ್ವರಾಜ್ಯದ ಕನಸೂ ಅದೇ. ಸ್ವಾತಂತ್ರ್ಯಾನಂತರ ೫೭ ವರ್ಷಗಳಲ್ಲಿ ಆಗಿರುವುದಾದರೂ ಏನು ? ಇಂಥ ಬೃಹತ್ ವಿಷಯದಲ್ಲಿ ಎದ್ದುಕಾಣುವ ಸಮಸ್ಯೆಗಳು, ಅವುಗಳಿಗೆ ಸೂಕ್ತವೆನಿಸುವ ಪರಿಹಾರೋಪಾಯಗಳ ಪ್ರಸ್ತಾಪ, ಅವು ಕಾರ್ಯಗತವಾಗುವಲ್ಲಿ ಅಡಚಣೆ, ಅಸಹಾಯಕತೆ, ಇವನ್ನು ಹಂಚಿಕೊಳ್ಳುವುದೇ ಲೇಖನದ ಉದ್ದೇಶ.

ಅಭಿವೃದ್ಧಿ ಸೂಚ್ಯಾಂಕ ಆಧಾರದಂತೆ, ವಿಶ್ವದ ೧೭೩ ರಾಷ್ಟ್ರಗಳಲ್ಲಿ ಭಾರತದ ಸ್ಥಾನ ೧೨೪; ೧೦೦೦ ದಶಲಕ್ಷ ಜನಸಂಖ್ಯೆಯಲ್ಲಿ ೩೫೦ ದಶಲಕ್ಷ ಬಡತನದ ರೇಖೆಗಿಂತ ಕೆಳಗಿದ್ದಾರೆ; ತರಬೇತಿ ಪಡೆದ ಜನ ಕ್ಯೂನಲ್ಲಿ ನಿಂತು ಅಮೆರಿಕ, ಮಧ್ಯಪ್ರಾಚ್ಯ ಎಲ್ಲೆಂದರಲ್ಲಿಗೆ ಕೆಲಸಕ್ಕೆ ಹೋಗಲು ಧಾವಿಸುತ್ತಿದ್ದಾರೆ; ವಿಶ್ವದ ಅನಕ್ಷರಸ್ಥರಲ್ಲಿ ಶೇ. ೩೦ಕ್ಕೂ ಹೆಚ್ಚು ಭಾರತದಲ್ಲಿದ್ದಾರೆ. ಅಮೆರಿಕಾದಲ್ಲಿ ನೆಲೆಸಿರುವ ಭಾರತೀಯರಿಗೆ ೧೩೫೦ ಜನಕ್ಕೆ ಒಬ್ಬ ಇಂಡಿಯನ್ ಡಾಕ್ಟರ್ ಇದ್ದರೆ ನಮ್ಮಲ್ಲಿ ೨೪೦೦ ಜನಕ್ಕೆ ಒಬ್ಬ ಡಾಕ್ಟರ್ ಕೂಡಾ ಇಲ್ಲ. ಹಣಕಾಸು ವಿಷಯದಲ್ಲೂ ಅಷ್ಟೇ, ಶೇ. ೧.೫ ಬಡ್ಡಿ ಬರುವ ಫೊರೆಕ್ಸ್ ೮೪ ಬಿಲಿಯನ್ ಡಾಲರ್, ನಗದು ಹಣ ಕೇವಲ ೩೫ ಲಕ್ಷ ಕೋಟಿ, ದಾಸ್ತಾನು ಮಳಿಗೆಗಳಲ್ಲಿ ಕೆಡುತ್ತಿರುವ ಆಹಾರ ಧಾನ್ಯ ೬೦ ದಶಲಕ್ಷ ಟನ್, ೩೦೦ ದಶಲಕ್ಷ ಜನ ಹೊಟ್ಟೆ ತುಂಬದವರು. ಈ ಬಗೆಯ ಬವಣೆಗಳ ಪಟ್ಟಿಗೆ ಕೊನೆಯೇ ಇಲ್ಲ.

**ಹಿನ್ನೆಲೆ :** ಪಾಶ್ಚಾತ್ಯ ಮೂಲಕ ನೆಹರು ಸಮಾಜವಾದ, ಪಂಚವಾರ್ಷಿಕ ಯೋಜನೆಗಳು, ಆವಡಿ ಕಾಂಗ್ರೆಸ್ಸಿನ ಸಮಾಜವಾದ ಮಾದರಿಯ ಸಮಾಜವಾದ, ಇತ್ತೀಚೆಗೆ ನಮ್ಮೆಲ್ಲರನ್ನು ತಲ್ಲಣಿಸುತ್ತಿರುವ ಅಮೆರಿಕ ಮಾರುಕಟ್ಟೆ ಉದಾರೀಕರಣ, ಜಾಗತೀಕ ಮಾರುಕಟ್ಟೆ, ನಮ್ಮ ೧೦೦೦ ದಶಲಕ್ಷ ಅಪಾರ ಜನದ ಬಹುಭಾಗಕ್ಕೆ ಒಂದು ಪ್ರಹಸನ. ಅವರ ಬದುಕಿನಲ್ಲಿ ಇನ್ನೂ ಹಿಂಜರಿತ. ನಮ್ಮ ನಾಯಕಗಣದವರದೇ ಒಂದು ಹಿಂಡು, ಎಲ್ಲ ಮಟ್ಟದ ರಾಜಕಾರಣಿಗಳು, ಆಡಳಿತ ವರ್ಗ, ವಿಜ್ಞಾನಿಗಳು, ಬುದ್ಧಿಜೀವಿಗಳು, ಸಾಂಸ್ಕೃತಿಕ ಉದ್ಧಾರಕರು ಇವರೆಲ್ಲ ನಮ್ಮ ವಿವಿಧ ಕ್ಷೇತ್ರಗಳಲ್ಲಿನ ಕುಂಠಿತ ಸ್ಥಿತಿ ಕುರಿತು ಗಂಭೀರವಲ್ಲದಿದ್ದರೂ ಅಷ್ಟಿಷ್ಟು ತಲೆಕೆಡಿಸಿಕೊಳ್ಳದಿರುವುದು ಆಶ್ಚರ್ಯ.

ಇಂದಿನ ನಮ್ಮ ಕೃಷಿ ಸಮಸ್ಯೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಅದು ನಡೆದು ಬಂದ ದಾರಿಯ ಅರಿವು ಅನಿವಾರ್ಯ. ಅಲೆಮಾರಿ ಆದಿಮಾನವ ಮೃಗದಿಂದ ಮಾನವ ಸಮಾಜಜೀವಿಯಾಗುವಲ್ಲಿ ಮೊದಲ ಹೆಜ್ಜೆ, ಅವನು ಒಂದೆಡೆ ನೆಲೆಸಿ, ಭೂಮಿಯಲ್ಲಿ ಬೀಜ ಬಿತ್ತಿ, ಕಾಳು - ಹುಲ್ಲು ಕುಯ್ಲು ಮಾಡಿ ತನ್ನ ಹಾಗೂ ತನ್ನನ್ನವಲಂಬಿಸಿದ ಸಾಕು ಪ್ರಾಣಿಗಳಿಗೆ ವರ್ಷದ ಆಹಾರ ಖಚಿತಪಡಿಸಿಕೊಂಡಿದ್ದು. ಭೂಸಾಗುವಳಿ, ಗಿಡ-ಪೈರು, ಜಾನುವಾರು ಕೃಷಿ, ರೋಗ ಪೀಡೆಗಳಿಂದ ಅವುಗಳ ಸಂರಕ್ಷಣೆ ಇವೆಲ್ಲವನ್ನೂ ಒಂದೊಂದಾಗಿ ಅರಿತುಕೊಂಡ. ಹೀಗೆ ಸುವ್ಯವಸ್ಥಿತ ವ್ಯವಸಾಯ





ಕತ್ತಾಳೆ, ಸರ್ವೇ ಮರ, ಸಿಲ್ವರ್ ಓಕ್ ಬೇಲಿ

ರೂಢಿಗೆ ಬರಲು ಹತ್ತಾರು ಸಾವಿರ ವರ್ಷ ಹಿಡಿದಿರಬಹುದು. ಕೇವಲ ಮಳೆಯನ್ನಷ್ಟೇ ಆಧರಿಸಿದ್ದ ಆತನ ಕೃಷಿ, ಉತ್ತಮ ಸಾಗುವಳಿ. ಅದರೊಟ್ಟಿಗೆ ಕಾಲದಲ್ಲಿ ಬಿದ್ದ ಮಳೆಯನ್ನು ಹಳ್ಳ ಹೊಂಡಗಳಲ್ಲಿ ಶೇಖರಿಸಿ ಬೆಳೆ, ದನಕರುಗಳ ನೀರಿನ ಅವಶ್ಯಕತೆಯನ್ನು ಪೂರೈಸಿಕೊಳ್ಳುವ ವಿಧಿವಿಧಾನಗಳನ್ನು ಕಂಡುಕೊಂಡು. ಅದೇ ನೀರಾವರಿ ತಂತ್ರಜ್ಞಾನ ಬೆಳವಣಿಗೆಗೆ ನಾಂದಿ. ಭಾರತದಲ್ಲಿ ಉಬ್ಬಾಯ ಕೃಷಿ, ೩-೪ ಸಾವಿರ ವರ್ಷಗಳ ಹಿಂದಿನಿಂದ ಇರುವುದು ಕಂಡುಬಂದಿದೆ. ವೇದಗಳ ಕಾಲದಲ್ಲಿ ಋಷ್ಯಾಶ್ರಮಗಳು ಪಶುಸಂಗೋಪನೆಗೆ ಕೇಂದ್ರಗಳಾಗಿದ್ದವು. ಅಲ್ಲಿ ತಮಗೆ, ತಮ್ಮ ಆಶ್ರಮದ ಪಶುಗಳ ಅವಶ್ಯಕತೆಗೆ, ಸಾಕಾಗುವಷ್ಟು ಆಹಾರೋಪಾದಿಗಳನ್ನು ಆಶ್ರಮವಾಸಿಗಳು ತಾವೇ ಉತ್ಪಾದಿಸಿಕೊಳ್ಳುತ್ತಿದ್ದರು. ಈ ಚಟುವಟಿಕೆ ಅವರ ಬುದ್ಧಿಪೂರ್ವಕ ಶ್ರಮದಿಂದ ಬೆಳೆದದ್ದು, ನಂತರ ಅದು ಸಾಮಾನ್ಯ ಕೃಷಿಯಲ್ಲಿ ರೂಢಿಯಾಗುತ್ತಿತ್ತು, ಆಶ್ರಮಗಳು ರಾಜ್ಯವ್ಯವಸ್ಥೆಯ ಭಾಗವಾದಾಗ ಕೃಷಿ ಕಾರ್ಯಕ್ರಮ ಒಂದು ಪರಂಪರೆಯಾಯಿತು. ರಾಜಕೀಯ ಏರುಪೇರು, ಶತ್ರು ದಾಳಿಗಳ ಅಡಚಣೆಗಳ ಕಾರಣ ವ್ಯವಸ್ಥಿತ ಪ್ರಜ್ಞಾಪೂರ್ವಕ ವ್ಯವಸಾಯ ಬೆಳವಣಿಗೆ ಸುಗಮವಾಗಿ ಸಾಗಲಿಲ್ಲ.

ಜನಸಂಖ್ಯೆ ಹೆಚ್ಚಳ, ಮಳೆಯಷ್ಟೆ ಅನಿಶ್ಚಿತವಾದ ಆಹಾರೋತ್ಪನ್ನ ಈ ಕಾರಣಗಳಿಂದ ಒಂದಲ್ಲ ಒಂದೆಡೆ ಕ್ಷಾಮ, ಅದರ ಕರಾಳ ಛಾಯೆ ಜನಜೀವನದ ಸಾಮಾನ್ಯ ಘಟನೆ ಯಾಗಿತ್ತು. ಅಲ್ಲೊಮ್ಮೆ ಇಲ್ಲೊಮ್ಮೆ ಸುಭದ್ರ, ಸುದೀರ್ಘ ರಾಜ್ಯಾಡಳಿತ ಇರುತ್ತಿತ್ತು. ಅಲ್ಲಿ ಸದೃಢ ವ್ಯವಸಾಯಕ್ಕೆ ಬೇಕಾದ ಕೆರೆ, ಕುಂಟೆ, ನದಿ, ಅಣೆಕಟ್ಟು, ಕಾಲುವೆ ನಿರ್ಮಾಣ ಗಳತ್ತ ಚಿಂತನೆ ಕಾರ್ಯಶೀಲ ಕೆಲಸಗಳಿಗೆ ಗಮನ ಹರಿದು ಅನುಕೂಲಗಳಾಗಿವೆ. ಚಾಣಕ್ಯನ ಅರ್ಥಶಾಸ್ತ್ರದಲ್ಲಿ ಭೂಮಿ, ಪಶುರಕ್ಷಣೆ ಅವುಗಳ ಬಗ್ಗೆ ಕೆಲವಷ್ಟು ನೀತಿ ನಿರ್ವಹಣೆ ಬಗ್ಗೆ ಪ್ರಸ್ತಾಪವಿದೆಯೇ ಹೊರತು, ದೇಶದಲ್ಲಿ ಕೃಷಿ ಉತ್ಪನ್ನ ಅದರಲ್ಲಿ ಶ್ರಮಿಸುವವರನ್ನು ಕುರಿತು ನಿರ್ದಿಷ್ಟ ಸಲಹೆ ನಿಯಮಗಳೇನೂ ಗೋಚರವಾಗುವುದಿಲ್ಲ.

ದೇಶದ ಗಂಗಾ, ಯಮುನಾ, ಸಿಂಧು ನದಿ ಬಯಲುಗಳಲ್ಲಿ ದಖನ್ ಹಾಗೂ ದಕ್ಷಿಣ ಪ್ರದೇಶಗಳಿಗೂ ಸೇರಿದಂತೆ ಈ ಪರಿಸ್ಥಿತಿ ಇದ್ದು ಬಂದಿರುವುದು ಕಂಡುಬರುತ್ತೆ. ಯಾವ ರಾಜ್ಯ ಸಾಮ್ರಾಜ್ಯ ಬಂದರೂ ಅಷ್ಟೇ, ಬರದೆ ಇದ್ದರೂ ಅಷ್ಟೇ, ಜನಸಾಮಾನ್ಯರಲ್ಲಿ ಪ್ರಚಲಿತವಿರುವ ''ಯಾವ ರಾಜ ಬಂದರೂ ರಾಗಿ ಬೀಸೋದು ತಪ್ಪೊಲ್ಲ'' ಎಂಬ ಮಾತಿನಂತೆ ಬೇಸಾಯೋದ್ಯಮ ಉಳಿದಿದೆ.

**ಬಂಗಾಳ ಕ್ಷಾಮ ಸಮಿತಿ :** ಗೋಚರವಾಗುವಂತೆ ಕೃಷಿ ಬಗ್ಗೆ ಸರ್ಕಾರದ ಗಮನ ಹರಿದಿದ್ದು, ೧೮೭೦ರಲ್ಲಿ ಬಂಗಾಳ, ಬಿಹಾರಗಳಲ್ಲಿ ಭೀಕರ ಕ್ಷಾಮ ತಲೆದೋರಿದಾಗ. ಕ್ಷಾಮ ಅಂದರೆ ಏನು, ಅದಕ್ಕೆ ಕಾರಣಗಳೇನು ? ಪರಿಹಾರ ಹೇಗೆ ? ಇದನ್ನು ಕುರಿತು ವಿಚಾರಣೆ ಮಾಡಲು ಒಂದು ಆಯೋಗವನ್ನು ಬ್ರಿಟಿಷ್ ಸರ್ಕಾರ ನಿಯಮಿಸಿತು. ಮಳೆ, ಬೆಳೆ ಏರುಪೇರಾದಾಗ ಎಚ್ಚರಿಕೆ ಕ್ರಮಗಳು, ಕೃಷಿ ವಿಧಾನಗಳ ಸುಧಾರಣೆ, ಇವೆಲ್ಲವು ಗಳನ್ನು ಅಧ್ಯಯನ ಮಾಡಿ ವರದಿ ಸಲ್ಲಿಸುವಂತೆ ಕೋರಿತು. ಕಲ್ಕತ್ತ, ದೆಹಲಿ, ಬಂಗಾಳದಲ್ಲಿ ಕಲ್ಯಾಣಿ, ಪಂಜಾಬಿನಲ್ಲಿ ಲಾಯಲಪುರ, ಕೊಯಮುತ್ತೂರು, ಪುಣೆಗಳಲ್ಲಿ ಕೃಷಿ ಸಂಶೋಧನಾ ಕ್ಷೇತ್ರಗಳು ಸ್ಥಾಪನೆಯಾದವು. ೧೮೯೯ರಲ್ಲಿ ಹಳೇ ಮೈಸೂರಿನಲ್ಲಿ ವ್ಯವಸಾಯ ಇಲಾಖೆ ಪ್ರಾರಂಭವಾಯಿತು. ೧೯೧೩ರಲ್ಲಿ ಹೆಬ್ಬಾಳದಲ್ಲಿ ಮೆಟ್ರಿಕ್ಯುಲೇಷನ್ ನಂತರದ ಅಗ್ರಿಕಲ್ಚರಲ್ ಡಿಪ್ಲೊಮಾ ತರಬೇತಿಗೆ ಅನುವಾಯಿತು. ಕ್ರಮೇಣ ಕೊಯಮತ್ತೂರು, ನಾಗಪುರ, ಲಾಯಲ್‌ಪುರ, ಕಲ್ಯಾಣಿ, ಹೆಬ್ಬಾಳ, ಧಾರವಾಡ, ತಿರುಪತಿಗಳಲ್ಲಿ ವ್ಯವಸಾಯ ಕಾಲೇಜುಗಳು ಹಾಗೂ ೧೯೬೦ರ ನಂತರದಲ್ಲಿ ಅಮೆರಿಕಾದ ಲ್ಯಾಂಡ್ ಗ್ರಾಂಟ್ ಕಾಲೇಜುಗಳ ಮಾದರಿಯಲ್ಲಿ ಪಂಜಾಬ್, ಉತ್ತರ ಪ್ರದೇಶ, ಬೆಂಗಳೂರು ಹೀಗೆ ಎಲ್ಲ ರಾಜ್ಯಗಳಲ್ಲಿ ಒಂದೊಂದು, ಇಲ್ಲವೆ ೨-೩ ಕೃಷಿ ವಿಶ್ವವಿದ್ಯಾಲಯಗಳು ಸ್ಥಾಪಿತವಾಗಿ ಕೃಷಿ ಬೋಧನೆ, ಸಂಶೋಧನೆ ಹಾಗೂ ವಿಸ್ತರಣಾ ಚಟುವಟಿಕೆಗಳಲ್ಲಿ, ಆಯಾ ಪ್ರದೇಶಕ್ಕನುಗುಣವಾದ ವ್ಯಾಪಕ ಅರ್ಥದಲ್ಲಿ ಕೃಷಿ, ಬೆಳೆ ಕಾಡು ಸೇರಿ, ಪಶುಸಂಗೋಪನೆ, ರೇಷ್ಮೆ ವ್ಯವಸಾಯ ಇಂಥ ವಿಷಯ ಕುರಿತ ಕೆಲಸಗಳಲ್ಲಿ ನಿರತವಾಗಿವೆ.

**ಸಂಪನ್ಮೂಲಗಳು :** ದೇಶದ ೩೨೮ ಮಿಲಿಯನ್ ಹೆಕ್ಟೇರ್ ಭೂ ಪ್ರದೇಶದಲ್ಲಿ ೧೪೨ ಮಿಲಿಯನ್ ಸಾಗುವಳಿ ಭೂಮಿ ವರ್ಷದಾದ್ಯಂತ ಬೆಳೆ ತೆಗೆಯಲು ಹಿತಕರ. ವಾತಾವರಣ, ನೀರಾವರಿ ಬೇಸಿಗೆಯಲ್ಲೂ ಸೇರಿದಂತೆ ೬೦ ದಶಲಕ್ಷ ಹೆಕ್ಟೇರುಗಳಲ್ಲಿ, ಸಾಕಷ್ಟು ಹಿಂಗಾರು, ಮುಂಗಾರು ಮಳೆ ಹಾಗೂ ಜೀವಂತ ನದಿ ಬಯಲು ಭೂಮಿಗಳು. ೭೦೦ ದಶಲಕ್ಷ ಶ್ರದ್ಧಾವಂತ ಕಷ್ಟಸಹಿಷ್ಣು ಮಾನವ ಸಂಪತ್ತು – ಕೃಷಿಕರು. ಹೀಗೆ ಸಮೃದ್ಧವಾದ ಭಾರತ, ಬಡತನದಲ್ಲಿ ಬೇಯುತ್ತಿರುವುದು ಒಂದು ವಿಪರ್ಯಾಸ. ಕೇವಲ ೬೦-೭೦ ವರ್ಷದ ಹಿಂದಿನವರೆವಿಗೂ ದೇಶದಲ್ಲೆಲ್ಲಾ ಅದರಲ್ಲೂ ಉತ್ತರ ಪ್ರಾಂತಗಳಲ್ಲಿ ಜಮೀನುದಾರಿ, ಜಹಗೀರಿ, ಜೋಡಿದಾರಿ ಪದ್ಧತಿ ಜಾರಿಯಲ್ಲಿತ್ತು. ಜಮೀನಿನ ಕೆಲಸದಲ್ಲೇ ಜೀವನ ನಿರ್ವಹಿಸುವ ಹಳ್ಳಿಗರು, ಅವರಿಂದ ಕೆಲವಷ್ಟು ತುಂಡು ಭೂಮಿ ಗೇಣಿ ಇಲ್ಲವೇ ಜೀತದ ಆಧಾರದ ಮೇಲೆ ಸಾಗುವಳಿ ಮಾಡುತ್ತಿದ್ದರು. ಜಮೀನುದಾರಿ ವ್ಯವಸ್ಥೆ ರದ್ದಾದ ನಂತರ ಉಳುತ್ತಿದ್ದವನಿಗೆ ಅಷ್ಟೋ ಇಷ್ಟೋ ತುಂಡು ಭೂಮಿ ಬಂತು. ಅವನಿಗೂ ಸರ್ಕಾರಕ್ಕೂ ನೇರ ಸಂಪರ್ಕ; ಅವನೇ ಹಿಡುವಳಿದಾರ.

**ಭೂ ವಿತರಣೆ ಇಂದು :** ೧೪೨ ಮಿಲಿಯನ್ ಹೆಕ್ಟೇರ್ ೧೯೭೦ರ ಅಂಕಿ ಅಂಶಗಳ ಮೇಲೆ ೮೨ ಮಿಲಿಯನ್ ಹಿಡುವಳಿಗಳಾಗಿವೆ. ಅವೆಂದರೆ, ಹೆಕ್ಟೇರಿನಲ್ಲಿ, ಸಬ್ ಮಾರ್ಜಿನಲ್ (೧/೨ ಹೆಕ್ಟೇರಿಗಿಂತ ಕಡಿಮೆ), ಮಾರ್ಜಿನಲ್ (೧/೨ರಿಂದ ೧), ಸ್ಮಾಲ್ (೧ ರಿಂದ ೨), ಸೆಮಿ ಮೀಡಿಯಂ (೨ ರಿಂದ ೪), ಮೀಡಿಯಂ (೪ ರಿಂದ ೧೦), ಲಾರ್ಜ್ (೧೦ಕ್ಕಿಂತ ಮೇಲೆ) ೮೨ ಮಿಲಿಯನ್ ಹಿಡುವಳಿಗಳಾಗಿತ್ತು. ೧೯೯೧ರಲ್ಲಿ ಅದು ೧೦೮; ಅದರಲ್ಲಿ ೮೦ (೨ ಹೆಕ್ಟೇರಿಗಿಂತ ಕಡಿಮೆಯವು); ೪೦-೪೫, (೧ಕ್ಕಿಂತ ಚಿಕ್ಕವು); ೨೦-೨೫ (೧/೨ಕ್ಕಿಂತ ಕಿರಿದು). ಇವೆಲ್ಲ ಸೇರಿ ವಿಸ್ತೀರ್ಣದಲ್ಲಿ ಉತ್ತ ಭೂಮಿಯ ೧/೩ ಭಾಗಕ್ಕಿಂತ ಕಡಿಮೆ. ಉಳಿದ ಉತ್ತಮ ಗುಣದ ೨/೩ ಭಾಗ ಭೂಮಿ ಒಟ್ಟು ಶೇ. ೨೫-೩೦ ಭಾಗ ರೈತರಲ್ಲಿವೆ. ಕೃಷಿಯಲ್ಲಿ ಭೂಮಿ ಮುಖ್ಯ ಆರ್ಥಿಕ ಅವಕಾಶ, ಅದರ ಒಡೆತನದಲ್ಲಿನ ಈ ವ್ಯತ್ಯಾಸ ದಾರುಣ ವೈಪರೀತ್ಯ. ಇದನ್ನೇ ಒಂದು ಲೆಕ್ಕಾಚಾರ ದಂತೆ ಪರಿಗಣಿಸಿದಾಗ, ಕೆಳಗಿನ ೩ ವರ್ಗದ ಕುಟುಂಬದ ವ್ಯಕ್ತಿಶಃ ಒದಗುವ ಭೂಮಿ ಗುಂಟೆಗಳಲ್ಲಿ ಹೀಗಿರುತ್ತೆ : (೧) ಸಬ್ ಮಾರ್ಜಿನಲ್-೫, (೨) ಮಾರ್ಜಿನಲ್-೧೫, (೩) ಸ್ಮಾಲ್-೩೦, ಪ್ರತಿಯಾಗಿ ೪, ೫, ೬ ವರ್ಗದ ಕುಟುಂಬದ ಒಬ್ಬೊಬ್ಬರಿಗೆ ಕ್ರಮವಾಗಿ ೫೫, ೧೨೦ ಮತ್ತು ೩೦೦ ಗುಂಟೆ ಜಮೀನು. ಅತ್ತೆಡೆ ಕೈತುಂಬ ಕೆಲಸ, ಸಂಪಾದನೆ ಇಲ್ಲದ ಸಣ್ಣ ರೈತರು, ವ್ಯವಸಾಯದ ಕೂಲಿ, ಕಸುಬುದಾರರು ಸೇರಿದ ೬೦೦-೭೦೦ ದಶಲಕ್ಷ ಕಡುಬಡವರು; ಹಸಿವು, ರೋಗರುಜಿನಗಳಿಂದ ಸದಾ ಸೊರಗುತ್ತಿರುವವರು.



ವಸತಿ, ಶೌಚಾಲಯ, ದನದ ಕೊಠಡಿ ಮತ್ತು ಬಯೋಗ್ಯಾಸ್ ಸ್ಥಾವನೆ



ಸಮೃದ್ಧ ಕಾಳು-ಬೇಳೆ ಅಕ್ಕಡಿಗಳು

**ಸಂಪತ್ಸಾಧನ ಉಳ್ಳವರು :** ಆಧುನಿಕ ಬೇಸಾಯ ಒದಗಿಸಿದ ಹಸಿರು ಕ್ರಾಂತಿಯ ಅನುಕೂಲಗಳು, ಅಂದರೆ, ಸುಧಾರಿತ ಬೀಜ, ಗೊಬ್ಬರ, ನೀರಾವರಿ, ಸಸ್ಯ ಸಂರಕ್ಷಣೆ ಸೌಲಭ್ಯಗಳನ್ನು ಉತ್ಸಾಹದಿಂದ ಬಳಸಿಕೊಂಡು ದೇಶದ ಆಹಾರೋತ್ಪನ್ನದ ವಿಕ್ರಮಕ್ಕೆ ಕಾರಣರಾದ ಸೆಮಿ ಮೀಡಿಯಂ, ಮೀಡಿಯಂ, ಲಾರ್ಜ್ ವರ್ಗದ ರೈತರು, ಆಹಾರ ಉತ್ಪಾದನೆಯನ್ನು ೫೨ ಮಿಲಿಯನ್‌ನಿಂದ ೨೦೦ ಮಿಲಿಯನ್ ಟನ್ನಿಗೂ ಜಾಸ್ತಿ ಹೆಚ್ಚಿಸಿದ್ದಾರೆ. ಆಹಾರಕ್ಕಾಗಿ ಹೊರ ದೇಶಗಳೆದುರು ಹೀನಾಯವಾಗಿ ಗಿಂಜುವುದನ್ನು ತಪ್ಪಿಸಿದ್ದಾರೆ. ವಿಶ್ವ ಮಾರುಕಟ್ಟೆಯ ಕಠಿಣ ಪೈಪೋಟಿಯಲ್ಲಿ ಇವರಿಗೆ ಆಗಬಹುದಾದ ತೊಂದರೆ ತಪ್ಪಿಸಬೇಕಾದದ್ದು ಸರ್ಕಾರದ ಆದ್ಯ ಕರ್ತವ್ಯ; ರಾಷ್ಟ್ರದ ಗೌರವದ ಪ್ರಶ್ನೆ.

**ಕರ್ನಾಟಕ ಸರ್ಕಾರದ ಕೃಷಿ ನೀತಿ :** ಕಳೆದ ದಶಕದಲ್ಲಿ ಆಹಾರೋತ್ಪನ್ನದ ಹೆಚ್ಚಳದ ಗತಿ ಅಂಥ ಆಶಾದಾಯಕವಾಗಿಲ್ಲ. ಜನಸಂಖ್ಯೆ ನಿಯಂತ್ರಣ ಮರೀಚಿಕೆಯಾಗಿಯೇ ಉಳಿದಿದೆ. ನಮ್ಮ ಕೃಷಿ ನೀತಿಯನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಪರಿಸ್ಥಿತಿ ನಿಭಾಯಿಸುವತ್ತ ಚಿಂತನೆ ನಡೆಯುತ್ತಿದೆ. ನಾವು ಪ್ರಸ್ತುತ ಬಳಸುತ್ತಿರುವ ಬೀಜ, ಗೊಬ್ಬರ, ರಾಸಾಯನಿಕಗಳೊಟ್ಟಿಗೆ ಜೈವಿಕ ತಂತ್ರಜ್ಞಾನವನ್ನೂ ಬಳಸಿ ಉತ್ಪಾದನೆ ಹೆಚ್ಚಿಸುವತ್ತ ತೀವ್ರ ಗಮನ ಹರಿಯುತ್ತಿದೆ. ಕರ್ನಾಟಕ ಸರ್ಕಾರ ೧೯೯೫ರಲ್ಲಿ ರಾಜ್ಯದ ನೂತನ ಕೃಷಿ ನೀತಿ ಬಗ್ಗೆ ನಿರೂಪವನ್ನು ಹೊರಡಿಸಿತು. ಅದರ ಪ್ರಧಾನ ಒತ್ತು ಎಂದರೆ, ಕೈಗಾರಿಕೆಗೆ ಕೊಟ್ಟಂತೆ ಕೃಷಿಗೂ ಬೇಕಾದ ವಿಶೇಷ ಅನುಕೂಲ ಕಲ್ಪನೆ. ಮುಖ್ಯವಾಗಿ, ಔದ್ಯಮಿಕ ದೃಷ್ಟಿ, ಹಣ ಹೂಡಿಕೆ, ಸಾಲ ಸೌಲಭ್ಯ, ಬೆಲೆ ನಿಯಂತ್ರಣ ಹಾಗೂ ಮಾರುಕಟ್ಟೆ, ಬೆಲೆ ಕುಸಿತದೆದುರು ರಕ್ಷಣೆ, ಬ್ಯಾಂಕುಗಳ ಹೊಣೆಯೂ ಒಳಗೊಂಡಂತೆ ಒಂದೊಂದು ಬೆಳೆಗೂ ವೈಶಿಷ್ಟ್ಯಪೂರ್ಣ ಸಹಾಯಕ ನಿಯಮಗಳೊಡನೆ ಮಾರುಕಟ್ಟೆ ಸುಧಾರಣೆ, ಸಾಗಾಣಿಕೆ ಸೌಲಭ್ಯ, ರಸ್ತೆ ಸುಧಾರಣೆ, ಎಲ್ಲ ಧಾನ್ಯ, ವಾಣಿಜ್ಯ ಹೂವು ಹಣ್ಣು, ತರಕಾರಿ ಬೆಳೆಗಳನ್ನು ಕುರಿತ ಸಂಶೋಧನೆ ಹಾಗೂ ವಿಸ್ತರಣಾ ಕಾರ್ಯ, ಬೆಳೆ ವಿಮೆ; ಕೊನೆಯದಾಗಿ, ರಫ್ತು ವ್ಯವಹಾರ ಇವೆಲ್ಲವುಗಳ ಬಗ್ಗೆ ಆದ್ಯ ಕಾಳಜಿ. ಗ್ರಾಮೀಣ ವಂಚಿತರಿಗೆ ನೀಡಿರುವ ಗಮನ ಎಂದರೆ, ರಿಯಾಯಿತಿ ದರದಲ್ಲಿ ರೇಷನ್ ಹಾಗೂ ವಿಸ್ತೃತ ಔದ್ಯಮಿಕ ಕೃಷಿ ಚಟುವಟಿಕೆಯಿಂದ ಆಗಬಹುದಾದ ಹೆಚ್ಚಿನ ಕೆಲಸ-ಕೂಲಿ ಅವಕಾಶ. ವರದಿಯ ತುಂಬ ತುಂಬಿ ತುಳುಕಾಡುವ ಸಲಹೆಗಳು ಅಂದರೆ ಅನುಕೂಲಸ್ಥರು ಬೆಳೆಯಲು ಇನ್ನೂ ಹೆಚ್ಚಿನ ಅವಕಾಶ; ಇವೆಲ್ಲ ಅಮೆರಿಕ ರೈತರಿಗೆ ಒದಗುವ ಬೆಂಬಲಕ್ಕೆ ಸರಿಸಮ. ಈ ವರದಿಯ ಸಲಹೆಗಳೆಲ್ಲಾ ಅಪೇಕ್ಷಣೀಯವಾದುವೆ. ಆದರೂ ವಂಚಿತ ಹಳ್ಳಿಗಾಡಿನ ಜನರ ಸುಧಾರಣೆಗೆ ಗಮನ ಸಾಲದು ಅನ್ನಿಸುತ್ತದೆ.

**ಸಂಪತ್ಸಾಧನಗಳಿಂದ ವಂಚಿತ ರೈತರು :** ನಾವು ಈಗಾಗಲೇ ವಿಚಾರ ಮಾಡಿದಂತೆ ೫೦೦-೬೦೦ ದಶಲಕ್ಷ ಜನರ ಬದುಕಿಗೆ ಆಧಾರ ೧-೨ ಎಕರೆ ಭೂಮಿ. ಇವರೇ ನಮ್ಮ ನಿಜವಾದ ಗ್ರಾಮೀಣ ಭಾರತ. ಈ ೮೦ ದಶಲಕ್ಷ ಹಿಡುವಳಿಗಳ ಕಾರ್ಯಕ್ಷಮತೆಯನ್ನು ಪರಿಣಾಮಕಾರಿಯಾಗಿ ಸುಧಾರಿಸುವುದೇ ಗ್ರಾಮೀಣ ಅಭಿವೃದ್ಧಿ. ಇದು ಸುಸಂಘಟಿತ ಬೇಸಾಯ ರೂಢಿ (ಐ.ಎಫ್.ಎಸ್.)ಯಿಂದ ಕಾರ್ಯಸಾಧ್ಯ ಎಂಬ ಖಚಿತವಾದ ಭರವಸೆ ಕಳೆದ ೨೫-೩೦ ವರ್ಷಗಳ ಸತತ ಚಿಂತನ-ಮಂಥನ ಪರಿಕಲ್ಪನೆಗಳಿಂದ ಹೊರಹೊಮ್ಮಿದೆ.

ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಬಾವಿಕೆರೆ ಸಂಶೋಧನಾ ಕ್ಷೇತ್ರದಲ್ಲಿ ಕಳೆದ ೨-೩ ವರ್ಷಗಳಿಂದ ಈ ದಿಕ್ಕಿನಲ್ಲಿ ಅಧ್ಯಯನ ನಡೆದಿದೆ. ಈ ಪ್ರಯೋಗದ ಮುಖ್ಯಾಂಶಗಳೆಂದರೆ ಕತ್ತಾಳಿ, ಸರ್ವೆ, ಸಿಲ್ವರ್ ಓಕ್ ಬಗೆಯ ಬೇಲಿಯೊಳಗಿನ ಒಂದು ಎಕರೆ ಹೊಲ; ತೆಂಗಿನಗರಿ-ಹುಲ್ಲು-ಚಾವಣಿ, ಮಣ್ಣು ಗೋಡೆಗಳಿಂದ ನಿರ್ಮಿತವಾದ ರೈತನ ವಸತಿ, ಹೊಲದ ಭೂಮಿಯಲ್ಲಿ ರಾಗಿ-ಬೇಳೆ-ಹುಚ್ಚೆಳ್ಳು ಅವರೆಗಳಂಥ ಅಕ್ಕಡಿ ಬೆಳೆ; ಉದ್ದ-ಅಡ್ಡ ಬದು-ಕಾಂಟೂರು ಸಾಲುಗಳಲ್ಲಿ ಹಸಿರು ಮೇವು, ಹಸಿರೆಲೆ ಗೊಬ್ಬರ, ಉರುವಲು ನೀಡಬಲ್ಲ ಗ್ಲಿರಿಸೀಡಿಯ ಸೀಪಿಯಂ, ಸೊಬಾಬಲು, ಅಗಸೆ, ನುಗ್ಗೆ ಬಗೆಯ ಒತ್ತಾಗಿ ಬೆಳೆಸಿದ ಬಹೂಪಯೋಗಿ ಪೊದೆ ಗಿಡಗಳು; ಹೊಲದ ಸರಹದ್ದಿನಲ್ಲಿ ಅಂಚು-ಕೋರೆಗಳಲ್ಲಿ ಹೊಂಗೆ, ಬೇವು, ಜಟ್ರೋಫ್, ಹುಣಿಸೆ, ಹಲಸಿನಂಥ ಕೆಲವಷ್ಟು ರೊಕ್ಕದ ಮರಗಳು; ವಸತಿಯ ಸುತ್ತ ಬೇಲಿ, ಅದರೊಳಗೆ ಸೊಪ್ಪು-ತರಕಾರಿ ಔಷಧಿ ಸಸ್ಯ, ಹಣ್ಣು-ಹಂಪಲು ಹೀಗೆ ಬೆಳೆ ವೈವಿಧ್ಯ. ೧-೨ ಹಸು/ಎಮ್ಮೆ, ಕೆಲವಷ್ಟು ಕೋಳಿ, ಕುರಿ, ಮೊಲ, ಸಾಧ್ಯವಾದರೆ ಒಂದು ಜೊತೆ ಮತ್ತು ಇವೆಲ್ಲವೂ ಕೂಡಿದ ಪ್ರಾಣಿ ಸಾಕಾಣಿಕೆ. ದನದ ಕೊಠಡಿ-ಶೌಚಾಲಯ ಹಾಗೂ ಒಂದು ಬಯೋ ಗ್ಯಾಸ್ ಸ್ಥಾವರ, ಸೂಕ್ತ ಸ್ಥಳದಲ್ಲಿ ನೀರಿನ ಹೊಂಡ. ಈ ಎಲ್ಲ ಸಂಘಟಿತ ಕ್ರಿಯಾಶೀಲ ಚಟುವಟಿಕೆಗಳಿಂದ ರೈತ ಕುಟುಂಬದ ಸಮೃದ್ಧವಾದ ಜೀವನಾವಶ್ಯಕಗಳ ತೃಪ್ತಿಕರ ಪೂರೈಕೆ. ಹಾಗೆಯೇ ಹಾಲು ಕುರಿ ಕೋಳಿಗಳ ಮಾರಾಟ ಇವೆಲ್ಲ ಲಾಗೋಡು ವೆಚ್ಚ ಕಳೆದು ಮೊದಲನೇ ವರ್ಷದಲ್ಲೇ ೫೦೦೦ರೂ. ನಗದು ವರಮಾನ. ಇವೆಲ್ಲವುಗಳಿಗೂ ಹೆಚ್ಚು ಸಮಾಧಾನ ಸಂಗತಿ ಹಳ್ಳಿಯ ಕೊಚ್ಚೆ-ಕೊಳಕುಗಳಿಂದ ರೈತ ಸಂಸಾರದ ವಾಸ ಸ್ವಚ್ಛ ಗಾಳಿ-ಬೆಳಕಿನಿಂದ ಸಮೃದ್ಧವಾದ ತನ್ನದೇ ಭೂಮಿಗೆ ವರ್ಗಾವಣೆ. ಗ್ರಾಮೀಣ ಬದುಕಿನ ಸುಧಾರಣೆಯಲ್ಲಿ ಒಂದು ಮೈಲಿಗಲ್ಲು.

ಜುಲೈ ೨೪, ೨೦೦೪ರಂದು ಬೆಂಗಳೂರು ಕೃಷಿ ತಂತ್ರಜ್ಞ ಸಂಸ್ಥೆ ಸಭಾಂಗಣದಲ್ಲಿ ಒಂದು ಉನ್ನತಮಟ್ಟದ ಕೃಷಿ ಪರಿಣತರ ಸಭೆ ನಡೆಯಿತು. ಸಂಘಟಿತ ಕೃಷಿ ವ್ಯವಸ್ಥೆ ಅಥವಾ ಐ.ಎಫ್.ಎಸ್. ಕುರಿತ ಕೂಲಂಕಷ ಚರ್ಚೆಯ ಆಧಾರದ ಮೇಲೆ ಆರ್ಥಿಕ-ಸಾಮಾಜಿಕ ಪ್ರಾದೇಶಿಕ ಸನ್ನಿವೇಶಕ್ಕನುಗುಣವಾಗಿ ಅಳವಡಿಸಿಕೊಂಡ ಈ ಕೃಷಿ ರೂಢಿಯಿಂದ ೮೦ ದಶಲಕ್ಷ ರೈತ ಕುಟುಂಬದ ಏಳಿಗೆ ಸಾಧ್ಯ ಎಂಬಂಶಕ್ಕೆ ಸರ್ವಾನುಮತದ



ಕುರಿ ಜಾನುವಾರು ಸಂಪತ್ತು

ಒಪ್ಪಿಗೆ ದೊರೆಯಿತು. ಭಾಗವಹಿಸಿದ್ದ ಐ.ಎ.ಟಿ., ಎ.ಎಂ.ಸಿ. ಫೌಂಡೇಷನ್, ಯು.ಎ.ಎಸ್ ಇನ್ನಿತರ ಸಂಸ್ಥೆಗಳು, ಐ.ಎಫ್.ಎಸ್. ಶೀಘ್ರಗತಿಯಲ್ಲಿ ವ್ಯವಸಾಯದ ರೂಢಿಯಾಗಿ ಅಳವಡಿಕೆಯಾಗಲು ಕಾರ್ಯಶೀಲ ಕ್ರಮಗಳನ್ನು ಕೈಗೆತ್ತಿಕೊಳ್ಳುವುದಾಗಿ ಸಮ್ಮತಿಸಿದರು.

ಐ.ಎಫ್.ಎಸ್. ಮೈಗೂಡಿಸಿಕೊಂಡ ಸ್ವಾವಲಂಬಿ ಸಣ್ಣ ರೈತ ಆತ್ಮ ಭರವಸೆಯ ಪ್ರತೀಕವಾಗುತ್ತಾನೆ. ಸ್ಥಳೀಯ ಅಲ್ಲದೆ ಆಮದು-ರಫ್ತು ಮಾರುಕಟ್ಟೆಯ ಉಪಟಳಕ್ಕೆ ಅವನು ಹೊರಗು; ಹಳ್ಳಿಗಾಡಿನಲ್ಲಿ ಎಲ್ಲೆಲ್ಲೂ ನೆಮ್ಮದಿಯ ಸಂತೃಪ್ತ ರೈತ ಜನ, ಸದಾಕಾಲದ ತಂಪು ಹಸಿರು ಭೂಮಿ ಗಾಂಧೀಜಿಯ ಅಂತ್ಯೋದಯ ಗ್ರಾಮ ಸಮಾಜದ ಕನಸು ನನಸಾಗಿಸುತ್ತದೆ.

**ಪ್ರೊ॥ ಬಿ. ವಿ. ವೆಂಕಟರಾವ್**
ನಂ. ೭೮, ೩ನೇ ಅಡ್ಡರಸ್ತೆ, ಗವಿಪುರ ಬಡಾವಣೆ, ಬೆಂಗಳೂರು - ೫೬೦ ೦೧೯



**ಕುಂ. ವೀರಭದ್ರಪ್ಪ**

**ಡು**ಮ್ಮ ಹುಲಿಗೆ ಜಾತುರೇನ ಮಾಡಿಕೊಂಡು ಬರಲಿಕಂತ ಜನತಾ ಹತ್ತಿರುವನೆಂಬ ಸುದ್ದಿ ತಿಳಿದೊಡನೆ ಕುಂಟನಿಗೆ ಹಾಲು ಬಾನ ವುಂಡಷ್ಟು ಸಂತೋಷವಾಯಿತು. ಅದೂ ಅಲ್ಲದ ಯಿವತ್ತು ಸಣಿವಾರ ಬೇರೆ. ಮಾರುತಿ ಬಡಾವಣೆ ಮಂದಿ ಯಿವತ್ತೊಂದಿವಸ ಮಾತ್ರ ತಮ್ಮ ತಮ್ಮ ಕಯ್ಯಿಗಳನು ಸಡಿಲ ಮಾಡುವುದರಲ್ಲಿ ಸಮುಸಯವಿಲ್ಲ, ಯಂಥ ಜುಗ್ಗರೂ ಮುಂದಕ ಹೋಗು ಅಂಬುವುದಿಲ್ಲ. ಅದಕ ಡುಮ್ಮ ದುಂಡು ದುಂಡಕ ಯಿರುವುದು, ಆ ಬಡಾವಣೇನ ತನ್ನ ಹೆಸರಿಗೆ ಮಾಡಿಸಿಕೊಂಡಿರುವವನಂತೆ ಆಡುತ್ತಿರುವುದು, ತಾನು ಮೊದಲಾಗಿ ಯಾರೊಬ್ಬರೂ ತನ್ನ ಜಾಗೀರೊಳಗಡೆ ಬರದಾಂಗ ನಿಗಾ ವಹಿಸಿರುವುದು. ಯಿದು ಪ್ರಜಾಪ್ರಭುತ್ವ ಯಿರೋ ದೇಸ... ಯಾರು ಯಲ್ಲಿಗೆ ಬೇಕಾರ ಹೋಗಿ ಜೀವನ ಮಾಡಬಹುದು. ಭಿಕ್ಷ ಬೇಡಲಕೂ ವಂದು ಅರ್ಹತೆ ಬೇಕು... ಅವನಿಗೇ ಕಯ್ಯಿ ಯಿಲ್ಲವಾ... ಕಾಲು ಯಿಲ್ಲವಾ... ಕಣ್ಣು ಯಿಲ್ಲವಾs... ವಳ್ಳೆ ಪಯಿಲುವಾನ ಯಿದ್ದಂಗದಾನ... ಅವನು ಯಲ್ಲರಂಗ ಕೂಲಿನಾಲಿ ಬದುಕಬಹುದಲ್ಲ... ಅವನಿಗೇನಾಗೆಯ್ತೆ ದಾಡಿ... ಯಿದರ ಕಾಲಾಗ ಯೇನಾದೀತು ? ಹೆಂಗೋ ಸಿವನು ತನ್ನದೊಂದು ಕಾಲು ಕಿತುಕೊಂಡು ವುಪಕಾರ ಮಾಡಿರುವನು. ಕೇಳುವ ಕರುಳುಗಳನ್ನು ಬರೀ ಬಾಯಿ ಮಾತುಗಳಿಂದಲೇ ಮರುಳು ಮಾಡಿಬಿಡಬಲ್ಲಂಥ ವಾಕ್‌ಸಿದ್ದಿಯನ್ನು ತನಗ ನೀಡಿರುವನು... ತಾನ್ಯಾಕ ಹೆದರಬೇಕು... ಯಿದರ ಕಾಲಾಗ ಯೇನಾದೀತು... ನೋಡಿ ಬಿಡಬೇಕೆಂದು ನಿರ್ಧರಿಸಿ ಕುಂಟನು ಕೆಲವೊಂದು ಸಲ ಅಲ್ಲಿಗೆ ಹೋಗಿರುವುದುಂಟು. ಯಾರನ ಕೇಳಿ ಬಂದೀಯಲೇ ಯಂದವನು ಬಡಾವಣೆ ಬುಡಕs ತನ್ನನ್ನು ತರುಬಿ ನಿಲ್ಲಿಸಿದುದುಂಟು. ಹೆದರದೆ ತಾನು ಅದ್ಯಾಕ ಬರಬಾರದಲೇ... ಯಿದೇನು ನಿಮಪ್ಪಂದs ನಿಮ ತಾತಂದss ಯಂದು ನಾಲಿಗೆ ನಿಗುರಿಸಿ ಕೇಳಿದುದುಂಟು, ಅದಕವನು ರೊಚ್ಚಿಗೆದ್ದು ಅಪ್ಪನ ಹೆಸರೆತ್ತುತೀಯಾ... ತಾತನ ಹೆಸರೆತ್ತುತೀಯಾ... ನಾಲಿಕಯ್ದು ವರುಸಲಗಾಯ್ತು ನಾನಿಲ್ಲೇ ವುಂಡು ದೊಡ್ಡವನಾಗೀನಿ...ಯಾವಾತ ಬಂದು ನಂಗಿಂಗಂದುದಿಲ್ಲ... ಯೀಗ ನೀನು ಬಂದು ಹಕ್ಕಿನ ಮಾತಾಡುತೀಯೇನು ಯಾದಾರ ಮನಿ ಮುಂದ ನಿಂತು ಕೂಗೊಂದs ಕೂಗು ನಿನ ನಾಲಿಗೇನು ಕಿತ್ತುಕೊಟ್ಟು ಬುಡುತೀನಿ ಯಂದು ಗತ್ತು ಹಾಕಿದ್ದುಂಟು... ಅವನ ಮಾತನುಲ್ಲಂಘನ ಮಾಡಿ ತಾನು ವಂದು ಮನಿ ಮುಂದ ನಿಂತು ಯವ್ವಾ ತಾಯಿ... ಕಾಲಿಲ್ಲದ ಪರದೇಸಿ ಕನರವ್ವಾ ಯೆಂದು ಕೂಗಿದೊಡನೆ ಬಿರುಗಾಳಿ ಯಂತೆ ಬಂದವನು ಹೆಂಗ ವದ್ದಾ ಅಂದರ ಹಂಗ ಪದ್ದಿದ್ದ. ಗುಡ್ಡದಂಗಿರುವ ಅವನೆಲ್ಲಿ... ಕಳ್ಳಿ ಕಟಗಿ ಹಂಗಿರುವ ತಾನೆಲ್ಲಿ; ನಾಕುಮಂದಿ ತಮ್ಮಿಬ್ಬರ ಹೊಡದಾಟವನು ನಿಂತು ನೋಡಿದರs ಹೊರತು ಯಾರೊಬ್ಬರು ಬಂದು ಬಿಡಿಸಿಕೊಳ್ಳಲಿಲ್ಲ... ಪಾಪ ಕಾಲಿಲ್ಲದವನಂತ ಕನುಕರ ತೋರಿಸಲಿಲ್ಲ. ತಾನಲ್ಲಿಂದ ಸೋತು ಹಯರಾಣಾಗಿ ಬಾರದಿದ್ದಲ್ಲಿ ಅವನು ತನ್ನ ವುಳಿದೊಂದು ಕಾಲನು ಮುರಿದೇ ಬಿಡುತ್ತಿದ್ದನೇನೋ! ಅವನೇನು ಪಟ್ಟ ಬರೆಯಿಸಿಕೊಂಡಾನ... ನೀವೇ ಅವಗ ಬುದ್ದಿ ಹೇಳಿರಿ ಯೆಂದು ಪಂಚಾತಿ ಕೂಡಿಸಿ ಕೇಳಿದ್ದಕ್ಕೆ ಅಪಾರಿ, ಬುರುಕ, ಅಯ್ಯು ಮೊದಲಾದ ದಯವಸ್ತರು ಆ ಬಡಾವಣೆ ಅವಂದs ಅಯ್ತಿ... ಸಾಯೋಗಂಟ ಅದು ಅವಂದs... ಅದೂ ಅಲ್ಲದ ಅವ ಜಯ್ಲಿನಾಗಿದ್ದು ಜೀವಾವಧಿ ಸಿಕ್ಸೆ ಪೂರಯ್ಸಿ ಬಂದವ ಅದಾsನ... ಹೋಗಿ ಹೋಗಿ ಅಂಥವನ್ಯಾಕ ತಡವೀಕೋತಿ... ನಾವೆಲ್ಲರೂ ಸೇರಿ ನಿಂಗೆ ಬಡಕಲೋರೋಣೇನ ಬುಟುಕೊಟ್ಟೀವಲ್ಲ... ಯಂದು ಅವನ ಪರವಹಿಸೇ ಮಾತಾಡಿದ್ದರು. ಬಡಬಗ್ಗರು ಕೂಲಿನಾಲಿ ಮಾಡಿ ಬದುಕೋ ಮಂದಿಯಿಂದಲೇ ತುಂಬಿರುವ ಬಡಕಲೋರು ವೋಣೇಲಿ ಯಿಡೀ ದಿವಸ ತಿರುಗಾಡಿ ಗಂಟಲ ನರ ಹರಕೊಂಡರೂ ವಂದೊತ್ತಿನ ಕೂಳು ಹುಟ್ಟುವುದಿಲ್ಲ. ಪಾಪ ಪುಣ್ಯ ವತ್ತಟ್ಟಗಿರ್ಲಿ... ನಮಗೇ ತಿಂಬsಲಕ ಕೂಳಿಲ್ಲ.. ಬೇಡೋ ಮಂದಿಗೆಲ್ಲಿಂದ ತರಾಣು ಅಂಬುವ ಮಂದಿ ಹೆಂಗ ಕಯ್ಯ ಸಡಲ ಮಾಡ್ಯಾರು... ಯಿದೆಲ್ಲ ದಯವಸ್ತರಿಗೆ ಗೊತ್ತಿಲ್ಲದ ಸಂಗತಿಯೇನಲ್ಲ. ಕೇಳಿದ್ದಕ್ಕೆ ದವುಳೇರ ಮಾತು ಚಂದ, ಬಡವರ ಬಾನ ಚಂದ... ಪಾಲಿಗೆ ಬಂದದ್ದು ಪಾಂಚಾಂಬ್ರುತ... ಯಿಂಗೊಂದೊತ್ತೆ ಯಾರ ಸಿಗತಯ್ತಲ್ಲ ಪೂರುವ ಜಲುಮದ ಸುಕುರುತ ಅಂದುಕೋ... ವಂದು ತುತ್ತು ಯೆತ್ತಿ ಹಾಕದ ಕೇರಿಗಳೇಸೋ ಅದಾವ ಅಂಬುದನು ಮರಿ ಬ್ಯಾಡ ಅಂತ

ಬುದ್ಧಿ ಹೇಳಿದ್ದರು. ಅವರೆಲ್ಲ ಡುಮ್ಮನಿಗೆ ಒಳಗೊಳಗೆ ಹೆದರುತ್ತಿರುವವರೆಂಬ ಸಂಗತಿಯೂ ತನಗ ಗೊತ್ತು! ಕಾಲಕಳೆದಂತೆ ತಾನೂ ಮಾರುತಿ ಬಡಾವಣೆ ಕಡೇಕ ಸುಳಿಯೋದನು ಬಿಟ್ಟುಬಿಟ್ಟಿದ್ದ... ವಟ್ಟೆ ತುಂಬ ವುಂಬಾಕ ತರದ ಹೊರತು ನಾನು ನಿನ್ ಜೋಡಿ ಮಲಿಕ್ಕಂಬಾಕಿಲ್ಲ ಯೆಂದು ಖಡಾಖಂಡಿತ ಅಂದಿದ್ದ ಸಣ್ಣಿ ವಾರ ದಿನಮಾನದಿಂದ ತನ್ನನ್ನು ದೂರ ಮಾಡಿರುವುದನ್ನೂ ನೆನಪಿಸಿಕೊಂಡನು.

ಯಾರಾದರೂ ಮಾರುತಿ ಬಡಾವಣೆಗೆ ಠಕಲಾಯಿಸಿದರೇನು ಗತಿ! ತಾನೀಗಿಂದೀಗಲೇ ಹೊರಡಬೇಕೆಂದು ನಿರ್ಧರಿಸಿದನು. ವಂದಲ್ಲಾ ಯಲ್ಡು ಜೋಳಿಗೆಗಳನ್ನು ಹೆಗಲಗುಂಟ ಯಿಳಿಬಿಟ್ಟುಕೊಂಡನು. ನಾಯಿಗಳನ್ನು ಗದುಮಲಕಂತ ಕೋಲೊಂದನ್ನು ಮಂತ್ರ ದಂಡೋಪಾದಿಯಲ್ಲಿ ವಂದು ಕಯ್ಲಿ ಹಿಡಕೊಂಡನು. ಆಸ್ವಾಸನೆ ನೀಡಲಕಂದರ : ಮುಖ ಮಾರಿ ನೋಡಿ ಹೊಂಡಲಕಂದರ ತನ್ನ ಪ್ರಿಯತಮೆ ಸತ್ರದ ಯಾವ ಮೂಲೇಲೂ ಕಂಡು ಬರಲಿಲ್ಲ. ಯಾವ ಮಿಂಡನ್ನ ಹುಡುಕೊಂಡು ಹೋಗ್ಯಾಳೋ ಅಡ್ನಾಡಿ ಯೆಂದು ಮನದಲ್ಲೇ ಪ್ರೀತಿಯಿಂದ ಗೊಣಕ್ಕೊಂಡನು. ಬಿಸಿಲಕೋಲು ಬಿದ್ದಿರುವ ಲೆಕ್ಕಾಚಾರದ ಮ್ಯಾಲ ಹೊತ್ತು ತಿಳಿದುಕೊಂಡನು. ಯೀ ಹೊತ್ತಿಗಾಗಲೇ ಆ ಬಡಾವಣೆ ಮಂದಿ ತಮ್ಮ ತಮ್ಮ ಪಾಪಗಳನ್ನು ಪರಿಹಾರ ಮಾಡಿಕೊಳ್ಳುವ ಸಲುವಾಗಿ ಯಾವ್ಯಾವ ಕೃತ್ಯಗಳನ್ನು ಮಾಡುತ್ತಿರಬಹುದೆಂದು ಅಂದಾಜು ಮಾಡಿಟ್ಟುಕೊಂಡನು. ಸಣಿವಾರಕ್ಕೆ ಸಂಬಂಧಿಸಿದ ನುಡಿಗಟ್ಟುಗಳನ್ನು ಎದೆಯಿಂದ ಗಂಟಲಿಗೆ ತಂದುಕೊಳ್ಳುತ್ತಲೇ ಯಿನ್ನೂ ನಿದ್ರಾ ಮಂಪರಿನಲ್ಲಿರುವ ಭಿಕ್ಷುಕ ಮಹೋದಯರನ್ನು ಕಣ್ತುಂಬ ನೋಡಿಕೊಂಡನು. ಯಾರೊಬ್ಬರಿಗೂ ತಾನೆಲ್ಲಿಗೆ ದಂಡಯಾತ್ರೆ ಬೆಳೆಸಿರುವೆನೆಂಬ ಸುದ್ದಿ ಲೀಕಾಗದಂತೆ ಯಚ್ಚರ ವಹಿಸಿದನು. ಊಹಾ ಕನ್ನಡಿಯೊಳಗೆ ತನ್ನನ್ನು ತಾನು ನೋಡಿಕೊಂಡನು. ಯಂಥ ಕಲ್ಲೆದೆಯನ್ನೂ ಕರಗಿಸುವಂಥ ರೂಪ ಕೊಟ್ಟಿರುವ ಸೃಷ್ಟಿಕರ್ತನನ್ನು ಅಭಿನಂದಿಸಿಕೊಂಡನು. ತನ್ನ ಸರೀರದಿಂದ ಕಾಲೊಂದನ್ನು ವುತಾರಿ ಮಾಡಿರುವುದಲ್ಲದೆ ಯಿನ್ನೊಂದು ಕಾಲನ್ನು ವೂನ ಮಾಡಿರುವ ದೇವರನ್ನು ಕುತಗ್ನತಾಪೂರ್ವಕವಾಗಿ ಸ್ಮರಿಸಿಕೊಂಡನು... ತಾನು ಕುಂಟನಾಗಿದ್ದರೇನಂತೆ, ತಾನು ಸೊಚ್ಚನಾಗಿದ್ದರೇನಂತೆ.

ತರಗೆಲೆಯ ಚೈತನ್ಯವನ್ನು ಆವಹಿಸಿಕೊಂಡು ಊರಾಚೆ ಕಡೇಲಿದ್ದ ಮಾರುತಿ ಬಡಾವಣೆಯನ್ನು ಪ್ರವೇಶ ಮಾಡಿದ. ಅಲ್ಲಿ ಹೆಜ್ಜೆ ಇಟ್ಟೊಡನೆ ರೋಮಾಂಚನವಾಗದೆ ಇರಲಿಲ್ಲ. ತನ್ನ ಬಹುದಿನದ ಕನಸು ನನಸಾಗುತ್ತಿರುವುದಕ್ಕೆ ಹುಲಿಗಿ ಜಾತುರೆಯೇ ಕಾರಣ. ಯವ್ವಾ... ತಾಯಿ... ಡುಮ್ಮನನ್ನು ನಿನ್ನತ್ರಯಿಟುಗೊಂಡು ಬಿಡವ್ವಾ ಯೆಂದು ಮನದೊಳಗೆ ಸುಖಮಾಡಿಕೊಂಡ. ಅದೇ ಟಯ್ಮಿಗೆ ಸರಿಯಾಗಿ ಡಣ್ ಎಂಬ ನಾದ ನದಿಯೋಪಾದಿಯಲ್ಲಿ ಹರಿಯಿತು. ಸುಬಸಗುನವಾಯಿತೆಂದುಕೊಂಡ. ಕತ್ತೊಳ್ಳಿಸಿ ನೋಡಲಲ್ಲೊಂದು ಮಾರುತಿ ದೇವಾಲಯ ಗೋಚರಮಾತು. ಮಾರುತಿಯ ನಿಜ ಭಕುತನಾದ ತಾನು ವಳಗೆ ಹೋದಂತೆಯೂ, ಗಂಟೆ ಜಾಗುಟೆ ಬಡಿದಂತೆಯೂ, ಪೂಜೆ ಪುನಸ್ಕಾರ ಮಾಡಿಸಿದಂತೆಯೂ; ಪೂಜಾರಿ ವಡ್ಡಿದ ಮಂಗಳಾರತಿ ತಟ್ಟೆಗೆ ಅಯ್ದು ರೂಪಾಯಿ ಹಾಕಿದಂತೆಯೂ, ಪೂಜಾರಿಯು ತನಗೆ ತೀರ್ಥ ಪರಸಾದ ಕೊಟ್ಟಂತೆಯೂ, ತಾನು ಸೇವಿಸಿದಂತೆಯೂ ಕಲ್ಪನದ ಮ್ಯಾಲ ಕಲ್ಪನ ಮಾಡಿಕೊಂಡು ಬುರಬುರನೆ ವೂದಿ ಬೂದುಗುಂಬಳ ಕಾಯಾದನು. ಗರುಡಗಂಭದೆದುರಿಗೆ ವುದ್ದೋಕೆ ನಿಂತು ಸ್ವಾಮೀ... ನನ್ನಪ್ಪಾ... ಯಿವತ್ತೊಂದಿನದ ಮಟ್ಟಿಗೆ ನನ ಜ್ವಾಳಿಗೆ ತುಂಬೋ ಹಂಗ ಆಸೀರುವಾದ ಮಾಡಪ್ಪಾ.. ನನ ಸಣ್ಣಿ ನನ್ನಿಂದ ದೂರ ಆಗದಂಗ ನೋಡಿಕೊಳ್ಳಪ್ಪಾ ಯೆಂದು ಕಣುಮುಚ್ಚಿ ಅಂದುಕೊಳ್ಳುತ್ತಿದ್ದಂತೆಯೇ ಗುಡಿ ಗಂಟೆ ಮತ್ತೊಮ್ಮೆ, ಮಗುದೊಮ್ಮೆ ಢಣ್ ಡಣ್ಣಂತ ಬಡಕೊಂಡು ಮ್ಯಾಲಿಂದ ಮ್ಯಾಲ ಸುಬುಸಗುನ ನುಡಿಯಿತು. ಅದರಿಂದ ತನ್ನೊಳಗೆ ನೂರಾನೆ ಬಲವೂ ಹೆಚ್ಚಿತು. ಮಾರುತಿ ಮಹಿಮಾನ ತಾನೊಂದರಗಳಿಗೆ ಯಿಲ್ಲೇ ನಿಂತು ಯಾಕ ಪರೀಕ್ಸೆ ಮಾಡಬಾರದು... ಜ್ವಾಳಿಗೆ ತುಂಬಿದರ ವಡಲಿಗಾತಯ್ತೆ. ವಂದೆಲ್ಡು ಪಾಕೆಟ್ ಸರಾಯ್ನ ಕೊಳ್ಳಿಕ್ಕೆ ವಂದ್ಹತ್ತು ರೂಪಾಯಿಯಾದರೂ ಬೇಕು. ಸರಾಯಿ ವಡಲಿಗೆ ಬಿದ್ದರ ನಾಲಗೆಗೆ ಕಸುವು ಬರ್ತದೆss.. ವಳ್ಳೆ ಮಾತ್ನಿಂದ ನನ್ ಜೋಡೀ ಸಮುಸಾರ ಮಾಡ್ಕೊಂಡು ಹೋತೀಯೋ.. ಯಿಲ್ಲೋ ಯೆಂದು ಸಣ್ಣಿಯನ್ನು ತರುಬಿ ಕೇಳಲಿಕ ತಾಕತ್ತೂ ಸಿಗ್ತದss.. ಯೆಂದು ಯೋಚನೆ ಮಾಡುತ್ತ ತನಗೆಲ್ಡೂ ಕಾಲುಗಳಿಲ್ಲವೇನೋ ಯೆಂಬಂತೆ ಮುಖ ಚಹರೆ ಬದಲಿಸಿಕೊಂಡು ಯಪ್ಪಾ.. ಯಣ್ಣಾ.. ಯಮ್ಮ ಯೆಂದು ಭಕುತಾದಿಗಳನ್ನು ತಾನು ಗೋಗರೆಯಬೇಕೆಂಬುವಷ್ಟರೊಳಗ ಯಲ್ಲಿಂದಲೋ ಬಂದ ದಾಸಯ್ಯ ಯಾವನ್ಲೇ ನೀನು... ಹೋತೀಯೋ ಯಿಲ್ಲ ಗಲ್ಡಿಗಂಬದಿಂದ ತಿವಿಲೋ ಯೆಂದು ಹೆದರಿಸಿದ. ಅವನೊಟ್ಟಿಗಿದ್ದ ವುಳಿದ ಭಿಕ್ಷುಕರೂ ಅವನ ಗದರಿಕೆಯನ್ನು ಅನುಮೋದಿಸದೆ ಯಿರಲಿಲ್ಲ. ಅವರೆಲ್ಲ ತಮತಮ್ಮ ಜೆಗೇವುಗಳನ್ನು ಹಿಡಕೊಂಡಿದ್ದ ಪರಿಣಾಮವಾಗಿ ತನಗಲ್ಲಿ ಕುಂಡ್ರಲು ಜೆಗೇ ಯಿರಲಿಲ್ಲ. ಬಲು ಟೆನಷನ್ನಿನಲ್ಲಿದ್ದ ಅವರನ್ನು ತಾನು ಅಂಗಲಾಚುವಂತೆಯೂ ಯಿರಲಿಲ್ಲ. ಹಾಸಿದ್ದ ವಲ್ಲಿಯನ್ನೇನು ಕೊಡವಿ ಹೆಗಲ ಮ್ಯಾಲ ಹಾಕ್ಕೋ ಬೇಕೆಂಬುವಷ್ಟರೊಳಗ ಮಗುವೊಂದು ಎಸೆದ ಯಂಟಾಣೆ ಚೂರೊಂದು ಠಣ್ ಅಂತ ಕೆಳಗೆ ಬಿತ್ತು. ಬೀಡಿ ಖರ್ಚಿಗಾತಂತ ಅಂದುಕೊಳ್ಳುವಷ್ಟರಲ್ಲಿ ಮುದುಕಿಯೊಂದು ಛಂಗನೆ ನೆಗೆದು ಬಂದು ಅದನ್ನು ಲಪಟಾಯಿಸಿ ಕುಬುಸದೊಳಗಿಳಿಬಿಟ್ಟುಕೊಂಡು ಬಿಡಬೇಕು! ತನ್ನ ಗ್ರಾಚಾರ ಯೆಂದು ಬಗೆದ ಕುಂಟ ಅಲ್ಲಿಂದ, ಲೀಲಾಜಾಲವಾಗಿ ಬಡಾವಣೆ ಪ್ರವೇಶ ಮಾಡಿದ. ಅಷ್ಟೊಂದು ಚಂದನೆಯ ಮನೆಗಳಿರುವ ಬಡಾವಣೆಯನ್ನು ತಾನು ಪೂರ್ಣ ಪ್ರಮಾಣದಲ್ಲಿ ಪ್ರವೇಶ ಮಾಡುತ್ತಿರುವುದು ಇದೇ ಮೊಟ್ಟಮೊದಲ ಸಲವು. ಅಲ್ಲಿ ವಾರದೇಳು ದಿನಗಳೂ ಸಣಿವಾರವೇ ಯಿರುವಂತೆ ಭಾಸವಾಯಿತು. ಪ್ರತಿಯೊಂದು ಮನೆಯೊಳಗೂ ಸರಕಾರಿ ಸಂಬಳ ತಿಂಬುವ ಆಪೀಸರು ಮಂದಿ. ಪ್ರತಿಯೊಬ್ಬರೂ ತಮತಮ್ಮ ತಲೆಗಳಿಗೆ ಯಣ್ಣೆ ಸಾನ ಮಾಡಿರುವರು. ಪ್ರತಿಯೊಂದು ಮನೆಯೊಳಗಿಂದ ವಂದಲ್ಲಾ ವಂದು ಯಂತ್ರ ಗಿರ್ರ್ ಅಂತ ಸದ್ದು ಮಾಡುತ್ತಿರುವುದು. ತಮತಮ್ಮ ಪಾಪ ಪರಿಹಾರ ಮಾಡಿಕೊಳ್ಳಲು ಆ ವಂದು ದಿನಮಟ್ಟಿಗೆ ಉದಾರಿಯಾಗಿರುವವರು ಪ್ರತಿಯೊಂದು ಮನೆಯಲ್ಲುಂಟೆಂದು ಭಾವಿಸಿದ. ತಾನೇ ಮೊದಲ ಗಿರಾಕಿಯೆಂದರೆ ವಂದಿಬ್ಬರು ತಿರುಪೆಗಾರರು ಅಲ್ಲೊಬ್ಬರಿಲ್ಲೊಬ್ಬರಂತೆ ಗೋಚರಿಸಿದರು. ತಾನೇ ಪಾರುಪತ್ತೆಗಾರ ಡುಮ್ಮನೆಂಬಂತೆ ಗತ್ತು ಹಾಕಿಯೋ; ಕಣ್ಣುಗಳಿಂದ ಏಟು ಹಾಕಿಯೋ ಅವರನ್ನಲ್ಲಿಂದ ಕದಲಿಸಿದನು. ತದನಂತರ ತಾನು ಹೆಳವ ಯಂದು ಸಾಬೀತುಪಡಿಸುವ ನಿಮಿತ್ತ ದೋತರವನ್ನು ಯೆತ್ತಿ ಕಟ್ಟಿಕೊಂಡನು. ಮುಂದಿನ ಜಲುಮದಲ್ಲಾದರೂ ತಾನು ಸರಕಾರಿ ಸಂಬಳ ತಿಂಬುವ ಮನುಷ್ಯನಾಗಿ ಹುಟ್ಟಬೇಕು... ಆಗೋ ಅಲ್ಲಿ ಕಾಣ್ತಾಳಲ್ಲ... ಅಂಥಾಕಿಯನ್ನು ತಾನು ಮದುವಿ ಆಗಬೇಕು... ಆಗೋ ಅಲ್ಲಿ ಆಡುತಾವಲ್ಲ... ಅಂಥ ಮಕ್ಕಳಿಗೆ ತಾನು ತಂದೆಯಾಗಬೇಕು ಯಂದನಕಂತಲೇ ವಂದೊಂದು ಮನೆ ಮುಂದೆ ನಿಂತು ಯಮ್ಮಾ ತಾಯಿ... ಕಾಲಿಲ್ದ ಕುಂಟ ಕನ್ರಮ್ಮಾ... ಯಂದು ಹೃದಯವಿದ್ರಾವಕವಾಗಿ ಕೂಗುತ್ತ ಭಿಕ್ಷೆಯಾಚಿಸಲಾರಂಭಿಸಿದನು. ಪಾಪ... ಕುಂಟ... ನೀಡಿ ಕಳಿಸ್ರೋ... ಅಂದವರೆಷ್ಟೋ... ಯಿವತ್ತು ಶನಿವಾರ ಇಲ್ಲನ್ನಬ್ಯಾಡಿ ಅಂತ ತಮತಮ್ಮ ಹೆಂಡರಿಗೆ ಸಲಹೆ ಸೂಚನೆ ನೀಡಿದವರೆಷ್ಟೋ... ವಂದೊಂದು ಮನೆಯಿಂದಲೂ ಒಂದೊಂದು ಹಿಡಿ ದವಸಧಾನ್ಯ ಜೋಳಿಗೆಗೆ ಬೀಳದಿರಲಿಲ್ಲ. ಕುಂಟ ಕುಂಟ ಯಂದು ತಮಾಷೆ ಮಾಡುತ್ತಿದ್ದ ತಮ್ಮ ತಮ್ಮ ಮಕ್ಕಳನ್ನು ಹಂಗನ್ನ ಬಾರ್ದೂ ಪಾಪ ಬರ್ತದss ಯಂದು ಕೆಲ ಹಿರಿಯರು ಬುದ್ದಿ ಹೇಳದೆ ಯಿರಲಿಲ್ಲ. ಭಿಕ್ಷೆ ನೀಡಲೆಂದು ಬಂದ ಕೆಲ ತಾಯಂದಿರು... ಏನು ಕುಂಟಪ್ಪಾ ಡುಮ್ಮನ ಬದಲಿಗೆ ನೀನು ಬಂದಿರುವೆಯಲ್ಲ... ಅವನೆಲ್ಲಿಗೆ ಹೋದ ಎಂದು ಕೇಳಿದ್ದಕ್ಕೆ ತಾನು... ''ಅವನು ನನ್ ಮಾವ ಕನಮ್ಮಾ... ಜೊರ ಬಂದ್ ಬಿದ್ಕೊಂಡಾನ.. ಅವನು ಕಳಿಸಿದ್ಕೆ ಬಂದಿದೀನ್ರಮ್ಮಾ'' ಯಂದು ಸಮಯಸ್ಫೂರ್ತಿಯಿಂದ ನುಡಿದ. ಅದನ್ನು ಕೇಳಿಸಿಕೊಂಡವರು ಅಯ್ಯೋ ಪಾಪ ಯಂದದ್ದಲ್ಲದೆ ಕಾಳುಕಡಿ ಜೋಡಿ ನಾಕೆಂಟಾಣೆ ಚೂರುಗಳನ್ನೂ ಭಿಕ್ಷೆ ರೂಪದಲ್ಲಿ ನೀಡದೆ ಯಿರಲಿಲ್ಲ. ಹೀಗೆ ಡುಮ್ಮನ ಗಯ್ರುಹಾಜರಿಯನ್ನೇ ಬಂಡವಾಳವಾಗಿರಿಸಿಕೊಂಡು ಯೀಕಡೆಯಿಂದ ಹೊರಟು ಆ ಕಡೆ ತಲುಪಿದನೋ ಯಿಲ್ಲವೋ ತನ್ನೆಲ್ಡು ಜೋಳಿಗೆಗಳು ತುಂಬಿ ತುಳುಕಾಡಲಾರಂಭಿಸಿದವು. ಅದರ ಜೋಡಿ ಸರಿಸುಮಾರು ಹತ್ತನ್ನೆರಡು ರೂಪಾಯಿ ನಗದೂ ಲಭಿಸದೆ ಯಿರಲಿಲ್ಲ. ಯಲಾ ಸಣ್ಣೀ... ಯಿವತ್ತು ನನ್‌ಬಿಟ್ಟು ಅದ್ಯಾವನತ್ತ ಮಕ್ಕಂತಿ.. ನೋಡೇ ಬುಡ್ತೀನಿ ಮನದೊಳಗೇ ಕೂಗಿಕೊಂಡ... ಮತ್ತೆಲ್ಲಿಂದಲಾದರೂ ಡುಮ್ಮ ಬಂದು ಕಸುಗಿಸುಕೊಂಡಾನು ಯಂದು ಹೆದರಿದ ತಾನು ವಾಯುವೇಗದಿಂದ ಮಾರುತಿ ಬಡಾವಣೇನ ಖಾಲಿ ಮಾಡಿದ.

ತನ್ನ ಆಯಾಮದಲ್ಲಿಷ್ಟೊಂದು ಬಿಕ್ಷೆ ಸಂಪಾದಿಸಿರಲಿಲ್ಲ.. ತನಗೆ ರೊಕ್ಕದ ಸ್ತೋಮವ ಯಿದ್ದಿದ್ದಲ್ಲಿ ಡುಮ್ಮನಿಂದ ಆ ಸಮಸ್ತ ಮಾರುತಿ ಬಡಾವಣೇನ ಖರೀದಿ ಮಾಡಿ ಬಿಡಬಹುದಿತ್ತು. ತನ್ನೆಲ್ಡೂ ಕಾಲುಗಳು ಸರಿಯಾಗಿದ್ದಲ್ಲಿ ಆ ಕಥಿಯೇ ಬೇರೆಯಿರುತ್ತಿತ್ತು. ಮುಂದೆಂದಾದರೂ ಲಗ್ಗುನವಾಗಿ ಸಣ್ಣೀನ ಕರಕೊಂಡಿಲ್ಲಿಗೆ ಬಂದು ಡುಮ್ಮನನ್ನು ಯತ್ತಂಗಡಿ ಮಾಡಬೇಕು. ಸಣಿವಾರ ವಂದಿವಸ ದುಡುದು ವಾರದ್ದಿನಮಾನ ಸುಖವಾಗಿರಬಹುದೆಂದುಕೊಂಡ.

ಅಯ್ಯೋ ಹೊತ್ತಾಗಲೇ ಕಾಲ ಬುಡಕ ಬಿದ್ದಿರುವುದಲ್ಲ.. ಯಿನ್ನೊಂದು ಸೊಲುಪ ಹೊತ್ತಿಗೆ ಅದು ಸರಕೋತ ಸರಕೋತ ಹೋಗಿ ಮುಳುಗೇ ಬಿಡುವುದರಲ್ಲಿ ಸಮುಸಯವಿಲ್ಲ. ತಾನು ಯಿನುಮುಂದ ಮಾಡಬೇಕಿರುವ ಕೆಲಸ ಬೊಗಸೆಗಳು

ವಂದSS ಯರಡಾSSS... ಅವುಗಳ ಪಯ್ಕಿ ಮುಖ್ಯವಾದುದೆಂದರೆ ತನ್ನ ಜಿಹ್ವಾಜನೆಯ ಸಂಪತ್ತನ್ನು ಸಣ್ಣಿಯ ಮುಂದ ಪ್ರದರ್ಶಿಸಿ ತಾನು ಕಯ್ಲಾಗದವನಲ್ಲ ಯಂಬುದನ್ನು ಸಾಬೀತು ಪಡಿಸಬೇಕು. ಆಕೆಯ ತಂದಿ ಮೂಗ ಮ್ಯಾಲ ಬೊಟ್ಟಿಟ್ಟುಕೊಳ್ಳುವುದನ್ನು ತಾನು ಕಣ್ತುಂಬ ನೋಡಬೇಕು... ಕುಂಟ ಲಗುಲಗು ಹೆಜ್ಜಿ ಹಾಕತೊಡಗಿದ.

ತಾನು ರಾತಿರಿ ಯಿಷ್ಟೋ ಅಷ್ಟೋ ವುಂಡದ್ದು! ಪಡಲು ಬೇರೆ ಅವಾಗಿನಿಂದ ಸುಟುಸುಟು ಅಂತ ಕಡಕೋತ ಯಿತ್ತಲ್ಲ. ಹಸಿವು ಅಂಬುವುದು ತನ್ನ ಹೊಟ್ಟೆಯನ್ನೇ ತಿಂದು ಬಿಡುವುದೋ! ಯೋಳು ಕೊಪ್ಪರಿಗೆ ಬಂಗಾರದೋಪಾದಿಯಲ್ಲಿದ್ದ ಜೋಳಿಗೆ ಗಳೆರಡನ್ನೂ ವಂದು ಗಂಟಿನಲ್ಲಡಗಿಸಿ ತಲೆ ಮ್ಯಾಲಿಟ್ಟುಕೊಂಡ. ರೊಕ್ಕದ ಗುಟ್ಟು ಬಿಟ್ಟುಕೊಟ್ಟರೆಲ್ಲಿ ತನ್ನ ಕೊಲೆಯಾಗಿ ಬಿಡುವುದೋ ಯಂದು ಹೆದರಿ ದೋತರದ ಚುಂಗಿಗೆ ಕಟ್ಟಿ ಗೋಸಿಯೊಳಗಿಳಿ ಬಿಟ್ಟುಕೊಂಡ. ಹಾದೀಲಿ ಹೋತಾ ಹೋತ್ತಾ ಕಡ್ಡಿಪುಳ್ಳೆಗಳಿತ್ಯಾದಿ ಆದುಕೊಂಡ ಕೂಳು ಕುಚ್ಚಲಕೆಂದು. ತಾನು ಬೇಯಿಸಲಿರುವ ಬಾನಕ್ಕ ಜೋಡು ವಂದೆಲ್ಡು ಮೀನ ತುಂಡುಗಳನ್ನೋ, ವಂದೆಲ್ಡು ಬೋಟೆಗಳನ್ನೋ ತಂದರಾಯಿತೆಂದು ಕೊಂಡ... ತಾನೂ ಸಣ್ಣಿ ಕೂಡೇ ಬುವ್ವ ತಿಂಬದೆ ಯೇಸುದಿನಗಳಾದುವೋ! ಯಿತ್ತಿತ್ತಲಾಗಂತೂ ಆಕೆ ದಿನಗಟ್ಲೆ ಕಾಂಬಾಕಿಲ್ಲ.. ಕೇಳಿದರ... ನಿಂಗೇನು ಕಾಲಿಲ್ಲ.. ಪುಣ್ಯ ಮಾಡಿದ್ದೀ... ಯಲ್ಡೊತ್ತಿಗಲ್ದಿದ್ರು ವಂದೊತ್ತಿಗಾರ ದುಡುಕಂತಿSS... ನಂದೆಂಗ! ನಮಪ್ಪಂದೆಂಗ! ಯಾದಾರ ಗುಡಿ ಹತ್ರ ಕುಂದುರುಸಾಣಂದರ ಕುಂಡುರುವಲ್ಲ.. ಹಿಂಗ ಯಾದೋ ವಂದು ನೆಪ ಹೇಳುವಳು. ನಿನ್ನೇನS ಆಕಿ ಹೋಗಿರಾದು... ತಾನಂತೂ ಸಿಕ್ಕವರಿಗೆ ಸಿವಲಿಂಗಾಗ್ಯಾಳ... ಆಕೀಗೂ ತನ್ ಜೋಡಿ ಸಾಯೋಮಟ ಸಮುಸಾರ ನಡೆಸೋ ಆಸೇನೂ ಅದS.. ಮಕ್ಕಳು ಮರಿ ಕಾಂಬೋ ಆಸೇನೂ ಅದS.. ಆದರ ಆ ಮುದೇತಂದೇ ಹರಾಕಿರಿ... ಅವನಿಗ ಮೊದಲಿಂದಲೂ ಕುಂಟರಂದರ ಆಗಿ ಬರಾಣೆಲ್ಲ.. ಕುಂಟ ಮಂದಿಗ ಯಂಟು ಚಾಸ್ತಿ ಅಂಬುತಾನ... ಯಾರನ್ನS ನಂಬಿದರೂ ಕುಂಟರನ್ನ ನಂಬಬಾರದಂಬುತಾನ... ಅವನಂದುಕೊಂಡಂಗ ತಾನೇನು ಹುಟ್ಟುತ್ಲೆ ಕುಂಟನಲ್ಲ ಅಂಬುದನ... ತಾನು ಸಣ್ಣವನಿದ್ದಾಗ ಪಟಪಟ್ಟೆ ಅಡಿಸಿಕ್ಕು ಕಾಲು ಕಳೆದುಕೊಂಡಿದ್ದೆಂಬ ಬಗ್ಗೆ ಹೆಂಗ ಯಿವರಣನ ಮಾಡಿ ಹೇಳುವುದು. ಹಿಂಗS ಯಸನ ಮಾಡೂತ ಮಾಡೂತ... ಹಿಗ್ಗುತ್ತ ಕುಗ್ಗುತ್ತ... ಬಗ್ಗುತ್ತ ಹಿಗ್ಗುತ್ತ ನಡಕೋತ ನಡಕೋತ...

ತಾನು ಸೇರಿಕೊಂಡ ಛತ್ತರವು ಯಾವ ಕಾಲದ್ದೋ! ಯಾವ ಪೂಣ್ಯಾತುವರು ಕಟ್ಟಿಸಿದ್ದೋ... ರಾಜರ ಕಾಲದಂತಾರS... ಅನುವಾದ ಗಂಟು ಹೊರಲಾರದೆ ಹೊತ್ತು ಕೊಂಡು ಬಿಜಯಂಗಯ್ದ ಕುಂಟನ ಕಡೆ ಯಲ್ಲಾರು ಯಿಸುಮಯದಿಂದ ನೋಡುವರೆ; ಯೀ ಕುಂಟ ಯಿವತ್ತು ಬಂಪರು ಲಾಟರಿ ಹೊಡದಂಗಯ್ತೆ... ಅಂತ ತಮಗ ತಾವS ಅಂದುಕೊಳ್ಳುವವರೆ! ವಂದಿಬ್ಬರು ವೊಡ್ಡೋಡಿ ಬಂದು ಗಂಟನ್ನು ಹಿಚುಗಿ ಚುಕಿ ನೋಡಿದರು... ಮೂಲೇಲಿ ಮುದುಡಿ ಕೂಕಂಡಿದ್ದ ಕಾಸವ್ವ ಅಬಡಾ ದಬಡಾ ಬಂದವಳೆ ಅಯ್.. ಕುಂಟ್ಯಾವೋ... ಯಂಟೊಂಬತ್ ಸೇರಿದ್ದಂಗಾದವಲ್ಲ... ವಂದೆಲ್ಡು ಕೊಟ್ರೆ ಅಂದರ ವಾರದ ಮಟ್ಟಿಗೆ ನಾನು ನಿಂಗ ಹೆಂತಿ ಆಗತೀನಿ ಯಂದಳು. ತಲಕಾಯನ ಯತ್ತಿ ಅವಳ ಬಿಚ್ಚಿದ್ದ ಯದೆ ನೋಡಿದ, ಮಯ್ಯಿಮಾಟ ಸಣ್ಣಿಯದಕಿಂತ ರವ್ವಸ್ಟು ವಾಸಿ ಅನ್ನಿಸಿತು. ಹಿಂದೊಂದು ಸಲ ತಾನು ದಂಬಡಿಯ ತೊಡೆ ಮ್ಯಾಲ ತಲೆಯಿಟ್ಟು ಮಲಗಿದ್ದನ್ನು ನೋಡಿ ಸಣ್ಣಿ ತಿಂಗಳ ದಿನಮಾನ ಮುನಿಸಿಕೊಂಡಿದ್ದ ಘಟನೆಯನ್ನು ತಾನು ಮರೆಯಲಾರ.. ತಿಳಿದೋ ತಿಳಿಯದೆಯೋ ಯಿನ್ನೊಂದು ಹೆಣ್ಣಿನ ಕಡೇಕ ಮನಸನು ಹರಿಗೊಡಲಾರ... ತನಗಂತೂ ಕುಂತರೂ ಆಕಿಂದೇ ಧ್ಯಾಸ ನಿಂತರೂ ಆಕಿಂದೇ ಧ್ಯಾಸ! ನೋಡಲಕ ವಲಿ ಹಿಂದಲ ಗ್ವಾಡಿ ಹಾಗಿದ್ದರೂ ಆಕಿ ಮ್ಯಾಲ ತನಗ ಪಂಚಪ್ರಾಣ.. ಅದಕ...

''ಕಾಸೀS ಕಾಸೀSS ನಿನಗ ನಾನು ಕಾಳುಕಡಿ ಕೊಡೋದೂ ಬ್ಯಾಡ... ನೀನು ನನಗ ಹೆಂತಿ ಆಗೋದೂ ಬ್ಯಾಡ'' ಯೆಂದನಕಂತ ಆಕಿ ಕಯ್ಯನು ಹಿಂದಕ ಸರಿಸಿದ್ದಕ್ಕ...

''ಹಂಗನಬ್ಯಾಡೋ... ಕಯ್ಮುಗೀ ಅಂದರ ಕಯ್ಯೆ ಮುಗಿತೀನಿ. ಬೀಳು ಅಂದರ ಕಾಲಿಗೆ ಬೂಳುತೀನಿ..'' ಯೆಂದಳು.

''ಬ್ಯಾಡ ಮಾರಾಯ್ತಿ... ನಾನು ಸಣ್ಣೀನ ಲವ್ವು ಮಾಡ್ತೀನೆಂಬುದು ನಿನಗS ಗೊತ್ತಿಲ್ಲ.. ನಿನ್ ಜೋಡಿ ಯಿರಾದು ನೋಡದರ ಆಕಿ ರಾಮ್ಯಾಣ ಮಾಡಾಳು...''

''ಲವ್ವಂತ ಲವ್ವು... ಲವ್ವಿಗೀಟು ಬೆಂಕಿ ಹಾಕಿ... ಕಯ್ಯಿಗೆ ಬಂದ ತುತ್ತ ಕೊಸ್ರಿದ್ರೆ ದ್ಯಾವ್ರು ಮೆಚ್ಚುಕಿಲ್ಲ ನೋಡು ಮತ್ತೆ... ಯಲ್ಡು ದಿನ್ದಿಂದ ವುಪಾಸ ಅದೀನಲೋ... ಸೇರನರ ಕೊಡಪಾ...''

''ಸೇರಲ್ಲ... ಸೆಟಾಕೂ ಕೊಡಾಕಿಲ್ಲ..'' ಯೆಂದನು.

ಆಕೆ ಮಾರಿನ ಸೆಪ್ಪಗೆ ಮಾಡಿಕೊಂಡು ಮೂಲೆ ಸೇರುತ್ಲೆ ಇಚ್ಚೇಕಡೇಕ ಮೂರು

ಗುಂಡೊಡಿ ವಲೆ ಮಾಡಿ ಚಟಗೀಲೆ ಎಸರಿಟ್ಟನು. ಚುಚೀಲಿ ಹಾಂಗ ಕಾಸವ್ವನೂ ಜೀವಕ್ಕ ಘಾತ ಮಾಡಿಕೊಂಡಾಳಂತ ಹೆದರಿ ವಂದ್ಮೂರ್‍ರಾವಿನಷ್ಟು ದವಸಾಽನ ವಲ್ಲೀಲಿ ಕಟಕೊಂಡು ಹೊಯ್ದು ಆಕೀಯ ತೊಡಿ ಮ್ಯಾಲಿಟ್ಟನು. ಅದರಿಂದ ಜೀವ ಬಂದಂತಾಗಿ ಕಾಸವ್ವ ''ನಿನ್ ಮನಸು ಬಲು ಚೂಚುಮಿ ಅಂಬುವುದು ನಂಗ್ಗತ್ತಲೋ... ಯಂಥಾಕೀನೂ ನಿನ ಜೋಡಿ ಸುಕುವಾಗಿರ್‍ತಾಳ... ಆದ್ರ ಸಣ್ಣಽ ಮನಸಿಗ್ಯಾಕ ನಿಲುಕಡಿ ಯಿಲ್ಲಂತಾ.. ಹಿಂಗಾಡಲಕ ಆಕಿಯ್ಯೋನು ಹರೇದ ಹುಡುಗ್ಯಾ..''. ಯಂದನಕಂತ ವಲ್ಲಿಯಿಂದ ದವಸವನ್ನು ತನ್ನ ಸೆರಗಿಗೆ ಸುರುವಿಕೊಳ್ಳುತ ''ನ್ವಾಡು ಕುಂಟಽಽ. ಆಕಿ ನಿನಗಿಂತ ದ್ವಡ್ಡಾಕಿ ಅದಾಳ... ಮ್ಯಾಲಾಗಿ ಕಂಡ್ ಕಂಡೋರ ಜೋಡಿ ತಿರ್‍ಗ್ಯಾಡಿ ಹೆಸರನ ಕೆಡಿಸಿಕೊಂಡಾಳ... ನಾನ್ನೋಡಪಾ... ವುಪಾಸ ವನುವಾಸ ಸೋಸಿದರೂ ಮರುವಾದಿಗ ಹೆದರುವಾಕಿ... ಸಾಯೋಗಂಟ ನೀನೊಯ್ದು ವುಚ್ಚೇನ ದಾಟುವಾಕಿಯಲ್ಲ... ಆಕೀನ ಮರತು ನನ್ನ ಕಟುಕೋ'' ಯಂದಿನ್ನೇನನ್ನೋ ತನಪಾಡಿಗೆ ತಾನು ಹೇಳಿಕೊಂತಿದ್ದಳು.. ಯಂಜಲು ತಿಂದು ಬದುಕುವವರಿಗೆ ಮರುವಾದಿ ವಂದು ಕೇಡು... ಕಾಸವ್ವ ಕಾಸೀನೇ... ಸಣ್ಣವ್ವ ಸಣ್ಣೀನೇ... ಆಕಿ ಮಾತನು ಕೇಳಿಸಿಕೊಳ್ಳುವ ಯವದಾನ ತನಗೆಲ್ಲಿಯದು! ಯಸರು ಮಳ್ಳಿದ ವಾಸನೆ ಬೇರೆ ಬಂತು... ಅದಕ ಅಕ್ಕಿ ಸುರುವೋ ನಿಮಿತ್ತ ಕುಂಟನು..

ಸಣಿವಾರದ ತಿಕ್ಕಡಿ ಸದರಿ ಛತ್ತರಕ್ಕೂ ಬಡಕೊಂಡಿರದೆ ಯಿರಲಿಲ್ಲ. ಸ್ಥಳೀಯ ತಿರುಪೆಗಾರರೊಂದಲ್ಲದೆ ಯಿತರೇ ವೂರುಗಳ ತಿರುಪೆಗಾರರೂ ಸೇರಿಕೊಂಡು ಯಿಶೇಷ ಕಳೆ ತಂದಿದ್ದರು. ತಿರುಪೆಗೆ ಸಂಬಂಧಿಸಿದ ಯಿಷಯಗಳೊಂದಲ್ಲದ ರಾಜಕೀಯ, ಸಿನಿಮಾ ಸಂಬಂಧೀ ಯಿಷಯಗಳ ಬಗೆಗೂ ತಮತಮಗ ತೋಚಿದಂಗ ಮಾತಾಡಿಕೋತ್ತಿದ್ದರು. ತಕ್ಕಮಟ್ಟಿಗೆ ನೀಟಾಗಿದ್ದ ಅಯ್ಯಾಳಿ ಯಂಬ ತಿರುಪೆಯವ ಬಿಕ್ಷುಕರ ಸಂಘ ಮಾಡಲಕೆಂದು ಅವರಿವರೊಂದಿಗೆ ಮಾತಾಡುತಲಿದ್ದ. ವುಸುರಾಡುವಾಗೆಲ್ಲ ಮರುಮಾಂಗಕ್ಕೆ ಬಡಿತಾ ನವಿರೇಳಿಸುತಲಿದ್ದ ಹಣದ ಗಂಟಿನ ಸುಳಿವು ಆ ಸಂಘಟಕಗೆ ತಿಳೀತಂದರ ತನ್ನಿಂದ ವಂದೆಲ್ಡು ರೂಪಾಯಿ ವುದುರಿಸದೆ ಬಿಡುವುದಿಲ್ಲೆಂದೆನ್ನಿಸಿತು ಕಂಟನಿಗೆ.

ತಾನು ಬಾನ ಬೇಸಿಟ್ಟಿರುವುದಾಗಿದೆ. ಅದಕ ಜೋಡು ಅದನ್ನು ತರುವುದೋ! ಯಿದ್ದನ್ನು ತರುವುದೋ! ಆಕೀನ್ನಾರ ಕೇಳಲಕಂದರ ಯಲ್ಲೋಗಿರುವಳೋ ಹಾಳಾಗಿ... ಹಂಗಂದಕಂತಾಲೆ ಸುತ್ತನ್ನಾಕಡೇಕ ಬೆದಕಾಡುತ್ತಲೇ ಯಿದ್ದ. ಹೀಂಗೇಟೋ ಹೊತ್ತಾದ ಮ್ಯಾಲ ಸಣ್ಣಿ ತನ್ನ ತಂದೀನ ಮೆಲ್ಲಗ ನಡೆಸಿಕೋತ ಬಂದು ಮೂಲೇಲಿ ತಟ್ಟಿನ ಮ್ಯಾಲ ಕುಂಡರಿಸಿದಂಗ ಕಾಣಿಸಿತು. ಯಲ್ಡನೇ ನೋಟಕ್ಕೆ ಖಾತರಿ ಮಾಡಿಕೊಂಡ ಕುಂಟ ಸಣ್ಣೀ ಯಂದು ಕೂಗಿದ. ಯಾರ ಕೂಗಿಗೂ... ಅದರಲ್ಲೂ ಕುಂಟನ ಕೂಗಿಗೆ ಸಡನ್ನ ಜವಾಬು ನೀಡದ ಬಿಂಕು ಬಿಗುಮಾನದಾಕೆ ಹಿಂಗಽ ವಮ್ಮೆ ವ್ವಾರೆಗಣ್ಣಿಂದ ನೋಡಿದಳು. ಯಂಥದೋ ಯಿಶೇಷ ಕಳೆಕಾಣ್ತು. ಅವನ ಸರೀರದ ಯಾದೋ ವಂದ್ಮೂಲೇಲಿ ಗುಪ್ತನಿಧಿ ಯಿದ್ದಂಗಯ್ತೆ ಯಂದು ಕಲ್ಪನ ಮಾಡಿಕೊಂಡಳು.

ಹೇನುಗಳು ತಲೆಯನ್ನೂ; ಕೂರಿಗಳು ಸೊಂಟವನ್ನೂ ಸುಟುಸುಟು ಕಡಕಂಡು ತಿಂಥಿರುವುದನ್ನು ಲೆಕ್ಕಿಸದೆ ಹಮುಸ ಪಚ್ಚಿಯೋಪಾದಿಯಲ್ಲಿ ಹೋಗಿ ಯೆದುರಿಗೆ ನಿಟಾರನೆ ನಿಂತು ಅವನ ದೇಹವೆಂಬ ಪೂರಂಪೂಕು ಜಮೀನನ್ನು ಕಣ್ಮುಚ್ಚದೆ ನೋಡಿದಳು. ನಿಧೀನ ಯಲ್ಲಡಗಿಸಿಟ್ಟಿರಬಹುದೆಂದು ವಂದೆ ಯೇಟಿಗೆ ಹೊಳೆಯಲಿಲ್ಲ. ಆಪ್ಪಿಕೊಳ್ಳುವಳೆಂಬ ನಿರೀಕ್ಷೆಯಲ್ಲಿದ್ದ ಕುಂಟ ಕಯ್ಲಾಗದೋನು... ಕಯ್ಲಾಗದೋನಂತಂಥಿದ್ದೆಯಲ್ಲಾ... ವಾರ್‍ದಿನ್ಮಾನ ಕುಂತಿದ್ರೂ ಸವೆದೋಟು ತಂದೀನ್ನೋಡು ಯೆಂದಾಕೆಯ ಗಮನವನ್ನು ದವಸ ತುಂಬಿದ್ದ ಗಂಟಿನ ಕಡೆ ಸೆಳೆದ... ಆಗವಳಾನಂದಕ್ಕೆ ಪಾರವಿರಲಿಲ್ಲ... ನನ ಕುಂಟಾ.. ನನ ಭಂಗಾರ ಅನಕಂತ ಗಂಟನ್ನೆದೆಗೆ ಅವುಚಿಕೊಂಡು ಮುದ್ದಾಡಿದಳು.

ತನ್ನ ಸುಪರ್ದಿಗೆ ತೆಗೆದುಕೊಳ್ಳಲು ನೋಡಿದಳಾದರೂ ಕುಂಟ ಬಿಡಲಿಲ್ಲ. ಕಾರಣ ಅವಳ ಬುದ್ದಿಗೆ ನಿಲುಕಡಿ ಯಿಲ್ಲೆಂಬುದು ತನಗ ಗೊತ್ತು. ನೀನೇನು ಮಾ ತಂದಿದ್ದೀ... ನೀನೇನು ಮಾ ಕೊಟ್ಟಿದ್ದೀ ಯಂದು ತನ್ನನ್ನು ಹಂಗಿಸಿ ಮಾತಾಡಿರುವ ವುದಾಹರಣೆಗಳುಂಟು. ಆದಕಽ ಯಿದ್ದು ನನ್ನತ್ರಽಽ ಯಿದ್ದರ ನಿನ್ನತ್ರಽಽನ ಯಿದ್ದಂಗಲ್ಲೇನು; ಯೆಂದ. ಆ ಮಾತೂ ಪಸಂದನ್ನಿಸಿತು.

ತನ್ನ ವಡಲೂ ಹಸದದಽ... ತನ್ನಪ್ಪನ ವಡಲೂ ಹಸದದಽಽ... ವುಂಡುಗಿಂಡಾದ ಮ್ಯಾಲ ಜೋಡೀ ಬದುಕುವುದರ ಬಗ್ಗೆ ಮಾತೊಗೆದರಾತು... ಬಾನದ ವಾಸಣೆ ಗುಂಟ ಗುಡುದ ಮುಕುಳಿಯಿಂದ ತೆವಳಿಕೋತ ಬಂದ. ಪಾಡದೀಯಾ... ದ್ಯಾವರು ಬಲಗಣ್ಣಿಂದ ನೋಡಿದಾಂಗಯ್ತಾಲ್ಲಾ ಯಂದು ವಗ್ಗರಣೆ ಹಾಕಿದ... ತಾನು ಪ್ರಸನ್ನ ವದನನಾಗಿರುವುದಾಗಿ ಸಾಬೀತು ಮಾಡಿದ, ಯೀ ಗುಡುದನ ವಡಲಿಗೆ ಕೂಳು ಬಿತ್ತೂ ಅಂದರ ಮುಂದಿನ ಕಥಿಯೇ ಬ್ಯಾರೆ... ನಕ್ಕೋತ ಕೆಲಕೋತ ಸಣ್ಣೀ ಜೋಡಿ ತಾನು



ಸಮುಸಾರ ಮಾಡುವ ಕ್ಷಣ ಗಣನೆ ಆರಂಭಿಸಿದ ಕುಂಟ...

ಯಿಂದಿನ ದಿನವೇ ಸುಬದಿನ.. ಯಿವತ್ತಿನ ಗಳಿಗೆಯೇ ಸುಬಗಳಿಗೆ.. ತಾನಿನ್ನು ತಡ ಮಾಡಬಾರದು... ಬಾನದ ಚಟಿಗೆಯ ರಕ್ಷಣೆಯ ಹೊಣೆಯನ್ನು ಆ ಮುದೇತನ ಸುಪರ್ದಿಗೆ ವಪ್ಪಿಸಿದ. ಗಂಟನ್ನು ತಲೆ ಮ್ಯಾಲ ಯಿಟುಕೊಂಡು ಸಣ್ಣೀಯ ಮುಂಗಯ್ಯನ ಹಿಡಕೊಂಡು ಬಜಾರಕ ಹೋದ. ಮಿಜಿಮಿಜಿ ಮಾಡಲಕ್ಯಾಕೋ ಮನಸು ಬಾರಲಿಲ್ಲ... ಮಿಲಿಟರಿ ಮಾಬವ್ವನ ಕಯ್ಲಿ ಚವುಕಾಸಿ ಮಾಡೀ ಮಾಡೀ ನಾಲಕು ಮೀನಿನ ತುಂಡುಗಳನ್ನೂ, ಮೂರ್‍ಮಂದಿಗೆ ಮೂರು ಮಾಂಸದ ತುಂಡುಗಳನ್ನೂ ಖರೀದಿಸಿದ. ವಾರ್‍ದಿಂದ ಬಾಯಿ ಕೆಟ್ಟು ಕೆರ ಹಿಡದಯ್ತೋ ಯಂದು ಸಣ್ಣಿ ಅಂಗಲಾಚಿದಳು. ಆಸೆ ತೋರಿಸಿ ಮೋಸ ಮಾಡಬಾರದೆಂಬ ಕರಾರಿನ ಮ್ಯಾಲ ನಿಂಗಣ್ಣನಂಗಡೇಲಿ ಯಲ್ಡು ಪಾಕೆಟ್ಟು ಕೊಣಕ್ಕೊಂಡನು... ಆಗಲೇ ತಾವೀರ್‍ವರು ಅಮಲೇರಿರುವವರಂತೆ ತೂರಾಡತೊಡಗಿದರು. ಯಿವಿಷ್ಟು ಸಂತೆ ಮಾಡಲಕ ವಂದು ವಾರದ ಗ್ರಾಸ ಖರುಚಾತು. ಹೆಂಗೋ ರಾತ್ರೀಕ ಸಣ್ಣಿ ತನ್ನವಳಾಗಲಿರುವಳೆಂದ ಮ್ಯಾಲ ತಾನ್ಯಾಕ ನಾಳಿಗೆಂಗ! ನಾಡದಕೆಂಗ ಅಂತ ಚಿಂತಿ ಮಾಡೊದು!

ಸಣ್ಣಿ ಟಾಂಗಾ ಸಾಬಿಯೊಂದಿಗಿನ, ವಗ್ಗಾಲಿ ಗವುಡನೊಂದಿಗಿನ, ದಪೆದಾರು ದ್ಯಾಮನೊಂದಿಗ್ಗಿನ ತನ್ನ ಲಂಯ್ಗಿಕ ಅನುಭವಗಳನ್ನು ಕಿಲಕಿಲಾಡೂತ ಹಂಚಿಕೊಳೂತ... ನಿನಗ್ಯಾರೂ ಅವರು ಸಾಟಿಯಲ್ಲ ಬುಡು ಯಂದವನ ಲಂಯ್ಗಿಕ ಪರಾಕ್ರಮವನ್ನು ಹೊಗಳೂತ... ಪದಾರ್ಥಗಳನ್ನು ಮೂಸೂತ ನೆಕ್ಕೂತ ಛತ್ತರದ ಕಡೇಕ...

ತಲುಪುವ ಹೊತ್ತಿಗೆ ಸಹಬಾಂಧವರು ಬ್ರುಷ್ಟಾನ್ನ ಭೋಜೂನ ಮಾಡಿ ಯಿಡೀ ನಗರವನ್ನು ತಮತಮ್ಮ ಬಾಯೊಳಗಿಟುಕೊಂಡು ನಮಲೂತ ಸಂಕಥಾಯಿನೋದದಲ್ಲಿದ್ದರು. ಅವರ ಪಯ್ಕಿ ಕೆಲವರು ವಳ್ಳೆ ಗೊಂಡೆಂಡ್ತಿ ಬಂಧಾಂಗ ಬರತದೀರಲ್ಲ... ಸೋಬನಕ್ಕ ಸನ್ನಾಯಿ ತಂದಾಂಗಯ್ತಲ್ಲಾ... ಯಂದು ನಗಿ ಚಾಟಿಕಿ ಹಾರಿಸಿದರು. ಸೋಬನ ಅಂಬುವ ಸಬುದ ಕಿವಿಗೆ ಬಿದ್ದು ಕುಂಟನು...

ಎಲ್ಲು ಪಾಕೆಟ್ಟನ ಮುವ್ವರು ಹಂಚಿಕೊಂಡು ಕುಡುದರಲ್ಲಿದ್ದ ಮೀನು, ಮಾಮುಸದ ತುಂಡುಗಳನ್ನು ನೆಂಜಿಕೊಂಡು ಚಟಿಗೇಲಿದ್ದ ಬಾನಾನೆಲ್ಲ ಖಾಲಿಮಾಡಿ ಭತ್ತರ ನಡುಗುವಂತೆ ಹೋಬ್ಬನೆ ತೇಗಿದರು... ಆ ಮ್ಯಾಲೆಯೇ ಸುರುವಾದದ್ದು

ಸೋಬಿನದ ಹಕೀಕತ್ತು...

''ಯಪ್ಪೋ.. ನೀನು ಮೂಲೆ ಸೇರಿಕ್ಯಾ... ನಾನೀವತ್ತು ಕುಂಟನ ಜೋಡಿ ಮಲಿಕ್ಕಂಬ್ತೀನಿ'' ಎಂದು ಸಣ್ಣಿ ಹೇಳಿದ್ದೆ ಗುಡುದ ''ಆ ಕುಂಟನ ಜೋಡಿ ಮಲಿಕ್ಕಂಡ್ರೆ ಸಜ್ಜು ಯಿರಾಕಿಲ್ಲ ನೋಡು'' ಎಂದು ತನ್ನ ಮಾತಿನ ದಾಟಿ ಬದಲಿಸಿ ಬಿಡುವುದೇನು! ಅದಕ ಪುಟುಗಿ ಕೊಟ್ಟಂತೆ ಸಣ್ಣೀನೂ ''ನಮ್ಮಪ್ಪಗೆ ನಿನ್ ಜೋಡಿ ಮಲಿಕ್ಕಂಡ್ರೆ ಹೊಟ್ಟೆವುರಿ ಕುಂಟಾ.. ನಾನು ಅಪ್ಪನ ಜೋಡಿ ಮಲಿಕ್ಕಂಬ್ತೀನಿ... ರಿಣಾಯಿದ್ದರ ನಾಳಿಕೆ ಸೇರಿದರಾತು!'' ಎಂದು ಬಿಡುವುದೇನು! ಗಂಟೊಳಗಿದ್ದ ಗ್ರಾಸಾನು ಹೋತು, ಗೋಸಿಯೊಳಗಿದ್ದ ಗಂಟೂ ಹೋತು.. ಯಲ್ಲಾ ತಿಂದಮ್ಯಾಲ ಯಿವರು ಗೆಂಡಿ ತೋರಿಸಿ ಬಿಡುವುದೇನು! ಕುಂಟ ಕೆಂಡಮಂಡಲಗೊಂಡ. ಅದೆಂಗ ನೀನು ನನ್‌ಜೋಡಿ ಯಿರಾಕಿಲ್ಲ ನೋಡೇ ಬುಡುತೀನಿ... ಯಂದು ಕುಪ್ಪಳಿಸಿ ನೆಗೆದಾಕಿಯ ತೋಳು ಹಿಡಿದುಕೊಂಡೇ ಬಿಟ್ಟ. ''ನನ ಮಗಳ ಮಯ್ಯಿಕಯ್ಯ ಮುಟುತೀಯೇನಲೇ ಕುಂಟಾ'' ಯೆಂದು ಜಿಗಿದೆದ್ದು ಬಂದ ಗುಡುದ ಆಕೆಯ ಯಿನ್ನೊಂದು ತೋಳನ್ನು ಹಿಡಿದುಕೊಂಡ. ವಡಲಿಗೆ ಕೂಳು ಬಿದ್ದ ನಂತರ ತಾನು ಕುಷ್ಠ ರೋಗಿ ಅಂಬುದನು ಮರೆತೇ ಬಿಟ್ಟಿದ್ದ. ಯೇನೋ ಹೆಣ್ಣು ಹಡೆದಿರುವಾತ... ಯಂದು ಕುಂಟ ನಾಲಕು ಗುಟುಕು ಸೆರೇನ ಬಿಟ್ಟುಕೊಟ್ಟಿದ್ದೇ ಪರಪಾಟಾಗಿತ್ತು. ಅದು ಆನಿ ಬಲ ನೀಡಿತ್ತು.

ಯಿನ್ನೇನು ಕುಂಟನ ಬಲ ಜಾಸ್ತಿ ಆಯಿತೆಂಬುವಷ್ಟರಲ್ಲಿ ಗುಡುದ ತನ್ನ ಬಲಗಾಲಿಂದ ಝಾಡಿಸಿ ವದ್ದೇ ಬಿಟ್ಟನು. ಆ ಯೇಟಿಗೆ ತತ್ತರಿಸಿದ ಕುಂಟನು ಬಕಾಟೆ ಬಾರಲು ಬಿದ್ದು ಬಿಟ್ಟನು. ಅವನು ಯದ್ದು ಚೇತರಿಸಿಕೊಳ್ಳಬೇಕೆಂಬುವಷ್ಟರಲ್ಲಿ ಗುಡುದನು ''ನಮದ್ಯಾವ ಜಾತಿ... ನಿಂದ್ಯಾವ ಜಾತಿ'' ಯೆಂದು ಬಿಡುವುದೇ! ಅದಕಿದ್ದು ಕುಂಟನು ''ಜಾತಿಗೊಡವೆಗೆ ಬರಬ್ಯಾಡನೋಡು... ನಾನು ಜಂಗಮರ ಜಾತ್ಯೋನದೀನಿ...'' ಯೆಂದನಾದರೂ ಅದರ ಯಾವ ಕುರಹೂ ಅವನ ಮಯ್ಯಿ ಮ್ಯಾಲ ಯಿರಲಿಲ್ಲ.

ತಿರಕೊಂಡು ತಿಂಬೋರಿಗೆ ಜಾತಿವಂದು ಕೇಡು ಯೆಂದು ಗೊಣಗೂತ ಬಂದ ಕಾಸವ್ವ ''ಲೋ ಕುಂಟಾ.. ನಾನ್ ನಿನ್ ಜಾತಿಕೇಳಾಕಿಲ್ಲ.. ನಿನ್ ಕುಲ ಕೇಳಾಕಿಲ್ಲ.. ಕಟಗೊಂಡ ಗಂಡಗಿಂತ ಹೆಚ್ಚಾಗಿ ನೋಡ್ಕಂತೀನಿ ಬಂದ್ ಬಿಡಲೋ ನನ್ ಜೋಡಿ'' ಯೆಂದು ಸಣ್ಣಿಯ ಕುಂಡಿ ಮ್ಯಾಲ ಮಾತಿನ ಬರೆಯೆಳೆದುಬಿಟ್ಟಳು. ಸಣ್ಣಿ, ಕಾಸಿಗೂ ನಡುವೆ ತುಸು ಹೊತ್ತು ಮಾರಮಾರಿಯೇ ನಡೆದು ಬಿಟ್ಟಿತು. ಅಲ್ಲಿದ್ದ ಭಿಕ್ಷುಕರು ಯಿದೆಲ್ಲ ಮಾಮೂಲು ಅಂದುಕೊಂಡು ಸುಮ್ಮನಿದ್ದರು.

ತನ್ನನ್ನು ಯಳಕೊಂಡು ಭತ್ತರದ ಹೊರಗಟ್ಟೆ ಕಡೇಕ ಯಳಕೊಂಡೊಯ್ದ ತಂದಿ ಗುಡುದಪ್ಪಗ ಯಪ್ಪಾ... ಯಿದು ದ್ಯಾವರು ಮೆಚ್ಚೋ ಕೆಲಸವಲ್ಲ ಯೆಂದು ನಿಷ್ಠುರವಾಗಿ ಹೇಳಿದಳು. ಕುಂಟ ತನಮ್ಯಾಲ ಪಿರಾಣಾನೆ ಯಿಟುಕೊಂಡಿರುವನೆಂದೂ ಹೇಳಿದಳು. ವಂದೇ ವಂದುವಾರ ನಾನವನ ಜೋಡಿ ಸಮುಸಾರsನ ಮಾಡ್ತೀನಿ ಯೆಂದೂ ಅಂಗಲಾಚಿದಳು. ಆಕೆಯ ಯಾವ ಮಾತಿಗೂ ಗುಡುದನ ರುದಯ ಕರಗಲಿಲ್ಲ.. ನಿನಗ ಗೊತ್ತಿಲ್ಲ ಮಗಳss ಯಾರ ಸಾವಾಸ ಮಾಡಿದ್ರೂ ಕುಂಟರ ಸಾವಾಸ ಮಾಡಬಾರ್ದು ನೀನು ಸುಕುವಾಗಿ ಯಿರೋದನ ನಾನು ನೋಡಾಕೋ ಬ್ಯಾಡವೋ... ಆ ಕುಂಟನ್ನ ಕಟಕೊಂಡು ನೀನೇನು ಸುಕಪಡುತೀ... ನೀನೇ ಅವನಿಗ ದುಡುದಾಕಬೇಕಾಗತಯ್ತೆ ನೋಡು... ನಿನಗ ನಾನೊಂದೀಗಾಗ್ಲೆ ಗಂಡನ ನೋಡೀನಿ... ನಿನ್ನss ಕೊಡತೀನಂತss ಮಾತನೂss ಕೊಟ್ಟೀನಿ... ಅದಕ ಯಲ್ಡು ರೂಪಾಯನ ಅಡವಾನೂ ತಗಂಡೀನಿ... ಮನುಶ್ಯಾ ನೋಡsಕ ವಳ್ಳೆ ಮನುವತ ಯಿದ್ದಾಂಗದಾನವ್ವಾ... ನೀನೇ ನೋಡ್ವಂತಿ ತಡಕಾss ಯೆಂದಂದು ಗವಾಯೀ... ಗವಾಯೀ... ಯಂದೆಲ್ಡು ಕೂಗಿದೊಡನೆ...

''ಮಾವೋ... ಗುಡುದಪ್ಪಾವೋ... ಯಿಲ್ಲೇ ಅದೀನಿ ಬಾಕನ್ಮಾವೋ!'' ಯಂಬೊಂದು ಜವಾಬು ಯಿನ್ನೊಂದು ಕಟ್ಟೆಯ ಮೂಲೆಯಿಂದ ಕೇಳಿಬಂತು. ಗುಡುದ ಸಣ್ಣೀನ ಕರಕೊಂಡು ಅಲ್ಲಿಗೆ ಹೋದ... ಲೇ ಗವಾಯೀ... ನಿನ್ ಲಗ್ಗುನ ಆಗಲಕ ಸಣ್ಣಿ ವಪ್ಪಿದಳಪಾ ಯಂದ. ಹೋ ಹಂಗss ಯಂದವನು ಮುಖsನ ಅರಳಿಸಿಕೊಂಡ. ನೋಡುತ್ತಲೆ ಸಣ್ಣಿಯ ಯದೆ ದಸಕ್ಕಂದಂಗಾತು. ''ಯಪಾ... ಹೋಗೀ ಹೋಗಿ ನನ್ನೀ ಕುಲ್ಡಗ ಕಟ್ಟಿ ಹಾಕಕಂತ ಮಾಡೀಯೇನು!'' ಯೆಂದು ತಕರಾರು ತೆಗೆದಳು... ಅದಕಿದ್ದು ಗುಡುದನು ಹಂಗನ್ನ ಬ್ಯಾಡವ್ವಾ... ಕಣ್ಣಿಲ್ಲದ ಗಂಡ ದೊರಕೋದು ನಿನ್ನದ್ರುಸ್ಟಾಂತ ತಿಳಕss... ನೀನೇನss ಮಾಡು... ಯಲ್ಲಿಗss ಹೋಗು... ಯಿವನು ದುಸುರಾ ಮಾತಾಡಾಕಿಲ್ಲ. ಯಿವನೊಳ್ಳೆ ಪದs ಹಾಡುತಾನವ್ವಾ... ಯಿವನ್ಯಾದರ ಬಜಾರದಾಗ ಕುಂಡ್ರೂಸು. ತಂಬೂರಿ ಬಾರಿಸೊಂತ ಪದ ಹಾಡಿದನಂದರ ರೊಕ್ಕದಮಳೀನೇ ಬರತಯ್ತೆ ಬಿಡು. ಸುಮಕ ನೀನೊಂದೇ ಹ್ಞೂ ಅಂದುಬುಡು ಮಿಜಿಮಿಜಿ ಮಾಡಬ್ಯಾಡ ಯೆಂದು ಜುಲುಮಿ ಮಾಡಲು ಹೂ ಅಂದಳು.

ಹಿರಿ ಹಿರಿ ಹಿಗ್ಗಿದ ಗವಯಿ ತಡಕಾಡುತ್ತ ಸಣ್ಣಿಯ ಕಯ್ನ ಹಿಡಕೊಂಡ. ಮ್ರುದುವಾಗಿ ಹಿಚುಗಿದ. ನೀನss ನನಗೆ ಕಣ್ಣಾಗಬೇಕು ನೋಡು ಅಂದ. ಆಕಿ ಅದಕೂ ಹೂ ಅಂದಳು. ಮೆಲ್ಲಕ ಕುಂಡಿ ಅಡಿ ಕಯ್ನಿ ತೂರಿಸಿ ವಂದು ಗಂಟು ತೆಗೆದು ಬಿಚ್ಚಿ ಹರವಿದ... ನಾನಾ ನಮೂನಿ ಮೌಲ್ಯದ ನಾಣ್ಯಗಳಿದ್ದವು. ತಗs ಯಿದೆಲ್ಲ ನಿಂದs... ಅಂದ. ಹೆಣುಮಕ್ಕಳ ಮುಂಗಯ್ಯಿ ಬಳಿ ಯಿದ್ದರssನ ಚಂದ... ಕಾಲಿಗೆ ಕಡಗsನೂ ಯಿರಬೇಕು... ನಿನಗ ಯೇನೇನು ಬೇಕೋ ಅದನ್ನೆಲ್ಲ ಕೊಣಕss ಯಂದ.

ಸಣ್ಣಿ ತನ್ನ ತಂದಿಯ ಕಡೇಕ ನೀರು ತುಂಬಿದ್ದ ಕಣ್ಣುಗಳಿಂದ ನೋಡಿದಳು.

---

ಕುಂ. ವೀರಭದ್ರಪ್ಪ
'ಅನ್ನಪೂರ್ಣ', ಪೊಲೀಸ್ ಠಾಣೆ ಹತ್ತಿರ, ಕೊಟ್ಟೂರು - ೫೮೩ ೧೩೪, ಬಳ್ಳಾರಿ ಜಿಲ್ಲೆ

## ವಿಚಾರ ಸಾಹಿತ್ಯದ ನೆಲೆ, ಸಾಮಾಜಿಕ ಪಾತ್ರಗಳು ಮತ್ತು ಬೆಳವಣಿಗೆ — ಕೆಲವು ಅಭಿಪ್ರಾಯಗಳು

**ವಿಚಾರಶೀಲತೆಯ ಹಿನ್ನೆಲೆ**

ಮಾನವನ ಎಲ್ಲ ಸಹಜ ಕ್ರಿಯೆಗಳು ಜೀವವಿಕಾಸದ ನೆಲೆಯಲ್ಲಿಯೆ ಮೂಡಿಬಂದವು ಎನ್ನುವುದಂತೂ ಎಲ್ಲರಿಗೂ ತಿಳಿದ ವಿಷಯ. ವಿಚಾರ ಕ್ರಿಯೆಯೂ ಇದಕ್ಕೆ ಹೊರತಲ್ಲ. ಪಶುಗಳಲ್ಲಿಲ್ಲವೆಂದುಕೊಂಡಿರುವ ಈ ಮಹಾಸದ್ಗುಣ ದೈವದತ್ತವಾಗಿ ಬಂದಿದೆ ಎಂದು ನಂಬಿರುವವರನ್ನು ಒಪ್ಪಿಸುವ ಕಷ್ಟಕಾರ್ಯ ಈಗ ಇಲ್ಲಿ ಬೇಡ. ಆದರೆ ಜೀವವಿಕಾಸವನ್ನು ಒಪ್ಪುವವರಲ್ಲಿಯೂ ಬಹಳಷ್ಟು ಜನ, 'ಮನುಷ್ಯನಿಗೆ ಮೆದುಳು ಬೆಳೆದಿದ್ದರಿಂದ ಅವನ ವಿಚಾರಕ್ರಿಯೆ ಪ್ರಾರಂಭವಾಯಿತು' ಎಂದುಕೊಂಡಿದ್ದಾರೆ. ಇದೂ ಒಪ್ಪತಕ್ಕದಲ್ಲ. ಒಂದು ಜೀವರಾಶಿಯ ಸುರಕ್ಷೆ ಮತ್ತು ಸಂತಾನೋತ್ಪತ್ತಿಯ ಕಾರ್ಯಗುರಿಯನ್ನು ಯಾವ ಕ್ರಿಯೆ ಸಫಲಗೊಳಿಸುವುದಿಲ್ಲವೊ, ಆ ಕ್ರಿಯೆಗೆ ಉಪಕರಣವಾಗುವಂತಹ ಯಾವ ದೈಹಿಕಾಂಗವೂ, ಪ್ರವೃತ್ತಿಯೂ ಉಂಟಾಗುವುದೇ ಇಲ್ಲ. ಹಿಂದೆ ಆಗಿದ್ದರೂ, ಮತ್ತೆ ಆ ಕ್ರಿಯೆ ವಿಫಲವಾಗತೊಡಗಿದಾಗ ಆ ಅಂಗ ಬೆಳೆಯದಿರುವುದಷ್ಟೆ ಅಲ್ಲ, ನಶಿಸಿಹೋಗುವುದೂ ಉಂಟು. ಇದು ಜೀವವಿಕಾಸದ ಒಂದು ಮೂಲಭೂತ ಲಕ್ಷಣ. ಇದಕ್ಕೆ ಸಾಮಾನ್ಯ ನಿದರ್ಶನಗಳು ಹೇರಳವಾಗಿವೆ. ಹೀಗೆ ಮಾನವನ ಪೂರ್ವಜರ ಆದಿಯಾಗಿ, ವಿಚಾರಕ್ರಿಯೆಯು ಬೆಳೆಯುತ್ತ ಬಂದು, ಪ್ರತಿ ಹಂತದಲ್ಲೂ ಸುರಕ್ಷೆ ಮತ್ತು ವಂಶಾಭಿವೃದ್ಧಿಗಳನ್ನು ತರದಿದ್ದರೆ, ಮೆದುಳಿನಲ್ಲಿ ಮಾನವವಿಶಿಷ್ಟ ವಿಸ್ತರಣೆಗಳು ಹೀಗೆ ಬೆಳೆಯುತ್ತಿರಲಿಲ್ಲ. ಇದು ಗಮನಿಸಬೇಕಾದ ಮುಖ್ಯ ಸಾರಾಂಶ.

ಹೀಗೆ ಸರ್ವಜೀವಿವರ್ಗಗಳಿಗೂ ಸಾಮಾನ್ಯವಾಗಿರುವ ವಸ್ತುನಿಷ್ಠ ಉದ್ದೇಶಕ್ಕಾಗಿ ಮೆದುಳು ಮತ್ತು ವಿಚಾರ ಕ್ರಿಯೆಗಳು ಪರಸ್ಪರ ಉತ್ತೇಜಕಗಳಾಗಿ ಮಾನವನಲ್ಲಿ ವಿಕಸಿಸುವುದಕ್ಕೆ, – ಇತರ ಜೀವಿವರ್ಗಗಳಿಗಿಂತ ಅಗಾಧವಾಗಿ ಅತಿ ತೀವ್ರಗತಿಯಲ್ಲಿ ಬೆಳೆದು ಬಂದುದಕ್ಕೆ, ಕಾರಣಗಳೇನು ? ಇಂತಹ ಜಟಿಲ, ಸಂಕೀರ್ಣ, ತೀವ್ರಸಾಧನೆಗೆ ಒತ್ತಡ ತಂದ ಮಾನವ ವಿಶಿಷ್ಟ ಸವಾಲುಗಳು ಯಾವುವು ?

ಮುಖ್ಯವಾಗಿ ಆ ಕಾಲದ ಪರಿಸರ ಬಹು ಶೀಘ್ರಗತಿಯಲ್ಲಿ ಅತಿ ಹೆಚ್ಚಿನ ವೈವಿಧ್ಯತೆಯೊಡನೆ ಬದಲಾಗುತ್ತಿತ್ತು. ಮನುಷ್ಯನ ಅಲೆಮಾರಿತನ, ಸಾಹಸಪ್ರವೃತ್ತಿ, ಹಾಗೆಯೆ ವಲಸೆ ಹೋಗಬೇಕಾದ ಆತಂಕಗಳೂ ವಿಪರೀತ ಪರಿಸರ ಬದಲಾವಣೆಯ ಪರಿಣಾಮಗಳನ್ನುಂಟುಮಾಡಿರಬೇಕು. ಇವೆಲ್ಲದಕ್ಕಿಂತ ಹೆಚ್ಚಾಗಿ, ತನ್ನದೇ ಸಂಖ್ಯಾವೃದ್ಧಿಶೀಲ ಸಮೂಹದೊಡನೆಯ ಪರಿಸ್ಥಿತಿ ಬಹಳಷ್ಟು ಹೊಸಹೊಸ ಅನಿರೀಕ್ಷಿತ ಸಮಸ್ಯೆಗಳನ್ನು ಒಡ್ಡುತ್ತಿತ್ತು. ಇಂತಹ ಸಂದರ್ಭಗಳಲ್ಲಿ ವಿಚಾರಕ್ರಿಯಾಶೀಲತೆಯೊಂದೇ ವ್ಯಕ್ತಿಗಳಿಗೂ, ನಂತರ ಸಮೂಹಕ್ಕೂ ವೃದ್ಧಿದಾಯಕವಾಗಿತ್ತು. ಹಾಗೆಯೆ ಸಾಮೂಹಿಕ ಜೀವನದಲ್ಲಿನ ಅನೇಕ ಅಪೇಕ್ಷೆಗಳಿಗಾಗಿಯೂ, ಮುಖ್ಯವಾಗಿ ಸಂಗಾತಿಗಳನ್ನು ಪಡೆಯುವ ಕಟುಸ್ಪರ್ಧೆಯಲ್ಲಿಯೂ, ವಿಚಾರಶೀಲತೆ ಶಕ್ತಿಬಲಗಳಿಗಿಂತ ಹೆಚ್ಚು ಫಲಕಾರಿಯಾಗತೊಡಗಿತ್ತು.

ಪರಿಸರ ಮತ್ತು ಸಂಘಜೀವನಗಳ ಪ್ರತಿಕೂಲ ಪ್ರಚೋದನೆಗೆ ಪ್ರತಿಕ್ರಿಯೆಯಾಗಿ, ವಿಚಾರಶೀಲತೆ ಶೀಘ್ರಗತಿಯಲ್ಲಿ ಬೆಳೆಯುತ್ತಿದ್ದುದೇನೊ ನಿಜ; ಆದರೂ ಸಂಘಜೀವನದ ಸ್ಥಿತಿ ಸುಧಾರಿಸತೊಡಗಿದಾಗಿನ ಅನುಕೂಲ ಪ್ರಚೋದನೆಯ ಪ್ರಭಾವದಿಂದಲೂ ಅದೇ ಬೆಳವಣಿಗೆ ನಿಧಾನಗತಿಯಲ್ಲಿಯಾದರೂ ಬಹಳಷ್ಟು ಪುಷ್ಟಿಗೊಂಡಿತು. ಹಿಂದೆ ಅತಿಯಾಗಿದ್ದ ಸ್ವಾರ್ಥಪರ ಕಟುಸ್ಪರ್ಧೆ, ಸಂಘಪರ ಸ್ಪರ್ಧೆಯಾಗತೊಡಗಿತು. ಆ ಸಂದರ್ಭದಲ್ಲಿಯೆ ವ್ಯಕ್ತಿ-ವ್ಯಕ್ತಿ ನಡುವಣ ನಿಕಟ ಸಂಬಂಧದ ಪ್ರವೃತ್ತಿಗಳು ಬದಲಾಗಿ ಬೆಳೆದುಬಂದಿರಬೇಕು. ನಾವು ಇಂದು ಮಾನವೀಯತೆ, ನೈತಿಕತೆ ಎನ್ನುವ ಅನುಕಂಪ, ದಯೆ, ಸ್ನೇಹ, ಪ್ರೇಮ ಮುಂತಾದವು ಪ್ರವೃತ್ತಿಗಳಾಗತೊಡಗಿದ್ದು ಇದೇ ಸಂಘಜೀವನದ ಶಾಂತ ಪರಿಸರದಲ್ಲಿಯೆ. ಆದರೂ ಅದು ಆದದ್ದು ಇತರ ಸಂಘಗಳೊಡನೆ ಸೆಣಸುವ ಸನ್ನಾಹದಲ್ಲಿಯೆ. ಅನೇಕ ಪ್ರಾಣಿ ವರ್ಗಗಳಲ್ಲಿ ಸಂತಾನ ವೃದ್ಧಿಗೊಂದು ಯುಕ್ತಿಯಾಗಿ ಪ್ರಯೋಗಗೊಳ್ಳುತ್ತಿದ್ದ ಗಂಡು-ಹೆಣ್ಣುಗಳ ದೀರ್ಘ ಪ್ರೇಮ, ಮಾತೃವಾತ್ಸಲ್ಯ, ಮುಂತಾದ ಪ್ರವೃತ್ತಿಗಳು ಮಾನವನಲ್ಲಿ ಪರಾಕಾಷ್ಠತೆಯನ್ನು ತಲಪಿದವು; ಜೊತೆಗೆ, ಕಾಲಕ್ರಮೇಣ ಸಂತಾನಪ್ರೇಮ, ಬಂಧುಪ್ರೇಮ, ಒಡನಾಡಿ ಸ್ನೇಹಗಳಾಗಿಯೂ ವಿಚಾರಕ್ರಿಯೆಯಲ್ಲಿ ಬೆರೆತು ಬೆಳೆದವು. ಇವು ಯಾವುವೂ ಹೊರಗಡೆಯಿಂದ ಯಾವುದೋ ಆದರ್ಶವಾಗಿ ಹೇರಲ್ಪಟ್ಟವಲ್ಲ. ಇಂದಿನ ವೈಚಾರಿಕತೆಗೆ ಮತ್ತು ಪ್ರಜಾಪ್ರಭುತ್ವಕ್ಕೆ ತಳಹದಿಯಾದ ಸರಿಸಮಾನತೆಯ ತತ್ವಕ್ಕೆ ಮೂಲಾಧಾರವಿರುವುದು ಇದೇ ಪ್ರವೃತ್ತಿಗಳಿಂದಾದ ವಿಚಾರಗಳಲ್ಲಿಯೆ.

ಇಂದಿಗೂ ವಿಚಾರಶೀಲತೆಗೆ ಮುಖ್ಯ ಪ್ರಚೋದಕಗಳಾದ

೧. ವಿಪುಲ ಮಾಹಿತಿ ಸಂಗ್ರಹ ಮತ್ತು ವಿನಿಮಯ

೨. (ಹಿಂದೆ ಅನುಕರಣೆಯ ಮೂಲಕವಾಗಿ ಆಗುತ್ತಿದ್ದ) ದೀರ್ಘ ಶೈಶವ ಮತ್ತು ಬಾಲ್ಯಗಳ ಕಲಿಕೆ ಮತ್ತು ಕಲಿಸುವಿಕೆ

೩. (ಇನ್ನೂ ಮುಖ್ಯವಾಗಿ) ಸಂಘಜೀವನದ ಸಂಕೀರ್ಣ ಸಂಬಂಧಗಳ ಸುಧಾರಣೆಗೆ ಅತ್ಯವಶ್ಯಕವಾಗಿದ್ದ ವಿಷಯ ಮತ್ತು ವಿಚಾರಗಳ ವಿನಿಮಯ

ಮುಂತಾದವುಗಳು ಹಿಂದೆಂದೂ ಇಲ್ಲದಿದ್ದ ಮಹತ್ತರ ಸಾಧನೆಯಾದ ಭಾಷೆಯ ಉದಯಕ್ಕೆ ಕಾರಣಗಳಾದವು.

ಈ ಸಂಬಂಧದಲ್ಲಿ, ಬಹುಮುಖ್ಯವಾಗಿ,

೧. ಇಂದು ನಾವು ಆರ್ಥಿಕ ಅಭ್ಯುದಯ ಎನ್ನುವ ಆಹಾರ ಮತ್ತು ಇತರ ಅವಶ್ಯಕ ವಸ್ತುಸಂಗ್ರಹಣೆ

೨. ಇಂದು ನಾವು ತಂತ್ರಜ್ಞಾನವೆನ್ನುವುದರ ಮೂಲವಾದ ಕೈಬಳಕೆ ಮತ್ತು ಇಂದ್ರಿಯ ಶಕ್ತಿಗಳ ಉಪಯೋಗವೃದ್ಧಿ

೩. ಇಂದು ನಾವು ವಿಜ್ಞಾನವೆನ್ನುವುದಕ್ಕೆ ಮೂಲವಾದ, ಪರಿಸರ ಪರಿಸ್ಥಿತಿಗಳನ್ನು ಬದಲಿಸಿಯೂ ಪರೀಕ್ಷಿಸಿಯೂ ಅನುಭವ ಪಡೆಯುವ ಕುತೂಹಲ ಮತ್ತು ಸಾಹಸ,

ಇವುಗಳು ಭಾಷೆಗೆ ಮುಂಚೆಯೇ ಮಾನವವರ್ತನೆಯಾಗತೊಡಗಿದ್ದರೂ, ಭಾಷೆಯೊಡನೆ ಬೆರೆತು ಬೆಳೆದು, ಭಾಷೆಯನ್ನು ಅದರ ಜೊತೆಗೆ ವಿಚಾರ ಸರಣಿ ಮತ್ತು ಪರಂಪರೆಗಳನ್ನು ಬೆಳೆಸುತ್ತ ಬಂದವು.

ಇಂತಹ ಆದಿಮಾನವನ ಜೀವನದ ಘಟನೆಗಳೆಲ್ಲವೂ, ತಮ್ಮ ತಮ್ಮದೇ ದೂರ ದೂರದ ಸಂಪರ್ಕಸೀಮಿತ ಪ್ರದೇಶಗಳಲ್ಲಿ, ಸ್ವತಂತ್ರವಾಗಿಯೆ, ಸರಾಸರಿ ಸಮಕಾಲೀನ ವಾಗಿಯೆ ಜರುಗಿದವು. ಈ ಸಂಗತಿ, ಇವೆಲ್ಲ ಘಟನೆಗಳು ಮಾನವವಿಕಾಸದ ಮುಖ್ಯ ಘಟ್ಟಗಳು ಎನ್ನುವ ಸಿದ್ಧಾಂತಕ್ಕೆ ಬೆಂಬಲ ಕೊಡುತ್ತವೆ.

**ಇಂದಿನ ವಿಚಾರಸಾಹಿತ್ಯದ ನೆಲೆ : ವೈಚಾರಿಕತೆ**

ವಿಚಾರಸಾಹಿತ್ಯದ ಎರಡು ಆಕರಗಳಾದ ವಿಚಾರಶೀಲತೆ ಮತ್ತು ಭಾಷೆ ಇವುಗಳ ನೆಲೆ, ಇದುವರೆಗೂ ಸಂಕ್ಷಿಪ್ತವಾಗಿ ಚರ್ಚಿಸಿದ ಹಾಗಿದ್ದವೆಂದುಕೊಳ್ಳಬಹುದು. ಆದರೆ, ಇಂದಿನ ವಿಚಾರಸಾಹಿತ್ಯದ ನೆಲೆ, ನಮ್ಮ 'ವಿಚಾರವಾದ ಮತ್ತು ವೈಚಾರಿಕತೆ' ಇವುಗಳ ಜನಸಾಮಾನ್ಯ

ಅರ್ಥಗಳಲ್ಲಿ ಅಡಕಗೊಂಡಿದೆ. ಆದರೂ ಲಕ್ಷಾಂತರ ವರ್ಷಗಳಿಂದ ಬೆಳದುಬಂದ, ಜೀವವಿಜ್ಞಾನದಿಂದ ತಿಳಿದುಬಂದ, ಹಿಂದಿನ ನೆಲೆಗಳಿಗೂ ಇಂದಿನ ನೆಲೆಗಳಿಗೂ ನೇರಸಂಬಂಧವನ್ನು ಸುಲಭವಾಗಿ ಕಾಣಬಹುದು.

ನಾವು ಇಂದು ವಿಚಾರವಾದ ಎಂದು ಯಾವ ನಿಲುವಿಗೆ, ವೈಚಾರಿಕತೆ ಎಂದು ಯಾವ ವರ್ತನೆಗೆ ಹೇಳುತ್ತೇವೆಯೊ ಅವು ನಮಗೆ ನಮ್ಮ ಇತಿಹಾಸದ ತೊಡಕುಗಳಲ್ಲಿ ಸಿಲುಕಿ ಪಕ್ವವಾಗಿ ಬಂದಿರುವ ಮಾನವ ಮನೋಧರ್ಮದ ಸ್ಥಿತಿಗಳು. ಇವು ಇಂಗ್ಲಿಷ್‌ನ 'ರ್‍ಯಾಶನಲಿಸಂ' ಪದಕ್ಕೆ ಅರ್ಥ ಹೊಂದಿಸಬೇಕಾದಾಗ, ಸಂವಾದಿಯಾಗಿ ದೊರಕಿದ ಅನ್ವರ್ಥನಾಮಗಳು. ವಿಜ್ಞಾನದಿಂದ ಪ್ರಭಾವಿತರಾಗುವುದರ ಜೊತೆಗೆ, ತರ್ಕಶೀಲ ವೈಜ್ಞಾನಿಕತೆಯನ್ನೂ ಬಳಸಿಕೊಳ್ಳುವುದು ವೈಚಾರಿಕತೆಯ ಮುಖ್ಯಗುಣ.

ಹೀಗಾಗಿ, ಇಂದಿನ ಎಲ್ಲ ದೇಶಗಳ ಬಹುತೇಕ ಸಮಾಜಗಳಲ್ಲಿ ಈ ವೈಚಾರಿಕತೆ, ಕೊಂಚ ಹಿಂಚುಮುಂಚಾಗಿ, ಅಲ್ಪ ವ್ಯತ್ಯಾಸಗಳು ಮಾತ್ರವಿದ್ದಂತೆ, ಸ್ಥಿರಗೊಳ್ಳುತ್ತದೆ. ಪ್ರತ್ಯಕ್ಷ ಪ್ರಮಾಣಿತವಲ್ಲದ್ದೇನನ್ನೂ ನಂಬಿಕೊಂಡು ಜೀವನ ನಡೆಸುವ ಗೋಜಿಗೆ ಹೋಗದಿರುವವರ ನೀತಿ ಈ ವಿಚಾರವಾದ. ಈ ಅರ್ಥದಲ್ಲಿ ಮಾನವ ಸಹಜವಾಗಿ ವಿಚಾರವಾದಿ. ವಿಚಾರಕ್ರಿಯೆಯ ನೆಲೆಯಿಂದ ಇದು ಸ್ಪಷ್ಟವಾಗುತ್ತದೆ. ಇಂತಹ ವೈಚಾರಿಕತೆ, ವಾಸ್ತವಿಕ ಕಾರ್ಯಪೂರಕವಾಗಿಯೆ ಅನುಭವಸಿದ್ಧವಾಗಿಯೆ, ವಂಶವಾಹಿಯಾಗಿಯೆ ಬೆಳೆದುಬಂದ ಮಾನವೀಯ ಪ್ರವೃತ್ತಿ; ಇದು ಕೇವಲ ಕೆಲವರ ಮನೋವೃತ್ತಿಯಲ್ಲ.

ಆಧುನಿಕ ವಿಚಾರವಾದದ ಮುಖ್ಯ ಮಾರ್ಗದರ್ಶಕಗಳನ್ನು ಹೀಗೆ ಗುರುತಿಸಬಹುದು :

೧. **ಭೌತವಸ್ತು ಸ್ಥಿತಿವಾದ :** ಈಗ ವಿಶ್ವದಲ್ಲಿರುವುದೆಲ್ಲವು ವಸ್ತು ಮತ್ತು ವಸ್ತುವಿನ ಸ್ಥಿತಿಗಳಿಂದಾದವು. ಎಲ್ಲವೂ ಭೌತಿಕ ನಿಯಮಗಳಿಗೆ ಬದ್ಧವಾದವು.

೨. **ವಾಸ್ತವ ಯಥಾರ್ಥವಾದ :** ಯಾರ ಚಿಂತನೆಯಿಂದಲೂ ಬದಲಾಗದ, ಯಾರ ಚಿಂತನೆಯ ಪ್ರಭಾವಗಳಿಗೂ ಅವಲಂಬಿಯಾಗಿರದ ಸತ್ಯಗಳಿವೆ. ಪ್ರತಿ ವಿಷಯದಲ್ಲೂ ಇಂತಹ ಸತ್ಯವನ್ನು ಹಂತಹಂತವಾಗಿ ಎಂದಿಗಾದರೂ ತಿಳಿದುಕೊಳ್ಳಬಹುದು. ಎಂದಿಗೂ ತಿಳಿಯಲಾಗದ ಸತ್ಯವೆಂತಹದೂ ಇಲ್ಲ.

೩. **ಕಾರ್ಯಕಾರಣವಾದ :** ಪ್ರತಿಯೊಂದು ವಿಚಾರದಲ್ಲೂ ಆಂತರಿಕ ವಿಷಯಗಳು ಒಂದಕ್ಕೊಂದು ಅನನ್ಯ ರೀತಿಯಲ್ಲಿ ಅವಿರೋಧವಾಗಿ ಸಂಬದ್ಧವಾಗಿರುತ್ತವೆ. ಯಾವ ಸತ್ಯವೂ ಸ್ವವಿರೋಧವಾಗಿರುವುದಿಲ್ಲ.

೪. **ಪ್ರತ್ಯಕ್ಷಾನುಭವ ಪ್ರಯೋಗ ಪ್ರಮಾಣವಾದ/ವಿಜ್ಞಾನವಾದ :** ಎಲ್ಲ ವಾಸ್ತವಿಕ ಪ್ರಶ್ನೆ, ಸಮಸ್ಯೆಗಳನ್ನೂ, ಪರಿಣಾಮಗಳನ್ನೂ ಪ್ರತ್ಯಕ್ಷ, ಅನುಭವ, ಪ್ರಯೋಗ, ತರ್ಕಗಳಿಗೆ ಒಳಪಡಿಸಿ, ಸತ್ಯವನ್ನು ತಲಪುವುದು ಸಾಧ್ಯ.

೫. **ಸಕಲ ಕಾರ್ಯಕಾರಣ ಪರಿಣಾಮ ಸುವ್ಯವಸ್ಥಾವಾದ :** ಪ್ರತಿಯೊಂದು ವಾಸ್ತವಿಕ ಘಟನೆ, ಪರಿಸ್ಥಿತಿ, ಅಥವಾ ಸಂಘಟನೆಯಲ್ಲಿ, ಎಂತೆಂತಹ ಅಸಂಖ್ಯಾತ ವಿಷಯಗಳು, ಸಮಸ್ಯೆಗಳು ಭಾಗಿಯಾಗಿದ್ದರೂ, ಅವೆಲ್ಲ ಒಂದು ಸರಳವಾದ, ತರ್ಕಬದ್ಧವಾದ ಕೆಲವೇ ಮೂಲಕಾರಣಗಳ ಮೂಲಕ ಅರ್ಥೈಸಬಲ್ಲ, ನಿಯಮಿತ ವ್ಯವಸ್ಥೆಯಲ್ಲಿ, ದೇಶಕಾಲಾನುಸಾರವಾಗಿ ಬದ್ಧವಾಗಿರುತ್ತವೆ.

ಈ ಸೂತ್ರಗಳೆಲ್ಲ ವೈಜ್ಞಾನಿಕತೆಯ ಆವರಣದಲ್ಲಿ ರಚನೆಗೊಂಡ ಸಿದ್ಧಾಂತಗಳಾದ್ದರಿಂದ, ಅವನ್ನು ಆದಷ್ಟುಮಟ್ಟಿಗೆ ವಿಚಾರವಾದದಲ್ಲಿ ಬಳಸುವುದಕ್ಕೆ ಯಾವ ಸಂದೇಹಗಳೂ ಇರಬೇಕಾಗಿಲ್ಲ.

ಅತಿಸರಳ ಕ್ರಿಯೆಯಿಂದ ವಸ್ತುಗಳಿಂದಲೇ ಪ್ರಾರಂಭವಾಗಿ, ಕೋಟ್ಯಂತರ ಸಾಧಾರಣ ಸಣ್ಣ ಪುಟ್ಟ ಹಂತಗಳಲ್ಲಿಯೆ ಬೆಳೆದು, ಕೋಟಿಗಟ್ಟಲೆ ವರ್ಷಗಳ ಕಡುವಿರೋಧ ಪರಿಸ್ಥಿತಿಗಳನ್ನೆದುರಿಸಿ ಸಂಪನ್ನವಾದ, ಲಕ್ಷವೈವಿಧ್ಯಮಯ, ಅಪಾರ ಜೀವಲೋಕದಂತಹ ಮಹತ್ಕಾರ್ಯ ಸಿದ್ಧಿಗೆ ಸಾಧಕವಾದ ಜೀವವಿಕಾಸದ ಪ್ರಕ್ರಿಯೆಯನ್ನು, ಈ ವೈಚಾರಿಕತೆಯ ಆಳವಿನಲ್ಲಿಯೆ ಅರ್ಥೈಸಲಾಗಿದೆಯೆಂದ ಮೇಲೆ, ಯಾವ ಸಮಸ್ಯೆಯ ವೈಚಾರಿಕ ಪರಿಹಾರಕ್ಕೂ ಸಹ ಇದಕ್ಕಿಂತ ಹೆಚ್ಚಿನದಾಗಲಿ, ಹೊರಗಿನದಾಗಲಿ ಎಂತಹುದರ ಆವಶ್ಯಕತೆಯೂ ಇರಲಿಕ್ಕಿಲ್ಲ.

ಈ ವೈಚಾರಿಕತೆಗಿಂತ ಹೆಚ್ಚು ಮೌಲ್ಯದ ನಮ್ಮ ಪೂರ್ವಜಸಂಪತ್ತು ಯಾವುದಿದೆ ? ಈ ಸಂಪತ್ತಿಲ್ಲದ ಮೇಲೆ ಬೇರೆಯ ಸಂಪತ್ತುಗಳ ಪ್ರಯೋಜನವಾದರೂ ಏನು ?

ಪ್ರಪಂಚದ ಹಿಂದಿನ, ಇಂದಿನ, ಯಾವ ದೈವಿಕ ಮತವೂ ವಿಚಾರವಾದವನ್ನು ಒಪ್ಪಿಕೊಳ್ಳುವುದಿಲ್ಲ. ಪ್ರತಿಮತವೂ ತನ್ನದೇ ಕೆಲವು ಅನುಭಾವಸಿದ್ಧವಲ್ಲದ, ಕಾಲ್ಪನಿಕ ತತ್ವಗಳನ್ನೋ ನೀತಿಗಳನ್ನೋ ಮೂಲ ಪ್ರಮಾಣಗಳೆಂದಿಟ್ಟುಕೊಂಡು ತನ್ನದೇ ಪರಂಪರೆಯನ್ನು ಬೆಳೆಸುತ್ತದೆ. ವಿಚಾರವಾದಕ್ಕೆ ಪೂರ್ಣವಿರುದ್ಧವಾಗಿರುವ ಈ 'ಆಗಮ ಪ್ರಾಮಾಣ್ಯ', ಎಲ್ಲ ಮತಗಳ ಮುಖ್ಯಲಕ್ಷಣ. ಈ ಅವೈಜ್ಞಾನಿಕ, ಅವೈಚಾರಿಕ ವಿತರ್ಕವನ್ನು ಬಳಸಿಕೊಳ್ಳತೊಡಗಿದರೆ, ಅಸತ್ಯಗಳ ಸರಣಿ ಶಾಖೋಪಶಾಖೆಗಳಾಗಿ ಹೇಗೆ ಬೆಳೆಯ ಬಹುದು ಎಂಬುದನ್ನು ಮತೀಯ ಸಾಹಿತ್ಯಗಳ ವೈಚಾರಿಕ ವಿಮರ್ಶೆಯಿಂದ ತಿಳಿದುಕೊಳ್ಳಬಹುದು. ಮಾನವವಿಕಾಸದ ಒಂದು ಮುಖ್ಯಧಾರೆಯಾಗಿದ್ದ ವ್ಯಕ್ತಿ-ವ್ಯಕ್ತಿ ನಡುವಣ ಬಾಂಧವ್ಯದ ವಿಷಯದಲ್ಲಿ ವೈಚಾರಿಕತೆಯನ್ನು ಬಹು ದೀರ್ಘಕಾಲ ನಿರಾಕರಿಸುತ್ತಲೇ ಬಂದದ್ದರಿಂದ, ಪ್ರಪಂಚದ ಬಹು ದೇಶಗಳಲ್ಲಿ ಉಂಟಾದ ಸಾಮಾಜಿಕ ಪೀಡೆಗಳ ಮತ್ತು ಪಿಡುಗುಗಳ ಮೂಲಗಳು ಈಗ ಅರಿವಾಗುತ್ತಿವೆ. ಹಾಗೂ ಇನ್ನೊಂದು ಧಾರೆಯಾಗಿದ್ದ ವ್ಯಕ್ತಿ-ಪರಿಸರ ನಡುವಣ ಸಂಬಂಧದ ವಿಚಾರಗಳಲ್ಲಿ ವೈಚಾರಿಕತೆಯನ್ನು ಸಾಕಷ್ಟು ಉಳಿಸಿಕೊಂಡದ್ದರಿಂದ ತಂತ್ರಜ್ಞಾನ ಮತ್ತು ವಿಜ್ಞಾನ ಶೀಘ್ರವಾಗಿ ವೃದ್ಧಿಗೊಂಡದ್ದೂ ಗಮನೀಯವೇ. (ವಿಜ್ಞಾನವನ್ನು ಅಲ್ಲಗಳೆಯುವ ಪ್ರಯತ್ನವನ್ನು ಮತಗಳು ಮಾಡಲಿಲ್ಲವೆಂದಲ್ಲ) ಈ ಎರಡು ಸಂಗತಿಗಳ ವೈಚಾರಿಕ ವಿಶ್ಲೇಷಣೆ ಮಾಡಿದಾಗ, ಇಂದಿನ ವಿಚಾರ ಸಾಹಿತ್ಯದ ಸಾಮಾಜಿಕ ಪಾತ್ರದ ಜಾಡು ಸಿಕ್ಕುತ್ತದೆ. ಇಂದಿನ ವಿಚಾರವಾದ, ಸಾಮಾಜಿಕ ಸಮಸ್ಯೆಗಳನ್ನು ಮತ್ತು ಪರಿಹಾರಗಳನ್ನು ತೋರಿಸಿಕೊಟ್ಟಿದ್ದಾದರೆ, ಆಗ, ವೈಚಾರಿಕತೆಯ ಮೌಲ್ಯಮಾಪನವೂ ಆಗುತ್ತದೆ.

ಈಗ ಇಂದಿನ ಎಲ್ಲ ದೇಶಗಳ ಪ್ರದೇಶಗಳ ವಿಚಾರಸಾಹಿತ್ಯಗಳಲ್ಲಿ ಪ್ರಾರಂಭವಾಗಿರುವುದು ಇಂತಹ ಕಾರ್ಯವೇ.

**ಇಂದಿನ ವಿಚಾರಸಾಹಿತ್ಯದ ಸಾಮಾಜಿಕ ಪಾತ್ರಗಳು**

ಹಿಂದೆ, ಭಾಷೆ ಸಾಕಷ್ಟು ಬೆಳೆದಾದ ನಂತರದ ಮೊದಲನೆಯ ಸಂಚಯಿತ ಉತ್ಪನ್ನವೆಂದರೆ, ಊಹಾಕಥೆಗಳು (ಮೈಥಾಲಜಿ). ಮನುಷ್ಯ, ಸ್ವಭಾವತಃ ವಿಚಾರವಂತನಾದರೂ, ಆ ಕಾಲದಲ್ಲಿ, ಪರಿಸರದ ಮೇಲೆ ತನ್ನ ಅವಲಂಬನೆಯನ್ನು, ತನ್ನ ನಿಯಂತ್ರಣವಿಲ್ಲದ್ದನ್ನು ಒಂದು ಸರಳ 'ವಿಧಿ'ಯೆಂದು ಅರಿತುಕೊಂಡಿದ್ದ. ಸಂಘಜೀವನ ಸಂಕೀರ್ಣವಾಗುತ್ತ ಹೋದಹಾಗೆ, ಅವನಿಗೆ ಪರೋಕ್ಷವಾಗಿ ನಡೆಯುತ್ತಿದ್ದ ಬಹಳ ಕ್ರಿಯೆಗಳು ಮತ್ತು ಅನೇಕ ಅರ್ಥವಾಗದೆ ಹೋದ ಆಶೆ-ನಿರಾಶೆಗಳಿಂದ ಸೃಷ್ಟಿಗೊಂಡ ಭ್ರಮೆಗಳು, ವಿಧಿಯ 'ವಿಲಾಸ'ದ ಕಲ್ಪನೆಯನ್ನು ಉಂಟುಮಾಡಿರಬೇಕು. ಹೀಗೆ ಅವನು ಈ ರಹಸ್ಯ ಅದ್ಭುತಗಳನ್ನೆಲ್ಲ ಬಳಸಿ ಆವಿಷ್ಕರಿಸಿದ 'ವಿಧಿವಿಲಾಸಗಳ ನಾಯಕರೇ' ದೇವತೆಗಳು. ಆ ಕಟ್ಟುಕತೆಗಳ ಜನಾಕರ್ಷಣೆ ಅವುಗಳಿಗೆ ಒಂದು ಸಾಹಿತ್ಯರೂಪವನ್ನು ಕೊಟ್ಟಿರಬೇಕು. ಬಹಳಷ್ಟು ಪ್ರದೇಶಗಳ ಇಂತಹ ಸಮಾಜಗಳಲ್ಲಿ ಒಂದು ತತ್ವಾಧಾರಿತ ದೈವದ ಸೃಷ್ಟಿಯಾದಾಗ ಈ ದೇವತೆಗಳ ಅಂದರೆ ಈ ಪುರಾಣ ಪುರುಷರ ಉಚ್ಚಾಟನೆ ಆಗಿಹೋಯಿತು. ಭಾರತದ ಸಮಾಜದಲ್ಲಿ ಮಾತ್ರ, ಮಿಕ್ಕವರಿಗಿಂತ ಹೆಚ್ಚು ತಥ್ಯದ ತತ್ವಗಳಿಂದ ಏಕೈಕ ದೈವದ ಕಲ್ಪನೆ ಸೃಷ್ಟಿಯಾದರೂ, ಆ ದೇವತೆಗಳು ಇನ್ನೂ ರಾರಾಜಿಸು

ಡಾ॥ ಎಂ. ಎಸ್. ಕೇಶವರಾವ್

**ವಿಚಾರ ಸಾಹಿತ್ಯದ ಎರಡು ಆಕರಗಳಾದ ವಿಚಾರಶೀಲತೆ ಮತ್ತು ಭಾಷೆ ಇವುಗಳ ನೆಲೆ, ಇದುವರೆಗೂ ಸಂಕ್ಷಿಪ್ತವಾಗಿ ಚರ್ಚಿಸಿದ ಹಾಗಿದ್ದವೆಂದುಕೊಳ್ಳಬಹುದು. ಆದರೆ, ಇಂದಿನ ವಿಚಾರಸಾಹಿತ್ಯದ ನೆಲೆ, ನಮ್ಮ 'ವಿಚಾರವಾದ ಮತ್ತು ವೈಚಾರಿಕತೆ' ಇವುಗಳ ಜನಸಾಮಾನ್ಯ ಅರ್ಥಗಳಲ್ಲಿ ಅಡಕಗೊಂಡಿದೆ. ಆದರೂ ಲಕ್ಷಾಂತರ ವರ್ಷಗಳಿಂದ ಬೆಳದುಬಂದ, ಜೀವವಿಜ್ಞಾನದಿಂದ ತಿಳಿದುಬಂದ, ಹಿಂದಿನ ನೆಲೆಗಳಿಗೂ ಇಂದಿನ ನೆಲೆಗಳಿಗೂ ನೇರ ಸಂಬಂಧವನ್ನು ಸುಲಭವಾಗಿ ಕಾಣಬಹುದು. ನಾವು ಇಂದು ವಿಚಾರವಾದ ಎಂದು ಯಾವ ನಿಲುವಿಗೆ, ವೈಚಾರಿಕತೆ ಎಂದು ಯಾವ ವರ್ತನೆಗೆ ಹೇಳುತ್ತೇವೆಯೊ ಅವು ನಮಗೆ ನಮ್ಮ ಇತಿಹಾಸದ ತೊಡಕುಗಳಲ್ಲಿ ಸಿಲುಕಿ ಪಕ್ವವಾಗಿ ಬಂದಿರುವ ಮಾನವ ಮನೋಧರ್ಮದ ಸ್ಥಿತಿಗಳು.**



'ಪುಸ್ತಕ ಪ್ರಕಾಶನ' ಕನ್ನಡ ಪ್ರಕಾಶನ ಕ್ಷೇತ್ರದಲ್ಲಿ ಒಂದು ಅಸದೃಶ ಸಾಹಸ. ವಸ್ತು, ವಿಷಯ, ಪುಸ್ತಕದ ಕಾಗದ, ರಕ್ಷಾಪುಟ ವಿನ್ಯಾಸ, ಶ್ರೇಷ್ಠ ಮುದ್ರಣ, ಓದುಗರಿಗೆ ವಿಚಾರ ತಲುಪಿಸುವ ಗದ್ಯಶೈಲಿ, ಪ್ರತಿಯೊಂದರಲ್ಲೂ ಜಗತ್ತಿನ ಅತ್ಯುತ್ತಮ ಪ್ರಕಾಶನಗಳಿಗೆ ಸರಿಗಟ್ಟುವ ಸಾಧನೆ ಮಾಡಬೇಕೆಂಬ ನಿರ್ಧಾರದಿಂದ ನಾಡಿನ ಅಗ್ರಮಾನ್ಯ ಲೇಖಕರ, ಕಲಾವಿದರ, ತಂತ್ರಜ್ಞರ, ಮುದ್ರಕರ ಅವಿರತ ಶ್ರಮ, ಸಾಧನೆ, ಸಹಕಾರಗಳೊಂದಿಗೆ ಹೊರಟಿರುವ ಸಾಹಸ. ನೆನಪಿರಲಿ 'ಪುಸ್ತಕ ಪ್ರಕಾಶನ' ಕೇವಲ ಪುಸ್ತಕಗಳನ್ನು ಬಿಕರಿ ಮಾಡುವ ವ್ಯಾಪಾರಿ ಸಂಸ್ಥೆಯಲ್ಲ. ಅದೊಂದು ಗುರಿ ಮತ್ತು ಆದರ್ಶಗಳನ್ನುಳ್ಳ ಉದ್ದೇಶಪೂರ್ವಕ ಸಾಹಸ.

# ಪುಸ್ತಕಗಳ ಪಟ್ಟಿ

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ**

| | |
|---|---|
| 1. ಕಿರಗೂರಿನ ಗಯ್ಯಾಳಿಗಳು | 60-00 |
| 2. ಕರ್ವಾಲೋ | 66-00 |
| 3. ಚಿದಂಬರ ರಹಸ್ಯ | 117-00 |
| 4. ಸಹಜ ಕೃಷಿ | 36-00 |
| 5. ಪರಿಸರದ ಕತೆ | 66-00 |
| 6. ಮಿಸ್ಸಿಂಗ್ ಲಿಂಕ್ | 60-00 |
| 7. ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ | 72-00 |
| 8. ಜುಗಾರಿ ಕ್ರಾಸ್ | 117-00 |
| 9. ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು | 45-00 |
| 10. ಫ್ಲೈಯಿಂಗ್ ಸಾಸರ್ಸ್ ಭಾಗ ೧,೨ | ತಲಾ 45-00 |
| 11. ಕಾಡಿನ ಕತೆಗಳು ೧, ೨, ೩, ೪ | ತಲಾ 45-00 |
| 12. ರುದ್ರಪ್ರಯಾಗದ ಭಯಾನಕ ನರಭಕ್ಷಕ | 66-00 |
| 13. ಕನ್ನಡನಾಡಿನ ಹಕ್ಕಿಗಳು ೧ - ಮಿಂಚುಳ್ಳಿ | 72-00 |
| 14. ಕನ್ನಡನಾಡಿನ ಹಕ್ಕಿಗಳು ೨ - ಹೆಜ್ಜೆ ಮೂಡದ ಹಾದಿ | 57-00 |
| 15. ಹಕ್ಕಿ ಪುಕ್ಕ (ಕನ್ನಡನಾಡಿನ ಹಕ್ಕಿಗಳ ಪುಸ್ತಕ, ಪಕ್ಷಿವೀಕ್ಷಕರ ಕೈಪಿಡಿ) | 300-00 |
| 16. ಅಣ್ಣನ ನೆನಪು | 120-00 |
| 17. ಅಬಚೂರಿನ ಪೋಸ್ಟಾಫೀಸು (ಕಥಾ ಸಂಕಲನ) | 63-00 |
| 18. ಹುಲಿಯೂರಿನ ಸರಹದ್ದು ಮತ್ತು ನಿಗೂಢ ಮನುಷ್ಯರು | 66-00 |

**ಶ್ರೀ ತೇಜಸ್ವಿಯವರ ಮಿಲನಿಯಂ ಸರಣಿಯ ಪುಸ್ತಕಗಳು**

| | |
|---|---|
| 19. ಹುಡುಕಾಟ - ಮಿಲನಿಯಮ್ ೧ | 45-00 |
| 20. ಜೀವನ ಸಂಗ್ರಾಮ - ಮಿಲನಿಯಮ್ ೨ | 45-00 |
| 21. ಪೆಸಿಫಿಕ್ ದ್ವೀಪಗಳು - ಮಿಲನಿಯಮ್ ೩ | 45-00 |
| 22. ಚಂದ್ರನ ಚೂರು - ಮಿಲನಿಯಮ್ ೪ | 45-00 |
| 23. ನೆರೆಹೊರೆಯ ಗೆಳೆಯರು - ಮಿಲನಿಯಮ್ ೫ | 45-00 |
| 24. ಮಹಾಯುದ್ಧ-೧,೨,೩ - ಮಿಲನಿಯಮ್ ೬,೭,೮ | ತಲಾ 45-00 |
| 25. ದೇಶವಿದೇಶ-೧,೨,೩,೪-ಮಿಲನಿಯಮ್ ೯,೧೦,೧೧,೧೨ | ತಲಾ 45-00 |
| 26. ವಿಸ್ಮಯ ವಿಶ್ವ -೧ - ಮಿಲನಿಯಮ್ ೧೩ | 45-00 |
| 27. ಮಹಾ ಪಲಾಯನ - ಮಿಲನಿಯಮ್ ೧೪ | 45-00 |
| 28. ವಿಸ್ಮಯ ವಿಶ್ವ -೨ - ಮಿಲನಿಯಮ್ ೧೫ | 45-00 |
| 29. ಅಡ್ವೆಂಚರ್ - ಮಿಲನಿಯಮ್ ೧೬ | 45-00 |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ ಹಾಗೂ ಶ್ರೀ ಪ್ರದೀಪ ಕೆಂಜಿಗೆ**

| | |
|---|---|
| 30. ವಿಸ್ಮಯ ೧, ೨, ೩ | ತಲಾ 45-00 |
| 31. ಪ್ಯಾಪಿಲಾನ್ ೧, ೨ | ತಲಾ 132-00 |

**ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ ಹಾಗೂ ಶ್ರೀ ಬೆಳವಾಡಿ**

| | |
|---|---|
| 32. ಕೀಟಗಳ ವಿಶ್ವಕೋಶ (೧) ನಡೆಯುವ ಕಡ್ಡಿ! ಹಾರುವ ಎಲೆ! | 45-00 |

**ಶ್ರೀ ಪ್ರದೀಪ ಕೆಂಜಿಗೆ**

| | |
|---|---|
| 33. ಬರ್ಮುಡಾ ಟ್ರ್ಯಾಂಗಲ್ | 45-00 |
| 34. ಅದ್ಭುತಯಾನ | 60-00 |

**ಶ್ರೀ ಜಿ. ಪಿ. ಬಸವರಾಜು**

| | |
|---|---|
| 35. ಭೂಕಂಪದ ಅಂತರಂಗ | 40-00 |

**ವಿದ್ವಾನ್ ಶ್ರೀ ಕೊಳಂಬೆ ಪುಟ್ಟಣ್ಣ ಗೌಡರು**

| | |
|---|---|
| 36. ಅಚ್ಚಗನ್ನಡ ನುಡಿಕೋಶ | 360-00 |

**ಶ್ರೀ ಎಂ. ಶಿವಕುಮಾರ್**

| | |
|---|---|
| 37. ಸೈಕಲ್ ವಾಲ | 45-00 |
| 38. ಯೋಗಿ ಮತ್ತು ಅಪ್ಸರೆ | 66-00 |
| 39. ಕಂಪ್ಯೂಟರ್ ಕಲಿಯಿರಿ | 108-00 |

**ಶ್ರೀ ನರೇಂದ್ರ ರೈ ದೇರ್ಲ**

| | |
|---|---|
| 40. ಸಾವಯವ ಕೃಷಿ | 36-00 |

**ಲಾರಾ ಇಂಗಲ್ಸ್ ವೈಲ್ಡರ್, ಅನು : ಶ್ರೀ ಎಸ್. ಅನಂತನಾರಾಯಣ**

| | |
|---|---|
| 41. ದೊಡ್ಡ ಕಾಡಿನಲ್ಲಿ ಪುಟ್ಟ ಮನೆ ಭಾಗ -೧ | 60-00 |
| 42. ಹುಲ್ಲುಗಾವಲಿನಲ್ಲಿ ಪುಟ್ಟ ಮನೆ ಭಾಗ -೨ | 75-00 |
| 43. ರೈತರ ಹುಡುಗ ಭಾಗ-೩ | 75-00 |
| 44. ಪ್ಲಮ್ ನದಿಯ ತೀರದಲ್ಲಿ - ಭಾಗ ೪ | 75-00 |
| 45. ಸಿಲ್ವರ್ ಲೇಕ್ ದಡದಲ್ಲಿ - ಭಾಗ ೫ | 75-00 |
| 46. ಚಳಿಯ ಸುಳಿಯಲ್ಲಿ - ಭಾಗ ೬ | 75-00 |
| 47. ಹುಲ್ಲುಗಾವಲಿನಲ್ಲಿ ಪುಟ್ಟ ಪಟ್ಟಣ - ಭಾಗ ೭ | 75-00 |
| 48. ಆ ಸೊಗಸಿನ ಬಂಗಾರದ ದಿನಗಳು - ಭಾಗ ೮ | 75-00 |

**ಲಾರಾ ಇಂಗಲ್ಸ್ ವೈಲ್ಡರ್, ಅನು : ಶ್ರೀಮತಿ ಕೆ. ಪಿ. ಈಶಾನ್ಯೆ**

| | |
|---|---|
| 49. ಮೊದಲ ನಾಲ್ಕು ವರ್ಷಗಳು - ಭಾಗ ೯ | 51-00 |

**ಶ್ರೀ ಆಲನಹಳ್ಳಿ ಶ್ರೀಕೃಷ್ಣ**

| | |
|---|---|
| 50. ಗೋಡೆ (ನೀಳ್ಗತೆಗಳ ಸಂಕಲನ) | 66-00 |

**ಶ್ರೀ ಕೃಪಾಕರ ಹಾಗೂ ಶ್ರೀ ಸೇನಾನಿ**

| | |
|---|---|
| 51. ಸೆರೆಯಲ್ಲಿ ಕಳೆದ ಹದಿನಾಲ್ಕು ದಿನಗಳು | 93-00 |

**ಶ್ರೀ ಕೆ. ಎಂ. ಚಿಣ್ಣಪ್ಪ**

| | |
|---|---|
| 52. ಕಾಡಿನೊಳಗೊಂದು ಜೀವ - ೧, ೨, ೩ | ತಲಾ 45-00 |

**ಶ್ರೀ ದೇವನೂರ ಮಹಾದೇವ**

| | |
|---|---|
| 53. ಕುಸುಮ ಬಾಲೆ | 60-00 |

**ಡಾ. ಕೆ. ಸಿ. ಶಿವಾರೆಡ್ಡಿ**

| | |
|---|---|
| 54. ಯುಗದ ಕವಿ | 51-00 |

**ಡಾ. ಎಸ್. ಎಂ. ವೃಷಭೇಂದ್ರ ಸ್ವಾಮಿ**

| | |
|---|---|
| 55. ತರಗತಿಗಳಲ್ಲಿ ಕುವೆಂಪು : ತೌಲನಿಕ ಕಾವ್ಯ ಮೀಮಾಂಸೆ | 180-00 |

ವಿ. ಸೂ : ಕಚ್ಚಾ ಸಾಮಗ್ರಿಗಳ ಬೆಲೆ ವ್ಯತ್ಯಾಸವಾಗುವುದರಿಂದ ಹೊಸ ಆವೃತ್ತಿ ಬಿಡುಗಡೆಗೊಂಡಾಗ ಪುಸ್ತಕದ ಬೆಲೆಯಲ್ಲಿ ವ್ಯತ್ಯಾಸವಾಗುತ್ತದೆ.

**ಪುಸ್ತಕ ಪ್ರಕಾಶನ**

91, 9ನೇ ಮೇನ್, ಸರಸ್ವತಿಪುರಂ, ಮೈಸೂರು-570 009

ಫೋನ್ : 0821-2545774 bnsrama@sancharnet.in

ಪೋಸ್ಟ್ ಮುಖಾಂತರ ವ್ಯವಹರಿಸುವವರಿಗೆ

**ಪುಸ್ತಕ ಪ್ರಕಾಶನ**

ಪೋಸ್ಟ್ ಬಾಕ್ಸ್ 58, ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ - 577 132 ptejasvi@sancharnet.in

ತ್ತಿದ್ದಾರೆ. ವಿಚಾರ ಮಾಡುವವರಿಗೆ ಈ ಸಂಭವಗಳಿಗೆಲ್ಲ ಕಾರಣಗಳು ಸಿಕ್ಕುವುವು.

ಮತ್ತೆ ಶತಮಾನಗಳ ನಂತರ, ಅನೇಕ ದೇಶಗಳ ಜನರಲ್ಲಿ ಪರಿಸರ ಮತ್ತು ಸಂಘ ಜೀವನದ ಪರಿಸ್ಥಿತಿಗಳನ್ನು ನಿಯಮಿತಗೊಳಿಸಬಲ್ಲ ಆಶ್ವಾಸನೆ ಮೂಡಿದಾಗ, ವೈಚಾರಿಕತೆಯ ಪ್ರವೃತ್ತಿ ಮತ್ತೆ ತಲೆಯೆತ್ತಿತ್ತು. ಇತಿಹಾಸದಲ್ಲಿ ಇದೇ 'ರಿನೈಸಾನ್ಸ್-ಮರುಜಾಗೃತಿಯ ಕಾಲ' ಎಂದು ಗುರುತಿಸಲ್ಪಟ್ಟದ್ದು. ಇದರ ಮುನ್ನಡೆಯಲ್ಲಿಯೆ ಅನೇಕ ಕ್ರಾಂತಿಗಳು ಸಂಭವಿಸಿದವು. ಆ ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಹಿತ್ಯಕ ಮತ್ತು ಮತೀಯ ಕ್ರಾಂತಿಗಳೆಲ್ಲವೂ, ವಿಚಾರವಾದಿಗಳು ವೈಚಾರಿಕತೆಯನ್ನು ಜನಸಾಮಾನ್ಯವನ್ನಾಗಿ ಮಾಡಿದಾಗ ಆದ ಕ್ರಾಂತಿಗಳೇ. ಇದು, ಎಲ್ಲ ವಿಚಾರಸಾಹಿತಿಗಳು ಗಮನಿಸಬೇಕಾದ ವಿಷಯ.

ಈಚೆಗೆ, ಕನ್ನಡಸಾಹಿತ್ಯದಲ್ಲಿ ವೈಚಾರಿಕತೆಯ ಒಂದು ಮುಖ್ಯಾಂಶವಾದ ವಾಸ್ತವಿಕತೆಯು ಕಥನಸಾಹಿತ್ಯದಲ್ಲಿ (ಕತೆ, ಕಾದಂಬರಿಗಳಲ್ಲಿ) ವಾಸ್ತವತಾವಾದವಾಗಿ ದೃಢಗೊಳ್ಳ ತೊಡಗಿತು. ಮೊದಲಲ್ಲಿ, ವಿಚಾರವಾದದ ಹೊಸ ಪರಿಭಾಷೆಗೆ ಒಪ್ಪದವರಲ್ಲೂ ಅನೇಕರು ವಾಸ್ತವತಾವಾದಿ ಸಾಹಿತ್ಯದ ಯಶಸ್ವೀ ಮುಂದಾಳುಗಳಾದರು. 'ವ್ಯಕ್ತಿ ತನ್ನ ಬದುಕನ್ನು ತಾನೆ ನಿರ್ಮಿಸಿಕೊಳ್ಳಬಲ್ಲ ಮತ್ತು ನಿರ್ಮಿಸಿಕೊಳ್ಳಬೇಕು' ಎಂಬುದಷ್ಟೆ ನಿಲುವು ಆಗ ಸಾಕಾಗಿತ್ತು, ವೈಚಾರಿಕತೆಯನ್ನು ಪುನಶ್ಚೇತನಗೊಳಿಸಲಿಕ್ಕೆ. ನಿಜವಾಗಿಯೂ ಆ ವಿಶ್ವಾಸ ಮೂಡಿದುದು ಅಲ್ಪಸ್ವಲ್ಪ ಆರ್ಥಿಕ ಸ್ಥಿಮಿತ ಮತ್ತು ವಿಜ್ಞಾನಕ್ಕೆ ಸಿಕ್ಕುತ್ತಿದ್ದ ಸಫಲತೆ ಮತ್ತು ಮನ್ನಣೆಗಳ ಫಲವಾಗಿಯೆ – ಅದೂ ಮೊದಲು ಮೊದಲಲ್ಲಿ ಬರಿಯ ಮಧ್ಯಮ ವರ್ಗ ದವರಿಗೆ ಮಾತ್ರ. ಹೊರದೇಶದ ಸಾಹಿತ್ಯಗಳ ಪ್ರಭಾವವನ್ನೂ ಇಲ್ಲಿ ಇಲ್ಲವೆನ್ನುವಹಾಗಿಲ್ಲ. ಹಿಂದಿನ ಜನ್ಮಫಲ ಮತ್ತು ಹುಟ್ಟು ಜಾತಿ ಇವೆರಡರದೂ ಮೇಲು-ಕೀಳುಗಳ ಹೊರೆ ಹೊತ್ತುಕೊಂಡೇ ಹುಟ್ಟುತ್ತಿದ್ದ ಭಾರತೀಯರಿಗೆ ವ್ಯಕ್ತಿ ಸ್ವಾತಂತ್ರ್ಯ ಮತ್ತು ಸರಿಸಮಾನತೆಯ ಪಾಠಗಳು ಸಹ ಹೊರದೇಶಗಳಿಂದಲೇ ಬರಬೇಕಾಯಿತು. ಸೆರೆಗೆ ಹಾಕಿ, ಹೊಡೆದು ಬಡಿದು, ಛೀಮಾರಿ ಹಾಕಿ, ಅರ್ಧ ಸಂಪತ್ತನ್ನು ಮುಟ್ಟುಗೋಲು ಹಾಕಿದ ಮೇಲೆಯೆ, ನಾವು ಮಾನವವಿಕಾಸದಿಂದ ಪಡೆದ ಈ ಪ್ರವೃತ್ತಿಗಳನ್ನು ಅನುಪಯೋಗದ ಕಾರಣದಿಂದ ನಶಿಸಿಹೋಗುವ ಮೊದಲೇ ಮತ್ತೆ ಕಲಿತದ್ದು. ಭಾರತದ ಮತೀಯ ಸಂಸ್ಕೃತಿಗಳಲ್ಲೆಲ್ಲೂ ಇಂತಹ ವಾದಗಳು ಹುಟ್ಟುವಂತಿರಲಿಲ್ಲ. ಜಾತಿಮತ ಸುಧಾರಕರೆಲ್ಲ ಭಕ್ತಿ ಪಂಥೀಯರು ಆದ್ದರಿಂದ, ರೋಗದ ಉಲ್ಬಣ ಚಿಹ್ನೆಗಳ ಶಮನಕ್ಕೆ ಅವರು ಯತ್ನಿಸಿದರೂ, ರೋಗನಿವಾರಣೆ ಅವರಿಗೆ ಅಶಕ್ಯವಾಗಿತ್ತು.

ಹೀಗೆ ವಿಚಾರಸಾಹಿತ್ಯ ಬೆಳೆದದ್ದು ವಾಸ್ತವಿಕ ಸಾಹಿತ್ಯವನ್ನು ಅನುಸರಿಸಿಯೆ. ಹಾಗಾದರೆ ವಿಚಾರಸಾಹಿತ್ಯದ ಕೆಲಸಗಳೇನು ? ಏನಿರಬೇಕು ? ಒಂದು ಆದರ್ಶದ ಮಾದರಿಯನ್ನಿಟ್ಟು ಕೊಂಡು ನೋಡೋಣ. ವಿಚಾರಸಾಹಿತ್ಯವು ಜನಪರ ವೇದಿಕೆಗಳಾದ ಕಥಾಸಾಹಿತ್ಯ, ಪತ್ರಿಕಾಸಾಹಿತ್ಯ, ದಿನಪತ್ರಿಕೆಗಳು, ಜನಮೇಳಗಳ ಚಳವಳಿಗಳು ಮುಂತಾದವುಗಳಲ್ಲಿ ಸಂಘಟಿತಗೊಂಡ ಸದ್ಯದ ಬದುಕಿನ ವಾಸ್ತವಿಕ ಸವಾಲುಗಳನ್ನು ಒಂದೊಂದಾಗಿ ಆರಿಸಿ ಕೊಳ್ಳುತ್ತದೆ. ಸಂಬಂಧಿತ ವಿಜ್ಞಾನ, ತಂತ್ರಜ್ಞಾನ, ಇತಿಹಾಸ ಮುಂತಾದ ಹಲವು ಸಮಾಜ ಶಾಸ್ತ್ರಗಳಿಂದ ತಾನು ನಿರಂತರವಾಗಿ ಪಡೆಯುತ್ತಿರುವ ಮಾಹಿತಿ ಮತ್ತು ವಿಧಾನಗಳನ್ನು ಉಪಯೋಗಿಸಿ, ವೈಚಾರಿಕತೆಯ ಚೌಕಟ್ಟಿನೊಳಗಡೆಯೆ ವಿಚಾರ ಮಾಡಿ, ಪರಿಹಾರಾತ್ಮಕ ಸತ್ಯಗಳನ್ನು ಸಂಸ್ಕರಿಸಿ, ಸರ್ವರಿಗೂ ಉಪಯೋಗವಾಗುವಂತೆ ಪ್ರಕಟಿಸುತ್ತದೆ; ಒಂದು ವಿಜ್ಞಾನತಂಡ, ಒಂದು ಕಾಲ-ದೇಶ-ಜನ ನಿರ್ದಿಷ್ಟ ಪ್ರಯೋಗದ ವೀಕ್ಷಣೆಗಳನ್ನು ವೈಜ್ಞಾನಿಕವಾಗಿ ಸಂಸ್ಕರಿಸಿ, ಪ್ರಮಾಣಿತ ಸಿದ್ಧಾಂತವನ್ನು ಪ್ರಕಟಿಸುವಂತೆಯೆ. ಈ ಸಮಸ್ಯೆ ಪರಿಹಾರ ಸಂವಾದ ಅನೇಕ ಬಾರಿ ಹಿಂದಕ್ಕೂ ಮುಂದಕ್ಕೂ ವಿಚಾರಪ್ರಕ್ರಿಯೆಯಲ್ಲಿ ಹಾದುಹೋಗಿ ಜನಮತವನ್ನು ಸಮೀಪಿಸಿ ಸಂಸ್ಕರಣಗೊಂಡಾಗಲೆ, ಒಂದು ಅರ್ಥ ಪೂರ್ಣ, ಸಮಾಧಾನಕರ ಪರಿಹಾರದ ಯೋಜನೆ ಸಜ್ಜುಗೊಳ್ಳುವುದು ಸಾಧ್ಯ. ಈ ಎಲ್ಲ ಕಾರ್ಯವು ಸಾರ್ವಜನಿಕವಾಗಿ ಪಾರದರ್ಶಕವಾಗಿರುವುದು ಅತ್ಯವಶ್ಯಕವಾದ್ದರಿಂದ, ವಿಚಾರಸಾಹಿತ್ಯವೊಂದೇ ಇಂತಹ ಸರ್ವಜನಭಾಗಿ ಮಾಧ್ಯಮವಾಗುವುದು ಸಾಧ್ಯ.

ಎಲ್ಲ ಸಾಹಿತ್ಯಗಳಿಗಿಂತ ಹೆಚ್ಚು ವಿಶಾಲವಾದ ಮತ್ತು ಜನಪ್ರಿಯವಾದ ಕಥನಸಾಹಿತ್ಯ, ವಿಚಾರಸಾಹಿತ್ಯಕ್ಕೆ ಯಾವುದೊ ಸಮಸ್ಯೆಯ ಮೊದಮೊದಲಿನ ಕೇಸ್-ಅಧ್ಯಯನವಾಗಿ (ದಾಖಲಿತ ದತ್ತಾಂಶವಾಗಿ), ನಂತರ ಕಡೆಕಡೆಯ ಸಿಹಿಕಹಿ ಪರಿಹಾರದ ಜನಪ್ರಿಯ ವಿನಿಯೋಗವಾಗಿ ಕೆಲಸ ಮಾಡುತ್ತದೆ; ಇದರಿಂದ ತನ್ನ ಸಾರ್ಥಕತೆಯನ್ನೂ ಹೆಚ್ಚಿಸಿಕೊಳ್ಳುತ್ತದೆ.

ಹೀಗೆ ಸಾಮಾಜಿಕ ಸಮಸ್ಯೆಗಳ ಪರಿಹಾರಗಳನ್ನು ಹುಡುಕಿಕೊಡುವ ಕಾರ್ಯ ವಿಚಾರ ಸಾಹಿತ್ಯದಲ್ಲಿ ಈಗಾಗಲೆ ಪ್ರಾರಂಭವಾಗಿದೆ. ರಾಜಕೀಯ ಪರಿಹಾರಗಳನ್ನು ಹುಡುಕುವುದ ರಲ್ಲಿಯೂ ವಿಚಾರಸಾಹಿತ್ಯ, ಮಹತ್ವದ ಸಹಾಯ ಮಾಡಬಲ್ಲದು – ತನ್ನ ಅಳವಿನಲ್ಲಿ ಸಮಾಜದ ಜೊತೆಗೆ, ಸರ್ಕಾರವೆಂಬ ಘಟಕವನ್ನೂ ತುಂಬಿಕೊಂಡಾಗ.

**ರಾಜಕಾರಣದಲ್ಲಿ ವಿಚಾರಸಾಹಿತ್ಯದ ಪಾತ್ರ**

ಮಾನವವಿಕಾಸ, ಸಂಘಜೀವನವನ್ನು ಸುಗಮಗೊಳಿಸುವುದಕ್ಕಾಗಿ, ಇತಿಹಾಸಕ್ಕೂ ಬಹಳ ಹಿಂದಿನ ಕಾಲದಿಂದಲೂ, ಮಾಡುತ್ತಾ ಬಂದಿರುವ ನೂರಾರು ಪ್ರಯೋಗಗಳಲ್ಲಿ ಇತ್ತೀಚೆಗೆ ಸಿದ್ಧವಾಗಿರುವುದು ಪ್ರಜಾಸತ್ತಾತ್ಮಕ ರಾಜಕೀಯ (ಡೆಮಾಕ್ರಸಿ). ಆದರೆ, ಈ ದಿನಗಳಲ್ಲಿ, ಪ್ರಜಾಸರ್ಕಾರದಲ್ಲಿ ಜನಪ್ರತಿನಿಧಿಗಳಾಗಿರುವ ರಾಜಕಾರಣಿಗಳು ಜನ ವಿಚಾರಗಳನ್ನು ಬಿಂಬಿಸಿ, ಜನಪರ ವಿಚಾರವನ್ನು ಮಾಡಬಲ್ಲವರಾಗಿರುತ್ತಾರೆಂಬ ವಿಶ್ವಾಸ ಉಪಯೋಗಕ್ಕೆ ಬರುತ್ತಿಲ್ಲ. ಅವರಿಂದ ಇಷ್ಟೊಂದು ಸಾಮರ್ಥ್ಯವನ್ನು ಅಪೇಕ್ಷಿಸುವುದು ತಪ್ಪು. ಹಲವು ಮುಖ್ಯ ವಿಷಯಗಳಲ್ಲಾದರೂ ಜನರ ವಿಚಾರ ಪ್ರಾತಿನಿಧಿಕವಾಗಿ, ಸ್ಫುಟವಾಗಿ ವ್ಯಕ್ತಗೊಂಡಿದ್ದರೆ, ಅಂದರೆ ಜನಾದೇಶವೊಂದಿದ್ದರೆ, ಜನಪರ ರಾಜಕೀಯ ಶಕ್ಯವಾಗುತ್ತದೆ. ಈ ಜನಾದೇಶದ ನಿರ್ಮಾಣ, ವಿಚಾರಸಾಹಿತ್ಯದಲ್ಲಿ ಸಾಧ್ಯ; ಸಾಮಾಜಿಕ ಪಾತ್ರವನ್ನು ನಿರ್ವಹಿಸುವ ಮಾದರಿಯಲ್ಲಿಯೆ ರಾಜಕೀಯ ಪಾತ್ರವನ್ನು ಅದು ನಿರ್ವಹಿಸ ಬಲ್ಲದು. ಕೆಲವು ದೇಶಗಳಲ್ಲಿ ಇಂತಹ ವಿಚಾರಸಾಹಿತ್ಯ ಪ್ರಕಟವಾಗುತ್ತಿದೆ. ಹಲವು ರಾಜಕಾರಣಿಗಳು ಅಂತಹ ಸಾಹಿತ್ಯದ ಉಪಯೋಗ ಮಾಡಿಕೊಳ್ಳುವ ಪದ್ಧತಿಯನ್ನು ಬೆಳೆಸಿ ಕೊಳ್ಳುತ್ತಿದ್ದಾರೆ. ಅವರ ಮತ್ತು ಪಕ್ಷಗಳ ಪ್ರಣಾಳಿಕೆಗಳು ಆಗ ಹೆಚ್ಚು ಅರ್ಥ ಪಡೆಯುತ್ತವೆ ಮತ್ತು ಹೆಚ್ಚು ಪಾರದರ್ಶಕವಾಗುತ್ತವೆ; ಜನಗಳ ಪಾಲುದಾರಿಕೆಯೂ ಹೆಚ್ಚುತ್ತದೆ.

ಹಿಂದೆ ಮಾನವವಿಕಾಸ, ಸಂಘಜೀವನಕ್ಕೆ ನೆರವಾಗುವುದಕ್ಕೆ ಭಾಷೆಯನ್ನು ಬೆಳೆಯಿಸಿತು. ಇಂದಿನ ವಿಶೇಷಜ್ಞರ ಯುಗದಲ್ಲಿ, ವಿಜ್ಞಾನಿಗಳು ಇಂತಹ ಕೆಲಸಗಳನ್ನು ಮಾಡಿ ಕೊಡುತ್ತಿದ್ದಾರೆ. ಇಂದಿನ ಸಂಕೀರ್ಣ ರಾಜಕೀಯದ ಅನುಕೂಲಕ್ಕಾಗಿ, ಶೀಘ್ರಗತಿಯ ಮತ್ತು ಬೃಹತ್ ಪ್ರಮಾಣಗಳ ಮಾಹಿತಿ, ವಿಚಾರವಿನಿಮಯ ಮತ್ತು ಸಂಸ್ಕರಣಗಳ ಮಾಧ್ಯಮಗಳು, ಕಾರ್ಯಕ್ಕೆ ಮೊದಲೆ, ಸಿದ್ಧವಾಗಿವೆ. ಇಂದಿನ ವಿಚಾರಸಾಹಿತ್ಯ ಈ ಹೊಸ ಕಂಪ್ಯೂಟರ್ ಮಾಧ್ಯಮಗಳೊಡನೆ ಸಹಕರಿಸಿಯೆ ಬೆಳೆಯಬಲ್ಲದು, ಬೆಳೆಸಬಲ್ಲದು ಮತ್ತು ತನ್ನ ಕಾರ್ಯ ನಿರ್ವಹಿಸಬಲ್ಲದು.

ತನ್ನ ಒಂದು ಕಾರ್ಯ ವಿಸ್ತಾರವಾದಾಗ, ಕ್ರಿಯೆ ಮತ್ತು ಕ್ರಿಯಾಂಗಗಳನ್ನೂ ವಿಸ್ತರಿಸಿ ಕೊಳ್ಳುವುದು, ಜೀವವಿಕಾಸ ಮತ್ತು ಮಾನವವಿಕಾಸಗಳ ಮುಖ್ಯ ಲಕ್ಷಣ; – ಅದೂ ಹಂತ ಹಂತವಾಗಿಯೆ ಮತ್ತು ಪ್ರತಿಹಂತದಲ್ಲೂ ಸಾಕಷ್ಟು ಕಾರ್ಯಸಫಲತೆಯನ್ನು ಹೊಂದಿಸಿ ಕೊಳ್ಳುತ್ತಿದ್ದಂತೆಯೆ. ಇಂದಿನ ಸಫಲತೆಯೆ ನಾಳೆಯ ಸೃಷ್ಟಿ. ಏಕೆಂದರೆ, ಹೊರಗಿನದೇನೂ ಸೃಷ್ಟಿಯಾಗುವುದಿಲ್ಲ; ಅತಿಯಾಗಿ ಅನ್ಯವಾದುದೇನೂ, ಒಂದು ಜಟಿಲ ಸಂಕೀರ್ಣ ವ್ಯವಸ್ಥೆಯಲ್ಲಿ ಮೈಗೂಡುವುದಿಲ್ಲ. ವಿಕಾಸದ ಈ ಎಲ್ಲ ಗುಣಗಳೂ ವಿಚಾರಸಾಹಿತ್ಯದಲ್ಲಿ ಇರಬಹುದಾದವು; ಇರಬೇಕಾದವು. ಇದು ಗಮನಾರ್ಹ.

ಈ ಎಲ್ಲ ಸವಾಲುಗಳಿಗೂ ಮಹತ್ತರವಾದ ಮತ್ತು ಬಹಳ ಹೆಚ್ಚು ಕಷ್ಟದ ಸವಾಲು, ಭವಿಷ್ಯತ್ತಿಗೆ ಸ್ವಲ್ಪವಷ್ಟೆ ಇರುವ ಭೂಮಿಯ ಪರಿಸರ ಸಂಪತ್ತನ್ನು, ಸರ್ವಜೀವಹಿತಕ್ಕಾಗಿ ಭವಿಷ್ಯ ನಾಶವಾಗದಂತೆ, ಬಳಸಿಕೊಳ್ಳುವುದು. ಇದಕ್ಕೆ ಬೇಕಾಗುವ ವಿಶ್ವದಾದ್ಯಂತದ ಜನಸಮ್ಮತಿಯನ್ನು, ಜನಾದೇಶದ ನಿರೂಪಣೆ ಮತ್ತು ನಿರ್ವಹಣೆಗಳನ್ನು, ಜಗತ್ತಿನ ವಿಚಾರಸಾಹಿತ್ಯಗಳು ಈಗಿನಿಂದಲೆ ಮಾಡಬೇಕಾಗಿದೆ.

**ವಿಚಾರಸಾಹಿತ್ಯದ ಬೆಳೆವಣಿಗೆ**

ಸವಾಲುಗಳಿರುವುದು ಜನರಲ್ಲಿ, ಅವರ ಸಮಾಜದಲ್ಲಿ, ಅವರ ವಾಸ್ತವಿಕ ಸಮಸ್ಯೆ ಮತ್ತು ಅಪೇಕ್ಷೆಗಳಲ್ಲಿ, ಅದೂ ಸಮಗ್ರತೆಯಿಲ್ಲದೆ ಚದುರಿಹೋಗಿ. ಪರಿಹಾರಗಳಿರುವುದು ವಿಜ್ಞಾನ ತಂತ್ರಜ್ಞಾನಗಳಲ್ಲಿ ಮತ್ತು ಅವುಗಳ ಅನ್ವಯಗಳಾದ ವೈದ್ಯಕೀಯ, ಐತಿಹಾಸಿಕ, ಶೈಕ್ಷಣೀಯ, ಆರ್ಥಿಕ, ಸಾಮಾಜಿಕ, ರಾಜಕೀಯ ಮುಂತಾದ ಮಾನವಸಮಾಜಶಾಸ್ತ್ರ ಗಳಲ್ಲಿ, ಅವುಗಳ ಪರಿಣತರಲ್ಲಿ, – ಎಲ್ಲವೂ ಸಮಗ್ರತೆಯಿಂದ, ಜಟಿಲವಾಗಿ ವಿಚಾರ ಸಾಹಿತ್ಯದ ಮುಖ್ಯಕಾರ್ಯ ಇವೆರಡೂ ಪಕ್ಷಗಳ ಮಧ್ಯೆ, ಮಾಧ್ಯಮವಾಗಿರುವುದು ಮತ್ತು ಸೇತುವೆಯಾಗಿರುವುದು. ಈ ಕಾರ್ಯ ಸಮರ್ಪಕವಾಗಿ ನಡೆಯಬೇಕಾದರೆ ಎರಡೂ ಪಕ್ಷಗಳನ್ನೂ ವಿಚಾರಸಾಹಿತ್ಯವೇ ಸಜ್ಜುಗೊಳಿಸಬೇಕಾಗುತ್ತದೆ ಮತ್ತು ತನ್ನಲ್ಲೂ, ಎರಡೂ ಪಕ್ಷದ ಸಾಹಿತ್ಯಗಳ ಉತ್ತಮ ಪರಿಚಯವನ್ನಿಟ್ಟುಕೊಳ್ಳಬೇಕಾಗುತ್ತದೆ. ಜನಪಕ್ಷದಲ್ಲಿ, ವಿಚಾರ ಶೀಲತೆ, ವೈಚಾರಿಕತೆ, ವಿಜ್ಞಾನ ಮತ್ತು ಸಮಾಜಶಾಸ್ತ್ರಗಳ ಜನಪ್ರಿಯತೆಯನ್ನು ಹೆಚ್ಚಿಸಿ, ವೈಜ್ಞಾನಿಕ ಮನೋಧರ್ಮ ಜನಸಾಮಾನ್ಯವಾಗುವಂತೆ ಮಾಡಬೇಕು; ಬದುಕಿನಲ್ಲಿನ ಅವುಗಳ ಉಪಯೋಗದ ಮಹತ್ವದ ಮನವರಿಕೆಯಾಗುವಂತೆಯೂ ಮಾಡಬೇಕು. ಇತ್ತ ಪರಿಣತರಿಗೆ, ಜನಗಳ ಒಂದುಗೂಡಿಸಿದ ಅವಶ್ಯಕತೆಗಳು ಮತ್ತು ನಿಲುವುಗಳನ್ನು ಆಗಾಗ

ಪರಿಚಯಿಸಿ, ಜನೋಪಯೋಗಿ ಪರಿಹಾರಗಳನ್ನು ಒದಗಿಸುವುದರಿಂದ ಪರಿಣತರು ಪಡೆಯ ಬಹುದಾದ ಸಾರ್ಥಕತೆ ಮತ್ತು ಸ್ವಾಭಿಮಾನಗಳನ್ನು ಮನದಟ್ಟು ಮಾಡಿಸಬೇಕು. ಹಾಗೆಯೆ, ಜನಗಳಲ್ಲಿ ವೈಚಾರಿಕ ಮನೋಧರ್ಮವನ್ನು ಬೆಳೆಸುವುದರಲ್ಲೂ ವಿಜ್ಞಾನಿಗಳ ಮತ್ತು ಶಾಸ್ತ್ರ ಪರಿಣತರ ಸಾಮಾಜಿಕ ಪಾತ್ರ ಎಷ್ಟು ಹಿರಿದು ಮತ್ತು ಎಷ್ಟು ಅವಶ್ಯಕವಾದುದು ಎಂಬುದರತ್ತ ಅವರ ಗಮನ ಸೆಳೆಯಬೇಕು. ಇವೆಲ್ಲ ಕಾರ್ಯಗಳು ಸಾಹಿತ್ಯರೂಪದಲ್ಲೆ ಆಗಬೇಕು.

ಸರ್ವಹಿತ ಮಾಧ್ಯಮವಾಗಿರುವುದು ಮತ್ತು ಸರ್ವಸಹಿತವಾಗಿರುವುದೇ ಸಾಹಿತ್ಯ-ವಿಚಾರದಂತೆಯೆ; ಇಲ್ಲಿ ಹೇಳಿರುವ ವಿಚಾರವಾದದ ಐದನೆಯ ಸೂತ್ರ ಸೂಚಿಸುವಂತೆಯೆ.

ಹೀಗೆ ವಿಶಾಲವ್ಯಾಪ್ತಿಯ, ಪ್ರಭಾವದ ಮತ್ತು ಅವಶ್ಯಕತೆಯ ಕಾರ್ಯಗಳನ್ನು ತನ್ನ ಕ್ಷೇತ್ರದಲ್ಲಿ ಇಟ್ಟುಕೊಂಡಿರುವ ವಿಚಾರಸಾಹಿತ್ಯ, ಬಹುಸಂಖ್ಯಾತ ಹೊಸ ಹೊಸ ಚಟುವಟಿಕೆಗಳ ಮೂಲಕ, ಶೀಘ್ರಗತಿಯಲ್ಲಿ ಬೆಳೆಯಬಲ್ಲದು. ಪ್ರಾರಂಭದಲ್ಲಿಯೆ ಆಗಬೇಕಾದ ಕೆಲವು ಕ್ರಮಗಳ ಪ್ರಸ್ತಾಪ ಮಾತ್ರ ಇಲ್ಲಿದೆ :

೧. ಈಗಾಗಲೆ ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸಲು ನೆರವಾಗುತ್ತಿರುವ ವೈಚಾರಿಕ ಸಾಹಿತ್ಯವನ್ನು ಎಲ್ಲ ಸಂಬದ್ಧ ಕ್ಷೇತ್ರಗಳಿಗೂ, ಅನ್ವಯಗಳಿಗೂ ಮುಂದುವರೆಸುವುದು.
೨. ನಮ್ಮ ಸಹಸ್ರಮಾನಗಳ ಸಂಸ್ಕೃತಿ, ಇತಿಹಾಸ ಮತ್ತು ಸಾಹಿತ್ಯಗಳನ್ನು ವೈಚಾರಿಕವಾಗಿ ವಿಮರ್ಶೆ ಮಾಡಿ, ಸತ್ಯಗಳನ್ನು ಸತ್ವಗಳನ್ನು ಮಾತ್ರ ಉಳಿಸಿಕೊಳ್ಳುವುದು.
೩. ಅವೈಚಾರಿಕತೆಯ ದೀರ್ಘಬಂಧನದಲ್ಲಿ ಸಿಲುಕಿ ಅತಿಸೀಮಿತವಾಗಿ ಹೋಗಿರುವ, ನಮ್ಮ ಸಂಗೀತ, ಶಿಲ್ಪ, ನೃತ್ಯ, ಚಿತ್ರಕಲೆ ಮುಂತಾದ ಕಲೆಗಳ ಮುಕ್ತ ನವೋದಯಕ್ಕೆ ಸಾಹಿತ್ಯದ ನೆರವು ನೀಡುವುದು.
೪. ಜನೋಪಯುಕ್ತ ಮತ್ತು ಜನಪ್ರಿಯ, ವೈಜ್ಞಾನಿಕ ಮತ್ತು ಸಮಾಜ ಶಾಸ್ತ್ರೀಯ ಗ್ರಂಥ ಗಳನ್ನು ಮತ್ತು ಲೇಖನಗಳನ್ನು ಹಲವು ಶ್ರೇಣಿಗಳ ಓದುಗರಿಗಾಗಿ ಪ್ರಕಾಶಿಸುವುದು.
೫. ಹೊಸ ವಿಷಯಗಳನ್ನು ಓದುವಾಗ, ವಿಚಾರಮಾಡುವಾಗ, ಓದುಗರಿಗೆ ಅನುಕೂಲ ವಾಗುವಂತೆ ವಿಜ್ಞಾನಕೋಶಗಳು, ತಾಂತ್ರಿಕ ನಿಘಂಟುಗಳು, ವೈದ್ಯಕೀಯದಂತಹ ಅನ್ವಯಿತಶಾಸ್ತ್ರಗಳ ಕೈಪಿಡಿಗಳು, ಮಾಹಿತಿ ಭಂಡಾರಗಳು, ಲೇಖಕರಿಗಾಗಿ ಭಾಷಾ ಕೈಪಿಡಿಗಳು, ಇಂತಹವನ್ನು ಒದಗಿಸಿ ಪ್ರೋತ್ಸಾಹಿಸುವುದು.
೬. ನಮ್ಮ ಎಲ್ಲ ಸಮಸ್ಯೆ-ಪರಿಹಾರಗಳಲ್ಲಿ ಭಾಗಿಗಳಾದ ಇತರ ಪ್ರದೇಶಗಳ ಜನರ ವಿಚಾರಸಾಹಿತ್ಯಗಳಲ್ಲೂ ಪಾಲುದಾರರಾಗಿರುವುದು, ಅನುವಾದ ಮುಂತಾದ ಆದಾನ-ಪ್ರದಾನಗಳ ಮೂಲಕ.
೭. ಈ ಎಲ್ಲ ಕಾರ್ಯಗಳಲ್ಲೂ, ಕಂಪ್ಯೂಟರ್‌ನ ವಿವಿಧ ನೆರವುಗಳನ್ನು ಯಥೇಚ್ಛವಾಗಿ ಬಳಸುವುದು.

ಡಾ|| ಎಂ. ಎನ್. ಕೇಶವರಾವ್
೩೮೮, ವೆಂಕಟೇಶದಾಸ್ ರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦



## ದ್ವಿಪದಿಗಳು

ನೀವು ಮಹಾತ್ಮರಲ್ಲ, ನಾವು ಹುತಾತ್ಮರಲ್ಲ
ನಾವು ಮನುಷ್ಯರು, ಮನುಷ್ಯರಂತೆ ಮಾತಾಡೋಣ

ಜ್ಞಾನವಿರದಿದ್ದರೂ ಪರವಾಯಿಲ್ಲ ನಮ್ಮ ಅಜ್ಞಾನವಾದರೂ ತಿಳಿಯೋಣ
ನಮ್ಮೊಳಗಿನ ಇತಿಮಿತಿಯನು, ಖಾಲಿತನವಾದರೂ ತಿಳಿಯೋಣ

ದೊಡ್ಡ ದೊಡ್ಡ ತಪ್ಪುಗಳೇ ತತ್ವಗಳಾಗಿ ನಿಂತಿವೆ
ಯಾವ ತತ್ವ ಮಾದರಿ ಎಂದೊಪ್ಪಿ ನಾವು ಅನುಸರಿಸೋಣ

ಈ ಮನೆಯ ಕಿಟಕಿ ಗೋಡೆಗಳು ಕಾಗದದಿಂದ ನಿರ್ಮಿತ
ಒಳಗಿರುವ ಪ್ರತಿಯೊಬ್ಬ ಬೆಂಕಿ ಜ್ವಾಲೆಯಂತೆ ಕಾಣುವನು

ಈ ನಾಡ ಕಾಡಿನ ರೀತಿ ವಿಚಿತ್ರ ಯಾರೂ ಅರಿಯದೆ ಹೋದರು
ರೆಕ್ಕೆ ಮೇಲೆ ಗೂಡು ಹೊತ್ತು ಅಲೆಯುವ ಬಾನಾಡಿ ಬಂಜೆಯಾದವು

ಕಿವಿ ಮುಚ್ಚಿದರೆ ತೊಂದರೆಯಿಲ್ಲ, ಮನ ಮುಚ್ಚಿದರೆ ತೊಂದರೆ ಎಲ್ಲಾ
ನಮ್ಮ ಮನದ ಮಾತು ಕೇಳಿಸಿತೆಂದು ಹೇಳುವವರ್‍ಯಾರಿಲ್ಲ

ಬೇಡುವ ಕೈಗಳಿಗೆಲ್ಲರು ತೊಡಿಸುವರು ಬೇಡಿ
ವಿಚಿತ್ರ ನಡಾವಳಿ, ಕೈ ಎತ್ತಿ ಯಾರನ್ನೂ ಬೇಡದಿರಿ

ನಗರದೊಡೆಯರು ದೋಚುವರು ಎಡೆಬಿಡದೆ ಜನರನು
ಒಮ್ಮೆ ಧರ್ಮದ ಹೆಸರಲಿ, ಮತ್ತೊಮ್ಮೆ ದೇಶದ ನೆಪದಲಿ

ವಿಚಾರಕ್ಕೊಂದು ನೀತಿ ಆಚಾರ ಇನ್ನೊಂದು ರೀತಿ
ನೀತಿಯಿಲ್ಲದ ರೀತಿಯನು, ರಾಜ ನೀತಿ ಎನ್ನಲೆ ?

ತ್ರಿಶೂಲ ಹಂಚುವ ನೀತಿ, ದೇಶಭಕ್ತರ ನೀತಿ
ಪ್ರೀತಿ ಹಂಚದ ನೀತಿಯನು ದೇಶಭಕ್ತಿ ಎನ್ನಲೇ ?

ಹೊಸದಿನದ ಬೆಳಕಿಗಾಗಿ ಇಡೀ ರಾತ್ರಿ ಜಾಗರಣೆ
ಬೆಳಗಾಯಿತೆಂದರೂ ಕಣ್ಣಲ್ಲಿ ಕತ್ತಲೆ ಉಳಿದಿತ್ತು

ಈಜುವ ಕೈಗಳೆರಡು, ಮುಳುಗಿಸುವ ಸುಳಿಗಳು ನೂರಾರು
ಸುಳಿಗಳನ್ನೇ ಈಜುವ ಸಾಧನೆ ಮಾಡಿ ಆಚೆ ದಡ ಸೇರೋಣ

ಜಂಬಣ್ಣ ಅಮರಚಿಂತ
೮-೧೧-೧೫೧/೭೯೬, ವಿದ್ಯಾನಗರ, ರಾಯಚೂರು

ಒಂದು

“ಮಾನೋಮಿ ಹಬ್ಬಕ್ಕ ಬನ್ನಿ ಎಲಿಯಾಗ ‘ಸಿವಾ- ಸಿವಾ’ ಅಂತ ಥಂಡಿ ಸುರುವಾಗಿ ಬುಡುತ್ತ’ ಸಗರಪ್ಪ ಕಟ್ಟೆ ಕೆಳಗ ಉರಿ ಕಾಸುತ್ತ ಕುಳಿತ ಶ್ಯಾಣಪ್ಪ ತನ್ನ ಎದುರಿಗೆ ತೊಡೆ ಮಟ ದೋತರ ಏರಿಸಿಗೆಂಡು ಕ್ಷಣಕ್ಕೊಮ್ಮೆ ‘ಅ್ಹ....ಹ್ಲೂ....’ ಅನ್ನುತ್ತಾ ಕುಳಿತ ಮಲ್ಲಪ್ಗ ಹೇಳಿದ. “ಏನೋ ಎಂತೋ ನನಗಂತು ತಿಳಿವಲ್ದು ಬುಡು ಯಣ್ಣ. ಕಾಲಗಳು ಅಂಬವು ಎಲ್ಲಾ ತಿರುಗು ಮುರುಗು ಆಗ್ಯಾವ. ಮಳಿಗಾಲ, ಚಳಿಗಾಲ, ಬ್ಯಾಸಿಗಿಕಾಲ ಎಲ್ಲಾ ಒಂದಾ ಆಗ್ಯಾವ. ವರ್ಷದ ಹನ್ನೆರಡು ತಿಂಗಳೂ ನಮ್ಕಡಿ ಬ್ಯಾಸಗಿ,” ಉರಿಗೆ ಎರಡೂ ಅಂಗೈ ಹಿಡಿದ ಮಲ್ಲಪ್ಪ ಹೇಳಿದ. “ಬಾರಕೇರ ಬಸಪ್ಪನ ದೊಡ್ಡ ಎತ್ತು ಗಟಾರಗಳ ನೀರು, ಮಲ್ಲಾಪುರದ ಸಾರಾಯಿ ಕಾರ್ಖಾನಿ ಬಿಡೊ ಕೊಳಕು ನೀರು ಎಲ್ಲಾ ಹಳ್ಳಕ್ಕ ಸೇರುತ್ತ. ಅಂಥಾ ಹೊಲಸು ನೀರನ್ನ ಕುಡುದ್ರಲ್ಲ, ಮುಟ್ಟಿದ್ರೆ ಮುನ್ನೂರು ರೋಗ ಬರ್ತಾವ. ಮನ್ಸೇರಿಗೇ ಉಂಡ ಬಾಯಿ ವರೆಸಿಕೊಳ್ಳಾಕ ಒಳ್ಳೆ ನೀರು ಸಿಗಲಾರ್ದಂಗ ಆಗೈತಿ. ಇನ್ನಾ ದನಕರುಗಳ ಗೋಳು ಕೇಳೋದ ಬ್ಯಾಡ....!” ಶ್ಯಾಣಪ್ಪ ತಲಿಗಿ ಸುತ್ತಿಕೊಂಡಿದ್ದ ಕೆಂಪು ಬಣ್ಣದ ಮಾಸಿದ ಟವೆಲ್ಲನ್ನು ಬಿಚ್ಚಿ ಜಾಡಿಸಿ ಹೆಗಲ ಮ್ಯಾಲ ಹಾಕ್ಕೆಂಡು ಹೇಳಿದ.

ಮಲ್ಲಪ್ಗ ಆರು ತಿಂಗಳ ಹಿಂದೆ ಗೌಡ್ರ ಕೆರಿ ನೀರು ಕುಡಿಯಾಕ ಹೋದ ತನ್ನ ಎತ್ತು ಭೀಮ ಮನಿಗಿ ಹೆಣವಾಗಿ ಬಂದಿದ್ದು ನೆನಪಾಯ್ತು. ‘ಮೂಕ ಪ್ರಾಣಿ ಅಂಬ ಖಬರು ಇರಾಲಾರ್ದ ಬಡಿದಿದ್ರು. ಅವರ ಕೈಗಿ ಕರಿನಾಗರ ಕಡೀಲಿ. ಅವ್ರು ಸತ್ತಲ್ಲಿ ಕತ್ತೆ ಉಳ್ಯಾಡ್ಲಿ. ಅವ್ರ ಮನಿ ದೀಪ ಆರ್ಲಿ’ ಮನಸ್ಸಿನಲ್ಲಿ ಬೈಯ್ದುಕೊಂಡ ಮಲ್ಲಪ್ಪ ಪಿಸಿ ಪಿಸಿ ಅಂತ ನೆಲಕ್ಕ ಉಗುಳಿ ಟವೆಲ್ಲಿನಿಂದ ಬಾಯಿ ವರಸಿಕೊಂಡ. “ಸರ್ಕಾರದ ಕೆರಿ ತಮ್ದು ಅಂತ ತಿಳಕಂಡು ಇಡೀ ಊರ ಮಂದಿಗಿ ಹನಿ ನೀರು ಕಾಣಲಾರ್ದಂಗ ಮಾಡ್ಯಾರ. ತಿಮ್ಮನಗೌಡ ಬಡಿದ ಸಲುವಾಗಿನೇ ನಮ್ಮ ಎತ್ತು ಸತ್ತು ಹೋಗೈತಿ ಅಂತ ಚಿನ್ನೂರು ಪೊಲೀಸ್ ಸ್ಟೇಷನ್ನಿಗೆ ಕೇಸು ಕೊಡಾಕ ಹೋದ್ರ ಏನು ಅಂದ್ರು ಗೊತ್ತೈತೇನು ಯಣ್ಣ..... ‘ಲೇ ಕೋಡಿ ಸೂಳೆ ಮಗನೇ ಗೌಡ್ರು ಅಂದ್ರ ಯಾರಂತ ತಿಳಕಂಡಿ. ತಾಲ್ಲೂಕಿನ ಶಾಸಕರ ತಮ್ಮ ಅದ್ಯಾರ. ಅವರ ವಿರುದ್ಧ ಕೇಸು ಕೊಟ್ಟೆ ಅಂದ್ರ ನಿನ್ನ ಕಥೆ ಮುಗೀತಿ ಅಂತ ತಿಳಕಂಡು ಬುಡು’ ಅಂತ ಅನಬೇಕೇನು. ಸಿಟ್ಟು ತಡೆಯಾಕ ಆಗಲಾರ್ದ, ‘ಮತ್ತೆ ನೀವು ಅವರಂಗ ಮಾತಾಡಿದ್ರ ನಮ್ಮನ್ನು ರಕ್ಷಣೆ ಮಾಡೋರು ಯಾರ್ರೀ ಸಾಹೇಬ್ರ. ಅಂತ ಕೇಳಿದ್ದಕ್ಕ ಬೆನ್ನಿಗಿ ಮತ್ತ ಕುಂಡಿಗಿ ಬಾರು ಮೂಡಂಗ ಬಡಿದಿದ್ರು. ಊಟ ನೀರು ಕೊಡಲಾರ್ದ ಸ್ಟೇಷನ್ನಿನ ಕತ್ತಲ ಕೋಣ್ಯಾಗ ಹಾಕಿದ್ರು. ಮುಂಜಾನೆ ಯಾರಿಗೂ ಗೊತ್ತಾಗಲಾರ್ದಂಗ ಹೊರಗ ದಬ್ಬಿದ್ರು.” ಕಣ್ಣಂಚಿನಲ್ಲಿ ಇಳಿಯುತ್ತಿದ್ದ ಕಣ್ಣೀರ ಝರಿಯನ್ನು ಬಿಸಿಯಾದ ಅಂಗೈಯಿಂದ ವರೆಸಿಕೊಂಡ.

ಬಸ್ ಸ್ಟ್ಯಾಂಡ್ ಕಡೇಲಿಂದ ನಾಲ್ಕಾರು ನಾಯಿಗಳು ಒಂದೇ ಸವನೇ ಒದರಾಕ ಸುರುಮಾಡಿದವು. ಶ್ಯಾಣಪ್ಪ ಮಲ್ಲಪ್ಗ ಏನೋ ಹೇಳಬೇಕೆಂದು ಬಾಯಿ ತೆರೆದ. ನಾಯಿ ಒದರಿದ ಸದ್ದು ಕೇಳಿ ಹಂಗೆ ಬಾಯಿ ಮುಚ್ಚಿಕೊಂಡು ಬಸ್ ಸ್ಟ್ಯಾಂಡ್ ಕಡೆ ನೋಡಿದ. ಕತ್ತಲ ಕಂಬಳಿ ಕಟ್ಟಿದಂತೆ ಕಂಡಿತು. ಊರ ಹೊರಗಿನ ಕೇರಿಗಳಲ್ಲಿ ಮಿಂಚು ಹುಳುಗಳಂತೆ ‘ಮಿಣಿಕ್ ಮಿಣಿಕ್’ ಅಂತ ಮಿನುಗುತ್ತಿದ್ದ ದೀಪಗಳು ಬೆಳಕು ಬಿಟ್ಟರೆ ಬೇರೆ ಬೆಳಕು ಕಾಣಲಿಲ್ಲ. ಊರೊಳಗೆ ಬರುತ್ತಿರುವವರು ಯಾರು ಅಂತ ಗೊತ್ತಾಗಲಿಲ್ಲ. ನಿಧಾನವಾಗಿ ಬೂಟಿನ ಸದ್ದು ಕೇಳಿತು. ಊರಾಗಿನ ಬಹುತೇಕ ಮನಿ ಮಂದಿ ಆಗಲೇ ಉಂಡು ಮಲಗಿದ್ರು. ರಾತ್ರಿ ಆಯ್ತು ಅಂದ್ರ ಸಾಕು ಊರಾಗಿನ ಮನಿಗಳ ಕತ್ಲು ಕಳೆಯಾಕ ಚಿಮಣಿ ಎಣ್ಣೆ ದೀಪಗಳೇ ಬೇಕು. “ಟ್ರಾನ್ಸ್‌ಫಾರ್ಮರ್ ಸುಟ್ಟು ನಾಲ್ಕು ತಿಂಗಳಾದ್ರೂ ಸಂಬಂಧಪಟ್ಟ ಆಫಿಸರು ಕುಂಡೆ ಬಾಯಿ ಮುಚ್ಚಿಕೆಂಡು ಕುಂತಾರ. ಜನರಿಗೆ ನಿತ್ಯ ಉಪಯುಕ್ತವಾಗೋ ಕರೆಂಟಿನ ಇಲಾಖಿನ ಸಮೇತ ಖಾಸಗಿ ಕಂಪನಿಗೆ ಕೊಟ್ಟಿದ್ದಕ್ಕೆ ಇಷ್ಟೆಲ್ಲಾ ಪಡಿಪಾಟಲ ಅನುಭವಿಸ್ಬೇಕು. ಐದಾರು ಸಲ ಊರಾಗಿನ ಯುವಕ ಸಂಘದ ಹುಡುಗ್ರು ಮನವಿ ಕೊಟ್ಟು ಬಂದ್ರೂ ಉಪಯೋಗ ಆಗಿಲ್ಲ. ಚಿನ್ನೂರು ತಹಸೀಲ್ ಕಚೇರಿ ಮುಂದ ನೂರಾರು ಮಂದಿ ಹೋಗಿ ಸ್ಟ್ರೈಕ್ ಮಾಡಿದ್ರೂ ಹೊಳ್ಯಾಗ ಹುಂಚೆಣ್ಣು ತೊಳದಾಂಗ ಆಯ್ತು. ಉಗುಳಿದ್ರಿಲ್ಲ, ಬೊಗಳಿದ್ರಿಲ್ಲ. ಮಾರಿ ಒರಿಸಿಗೆಂಡು ನನಗ್ಯಾರು ಉಗುಳಿಲ್ಲ ಅಂಬಂಗ ನಾಚಿಕೆ ಇಲ್ದವ್ರಂಗ ಇದ್ದು ಬುಡ್ತಾರ...” ಶ್ಯಾಣಪ್ಪ ಸ್ವಲ್ಪ ಸಿಟ್ಟಿಲೇ ಹೇಳುತ್ತಾ ಉಗುಳು ಬರದಿದ್ದರೂ ಗಂಟಲು ಸರಿಪಡಿಸಿಕೊಂಡವನಂತೆ ಕ್ಯಾಕರಿಸಿ ಉಗುಳಿದ.

ಸಮೀಪ ಬಂದ ಬೂಟುಧಾರಿಗಳು ಉರಿಯ ಮುಂದೆ ಎದ್ದು ನಿಂತಿದ್ದ ಮಲ್ಲಪ್ಪ ಮತ್ತು ಶ್ಯಾಣಪ್ಪರನ್ನು ಕೇಳಿದರು : “ಇಡೀ ಊರು ಮಂದಿ ಮಲಗ್ಯಾರ. ನೀವೇನು ಮಾಡಾಕ ಹತ್ತೀರಿ ಇಲ್ಲಿ. ಕಳ್ತನ ಮಾಡಾಕ ಹೊಂಚು ಹಾಕಾಕ ಹತ್ತೀರೇನು ಮಕ್ಳಾ ? ನಿಮ್ಮ ಕುಂಡ್ಯಾಗನ ನರ ಸಡ್ಲಾಗುವಂಗ ಬಡೀಬೇಕೇನು ?” ಹೊಸದಾಗಿ ಪೊಲೀಸ್ ನೌಕರಿಗೆ ಸೇರಿದಂತೆ ಕಂಡ ಚಿಗುರುಮೀಸೆಯ ಯುವ ಪೊಲೀಸ ಒಂದೇ ಉಸುರಿಗೆ ಕೇಳಿದ. “ಒಂದೊಂದಾಗಿ ಕೇಳಬೇಕು. ಹಿಂಗ ಕೇಳಿದ್ರ ಜನ ಅಂಜಿಕೊಂಡು ನಮಗೆ ಬೇಕಾದ ವಿಷಯ ತಿಳಿಸಂಗಿಲ್ಲ. ಏನಪ ನಿಮ್ಮೆಸ್ರು. ಇದೇ ಊರೋರೇನು. ನಿಮ್ಮ ಮನೆ ಎಲ್ಲಿ ಅದಾವ ?” ಸಾಲಿ ಮಸ್ತಾರಗಳು ಮಕ್ಕಳನ್ನು ಕೇಳುವಂತೆ ಪಿಎಸ್ಐ ಅಂಬಂತೆ ಕಂಡ ಕಟ್ಟುಮಸ್ತಾದ ವ್ಯಕ್ತಿ ವಿಚಾರಿಸಿದ. “ಸಾಹೆಬ್ರ ನಿದ್ದಿ ಬರ್ಲಿಲ್ಲ. ಇಬ್ರೂ ಉರಿ ಕಾಸಿಕೊಳ್ಳಾಕ ಹತ್ತೀವಿ. ಇಲ್ಲಿ ಅದ್ಯಾವಲ್ಲ ಒಂದಕ್ಕೊಂದು ಅಂಟಿಕೊಂಡು ಇವೇ ನಮ್ಮಿಬ್ಬರ ಮನಿಗಳು” ಅಂತ ಮಲ್ಲಪ್ಪ ಪಕ್ಕದಲ್ಲಿದ್ದ ಎರಡು ಗುಡಿಸಲುಗಳನ್ನು ಕೈ ಮಾಡಿ ತೋರಿಸಿದ.



ಯುವ ಪೊಲೀಸ್ ಅರ್ಜಂಟ್ 'ಎರಡಕ್ಕ' ಕುಳಿತವರಂತೆ ಉರಿಯ ಮುಂದೆ ಕುಳಿತು, ಪಕ್ಕದಲ್ಲಿದ್ದ ಕಸ ಕಡ್ಡಿಯನ್ನು ಉರಿಗೆ ಹಾಕಿದ. ಅಂಗೈ ಕಾಸಿಕೊಂಡು ಮುಖಕ್ಕೆ ಬೆಚ್ಚನೆಯ ಹವೆಯನ್ನು ಮುಟ್ಟಿಸಿಕೊಂಡ. ಪಿಎಸ್ಐ ಪ್ಯಾಂಟಿನ ಜೇಬಿನಲ್ಲಿದ್ದ ಸಿಗರೇಟ್ ಪ್ಯಾಕನ್ನು ಹೊರತೆಗೆದ. ಒಂದು ಸಿಗರೇಟನ್ನ ಪೇದೆ ಕಡೆ ಎಸೆದು ಅದನ್ನು ಹಚ್ಚಿಕೊಡುವಂತೆ ಸನ್ನೆ ಮಾಡಿದ. ಪೊಲೀಸ್ ಪೇದೆ ತನಗೂ ಕ್ರಿಕೆಟ್ ಆಟದಲ್ಲಿ ಚೆಂಡು ಹಿಡಿದು ರೂಢಿ ಅಂಬಂತೆ ಸಿಗರೇಟನ್ನು ಕೆಳಗೆ ಬೀಳಿಸದೇ ಹಿಡಿದ. ಉರಿಯುವ ಒಂದು ಕಡ್ಡಿಯಿಂದ ಸಿಗರೇಟ್ ತುದಿಗೆ ಹಚ್ಚಿ ಸಮಾರಂಭಕ್ಕೆ ಬಂದ ಅತಿಥಿಗಳಿಗೆ ಗುಲಾಬಿ ಹೂವು ನೀಡುವಂತೆ ಪೂಜ್ಯ ಭಾವದಿಂದ ಸಿಗರೇಟನ್ನ ತನ್ನ ಮೇಲಧಿಕಾರಿಗೆ ಕೊಟ್ಟ.

''ಈ ಊರಾಗಿನ ಕೆಲ ನಿರುದ್ಯೋಗಿ ಹುಡುಗ್ರು ನಕ್ಸಲೈಟ್‌ರ ಗುಂಪು ಸೇರ್‍ಯಾರ ಅಂಬ ಸುದ್ದಿ ಬಂದೈತಿ. ಅದಕ್ಕ ನಿಮ್ಮ ಊರಿಗೆ ಬಂದೀವಿ. ಅಂತವರು ಯಾರಾದ್ರು ಗೊತ್ತಿದ್ರ ನಮಗ ತಿಳಿಸ್ರಿ. ನಿಮ್ಮ ಹೆಸರನ್ನ ಗುಪ್ತವಾಗಿ ಇಟ್ಟರ್ತೀವಿ. ನಮಗ ಸಹಾಯ ಮಾಡಿದ್ರ ಸಾವಿರಾರು ರೂಪಾಯಿ ಬಹುಮಾನ ಅಂತ ನೀಡ್ತೀವಿ'' ಪಿಎಸ್ಐ ತನ್ನ ತುಟಿಗಳಲ್ಲಿ ಸಿಗರೇಟ್ ಇಟ್ಟುಕೊಂಡು ಅಸ್ಪಷ್ಟವಾಗಿ ಮಾತನಾಡಿದ. ಶ್ಯಾಣಪ್ಪ, ಮಲ್ಲಪ್ಪ ಇಬ್ರು ಕೂಡಿನೇ ''ನಮ್ಮೂರಾಗ ಅಂತೋರು ಯಾರಿಲ್ರಿ ಸಾಹೇಬ್ರ. ನಾವು ಏನಿದ್ರೂ ದುಡಿದು ತಿನ್ನೋ ಮಂದಿ. ಮನಿ ಹೊಸ್ತಲ ಬುಟ್ರ ನಮಗ ಹೊರಗಿನ ಪ್ರಪಂಚ ಹ್ಯಾಂಗೈತಿ ಅಂಬುದು ಗೊತ್ತಿಲ್ಲ'' ಎಂದರು.

ಸಿಗರೇಟಿನ ತುದಿಗಿದ್ದ ಬೂದಿಯನ್ನು ಸ್ಟೈಲಾಗಿ ನೆಲಕ್ಕೆ ಬೀಳಿಸಿದ ಅಧಿಕಾರಿ ''ಲೇ ಬೇಕೂಫಾ... ಎದ್ದೇಳಲೇ. ಬೆಚ್ಚನು ಜಾಗ ಸಿಕ್ತು ಅಂದ್ರ ಸಾಕು. ಕಾಲು ಚಾಚಿ ಬುಡ್ತೀರಿ. ನಿಮ್ಮಂತೋರು ನಮ್ಮ ಡಿಪಾರ್ಟ್‌ಮೆಂಟಿಗೆ ಬಂದ್ರ ಆಯ್ತು. ನಮ್ಮಂತಾ ಅಧಿಕಾರಿಗಳು ಉದ್ಧಾರ ಆದಂಗನ... ಎದ್ದೇಳು. ಬಸ್ ಸ್ಟ್ಯಾಂಡಿನತಲ್ಲಿ ಇರೋ ಜೀಪ್ ತಗಂಬಾ ನಾನು ಹಂಗೆ ಊರಾಗ ಒಂದು ಸುತ್ತು ತಿರುಗಾಡ್ತೀನಿ'' ಪಿಎಸ್ಐ ಇಷ್ಟು ಮಾತಾಡಿ ಶ್ಯಾಣಪ್ಪ ಮತ್ತು ಮಲ್ಲಪ್ಪರ ಮುಖಗಳನ್ನೊಮ್ಮೆ ದಿಟ್ಟಿಸಿ ನೋಡಿ ಊರಾಗಿನ ಅಗಸೆ ಕಡೆ ಹೆಜ್ಜೆ ಹಾಕಿದ.

ಸಣ್ಣ ಪೊಲೀಸನ್ನ ಬೈಯ್ದ ಪಿಎಸ್ಐ ಮಾತಿಗೆ ಮಲ್ಲಪ್ಪ ಮತ್ತು ಶ್ಯಾಣಪ್ಪ ತುಟಿ ಬಿಗಿ ಹಿಡಿದು ಬಾಯಿ ಒಳಗೇ ನಕ್ಕರು. ಉರಿಗೆ ಮಣ್ಣು ಹಾಕಿ ಮುಚ್ಚಿದ ಮಲ್ಲಪ್ಪ, ''ನಡಿ ಶ್ಯಾಣಪ್ಪಣ್ಣ ಮಲಿಕ್ಕೆಂಡು ಬುಡಾಮು. ಈ ಪೊಲೀಸ್ರು ಸಹವಾಸ ಒಳ್ಳೆದಲ್ಲ. ಸುಮ್ಮ ಸುಮ್ಮನೆ ಕಾಡಸಾಕ ಸುರು ಮಾಡಿಬುಡ್ತಾರ. ಅಂಟ್ರಿಕಿ ಇದ್ದಂಗ ಇವ್ರು. ಒಮ್ಮೆ ಅಂಟಿದ್ರ ಆಯ್ತು. ಮೈಮ್ಯಾಲಿನ ಚರ್ಮ ಕಿತ್ತಿಕೊಳ್ಳಂಗ ಆಗುತ್ತ'' ಎಂದ. ಸಗರಪ್ಪ ಕಟ್ಟೆ ಮುಂದಿದ್ದ ಗೋಡೆ ಮರೆಗೆ 'ಒಂದಕ್ಕ' ಮಾಡಿದ ಮಲ್ಲಪ್ಪ ಮತ್ತು ಶ್ಯಾಣಪ್ಪ ಮನೆ ಕಡೆ ನಡೆದರು.

ಶ್ಯಾಣಪ್ಪ ಮನೆಗೆ ಹೋದಾಗ ಹೆಂಡತಿ ಅಮರಮ್ಮ, ಕೈಗೆ ಬಂದ ಇಬ್ಬರು ಹೆಣ್ಣು ಮಕ್ಳು, ಹದಿನೈದು ವರ್ಷದ ಒಬ್ಬ ಹುಡುಗ ಹಳೆ ಕೌದಿ ಮೇಲೆ ಕೈಕಾಲು ಮುದುರಿಕೊಂಡು ಮಲಗಿದ್ದರು. ಅವ ಒಬ್ಬಾಂವ ಇದ್ದ ಅಂದ್ರ... ಎಲ್ಲರೂ ಇದ್ದಂಗ ಆಗುತ್ತಿತ್ತು. 'ವರ್ಷದ ಮ್ಯಾಲ ಎರಡು ತಿಂಗಳು ಆಯ್ತು ಹಿರಿಮಗ ಹುಲುಗೇಶನ್ನ ನೋಡಿ. ಬೆಂಗ್ಳೂರಿನ ಒಂದು ಖಾಸಗಿ ಕಾರ್ಖಾನ್ಯಾಗ ಕೆಲಸ ಮಾಡಾಕ ಹತ್ತೀನಿ. ಮೂರು ಸಾವಿರ ಕೊಡ್ತಾರ ಅಂತ ಹೇಳಿದ್ದೇ ಕೊನೆ. ಭಾಳ ದಿವ್ಸಾ ಆದ್ವು ಮಗನ ಜೊತೆ ಮಾತಾಡಿಲ್ಲ. ಆದ್ರ ನಾ ಅಂಕಲಿ ಮಠದ ತಾತನ ಜಾತ್ರಿಗೆ ಹೋದಾಗ ಒಮ್ಮೆ ಮತ್ತ ರಾಯಚೂರಿಗೆ ಸೋನಿಯಾ ಗಾಂಧಿ ಬಂದಾಳಂತ ಶಾಸಕರ ಲಾರ್‍ಯಾಗ ಊರ ಮಂದಿ ಕುಡ ಹೋದಾಗ ಮಗ ಮನಿಗೆ ಬಂದಿದ್ನಂತ. ನಾ ಬರೋ ತನಕ ಇರ್ಲಲಾರ್ದಂತ ಅರ್ಜಂಟ್ ಏನು ಇತ್ತೋ ಆತಗ. ಎಲ್ಲಿಯನ ಇರ್ಲಿ ಮಗ ಚೆಲೊತ್ನ್ಯಾಗ ಇದ್ರ ಅಷ್ಟ ಸಾಕು' ತನ್ನ ಪರಮ ದೈವ ಅಂಕಲಿಮಠದ ನಿರುಪಾದಿ ತಾತ ಮತ್ತು ಹಸಮಕಲ್ ಖಾನಸಾಬ್ ತಾತನ ದರ್ಗಾದ ಕಡೆ ಕೈಮುಗಿದು ಬೇಡಿಕೊಂಡ.

ಒಮ್ಮಿಂದೊಮ್ಮೆಲೆ ಶ್ಯಾಣಪ್ಪ ಬಿಕ್ಕಲಿಕ್ಕೆ ಸುರುಮಾಡಿದ. ನೀರಡಿಕೆ ಆಗಿರಬೇಕು ಎಂದನಾದರೂ ಮನಸ್ಸಿನೊಳಗೆ ತನ್ನನ್ನು ಯಾರೋ ನೆನೆಸುತ್ತಿರಬೇಕು. ಮಗ ಹುಲುಗೇಶ ಬಿಟ್ಟರೆ ತನ್ನನ್ನು ನೆನೆಸಾಕ ಯಾರು ಅದ್ಯಾರ ಬ್ಯಾರೆ ಕಡೆ. ಮಗ ಇನ್ನೂ ಎದ್ದಾನೇನು ? ಮಗನಿಗೆ ತನ್ನ ಬಗ್ಗೆ ಎಲ್ಲಿಲ್ಲದ ಪ್ರೀತಿ. ಗುಲ್ಬರ್ಗದೊಳಗ ಎಂ.ಎ. ಓದಿ ಬರುವವರೆಗೆ ಊರಿಗೆ ಬಂದಾಗೊಮ್ಮೆ ಒಂದಾ ಗಂಗಾಳದಾಗ ಕೂಡಿ ಉಣ್ಣುತ್ತಿದ್ದ. ಏನ ಕೆಲಸ ಹೇಳಿದ್ರೂ ತಾನು ಓದಿದಾತ ಅನ್ನೋ ಹಮ್ಮು ಬಿಮ್ಮು ಇರ್ಲಿಲ್ಲ. ಬಂಗಾರ್ದಂತ ಮಗ. ಸಣ್ಣ ಮಗ ಹುಡಾಳ ಹುಡುಗ್ರ ಜತೆ ಕಟ್ಟಿ ಕೆಟ್ಟು ಹೋಗ್ಯಾನ. ಬಡವ್ರು ದುಡಕ್ಕಂಡು ತಿನಬೇಕಪ ಅಂದ್ರ ನೀವಾ ದುಡ್ರಿ. ನನಗ ಮಾತ್ರ ಕ್ರಿಕೆಟ್ ಆಟ ಆಡಾಕ, ಹೊಸ ಪ್ಯಾಂಟ್, ಶರ್ಟ್ ತರಾಕ ರೊಕ್ಕ ಕೊಡ್ರಿ, ಅಂತ ಸಾಲ ಕೇಳಿದವರಂತೆ ಗಟ್ಟಿಸಿ ಕೇಳಾವ. ಇಲ್ಲ ಅಂದ್ರ ಸಾಕು. ನಾನೂ ಅಣ್ಣನಂತೆ ಮನೆ ಬುಟ್ಟು ದೂರ ಹೋಗಿ ಬುಡ್ತೀನಿ ಅಂತ ಅಂಜಿಸುತ್ತಿದ್ದ. ಸಣ್ಣ ಮಗನ ಸಲುವಾಗಿ ತಾನು, ಅಮರಮ್ಮ, ಮಕ್ಕಳಾದ ಗೌರಮ್ಮ, ಚಂದ್ರಿ ಕೂಲಿಗೆ ಹೋಗಬೇಕು. ಇದ್ದ ಎರಡು ಎಕರೆ ಹೊಲಾನ ಕಡಿಮೆ ರೇಟಿಗೆ ಕೊಟ್ಟು ಈಗ ಕುದಿಯಂಗ ಆಗೈತಿ. ಆ ಸುಡುಗಾಡು ಸಾರಾಯಿ ಕಾರ್ಖಾನೆಗೆ ಅನ್ನ ನೀಡೋ ಬಂಗಾರ್ದಂತ ಭೂಮ್ತಾಯನ್ನ ಮಾರಬಾರದಾಗಿತ್ತು... ಒಂಟಿಯಾಗಿರೋ ಶಿವನ ಜೊತೆಗೆ ಮತ್ತೊಂದು ಎತ್ತು ತಂದು ಯಾರದಾದ್ರು ಹೊಲ ಕೋರು ಮಾಡಬೇಕು. ಸಾಯೋತನಕ ಭೂಮಿತಾಯಿ ಸೇವಾ ಮಾಡಬೇಕು... ಆಗೊಮ್ಮೆ ಈಗೊಮ್ಮೆ ಬಿಕ್ಕುತ್ತಲೇ ಕುಳಿತಿದ್ದ ಶ್ಯಾಣಪ್ಪನ ಕಣ್ಣ ಮುಂದೆ ಹತ್ತಾರು ಚಿತ್ರ ವಿಚಿತ್ರ ಘಟನೆಗಳು ರೆಕ್ಕಿ ಬಿಚ್ಚಿ ಹಾರಾಡತೊಡಗಿದವು.

ಶ್ಯಾಣಪ್ಪ ಯಾರಿಗೆ ಕೇಳಲಾರ್ದಂತೆ ಮೆಲ್ಲಕ ಮಾತನಾಡಿಕೊಳ್ಳುತ್ತಿದ್ದರೂ ಮಲಗಿದ್ದ ಅಮರಮ್ಮನಿಗೆ ಗಂಡ ಗಡಬಡಿಸುತ್ತಿರುವುದು ಕೇಳಿತೋ ದಡಗ್ಗನೆ ಎದ್ದು ಕುಂತಳು. ''ಏನ ಮಾರಾಯ ನಿನಗ ಹೊತ್ತು ಗೊತ್ತು ಇಲ್ಲೇನು ? ಊರ ಮಂದಿ ಮಕ್ಕಂಡು ಆಗ್ಲೆ ಮೂರು ತಾಸು ಆತಿ. ನಿಂದು ಎಂತ ಜಲುಮೋ ಏನ್ ಕಥಿಯೋ. ಕಣ್ಣ ಬಡಕಂತ ಕತ್ತಲಾಗ ಹಂಗೆ ಕುಂತು ಬುಡ್ತಿ. ಇದ್ದದ್ದು ಇಲ್ಲದ್ದು ನೆನೆಸಿಗೆಂತ' ಅಮರಮ್ಮ ಬ್ಯಾಸರದಿಂದ ಹೇಳಿದಳು. 'ಒಂದು ಜಾಂಬಿನ್ಯಾಗ ನೀರು ಕೊಡ. ಬಿಕ್ಕಾಕ ಹತ್ತೀನಿ ಮಾರಾಯ್ತಿ. ಕತ್ಲಾಗ ನಾನೆಲ್ಲಿ ಕೈಕಾಲು ಸವರಿಕೊಂತ ನೀರಿನ ಗಡಿಗೆ ಹುಡುಕಾಡಂದಿ' ಶ್ಯಾಣಪ್ಪ ಆಕಿ ಮಾತನ್ನ ಕಿವ್ಯಾಗ ಹಾಕಿಕೊಂಡಿಲ್ಲ ಅಂಬಂತೆ ನಟಿಸುತ್ತಾ ಕೇಳಿದ.

''ಕುಡಿಯಾಕ ಅಲ್ಲ, ಔಷಧಕ್ಕ ಕೂಡಸಾಕ ಹನಿ ನೀರು ಉಳಿದಿಲ್ಲ... ಇವತ್ತು ಸಣ್ಣ ಕೊಡ ನೀರು ಮಾತ್ರ ಕೊಟ್ಟಾರ. ನಾಳಿನಿಂದ ಊರಾಗಿನ ಮಂದಿಗಿ ಕೆರೆಯ ಹನಿ ನೀರು ಕೊಡಾಂಗಿಲ್ಲಂತ. ಉಚ್ಚೆ ಹೊಯ್ಕಂಡು ಕುಡೀರಿ ನಾವೇನು ಮಾಡಾಮು. ನಮ್ಮ ಬೆಳೀಗೆ ನೀರಿಲ್ಲ. ಬೆಳೆ ಬರೋ ತನಕ ಇನ್ನಾ ಒಂದು ತಿಂಗಳು ಯಾರಿಗೂ ನೀರು ಕೊಡಂಗಿಲ್ಲ' ಅಂತ ಸಣ್ಣಗೌಡ ನೀರು ತರಾಕ ಹೋದ ಮಂದಿಗಿ ಗದರಿಸಿ ಕಳಿಸ್ಯಾನ...'' ಅಮರಮ್ಮ ಪೂರ್ತಿ ಮಾತು ಮುಗಿಸೋ ತನಕ ಗುಡಿಸಲಾಗ ಕೂಡಾಕ ಆಗಲಾರ್ದ ಶ್ಯಾಣಪ್ಪ ಗುಡಿಸಲಿನಿಂದ ಹೊರಬಂದ. 'ಮಲ್ಲಪ್ಪನ್ನ ಎಬ್ಬಿಸಿದ್ರ ಕುಡಿಯಾಕ ಒಂದು ತಂಬಿಗೆ ನೀರು ಕೊಡ್ತಾನನು ಕೇಳಬಕು. ನೀರು ಇದ್ವು ಅಂದ್ರ ಇಲ್ಲ ಅನ್ನೋ ಮನುಷ್ಯಾ ಅಲ್ಲ' ಅಂತ ಅಂದುಕೊಂಡನಾದ್ರೂ ಮಕ್ಕಂಡವರನ್ನ ಎಬ್ಬಿಸದು ಬೇಸಲ್ಲ ಅಂತ ಅನ್ನಿಸಿತು. ಮತ್ತೆ ಸಗರಪ್ಪ ಕಟ್ಟೆ ಕಡೆ ಬಂದ. ಗೋಡೆ ಮರೆಗೆ ಉಚ್ಚೆ ಹೊಯ್ಯುವರಂತೆ ಕುಳಿತು ತಿಣುಕಾಡಿದ. ಒಂದೆರಡು ಹನಿಗಳು ಅಂಗೈಗಿ ಹತ್ತಿದವು. ನಿರಾಶೆಯಿಂದ ಎದ್ದು ಮಲಗಲೆಂದು ಗುಡಿಸಲೊಳಗೆ ಕಾಲಿಟ್ಟ... ಬಿಕ್ಕುಗಳು ನಿಲ್ಲಲಿಲ್ಲ...

## ಎರಡು

ಅಂಗಳದಲ್ಲಿ ಹತ್ತಾರು ಜನ ನಿಂತು ಗಲಾಟೆ ಮಾಡುತ್ತಿದ್ದುದು ಕೇಳಿದ ಕೂಡಲೇ ಶ್ಯಾಣಪ್ಪನ ನಿದ್ದೆ ಹಾರಿ ಹೋಯ್ತು. ಆಕಳಿಸುತ್ತಲೆ ಎದ್ದ ಶ್ಯಾಣಪ್ಪ ದೋತರ ಸರಿಪಡಿಸಿಕೊಂಡು ಹೊರ ನೋಡಿದ. ಮಲ್ಲಪ್ಪನ್ನ ಯಾರೋ ಬಡಿಯುತ್ತಿದ್ದುದು ಕಂಡುಬಂತು. ಗೌಡ್ರ ಆಳುಮಕ್ಳು ಮಲ್ಲಪ್ಪನ್ನ ನೆಲದ ಮ್ಯಾಲಹಾಕಿ ಬಡಿತಿದ್ರು. ತಿಮ್ಮನಗೌಡ ಸೈಕಲ್ ಮೋಟಾರನ್ನ ಕುಂಡ್ಯಾಗ ಇಟ್ಗಂಡು ಹುಟ್ಯಾನನು ಅಂಬಂಗ ಸೈಕಲ್ ಮೋಟಾರ್ ಮ್ಯಾಲ ಕುಳಿತು ಹಳೆಯ ಹಿಂದಿ ಸಿನೇಮಾದ ಹೀರೋಗಳು ಸೇದುವ ಸ್ಟೈಲಿನಲ್ಲಿ ಸಿಗರೇಟ್ ಸೇದುತ್ತಿದ್ದ. ಊರಿಗೆ ಮೊಬೈಲ್ ಸಿಗ್ನಲ್ ಬರದಿದ್ದರೂ ತಿಮ್ಮನಗೌಡ ಲಿಂಗಪ್ಪನ ಬದಲಾಗಿ ಕೊರಳಲ್ಲಿ ಮೊಬೈಲ್ ಸೆಟ್ಟೊಂದನ್ನು ತೂಗುಹಾಕಿಕೊಂಡಿದ್ದ. ಬೆಳಗಾ ಮುಂಜಾನೆನೇ ಮಲ್ಲಪ್ಪ ತನ್ನ ಮಗನ್ನ ಕರ್‍ಕೊಂಡು ಹೋಗಿ ಗೌಡ್ರ ಕೆರೆಲಿಂದ ಎರಡು ಕೊಡ ಕುಡಿಯೋ ನೀರು ತರಾಕ ಹೋಗಿದ್ನಂತ. ಅದನ್ನ ನೋಡಿದ ಗೌಡ್ರ ಆಳುಗಳು ಮನಿಗಿ ಬಂದು ಅವನ್ನ ಬಡಿಯಾಕ ಹತ್ಯಾರ ಎಂದು ಸುತ್ತ ನಿಂತ ಜನ ಮಾತಾಡೋದು ಶ್ಯಾಣಪ್ಪನ ಕಿವಿಗೆ ಬಿತ್ತು. ಗೌಡ್ರತಲ್ಲಿ ಬಂದ ಶ್ಯಾಣಪ್ಪ ತಾನು ವಯಸ್ಸಿನಲ್ಲಿ ದೊಡ್ಡವನಾಗಿದ್ದರೂ ಗಾಡಿಯ ಬ್ರೇಕ್‌ನ ಮೇಲಿದ್ದ ತಿಮ್ಮನಗೌಡನ ಕಾಲು ಮುಟ್ಟಿ ನಮಸ್ಕಾರ ಮಾಡಿದ.

''ಬುಡ್ರಿ ಗೌಡ. ಏನೋ ತಿಳಿಲಾರ್ದ ತಪ್ಪು ಮಾಡ್ಯೆತಿ ಹುಚ್ಚು ಕೋಡಿ. ನಾ ಬುದ್ಧಿ ಹೇಳ್ತೀನಿ ಸಾಕು ಅಂತ ಆಳುಗಳಿಗೆ ಹೇಳ್ರಿ'' ಕೈಮುಗಿದು ಬೇಡಿಕೊಂಡ. ತಿಮ್ಮನಗೌಡ ಕೈಸನ್ನೆ ಮಾಡಿದ. ಗೌಡನ ಮಾತಿಗೆ ತಕ್ಕಂತೆ ನಡೆದುಕೊಂಡು ಆಳುಗಳು ಗೌಡನ್ನೊಮ್ಮೆ, ಮಲ್ಲಪ್ಪನ್ನ ಒಮ್ಮೆ ನೋಡಿದರು. ತಮ್ಮ ಮನೆಯಲ್ಲೂ ನೀರಿಲ್ಲದ್ದು ನೆನಪಾಗಿ ಕಪಾಳದ ಮೇಲಿಂದ ಹರಿಯುತ್ತಿದ್ದ ಬೆವರನ್ನೇ ನಾಲಿಗೆಯಿಂದ ಸವರಿಕೊಂಡು ನೆಕ್ಕಿದರು. ಮೈಗೆ ಕೈಗೆ ಹತ್ತಿದ್ದ ಧೂಳನ್ನು ಒರಸಿಕೊಳ್ಳುತ್ತಾ ಮಲ್ಲಪ್ಪ ಮೆಲ್ಲಕ ಮ್ಯಾಲ ಎದ್ದು ನೆಲಾ ನೋಡುತ್ತಾ ನಿಂತ. 'ಇನ್ನೊಮ್ಮೆ ಹಂಗ ಮಾಡಲ್ಲ...' ಅಂಬಂತೆ ಗೌಡ್ರ ಕಡೆ ಮುಖ ಮಾಡಿ ನೋಡಿದರೂ ಹೊಟ್ಟೆಯೊಳಗ ಕೆಂಡ ಕಲೆಸಿದಂತಾಯಿತು. 'ನಮ್ಮಂತೋರು ಮ್ಯಾಲ ಏರಿ ಬರೋ ಗೌಡ ಕೇರಿ ಮಂದಿ ಮ್ಯಾಲ ಏರಿ ಹೋದ್ರ ಗೊತ್ತಾಗುತ್ತ. ಮುಟ್ಟಿದ್ರ ಸಾಕು ಕೊಲ್ಲಾಕ ಬಂದಿದ್ರು ಅಂತ ಕೇಸು ಹಾಕ್ತಾರ. ನಮ್ಮಂತಾ ದುಡಿಯೋ ಅವರ ಜಾತಿಗೆ ಸೇರಿದ ಮಂದಿ ಕಾಣಲ್ಲ. ಉರಿಯಪೋ ಗೌಡ ಉರಿ. ಹುಲ್ಲು ಕಡ್ಡಿಗೂ ದೇವ್ರು ಸೆಗುತಿ

ಕೊಟ್ಟಾನ' ಎಂದು ಮಲ್ಲಪ್ಪ ತನ್ನ ಮನಸ್ಸಿನಲ್ಲಿ ಅಂದುಕೊಂಡು ಗುಡಿಸಲಿಗೆ ಹೋದ.

ತಿಮ್ಮನಗೌಡ ಸಗರಪ್ಪಕಟ್ಟೆ ಸುತ್ತ ನಿಂತ ಮಂದಿ ಮುಖಕ್ಕೆ ಧೂಳು ಎಬ್ಬಿಸಿ ಸೈಕಲ್ ಮೋಟಾರನ್ನ ಗರ್ರನೆ ತಿರುಗಿಸಿ ಸ್ಟಾರ್ಟ್ ಮಾಡಿಕೊಂಡು ಚಿನ್ನೂರಿನ ಕಡೆ ಹೋದ. ಮಲ್ಲಪ್ಪನ ಅವಸ್ಥೆ ನೋಡಿದ ಊರ ಜನರು ನಿಂತಲ್ಲೆ ಗಡ ಗಡ ನಡುಗಿದರು. ಗೌಡ್ರ ಆಳುಗಳು ಗೌಡನ ಹಿಂದೆ ಓಟದ ಸ್ಪರ್ಧೆ ಇಟ್ಟವರಂತೆ ಓಡಿದರು. ನಿಧಾನವಾಗಿ ಜನರ ಗುಂಪು ಕರಗತೊಡಗಿತು. ಶ್ಯಾಣಪ್ಪ, ಮೂಲಿಮನಿ ಅಮರಯ್ಯ, ಬಡಿಗೇರ ವಿರುಪಾಕ್ಷಪ್ಪ, ವಡ್ಡರ ಹುಸೇನಿ ಮಲ್ಲಪ್ಪನ ಗುಡಿಸಲು ಮುಂದೆ ನಿಂತರು. ''ಮಲ್ಲಪ್ಪಣ್ಣೋ ಹೊರಗ ಬಾರಪೋ...'' ಅಂತ ಹುಸೇನಿ ಕೂಗುತ್ತಾ ಆತನ ಮನೆ ಮುಂದೆ ಹೋಗಿ ನಿಂತ. ಹೊರಗ ಬಂದ ಮಲ್ಲಪ್ಪನ ಕೈ ಹಿಡಿದು ಸಮಾಧಾನಿಸಿದ. ತನ್ನ ಟವೆಲ್ಲಿನಿಂದ ಬೆನ್ನಿಗೆ ಹತ್ತಿದ್ದ ಧೂಳು ಕಸ ಕಡ್ಡಿ ಜಾಡಿಸಿದ. ಬಸ್ ಸ್ಟ್ಯಾಂಡ್ ಸಮೀಪವಿದ್ದ ಶೇಖರಯ್ಯನ ಹೋಟೆಲ್‌ನತ್ತ ನಡೆದರು. ''ಸರ್ಕಾರದಿಂದ ಮಂಜೂರಾದ ಕೆರಿ ತಮ್ದು ಅಂತ ತಿಳಿದು ನಮಗ ಒಂದು ಹನಿ ನೀರು ಕೊಡವಲ್ರು ಅಂದ್ರ ಹೆಂಗ. ಹಳ್ಳದಾಗ ನೋಡಿದ್ರ ನಾಲ್ಕಾರು ಆಳು ಒಳಗ ತೋಡಿದರೂ ನೀರು ಅಂಬವು ಅಮೃತ ಆಗ್ಯಾವ. ಮುಂಜಾನೆಲಿಂದ ಮಧ್ಯಾಹ್ನ ತನಕ ಕಷ್ಟ ಪಟ್ರ ಎರಡ್ಮೂರು ಕೊಡ ನೀರು ಸಿಕ್ರ ನಮ್ ಪುಣ್ಯ. ದನಕರು ಸಮೇತ ಹಳ್ಳದ ನೀರು ಕುಡಿಯಂಗಿಲ್ಲ. ಕುಡಿದ್ರೂ ಒದ್ದಾಡಿ ಸಾಯ್ತಾವ !'' ನಿಧಾನವಾಗಿ ನಡೆಯುತ್ತಾ ಶ್ಯಾಣಪ್ಪ ಮಾತಿಗಾರಂಭಿಸಿದ.

''ಹೀಂಗಾದ್ರ ಇವ್ರಿಗಿ ಬುದ್ಧಿ ಬರಂಗಿಲ್ಲ'' ಅಮರಯ್ಯ ತುಟಿಕಚ್ಚಿ ಹೇಳಿದ. ''ಬರಗಾಲ ಪರಿಹಾರದಾಗ ವರ್ಷದ ಹಿಂದ ಕೆರೆ ನಿರ್ಮಾಣ ಕಾಮಗಾರಿ ನಡೆದಿತ್ತು. ಕುಷ್ಟಗಿಯ ಸಣ್ಣ ನೀರಾವರಿ ಇಲಾಖೆ ಕೆರೆ ನಿರ್ಮಾಣಕ್ಕಂತ ೧೭ ಲಕ್ಷ ರೂಪಾಯಿ ಮಂಜೂರು ಮಾಡಿತ್ತು. ಸುತ್ತಮುತ್ತಲಿನ ನೂರಾರು ಕೂಲಿ ಕಾರ್ಮಿಕರಿಗೆ ಕೆಲಸ ಕೊಟ್ಟು ಕಾಮಗಾರಿ ನಡೆಸ್ಬಕು ಅಂಬದು ಸರ್ಕಾರದ ಆದೇಶ ಇತ್ತು. ದೊಡ್ಡ ದೊಡ್ಡ ಮಶಿನ್ ತರಿಸಿ ಕೆರೆ ಕೆಲಸ ಮುಗಿಸಿದ್ರು. ಊರಿನ ಒಬ್ರಿಗೂ ಒಂದು ದಿನ ಕೆಲಸ ಕೊಡಲಿಲ್ಲ. ತಾಲ್ಲೂಕಿನ ಅಧಿಕಾರ ಅವ್ರ ಕೈಯಾಗ ಐತಿ ಅದಕ್ಕ ಹೀಂಗ ಹದ್ದು ಮೀರಿ ಮೆರೆಯಾಕ ಹಚ್ಯಾರ'' ಅಂದ.

''ಊರಾಗಿರೋ ಅಂಬೇಡ್ಕರ್ ಸಂಘದ ಮಂದಿ ಮನಸ್ಸು ಮಾಡಿದ್ರ ಅವರಿಗೆ ಏನಾದ್ರೂ ಬುದ್ಧಿ ಕಲಿಸ್ತಾರ. ಆದ್ರ ಸಂಘದ ಭಾಳ ಹುಡುಗ್ರು ರೊಕ್ಕ ಕೊಟ್ಟೋರಿಗೆ ಜೈ ಅನ್ತಾರ. ಅವರಿಗೆ ಒಳ್ಳೇದು ಯಾವುದು ಕೆಟ್ಟದು ಯಾವುದು ಗೊತ್ತಾಗವಲ್ತು. ಅವ್ರಪ್ಪ ಅವ್ರವ್ವನೋರು ನಮ್ ಕುಡ ಕೂಲಿ ಮಾಡಾಕ ಬರ್ತಿದ್ರು. ಇವತ್ತು ಅವ್ರ ಮಕ್ಕಳು ದುಡೊಯೋದಿಲ್ಲ ಏನಿಲ್ಲ. ಕುಂಡ್ಯಾಗ ಗಾಡಿ, ಕೊಳ್ಳಾಗ ಮೊಬೈಲ್, ಕೈಯಾಗ ಪೆಪ್ಸಿ ಕೋಕೋ ಕೋಲಾ ಹಿಡಕಂಡು ತಾವಾ ರಾಜರು ಅಂಬಂಗ ತಿರುಗಾಡ್ತಾರ. ಅವರಿಗೆ ರೊಕ್ಕ ಎಲ್ಲಿಂದ ಬರುತ್ತೊ ಏನ್ ಕಥಿಯೋ ?'' ಬಡಿಗೇರ ವಿರುಪಾಕ್ಷಪ್ಪ ಕಳೆದ ಮೂವತ್ತು ವರ್ಷಗಳಿಂದಲು ತಾನು ಹಳೆ ಹರಕು ಮುರುಕು ಗುಡಿಸಲಿನಲ್ಲಿ ವಾಸಿಸುತ್ತಿದ್ದನ್ನು ನೆನೆಸಿಗೊಂಡು ಹೇಳಿದ.

ಶೇಖರಯ್ಯನ ಹೋಟಲ್ ಹೊರಗೆ ಒಳಗೆ ಜನ ಕಾಲು ಕಾಲು ತುಳಿತಿದ್ರು. ನಾಲ್ಕಾರು ಜನರು ಪೇಪರಿನ ಒಂದೊಂದು ಪುಟವನ್ನು ಕೈಯಲ್ಲಿ ಹಿಡಿದು ಜೋರಾಗಿ ಓದುತ್ತಿದ್ದರು. ಹತ್ತಾರು ಜನ ಅವರ ಸುತ್ತ ನಿಂತು ಪೇಪರಿನಲ್ಲಿ ಇದ್ದ ಚಿತ್ರಗಳನ್ನು ಕಣ್ಣರಳಿಸಿ ನೋಡುತ್ತಿದ್ದರು. ''ಅಂತೂ ನಮ್ ಧರ್ಮಸಿಂಗ್ ತನ್ನ ಸಾಮರ್ಥ್ಯ ತೋರಿಸಿಬುಟ್ಟ. ಮೂವತ್ತು ವರ್ಷದಿಂದ ಕಟ್ಟಿ ಕಾಡುತ್ತಿದ್ದ ವೀರಪ್ಪನ್ಗ ಮಣ್ಣು ಮುಕ್ಕಸಿದ'' ಊರಿನಲ್ಲಿ ಬಿ.ಎ. ಪಾಸಾದ ಮೊದಲ ವ್ಯಕ್ತಿ ಎಂಬ ಹೆಗ್ಗಳಿಕೆಯ ಬಿ.ಎ.ರಾಮನಗೌಡ ತನ್ನ ಚಾಳೀಸನ್ನು ಹಿಂದಕ್ಕೂ ಮುಂದಕ್ಕೂ ಮಾಡಿ ಸಂತಸದಿಂದ ಹೇಳಿದ. 'ಇದೆಲ್ಲಾ ನಾಟಗ ಚಿಗಪ್ಪ. ಇಷ್ಟು ದಿವಸ ನಿದ್ದೆ ಮಾಡಿದ್ರೇನು ಈ ಎಸ್‌ಟಿಎಫ್‌ನವರು. ವೀರಪ್ಪನ್ ಎರಡೂ ರಾಜ್ಯದ ರಾಜಕಾರಣಿಗಳಿಗೆ ಬೇಕಾಗಿದ್ದ. ಅದಕ್ಕ ಅವನನ್ನ ಕೊಲ್ಲಾಕ ಹಿಂದ ಮುಂದ ನೋಡಿದ್ರು. ಅವನ್ನ ಜೀವಂತ ಹಿಡಿದ್ರ ಎಲ್ಲಿ ತಮ್ಮ ಹಗರಣಗಳೆಲ್ಲಾ ಬಯಲಿಗೆ ಬರ್ತಾವ ಅಂತ ಹೇಳಿ ಅವನ್ನ ಗುಂಡಿಕ್ಕಿ ಕೊಲ್ಲಿಸಿದ್ರು. ಮೋಸದಿಂದ ಕೊಲ್ಸಿ ಗುಂಡಿನ ಚಕಮಕಿಯಲ್ಲಿ ಸತ್ತಾನ ಅಂತ ಕಥಿ ಕಟ್ಟೋ ಮಂದಿಗೆ ಹಿಂದಕ್ಕ ನೂರಾರು ಸಲ ವೀರಪ್ಪನ್ ಸಿಕ್ಕಿದ್ರೂ ಏನೂ ಮಾಡಿದ್ದಿಲ್ಲ ಅಂಬುದು ಸಣ್ಣ ಹುಡುಗ್ರಿಗೆ ಅರ್ಥ ಆಗುತ್ತ'' ಮೂಲಿಮನಿ ಅಮರಯ್ಯ ಒಂದು ನಿಮಿಷ ನಿಂತ ರಾಮನಗೌಡಗ ಹೇಳಿದ.

ನಾಲ್ಕಾರು ಮಂದಿ ಹೋಟಲ್‌ನಿಂದ ಎದ್ದು ಹೊರ ಹೋದ ಕೂಡಲೇ ಶ್ಯಾಣಪ್ಪ, ಮಲ್ಲಪ್ಪ, ಹುಸೇನಿ, ಅಮರಯ್ಯ ಬೆಂಚಿನ ಮ್ಯಾಲ ಕುಳಿತರು. ''ನೀರು ತಗಂಡು ಬಾರಪಾ'' ಇಡ್ಲಿ ಪಾತ್ರೆಯಿಂದ ಒಂದೊಂದಾಗಿ ಇಡ್ಲಿ ಪ್ಲೇಟ್‌ಗಳನ್ನು ಹೊರ ತೆಗೆಯುತ್ತಿದ್ದ ಶೇಖರಯ್ಯನಿಗೆ ಶ್ಯಾಣಪ್ಪ ಕೂಗಿ ಹೇಳಿದ. ಒಂದು ನಿಮಿಷ ಇಡ್ಲಿ ಪ್ಲೇಟ್ ಇಡುವುದನ್ನು ನಿಲ್ಲಿಸಿದ ಶೇಖರಯ್ಯ ''ತಪ್ಪು ತಿಳಕಬ್ಯಾಡ್ರಿ, ಬರೇ ಚಾವು ಕುಡುದ್ರ ನೀರು ಕೊಡಂಗಿಲ್ಲ. ಒಂದು ಜಾಂಬು ನೀರು ಬೇಕು ಅಂದ್ರ ನಾಷ್ಟಾ ಮಾಡ್ಬಕು'' ಎಂದು ಐದು ಜನರ ಮುಖಕ್ಕೆ ಬಡದಂಗ ಮಾತನಾಡಿದ. ಏನು ಮಾತಾಡಬೇಕು ಅಂಬುದು ತಿಳಿಲಾರ್ದಂತಾಗಿ ಐವರು ಶೇಖರಯ್ಯನ ಸಿಟ್ಟಿನ ಮುಖವನ್ನು ದುರುಗುಟ್ಟಿ ನೋಡುತ್ತಾ ಕುಳಿತರು.

ಹೋಟಲ್‌ನಲ್ಲಿದ್ದ ನಾಲ್ಕಾರು ಜನರಿಗೆ ಇಡ್ಲಿ ಕೊಡುತ್ತಾ ಶೇಖರಯ್ಯ ಮಾತು ಮುಂದುವರೆಸಿದ. ''ನಿನ್ನೆಲಿಂದ ನಾಲ್ಕು ಕಿ.ಮೀ. ದೂರದಾಗ ಇರೋ ಮಲ್ಲಿಕಾರ್ಜುನ ಕ್ಯಾಂಪಿನಿಂದ ನೀರು ಹೊತ್ತು ತಂದೀವಿ. ಇವತ್ತು ಐದು ರೂಪಾಯಿಗೆ ಒಂದು ಕೊಡ ಅಂತ ನೀರು ಹಾಕಿಸಿಕೊಂಡಿವಿ. ರೊಕ್ಕ ಕೊಟ್ಟು ಖರೀದಿ ಮಾಡಿದವರಿಗೆ ಗೊತ್ತು ನೀರಿನ ಕಿಮ್ಮತ್ತು. ಚಾವು ಕುಡಿದವರಿಗೆಲ್ಲಾ ಒಂದೊಂದು ತಂಬಿಗೆ ನೀರು ಕೊಟ್ರ ಮುಗೀತು. ತಲೆ ಮ್ಯಾಲ ಚಾಪಿ ಹಾಕ್ಕಂಡು ಹೋಗ್ಬೇಕಾಗುತ್ತ. ನೋಡ್ರಪ ಇಷ್ಟು ದಿವಸನಾ ಬ್ಯಾರೆ ಇನ್ಮೇಲೆ ಬ್ಯಾರೆ'' ಯಾರ ಮ್ಯಾಲಿನ ಸಿಟ್ಟೋ ಶೇಖರಯ್ಯ ಈಗ ಬಂದು ಕುಳಿತ ಇವರ ಮುಂದ ಹೊರಹಾಕಿದ.

''ಆಯ್ತಪ ಚಾದಾಗಾದ್ರೂ ನಿರು ಹಾಕಿರ್ತಿಯಲ್ಲ. ನೀರೇ ಸಿಗಲ್ಲ ಅಂತೇಳಿ ಸಕ್ಕರಿ, ಚಾ ಪುಡಿ ಕೂಡಿಸಿ ಕೊಡಾಗ ಹಚ್ಚಿಯೇನು ?'' ವಿರುಪಾಕ್ಷಪ್ಪ ಶೇಖರಯ್ಯನ ಸಿಟ್ಟಿನ ಮಾತಿಗೆ ಸಮಾಧಾನದಿಂದ ಕೇಳಿದ. ಚಿನ್ನೂರಲ್ಲಿ ಪಿ.ಯು.ಸಿ. ಓದುತ್ತಿದ್ದ ಶೇಖರಯ್ಯನ ಹಿರಿಮಗ ಬಸಯ್ಯ ಐದು ಕಪ್ಪು ಚಾ ತಂದು ಇಟ್ಟು ಹೊರಗ ಪೇಪರ್ ಓದುತ್ತಿದ್ದ ಜನರ ಕಡೆ ನಡೆದ. ಪೇಪರಿನ ಹಿಂದಿನ ಕ್ರೀಡಾ ಪುಟವನ್ನು ಬಗ್ಗಿ ನೋಡಿದ. ತನ್ನ ಜೊತೆಗಾರ ವೆಂಕಟೇಶನ್ನು ಕೂಗಿ ಕರೆದು ''ಸಚಿನ್ ತೆಂಡುಲ್ಕೂರ್ ಮುಂದಿನ ಮ್ಯಾಚಿನ್ಯಾಗ ಆಡ್ತಾನಂತ'' ತನ್ನನ್ನೇ ಇಂಡಿಯನ್ ಕ್ರಿಕೆಟ್ ಟೀಮಿಗೆ ಸೇರಿಸಿಕೊಂಡಿದ್ದಾರೋ ಎಂಬಂತೆ ಹೇಳಿದ. ''ಕುಣ್ಯಾಕ ಬರ್ಲಾರದಕಿ ನೆಲ ಡೊಂಕು ಅಂದಿದ್ಲಂತ. ಹಂಗ ನಮ್ ದೇಶದ ಕ್ರಿಕೆಟ್ ಟೀಮಿನವರು'' ವೆಂಕಟೇಶ ನಿನ್ನೆ ಮುಂಜಾನೆಯಿಂದ ಸಂಜೆತನಕ ಮ್ಯಾಚ್ ನೋಡಿದ್ದ ಬೇಸರವನ್ನು ಹೀಂಗ ತೋಡಿಕೊಂಡ. ''ಹೇ ತಮ್ಮಗುಳ, ಬಸ್ ಬಂತು ಕಾಲೇಜಿಗೆ ಹೋಗ್ರಿ. ಕ್ರಿಕೆಟ್ ಸುದ್ದಿ ಮಾತಾಡಾಕ ಸುರು ಮಾಡಿದ್ರು ಅಂದ್ರ ಆಯ್ತು ಯಾರಾದ್ರು ಮೈ ಮ್ಯಾಲಿನ ಬಟ್ಟೆ ಉಚ್ಚಿಕೊಂಡು ಹೋದ್ರೂ ಅರವು ಇರಂಗಿಲ್ಲ ಈಗಿನ ಹುಡುಗರಿಗೆ'' ಒಳಗಿನ ಪುಟ ಓದಬೇಕು ಎಂದು ಬಯಸಿದ್ದ ರಾಮನಗೌಡ, ವೆಂಕಟೇಶ ಮತ್ತು ಬಸಯ್ಯ ಕೊನೆಯ ಪುಟವನ್ನು ಬಿಗಿಯಾಗಿ ಹಿಡಿದು ಓದುವುದನ್ನು ಸಹಿಸದೇ ಮಾತನಾಡಿದ.

ಶ್ಯಾಣಪ್ಪ, ಮಲ್ಲಪ್ಪ, ಅಮರಯ್ಯ, ಹುಸೇನಿ ಮತ್ತು ವಿರುಪಾಕ್ಷಪ್ಪ ಬರೇ ಚಾ ಕುಡಿದು ಹೊರ ಬಂದರು. ಪೇಪರಿನ ಇನ್ನೊಂದು ಪುಟ ಹಿಡಿದು ಓದುತ್ತಿದ್ದ ಬೇವಿನಾಳ ಸಿದ್ಧಣ್ಣ ರಾಮನಗೌಡನಿಗೆ ಕೇಳುವಂತೆ ಜೋರಾಗಿ ಹೇಳಿದ, ''ಎಸ್‌ಟಿಎಫ್‌ನೋರು ವೀರಪ್ಪನ್ ಹತ್ಯೆ ನಂತ್ರ ಪಶ್ಚಿಮ ಘಟ್ಟದಲ್ಲಿರೋ ನಕ್ಸಲೈಟರನ್ನ ಸದೆ ಬಡೆಯಾಕ ಹೋಗ್ತಾರಂತ. ಅವರ ಕಥೀನೂ ಮುಗಿಸುತಾರ ಬುಡು ಚಿಗಪ್ಪ..''

''ಅವರು ಮುಗಿಸ್ತಾರೋ ಇಲ್ಲೋ ನಿಮ್ಮಂತೋರು ಮಾತ್ರ ಮುಗಿಸ್ತೀರಿ. ನಕ್ಸಲೈಟು ಅಂದ್ರ ಅಷ್ಟ್ಯಾಕ ಗಾಬರಿಯಿಂದ ಮಾತಾಡಕ ಹತ್ತೀದಿ ಸಿದ್ಧಣ್ಣ, ಅವರೂ ನಮ್ ನಿಮ್ಮಂಗ ಮನ್ಸೇರು. ಗಡಿ ಕಾಯೋ ಸೈನಿಕರಿಗಿಂತ ಹೆಚ್ಚಿನ ಗೌರವ ಇವರಿಗೆ ಕೊಡಬೇಕು. ಸೈನಿಕರಿಗಾದ್ರ ತಿಂಗಳಿಗೆ ಕೈತುಂಬ ಸಂಬಳ ಕೊಡುತಾರ. ಅವ್ರು ಸತ್ರ ಇಡೀ ರಾಷ್ಟ್ರಕ್ಕನ ದೊಡ್ಡ ನಷ್ಟ ಅಂಬಂಗ ಮಾತಾಡ್ತಾರ. ಇಡೀ ದೇಶದಾಗ ಸಮಾನತೆ, ಸಮ ಬಾಳು, ಸಮ ಪಾಲು ತರಬೇಕು ಅಂತ ತಮ್ಮ ಜೀವದ ಹಂಗು ತೊರೆದು ಹೋರಾಟ ಮಾಡೋ ನಕ್ಸಲೈಟ್ರು ಅಂದ್ರ ವೈರಿಗಳು ಅಂಬಂಗ ಎಲ್ಲರೂ ಮಾತಾಡ್ತಾರ. ಅವ್ರು ಭ್ರಷ್ಟ ರಾಜಕಾರಣಿಗಳು ಮತ್ತ ಅಧಿಕಾರಿಗಳ ವೈರಿಗಳು ಹೊರ್ತಾಗಿ ನಮ್ ನಿಮ್ಮಂತಾ ಸಾಮಾನ್ಯ ಮನ್ಸೇರ ವೈರಿಗಳು ಅಲ್ಲ'' ವಿರುಪಾಕ್ಷಪ್ಪ ಮೊನ್ನೆ ಆಂಧ್ರದಲ್ಲಿ ನಡೆದ ನಕ್ಸಲೈಟರ ಬೃಹತ್ ಸಮಾವೇಶದಲ್ಲಿ ಮಹಾನ್ ನಾಯಕರು ಮಾಡಿದ್ದ ಭಾಷಣವನ್ನು ತೆಲುಗು ಪೇಪರಿನಲ್ಲಿ ಓದಿದ್ದು, ಕ್ರಾಂತಿಕಾರಿ ಯುವ ಸೇನೆಯ ಸಿದ್ಧಾರ್ಥ, ಶಿವರಾಜ ಊರಿಗೆ ಬಂದಾಗೊಮ್ಮೆ ತನ್ನ ಮುಂದೆ ಆಡುತ್ತಿದ್ದ ಮಾತುಗಳನ್ನು ನೆನಪಿಸಿಕೊಂಡು ಮಾತನಾಡಿದ. ವಿರುಪಾಕ್ಷಪ್ಪನ ಮಾತಿಗೆ ನಾಲ್ಕಾರು ಜನ 'ಹೌದು ಹೌದು' ಎನ್ನುವಂತೆ ತಲೆ ಅಲ್ಲಾಡಿಸಿದರು.

ಊರಿನ ನೂರಾರು ಜನ ಮಹಿಳೆಯರು ಮಕ್ಕಳು ರೋಡಿನ ಮೇಲೆ ಸಮೀಪದ ಹಸಮಕಲ್, ರಂಗಾಪುರ, ಮಲ್ಲಿಕಾರ್ಜುನ ಕ್ಯಾಂಪುಗಳ ಕಡೆ ಖಾಲಿ ಕೊಡ ಹಿಡಿದು ನೀರು ತರಲು ಹೋಗುತ್ತಿದ್ದುದನ್ನು ಮಲ್ಲಪ್ಪ ನೋಡಿದ. ತನ್ನ ಹಿರಿಮಗಳು ಈರಮ್ಮ, ಸಣ್ಣ ಮಗಳು ಸ್ವಾವಂತ್ರಿ ಆ ಗುಂಪಿನಲ್ಲಿ ಹೋಗುತ್ತಿರುವುದನ್ನು ಕಂಡ. ಈರಮ್ಮನ್ನ ನೆನೆಸಿಗೊಂಡ ಮಲ್ಲಪ್ಪನ ಕಣ್ಣಾಗ ಸಣ್ಣಗೆ ನೀರು ಹರಿಯಲಾರಂಭಿಸಿತು. ತನ್ನ ತಂಗಿ ಮಗ ಭಾಳ ಒಳ್ಳೇತ ಅಂತ ಸಾಲ ಶೋಲ ಮಾಡಿ ಚನ್ನಬಸವಸ್ವಾಮಿ ಜಾತ್ರ್ಯಾಗ ಮೂರು ವರ್ಷದ ಹಿಂದ ಮದುವಿ ಮಾಡಿಕೊಟ್ಟಿದ್ದ. ಮದುವಿ ಆದ ಕೂಡಲೇ ಅಳಿಯ ಮಗಳು ದುಡಿಯಾಕಂತ ಮುಂಬೈಗೆ ಹೋದ್ರು. ಇಬ್ರೂ ದುಡಿದುಣ್ಣುತ್ತಿದ್ದನ್ನು ಕೇಳಿ ಸ್ವರ್ಗದಾಗನ

ಅನಿಸಿ ಅಂತ ಮಲ್ಲಪ್ಪಗ ಅನ್ನಿಸುತ್ತಿತ್ತು. ಆದ್ರ ಆರು ತಿಂಗಳ ಹಿಂದ ಹೆಂಡ್ತಿ ಮಕ್ಕಳನ್ನ ಒಂಟಿಯಾಗಿ ಮಾಡಿ ಇದ್ದಕ್ಕಿದ್ದಂಗ ಯಾವುದೋ ರೋಗ ಬಂದು ಅಳಿಯ ಸಿದ್ಧಪ್ಪ ಸತ್ತಾಗ ಆಕಾಶನ ಕಳಚಿ ತನ್ನ ಮ್ಯಾಲ ಬಿದ್ದಂತೆ ಮಲ್ಲಪ್ಪ ಒದ್ದಾಡಿದ್ದ. ಮಗಳು ಈರಮ್ಮ, ನಾಲ್ಕು ತಿಂಗಳ ರತ್ನಾನ ಕರ್‍ಕೊಂಡು ಬರಾಕ ಮುಂಬೈಗೆ ಹೋಗಿದ್ದು ನೆನಪಾಯಿತು...

ಆಳಿಯಗ ಏಡ್ಸ್ ಬಂದಿತ್ತು ಅದಕ್ಕ ಸತ್ತ ಅಂತ ಜನ ಮಾತಾಡತೊಡಗಿದರು. ಮಗಳು ದಿನದಿಂದ ದಿನಕ್ಕೆ ಸೊರಗುತ್ತಿದ್ದುದು, ಮೊಮ್ಮಗಳ ಬೆಳವಣಿಗೆ ಕುಂಠಿತ ಆದುದ್ದರ ಚಿಂತೆಯಲ್ಲಿ ಮಲ್ಲಪ್ಪ ನಿತ್ಯ ಬೇಯುತ್ತಿದ್ದ. ಶಿವಮ್ಮನೇ ತನ್ನ ಗಂಡನಿಗೆ, ''ರೋಗ ಮನ್ಸೇರಿಗೆ ಬರಲಾರ್‍ದ ಮರಕ್ಕ ಬರ್‍ತಾವೇನು ಮಾರಾಯ. ಬಂದದ್ದು ಅನುಭವಿಸ್ಬೇಕು. ಕಷ್ಟಗಳು ಯಾರನ್ನ ಬುಟ್ಟಾವ ಹೇಳು'' ಅಂತ ಸಮಾಧಾನ ಪಡಿಸುತ್ತಿದ್ದಳು. ಅಳಿಯ ಮಾಡಿದ ತಪ್ಪಿಗೆ ಮಗಳು, ಮೊಮ್ಮಗಳು ಕಷ್ಟ ಅನುಭವಿಸಬೇಕಾಯ್ತು. ಮಗಳು ತನಗೆ ಏನೂ ಆಗಿಲ್ಲ ಎಂಬಂತೆ ಎಲ್ಲರ ಕುಡ ನಕ್ಕಂತ ಇದ್ದುದು ಇಡೀ ಊರಿನ ಜನರಿಗೆ ಆಶ್ಚರ್ಯವಾಗಿತ್ತು... ಹೋಟಲ್ ಮುಂದ ನಿಂತ್ಗಂಡು ಸರ್ಕಾರಿ ಸಾಲಿ ಕಡೆ ತದೇಕಚಿತ್ತದಿಂದ ನೋಡುತ್ತಿದ್ದ ಮಲ್ಲಪ್ಪನ್ನ ಕಂಡ ಶ್ಯಾಣಪ್ಪ 'ಏ ತಮ್ಮಾ ಏನ್ ನೋಡಾಕ ಹತ್ತಿದಿ. ರೋಡಿನ ಮ್ಯಾಲ ಯಾರೂ ಇಲ್ಲ. ಮನಿ ಕಡೆ ಹೋಗಾಮು ನಡಿ. ಎತ್ತುಗಳನ್ನ ಹಿರೇ ಕಾಲೇವುದ ಕಡೆ ಹೊಡಕಂಡು ಹೋಗಿ ನೀರು ಕುಡಿಸಿಗೆಂಡು ಮೇಯಿಸಿಕೊಂಡು ಬರಾಮು' ಅಂತ ಮುಟ್ಟಿ ಮಾತನಾಡಿಸಿದಾಗಲೇ ಮಲ್ಲಪ್ಪನಿಗೆ ಎಚ್ಚರಾಯ್ತು...

### ಮೂರು

''ಅವನ ಗಡ್ಡಕ್ಕ ಎಳ್ಳಿ ಹೇರ್‍ಲಿ, ಅವನು ಸಾಯುವಾಗ ಬಾಯಾಗ ಹಾಕಾಕ ಹನಿ ನೀರು ಸಿಗಲಾರ್‍ದಂಗ ಆಗ್ಲಿ, ನಮ್ ಶಾಪ ನಿನಗ ತಟ್ಟಲಾರ್‍ದ ಬುಡಲಪೋ ಗೌಡ''. ''ಆವತ್ತು ಮಂತ್ರಿಗಳು ಕೆರೆ ಉದ್ಘಾಟನಿಗಿ ಅಂತ ಬಂದಾಗ ಇನ್ಮುಂದ ಈ ಊರಿನ ಮಂದಿಗಿ ನೀರಿನ ಸಮಸ್ಯೆ ಇರಂಗಿಲ್ಲ. ಶುದ್ಧವಾದ ಕೆರೆ ನೀರನ್ನ ಬಳಸ್ಬೋದು ಅಂತ ನಾಚಿಕಿ ಇಲ್ಲದವರಂತೆ ಹೇಳಿದ್ರು.'' ''ತಾಲ್ಲೂಕಿನ ಎಂಎಲ್ಎ ಮಲ್ಲನಗೌಡನ್ನ ನಾವು ಸಾಯೋತನಕ ಮರಿಬಾರ್‍ದಂತ. ಕಲಿಯುಗದ ಭಗೀರಥ ಅಂತ ದೊಡ್ಡ ದೊಡ್ಡ ಮಂದಿ ಶಾಸಕರನ್ನ ಹೊಗಳಿ ಅಟ್ಟಕ್ಕೇರಿಸಿದ್ರು''. ''ನಾಲ್ಕು ದಿನ ಸಾಕಾಗುವಷ್ಟು ನೀರು ಕೊಟ್ಟಂಗ ಮಾಡಿ ಐದನೇ ದಿನ ನಮ್ ಗದ್ದೆಗೆ ನೀರು ಬೇಕು. ಟೇಲೆಂಡ್ ಕಾಲುವೆಗೆ ನೀರು ಬರಾಂಗಿಲ್ಲ, ಕೆರೆ ನೀರಿನಿಂದ ಗದ್ದೆ ಹಚ್ತೇವಿ. ದಿನಕ್ಕ ಎರಡು ಕೊಡ ಕುಡಿಯಾಕ ಅಷ್ಟ ಕೊಡ್ತೇವಿ ಅಂತ ಅಂದ್ರು''.

ದೊಡ್ಡ ಕಾಲೇವು ಸಮೀಪ ಎತ್ತುಗಳನ್ನು ಮೇಯಿಸಿಕೊಂಡು ಊರಿಗೆ ಮರಳಿದ ಮಲ್ಲಪ್ಪ ಮತ್ತು ಶ್ಯಾಣಪ್ಪ ಸಗರಪ್ಪ ಕಟ್ಟಿ ಸಮೀಪ ಬಂದಾಗ ಇಪ್ಪತ್ತಕ್ಕೂ ಹೆಚ್ಚು ಮಹಿಳೆಯರು ಜೋರಾಗಿ ಮಾತನಾಡುತಿದ್ದುದು ಕೇಳಿತು. ಅವರ ಸುತ್ತ ಸಣ್ಣ ಹುಡುಗ್ರು ನಿಂತು ನೋಡುತ್ತಿದ್ದರು. ಮಲ್ಲಪ್ಪ ಮತ್ತು ಶ್ಯಾಣಪ್ಪ ಇಬ್ರೂ ಎತ್ತುಗಳಿಗೆ ಹಚ್ಚಿದ ಹಗ್ಗವನ್ನು ಬಿಗಿ ಹಿಡಿದು ನಿಂತರು.

ಸಗರಪ್ಪ ಕಟ್ಟೆ ಮ್ಯಾಲ ಕುಳಿತ ವಿರುಪಾಕ್ಷಪ್ಪ, ಅಮರಯ್ಯ, ಹುಸೇನಿ ಜೋರಾಗಿ ಮಾತಾಡುತ್ತಿದ್ದುದು ಕೇಳಿತು. ''ಹೋಗ್ಲಿ ಬುಡು ಕುಡಿಯಾಕನ ನೀರು ಸಿಗತಾವಲ್ಲ ಅಂತ ಸುಮ್ನಿದ್ವಿ. ನಿನ್ನೆಲಿಂದ ಕುಡಿಯಾಕ ಸಮೇತ ನೀರು ಕೊಡಂಗಿಲ್ಲ. ಯಾರಿಗಾದ್ರೂ ಹೇಳ್ರಿ. ಪೊಲೀಸ್ ಸ್ಟೇಷನ್ನಿಗೆ ಕಂಪ್ಲೆಂಟ್ ಕೊಡ್ತಿರೇನು. ನಾವಾ ಕಂಪ್ಲೇಂಟ್ ಬರ್‍ದು ಕೊಡ್ತೇವಿ ಅಂತ ಮೂರೂ ಬಿಟ್ಟ ಮಾನಗೇಡಿಗಳಂತೆ ಅನ್ನಾಕ ಹತ್ಯಾರ''.

''ಆತೇನು ಕಡಿಮಿ, ಎಂಪಿ ಆಗ್ಯಾನಲ್ಲ ಚನ್ನಬಸಪ್ಪ. ಎಲೆಕ್ಷನ್ನಿಗೆ ಮೊದ್ಲು ಬ್ಯಾರೆ ಪಕ್ಷದಲ್ಲಿದ್ದ ಎಂಎಲ್ಎ ಮಲ್ಲನಗೌಡನ್ನ ಕಂಡ್ರ ಹಾವು ಮುಂಗ್ಲಿ ಗತೆ ಮಾಡ್ತಿದ್ದ'' ''ಸರ್ಕಾರಿ ದುಡ್ಡಿನ್ಯಾಗ ಶಾಸಕರ ಹೊಲದಾಗ ನಿರ್ಮಿಸಿದ ಕೆರೆಯಿಂದ ಊರಿನ ಜನರಿಗೆ ಒಂದು ತಂಬಿಗೆ ನೀರು ಸಿಕ್ವು ಅಂದ್ರ ರಾಜಕೀಯದಿಂದ ಸನ್ಯಾಸ ಸ್ವೀಕರಿಸ್ತೀನಿ ಅಂತ ಆತ ದೊಡ್ಡದಾಗಿ ಭಾಷಣ ಮಾಡ್ತಿದ್ದ'' ''ಸನ್ಯಾಸ ಸ್ವೀಕರಿಸ್ತೀನಿ ಅಂಬುದು ಬರೇ ನಾಟಗದ ಮಾತು ಅಷ್ಟ, ಈಗ ಎಂಪಿ, ಎಂಎಲ್ಎ ಇಬ್ರೂ ಅಣ್ಣ ತಮ್ಮ ಗತೆ ಆಗ್ಯಾರ. ಓಟು ಹಾಕಿ ಆರಿಸಿ ಕಳಿಸಿದ ಮಂದೀನ ಅವರಿಗೆ ವೈರಿಗಳಂತೆ ಆಗೀವಿ''. ದೂರದಲ್ಲಿ ನಿಂತಿದ್ದ ಮಲ್ಲಪ್ಪ ಮತ್ತು ಶ್ಯಾಣಪ್ಪನ್ನ ನೋಡಿದ ವಿರುಪಾಕ್ಷಪ್ಪ ದಾರಿಗೆ ಅಡ್ಡ ನಿಂತ ಹುಡುಗ್ರಿಗೆ, ''ಎತ್ತುಗಳು ಹೋಗಾಕ ದಾರಿ ಬುಡ್ರಿ'' ಅಂತ ಹೇಳಿ, ''ಹೇ ಮಲ್ಲಪ್ಪ, ಶ್ಯಾಣಪ್ಪಣ್ಣ ಮನ್ಯಾಗ ಎತ್ತು ಕಟ್ಟಾಕಿ ಇಲ್ಲಿಗಿ ಜಲ್ದಿ ಬರ್‍ರಿ'' ಅಂತ ಕೂಗಿದ.

ಶ್ಯಾಣಪ್ಪ ಗುಡಿಸಲು ಮುಂದಿದ್ದ ಕಾಡುಗಲ್ಲಿಗೆ ಎತ್ತುಗಳನ್ನ ಕಟ್ಟಿ ಹಾಕಿ ಒಂದು ಜಾಂಬು ನೀರು ಕುಡಿಬೇಕು ಅಂತ ಮನ್ಯಾಗಿದ್ದ ಎಲ್ಲಾ ಗಡಿಗಿ ಪಡಗ ತಡಕಾಡಿ ನೋಡಿದ. ಒಂದು ಹನಿ ನೀರು ಕಾಣಲಿಲ್ಲ. ಹೆಂಡತಿ, ಮಕ್ಕಳ ಮುಖ ನೋಡಿದ. ತಲಿ ಕೆಳಗ ಹಾಕ್ಕೆಂಡು

ಕುಳಿತಿದ್ರು. ''ನೀರಿನ ಕಾಲಾಗ ಸಾಕಾಗಿ ಹೋಗೈತಿ. ಚಿನ್ನೂರಿನಿಂದ ಬಂದ ತಿಮ್ಮನಗೌಡನ ಮಕ್ಳು ಹೊಟ್ಟಿಗಿ ಏನು ತಿಂತಿದ್ದಾರು ? ನೀರಿಗೆ ಹೋದ ನಮ್ ಗೌರಮ್ಮನ ಕೈಹಿಡಿದು ಎಳೆದು 'ನೀ ನನ್ನ ಕುಡ ಚಿನ್ನೂರಿಗೆ ಬರ್ತೀನಿ ಅಂದ್ರ ಒಂದು ಕೊಡ ಅಲ್ಲ... ಒಂದು ಟ್ಯಾಂಕ್ ನೀರನ್ನ ನಿಮ್ಮ ಮನಿಗೆ ನಮ್ಮ ಆಳಮಕ್ಳು ಹಾಕಿ ಬರ್ತಾರ' ಅಂತ ಅಂದ್ರಂತ ಭಾಡಕೋಗಳು... ಇಡೀ ಊರಾಗ ತಮಗೇ ಹಂಗಾಮು ಐತೋ... ಅಂಬಂಗ ಖಬರುಗೆಟ್ಟು ಮಾತಾಡ್ತಾರ...'' ಅಮರಮ್ಮ ಇಷ್ಟು ಮಾತಾಡುತ್ತಲೇ ಗೌರಮ್ಮ ಮೊಣಕಾಲು ಸಂದಿಯಲ್ಲಿ ತಲೆ ಹುದುಗಿಸಿ ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಶ್ಯಾಣಪ್ಪ ಮಗಳು ಸಮೀಪ ಬಂದು ''ಇರ್ಲಿ ಸುಮ್ಕಿರವ್ವೋ... ಅವರಿಗೆಲ್ಲಾ ಕೆಟ್ಟ ಕಾಲ ಬಂದೈತಿ ಅದಕ್ಕ ಹಂಗ ಉರಿಯಾಕ ಹತ್ಯಾರ. ಅವ್ನು ನಿಮ್ಮ ಅಣ್ಣಗ ಈ ವಿಷಯ ಹೇಳಿದ್ರ ಅವ್ರ ಬಣ್ಣ ಬಯಲು ಮಾಡ್ತಿದ್ದ. ಸುಮ್ಕಿರವ್ವ... ನೀವೇನು ನೀರು ತರಾದು ಬ್ಯಾಡ... ನಾನ ಮಲ್ಲಿಕಾರ್ಜುನ ಕ್ಯಾಂಪಿಗೆ ಹೋಗಿ ನೀರು ತರ್ತೀನಿ. ಎಷ್ಟು ದಿವಸ ಕೆರೆ ನೀರು ನಮಗ ಕೊಡಂಗಿಲ್ಲ ಕಾಯ್ದು ನೋಡಾಮು...'' ಅಂತ ಹೇಳುತ್ತಾ ಒಣಗಿದ ತುಟಿಗಳ ಮ್ಯಾಲ ನಾಲಿಗಿ ಆಡಿಸಿಕೊಳ್ಳುತ್ತಾ ಹೊರ ಬಂದ.

ಊರಿನ ನೂರಾರು ಮಂದಿ ಸಗರಪ್ಪ ಕಟ್ಟಿ ಸಮೀಪ ಸೇರಿದ್ದರು. ಮುಂಜಾನೆ ಮಲ್ಲಪ್ಪನ್ನ ಬಡಿದಿದ್ದ ಗೌಡ್ರು ಆಳುಮಕ್ಳು ಬಸ್ಯಾ ಮತ್ತು ಚೆನ್ನರನ್ನು ಊರಿನ ಹತ್ತಾರು ಜನ ಎಳ್ಕಂಡು ಬಂದು ಸಗರಪ್ಪ ಕಟ್ಟಿ ಮ್ಯಾಲಿದ್ದ ಬೇವಿನಗಿಡಕ್ಕ ಹಗ್ಗದಿಂದ ಕಟ್ಟಿ ಹಾಕಿದ್ದರು. ಮಲ್ಲಪ್ಪ, ಆತನ ಹೆಂಡ್ತಿ, ಮಕ್ಕಳು ಆಳು ಮಕ್ಳಿಗೆ ಕ್ಯಾಕರಿಸಿ ಮುಖಕ್ಕ ಉಗುಳುತಿದ್ರು. ವಿರುಪಾಕ್ಷಪ್ಪ ಕಟ್ಟಿ ಮ್ಯಾಲ ಎದ್ದು ನಿಂತು ''ಆಳುಮಕ್ಳು ಏನು ತಪ್ಪು ಮಾಡ್ಯಾರ. ಗೌಡ್ರ ಹೇಳಿದಂಗ ಕೇಳ್ಯಾರ ಅಷ್ಟ ಅವ್ರಿಗೆ ನಾ ಬುದ್ಧಿ ಹೇಳ್ತೀನಿ. ಸುಮ್ಕಿರ್ರಿ'' ಅಂತ ಆಳಮಕ್ಳಿಗೆ ಬಡಿಯುತ್ತಿದ್ದ, ಉಗುಳುತಿದ್ದ ಮಂದೀನ ದೂರ ಸರಿಸಿದ.

''ಕೇಳ್ರಪೋ ತಿಮ್ಮನಗೌಡನ ಮನಿಯವರು ಎಲ್ಲಾರೂ ಇವತ್ತು ರಾತ್ರಿನೇ ಬೆಂಗಳೂರಿಗೆ ಹೋಗ್ತಾರ. ಎಂಎಲ್‌ಎ ಮಲ್ಲನಗೌಡ ಮಂತ್ರಿ ಆಗ್ಯಾನಂತ. ನಾಳಿ ವಿಧಾನಸೌಧದಾಗ ಪ್ರಮಾಣ ಪತ್ರ ಸ್ವೀಕರಿಸ್ತಾನಂತ' ಅಂತ ಹುಸೇನಿ ಕೂಗಿ ಹೇಳಿದ. ಪಕ್ಕದಲ್ಲಿ ನಿಂತಿದ್ದ ಅಮರಯ್ಯ ಹುಸೇನಿಗಿಂತ ಜೋರಾಗಿ, ''ಇಷ್ಟು ವರ್ಷ ಎಂಎಲ್‌ಎ ಆಗಿ ಇಡೀ ತಾಲ್ಲೂಕನ್ನ ಭಾಳ ಸುಧಾರಿಸ್ಯಾನ. ಇನ್ನಾ ಮಂತ್ರಿ ಆಗಿ ಮತ್ತಷ್ಟು ಸುಧಾರಿಸ್ತಾನ. ಜನ್ರ ಸೇವೆ ಅಂದ್ರ ಆ ಮನೆತನದವ್ರಿಗೆ ದೇವ್ರ ಸೇವೆ ಇದ್ದಂಗ. ಮಾನ ಮರ್ಯಾದಿ ನಾಚಿಕಿ ಇಲ್ಲದ ಅಡ್ನಾಡಿ ಜನ ಅವ್ರು...'' ಸಿಟ್ಟು ನೆತ್ತಿಗೇರಿತ್ತು ಅಂಬಂಗ ಮಾತಾಡಿದ.

''ಲೇ ತಮ್ಮಗುಳ ನಿಮ್ಮ ಗೌಡ ಏನು ಮಾಡ್ಯಾನ ಅಂಬುದು ಅರ್ಥ ಮಾಡಿಕೊಳ್ರಿ. ನೀವೂ ನಮ್ಮಂಗಲೇ. ಅವ್ರ ಮಾತು ಕೇಳಿದ್ರ ನಿಮಗ ನೀರು ಕೊಡ್ತಾರನು ? ನೀರು ಅಂತ ಕೇಳಿದೋರ ಬಾಯಾಗ ಉಚ್ಚಿ ಹೊಯ್ತಾರ ನಿಮ್ ಗೌಡ್ರು. ಊರ್ಮಂದಿ ಎರಡು ದಿನ ಆತಿ. ಬರೀ ಉಗುಳು ನುಂಗುವಂಗ ಆಗೈತಿ. ಇವತ್ತು ಸಾಯಂಕಾಲ ಜನರಿಗೆ ನೀರು ತರಾಕ ಬುಡಬೇಕು. ಇಡೀ ಊರ್ಮಂದಿ ಪರ್ವಾಗಿ ಕೈಮುಗ್ದು ಬೇಡಿಕೊಂತೀನಿ. ನಿಮಗ ಬಡದ್ರ ನಮಗ ಪಾಪ ಬರುತ್ತ...'' ಎಂದು ಶ್ಯಾಣಪ್ಪ ಗೌಡ್ರ ಆಳುಮಕ್ಕಳ ಮುಂದ ಕೈಮುಗಿದು ನಿಂತ. ಆಳಮಕ್ಳು ತಮ್ದು ತಪ್ಪಾತಿ ಅಂಬಂಗ ಶ್ಯಾಣಪ್ಪಗ ಕೈಮುಗಿದರು. ಕ್ಷಣಾರ್ಧದಲ್ಲೇ ಸಗರಪ್ಪ ಕಟ್ಟಿ ಸಮೀಪ ನಿಂತ ನೂರಾರು ಜನ ಕೆರೆಯಿಂದ ನೀರು ತರ್ಬಕು ಅಂತ ಮನೆಗೆ ಓಡಿದರು. ಇವತ್ತು ತಮ್ಮನ್ನ ತಡೆಯಾಕ ಯಾರೂ ಬರಂಗಿಲ್ಲ ಅಂಬ ಸಂತಸದಿಂದ ಮನೆಯಲ್ಲಿದ್ದ ಖಾಲಿ ಕೊಡ, ಬಕೀಟು ಹಿಡಿದು ಊರ ಹೊರಗಿನ ಕೆರೆ ಕಡೆ ಏಳುತ್ತಾ ಬೀಳುತ್ತಾ ಸಾಗಿದರು. ನೀರು ತರುವ ಖುಷಿಯಲ್ಲಿ ಗಿಡಕ್ಕೆ ಕಟ್ಟಿಹಾಕಿದ್ದ ಆಳುಮಕ್ಕಳನ್ನ ಬಿಡಿಸಲು ಮರ್ತೇ ಬಿಟ್ಟಿದ್ದರು. ಅರ್ಧ ತಾಸಿನ ನಂತ್ರ ಬಂದ ಮಲ್ಲಪ್ಪ ಹಗ್ಗ ಬಿಚ್ಚಿದ. ಈಗ ತಾನು ಕೆರೆಯಿಂದ ತಂದ ನೀರನ್ನು ಬಸ್ಯಾ ಮತ್ತು ಚೆನ್ನರಿಗೆ ಕುಡಿಯಲು ಕೊಟ್ಟ... ಅವರು ನೀರು ಕುಡಿಯುತ್ತಾ ಮಲ್ಲಪ್ಪನ ಮುಖಾನ ದಿಟ್ಟಿಸಿ ನೋಡಿದರು. ಅವರ ಕಣ್ಣಿಂದ ಸಣ್ಣಗೆ ಕಣ್ಣೀರು ಝುರಿಯಾಗಿ ಕಪಾಳದ ಮೇಲಿಂದ ಹರಿಯಿತು. ಮಲ್ಲಪ್ಪ ಹೆಗಲ ಮ್ಯಾಲಿದ್ದ ಟವೆಲ್ಲಿನಿಂದ ಅವರ ಮುಖವರೆಸಿದ...

ಇಡೀ ಊರೆಂಬ ಊರು ಮಂದಿ ಉಂಡು ಮಲಗಿ ತಾಸು ದೀಡು ತಾಸು ಆಗಿತ್ತು. ಬಸ್‌ಸ್ಟ್ಯಾಂಡಿನ ಸಮೀಪ ನಾಲ್ಕಾರು ನಾಯಿಗಳು ಒದರಿದ್ದ ಸದ್ದಿಗೆ ಶ್ಯಾಣಪ್ಪ ಹಾಸಿಗೆಯಲ್ಲಿ ಎದ್ದುಕುಂತ. ಗುಡಸಲಿಯ ತಟ್ಟಿ ಬಾಗಲ ಮುಂದಕ್ಕ ಮಾಡಿ ಹೊರಗ ನೋಡಿದ. ಕತ್ತಲಲ್ಲಿ ಆ ವ್ಯಕ್ತಿ ತಮ್ಮ ಮನೆ ಕಡೆ ಬರುತ್ತಿರುವುದು ಕಂಡಿತು. ಸ್ವಲ್ಪ ದೂರ ಇರುತ್ತಲೇ... ''ಯಾರು... ನೀವು ?'' ಅಂತ ಕೇಳಿದ. ''ನಾನು...'' ಎಂದು ಮೆಲ್ಲನೆ ಹೇಳುತ್ತಲೇ ಬಂದವನು ತನ್ನ ಹಿರಿಮಗ ಹುಲುಗೇಶ ಎಂದು ತಿಳಿದುಕೊಳ್ಳಾಕ ಶ್ಯಾಣಪ್ಪನಿಗೆ ಕಷ್ಟವೆನಿಸಲಿಲ್ಲ. ಪೂರ್ತಿ ಕದ ತೆರೆದು ಹೊರ ಬಂದು ಮಗನ್ನ ಅಪ್ಪಿಕೊಂಡ. ಅವನ ಹೆಗಲಮ್ಯಾಲಿದ್ದ ಚೀಲಾನ ತನ್ನ ಕೈಯಲ್ಲಿ ತೆಗೆದುಕೊಳ್ಳಲು ಮುಂದಾದ. ಹುಲುಗೇಶ ''ಇರ್ಲಿ ಬುಡಪ... ನಾನೇ ಹಿಡ್ಕಂತೀನಿ. ಹ್ಯಾಂಗ ಅದೀರಿ'' ಅಂತ ಮೆಲ್ಲನೆ ಮಾತಾಡಿದ. ಅಮರಮ್ಮ, ಗೌರಿ ಇಷ್ಟೇ ಧ್ವನಿ ಕೇಳಿ ಗಡಬಡಿಸಿ ಎದ್ದು ಕುಳಿತರು.

ದೀಪದ ಬತ್ತಿಯನ್ನು ಎತ್ತರಿಸಿ ಮಗನ ಮುಖವನ್ನು ದಿಟ್ಟಿಸಿ ನೋಡಿದಳು. ''ಸ್ವಲ್ಪ ಬಾಗಿಲು ಹಾಕಿ ಬುಡ್ರಿ. ನಾನೊಂದು ಸ್ವಲ್ಪ ಹೊತ್ತು ಇದ್ದು ಹೋಗಿ ಬುಡ್ತೀನಿ. ಸಾವಿರಾರು ಗಿರಿಜನರಿಗಾಗಿ ನಡೆಯೋ ಹೋರಾಟದಾಗ ನಾನೂ ಸೇರಿಕೊಂಡೀನಿ. ಭಾಳ ದಿನಾ ಆಗಿತ್ತು. ನಿಮಗೆ ಹೇಳಿ ಹೋಗ್ಬಕು ಅಂತ ಬಂದ್ಯ. ಗೌರಿ ಅಣ್ಣನ ಬ್ಯಾಗನ್ನು ಬಿಚ್ಚಿ ನೋಡಿದಳು. ಕೆಂಪು ಬಣ್ಣದ ಅಕ್ಷರಗಳಿದ್ದ ನಾಲ್ಕಾರು ಪಾಂಪ್ಲೇಟುಗಳು, ಕಡು ನೀಲಿ ಬಣ್ಣದ ಪ್ಯಾಂಟು, ಶರ್ಟ್, ಎರಡು ಪುಸ್ತಕಗಳು, ಒಂದು ಡೈರಿ ಕಂಡಿತು. ತನಗೆ ಅಣ್ಣ ಏನಾದ್ರೂ ಸಾಮಾನು ತಂದಿರ್ಬೋದು ಅಂತ ತಿಳಕಂಡಿದ್ದ ಗೌರಿಗೆ ನಿರಾಶೆ ಆಯ್ತು. ಮೊದಲು ಇದ್ದಂಗ ಬ್ಯಾಗಿನ ಜಿಪ್ ಎಳೆದು ಅಣ್ಣನ ಮಾತುಗಳನ್ನೇ ಕೇಳುತ್ತಾ ಕುಂತಳು.

ಮುಂಜಾನಿ ಶೇಖರಯ್ಯನ ಹೋಟ್ಲದಾಗ ನಾಲ್ಕಾರು ಜನ ಮಾತಾಡುತ್ತಿದ್ದ ಪೇಪರ್‌ದಾಗಿನ ಮಾತುಗಳು ನೆನಪಾಗಿ ಶ್ಯಾಣಪ್ಪನ ಕಣ್ಣಂಚಿನಿಂದ ನೀರು ಸುರಿಯಿತು. ಅಮರಮ್ಮ ಗಂಗಾಳದಾಗ ನೀಡಿದ್ದ ಅನ್ನವನ್ನ ಅವಸರವಾಗಿ ಉಣ್ಣುತ್ತಿದ್ದ ಹುಲುಗೇಶ ಎರಡ್ಮೂರು ಸಲ ಬಿಕ್ಕಿದ. ಗೌರಿ ಜಾಂಬಿನಲ್ಲಿ ನೀರು ತಂದು ಅವನ ಕೈಗೆ ಕೊಟ್ಟಳು. ನೀರು ಕುಡಿಯುತ್ತಿದ್ದ ಹುಲುಗೇಶನಿಗೆ ಗುಡಿಸಲಿನ ಕಡೆಗೆ ಯಾರೋ ಬರುವ ಸದ್ದು ಕೇಳಿತು. ಕೈಯನ್ನೂ ತೊಳೆದು ಕೊಳ್ಳದೇ ''ನಾ...ಬರ್ತೀನಿ. ನಾ ಇಲ್ಲಿಗೆ ಬಂದಿದ್ದನ್ನು ಯಾರಿಗೂ ಹೇಳಬ್ಯಾಡ್ರಿ. ಆರಾಮ ಇರ್ರಿ'' ಅಂತ ಅನ್ನುತ್ತಲೆ ಬ್ಯಾಗ್ ಹಿಡಿದುಕೊಂಡು ಗುಡಿಸಲಿಯ ಆಪು ಕಿತ್ತಿ ಹೊರಗೆ ಓಡಿದ. ಅಮರಮ್ಮ, ಗೌರಮ್ಮ ಹುಲುಗೇಶ ಹೋದ ಕಡೆ ದಿಟ್ಟಿಸಿ ನೋಡಿದರು... ಒಂದೂ ಅರ್ಥವಾಗಲಿಲ್ಲ!

ಮಲ್ಲಪ್ಪ, ವಿರುಪಾಕ್ಷಪ್ಪ, ಹುಸೇನಿ, ಅಮರಯ್ಯ ತಲಾ ಒಂದೊಂದು ಉದ್ದನೆಯ ಬಡಿಗೆ ಹಿಡಿದು ಬಂದರು. ''ಶ್ಯಾಣಪ್ಪಣ್ಣ ಒಂದು ಸ್ವಲ್ಪ ಚಿಮಣಿ ಎಣ್ಣಿ ತಗಳಪೋ... ಪಂಜು ಮಾಡಬೇಕು. ನಮ್ ಹಿಂದನ ಬರ್ಬಕು ಜಲ್ದಿ ತಯಾರಾಗು...'' ಅಂತ ಮಲ್ಲಪ್ಪ ಸಮೀಪ ಬರುತ್ತಲೇ ಹೇಳಿದ. ಶ್ಯಾಣಪ್ಪನ ಕಿವಿಯಲ್ಲಿ ವಿರುಪಾಕ್ಷಪ್ಪ ಏನೋ ಹೇಳಿದ. ಒಳಗೋಗಿ ಚಿಮಣಿ ಎಣ್ಣಿ ಕ್ಯಾನ್ ತಂದ ಶ್ಯಾಣಪ್ಪ ಅವರ ಕುಡ ಊರ ಹೊರಗೆ ಹೆಜ್ಜೆ ಹಾಕಿದ. ಹೆಜ್ಜೆಗೊಮ್ಮೆ ಮಗ ನೆನಪಾದ. ತುಟಿ ಬಿಗಿ ಹಿಡಿದು ದುಃಖ ನುಂಗಿದ. ಬಸ್ ಸ್ಟ್ಯಾಂಡ್ ಸಮೀಪ ನೂರಾರು ಜನ ಕೈಯಲ್ಲಿ ಹಾರಿ, ಗುದ್ದಲಿ, ಸಲಿಕೆ ಹಿಡಿದು ಸಜ್ಜಾಗಿ ನಿಂತಿದ್ದನ್ನು ಕಂಡ ಅಮರಯ್ಯ ಸುತ್ತ ನಾಲ್ಕು ದಿಕ್ಕಿಗೂ ಕೇಳುವಂತೆ ಕೇಕೆ ಹಾಕಿದ. ಮಲ್ಲಪ್ಪನ ಕೈಯಲ್ಲಿದ್ದ ಬಡಿಗೆ ತುದಿಗೆ ಸುತ್ತಿದ್ದ ಬಟ್ಟೆಗೆ ಶ್ಯಾಣಪ್ಪ ಚಿಮಣಿ ಎಣ್ಣಿ ಹಾಕಿ ಕಡ್ಡಿಗೀರಿದ. ದಗ್ಗನೆ ಹೊತ್ತಿಕೊಂಡು ಪಂಜು ಸುತ್ತ ಮಾರಿಗೂ ಬೆಳಕು ಚೆಲ್ಲಿತು. ನಾಲ್ಕಾರು ಪಂಜುಗಳ ಬೆಳಕಲ್ಲಿ ಜನ ಉತ್ಸಾಹದಿಂದ ಸರ್ಕಾರಿ ಕೆರೆ ಕಡೆ ಓಡಿದರು...

''ಕುಡಿಯಾಕ ನೀರು ಕೊಡಲ್ಲ ಅಂತೀಯಲ್ಲ ಗೌಡ... ಆಯ್ತಪ ಇನ್ಮುಂದ ಕೊಡಬ್ಯಾಡ... ನಮಗ ನೀನು ನೀರು ಕೊಡಂಗಿಲ್ಲ ಅಂದ್ರ ನಿನಗೂ ನೀರು ಇರ್ಲಾರ್ದಂಗ ಮಾಡ್ತೀವಿ...'' ಅಂತ ಹುಸೇನಿ ಕೂಗಿದ... ಅರ್ಧ ತಾಸಿನಲ್ಲೇ ನೂರಾರು ಜನ ಕೇಕೆ ಹಾಕುತ್ತಾ ಕೆರೆಯ ಒಡ್ಡಿನ ಒಂದು ಭಾಗವನ್ನು ಕಡಿದು ಬೋಂಗಾ ಮಾಡಿದರು. ಬೋಂಗಾ ಮೂಲಕ ಹೊರ ಹರಿದ ನೀರಿಗೆ ಮೈಯೊಡ್ಡಿದರು. ಒಬ್ಬರಿಗೊಬ್ಬರು ನೀರು ಚಿಮುಕಿಸಿಕೊಂಡು ಸಂತಸ ಪಟ್ಟರು. ಬಾಯಲ್ಲಿ ನೀರು ಹಾಕಿಕೊಂಡು ಉಗುಳಿದರು...

ಉಟ್ಟ ಬಟ್ಟೆಯೆಲ್ಲಾ ತೊಯ್ದಿದ್ದರೂ ಮೈಕೊರೆಯುವ ಚಳಿಯಲ್ಲಿ ಜನರು ಊರಿನತ್ತ ಕುಣಿಯುತ್ತಾ ಬಂದರು. ತೊಯ್ದ ಬಟ್ಟೆಯಲ್ಲಿ ಮಲಗಿದ ಜನರಿಗೆ ತಣ್ಣಗೆ ನಿದ್ದೆ ಆವರಿಸಿತು...

ಮರುದಿನ ಬೇಗನೆ ಬೆಳಕು ಹರಿಯಿತು ಅಂಬಂಗ ಊರ ಜನ ಹಾಸಿಗೆಯಿಂದ ಬೇಗನೇ ಎದ್ದು ಕುಂತರು. ಸಗರಪ್ಪ ಕಟ್ಟಿ ಮುಂದಿನ ಅಂಗಳದಲ್ಲಿ ಕೆರೆಯ ನೀರು ಇನ್ನೂ ಸಣ್ಣ ಹಳ್ಳವಾಗಿ ಹರಿಯುತ್ತಿತ್ತು. ಹತ್ತಾರು ಹುಡುಗರು ಹಾಳೆಗಳಿಂದ ಮಾಡಿದ ಪುಟ್ಟ ದೋಣಿಗಳನ್ನು ನೀರಿನಲ್ಲಿ ಹರಿಬಿಟ್ಟು ಸಂತಸದಿಂದ ಆಡುತ್ತಿದ್ದರು. ಮನೆಯ ಅಂಕಣದಲ್ಲಿ ಕಟ್ಟಿ ಹಾಕಿದ್ದ ದನ ಕರುಗಳು ಹೊರಗೆ ನೀರು ಹರಿಯುತ್ತಿದ್ದನ್ನು ಕಂಡು ಕೊರಳಲ್ಲಿ ಕಟ್ಟಿದ್ದ ಹಗ್ಗ ಕಿತ್ತಿಕೊಂಡು ಹೊರಗೋಡಿ ಬಂದವು. ಹಾಯಾಗಿ ನೀರು ಕುಡಿಯ ತೊಡಗಿದವು... ಹರಿಯುತ್ತಿದ್ದ ನೀರನಲ್ಲಿ ಚಿನ್ನಾಟವಾಡತೊಡಗಿದವು...

ಕಲಿಗಣನಾಥ ಗುಡದೂರು
ಡಾ|| ಜಿ.ಎನ್. ಇರಕಲ್ ದವಾಖಾನೆ ಹಿಂದೆ, ಕುಷ್ಟಗಿ ರಸ್ತೆ, ಸಿಂಧನೂರು, ರಾಯಚೂರು ಜಿಲ್ಲೆ

# SAY SUCCESS SAY NEW LIGHT

| Particulars | Price (Rs) |
|---|---|
| **FOREIGN REPRINTS** | |
| Chess Player's Handbook | 90 |
| How to Develop a Superpower Memory | 60 |
| How to Read Palms | 35 |
| **ENGLISH IMPROVEMENT** | |
| N-128 Grammar & Composition | 45 |
| N-241 General English | 50 |
| N-249 20 Days to English Vocabulary | 35 |
| N-273 Better English | 40 |
| N-280 How to Write Effective English | 35 |
| N-330 Words Often Confused | 45 |
| N-336 Spoken English | 50 |
| N-338 A to Z Quotations | 45 |
| N-339 A to Z Idioms and Phrases | 45 |
| N-340 A to Z Proverbs | 45 |
| N-341 A to Z Synonyms & Antonyms | 45 |
| N-351 Basic English Grammar for Schools | 50 |
| N-354 Dictionary of Idioms & Phrases | 85 |
| N-355 Correct English Usage | 50 |
| N-362 Dictionary of Quotations | 95 |
| N-363 Instant Vocabulary Builder | 75 |
| N-376 Dictionary of Synonyms & Antonyms | 125 |
| **ESSAY WRITING** | |
| N-343 School Essays, Letters & Paragraphs | 40 |
| N-361 School Essays, Letters (for Juniors) | 35 |
| N-344 136 Essays for College & Competitive Exams | 95 |
| N-365 Advanced Essays for College and Competitive Exams | 125 |
| **LETTER WRITING** | |
| N-2 Applications for Better Jobs | 35 |
| N-3 Business Letters | 35 |
| N-6 Selected Letters | 55 |
| N-45 Top Every Day Letters | 50 |
| N-79 1111 Letters for All Occasions | 50 |
| N-274 How to Write Better Letters | 45 |
| N-317 Perfect Letter Writer | 55 |
| N-327 Model Business Letters | 65 |
| N-331 Dynamic Letters | 60 |
| N-332 Superb Business Letters | 60 |
| **FOR ENGG., IIT/MEDICAL EXAMS** | |
| N-217 I.I.T. Solved Papers (1992-2002) | 175 |
| N-306 I.I.T. Screening Test Guide | 175 |
| N-220 Medical Entrance Guide | 575 |
| N-314 All India Pre-Medical/ Pre-Dental Preliminary (CBSC) | 425 |
| N-372 Maharashtra Medical Entrance | 315 |
| N-311 CEEE Guide (Delhi College of Engg.) | 495 |
| N-383 AIEEE Guide | 545 |
| **GUIDES FOR BANK EXAMS** | |
| N-110 State Bank Probationary Officers | 215 |
| N-229 Bank Probationary Officers | 215 |
| N-301 Bank Clerical Exams | 110 |
| **FOR OTHER COMPETITIVE EXAMS** | |
| N-149 NDA Examination Guide | 325 |
| N-203 CAT Guide | 289 |
| N-225 Hotel Management Entr. Guide | 225 |
| N-251 NTSE (National Talent Search) | 175 |
| N-255 Mental & Reasoning Ability | 60 |
| N-298 MBA Entr. Exam Guide | 325 |
| N-299 CDS Exam Guide | 275 |
| N-328 Test of Reasoning | 110 |
| N-336 BBS Entr. Exam Guide | 160 |
| N-350 MAT Guide | 325 |
| N-352 NIFT/NID Exam Guide | 215 |
| N-358 MCA Entr. Exam Guide | 355 |
| N-364 Success in Interviews | 55 |
| N-366 BCA Entr. Exam Guide | 195 |
| N-367 BBA/BBM Entr. Guide | 185 |
| N-368 SSC Combined (Prel.) Graduate Level | 175 |
| N-369 SSC Combined (Prel.) Matric Level Guide | 85 |
| N-373 BIT Entrance Exam Guide | 195 |
| N-387 (CPO) Central Police Organisation | 175 |
| N-395 LLB Entrance Guide | 175 |
| **G. K., CURRENT AFFAIRS** | |
| N-26 G.K. & Current Affairs | 70 |
| N-77 Encyclopaedia of General Knowledge | 195 |
| N-304 General Intelligence for Students | 60 |
| N-334 सामान्य ज्ञान | 70 |
| **QUIZ BOOKS** | |
| N-345 G.K. Quiz | 45 |
| N-346 India Quiz | 45 |
| N-347 Sports Quiz | 45 |
| N-348 Geography Quiz | 45 |
| N-349 Science Quiz | 40 |
| N-357 Computer Quiz | 40 |
| N-370 The World Firsts | 50 |
| **COMPUTER BOOKS** | |
| N-359 Computer for Beginners | 125 |
| N-371 Internet Essentials | 160 |
| N-374 E-Commerce | 85 |
| N-380 The How & Why of Internet | 85 |
| **MISCELLANEOUS** | |
| N-176 Numerology for Everybody | 27 |
| N-250 You and Your Hand | 25 |
| N-264 How to Play Chess | 40 |
| N-278 Secrets of Success | 65 |
| N-281 Astrology for Everybody | 25 |
| N-291 How to Solve Your Personal Problems | 65 |
| N-296 How to Achieve Total Success | 65 |
| N-319 How to be a Super Salesman | 65 |
| N-322 Hypnotism and Yourself | 35 |
| N-323 How to Develop a Powerful Personality | 65 |
| N-324 Palmistry for All | 25 |
| N-349 The Art of Public Speaking | 50 |
| N-356 Book of Baby Names | 35 |
| N-360 Jokes for All | 35 |
| N-375 Treasure of Jokes | 35 |
| N-382 How to Live | 55 |
| N-386 Great Scientists | 60 |
| N-397 World Great Personalities | 115 |

**Get these books from your nearest bookseller.**
**In case of direct orders, please remit price of books plus packing and postage Rs. 20 by Bank Draft/M.O.**
**Prices are subject to change without notice.**

## NEW LIGHT PUBLISHERS

B-8, RATTAN JYOTI, 18, RAJENDRA PLACE, NEW DELHI - 110 008
Phone: 25737448, 25712649 Fax : 91-11-25812385
e-mail : newlight@vsnl.net

ಶುಭಾಶಯಗಳೊಡನೆ



# ಗೀತಾ ಬುಕ್ ಹೌಸ್

ಕೃಷ್ಣರಾಜೇಂದ್ರ ವೃತ್ತ, ಮೈಸೂರು – ೫೭೦ ೦೦೧

ದೂರವಾಣಿ : ೨೪೩೩೫೮೮೯, ೨೪ ೨೭೭೦೪

# ನಮ್ಮ ರಾಗಿ ಮುದ್ದೆ

ಬೀರಣ್ಣ ಗೊಂದಲಪುರ

**ಸಂ**ಪರ್ಕ ಕ್ರಾಂತಿಯ ಈ ಯುಗದಲ್ಲಿ, ಗೊಂದಲಪುರದಲ್ಲಿ ಚಿತ್ರೀಕರಣಗೊಂಡ ಹಾಗೂ ಅಲ್ಲಿನ ಜನರು ಭಾಗವಹಿಸಿದ್ದ ಕಾರ್ಯಕ್ರಮ ಟೀವಿಯಲ್ಲಿ ಪ್ರಸಾರವಾದ ಸುದ್ದಿ ಅವರಿಗೆ ತಿಳಿದಿದ್ದು ಮೂರು ತಿಂಗಳನಂತರ !

ಗುಲ್ಲೂರಿನ ಬೊಂಬಾಟ್ ಟೀವಿ ಚಾನೆಲ್ 'ನಮ್ಮ ರಾಗಿ ಮುದ್ದೆ' - ಎಂಬ ನೂತನ ಕಾರ್ಯಕ್ರಮ ಪ್ರಸಾರ ಮಾಡಿತು. ಬೇರೆ ಯಾವ ಚಾನೆಲ್‌ನವರಿಗೂ ಇಂಥ ವಿಷಯ ಈವರೆಗೆ ಹೊಳೆಯದೆ ಹೋದದ್ದು ಒಂದು ಸೋಜಿಗ ! ಅದು ಹೀಗೆಲ್ಲ ಕೋಲಾಹಲಕ್ಕೆ ಕಾರಣವಾಗಬಹುದೆಂದು ಯಾರೂ ಕನಸುಕಂಡಿರಲಿಲ್ಲ.

ಜನರು ಟೀವಿ ಎಂಬ ಮೂರ್ಖರ ಪೆಟ್ಟಿಗೆಯಲ್ಲಿ ಬರೀ ಕಣ್ಣೀರು ಸೀರಿಯಲ್‌ಗಳನ್ನು, ಅತ್ತೆ ಸೊಸೆ ಮಸಲತ್ತು, ಮಾಯಾಮಂತ್ರ, ಪಡ್ಡೆ ವಯಸ್ಸಿನ ಸಿನಿಮಾ ನಾಯಕ ನಾಯಕಿಯರ ಹುಚ್ಚು ಕುಣಿದಾಟ, ಜೋತಿಷಿಗಳ ಸೈಂಟಿಫಿಕ್ ಬಡಿವಾರ, ನಗರಕೇಂದ್ರಿತ ಹರಟೆಗಳ ಸಂಕಿರಣ – ಮುಂತಾದವನ್ನು ನೋಡಿ ಒಂದು ರೀತಿಯ ಮಂಪರು ಹಿಡಿಸಿಕೊಂಡಿದ್ದರು. ಈ ನೂತನ ಕಾರ್ಯಕ್ರಮ ಅವರನ್ನು ಮಂಪರಿನಿಂದ ಬಡಿದೆಬ್ಬಿಸಿತು. ಅವರು ಜೈ ಭುವನೇಶ್ವರಿ ಎಂದು ಉಗ್ಗಡಿಸಿದರು !

ಬೊಂಬಾಟ್ ಚಾನೆಲ್‌ನ ಜನಪ್ರಿಯತೆ ಒಮ್ಮೆಲೇ ಶಿಖರಕ್ಕೇರಿತು ! ಮುದ್ದೆ ಕಾರ್ಯಕ್ರಮ ರೂಪಿಸಿ, ಗೊಂದಲಪುರದ ಬೀದಿಗಳಲ್ಲಿ ದಿನಗಟ್ಟಲೆ ಅಲೆದಾಡಿ ಅದನ್ನು ತಯಾರಿಸಿ, ಪ್ರಸ್ತುತಪಡಿಸಿದ ಕುಮಾರಿ ಚಂಪಿಯ ಬೆನ್ನೇರಲು ಕೀರ್ತಿಶನಿ ಸೈಡ್‌ವಿಂಗಿನಲ್ಲಿ ಕಾಯತೊಡಗಿತು !

ಮಣ್ಣಿನ ವಾಸನೆಯ ಇಂಥವೇ ಒರಿಜಿನಲ್ ಕಾರ್ಯಕ್ರಮಗಳನ್ನು ತಯಾರಿಸಿ ಪ್ರಸಾರ ಮಾಡಲು ನಿಮಗೇನಾಗಿದೆ ಧಾಡಿ – ಎಂದು ಗುಲ್ಲೂರು ಕನ್ನಡಿಗರು ಇತರ ಚಾನೆಲ್‌ನವರನ್ನು ತರಾಟೆಗೆ ತೆಗೆದುಕೊಂಡರು. ಈ ರಾಗಿ ಮುದ್ದೆ ಕಾರ್ಯಕ್ರಮವನ್ನು ಎಲ್ಲ ಚಾನೆಲ್‌ಗಳಲ್ಲೂ ಪ್ರಸಾರ ಮಾಡುವಂತೆ ಆದೇಶ ಹೊರಡಿಸಬೇಕೆಂದು ಕರುನಾಡ ಸೇನೆಯವರು ಸರಕಾರದ ಮೇಲೆ ಒತ್ತಡ ಹೇರಿದರು !

'ನಮ್ಮ ರಾಗಿ ಮುದ್ದೆ' ನವೆಂಬರ್ ಕನ್ನಡಿಗರನ್ನು ಮಾತ್ರವಲ್ಲದೆ, ಇದು ತಮಗೊಂದು ಐಡೆಂಟಿಟಿ ನೀಡಿತೆಂದು, ಕನ್ನಾಡಿನ ಇತರರನ್ನೂ ಬಡಿದೆಬ್ಬಿಸಿತು. ಈವರೆಗೆ ಅವಲಕ್ಕಿ ಮೊಸರು, ಇಡ್ಲಿ ಆಂಬೊಡೆ, ನೀರುದೋಸೆ, ಜೋಳದ ಬಕ್ರಿ – ಮುಂತಾಗಿ ಪರಸ್ಪರ ಕೆಕ್ಕರಿಸುತ್ತಿದ್ದ ಮಹಾಕನ್ನಡಿಗರು ರಾಗಿ ಮುದ್ದೆಗೇ ಬೆಂಬಲ ನೀಡಿ ಒಗ್ಗಟ್ಟಾದರು !

ಹೀಗೆ ಜನರಲ್ಲಿ ಮಿಂಚಿನ ಸಂಚಾರ ಉಂಟಾದ ಸಂದರ್ಭದಲ್ಲಿ ನಮ್ಮ ಪತ್ರಿಕೆಗಳು ಅಳಿಲು ಸೇವೆ ಸಲ್ಲಿಸದಿದ್ದರಾಗುತ್ತದೆಯೆ ! ರಾಗಿ ಮುದ್ದೆ ಮಹಿಮೆಯನ್ನು ಕೊಂಡಾಡುವ ಲೇಖನಗಳು, ಪದ್ಯಗಳು ಪ್ರಕಟವಾಗತೊಡಗಿದವು. ನಿಧಾನಕ್ಕೆ ವಾರದ ವಿಶೇಷ ಅಡುಗೆ ಕಾಲಂಗಳಲ್ಲಿ ರಾಗಿ ಮುದ್ದೆ, ರಾಗಿ ಹುರಿಟ್ಟು, ರಾಗಿ ರೊಟ್ಟಿ ಹುಚ್ಚೆಳ್ಳು ಖಾರ, ಮೊಸರು – ಮುಂತಾದವು ಕಾಣಿಸಿಕೊಂಡವು. ಇಂಥ ಲೇಖನಗಳನ್ನು ಅಲಂಕರಿಸಲು ವರ್ಣ ಚಿತ್ರಗಳು ಬೇಕಲ್ಲವೆ ? ಗಂಗಾಳದಲ್ಲಿ ಬಿಸಿಬಿಸಿ ರಾಗಿ ಮುದ್ದೆ, ಸೊಪ್ಪಿನ ಸಾರು, ಹಸಿ ಅವರೆಕಾಳು ಗೊಜ್ಜು – ಮುಂತಾದವು ಚಿತ್ರದಲ್ಲಿ ತದ್ರೂಪವಾಗಿ ಕಾಣಿಸುವಂತೆ ಮಾಡಲು ಛಾಯಾಚಿತ್ರಕಾರರು ಸಾಕಷ್ಟು ಸರ್ಕಸ್ ಮಾಡಬೇಕಾಯಿತಂತೆ !

ಬಂಡಾಯ ಒಲವಿನ ಕವಿಯೊಬ್ಬರು 'ರಾಗಿ ಮುದ್ದೆಯೆಂದರೆ ಏನೆಂದುಕೊಂಡಿರಿ ? ಅದು ಬರಿ ಮುದ್ದೆಯಲ್ಲ ಫಿರಂಗಿ ಗುಂಡು !' – ಎಂದು ಕವಿತೆ ಹೊಸೆದರೆ, ಮತ್ತೊಬ್ಬ ಅಣಕು ಕವಿ ಪುರಂದರದಾಸರ 'ರಾಗಿ ತಂದಿರಾ ಭಿಕ್ಷಕೆ ರಾಗಿ ತಂದಿರಾ ?' ಪದವನ್ನು 'ಮುದ್ದೆ ತಿಂದಿರಾ ದೇಹ ಪುಷ್ಟಿಗೆ ರಾಗಿಯ ಮುದ್ದೆ ತಿಂದಿರಾ !' – ಎಂದು, ದಾಸರ ಕ್ಷಮೆ ಕೋರಿ - ಅಣಕವಾಡು ರಚಿಸಿದರು. ಹೊಸ ಚುಟುಗ್ಗವಿಯೊಬ್ಬರು 'ಸುಮ್ಮನೆ ಕೆಡಬೇಡಿ ನಿದ್ದೆ, ತಿನ್ನಿರಿ ರಾಗಿಯ ಮುದ್ದೆ !' – ಎಂದು ಶುಗರ್ ಪೇಷಂಟ್‌ಗಳಿಗೆ ಸಲಹೆ ಮಾಡಿದರು.

ಕೆಲವು ಸಂಶೋಧಕರು ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಸಾಹಿತ್ಯದಲ್ಲಿ ರಾಗಿ ಮುದ್ದೆಯ ಪ್ರಸ್ತಾಪ ಎಲ್ಲೆಲ್ಲಿ ಬಂದಿದೆ, ಶಾಸನಗಳಲ್ಲಿ ರಾಗಿ ಮುದ್ದೆಯ ಉಲ್ಲೇಖ ಸಿಗಬಹುದೆ ಎಂದು ತರಾತುರಿಯಲ್ಲಿ ತಲೆ ತುರಿಸಿಕೊಳ್ಳತೊಡಗಿದರು.

ಗುಲ್ಲೂರಿನಲ್ಲಿ ಕದಲ ಕುತೂಹಲಿ ಕನ್ನಡಿಗರು ಪರಭಾಷಾ ಚಿತ್ರಗಳ ಪ್ರದರ್ಶನವನ್ನು ವಿರೋಧಿಸಿ ಪ್ರತಿಭಟಿಸುತ್ತಿದ್ದು, ಎದುರಿಗೆ ಸಿಕ್ಕಿದ ಅಂಗಡಿ ಮುಂಗಟ್ಟುಗಳ, ರಸ್ತೆಬದಿಗಳಲ್ಲಿ ನಿಲ್ಲಿಸಿದ್ದ ವಾಹನಗಳ ಗಾಜುಗಳನ್ನು ಪುಡಿಗುಟ್ಟತೊಡಗಿದ್ದರು. ಬೊಂಬಾಟ್ ಚಾನೆಲ್‌ನಲ್ಲಿ ಪ್ರಸಾರವಾದ ರಾಗಿ ಮುದ್ದೆ ಕಾರ್ಯಕ್ರಮ ಕನ್ನಡ ನಿರ್ದೇಶಕರ ಮೇಲೂ ಪ್ರಭಾವ ಬೀರಿತ್ತು. ತಮ್ಮ ಪಡ್ಡೆ ಹೀರೋ ಹೀರೋಯಿನ್‌ಗಳನ್ನು ಸ್ವಿಜರ್‌ಲ್ಯಾಂಡಿಗೋ, ಅಮೆರಿಕಕ್ಕೋ ಕರೆದೊಯ್ದು ಪಿಜ್ಜಾ ತಿನ್ನಿಸುವುದಕ್ಕಾಗಿ ಹಣ ಪೋಲು ಮಾಡುವುದನ್ನು ಇಂದೇ ಕೈ ಬಿಡುವುದೆಂದು ಅವರು ತೀರ್ಮಾನಿಸಿದರಂತೆ. ಇನ್ನು ಮುಂದೆ ಹೀರೋ-ಹೀರೋಯಿನ್‌ಗಳನ್ನು ಕನ್ನಾಡಿನ ಕಾಡು, ತೊರೆಗಳ ತೀರದಲ್ಲಿ ಹಾಡಿಸಿ, ಕುಣಿಸಿ, ದಣಿದಾಗ ರಾಗಿ ಮುದ್ದೆ ಕಪ್ಪಡಿಸುವ ದೃಶ್ಯ ಸೇರಿಸಿದರೆ ನಿಜವಾಗಿ ಕನ್ನಡದ ವಾಸನೆಯ ಸಿನಿಮಾ ಆಗುತ್ತದಲ್ಲ, ಎಂಬ ಆಲೋಚನೆ ಅವರ ತಲೆಯಲ್ಲಿ ಮಿಂಚಿನಂತೆ ಸುಳಿಯಿತಂತೆ !

'ಮುದ್ದೆ ತಿನ್ನೋರ್‍ಗೆಲ್ಲ ಬುದ್ಧಿ ಕಡಿಮೆ ಕಣ್ರೋ !' - ಎಂದು ಹಳ್ಳಿಯ ಹುಡುಗರನ್ನು



ಸದಾ ಮೂದಲಿಸಿ ಗೋಳುಹೊಯ್ದುಕೊಳ್ಳುತ್ತಿದ್ದ ಮೇಷ್ಟುಗಳು, 'ರಾಗಿ ಮುದ್ದೆ ತಿನ್ರಯ್ಯ, ಬುದ್ಧಿ ಹೆಚ್ಚುತ್ತೆ!' – ಎಂದು ಪ್ಲೇಟು ಬದಲಾಯಿಸಿದರಂತೆ !

ಈವರೆಗೆ ನಗದು ಬೆಳೆಗಳ ಬೆನ್ನು ಹತ್ತಿ ರಾಗಿಯನ್ನು ಕಡೆಗಣಿಸಿದ್ದ ರೈತರು ಎಚ್ಚೆತ್ತುಕೊಂಡು 'ಲೋ ಪುಟ್ಟಣ್ಣಾ, ಬುಟ್ಟಾಕ್ಲ ನಿನ್ ಕಬ್ಬು ಭತ್ತನೆಲ್ಲ! ಇನ್ ಮುಂದೆ ಏನಿದ್ರೂ ರಾಗಿದೆ ದರ್ಬಾರು'-ಎಂದು, ಬಿತ್ತನೆ ರಾಗಿಗಾಗಿ ಊರೂರು ಅಲೆಯತೊಡಗಿದರಂತೆ !

ಇನ್ನು ಮುಂದೆ ತಮ್ಮ 'ಮೆನು'ವಿನಲ್ಲಿ ರಾಗಿ ಮುದ್ದೆ ಸೇರಿಸಿಕೊಳ್ಳಬೇಕು ಎಂಬುದನ್ನು ಮನಗಂಡ ಸ್ಟಾರ್ ಹೋಟೆಲ್‌ಗಳವರು, ಒಮ್ಮೆಲೇ ಸಾವಿರಾರು ಬಿಸಿ ಮುದ್ದೆಗಳನ್ನು ಮಾಡಿ ಉರುಳಿಸಬಲ್ಲಂಥ ಯಂತ್ರವನ್ನು ತಯಾರಿಸಿಕೊಡುವಂತೆ ಮೈಸೂರಿನ 'ಸಿಎಫ್‌ಟಿಆರ್‌ಐ' ಸಂಸ್ಥೆಗೆ ಮನವಿ ಮಾಡಿಕೊಂಡರಂತೆ !

ಡಾಕ್ಟರುಗಳು, ರೋಗಿಗಳಿಗೆ 'ಅಕ್ಕಿ ಕಡಿಮೆ ಮಾಡಿ, ರಾಗಿ ಮುದ್ದೆ ತಿನ್ನಿ ಆರೋಗ್ಯಕ್ಕೆ ಒಳ್ಳೆಯದು' – ಎಂದು ಅಪ್ಪಟ ಕನ್ನಡಿಗರಿಗೆ ಮಾತ್ರವಲ್ಲದೆ ಕನ್ನಾಡಿಗೆ ವಲಸೆಬಂದು ತುಂಬಿಹೋಗಿರುವ ಇತರರಿಗೂ ಸಲಹೆ ಮಾಡತೊಡಗಿದರಂತೆ !

ಒಟ್ಟಾರೆ, ಕನ್ನಡಿಗರು ಜಾಗತೀಕರಣದ ಅಪಘಾತಕ್ಕೆ ಸಿಕ್ಕಿಕೊಂಡು ಕಂಗಾಲಾಗಿದ್ದ ಸಂದರ್ಭದಲ್ಲಿ ಪ್ರಸಾರವಾದ 'ನಮ್ಮ ರಾಗಿ ಮುದ್ದೆ' ಕಾರ್ಯಕ್ರಮ, ನಮ್ಮ ಐಡೆಂಟಿಟಿಯನ್ನು ನಮಗೆ ದಕ್ಕಿಸಿತು, ನಮ್ಮ ಸಂಸ್ಕೃತಿಯ ಪುನರ್ದರ್ಶನ ಮಾಡಿಸಿತು ಎಂಬುದೇ ಎಲ್ಲರ ಅಭಿಪ್ರಾಯ.

* * *

ಗೊಂದಲಪುರದವರ ಬಗ್ಗೆ ಅಕ್ಕಪಕ್ಕದ ಊರುಗಳವರಿಗೆ ಯಾವಾಗಲೂ ಒಂದು ಬಗೆಯ ತಾತ್ಸಾರ. ಆ ಊರಿನವರೆಲ್ಲರೂ ಒಂಥರಾ ಯಡವಟ್ಟರು ಎಂದೇ ತೀರ್ಮಾನಿಸಿ ಸಂದರ್ಭ ಸಿಕ್ಕಾಗೆಲ್ಲ ಅವರನ್ನು ಹೀಯಾಳಿಸುವುದುಂಟು! ಜೊತೆಗೆ, ಅವರು ಯಡವಟ್ಟು ಕೆಲಸ ಮಾಡಿಯೂ ಸುದ್ದಿಯಾಗುತ್ತಾರಲ್ಲ ಎಂದು ಅವರ ಬಗ್ಗೆ ಅಸೂಯೆಪಡುವುದು, ಜೊತೆಗೆ ಹೆಸರು ಗಳಿಸಿದರೂ ಒಂದಿಷ್ಟೂ ಜಂಬಪಡದೆ ತಣ್ಣಗಿರುತ್ತಾರಲ್ಲ ಎಂದು ಒಳಗೊಳಗೇ ಮೆಚ್ಚಿಕೊಳ್ಳುವುದೂ ಉಂಟು.

ಟಗರು ಮಾರಲು ತಳಗೆರೆ ಸಂತೆಗೆ ಹೋಗಿದ್ದ ಸಿಂಗ್ರಿಯನ್ನು ಪರಿಚಿತ ವ್ಯಕ್ತಿಯೊಬ್ಬ ಅಟಕಾಯಿಸಿದಾಗ ಆತನ ಮಾತಿನಲ್ಲಿ ಗೊಂದಲಪುರದವರ ಬಗ್ಗೆ ಮೆಚ್ಚು ಸ್ವಲ್ಪ ಹೆಚ್ಚೇ ಇತ್ತೆನ್ನಬಹುದು. ''ಲೋ ಸಿಂಗ್ರಿ, ಏನಾದ್ರೂ ನಿಮ್ಮೂರ್ ಜನವೇ ಸರಿಕಣ್ರಯ್ಯ, ಬಲೆ ಬೇಸ್! ನಿಮ್ ಪಾಡ್ಗೆ ನೀವು ಏನಾದ್ರೂ ಮಾಡ್ತಾ ಇರ್ತೀರಿ. ವರ್ಸಾ ವರ್ಸಾ ಗುಂಡಯ್ಯನ್ ಜಾತ್ರೆ ಮಾಡ್ಸಿ ಈ ಏಳೂರ್ ಜನಕ್ಕೆ ಸಾರಾಯಿ ಸಮಾರಾಧ್ನೆ ಮಾಡಿಸ್ತೀರಿ! ನಮ್ಮೂರ್ಗೆ ಮಾತ್ರ ಅಲ್ಲ, ಈ ಸೀಮೇಗೇ ಒಳ್ಳೆದಾಗ್ಲಿ ಅಂತ ಕಾವಿ ಗುರ್ಗೋಳ್ ಕರಿಸಿ ಯಗ್ನ-ಯಾಗ ಮಾಡಿಸ್ತೀರಿ. ಈಗ್ ನೋಡಿದ್ರೆ ನಿಮ್ಮೂರ್ ರಾಗಿ ಮುದ್ದೇನೆ ಟೀವಿ ಸೀರಿಯಲ್‌ನಲ್ಲೂ ಆಕ್ಸಿ ಫೇಮಸ್ ಮಾಡ್ಬುಟ್ರಿ! ನಿಮ್ಮೂರಿನ್ ಎಂಗಸ್ರು ಮಕ್ಳು ಎಲ್ರೂ ಸೇರ್ಕಂಡು ಚಂದಾಗೆ ಪಾರ್ಟ್ ಮಾಡಿದ್ದೀರಿ! ನಿಮ್ಮೂರಿನ್ ರಾಗಿ ಮುದ್ದೆ ಬನಿ ಬೇರೆ ಯಾವೂರಿನ್ ಮುದ್ದೇಗೂ ಬರುದಿಲ್ಲ ಅಂತ ಆ ಟೀವಿಯವ್ರೆ ಏಳುವಂಗ್ ಮಾಡಿದ್ರಲ್ಲ ಇನ್ನೇನ್ ಬೇಕು? ನೀವೇ ಸರಿಕಣ್ರಲ. ನಿಮ್ಮಿಂದಾಗಿ ನಮ್ ಸೀಮೇಗೇ ಒಳ್ಳೆ ಎಸ್ರು ಬಂತು!'' ಎಂದು ಮನಬಿಚ್ಚಿ ಹೊಗಳಿದನಂತೆ.

ಅದೇ ಉಸಿರಿನಲ್ಲಿ ''ಇದ್ರೆ ನಿಮ್ಮೂರಂಗಿರ್ಬೇಕು ಕಣೋ ಸಿಂಗ್ರಿ! ನಮ್ಮೂರ್ನವು ಅವೆ. ಕಿತಾಪತಿ ಮುಂಡೆಮಕ್ಳು. ಮಾತೆತ್ತಿದ್ರೆ ಪಾರ್ಟಿ, ರಾಜ್ಕೀಯ, ಬಡ್ಡಾಟ. ಮನೆ ಮನೆಗೂ ಪಾರ್ಟಿಗಳು ಕಣೋ. ಏನೂ ಬ್ಯಾಡ, ನಮ್ಮೂರಿನ್ ಎಣ್ಣೆಂಗ್ಸ್ರಗೆ ಜವಾಬ್ ಕೊಡು ಕಾಯ್ತದ ನಿನ್ನಿಂದ? ಇಂಗಂದ್ನಲ್ಲ ಅಂತೀಯೇನೋ, ಬಜಾರೆದ್ದೋಗವೆ ಕಣ್ಲ! ಇಂತೇ ಜನ ಇದ್ರೆ ಊರು ಉದ್ದಾರಾಯ್ತದೆ ಅಂತೀಯಾ?'' ಎಂದು ತಮ್ಮೂರಿನವರನ್ನು ಉಗಿದನಂತೆ.

ಆತನ ಮಾತಿನ ತಲೆಬುಡ ತಿಳಿಯದ ಸಿಂಗ್ರಿಗೆ ವಿಷಯ ತಿಳಿದನಂತರ, ಟಗರು ಮಾರಾಟದಲ್ಲಿ ನಷ್ಟವಾದದ್ದೂ ಮರೆತುಹೋಯಿತು. 'ಎಲಾ ಎಲಾ! ನಮ್ಮೂರಿನ್ ಸುದ್ದಿ ಟೀವಿಲೂ ಬಂದ್ಬುಟ್ಟದೆ ಅಂಗಾದ್ರೆ!' ಎಂದು ಅಚ್ಚರಿಗೊಂಡು ಹಾರುತ್ತಲೇ ಗೊಂದಲಪುರಕ್ಕೆ ಬಂದು ಸುದ್ದಿ ಹಬ್ಬಿಸಿ ಎಲ್ಲರಲ್ಲೂ ಮಿಂಚಿನ ಸಂಚಾರ ಉಂಟುಮಾಡಿದ!

ಗೊಂದಲಪುರದವರಿಗೆ ಟೀವಿ ನೋಡುವ ಅವಕಾಶ ಇರಲಿಲ್ಲ. ಊರಿಗೆಲ್ಲ ಇದ್ದುದು ಒಂದೇ ಕಪ್ಪು ಬಿಳುಪು ಟೀವಿ ಪೆಟ್ಟಿಗೆ. ಅದೂ ಬಂಗಾರಿಯ ಟೀ ಅಂಗಡಿಯಲ್ಲಿತ್ತು. ಅದರಲ್ಲಿ ದೂರದರ್ಶನದ ಕಾರ್ಯಕ್ರಮಗಳು ಕರೆಂಟು ಇದ್ದಾಗ ಮಾಸಲಾಗಿ ಬರುತ್ತಿದ್ದವು. ಗುಡಿಸಲು ಮೇಲಿದ್ದ ಅಂಟೆನಾವನ್ನು ಮರದ ಮೇಲಕ್ಕೇರಿಸಿದರೂ ಮಾಸಲು ಹೊಳಪಾಗಲಿಲ್ಲ. ದಿನದ ಹೆಚ್ಚು ಹೊತ್ತು ಮಲಗಿಯೇ ಇರುತ್ತಿದ್ದ ಅದನ್ನು ಲಡಕಾಸು ಎನ್ನುವವರೂ ಇದ್ದರು!

ತಮ್ಮ ಊರಿನಲ್ಲಿ ಚಿತ್ರೀಕರಿಸಿದ್ದ ರಾಗಿ ಮುದ್ದೆ ಕಾರ್ಯಕ್ರಮ ಟೀವಿಯಲ್ಲಿ ಬಂದು, ಅದನ್ನು ನೋಡಲು ಸಾಧ್ಯವಾಗಲಿಲ್ಲವೆಂದು ಎಲ್ಲರೂ ಸಪ್ಪೆಮುಖ ಮಾಡಿಕೊಂಡು ಲೊಚಗುಟ್ಟಿದರು. ಆ ಕಾರ್ಯಕ್ರಮದ ಚಿತ್ರೀಕರಣದಲ್ಲಿ ಉತ್ಸಾಹದಿಂದ ಸಕ್ರಿಯವಾಗಿ ಭಾಗವಹಿಸಿದ್ದವರೆಲ್ಲ ಅದನ್ನು ನೆನಪು ಮಾಡಿಕೊಳ್ಳತೊಡಗಿದರು.

ಕೆಲವು ತಿಂಗಳ ಹಿಂದೆ ಚೂಡಿಧಾರಿಣಿಯೊಬ್ಬಳು ಗೊಂದಲಪುರಕ್ಕೆ ಬಂದಿದ್ದಳು. ಪಂಚಾಯ್ತಿ ಮೆಂಬರು ಚೆಲುವಕ್ಕನನ್ನು ಭೇಟಿಮಾಡಿದಳು. ಗುಲ್ಲೂರಿನಿಂದ ಪತ್ರಕರ್ತೆ ಪುಟ್ಟಮ್ಮಣ್ಣಿಯ ಶಿಫಾರಸು ತಂದಿದ್ದಳು. ಚಂಪಕ ಎಂಬ ಹೆಸರಿನ ಆಕೆ ಸುಮಾರು ಇಪ್ಪತ್ತು ದಿನ ಅಲ್ಲಿ ತಂಗಿದ್ದು ಊರಿನವರನ್ನೆಲ್ಲ ಪರಿಚಯ ಮಾಡಿಕೊಂಡಿದ್ದಳು. ಆಕೆಯ ಬೀದಿಬೀದಿ ಅಲೆದಾಟಕ್ಕೆ ಚೆಲುವಕ್ಕನ ಮಗ ರಾಮಣ್ಣ ಬಾಲಂಗೋಚಿಯಾದ. 'ಅಕ್ಕಾವ್ರೆ, ಅವ್ವಾವ್ರೆ ಏನ್ ಮಾಡ್ಲಿಕತ್ತೀರಿ?' ಎಂದು ಎಲ್ಲರನ್ನೂ ಮಾತಾಡಿಸಿ ಸ್ನೇಹ ಗಳಿಸಿದ್ದಳು. ಆಕೆ ಸಿನಿಮಾ ಸೀರಿಯಲ್ ಮಾಡ್ತಾಳಂತೆ ಎಂಬ ಗುಟ್ಟು ರಟ್ಟಾದನಂತರ, ಹೆಂಗಸರು ಗಂಡಸರು ಮತ್ತಷ್ಟು ಆತ್ಮೀಯತೆಯಿಂದ ಆಕೆಯನ್ನು ಮಾತಾಡಿಸತೊಡಗಿದರು. ನಾಗತ್ತೆಯ ನಾಲಿಗೆಯಲ್ಲಿ ಚಂಪಕ ಎಂಬ ಹೆಸರು ಸುಲಭವಾಗಿ ಬಾರದೆ, ಆಕೆಗೆ ಕೆಂಪಕ್ಕ ಎಂಬ ಅಡ್ಡ ಹೆಸರು ಬಿತ್ತು. ಗಂಡಸರು ಸಹ 'ಬಾರ್ಲಾ ತಾಯವ್ವ' ಎಂದು ಮರ್ಯಾದೆ ತೋರಿಸಿದರು. ಈಕೆ ಯಾರ ಮನೆಯ ಮುಂದೆ ಸುಳಿದಾಡಿದರೂ 'ಬಾರವ್ವಾ ಕೆಂಪಕ್ಕ ಅಂಬ್ಲಿ ಕುಡೀವಂತೆ!' ಎನ್ನುತ್ತಿದ್ದರು - ಹೆಂಗಸರು.

ಚಂಪಕ ಹೀಗೆ ಎಲ್ಲರ ಸ್ನೇಹ ಗಳಿಸಿದ ನಂತರ ಕಾರ್ಯಕ್ರಮದ ಚಿತ್ರೀಕರಣಕ್ಕೆ ಅಣಿಯಾದಳು. ಅದಕ್ಕೆಂದು ಹೆಚ್ಚಿನ ಉಪಕರಣಗಳು, ಕೃತಕ ದೀಪಗಳನ್ನೇನೂ ತಂದಿರಲಿಲ್ಲ. ಚಂಪಕ ತಂದಿದ್ದುದು ಒಂದು ಕ್ಯಾಮರಾ ಮಾತ್ರ. ಸಿದ್ದೇಶ್ವರಾನಂದಜಿ ಕೆಲವು ದಿನ ಸತ್ಸಂಗ ತೊರೆದು ಕವೆಗೋಲು ಹಾಗೂ ಮುದ್ದೆ ಹೊಂದಿಸುವ ಕೋಲು ತಯಾರಿಸಿಕೊಟ್ಟ. ರಾಗಿ ವನೆಯಲು, ಪದ ಹೇಳುತ್ತ ರಾಗಿ ಬೀಸಲು, ಹಿಟ್ಟು ವಂದರಿಯಾಡಲು ನಾಗತ್ತೆ, ಗುಜ್ಜಮ್ಮ, ಗುರುವಜ್ಜನ ಸೊಸೆ ಮಾದೇವಿ, ಚೆಲುವಕ್ಕ, ಸ್ಕೂಲಿನ ಮೇಡಮ್ಮ ಸಹಕರಿಸಿದರು.

ಬೀಸುವಕಲ್ಲಿನ ಗರ್ರ್ ಗರ್ರ್ ಸದ್ದಿನ ಸಂಗೀತದ ಹಿನ್ನೆಲೆಯಲ್ಲಿ ಗುಜ್ಜಮ್ಮ ಮತ್ತು ಮಾದೇವಿ

'ರಾಗಿ ಬೀಸೋಕಲ್ಲೇ ರತ್ನಮುತ್ತಿನ ಕಲ್ಲೇ।
ಅಣ್ಣನ ಮನೆಯ ಸಿಂಗಲ್ಲೇ। ಪಚ್ಚೆಕಲ್ಲೇ
ತೋಬನದ ಕಲ್ಲೇ ಕೊಡು ದನಿಯ'
– ಮುಂತಾಗಿ ಸುಮಾರು ಇಂಪಾಗಿಯೇ ಹಾಡಿದರು!

ನೀರಿಗೆ ಒಂದು ಹಿಡಿಯಷ್ಟು ಹಿಟ್ಟು ಬೆರೆಸಿ, ಅದು ಕುದಿದು ನೊರೆ ಬಂದನಂತರ ಹಿಟ್ಟನ್ನು ಬೆರಸುತ್ತ ಅದನ್ನು ಕೋಲಿನ ಸಹಾಯದಿಂದ ಹೇಗೆ ಹೊಂದಿಸಬೇಕು, ಅದು ಬೆಂದು ಬನಿಯಾಗಲು ಸ್ವಲ್ಪ ಹೊತ್ತು ಹೇಗೆ ಒಲೆಯ ಮೇಲಿಡಬೇಕು, ತುಸು ಹೊತ್ತಿನ ನಂತರ ಕೆಳಕ್ಕಿಳಿಸಿ, ಕೋಲಿನಲ್ಲಿ ಹೊಂದಿಸುತ್ತ ಬೆಂದ ಹಿಟ್ಟನ್ನು ಹಸೆಗಲ್ಲ ಮೇಲೆ ಕೈಗೆ ನೀರು ಹಾಕಿಕೊಂಡು ಹೇಗೆ ಬಿಸಿಬಿಸಿ ಮುದ್ದೆ ಉರುಳಿಸಬೇಕು – ಇದೆಲ್ಲ ಚಿತ್ರೀಕರಣವಾದದ್ದು ನಾಗತ್ತೆಯ ಗುಡಿಸಿಲಿನಲ್ಲಿ. ಮುದ್ದೆ ಉರುಳಿಸುವ ಸಮಯಕ್ಕೆ ಸರಿಯಾಗಿ ಛಾವಣಿಯ ಕಿಂಡಿಯಿಂದ ಬಿಸಿಲುಕೋಲು ಸುರಿದು ಬೆಳಕು ನೀಡಿ ಚಿತ್ರೀಕರಣಕ್ಕೆ ಸಹಕರಿಸಿತು! ಮುದ್ದೆ ನುಂಗುವ ಎಪಿಸೋಡಿನಲ್ಲಿ ಭಾಗವಹಿಸಲು ಶಾಲೆಯ ಮಕ್ಕಳೂ ಸೇರಿ ಒಂದು ಸಣ್ಣ ಗುಂಪು ತಯಾರಿತ್ತು. ತರಲೆತಿಪ್ಪ ಮತ್ತು ಪುಗುಸಟ್ಟೆ ಬೋರ ಗೊಂದಲಪುರದ ಸ್ಟೈಲಿನಲ್ಲಿ ಕುಕ್ಕರಗಾಲಿನಲ್ಲಿ ಗೋಡೆಗೆ ಒರಗಿ ಕುಳಿತು ಬಿಸಿ ಮುದ್ದೆ ಮುರಿದು ತುತ್ತು ಮಾಡಿ ಹಸಿ ಅವರೆಕಾಳು ಗೊಜ್ಜಿನಲ್ಲಿ ಉರುಳಿಸಿ ನುಂಗಿದ್ದರು!

''ಬೆಳಗ ವತ್ತಾರೆನೆ ಎರಡ್ ಮುದ್ದೇನಾ ಮಜ್ಗೇಲಿ ಕಲ್ಸಿ, ಈರುಳ್ಳಿ ನೆಂಜ್ಕಡ್ ಒಟ್ಟೆಗಿಳಿಸ್ಬುಟ್ಟು ವಲಕ್ಕಿಳಿದ್ರೆ ತಾಯವ್ವ, ಸಂಜೆಗಂಟ್ಲೂ ಒಟ್ಟೆ ತಣ್ಗಿರ್ತದೆ. ನಿನ್ ಒತ್ ತಿರ್ಗೋಗಂಟಾ ಅರಾ ಸಿವಾ ಅನ್ನುವಂಗಿಲ್ಲ! ಗೇಮೆ ಗೆಯ್ಯೋರ್ಗೆ ಮುದ್ದೇನೆ ಸರಿಕಣ್ ತಾಯವ್ವ!'' - ಎಂದು ತರಲೆ ತಿಪ್ಪ ಕಮೆಂಟ್‌ಕೂಡ ಮಾಡಿದ್ದ.

ಟೀವಿಯಲ್ಲಿ ಪ್ರಸಾರವಾದ ಕಾರ್ಯಕ್ರಮವನ್ನು ನೋಡಲು ಸಾಧ್ಯವಾಗಲಿಲ್ಲವಲ್ಲ ಎಂದು ಎಲ್ಲರೂ ನಿರಾಶೆಯಿಂದ ಲೊಚಗುಟ್ಟಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಒಂದು ದಿನ, ಕಾರ್ಯಕ್ರಮವನ್ನು ಗೊಂದಲಪುರದವರಿಗೆ ತೋರಿಸಲು ಅಗತ್ಯ ಸಲಕರಣೆಗಳನ್ನು ಹೊತ್ತುಕೊಂಡು ಊರಿಗೆ ಬಂದಳು ಚೂಡಿಧಾರಿಣಿ ಚಂಪಕ ಅಥವಾ ಕೆಂಪಕ್ಕ!

ಬೀರಣ್ಣ ಗೊಂದಲಪುರ

# ಉತ್ತರ ಧ್ರುವದಿಂ ದಕ್ಷಿಣ ಧ್ರುವಕೂ...

ಸೃಷ್ಟಿಯ ಕನಿಷ್ಠ ಜೀವಿಗಳ ಚಲನಾ ಸಾಮರ್ಥ್ಯವನ್ನು ಪ್ರತ್ಯಕ್ಷವಾಗಿ ತಿಳಿಯಲು ಬೆಟ್ಟಗುಡ್ಡಗಳು, ಅರಣ್ಯಪ್ರದೇಶಗಳಿಗೆ ಹೋಗಬೇಕಾಗಿಲ್ಲ, ನಮ್ಮ ಸುತ್ತಮುತ್ತ ಇರುವ ಸಣ್ಣಪುಟ್ಟ ಕ್ರಿಮಿ–ಕೀಟಗಳ ಜೈವಿಕ ಚಲನೆಗಳನ್ನು ಗಮನಿಸುತ್ತಿದ್ದರೆ ಎಷ್ಟೋ ವಿಚಾರಗಳು ಮನದಟ್ಟಾಗುತ್ತವೆ. ಉದಾಹರಣೆಗೆ, ಮಳೆಗಾಲಕ್ಕೆ ಮುಂಚೆ ಇರುವೆಗಳ ವಿಶೇಷ ಚಟುವಟಿಕೆಗಳನ್ನು ನಮ್ಮ ಮನೆಗಳಲ್ಲೇ ನೋಡಬಹುದು. ಸಮತಲದಲ್ಲಿ, ಗೋಡೆಯ ಮೇಲೆ, ಚಾವಣಿಗಳಲ್ಲಿ ತನಗಿಂತಲೂ ಹೆಚ್ಚು ತೂಕದ ಸಕ್ಕರೆಕಾಳು ಅಥವಾ ಅಕ್ಕಿಯ ಚೂರನ್ನು ಹೊತ್ತುಕೊಂಡು ಸಾಗುವ ಇರುವೆಗಳು ತುಂಬ ಶಕ್ತಿಶಾಲಿಯಾದ ಜೀವಿಗಳು.

ಆದಿಮಾನವನಿಂದ ಹಿಡಿದು ಆಧುನಿಕ ಮಾನವನವರೆಗೆ ಸಾಗಿ ಬಂದಿರುವ ಮನುಕುಲದ ಮಹಾಯಾನವನ್ನು ಸಿಂಹಾವಲೋಕನ ಮಾಡಿದರೆ, ಮನುಷ್ಯರು ಕ್ರಮವಾಗಿ ಭೂಮಂಡಲ–ಜಲಮಂಡಲ–ವಾಯುಮಂಡಲ–ಬಾಹ್ಯಾಕಾಶಗಳನ್ನು ದಾಟುತ್ತಾ ಬಂದಿರುವ ಬಗೆಯೊಂದು ಗೋಚರವಾಗುತ್ತದೆ.



ವಿ. ಚಂದ್ರಶೇಖರ ನಂಗಲಿ

ವಿಜ್ಞಾನಿಗಳು ಭೌತಶಾಸ್ತ್ರದ ಒಂದಂಗವಾಗಿ 'ಚಲನಶಾಸ್ತ್ರ'ವನ್ನು (=ಡೈನಮಿಕ್ಸ್) ಅಭ್ಯಾಸ ಮಾಡುತ್ತಾರೆ. ವಸ್ತುಗಳಲ್ಲಿ ಚಲನೆಯನ್ನು ಹುಟ್ಟಿಸುವ ಶಕ್ತಿಗಳ ವೈಜ್ಞಾನಿಕ ಅಧ್ಯಯನವೇ 'ಚಲನಶಾಸ್ತ್ರ'ವಾಗಿದೆ. ಈ ಬಗೆಯ 'ವಸ್ತು'ನಿಷ್ಠ ಚಲನೆಯನ್ನು 'ಬಾಹ್ಯ ಚಲನೆಗಳು' ಎಂದು ಕರೆಯಬಹುದು. 'ಸ್ವಯಂಚಾಲನೆ' (=ಆಟೋ ಮೊಬೈಲ್ಸ್) ಎಂಬುದು ಚಲನಶಾಸ್ತ್ರದ ಒಂದು ವಿಸ್ತೃತ ಶಾಖೆಯಾಗಿದೆ. ಪ್ರಸ್ತುತ, ನಾನಿಲ್ಲಿ ಜೈವಿಕ ಚಲನೆಗಳನ್ನು (=ಬಯೋ-ಡೈನಮಿಕ್ಸ್) ಕುರಿತು ಮಾತನಾಡುತ್ತಿದ್ದೇನೆ. ಈ ಭೂಮಿಯಲ್ಲಿರುವ ಸಕಲ ಜೀವರಾಶಿಗಳಲ್ಲಿ ಕಂಡುಬರುವ 'ಜೀವ'ನಿಷ್ಠ ಚಲನೆಯನ್ನು 'ಆಂತರಿಕ ಚಲನೆ'ಯೆಂದೇ ಕರೆಯಬೇಕು.

ಪುಟಾಣಿ ಇರುವೆಯಿಂದ ಹಿಡಿದು ಬೃಹತ್ತಾದ ಆನೆಯವರೆಗಿನ ಎಲ್ಲ ಭೂಚರಗಳು, ಕಿರುಮೀನುಗಳಿಂದ ಹಿಡಿದು ಬೃಹತ್ತಾದ ತಿಮಿಂಗಿಲದವರೆಗಿನ ಎಲ್ಲ ಜಲಚರಗಳು, ಅತ್ಯಂತ ಚಿಕ್ಕದಾದ ಮಕರಂದ ಪಕ್ಷಿಯಿಂದ ಹಿಡಿದು ಹಾರಲಾರದ ದೈತ್ಯಪಕ್ಷಿ ಆಸ್ಟ್ರಿಚ್‌ವರೆಗಿನ ಎಲ್ಲ ಪಕ್ಷಿಪ್ರಭೇದಗಳು ನಿರಂತರ ಚಲನೆಯಲ್ಲಿರುವುದನ್ನು ಗಮನಿಸಬೇಕು. ಕ್ರಿಮಿ-ಕೀಟಗಳಿಂದ ಹಿಡಿದು ಪಕ್ಷಿ-ಪ್ರಾಣಿಗಳವರೆಗಿನ 'ಜೈವಿಕ ಚಲನೆಗಳು' ನಿಸರ್ಗ ಸಹಜವಾಗಿದೆ. ಸಂಸ್ಕೃತ ಭಾಷೆಯ ಖಗ, ಮೃಗ ಎಂಬ ಪದಗಳು ಅರ್ಥಪೂರ್ಣವಾಗಿವೆ. 'ಖ' ಎಂದರೆ ಗಗನ, 'ಗ' ಎಂದರೆ ಗಮಿಸು ಎಂದರ್ಥ. 'ಮೃ' ಎಂದರೆ ಮೃತ್ ಅಥವಾ ಮಣ್ಣು ಎಂದರ್ಥ. ಆಕಾಶದಲ್ಲಿ ಮತ್ತು ಭೂಮಿಯಲ್ಲಿ ಚಲಿಸುವ ಎಲ್ಲ ಜೀವಿಗಳು ಖಗ-ಮೃಗ ಎನಿಸಿಕೊಂಡಿವೆ. ಈ ಸೃಷ್ಟಿಯ ಸಕಲಜೀವರಾಶಿಗಳಲ್ಲಿ ಕಂಡುಬರುವ ನಿರಂತರ ಚಲನೆಯಿಂದ ಅವುಗಳಿಗೆ ಆಗುವ ಪರಮ ಪ್ರಯೋಜನಗಳು ಮುಖ್ಯವಾಗಿ ಮೂರು: (೧) ಆಹಾರ ಸಂಪಾದನೆ, (೨) ರೋಗ ನಿರೋಧಕತೆ, (೩) ಸಂತಾನೋತ್ಪತ್ತಿ. ಪ್ರಾಣಿಗಳ ಚಲನಾ ಸಾಮರ್ಥ್ಯಕ್ಕೆ ಈ ಮೂರು ಮುಖ್ಯಾಂಶಗಳೇ ಪ್ರಮುಖ ಕಾರಣಗಳಾಗಿವೆ. ಕ್ರಮೇಣ ಚಲನಾ ಸಾಮರ್ಥ್ಯವನ್ನು ಕಳೆದುಕೊಳ್ಳುವ ಎಲ್ಲ ಖಗ-ಮೃಗಗಳು ಅನಿವಾರ್ಯವಾಗಿ ಪ್ರಾಣತ್ಯಾಗ ಮಾಡಿಕೊಳ್ಳುತ್ತವೆ. ಈ ದೃಷ್ಟಿಯಿಂದ ಚಲನೆ ಮತ್ತು ಪ್ರಾಣ ಎರಡನ್ನು ವಿಭಜಿಸಿ ನೋಡುವಂತಿಲ್ಲ. ಪ್ರಾಣವುಳ್ಳ ಎಲ್ಲ ಪ್ರಾಣಿಗಳು ನಿರಂತರ ಚಲನೆಗೆ ಬದ್ಧವಾಗಿರುತ್ತವೆ. ಈ ಮಾತಿಗೆ ಕೊಂಚ ಅಪವಾದವೆಂದರೆ ವಯಸ್ಸಾದ ಹುಲಿ-ಚಿರತೆಗಳು. ಮುಪ್ಪಿನಿಂದಾಗಿ ಮೊದಲಿನ ಚಲನಾ ಸಾಮರ್ಥ್ಯವಿಲ್ಲದ ಹುಲಿ-ಚಿರತೆಗಳು 'ನರಭಕ್ಷಕ'ಗಳಾಗಿ ಆತಂಕ ಹುಟ್ಟಿಸುತ್ತವೆ. ಇಂಥ ನರಭಕ್ಷಕಗಳ ಬೇಟೆಯ ಕಥನಗಳನ್ನು ಜಿಮ್ ಕಾರ್ಬೆಟ್, ಕೆನಿತ್ ಆಂಡರ್‌ಸನ್ ನಿರೂಪಿಸಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಪ್ರಾಣಿಗಳ ಚಲನಾ ಸಾಮರ್ಥ್ಯವನ್ನು ನಿಸರ್ಗಸಹಜವಾದ ವಿಸ್ಮಯವೆನ್ನಬಹುದು. ಕುವೆಂಪು ಅವರು 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಮುಂಗಾರು ಮಳೆಬಿದ್ದ ಮಾರನೇ ದಿನ ಹುತ್ತದ ಜೇನನ್ನು ಹುಡುಕುತ್ತಾ ಹೊರಟ ಕಟ್ಟಿರುವೆ ಸಾಲುಗಳನ್ನು ವರ್ಣಿಸಿದ್ದಾರೆ. ಪಕ್ಷಿವಿಜ್ಞಾನಿಗಳು ವಲಸೆಯನ್ನು ಕುರಿತು ಹೇಳುವಾಗ ಅತ್ಯಂತ ಶೀತವಲಯಗಳಿಂದ ಸಮಶೀತೋಷ್ಣ ವಲಯಗಳಿಗೆ ಹಾರಿಬರುವ ಪಕ್ಷಿಗಳನ್ನು ವಿವರಿಸಿದ್ದಾರೆ. ದೂರದ ಸೈಬೀರಿಯಾ ಪಕ್ಷಿಗಳು ಅತ್ಯುನ್ನತ ಹಿಮಾಲಯ ಶ್ರೇಣಿಗಳನ್ನು ದಾಟಿಕೊಂಡು ಭಾರತಕ್ಕೆ ಬರುವುದು ಸಾಮಾನ್ಯವಾಗಿದೆ. ಭರತ್‌ಪುರ, ರಂಗನತಿಟ್ಟು, ಕೊಕ್ಕರೆ ಬೆಳ್ಳೂರು ಮುಂತಾದ ಸುಪ್ರಸಿದ್ಧ ಪಕ್ಷಿಧಾಮಗಳಲ್ಲದೆ ಭಾರತದಾದ್ಯಂತ ವಲಸೆಪಕ್ಷಿಗಳನ್ನು ಗುರುತಿಸಬಹುದು. ಕೋಲಾರ ಜಿಲ್ಲೆಯ ಕೆರೆಗಳು ತುಂಬಿ ಕೋಡಿ ಹರಿದಾಗಲೆಲ್ಲ ಕ್ರಮೇಣ ಆಹಾರಕ್ಕಾಗಿ ಹಾರಿಬರುವ ಪೆಲಿಕಾನ್, ಸ್ಪೂನ್‌ಬಿಲ್, ಇಗ್ರೆಟ್, ಐಬಿಸ್, ಸ್ಟಾರ್ಕ್ ಮುಂತಾದ ಹಕ್ಕಿಗಳ ಬಳಗವನ್ನು ಪ್ರತ್ಯಕ್ಷವಾಗಿ ಕಂಡಿದ್ದೇನೆ. ತನ್ನ ಇಡೀ



ಜೀವಮಾನವನ್ನು ನಿರಂತರ ಚಲನೆಯಲ್ಲಿ ಕಳೆಯುವ ಜೀವಿ ಈಲ್ ಎಂಬ ಹಾವು ಮೀನು. ಸಿಹಿನೀರಿನಲ್ಲಿ ವಾಸಮಾಡುವ ಈಲ್‌ಗಳು ವಂಶಾಭಿವೃದ್ಧಿಗಾಗಿ ಅಡೆತಡೆಗಳನ್ನು ದಾಟಿ ಸಮುದ್ರ ತಳವನ್ನು ಸೇರಿಕೊಳ್ಳುತ್ತವೆ. ಸಮುದ್ರತಳದ ಪುಟಾಣಿ ಈಲ್‌ಗಳು ನದಿಮೂಲಕ್ಕೆ ಪ್ರಯಾಣಮಾಡುತ್ತಾ ವಯಸ್ಕ ಹಂತ ತಲುಪುತ್ತವೆ; ಮತ್ತೆ ಮರುಪ್ರಯಾಣದ ಮೂಲಕ ಸಾಗರತಳ ಸೇರಿಕೊಂಡು ಮೊಟ್ಟೆಗಳನ್ನಿಡುತ್ತವೆ. ಇವುಗಳ ಜೀವನಕ್ರಮವನ್ನು ಕುರಿತು ಕೆ. ಪಿ. ಪೂರ್ಣಚಂದ್ರ ತೇಜಸ್ವಿಯವರು 'ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕಥೆಗಳು' ಎಂಬ ಪುಸ್ತಕದಲ್ಲಿ ಬರೆದಿದ್ದಾರೆ. 'ಹಾವು ಮೀನಿನ ಪ್ರಚಂಡಯಾನ' – ಎಂಬ ಪ್ರಬಂಧ ಈ ದೃಷ್ಟಿಯಿಂದ ಗಮನಾರ್ಹವಾಗಿದೆ. ಇದಕ್ಕೆ ತದ್ವಿರುದ್ಧವೋ ಎಂಬಂತೆ,



ಮಕರಂದ ಪಕ್ಷಿ

ಉಪ್ಪುನೀರಿನಲ್ಲಿ ವಾಸಮಾಡುವ ಸಾಲ್ಮನ್ ಮೀನುಗಳು ಎಲ್ಲ ಅಡೆತಡೆಗಳನ್ನು ದಾಟಿ ನದಿಮೂಲದ ಸಿಹಿನೀರನ್ನು ಸೇರಿಕೊಂಡು ವಂಶಾಭಿವೃದ್ಧಿ ನಡೆಸುತ್ತವೆ.

ಕ್ರಿಮಿ-ಕೀಟಗಳ ಜಗತ್ತಿನಲ್ಲೂ ನಿರಂತರ ಚಲನೆಯಿದೆ. ಗೆದ್ದಲು ಹುಳು, ಮಣ್ಣು ಹುಳಗಳು ತಮ್ಮ ಜೀವಮಾನದುದ್ದಕ್ಕೂ ನಿರಂತರವಾಗಿ ಚಲಿಸುತ್ತಲೇ ಇರುತ್ತವೆ. ವ್ಯತ್ಯಾಸವೆಂದರೆ ಗೆದ್ದಲುಹುಳುಗಳು ಊರ್ಧ್ವಗಾಮಿ; ಮಣ್ಣುಹುಳುಗಳು ಅಧೋಗಾಮಿ ಅಷ್ಟೆ. ನಾನೊಮ್ಮೆ ದೆಹಲಿಯ ಹೋಟೆಲೊಂದರಲ್ಲಿ ಏಳನೇ ಮಹಡಿಯ ಕೋಣೆಯೊಂದರಲ್ಲಿ ತಂಗಿದ್ದಾಗ ಲಂಬವಾಗಿ ಮೂಡಿದ್ದ ಗೆದ್ದಲುಮಾರ್ಗವನ್ನು ಕಂಡು ವಿಸ್ಮಯಗೊಂಡಿದ್ದು ಇಲ್ಲಿ ನೆನಪಾಗುತ್ತಿದೆ. ಒಟ್ಟಿನಲ್ಲಿ ನಮ್ಮ ದೇಶವನ್ನು ಲಕ್ಷಿಸಿದರೆ, ಕಾಶ್ಮೀರದಿಂದ ಕನ್ಯಾಕುಮಾರಿವರೆಗೆ, ಇಡೀ ಭೂಗೋಳವನ್ನು ಲಕ್ಷಿಸಿದರೆ ಉತ್ತರ ಧ್ರುವದಿಂದ ದಕ್ಷಿಣ ಧ್ರುವದವರೆಗೆ ಸೃಷ್ಟಿಯ ಸಕಲಜೀವಿಗಳು ನಿರಂತರ ಚಲನೆಯಲ್ಲಿರುವುದು ಅರಿವಾಗುತ್ತದೆ. ಹೀಗೆ ನಿರಂತರವಾಗಿ ಚಲಿಸುತ್ತಲೇ ಅವು ಆಹಾರಸಂಪಾದನೆ, ರೋಗ ನಿರೋಧಕ ಶಕ್ತಿ ಮತ್ತು ವಂಶಾಭಿವೃದ್ಧಿಯನ್ನು ಕಾಯ್ದುಕೊಂಡು ಬಂದಿವೆ.



ಈ ಚಲನೆಯ ಚುಂಬಕ ಶಕ್ತಿಯನ್ನು ಗಮನಿಸಿಯೇ ಕವಿ ಬೇಂದ್ರೆಯವರು ''ಉತ್ತರ ಧ್ರುವದಿಂ ದಕ್ಷಿಣ ಧ್ರುವಕೂ ಚುಂಬಕ ಗಾಳಿಯು ಬೀಸುತಿದೆ'' ಎಂದು ಹಾಡಿದ್ದಾರೆ.

ಈಗ ಮನುಷ್ಯನ ವಿಚಾರಕ್ಕೆ ಬರೋಣ. ಆದಿಮಾನವನ ಚಲನಾ ಸಾಮರ್ಥ್ಯಕ್ಕೆ ಹೋಲಿಸಿದರೆ, ಆಧುನಿಕ ಮಾನವನ ಚಲನಾ ಸಾಮರ್ಥ್ಯವು ಸಂಪೂರ್ಣ ಕುಸಿದುಹೋಗಿದೆಯೆಂದೇ ಹೇಳಬೇಕು. ಅಮೆರಿಕಾ ದೇಶಕ್ಕೆ ಹೋಗಿಬಂದವರ ಪ್ರವಾಸ ಕಥನಗಳನ್ನು ಓದಿದರೆ, ಆ ದೇಶದಲ್ಲಿ 'ಕಾಲು' ಎಂಬುದಕ್ಕಿಂತ 'ಕಾರು' ಎನ್ನುವುದೇ ಹೆಚ್ಚು ಸೂಕ್ತವೆಂದು ಅಭಿಪ್ರಾಯಪಟ್ಟಿರುವುದು ತಿಳಿಯುತ್ತದೆ. ಕಾಲ್ನಡಿಗೆಯು ಕಾರ್ನಡಿಗೆಯಾಗುವುದೇ ಆಧುನಿಕತೆಯೆಂದು ಹೇಳಬಹುದು. ನಮ್ಮದು ಬಡದೇಶವಾದ್ದರಿಂದ ನಾಲ್ಕು ಚಕ್ರಗಳ ಜೀವನಶೈಲಿಗಿಂತ ಎರಡು ಚಕ್ರಗಳ ಜೀವನಶೈಲಿಯನ್ನೆ ಆಧುನಿಕತೆಯೆಂದು ಕರೆಯಬೇಕಾಗುತ್ತದೆ. ಆಧುನಿಕ ಮಾನವನ ಈ ಪರಾವಲಂಬಿ ಚಲನೆಯನ್ನು ಪರಿಭಾವಿಸುತ್ತಿದ್ದರೆ ಖಲೀಲ್ ಗಿಬ್ರಾನ್ ಹೇಳಿದ ಮಾತುಗಳು ನೆನಪಾಗುತ್ತವೆ: ''ಮನುಷ್ಯನು ಯಂತ್ರಗಳನ್ನು ಕಂಡುಹಿಡಿದು ಅವುಗಳ ಮೇಲೆ ಸವಾರಿ ಮಾಡುವುದನ್ನು ಕಲಿತ. ಈಗ ಯಂತ್ರಗಳೇ ಮನುಷ್ಯನ ಮೇಲೆ ಸವಾರಿ ಮಾಡುತ್ತಿವೆ.'' ಮಾರ್ಮಿಕವಾದ ಈ ಮಾತುಗಳ ಹಿಂದಿರುವ ಕಹಿಸತ್ಯವನ್ನು ಮನಗಾಣಬೇಕಾದರೆ, ನಾವು ಆದಿಮಾನವನ ಕಾಲಕ್ಕೆ ಮನೋಯಾನ ಮಾಡಬೇಕಾಗುತ್ತದೆ. ಯಾವುದೇ ಬಾಹ್ಯ ಚಲನೆಯ ನೆರವಿಲ್ಲದೆ, ತನ್ನ ಆಂತರಿಕ ಚಲನೆಯೊಂದನ್ನೇ ಆಧರಿಸಿ ಆದಿಮಾನವನು ನಡೆಸಿರುವ ಬಗ್ಗೆ ಗೌರವಭಾವನೆ ಹುಟ್ಟುತ್ತದೆ. 'ಚಲನೆ' ಎಂದರೆ ಕಾಲ್ನಡಿಗೆ ಮಾತ್ರವೆಂದು ತಿಳಿಯಬಾರದು, ಜಗಿತ, ನೆಗೆತ, ತೂಗಾಟ, ಕೂಗಾಟ, ಓಡುವುದು, ಬೇಟೆಯಾಡುವುದು, ಈಜುವುದು, ಭಾರ ಎತ್ತುವುದು ಮುಂತಾದ ಕ್ರಿಯಾಸಮಸ್ತವೂ ಚಲನೆಯ ವ್ಯಾಪ್ತಿಗೊಳಪಡುತ್ತದೆ. ಒಂದು ದೊಡ್ಡಮರವನ್ನು ಏರುವುದಕ್ಕಾಗಲಿ, ಬಂಡೆಯಿಂದ ಬಂಡೆಗೆ ಜಿಗಿಯುವುದಕ್ಕಾಗಲಿ 'ದಂ' ಇರಬೇಕು. ಆದಿಮಾನವನಿಗೆ ಸಹಜವಾಗಿದ್ದ 'ದಂ' ಆಧುನಿಕ ಮಾನವನಿಗೆ ಇಲ್ಲ.

'ದಂ'ನ ಸೃಷ್ಟಿ-ಸ್ಥಿತಿ-ಲಯಗಳನ್ನು ಭಾಷಾವಿಜ್ಞಾನಿಗಳು ಸಮರ್ಪಕವಾಗಿ ವಿವರಿಸಿದ್ದಾರೆ. 'ದಂ' ಹಿಡಿಯುವುದೆಂದರೆ, ಉಸಿರು ಬಿಗಿಹಿಡಿಯುವುದು ಎಂದರ್ಥ. ಧ್ವನಿಪೆಟ್ಟಿಗೆಯ ಮೇಲಿರುವ ಶ್ವಾಸನಾಳದ ಮುಚ್ಚಳವೇ 'ದಂ' ಅನ್ನು ನಿರ್ಣಯಿಸುವ ಶಕ್ತಿಯಾಗಿದೆ. ಧ್ವನಿಪೆಟ್ಟಿಗೆಯ ಮುಚ್ಚಳವನ್ನು ಶ್ವಾಸನಾಳಕ್ಕೆ ಭದ್ರವಾಗಿ ಹಾಕಿದಾಗ ಉಸಿರು ಬಿಗಿ ಹಿಡಿಯಲ್ಪಟ್ಟು ಜಿಗಿದು ನೆಗೆಯಲು, ಭಾರ ಎತ್ತಲು, ಗಟ್ಟಿಯಾಗಿ ಕೂಗಲು, ನೀರೊಳಗೆ ಈಜಲು ನೆರವಾಗುತ್ತದೆ. ನಾವಿಂದು ಕಲ್ಪಿಸಿಕೊಂಡಿರುವ ಟಾರ್ಜಾನ್ ಕೂಗು ಆದಿಮಾನವನ ಧ್ವನ್ಯನುಕರಣೆ ಮಾತ್ರ! ಇದಕ್ಕೆ ಹೋಲಿಸಿದರೆ ಗಟ್ಟಿಯಾಗಿ ಮಾತನಾಡುವುದನ್ನೆ ಕಳೆದುಕೊಂಡಿರುವ, (ಮೈಕಾಸುರ, ರೇಡಿಯೊ, ಟಿ.ವಿ.ಗಳ) ಯಾಂತ್ರಿಕ ಮತ್ತು ತಾಂತ್ರಿಕ ಏರಿಳಿತಗಳನ್ನು ಆಶ್ರಯಿಸಿದ, ಆಧುನಿಕ ಮಾನವ VOICELESSಆಗಿ ತೋರುತ್ತಾನೆ. ಶಿಲಾಯುಗದ ಸ್ಮಾರಕಗಳನ್ನು ಗಮನಿಸಿದರೆ, ಆದಿಮಾನವನ 'ದಂ' ಎಂಥದೆಂಬುದು ಅರಿವಾಗುತ್ತದೆ. ತಮಾಷೆಯಾದರೂ ವಾಸ್ತವ ಸತ್ಯವೇನೆಂದರೆ, ಆಧುನಿಕ ಮಾನವನಿಗೆ 'ದಂ' ಇಲ್ಲದಿದ್ದರೂ 'ದಂ' ಹೊಡೆಯುವುದು ಗೊತ್ತು! ತಾನು 'ದಂ' ಹೊಡೆಯುವುದು ಮಾತ್ರವಲ್ಲ, ಮೋಟಾರುಗಳಿಂದ, ಕಾರ್ಖಾನೆಗಳಿಂದ, ವಿಮಾನಾದಿ ಉಪಗ್ರಹಗಳಿಂದ ನಿರಂತರವಾಗಿ 'ದಂ' ಹೊಡೆಸುತ್ತಾ ಭೂಮಿಯ ವಾತಾರವಣದಲ್ಲಿ ಏರುಪೇರು ಉಂಟುಮಾಡುತ್ತಿದ್ದಾನೆ.

ನಮ್ಮ ದೇಶದಲ್ಲಿ ಗಂಡಸರಿಗಿಂತಲೂ ಹೆಂಗಸರಿಗೆ ಹೆಚ್ಚು 'ದಂ' ಇದೆಯೆಂದು ಹೇಳಬೇಕಾಗಿದೆ. ನೀರನ್ನು





ಹೊತ್ತು ತರುವುದು, ಮಕ್ಕಳು ಮುಂತಾದ ಭಾರವನ್ನು ಹೊರುವುದು, ಬಟ್ಟೆ ಒಗೆಯುವುದು, ಬಗ್ಗುವುದು- ಏಳುವುದು ಮುಂತಾದ ಕ್ರಿಯೆಗಳಿಗೆ 'ದಂ' ಇರಬೇಕು. ಹೆರಿಗೆಯ ನೋವು ತಿನ್ನುವಾಗ, ಮಕ್ಕಳನ್ನು ಸಹಜವಾಗಿ ಹೆರುವಾಗ, ಹೆಂಗಸರು ತಮ್ಮ ಧ್ವನಿ ಪೆಟ್ಟಿಗೆಯ ಮುಚ್ಚಳವನ್ನು ಶ್ವಾಸನಾಳಕ್ಕೆ ಭದ್ರವಾಗಿ ಬಿಗಿಯಲೇಬೇಕಾಗುತ್ತದೆ. ಹೀಗೆ ಉಸಿರು ಬಿಗಿಹಿಡಿದು 'ದಂ' ಕಟ್ಟುವ ಸಂದರ್ಭಗಳು ಗಂಡಸರಿಗೆ ಇಲ್ಲವೆಂದು ಹೇಳ ಬೇಕಾಗುತ್ತದೆ. ಅಪವಾದವೆಂದರೆ, ಮಲಬದ್ಧತೆ ಯಿಂದ ನರಳುವ ಗಂಡಸರಿಗೆ 'ದಂ' ಅನಿವಾರ್ಯವಾಗಿರುತ್ತದೆ. ಉಳಿದಂತೆ ಗಂಡಸರು ನಿಶ್ಚಿಂತೆಯಾಗಿ ನಿರಾಳವಾಗಿ ಕಾಲಹರಣ ಮಾಡುತ್ತಾರೆ. ಒಟ್ಟಿನಲ್ಲಿ, ಶಕ್ತಿಯ ಆವಿಷ್ಕಾರ ದೊಂದಿಗೆ ಆಧುನಿಕ ಮಾನವನು 'ದಂ' ಕಳೆದುಕೊಳ್ಳುತ್ತಾ ಬಂದು, ಈಗ 'ದಂ' ಇಲ್ಲದ ನೆಲೆಗೆ ತಲುಪಿದ್ದಾನೆ. ಉಪಯೋಗವಿಲ್ಲದ ಬಾಲವು ಮಾನವನಿಂದ ಕಳಚಿ ಬಿದ್ದುಹೋದಂತೆ (?), ಇನ್ನುಮುಂದೆ ಉಪಯೋಗವಿಲ್ಲದ ಧ್ವನಿಪೆಟ್ಟಿಗೆಯ ಮುಚ್ಚಳವು ಬಿದ್ದುಹೋಗಿ ಧ್ವನಿಶಕ್ತಿಯೇ ಇಲ್ಲದ, ಸ್ವಿಚ್ಚು ಶಕ್ತಿಯುಳ್ಳ ನವಮಾನವ ನೊಬ್ಬನು ಉದಯಿಸಬಹುದು. ನನ್ನ ಮಾತುಗಳ ಸಾರಾಂಶವೇನೆಂದರೆ, ಆಧುನಿಕ ಮಾನವನ ಜೀವನ ಶೈಲಿಯಲ್ಲಿ 'ದಂ' ಕಟ್ಟುವ ಪ್ರಶ್ನೆಯೇ ಇಲ್ಲ. ಕುಡಿದ ನೀರು ಅಲುಗಾಡದಂತೆ ಬದುಕುತ್ತಿರುವ ಆಧುನಿಕ ಮಾನವರನೇಕರಿಗೆ ಅಡಿಯಿಂದ ಮುಡಿ ವರೆಗೆ ರಕ್ತಾಭಿಸರಣ ಕ್ರಿಯೆ ಎಂಬ ಜೀವ-ರಾಸಾಯನಿಕ ಚಲನೆಯೂ ಇಲ್ಲವಾಗಿದೆ.

ಆಧುನಿಕ ಮಾನವನ ಲಕ್ಷಣಗಳೇನೆಂದರೆ, ದುರ್ಬಲವಾದ ಕೈಕಾಲುಗಳು, ಚಲನಾರಾಹಿತ್ಯ ಮತ್ತು ಶ್ರಮರಾಹಿತ್ಯ. ಬಹುತೇಕ ನಾಗರಿಕರು ಸುಖೀ ಜಂಗಮರಾಗಿ ರುವುದರಿಂದಲೇ ಅವರ ದೇಹದಲ್ಲಿ ಕೊಬ್ಬು (=ಕೊಲೆಸ್ಟರಾಲ್) ಹೆಚ್ಚಾಗಿ ಸಂಗ್ರಹ ಗೊಂಡಿರುತ್ತದೆ. ಶ್ರಮದಾಯಕವಾದ ಕೆಲಸ-ಕಾರ್ಯಗಳಿಲ್ಲದ್ದರಿಂದ ಆಧುನಿಕ ಮಾನವನ ಚರ್ಮರಂಧ್ರಗಳು ಮತ್ತು ಸ್ವೇದ ಗ್ರಂಥಿಗಳಿಗೆ ಕೆಲಸವೇ ಇಲ್ಲವಾಗಿದೆ. ಮನುಷ್ಯನಿಗೆ 'ಬೆವರು' ಅಮೂಲ್ಯವಾದ ಒಂದು ವರ. ಬೆವರು ಹರಿಸಿ ದುಡಿಯುವ ಶ್ರಮ ಜೀವಿಗಳ ಮೈಯಲ್ಲಿ ಹೆಚ್ಚಿನ ಕೊಲೆಸ್ಟರಾಲ್ ಇರುವುದಿಲ್ಲ. ಆದಿವಾಸಿಗಳು ಮತ್ತು ಗಿರಿಜನರ ಸಹಜ ಸೌಂದರ್ಯಕ್ಕೆ ಅವರ ಜೀವನಶೈಲಿ-ಪರಿಸರಗಳೇ ಮುಖ್ಯ ಕಾರಣವಾಗಿದೆ. ಜಗತ್ತಿನ ಸರ್ವಶ್ರೇಷ್ಠ ಬ್ಯೂಟಿಕ್ರೀಮ್ ಯಾವುದೆಂದರೆ ನನ್ನ ದೃಷ್ಟಿಯಲ್ಲಿ ಬೆವರೇ ಆಗಿದೆ. ರಾಬರ್ಟ್ ಲೂಯಿ ಸ್ಟೀವನ್‌ಸನ್ ಎಂಬ ಇಂಗ್ಲಿಷ್ ಪ್ರಬಂಧಕಾರ 'ಕಾಲ್ನಡಿಗೆಯ ತಿರುಗಾಟಗಳು' ಎಂಬ ಪ್ರಬಂಧವನ್ನು ಬರೆದಿದ್ದು, ಬೆವರನ್ನು 'ಆಂತರಿಕವಾದ ಪರಿಶುದ್ಧ ಸ್ನಾನ'ವೆಂದು ವರ್ಣಿಸಿದ್ದಾನೆ. ತೆಲುಗು ಕವಿ ಶ್ರೀಶ್ರೀಯವರು ಬೆವರನ್ನು 'ಘರ್ಮಜಲ ಮಾತ್ರವಲ್ಲ ಧರ್ಮಜಲ'ವೆಂದು ಕರೆದಿದ್ದಾರೆ. ಇಲ್ಲಿ 'ಬೆವರು' ಎಂಬುದನ್ನು ಶ್ರಮದಾಯಕ ಜೀವನ ಶೈಲಿಯಿಂದ ಜನಿಸುವ ಬೆವರು ಎಂಬರ್ಥದಲ್ಲಿ ಸ್ವೀಕರಿಸಬೇಕು. ಕೆಲವರಿಗೆ ಸದಾ ಬೆವರುವ ಕಾಯಿಲೆ ಇರುತ್ತದೆ; ಇಂಥ ರೋಗಪೀಡಿತ ಬೆವರಿನ ವಿಚಾರವನ್ನು ನಾನಿಲ್ಲಿ ಹೇಳುತ್ತಿಲ್ಲ.

ನಿಸರ್ಗದ ತಿಳಿಜಾಲ, ತಿಳಿಗಾಳಿ ಮತ್ತು ತಿಳಿ ಬೆಳಕುಗಳಿಗೆ ಆಧುನಿಕ ಮಾನವನ ದೇಹ ತೆರೆದುಕೊಳ್ಳುತ್ತಿಲ್ಲ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಸುಬ್ಬಣ್ಣ ಹೆಗಡೆ ಎಂಬ ಮುದುಕರು ಬೆಳಿಗ್ಗೆ ಹಂದಿ ಒಡ್ಡಿಯನ್ನು ನೋಡುತ್ತಾ, ಎಳೆಬಿಸಿಲಿಗೆ ಬೆನ್ನುಕೊಟ್ಟು ಸೂರ್ಯ ಸ್ನಾನ ಮಾಡುವುದನ್ನು ಕುವೆಂಪು ತನ್ಮಯವಾಗಿ ವರ್ಣಿಸಿದ್ದಾರೆ. ನಿಸರ್ಗದಲ್ಲಿ ಬಿಸಿಲು ಕಾಯಿಸಿಕೊಳ್ಳುವ ಜೀವಿಗಳನ್ನು ಸಮೃದ್ಧವಾಗಿ ಮನಗಾಣಬಹುದು. ತನ್ನ ನೀಳವಾದ ಕೊರಳನ್ನೆ ಕಹಳೆಮಾಡಿಕೊಂಡು ಸುಪ್ರಭಾತವನ್ನು ಸ್ವಾಗತಿಸುವ ಕೋಳಿ ಹುಂಜನಿಂದ ಹಿಡಿದು ಬಿಸಿಲಿಗೆ ಫಳಫಳ ಹೊಳೆಯುವ ಹಾವುರಾಣಿಯವರೆಗೆ ಸಕಲ ಜೀವಿಗಳು ಬೆಳಕಿಗೆ ಮೈಯೊಡ್ಡುತ್ತವೆ. 'ಸೂರ್ಯಪ್ರಿಯ' ಎಂಬ ಪ್ರಶಸ್ತಿ ಪಡೆದಿರುವ ಸ್ವಾಲೊ ಹಕ್ಕಿಗಳು ಗಂಟೆಗಟ್ಟಲೆ ಕುಳಿತು ಸೂರ್ಯಸ್ನಾನ ಮಾಡುವುದನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ಪಕ್ಷಿ ಪ್ರಾಣಿಗಳಲ್ಲಿ ಕಂಡುಬರುವ ಜೈವಿಕ ಚಲನೆಗಳು ಅಥವಾ ವಲಸೆಗಳನ್ನು ಗಂಭೀರವಾಗಿ ಅಧ್ಯಯನ ಮಾಡಿರುವ ಜೀವ ವಿಜ್ಞಾನಿಗಳು ಪವಾಡಸದೃಶವೆನ್ನಬಹುದಾದ ಜೈವಿಕಯಾನಗಳನ್ನೆ ದಾಖಲಿಸಿದ್ದಾರೆ. ಕುವೆಂಪು ಸಾಹಿತ್ಯದಲ್ಲಿ ಹತ್ತು ಮೀನುಗಳ ಪ್ರಸ್ತಾಪವಿದೆ. ಬಹುತೇಕ ನಗರವಾಸಿಗಳಿಗೆ ಈ ಶಬ್ದವು ಬಿಂಬವಾಗದಿರುವುದರಿಂದ 'ಹತ್ತು ಮೀನು'ಗಳೆಂದರೆ ಹತ್ತು ಸಂಖ್ಯೆಯ ಮೀನುಗಳು ಎಂದು ತಿಳಿದುಬಿಡುತ್ತಾರೆ. ಇದು ತಪ್ಪು ತಿಳುವಳಿಕೆ. ಎತ್ತರದಿಂದ ತಗ್ಗು ಪ್ರದೇಶ ಗಳಿಗೆ ಇಳಿಜಾರಾಗಿ ಹರಿಯುವ ನದಿಗಳು ಮತ್ತು ತೊರೆ ಗಳಲ್ಲಿರುವ ದೊಡ್ಡ ಮತ್ತು ಸಣ್ಣ ಮೀನುಗಳು ಹರಿವ ನೀರಿಗೆದುರಾಗಿ ಈಜುತ್ತವೆ. ಹೀಗೆ, ಮಾನವ ನಿರ್ಮಿತ ಮತ್ತು ನಿಸರ್ಗ ನಿರ್ಮಿತ ಅಡೆ-ತಡೆ ಗಳನ್ನು ಹತ್ತುವ ಮೀನುಗಳನ್ನೆ ಕುವೆಂಪು ಅವರು 'ಹತ್ತು ಮೀನುಗಳು' ಎಂದು ಕರೆದಿದ್ದಾರೆ.

ಸೃಷ್ಟಿಯ ಕನಿಷ್ಠ ಜೀವಿಗಳ ಚಲನಾ ಸಾಮರ್ಥ್ಯವನ್ನು ಪ್ರತ್ಯಕ್ಷವಾಗಿ ತಿಳಿಯಲು ಬೆಟ್ಟ ಗುಡ್ಡಗಳು, ಅರಣ್ಯಪ್ರದೇಶಗಳಿಗೆ ಹೋಗಬೇಕಾಗಿಲ್ಲ. ನಮ್ಮ ಸುತ್ತಮುತ್ತ ಇರುವ ಸಣ್ಣ ಪುಟ್ಟ ಕ್ರಿಮಿ-ಕೀಟಗಳ ಜೈವಿಕ ಚಲನೆಗಳನ್ನು ಗಮನಿಸುತ್ತಿದ್ದರೆ ಎಷ್ಟೋ ವಿಚಾರಗಳು ಮನದಟ್ಟಾಗುತ್ತವೆ. ಉದಾಹರಣೆಗೆ, ಮಳೆಗಾಲಕ್ಕೆ ಮುಂಚೆ ಇರುವೆಗಳ ವಿಶೇಷ ಚಟುವಟಿಕೆಗಳನ್ನು ನಮ್ಮ ಮನೆಗಳಲ್ಲೆ ನೋಡಬಹುದು. ಸಮತಲದಲ್ಲಿ, ಗೋಡೆಯ ಮೇಲೆ, ಚಾವಣಿಗಳಲ್ಲಿ ತನಗಿಂತಲೂ ಹೆಚ್ಚು ತೂಕದ ಸಕ್ಕರೆಕಾಳು ಅಥವಾ ಅಕ್ಕಿಯ ಚೂರನ್ನು ಹೊತ್ತುಕೊಂಡು ಸಾಗುವ ಇರುವೆಗಳು ತುಂಬ ಶಕ್ತಿಶಾಲಿಯಾದ ಜೀವಿಗಳು. ರಸ್ತೆಬದಿಯ ಮರಗಳಲ್ಲಿ ಮೇಲಿನಿಂದ ಕೆಳಕ್ಕೆ, ಕೆಳಗಿನಿಂದ ಮೇಲಕ್ಕೆ ನಿರಂತರವಾಗಿ ಹರಿದಾಡುವ ಇರುವೆಗಳನ್ನು ಕೋಲಾರ ಜಿಲ್ಲೆಯಲ್ಲಿ ಜುಂಡ್ರು ಕೋತುಲು, ಕೋತಿರುವೆಗಳೆಂದೇ ಕರೆಯುತ್ತಾರೆ. ನಮ್ಮ ಮನೆಯ ಕುಂಡದಲ್ಲಿ ಬೆಳೆದಿದ್ದ ಶಂಖುಪುಷ್ಪಿ ಬಳ್ಳಿ ಮೈತುಂಬ ಹೂ ಮುಡಿದುಕೊಂಡಾಗ, ಬೆಳ್ಳನೆಯ ಶಂಖುಪುಷ್ಪಿಗಳ ಗರ್ಭಗುಡಿಯೊಳಗೆ ಪುಟಾಣಿ ಕೀಟಗಳು, ಕಪ್ಪು ಇರುವೆಗಳು, ಝೇಂಕರಿಸುವ ಪಟ್ಟೆದುಂಬಿಗಳು ಹೋಗಿಬರುವುದನ್ನು ನಾನು ಎಷ್ಟೋ ಸಾರಿ ಗಮನಿಸಿ, ಮನೆಯವರಿಗೆಲ್ಲ ತೋರಿಸಿ ವಿವರಿಸಿದ್ದೇನೆ. ಹಾಗೆಯೇ ನಾನು ಬೆಳೆಸಿದ್ದ ಮಂಗರಬಳ್ಳಿ ಅಥವಾ ವಜ್ರವಲ್ಲಿಯ ಗೊಂಚಲು ಹೂಗಳಿಗೆ ಒಂದು ನಿರ್ದಿಷ್ಟ ಜಾತಿಯ ಕೆಂಪು ಕಣಜ ಮತ್ತು ನೀಲವರ್ಣದ ಕೀಟಗಳು ತಪ್ಪದೆ ಬರುತ್ತಿದ್ದುದನ್ನು ಕಂಡು ವಿಸ್ಮಯಗೊಂಡಿದ್ದೇನೆ. ಆದರೆ, ಆಧುನಿಕ ಮನುಷ್ಯರಿಗೆ ಈ ಸಣ್ಣ ಸಂಗತಿ ಗಳನ್ನು ಗಮನಿಸಲು ಕಿಂಚಿತ್ತೂ ಸಮಯವಿರುವುದಿಲ್ಲ. ನಿಸರ್ಗದಲ್ಲಿ ಹೂವುಗಳಿಗೂ ಕೀಟಗಳಿಗೂ ಅವಿನಾಭಾವ ಸಂಬಂಧವಿದೆ. ಒಂದೊಂದು ಆರ್ಕಿಡ್ ಹೂವಿಗೆ ನಿರ್ದಿಷ್ಟ ಜಾತಿಯ ಕೀಟಗಳೇ ಪರಾಗಸ್ಪರ್ಶವನ್ನು ನಡೆಸಬೇಕು. ಹಗಲಿಡೀ ಮಕರಂದವನ್ನು ಸಂಗ್ರಹಿಸುವ ದುಂಬಿಗಳು ಇಡೀರಾತ್ರಿ ಸವಿಜೇನನ್ನು ತಯಾರಿಸುತ್ತಾ ಇರುತ್ತವೆಯಾದ್ದರಿಂದ ಅವುಗಳಿಗೆ 'ದುಡಿಮೆಯ ದುಂಬಿ' – ಬ್ಯುಸಿ ಬೀ – ಎಂಬ ಹೆಸರು ಬಂದಿದೆ. ನೆಲದ ಮೇಲಿರುವ ಬೃಹತ್ ಗಾತ್ರದ ಆನೆಗಳು, ಸಮುದ್ರದಲ್ಲಿ ಇರುವ ಬೃಹತ್ ಗಾತ್ರದ ತಿಮಿಂಗಿಲಗಳು ಇವು ಕೂಡ ನಿರಂತರವಾಗಿ ಚಲಿಸುತ್ತಲೇ ಇರುತ್ತವೆ. ಆಧುನಿಕ ಮಾನವರು ತಾವೇ ಕಟ್ಟಿದ ಸಂಸ್ಕೃತಿಯ ಪಂಜರದಲ್ಲಿ ಸ್ವಯಂ ಖೈದಿಗಳಾಗಿ ಬದುಕುತ್ತಾ, ರೆಕ್ಕೆ ಪುಕ್ಕ ಉದುರಿಹೋದ, ರೋಗಪೀಡಿತವಾದ ಪಂಜರದ ಗಿಳಿಯಂತೆ ಕಾಣುತ್ತಾರೆ. ಒಟ್ಟಿನಲ್ಲಿ ಸೃಷ್ಟಿಯ ಸಕಲ ಜೀವಿಗಳು ಜಂಗಮವಾಗಿರು ವುದನ್ನು ಮನಗಾಣುವುದರೊಂದಿಗೆ, ಆಧುನಿಕ ಮಾನವರು ಸ್ಥಾವರವಾಗಿ ಬದುಕುತ್ತಿ ರುವುದನ್ನು ತಿಳಿಯಬಹುದು. ಈ ದೃಷ್ಟಿಯಿಂದ ''ಸ್ಥಾವರಕ್ಕೆ ಅಳಿವುಂಟು; ಜಂಗಮಕ್ಕೆ ಅಳಿವಿಲ್ಲ'' ಎಂಬ ಬಸವಣ್ಣನವರ ನುಡಿಯನ್ನು ಹೊಸದಾಗಿ ಅರ್ಥೈಸಬಹುದು.

ಟಿ.ವಿ ಮತ್ತು ಕಂಪ್ಯೂಟರ್‌ಗಳ ಅತಿಬಳಕೆಯಿಂದ ಆಗುವ ದುಷ್ಪರಿಣಾಮಗಳನ್ನು ಇಂದು ಜೀವವಿಜ್ಞಾನಿಗಳು ಮತ್ತು ಮನೋವಿಜ್ಞಾನಿಗಳು ಗಂಭೀರವಾಗಿ ಅಧ್ಯಯನ ಮಾಡುತ್ತಿದ್ದಾರೆ. ಅರಣ್ಯ ಪ್ರದೇಶಗಳಲ್ಲಿ ರಾತ್ರಿ ಶಿಕಾರಿ ಮಾಡುವವರು ತಲೆಗೆ ಲೈಟು ಮತ್ತು ಬಗಲಿಗೆ ಬ್ಯಾಟರಿಗಳನ್ನು ಧರಿಸಿಕೊಂಡು ಹೊಂಚುಹಾಕುತ್ತಾ ಕಣ್ಣಳತೆ ಯಲ್ಲಿರುವ ಪ್ರಾಣಿಗಳ ಮೇಲೆ ದಿಗ್ಗನೆ ಬೆಳಕು ಚೆಲ್ಲುತ್ತಾರೆ. ಅದುವರೆಗೆ ಕತ್ತಲೆಯಲ್ಲಿದ್ದ ಆ ಪ್ರಾಣಿಗಳು ಅತಿಬೆಳಕಿಗೆ ಕಣ್ಣು ಕಣ್ಣು ಬಿಡುತ್ತಾ ತತ್ತರಿಸುತ್ತಿದ್ದಂತೆಯೇ ಗುಂಡೇಟಿಗೆ ಬಲಿಯಾಗಿಬಿಡುತ್ತವೆ. ಹೆಡ್‌ಲೈಟಿನ ಅತಿಬೆಳಕು ಪ್ರಾಣಿಗಳ ಪಾಲಿಗೆ ಮೃತ್ಯುವಾಗು ವಂತೆಯೇ, ಟೀವಿ ಮತ್ತು ಕಂಪ್ಯೂಟರ್‌ಗಳ ಅತಿ ಬಳಕೆಯಿಂದ ಬರುವ ರೋಗಗಳ ಪಟ್ಟಿಯನ್ನು ನೋಡಿದರೆ ಆಧುನಿಕ ಮಾನವನ ವಿನಾಶದ ಗತಿಯು ಗೋಚರ

ವಾಗುತ್ತದೆ. ಅತಿಪಿಕಿರಣಗಳಿಂದಾಗಿ ಕಣ್ಣಿನ ಕಾಯಿಲೆಗಳು, ಗಂಟೆಗಟ್ಟಲೆ ಕೂರುವುದರಿಂದಾಗಿ ಪಾದದಿಂದ ನೆತ್ತಿಯವರೆಗೆ ರಾಚನಿಕ ನೋವುಗಳು, ಸಮರ್ಪಕ ರಕ್ತಾಭಿಸರಣವಿಲ್ಲದೆ ರಕ್ತನಾಳಗಳಲ್ಲಿ ಗರಣೆ (=ಕ್ಲಾಟ್) ಆಗುವುದು ಸಾಮಾನ್ಯವಾಗಿದೆ. ಇದನ್ನು ವೈದ್ಯವಿಜ್ಞಾನದಲ್ಲಿ ಎಲೆಕ್ಟ್ರಾನಿಕ್ ಥ್ರೊಂಬೊಸಿಸ್ ಎಂದು ಕರೆಯುತ್ತಾರೆ. ಸದಾ ಕುರ್ಚಿಗಳಲ್ಲಿಯೇ ಕುಳಿತು ಐಷಾರಾಮಿ ಜೀವನ ನಡೆಸುವವರಿಗೂ ಈ ಕಾಯಿಲೆ ತಪ್ಪಿದ್ದಲ್ಲ. ಪಾದಗಳಿಂದ ನೆತ್ತಿಯವರೆಗೆ ರಕ್ತವು ಒಡಲಿನಲ್ಲಿ ಸರಾಗವಾಗಿ ಹರಿಯಬೇಕಾದರೆ ಮನುಷ್ಯರು ಕಾಲ್ನಡಿಗೆಯ ತಿರುಗಾಟಗಳನ್ನು ತಮ್ಮ ದಿನಚರಿಯಲ್ಲಿ ಅಳವಡಿಸಿಕೊಳ್ಳಬೇಕು. ಕಾಲ್ನಡಿಗೆಯನ್ನು ಸಂಪೂರ್ಣವಾಗಿ ತೊರೆದಿರುವ ಅಮೆರಿಕಾ ದೇಶದಲ್ಲಿ ಇತ್ತೀಚೆಗೆ ಕಾಲ್ನಡಿಗೆಯ ತಿರುಗಾಟಗಳ ಬಗ್ಗೆ ವಿಶೇಷ ಪ್ರಚಾರ ಮಾಡಲಾಗುತ್ತಿದೆ. 'ಪ್ರತಿನಿತ್ಯ ಹತ್ತು ಸಾವಿರ ಹೆಜ್ಜೆಗಳು' ಎಂಬುದು ವೈದ್ಯರು ಆಧುನಿಕ ಮಾವನರಿಗೆ ವಿಧಿಸುತ್ತಿರುವ ನಿಸರ್ಗಚಿಕಿತ್ಸೆಯಾಗಿದೆ. ಇದೊಂದು ರೀತಿಯಲ್ಲಿ ವ್ಯಾಯಾಮರಹಿತವಾದ ಸೌಷ್ಠವಜೀವನ ಶೈಲಿಯಾಗಿದೆ.

ಬಾಲ್ಯದಿಂದಲೂ ಕಂಡುಂಡ ಅಲೆಮಾರಿ ಬದುಕನ್ನೆ ಸಾಹಿತ್ಯ ಮಾಡಿದ ಅಮೆರಿಕಾ ದೇಶದ ಥೋರೊ ಮತ್ತು ಕನ್ನಡನಾಡಿನ ಕುವೆಂಪು ಇನ್ನು ಮುಂಬರುವ ಶತಮಾನಗಳಲ್ಲೂ ನೈಜ ಮಾರ್ಗದರ್ಶಿಗಳಾಗಿ ಮತ್ತು ಸತ್ಯಾನ್ವೇಷಣೆಯ ಸಾಹಿತ್ಯ ಸಂಗಾತಿಗಳಾಗಿ ಗೌರವಿಸಲ್ಪಡುತ್ತಾರೆ. ತನ್ನ ಸಮಕಾಲೀನ ಸಾಹಿತ್ಯ ಪರಿಸರದಲ್ಲಿ ಅವಕೃಪೆಗೆ ಈಡಾಗಿದ್ದ ಥೋರೊ 'ವಾಲ್ಡನ್ ಪಾಂಡ್' ಎಂಬ ಗ್ರಂಥದಲ್ಲಿ ಹೇಳಿರುವ ಮಾತುಗಳಿವು : ''ದಿನವೆಲ್ಲ ವನ್ಯತಾಣಗಳಲ್ಲಿ ಅಲೆದಾಡುತ್ತಾ ತನ್ನಷ್ಟಕ್ಕೆ ತಾನಿರುವ ವ್ಯಕ್ತಿಯನ್ನು ಲೋಫರ್ ಎಂದೂ, ದನಗಳನ್ನು ಕಡಿದು ಸಾಗಿಸುವ ವ್ಯಕ್ತಿಯನ್ನು ಸಾಹಸಿಯಾದ ಉದ್ಯಮಶೀಲನೆಂದೂ ಜನರು ಕರೆಯುತ್ತಾರೆ.'' ಆಧುನಿಕ ಜಗತ್ತಿನ ವಿನಾಶದ ದಾರಿಯನ್ನು ತನ್ನ ಮುನ್ನೋಟದಿಂದ ಸ್ಪಷ್ಟವಾಗಿ ಕಂಡುಕೊಂಡಿದ್ದ ಥೋರೋ ಮನುಷ್ಯ ಜೀವನದ 'ನಿಸರ್ಗೀಕರಣ'ದ ಬಗ್ಗೆ ಹೆಚ್ಚು ಆಸಕ್ತನಾಗಿದ್ದನು. ಕುವೆಂಪು ಸಾಹಿತ್ಯದ ತಿರುಳು ಕೂಡ ನಿಸರ್ಗೀಕರಣವೇ ಆಗಿದೆ.

ಆದಿಮಾನವನಿಂದ ಹಿಡಿದು ಆಧುನಿಕ ಮಾನವನವರೆಗೆ ಸಾಗಿಬಂದಿರುವ ಮನುಕುಲದ ಮಹಾಯಾನವನ್ನು ಸಿಂಹಾವಲೋಕನ ಮಾಡಿದರೆ, ಮನುಷ್ಯರು ಕ್ರಮವಾಗಿ ಭೂಮಂಡಲ-ಜಲಮಂಡಲ-ವಾಯುಮಂಡಲ-ಬಾಹ್ಯಾಕಾಶಗಳನ್ನು ದಾಟುತ್ತಾ ಬಂದಿರುವ ಬಗೆಯೊಂದು ಗೋಚರವಾಗುತ್ತದೆ. ನೆಲದಿಂದ ಮೇಲು ಮೇಲಕ್ಕೆ ಏರುತ್ತಿರುವ ಮನುಕುಲವು ಆಂತರಿಕ ಚಲನಾ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಿದೆಯಾದರೂ ತನ್ನೆಲ್ಲ ಶಕ್ತಿ-ಸಾಮರ್ಥ್ಯಗಳನ್ನು ಮಿದುಳಿನತ್ತ ಕೇಂದ್ರೀಕರಿಸಿದೆ. 'ತನು-ಮನ ಪಟುತೆ'ಯ ಬದಲು 'ಮಿದುಳಪಟುತ್ವಕ್ಕೆ' ಹೆಚ್ಚು ಗಮನಕೊಟ್ಟಿದೆ. ದಯವಿಟ್ಟು ಕ್ಷಮಿಸಿ : ಅಂಗಾಂಗಗಳು ನಿಷ್ಕ್ರಿಯವಾಗಿದ್ದರೂ ಪ್ರಚಂಡ ಮಿದುಳಿನಿಂದ ಆಲೋಚಿಸುತ್ತಿರುವ ಸ್ಟೀಫನ್ ಹಾಕಿಂಗ್, ವಿನಾಶದೆಡೆಗೆ ಸಾಗುತ್ತಿರುವ ಆಧುನಿಕ ಮಾನವನ ಪ್ರತ್ಯಕ್ಷ ರೂಪಕವಾಗಿದ್ದಾನೆ. ನಾನಿಲ್ಲಿ ಸ್ಟೀಫನ್ ಹಾಕಿಂಗ್ ವಿಚಾರಧಾರೆಯನ್ನು ಟೀಕಿಸುತ್ತಿದ್ದೇನೆಂದು ಯಾರಾದರೂ ಭಾವಿಸಿದರೆ, ಅದು ಈ ಲೇಖನದ ಉದ್ದೇಶವಲ್ಲವೆಂಬುದನ್ನು ನಮ್ರತೆಯಿಂದ ಸೂಚಿಸುತ್ತಿದ್ದೇನೆ.

---

*ಸಾರ್ವಜನಿಕ ಶಿಕ್ಷಣ ಇಲಾಖೆ, ಕೋಲಾರ ಜಿಲ್ಲೆ, ಉತ್ತರ ಶೈಕ್ಷಣಿಕ ವಲಯದ ವ್ಯಾಪ್ತಿಗೊಳಪಡುವ ಶಿಕ್ಷಕರಿಗಾಗಿ ದಿನಾಂಕ ೨೧-೧೨-೨೦೦೨ರಂದು ಮಿಣಕನ ಗುರ್ಕಿಯಲ್ಲಿ, ಅಗನಾಗ್ ಮತ್ತು ಇಕೋವಾಚ್ ಸಂಘಟಿಸಿದ್ದ ಹಸಿರು ಅಧ್ಯಾಪಕರ ತರಬೇತಿ ಶಿಬಿರ-೨ ರಲ್ಲಿ ಮಾಡಿದ ಅಧ್ಯಕ್ಷ ಭಾಷಣವನ್ನು ಆಧರಿಸಿದ ಲೇಖನ.*


ವಿ. ಚಂದ್ರಶೇಖರ ನಂಗಲಿ

೧೬, ಶ್ರೀಗೌರಿ, ಕನಕನಗರ, ಬಸವೇಶ್ವರ ದೇವಸ್ಥಾನದ ಹತ್ತಿರ, ಸರ್ ಎಂ.ವಿ. ಬಡಾವಣೆ, ಹೊಸಕೋಟೆ - ೫೬೨ ೧೧೪

# ವರ್ಣಲೇಪಿತ ವಾಸ್ತುಶಾಸ್ತ್ರ

ಪ್ರೊ॥ ಬಿ. ವಿ. ವೀರಭದ್ರಪ್ಪ

**ಜ್ಯೋ**ತಿಷ್ಯ, ವಾಸ್ತು, ಹಸ್ತಸಾಮುದ್ರಿಕ, ಹಲ್ಲಿಶಾಸ್ತ್ರ, ಶಕುನಶಾಸ್ತ್ರ ಇತ್ಯಾದಿಗಳ ಮೂಲಕ ಕೆಲವು ಖದೀಮ ಪಂಡಿತರು ಮುಗ್ಧ ಜನರ ಮನೋ ದೌರ್ಬಲ್ಯಗಳನ್ನೇ ತಮ್ಮ ಬಂಡವಾಳವನ್ನಾಗಿ ಮಾಡಿಕೊಂಡು ತಲೆ ತಲಾಂತರ ಗಳಿಂದ ಐಷಾರಾಮವಾಗಿ ತಮ್ಮ ಜೀವನ ನಡೆಸುತ್ತಾ ಬಂದಿದ್ದಾರೆ, ಇಂದಿನ ವಿಜ್ಞಾನ ಯುಗದಲ್ಲೂ ಅವರು ಮೂಢನಂಬಿಕೆಗಳಿಗೇ ವಿಜ್ಞಾನದ ಮುಸುಕನ್ನು ಹೊದಿಸಿ ಜನರನ್ನು ವಂಚಿಸುತ್ತಲೇ ಇದ್ದಾರೆ.

ನಮ್ಮ ಪೂರ್ವಜರು ಮೇಲೆ ಹೆಸರಿಸಿದವುಗಳನ್ನೆಲ್ಲಾ ಶಾಸ್ತ್ರಗಳೆಂದೂ, ಅವು ದೇವರಿಂದಲೇ ಹೇಳಲ್ಪಟ್ಟುವೆಂದೂ, ಅವುಗಳನ್ನು ಯಾರೂ ಬದಲಾಯಿಸಲು ಬರುವುದಿಲ್ಲವೆಂದೂ ನಂಬಿದ್ದರು. ಶಾಸ್ತ್ರ, ವಿಜ್ಞಾನಗಳೆಂಬುವು ಕಾಲದಿಂದ ಕಾಲಕ್ಕೆ ಪರೀಕ್ಷೆಗಳಿಗೊಳಗಾಗುತ್ತಾ ಬದಲಾಗುತ್ತಿರುತ್ತವೆ ಎಂಬುದು ಅವರ ಊಹೆಗೂ ನಿಲುಕಿರಲಿಕ್ಕಿಲ್ಲ. ಪ್ರಾಚೀನ ಕಾಲದಲ್ಲಿ ಶಾಸ್ತ್ರದ ಹೆಸರಿನಲ್ಲಿ ವಿಜ್ಞಾನ ವೇನಾದರೂ ಇದ್ದರೆ ಅದು ಬದಲಾಗಬೇಕಾಗುತ್ತದೆ. ಆದರೆ ಸ್ವಾರ್ಥಿಗಳಾದ ಪಂಡಿತರು ಅದನ್ನು ಬೆಳೆಯಲು, ಬದಲಾಗಲು ಬಿಡದೆ ತಮ್ಮ ಅಂಕೆಯಲ್ಲೇ ಇಟ್ಟುಕೊಳ್ಳಲು ಪ್ರಯತ್ನಿಸುತ್ತಾರೆ. ಆಧುನಿಕ ವಿಜ್ಞಾನ ಆ ಅಡೆತಡೆಗಳನ್ನು ದಾಟಿ ಮುಂದಡಿ ಇಟ್ಟಿದೆ.

ಜ್ಯೋತಿಷ್ಯ, ವಾಸ್ತುಗಳ ಹೆಸರಿನಲ್ಲಿ ಇಂದು ಚಲಾವಣೆಯಲ್ಲಿರುವುದೆಲ್ಲಾ ಮೂಢನಂಬಿಕೆ ಹಾಗೂ ಶಾಸ್ತ್ರದ ಹೆಸರಿನಲ್ಲಿ ಇಂದು ಆಚರಣೆಯಲ್ಲಿರುವುದೆಲ್ಲಾ ಅಂಧ ವಿಶ್ವಾಸ. ಪ್ರಾಚೀನ ಭಾರತದಲ್ಲಿ ಆರ್ಯಭಟ (ಕ್ರಿ.ಶ. ೪೭೬), ವರಾಹ ಮಿಹಿರ (ಕ್ರಿ.ಶ. ೫೦೫), ಬ್ರಹ್ಮಗುಪ್ತ (ಕ್ರಿ.ಶ. ೫೯೮)ರಂತಹ ವಿಜ್ಞಾನಿಗಳು ಧಾರ್ಮಿಕರ ವಿರೋಧವನ್ನು ಎದುರಿಸಲಾರದೆ ಅವರೊಡನೆ ಸ್ವಲ್ಪಮಟ್ಟಿಗೆ ರಾಜಿ ಮಾಡಿಕೊಳ್ಳಬೇಕಾಯಿತು. ಹೀಗಾಗಿ ಅವರ ಕೃತಿಗಳಲ್ಲಿ ವೈಜ್ಞಾನಿಕ ಸಂಶೋಧನೆ ಗಳೊಡನೆ ಸಾಂಪ್ರದಾಯಿಕ ನಂಬಿಕೆಗಳೂ ಬೆರೆತು ಕಲಸುಮೇಲೋಗರವಾಗಿವೆ. ಅವರ ನಂತರ ಕ್ರಮೇಣ ಭಾರತದಲ್ಲಿ ಧರ್ಮಶಾಸ್ತ್ರಕಾರರ ಪ್ರಾಬಲ್ಯ ಹೆಚ್ಚಾಗಿ ವಿಜ್ಞಾನದ ಸೆಲೆ ಬತ್ತಿಹೋಯಿತು.

ಕಾರ್ಯಕಾರಣ ಸಂಬಂಧಗಳ ವೀಕ್ಷಣೆ, ಪ್ರಯೋಗ, ಫಲಿತಾಂಶಗಳ ಅಧ್ಯಯನದಿಂದ ಸಿದ್ಧಾಂತಗಳನ್ನು ರೂಪಿಸುವುದು ವೈಜ್ಞಾನಿಕ ಪದ್ಧತಿ. ಹೊಸ ಹೊಸ ಅನ್ವೇಷಣೆಗಳಿಂದ ಮೊದಲ ಸಿದ್ಧಾಂತಗಳು ರೂಪಾಂತರಗೊಳ್ಳುತ್ತವೆ, ಅಭಿವೃದ್ಧಿ ಹೊಂದುತ್ತವೆ. ಇಂದು ನಾವು ರಾಕೆಟ್ಟುಗಳನ್ನು ನಿರ್ಮಿಸಬಲ್ಲೆವು. ಅನೇಕ ಉಪಕರಣ ಗಳಿಂದ ಕೂಡಿದ ಕೃತಕ ಉಪಗ್ರಹಗಳನ್ನು ಆಕಾಶಕ್ಕೆ ಕಳಿಸಬಲ್ಲೆವು. ಅವು ಆಕಾಶದಲ್ಲಿನ ಗ್ರಹ, ಉಪಗ್ರಹ, ನಕ್ಷತ್ರಾದಿಗಳಿಗೆ ಸಂಬಂಧಿಸಿದ ಸಮಾಚಾರ ಗಳನ್ನು ಸಂಗ್ರಹಿಸಿ ನಮಗೆ ಕಳಿಸುತ್ತವೆ. ಇತ್ತೀಚೆಗೆ ಕಳಿಸಲಾದ 'ಪಾತ್ ಫೈಂಡರ್' ಆಕಾಶದ ಆಳಕ್ಕೆ ನುಗ್ಗುತ್ತಿದೆ, ನುಗ್ಗುತ್ತಲೇ ಇದೆ. ನಾವು ಕಳಿಸಿದ ಉಪಗ್ರಹಗಳು ಅಲ್ಲಿ ಅಕಸ್ಮಾತ್ ಕೆಟ್ಟರೆ ಇಲ್ಲಿ ನೆಲದ ಮೇಲಿನಿಂದ ನಾವು 'ರಿಮೋಟ್ ಕಂಟ್ರೋಲ್' ಮೂಲಕ ಅವುಗಳನ್ನು ಸರಿಪಡಿಸಬಲ್ಲೆವು.

ಇವುಗಳನ್ನು ಸಿದ್ಧಪಡಿಸಲು ಆಧುನಿಕ ವೈಜ್ಞಾನಿಕ ಸಿದ್ಧಾಂತಗಳು ಎಷ್ಟು ನಿಖರವಾಗಿರ ಬೇಕೆಂಬುದನ್ನು ಊಹಿಸಿರಿ. ಅದು ನಿಜವಾದ ಶಾಸ್ತ್ರ, ಅದು ನಿಜವಾದ ವಿಜ್ಞಾನ. ಅಂಧ ವಿಶ್ವಾಸಗಳು, ಪಂಡಿತರ ಮಂತ್ರಗಳು ವಿಜ್ಞಾನವಾಗಲಾರವು. ಯಾವ ಇಬ್ಬರು ಜ್ಯೋತಿಷ್ಕರಾಗಲಿ, ವಾಸ್ತು ಪಂಡಿತರಾಗಲಿ ಒಂದೇ ರೀತಿಯ ಫಲಗಳನ್ನು ಹೇಳಲಾರರು. ಯಾವುದರ ಆಧಾರದಿಂದ ಒಬ್ಬರು ಒಂದು ಫಲವನ್ನು, ಇನ್ನೊಬ್ಬರು ಇನ್ನೊಂದು ಫಲವನ್ನು ಸೂಚಿಸುತ್ತಾರೋ ಅದು ಶಾಸ್ತ್ರವೂ ಅಲ್ಲ, ವಿಜ್ಞಾನವೂ ಅಲ್ಲ.

**ವಾಸ್ತು ನಡೆದು ಬಂದ ದಾರಿ :** ವಾಸ್ತುವು ಋಗ್ವೇದ ಕಾಲದಿಂದಲೇ ಅಸ್ತಿತ್ವದಲ್ಲಿತ್ತು. ವೇದಗಳು ಅಪೌರುಷೇಯ, ಅವು ಬ್ರಹ್ಮನ ಮುಖದಿಂದ ಹೊರಹೊಮ್ಮಿ ಬ್ರಾಹ್ಮಣರ ಬಾಯಲ್ಲಿ ಜಾರಿ ಬಿದ್ದುವೆಂದು ವೈದಿಕರು ಹೇಳುತ್ತಾರೆ. ಹಿಂದು ಮತಗಳೆಲ್ಲಾ ಅದಕ್ಕೆ ಸಾಕ್ಷಿ. ಋಗ್ವೇದದ ವಾಸ್ತೋಷ್ಪತಿ ಸೂಕ್ತದಲ್ಲಿ ತಾವು ವಾಸಿಸುವ ವಸತಿಯಲ್ಲಿರುವವರಿಗೆ ತಮ್ಮ ಪುತ್ರ ಪೌತ್ರಾದಿ ಬಂಧು ಬಳಗಕ್ಕೆ, ಅಷ್ಟೇ ಅಲ್ಲ ಹಸು, ಎಮ್ಮೆ ಕುದುರೆ ಮುಂತಾದ ಪ್ರಾಣಿಗಳಿಗೂ ಆರೋಗ್ಯ ಭಾಗ್ಯ, ಸುಖ ಸಮೃದ್ಧಿಗಳನ್ನು ದಯಪಾಲಿಸಲು ವಾಸ್ತೋಷ್ಪತಿಯನ್ನು ಪ್ರಾರ್ಥಿಸಲಾಗಿದೆ. ಇದನ್ನುಳಿದು ಗೃಹ ನಿರ್ಮಾಣದ ವಿಚಾರ ಋಗ್ವೇದದಲ್ಲಿ ಬೇರೇನೂ ಇಲ್ಲ.

ಎಲ್ಲ ಶಾಸ್ತ್ರಗಳನ್ನು ಬ್ರಹ್ಮನೇ ಋಷಿಗಳಿಗೆ ಬೋಧಿಸಿದನೆಂದೂ, ಅವು ಗುರು ಶಿಷ್ಯ ಪರಂಪರೆಯ ಮೂಲಕ ಹಾದು ತಾಳೆಗರಿ ಪ್ರತಿಗಳಿಗೆ ವರ್ಗಾವಣೆಯಾದುವೆಂದೂ, ಅವುಗಳನ್ನು ನುಸಿಹುಳುಗಳು ತಿನ್ನಲಾಗಿ ಉಳಿದ ಬ್ರಹ್ಮವಾಕ್ಕುಗಳು ತಮಗೆ ತಲುಪಿವೆ ಎಂದೂ ಸನಾತನವಾದಿಗಳು ಹೇಳುತ್ತಾರೆ. ಈ ಶಾಸ್ತ್ರಗಳಲ್ಲಿ ವಾಸ್ತುಶಾಸ್ತ್ರವೂ ಸೇರುತ್ತದೆ.

ಅರಣ್ಯಗಳಲ್ಲಿ ಯಜ್ಞ ಯಾಗಾದಿಗಳನ್ನು ಮಾಡಿಕೊಳ್ಳುತ್ತಾ ಸೋಮಪಾನ ಸವಿಯುತ್ತಾ, ಅಗ್ನಿ ಕುಂಡದಲ್ಲಿ ಮಾಂಸದ ತುಂಡುಗಳನ್ನು ಸುಟ್ಟುಕೊಂಡು ತಿನ್ನುತ್ತಿದ್ದ ಋಷ್ಯಾದಿಗಳಿಗೆ ಸಾಲಂಕೃತ ಸೌಧಗಳು ಎಲ್ಲಿಂದ ಬರಬೇಕು? ಅವರೆಲ್ಲಾ ವಾಸಿಸುತ್ತಿದ್ದುದು ಗುಡಿಸಲುಗಳಲ್ಲಿ. ಅವುಗಳನ್ನು ಸಂಸ್ಕೃತದಲ್ಲಿ ಪರ್ಣಕುಟಿ, ಪರ್ಣಶಾಲ ಎಂದು ಕರೆಯುತ್ತಾರೆ. ಪರ್ಣಶಾಲೆ ಎಂದರೆ ಎಲೆಗಳಿಂದ ಹೊದಿಸಿದ ಗುಡಿಸಲು. ಆ ಋಷಿಗಳೇ ವಾಸ್ತು ಎಂಬುದನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಶ್ಲೋಕಗಳಲ್ಲಿ ಸೆರೆಹಿಡಿದಿದ್ದಾರೆಂದು ಪ್ರಾಚೀನ ಗ್ರಂಥಗಳಿಂದ ತಿಳಿದುಬರುತ್ತದೆ.

ಪರಾಶರನು ಬೃಹದ್ರಥನಿಗೆ ಹೇಳಿದುದನ್ನು ಅವನು ವಿಶ್ವಕರ್ಮನಿಗೆ ಬೋಧಿಸಲಾಗಿ ವಿಶ್ವಕರ್ಮನು ಅದನ್ನು 'ವಿಶ್ವಕರ್ಮ ಪ್ರಕಾಶಿಕಾ' ಎಂಬ ಗ್ರಂಥದಲ್ಲಿ ಶ್ಲೋಕಗಳ ರೂಪದಲ್ಲಿ ರಚಿಸಿದ್ದಾನೆಂದು ವಿಶ್ವಕರ್ಮ ಪ್ರಕಾಶಿಕವೇ ತಿಳಿಸುತ್ತದೆ. (ವಿ.ಪ್ರ.೧:೪). ಭರದ್ವಾಜ ಋಷಿಯೇ ವಾಸ್ತುವನ್ನು ರೂಪಿಸಿದ ಎಂದು 'ವಾಸ್ತು ದರ್ಪಣ'ವು (೧:೨) ಮತ್ತೊಂದು ಕಥೆಯನ್ನು ಹೇಳುತ್ತದೆ. ಬ್ರಹ್ಮ, ಇಂದ್ರ, ಯಮ, ಶುಕ್ರ, ಅಂಗೀರಸ, ಧ್ರುವ, ಗೌತಮ, ಗಾರ್ಗೇಯ, ಮನು, ವ್ಯಾಸ, ಭೃಗು, ವಿಶ್ವಕರ್ಮ ಇತ್ಯಾದಿ ಪ್ರಭೃತಿಗಳು ವಾಸ್ತು ಗ್ರಂಥಗಳನ್ನು ರಚಿಸಿದ್ದಾರೆಂದು 'ಪಂಚ ವಾಸ್ತು ಪಾರಿಜಾತಂ' (೧:೧) ಹೇಳುತ್ತದೆ.

ಭೃಗು, ಅತ್ರಿ, ವಸಿಷ್ಠ, ವಿಶ್ವಕರ್ಮ, ಮಯ, ನಾರದ, ನಗ್ನಜಿತು, ವಿಶಾಲಾಕ್ಷ, ಪುರಂದರ, ಬ್ರಹ್ಮಕುಮಾರ, ನಂದೀಶ, ಶೌನಕ, ಗರ್ಗ, ವಾಸುದೇವ, ಅನಿರುದ್ಧ, ಶುಕ್ರ, ಬೃಹಸ್ಪತಿ ಇವರು ವಾಸ್ತುಶಾಸ್ತ್ರವನ್ನು ಬೋಧಿಸಿದ ವರಲ್ಲಿ ಮುಖ್ಯರೆಂದು ಮತ್ಸ್ಯಪುರಾಣ ಹೇಳುತ್ತದೆ. ಪ್ರಾಚೀನ ವಾಸ್ತು ಗ್ರಂಥಗಳೆಲ್ಲಾ ನಮಗೆ ದೊರೆಯುತ್ತಿಲ್ಲ. ಅವುಗಳನ್ನು ಯಾರು ಬರೆದಿದ್ದಾರೆ ಎಂಬುದು ಸಹ ಅನೇಕ ಗ್ರಂಥಗಳ ವಿಷಯದಲ್ಲಿ ನಮಗೆ ತಿಳಿಯುತ್ತಿಲ್ಲ.

**ವಾಸ್ತು ವಿದ್ವಾಂಸರು ವರ್ಣ ವ್ಯವಸ್ಥೆಯನ್ನು ಪೋಷಿಸಲು ಅನುಸರಿಸಿರುವ ರೀತಿ ಅದ್ಭುತವಾಗಿದೆ! ಗ್ರಾಮ, ಖೇಡ, ಪಟ್ಟಣ, ನಗರಗಳು ನಿರ್ಮಾಣವಾದ ಸ್ಥಳಗಳಲ್ಲಿ ನಾಲ್ಕು ಬಣ್ಣಗಳ, ನಾಲ್ಕು ರುಚಿಗಳ, ನಾಲ್ಕು ವಾಸನೆಗಳ ಸ್ಥಳಗಳು ಇರಲು ಹೇಗೆ ಸಾಧ್ಯ? ಅಂತಹ ನಗರ, ಪಟ್ಟಣ, ಖೇಡ, ಗ್ರಾಮಗಳು ಎಲ್ಲಿಯಾದರೂ ಇರುವುವೆ ಅಥವಾ ಇದ್ದುವೇ? ವಾಸ್ತು ಪಂಡಿತರಿಗೆ ಇದೊಂದು ಸವಾಲು!**

**ನಿವೇಶನಗಳ ಎತ್ತು ತಗ್ಗುಗಳನ್ನು ಆಧರಿಸಿ ವಾಸ್ತು ವಿಶಾರದರು ಅವುಗಳಿಗೆ ಬೇರೆ ಬೇರೆ ಹೆಸರುಗಳನ್ನು ಕೊಟ್ಟು ಫಲಾಫಲಗಳನ್ನು ಹೇಳಿದ್ದಾರೆ. ಅವುಗಳ ತುಂಬಾ ಆಸೆ ಆಮಿಷಗಳು, ಭಯ ಭೀತಿಗಳೇ ತುಂಬಿವೆ.**

ದೊರೆತಿರುವ ಗ್ರಂಥಗಳಲ್ಲಿ ಕೆಲವು ಪ್ರಾಚೀನ ಗ್ರಂಥಗಳ ಹೆಸರುಗಳನ್ನು ಪ್ರಸ್ತಾಪಿಸಿರುವುದರಿಂದ ಆ ಗ್ರಂಥಗಳ ಹೆಸರುಗಳನ್ನು ನಾವು ಹೇಳಬಹುದು. ಸಮರಾಂಗಣ ಸೂತ್ರಧಾರ, ವಾಸ್ತುರಾಜ ವಲ್ಲಭ, ಶಿಲ್ಪ ರತ್ನ, ವಸಿಷ್ಠ ಸಂಹಿತ, ವಿಶ್ವಕರ್ಮ ಪ್ರಕಾಶಿಕಾ, ವಿಶ್ವಕರ್ಮ ವಾಸ್ತುಶಾಸ್ತ್ರ, ಕಾಲಾಮೃತ, ಮಯಮತ, ಮಾನಸಾರ, ಅಪರಾಜಿತ ಪೃಚ್ಛ, ರಾಜಸಿಂಹ ವಾಸ್ತು, ದೀಪಾರ್ಣವ ಇತ್ಯಾದಿ ಅನೇಕ ಹೆಸರುಗಳಲ್ಲಿ ಪ್ರಾಚೀನ ವಾಸ್ತು ಗ್ರಂಥಗಳು ರಚನೆಯಾಗಿವೆ.

**ವರ್ಣ ಲೇಪಿತ ವಾಸ್ತು:** ಮೇಲಿನ ವಾಸ್ತು ಗ್ರಂಥಗಳೆಲ್ಲಾ ಸಂಸ್ಕೃತದಲ್ಲಿವೆ. ಸಂಸ್ಕೃತ ಮಾನವರ ಮಾತೃಭಾಷೆಯಲ್ಲ; ಅದು ದೇವ ಭಾಷೆ. ಹಾಗೆಂದು ವೈದಿಕರು ಹೇಳುತ್ತಾರೆ. ಅದು ಭೂದೇವತೆಗಳಾದ ಬ್ರಾಹ್ಮಣರ ಏಕಸ್ವಾಮ್ಯ ಎನ್ನಲಾಗಿದೆ. ಸನಾತನಿಗಳ ಪ್ರಕಾರ ವೇದಗಳು, ಬ್ರಾಹ್ಮಣಗಳು, ಆರಣ್ಯಕಗಳು, ಉಪನಿಷತ್ತುಗಳು, ರಾಮಾಯಣ, ಭಾರತ, ಭಾಗವತ, ಪುರಾಣಗಳು ಎಲ್ಲಾ ಶಾಸ್ತ್ರ ಗ್ರಂಥಗಳೇ ಆಗಿವೆ. ಆದರೆ ಜಾತಿ ತತ್ವವನ್ನು ಪ್ರತಿಪಾದಿಸದ ಅಂದರೆ ಶ್ರೇಣೀಕೃತ ವರ್ಣ ವ್ಯವಸ್ಥೆಯನ್ನು ಎತ್ತಿ ಹಿಡಿಯದ ಶಾಸ್ತ್ರವೇ ಇಲ್ಲ. ಕೊನೆಗೆ ಗ್ರಹಗಳಿಗೂ ಅವರು ವರ್ಣ ವ್ಯವಸ್ಥೆಯನ್ನು ಅಳವಡಿಸಿದ್ದಾರೆ. ಗುರು, ಶುಕ್ರಗಳು ಬ್ರಾಹ್ಮಣ ಗ್ರಹಗಳು ಎಂದೂ, ಅಂಗಾರಕ, ಸೂರ್ಯ (ವಾಸ್ತವವಾಗಿ ಸೂರ್ಯ ಒಂದು ನಕ್ಷತ್ರವೇ ಹೊರತು ಗ್ರಹವಲ್ಲ) ಕ್ಷತ್ರಿಯ ಗ್ರಹಗಳೆಂದೂ, ಚಂದ್ರ, ಬುಧಗಳು (ವಾಸ್ತವವಾಗಿ ಚಂದ್ರ ಒಂದು ಉಪಗ್ರಹವೇ ಹೊರತು ಗ್ರಹವಲ್ಲ) ವೈಶ್ಯ ಗ್ರಹಗಳೆಂದೂ, ಶನಿಯು ಶೂದ್ರ ಗ್ರಹವೆಂದೂ 'ಕಾಲಾಮೃತ' (೧:೫) ಹೇಳುತ್ತದೆ. ಭೂಮಿಯನ್ನು ಒಂದು ಗ್ರಹವೆಂದು ಯಾವ ಪ್ರಾಚೀನ ಶಾಸ್ತ್ರವೂ ಹೇಳಿಲ್ಲ.

ವಿಜ್ಞಾನಕ್ಕೆ ಕುಲ, ಜಾತಿ, ವರ್ಣಗಳಿರುತ್ತವೆಯೆ? ಗ್ರಹಗಳಿಗೆ, ಭೂಮಿಗೆ ಜಾತಿಗಳಿರುತ್ತವೆಯೆ? ಮಾನವರಲ್ಲಿ ವರ್ಣಭೇದವನ್ನು, ಮೇಲು ಕೀಳುಗಳನ್ನು ಹುಟ್ಟುಹಾಕಿದುದನ್ನು ವಿಜ್ಞಾನವೆನ್ನಲಾದೀತೆ? ಆದರೂ ಪ್ರಾಚೀನ ವಾಸ್ತು ಗ್ರಂಥಗಳೆಲ್ಲಾ ಜಾತಿ ಭೇದಗಳಿಂದ ತುಂಬಿವೆ. ಸಂಸ್ಕೃತ ಗ್ರಂಥಗಳು ಎಷ್ಟು ಪ್ರಾಚೀನವಿದ್ದರೆ ಅಷ್ಟು ಶ್ರೇಷ್ಠವೆಂದೂ, ಅವು ಋಷಿವಾಣಿಗಳೆಂದೂ, ಋಷಿಗಳು ಸಾಕ್ಷಾತ್ ದೈವ ಸ್ವರೂಪಗಳೆಂದೂ, ಅವರು ತಮ್ಮ ತಪೋಶಕ್ತಿಯಿಂದ, ಅಂತರ್‌ದೃಷ್ಟಿಯಿಂದ, ದೈವಕೃಪೆಯಿಂದ ಗ್ರಹಿಸಿ ಶ್ಲೋಕಗಳ ಮೂಲಕ ನಮಗೆ ನೀಡಿರುವುದೆಲ್ಲಾ ನಿರ್ದಿಷ್ಟವಾದುದೆಂದೂ ನಮ್ಮ ವಾಸ್ತು ಪಂಡಿತರು ಹೇಳುತ್ತಾರೆ. ಅವರಿಗೆ ವರ್ಣ ವಿಷಯದಲ್ಲಿ ಯಾವ ಭಿನ್ನಾಭಿಪ್ರಾಯವೂ ಇಲ್ಲ. ಆದರೆ ವಾಸ್ತು ವಿಷಯಗಳಲ್ಲಿ ಮಾತ್ರ ಪರಸ್ಪರ ಭಿನ್ನಾಭಿಪ್ರಾಯಗಳಿವೆ. ಅವುಗಳನ್ನು ನಮ್ಮ ಪಂಡಿತರು ಕೇವಲ ಮತಭೇದಗಳೆಂದು ಹೇಳಿದ್ದಾರೆಯೇ ಹೊರತು ಅವುಗಳಲ್ಲಿರುವ ತಪ್ಪು ಒಪ್ಪುಗಳನ್ನು ವಿಶ್ಲೇಷಿಸುವ ಗೊಡವೆಗೇ ಹೋಗಿಲ್ಲ. ಇಂದಿನ ಪಂಡಿತರು ತಮ್ಮ ವ್ಯಾಪಾರ ದೃಷ್ಟಿಯಿಂದ ಜಾತಿ ತತ್ವಗಳನ್ನು ಅಷ್ಟಾಗಿ ಹೇಳದಿದ್ದರೂ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ವಾಸ್ತು ಸೂತ್ರಗಳನ್ನು ವ್ಯಾಖ್ಯಾನಿಸುವುದನ್ನು ಮಾತ್ರ ಬಿಟ್ಟಿಲ್ಲ.

ಪ್ರಾಚೀನ ಹಿಂದುಗಳು ಮಾನವರನ್ನು ನಾಲ್ಕು ವರ್ಣ(ಬಣ್ಣ)ಗಳಲ್ಲಿ ವಿಭಾಗಿಸಿದ್ದಾರೆ. ಆ ನಾಲ್ಕು ಬಣ್ಣಗಳನ್ನೇ ವಾಸ್ತು ಪಂಡಿತರು ಭೂಮಿಗೂ ಆರೋಪಿಸಿದ್ದಾರೆ. ಬಣ್ಣದ ಪ್ರಕಾರ ಆಯಾ ಭೂಮಿ, ಆಯಾ ವರ್ಣದವರಿಗೆ ಸೂಕ್ತವಾದುದು ಎಂದು ಹೇಳುತ್ತಾರೆ. ಅಂದರೆ ಗೃಹ ನಿರ್ಮಾಣ ಮಾಡಲು ನಿವೇಶನವನ್ನು ಆಯ್ಕೆ ಮಾಡಿಕೊಳ್ಳುವಾಗ ವಾಸ್ತುವಿನಲ್ಲಿ ಜಾತಿಯು ಒಳಪ್ರವೇಶಿಸುತ್ತದೆ.

ಗೃಹ ನಿರ್ಮಾಣಕ್ಕೆ ಬಿಳಿಯ ಭೂಮಿ ಉತ್ತಮ, ಕೆಂಪು ಭೂಮಿ ಮಧ್ಯಮ, ಹಸಿರು ಭೂಮಿ ಅಧಮ ಮತ್ತು ಕಪ್ಪು ಭೂಮಿ ಅಧಮಾಧಮ' ಎಂದು 'ವಾಸ್ತು ದರ್ಪಣ' ಹೇಳುತ್ತದೆ. ಆದ್ದರಿಂದ ಲೋಕಹಿತಕ್ಕಾಗಿ ಉತ್ತಮವಾದ ಬಿಳಿಯ ಬಣ್ಣದ ಭೂಮಿ ಬ್ರಾಹ್ಮಣರಿಗೆ, ಮಧ್ಯಮವಾದ ಕೆಂಪು ಭೂಮಿ ಕ್ಷತ್ರಿಯರಿಗೆ, ಅಧಮವಾದ ಹಸಿರು ಭೂಮಿ ವೈಶ್ಯರಿಗೆ ಮತ್ತು ಅಧಮಾಧಮವಾದ ಕಪ್ಪು ಭೂಮಿ ಶೂದ್ರರಿಗೆ ಸೂಕ್ತವಾದುದು' ಎಂದು **'ವಿಶ್ವಕರ್ಮ ಪ್ರಕಾಶಿಕಾ'** (೧-೨೪) ಹೇಳುತ್ತದೆ.

ಗೃಹ ನಿರ್ಮಾಣಕ್ಕೆ ಸಿಹಿಯಾದ ಭೂಮಿ ಬ್ರಾಹ್ಮಣರಿಗೆ, ಖಾರವಾದ ಭೂಮಿ ಕ್ಷತ್ರಿಯರಿಗೆ, ಹುಳಿಯಾದ ಭೂಮಿ ವೈಶ್ಯರಿಗೆ, ಮತ್ತು ಕಹಿಯಾದ ಭೂಮಿ ಶೂದ್ರರಿಗೆ ಸೂಕ್ತ' ಎಂದು 'ವಿಶ್ವಕರ್ಮ ಪ್ರಕಾಶಿಕಾ' (೧-೨೬) ಹೇಳುತ್ತದೆ.

ಕಮಲ ಹೂವಿನ ವಾಸನೆಯ ಭೂಮಿ ಉತ್ತಮ, ಕುದುರೆ ವಾಸನೆಯ ಭೂಮಿ ಮಧ್ಯಮ, ಪಶು ಧಾನ್ಯಗಳ ವಾಸನೆ ಬರುವ ಭೂಮಿ ಅಧಮ ಮತ್ತು ಇತರ ವಾಸನೆಗಳನ್ನು ನೀಡುವ ಭೂಮಿ ನಿಂದ್ಯವಾದುದು' ಎಂದು 'ವಾಸ್ತು ದರ್ಪಣ' ಹೇಳುತ್ತದೆ.

ಸುವಾಸನೆಯ ಭೂಮಿ ಬ್ರಾಹ್ಮಣರಿಗೆ, ರಕ್ತವಾಸನೆಯ ಭೂಮಿ ಕ್ಷತ್ರಿಯರಿಗೆ, ಮಧುವಾಸನೆಯ ಭೂಮಿ ವೈಶ್ಯರಿಗೆ ಹಾಗೂ ಮದ್ಯದ ವಾಸನೆಯ ಭೂಮಿ ಶೂದ್ರರಿಗೆ ತಕ್ಕುದು[೫] ಹಾಗೂ ಗಂಭಿರವಾದ ಭೂಮಿ ಬ್ರಾಹ್ಮಣರಿಗೆ, ಎತ್ತರವಾದ ಭೂಮಿ ಕ್ಷತ್ರಿಯರಿಗೆ, ಸಮತಟ್ಟಾದ ಭೂಮಿ ವೈಶ್ಯರಿಗೆ, ಎತ್ತರ ತಗ್ಗುಗಳಿಂದ ಕೂಡಿದ ಭೂಮಿ ಶೂದ್ರರಿಗೆ ತಕ್ಕುದು[೬] ಎಂದು 'ವಿಶ್ವಕರ್ಮ ಪ್ರಕಾಶಿಕೆ' ನಿರ್ದೇಶಿಸುತ್ತದೆ.

ದರ್ಭೆ ಹುಲ್ಲು ಬೆಳೆಯುವ ಭೂಮಿ ಬ್ರಾಹ್ಮಣರಿಗೆ, ಗರಿಕೆ ಬೆಳೆಯುವ ಭೂಮಿ ಕ್ಷತ್ರಿಯರಿಗೆ, ಬೆಳೆ ಬೆಳೆಯುವ ಭೂಮಿ ವೈಶ್ಯರಿಗೆ ಹಾಗೂ ಹುಲ್ಲು ಬೆಳೆಯುವ ಭೂಮಿ ಶೂದ್ರರಿಗೆ ಯೋಗ್ಯ ಎಂದು 'ವಾಸ್ತು ದೀಪಿಕೆ' ಸಾರುತ್ತದೆ. ತುಪ್ಪದ ವಾಸನೆಯ ಭೂಮಿ ಬ್ರಾಹ್ಮಣರಿಗೆ, ರಕ್ತ ವಾಸನೆಯ ಭೂಮಿ ಕ್ಷತ್ರಿಯರಿಗೆ, ಅನ್ನದ ವಾಸನೆಯ ಭೂಮಿ ವೈಶ್ಯರಿಗೆ ಹಾಗೂ ಹೆಂಡದ ವಾಸನೆಯ ಭೂಮಿ ಶೂದ್ರರಿಗೆ ಶ್ರೇಷ್ಠ[೮] ಎಂದು 'ಗೃಹಕಾರಿಕೆ' ಹೇಳುತ್ತದೆ. ಮನೆ ಕಟ್ಟಲು ನಿವೇಶನ ನಿರ್ಣಯಿಸುವಲ್ಲಿ ವರ್ಣ ವ್ಯವಸ್ಥೆಯನ್ನು ಪ್ರಮಾಣವಾಗಿ ಅಂಗೀಕರಿಸದ ಪ್ರಾಚೀನ ವಾಸ್ತು ಗ್ರಂಥವಾವುದೂ ಇಲ್ಲ. ಸಮರಾಂಗಣ ಸೂತ್ರಧಾರ, ವಾಸ್ತು ಪ್ರದೀಪ, ವಾಸ್ತುರಾಜ ವಲ್ಲಭ, ರಾಜಸಿಂಹ ವಾಸ್ತು ಮುಂತಾದ ಗ್ರಂಥಗಳೆಲ್ಲಾ ಅವುಗಳಲ್ಲಿ ಸೇರುತ್ತವೆ.

ಇನ್ನೂ ಕೇಳಿ, ಆಗ್ನೇಯ - ದಕ್ಷಿಣ - ನೈಋತ್ಯ ದಿಕ್ಕುಗಳು ಎತ್ತರವಾಗಿ, ಉತ್ತರ ತಗ್ಗಾಗಿ ಇರುವ ಭೂಮಿ ಬ್ರಾಹ್ಮಣರಿಗೆ ಶ್ರೇಷ್ಠವೆಂದೂ, ನೈಋತ್ಯ-ಪಶ್ಚಿಮ-ವಾಯವ್ಯ ಎತ್ತರವಾಗಿ ಪೂರ್ವ ತಗ್ಗಾಗಿರುವ ಭೂಮಿ ಕ್ಷತ್ರಿಯರಿಗೆ ಶ್ರೇಷ್ಠವೆಂದೂ, ವಾಯವ್ಯ-ಉತ್ತರ- ಈಶಾನ್ಯಗಳು ಎತ್ತರವಾಗಿ ದಕ್ಷಿಣ ತಗ್ಗಾಗಿರುವ ಭೂಮಿ ವೈಶ್ಯರಿಗೆ ಶ್ರೇಷ್ಠವೆಂದೂ ಕೊನೆಗೆ ಈಶಾನ್ಯ-ಪೂರ್ವ-ಆಗ್ನೇಯಗಳು ಎತ್ತರವಾಗಿ ಪಶ್ಚಿಮವು ತಗ್ಗಾಗಿರುವ ಭೂಮಿ ಶೂದ್ರರಿಗೆ ಶ್ರೇಷ್ಠವೆಂದೂ 'ಶಿಲ್ಪ ರತ್ನ' ಹೇಳುತ್ತದೆ.

ಒಂದು ವರ್ಣದವರ ನಿವೇಶದ ಬಣ್ಣ, ರುಚಿ, ವಾಸನೆ, ಎತ್ತು-ತಗ್ಗುಗಳು ಇನ್ನೊಂದು ವರ್ಣದವರಿಗೆ ಸಲ್ಲದು ಎಂಬುದೇ ನಮ್ಮ ಋಷಿ ಮುನಿಗಳ ವಾಸ್ತುಶಾಸ್ತ್ರವಾಗಿದೆ. ಈ ಎಲ್ಲ ನಿರ್ದೇಶನಗಳ ಉದ್ದೇಶ ನಾಲ್ಕು ವರ್ಣದವರು ಪರಸ್ಪರ ಬೆರೆತು ಸಮಾಜದ ಮುಖ್ಯ ಪ್ರವಾಹದಲ್ಲಿ ಸೇರಿ ಒಂದುಗೂಡದಂತೆ ತಡೆಯುವುದೇ ಆಗಿದೆಯಲ್ಲವೆ ?

ಮನೆಯ ವಿಸ್ತೀರ್ಣವನ್ನು ೭ರಿಂದ ಗುಣಿಸಿ ಅದರಿಂದ ಲಭಿಸಿದ ಮೊತ್ತವನ್ನು ೮ರಿಂದ ಭಾಗಿಸಿದಾಗ ಬರುವ ಶೇಷವನ್ನು 'ಆಯ' ಎಂದು ಕರೆಯಲಾಗಿದೆ. ಹೀಗೆ ಲೆಕ್ಕಾಚಾರ ಮಾಡಿದ ಆಯಕ್ಕೆ ಶೇಷದ ಸಂಖ್ಯೆಯನ್ನು ಅನುಸರಿಸಿ 'ವಿಶ್ವಕರ್ಮ ಪ್ರಕಾಶಿಕೆ'ಯಲ್ಲಿ ಈ ರೀತಿ ನಾಮಕರಣ ಮಾಡಲಾಗಿದೆ.

| ಶೇಷ | ಆಯ | ಶೇಷ | ಆಯ |
|---|---|---|---|
| ೧ | ಧ್ವಜಾಯ | ೨ | ಧೂಮಾಯ |
| ೩ | ಸಿಂಹಾಯ | ೪ | ಶುನಕಾಯ |
| ೫ | ವೃಷಭಾಯ | ೬ | ಖರಾಯ |
| ೭ | ಗಜಾಯ | ೮ | ಅಜಾಯ |

ಇವುಗಳನ್ನು ಬೆಸ ಸಂಖ್ಯೆಯ ಆಯಗಳು ಮತ್ತು ಸರಿ ಸಂಖ್ಯೆಯ ಆಯಗಳು ಎಂದು ಎರಡು ಗುಂಪುಗಳಾಗಿ ಮಾಡಲಾಗಿದೆ. ಬೆಸ ಸಂಖ್ಯೆಯ ಆಯಗಳು ಶುಭ ಮತ್ತು ಸರಿ ಸಂಖ್ಯೆಯ ಆಯಗಳು ಅಶುಭ ಎಂದು 'ವಿಶ್ವಕರ್ಮ ಪ್ರಕಾಶಿಕೆ' ಸಾರುತ್ತದೆ. ಮೇಲಿನ ಬೆಸ ಸಂಖ್ಯೆಯ ಆಯಗಳಲ್ಲಿ ಧ್ವಜಾಯ ಬ್ರಾಹ್ಮಣರಿಗೆ, ಸಿಂಹಾಯ ಕ್ಷತ್ರಿಯರಿಗೆ, ವೃಷಭಾಯ ವೈಶ್ಯರಿಗೆ ಮತ್ತು ಗಜಾಯ ಶೂದ್ರರಿಗೆ ಶುಭಾಯಗಳಂತೆ. ಜಾತಿಗಳಿಗೆ ಅನುಸಾರವಾಗಿ ಈ ಆಯಗಳನ್ನು ವಿಂಗಡಿಸಿರುವ ರೀತಿ ಜಾತಿ ಜಾತಿಗಳಲ್ಲಿ ವರ್ಣ ಸಂಕರವಾಗದಂತೆ ತಡೆಗಟ್ಟುವುದೇ ಆಗಿದೆ.

ವಾಸ್ತು ಪುರುಷನ ಪೂಜೆಯನ್ನು ಮಾಡುವಾಗ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಮತ್ತು ಶೂದ್ರರು ಕ್ರಮವಾಗಿ ವಾಸ್ತು ಪುರುಷನ ಶಿರಸ್ಸನ್ನು, ಕಣ್ಣುಗಳನ್ನು, ತೊಡೆಗಳನ್ನು ಹಾಗೂ ಪಾದಗಳನ್ನು ಮುಟ್ಟಿ ನಮಸ್ಕಾರ ಮಾಡಬೇಕೆಂದು 'ವಿಶ್ವಕರ್ಮ ಪ್ರಕಾಶಿಕೆ' (೪-೬) ತಿಳಿಸುತ್ತದೆ. ಏಕೆಂದರೆ ಪುರುಷಸೂಕ್ತದಲ್ಲಿ ಹೆಣೆಯಲಾಗಿರುವ ಕಥೆಯ ಪ್ರಕಾರ ಬ್ರಾಹ್ಮಣನು ಪುರುಷನ ಮುಖದಿಂದ, ಕ್ಷತ್ರಿಯನು ಬಾಹುಗಳಿಂದ, ವೈಶ್ಯನು ತೊಡೆಗಳಿಂದ ಹಾಗೂ ಶೂದ್ರನು ಪಾದಗಳಿಂದ ಜನಿಸಿದವರಲ್ಲವೆ !

ಮನೆಗಳನ್ನು ಕಟ್ಟಲು ಬಳಸುವ ಮರದ ಮುಟ್ಟಿಗೂ ವಾಸ್ತು ಪಂಡಿತರು ಜಾತಿ ತತ್ವವನ್ನು ಲೇಪಿಸಿದ್ದಾರೆ. ಬ್ರಾಹ್ಮಣರಿಗೆ ಸುರದಾರು, ಚಂದನ, ಜಮ್ಮಿ, ಮಧೂರ ವೃಕ್ಷಗಳು; ಕ್ಷತ್ರಿಯರಿಗೆ ಖದಿರ, ಬಿಲ್ವ, ಅರ್ಜುನ, ಶಿಂಶುಫಲ, ಶಾಲತೂನಿಕ, ಸರಳ; ವೈಶ್ಯರಿಗೆ ಖಾದಿರ, ಸಿಂಧು, ಸ್ಯಂದನ ಹಾಗೂ ಶೂದ್ರರಿಗೆ ತಿಂದುಕ, ಅರ್ಜುನದ ಕೊಂಬೆ, ವೈಸರ, ಆಮ್ರ ವೃಕ್ಷಗಳನ್ನ ಬಳಸಲು ಆದೇಶಿಸಲಾಗಿದೆ.

ವಾಸ್ತು ವಿದ್ವಾಂಸರು ವರ್ಣ ವ್ಯವಸ್ಥೆಯನ್ನು ಪೋಷಿಸಲು ಅನುಸರಿಸಿರುವ ರೀತಿ ಅದ್ಭುತವಾಗಿದೆ ! ಗ್ರಾಮ, ಖೇಡ, ಪಟ್ಟಣ, ನಗರಗಳು ನಿರ್ಮಾಣವಾದ ಸ್ಥಳಗಳಲ್ಲಿ ನಾಲ್ಕು ಬಣ್ಣಗಳ, ನಾಲ್ಕು ರುಚಿಗಳ, ನಾಲ್ಕು ವಾಸನೆಗಳ ಸ್ಥಳಗಳು ಇರಲು ಹೇಗೆ ಸಾಧ್ಯ ? ಅಂತಹ ನಗರ, ಪಟ್ಟಣ, ಖೇಡ, ಗ್ರಾಮಗಳು ಎಲ್ಲಿಯಾದರೂ ಇರುವುವೇ ಅಥವಾ ಇದ್ದುವೇ ? ವಾಸ್ತು ಪಂಡಿತರಿಗೆ ಇದೊಂದು ಸವಾಲು !

ನಿವೇಶನಗಳ ಎತ್ತು ತಗ್ಗುಗಳನ್ನು ಆಧರಿಸಿ ವಾಸ್ತು ವಿಶಾರದರು ಅವುಗಳಿಗೆ ಬೇರೆ ಬೇರೆ ಹೆಸರುಗಳನ್ನು ಕೊಟ್ಟು ಫಲಾಫಲಗಳನ್ನು ಹೇಳಿದ್ದಾರೆ. ಅವುಗಳ ತುಂಬಾ ಆಸೆ ಆಮಿಷಗಳು, ಭಯ ಭೀತಿಗಳೇ ತುಂಬಿವೆ.

ವಾಸ್ತುಶಾಸ್ತ್ರ ಗ್ರಂಥಗಳಲ್ಲಿ ಹೇಳಿದ ಫಲಗಳು ಪ್ರಾಪ್ತವಾಗಬೇಕಾದರೆ ಮಾನವರು ವರ್ಣ ಸಂಕೋಲೆಯಲ್ಲಿ ಬಂಧಿಗಳಾಗಿ ತಮ್ಮ ಮಾನವೀಯತೆಯನ್ನು ಕಳೆದುಕೊಳ್ಳಬೇಕಾಗುತ್ತದೆ. ಅವರ ಪುರುಷ ಪ್ರಯತ್ನಕ್ಕೆ, ಜೀವನೋತ್ಸಾಹಕ್ಕೆ ಅಲ್ಲಿ ಲವಲೇಶವೂ ಅವಕಾಶವಿಲ್ಲ. ಮುಗ್ಧ ಮಾನವರನ್ನು ಭೀತಿಯಿಂದ ಬೆದರಿಸಿ, ಆಸೆಯ ಬಲೆಯನ್ನು ಬೀಸಿ ಅವರನ್ನು ಬೇಟೆಯಾಡುವುದೇ ವಾಸ್ತು ಪಂಡಿತರ ಜಾಣತನವಾಗಿದೆ. ನಿವೇಶನದ ಆಯ್ಕೆಯಿಂದ ಆರಂಭಿಸಿ, ಗೃಹ ನಿರ್ಮಾಣ, ಗೃಹ ಪ್ರವೇಶವಾಗುವ ವರೆಗೆ ಗೃಹಸ್ಥನು ಆಚರಿಸುವ ಕಂದಾಚಾರಗಳೆಲ್ಲದರಲ್ಲೂ ಪ್ರಾಚೀನ ವಾಸ್ತುವು ಜಾತಿ ತಾರತಮ್ಯವನ್ನು ಪ್ರದರ್ಶಿಸಿದೆ. ಆಧುನಿಕ ವಾಸ್ತು ಪಂಡಿತರು ಜಾತಿಯೊಂದನ್ನು ಜಾಣ್ಮೆಯಿಂದ ಮರೆಮಾಚಿ ಉಳಿದವನ್ನೆಲ್ಲಾ ಎತ್ತಿ ಹಿಡಿಯುತ್ತಾರೆ.

**ಅಡಿ ಟಿಪ್ಪಣಿಗಳು**

೧. ಉತ್ತಮಂ ಶ್ವೇತವರ್ಣಂ ಚ ಮಧ್ಯಮಂ ಲೋಹಿತಂ ತಥಾ।
ಅಧಮಂ ಪೀತವರ್ಣಂ ಚ ಕೃಷ್ಣಾ ಸ್ಯಾದಧಮಾಧಮಂ॥ (ವಾ.ದ.)

೨. ಅಥಾತಸ್ಸಂಪ್ರವಕ್ಷ್ಯಾಮಿ ಲೋಕಾನಾಂ ಹಿತಕಾಮ್ಯಯಾ।
ಶ್ವೇತಾ ರಕ್ತಾ ತಥಾ ಪೀತಾ ಕೃಷ್ಣಾ ವರ್ಣಾನುಪೂರ್ವತಃ॥ (ವಿ.ಪ್ರ.)

೩. ಮಧುರಾ ಬ್ರಾಹ್ಮಣೀ ಭೂಮಿಃ ಕಷಾಯಾ ಕ್ಷತ್ರಿಯಾ ಮತಾ।
ಆಮ್ಲಾ ವೈಶ್ಯಾಭವೇದ್ ಭೂಮಿಸ್ತಿಕ್ತಾ ಶೂದ್ರಾಪಕೀರ್ತಿತಾ॥ (ವಿ.ಪ್ರ.)

೪. ಉತ್ತಮಂ ಪದ್ಮಗಂಧಂ ಚ ಮಧ್ಯಮಂ ವಾಜಿ ಗಂಧಂ।
ಅಧಮಂ ಪಶುಧಾನ್ಯಾದಿ ಇತರಂ ಪರಿವರ್ಜಯೇತ್॥ (ವಾ.ದ.)

೫. ಸುಗಂಧಾ ಬ್ರಾಹ್ಮಣೀ ಭೂಮೀ ರಕ್ತಗಂಧಾ ತು ಕ್ಷತ್ರಿಣೀ।
ಮಧೂಗಂಧಾರ್ಭವೇತ್ ವೈಶ್ಯಾ ಮದ್ಯಗಂಧಾಚ ಶೂದ್ರಿಣೀ॥ (ವಿ.ಪ್ರ.)

೬. ಗಂಭೀರಾ ಬ್ರಾಹ್ಮಣೀ ಭೂಮಿರ್ ನೃಪಾಣಾಂ ತುಂಗ ಮಾಶ್ರಿತಾ।
ವೈಶ್ಯಾನಾಂ ಸಮಯ ಭೂಮಿಶ್ಚ ಶೂದ್ರಾಣಾಂ ವಿಕಟಾ ಸ್ಮೃತಾ॥ (ವಿ.ಪ್ರ.)

೭. ಘೃತಾಸೃಗನ್ನ ಮದ್ಯಾನಾಂ ಗಂಧಾಶ್ಚ ಕ್ರಮತಶ್ಮ ಭಾ।
ವಿಪ್ರಕ್ಷತ್ರಿಯವಿಟ್ಛೂದ್ರ ಜಾತೀನಾಂ ವಾಸ್ತು ಭೂಮಿಷು॥ (ಗೃ.ಕಾ.)

ಪ್ರೊ॥ ಬಿ. ವಿ. ವೀರಭದ್ರಪ್ಪ
ಬಿ-೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫

## ದೇವರ ದಯ

ನ್ಯೂಯಾರ್ಕಿನ ಆ ಅವಳಿ ಗೋಪುರ
ಕುಸಿದು ಬಿದ್ದವಲ್ಲ
ಮತಾಂಧರ ದಾಳಿಗೆ,
ಸಜೀವ ಸಮಾಧಿಯಾದರಲ್ಲ
ಸಾವಿರಾರು ಮಂದಿ
ಅವಶೇಷದ ಅಡಿಗೆ

ಆಗ ಅದೇ ಜಾಗದಲ್ಲಿದ್ದನಂತೆ
ನನ್ನೂರಿನ ಗೆಳೆಯನ ಮಗ
ಅಲ್ಲೇ ಹತ್ತಿರ;
ಪವಾಡ ಸದೃಶ ರೀತಿಯಲ್ಲಿ
ಬಚಾವಾದನಂತೆ,
ಕೂದಲೆಳೆ ಅಂತರ.

'ದೇವರ ದಯ' ಎಂದನು ಗೆಳೆಯ
ತನ್ನ ಮಗನ
ಅದೃಷ್ಟಕ್ಕೆ
ಹಚ್ಚಿಟ್ಟ ಸಾಲು ಮೋಂಬತ್ತಿ , ಹೂಗುಚ್ಛ
ನೆನಪಾಗಿ
ನಾ ನಕ್ಕೆ

ಬಿ. ಆರ್. ಲಕ್ಷ್ಮಣರಾವ್
ಮಾರುತಿ ಸ್ಟುಡಿಯೋ, ಕೆ. ಆರ್. ಬಡಾವಣೆ,
ಚಿಂತಾಮಣಿ - ೫೬೩ ೧೨೫

# ಕಿತ್ತೂರು ಕನ್ನಡದ ಸಮಸ್ಯೆಗಳು

ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ

**ಉ**ತ್ತರ ಕರ್ನಾಟಕದಲ್ಲಿಯ ಕಿತ್ತೂರು ಕನ್ನಡದ ಪ್ರದೇಶಗಳೆಂದರೆ, ಕರ್ನಾಟಕ ಏಕೀಕರಣ ಪೂರ್ವದ ಮುಂಬಯಿ ಕರ್ನಾಟಕದ ನಾಲ್ಕು ಅಥವಾ ಇಂದಿನ ಕರ್ನಾಟಕ ರಾಜ್ಯದ ಏಳು ಜಿಲ್ಲೆಗಳು. ಕರಾವಳಿಯ ಕಾರವಾರ, ಮಲೆನಾಡು ಸೆರಗಿನ ಬೆಳಗಾವಿ, ಧಾರವಾಡ ಮತ್ತು ಬಯಲು ಸೀಮೆಯ ಹಾವೇರಿ, ಗದಗ, ಬಾಗಲಕೋಟೆ ಮತ್ತು ಬಿಜಾಪುರ ಜಿಲ್ಲೆಗಳು. ಸರಿಸುಮಾರು ಆರು ನೂರು ವರುಷಗಳ ಪರಕೀಯ ಭಾಷೆಗಳ, ಸಂಸ್ಕೃತಿಯ, ಧರ್ಮದ ಪ್ರಭಾವದಲ್ಲಿ ಬೆಳೆದು ಬಾಳಿದ ಈ ಜನರು ಕನ್ನಡ ಭಾಷೆಯನ್ನು, ಕರ್ನಾಟಕದ ಮೂಲ ಸಂಸ್ಕೃತಿಯನ್ನು ಜೋಪಾನವಾಗಿ ಇಟ್ಟುಕೊಂಡು ಬಂದವರು. ಮಧ್ಯದ ೮೦ ವರುಷಗಳನ್ನು ಬಿಟ್ಟು ನಿರಂತರ ಕನ್ನಡ ಸಂಸ್ಕೃತಿಯಲ್ಲಿ ಬೆಳೆದ ಮೈಸೂರು ಕನ್ನಡಿಗರಂತೆ, ಕನ್ನಡದಲ್ಲಿ ಇಂಗ್ಲಿಷನ್ನು ಬೆರೆಸಲಿಲ್ಲ. ಹೈದರಾಬಾದ್ ಕರ್ನಾಟಕದವರಂತೆ ಉರ್ದುವನ್ನೂ ಸೇರಿಸಲಿಲ್ಲ. ತೀರ ಕ್ವಚಿತ್ತಾಗಿ ಮರಾಠಿ ಪ್ರಭಾವವನ್ನು ಹೊಂದಿದ ಈ ಜನ ಅಚ್ಚ ಕನ್ನಡಿಗರಾಗಿಯೇ ಉಳಿದವರು.

ಪಾರತಂತ್ರ್ಯದಲ್ಲಿ ಉಳಿದಿದ್ದ ಇತರ ಭಾರತೀಯ ರಾಜ್ಯಗಳ ಜನರಂತೆ ಇವರು ಕೂಡ ಇನ್ನೇನು ಅಭಿವೃದ್ಧಿ ಪಥದಲ್ಲಿ ಸಾಗಿ, ಎಲ್ಲ ರಂಗಗಳಲ್ಲೂ ಸ್ವಾವಲಂಬಿಗಳಾಗಬೇಕು ಎಂಬಷ್ಟರಲ್ಲಿ, ನಮ್ಮವರನ್ನು ಕೂಡಿಕೊಳ್ಳುವ ಹಂಬಲದಲ್ಲಿ, ಏಕೀಕೃತ ಅಂದಿನ ಮೈಸೂರು, ಇಂದಿನ ಕರ್ನಾಟಕ ರಾಜ್ಯದಲ್ಲಿ ಸೇರಿಕೊಂಡದ್ದು ಅತ್ಯಂತ ದುರದೃಷ್ಟಕರ ಎಂದು ಇಂದು ಕಿತ್ತೂರು ಕನ್ನಡ ನಾಡಿನ ಜನತೆ ಭಾವಿಸುವಂತಾಗಿದೆ. ಅದಕ್ಕೆ ಕಾರಣಗಳನ್ನು ಹುಡುಕಿ, ಅಂಕಿ ಸಂಖ್ಯೆಗಳನ್ನು ನೀಡುವ ಗೋಜಿಗೆ ಹೋಗುವ ಕಾರಣವೇ ಇಲ್ಲ. ಎಂಟು ವರುಷಗಳ ಹಿಂದೆ ಮಾನ್ಯ ಎಚ್.ಕೆ. ಪಾಟೀಲರು ಬರೆದ 'ಚೆಲುವ ಕನ್ನಡ ನಾಡು', ಅನಂತರದ ಡಾ॥ ನಂಜುಂಡಪ್ಪನವರ ವರದಿಗಳು ಅಖಂಡ ಐದು ಕೋಟಿ ಜನರ ಎದುರಿಗೆ ಕನ್ನಡಿಯಂತೆ ಇವೆ. ಇಂದಿಗೂ ಅದೇ ಹಾಡು ಅದೇ ರಾಗ. ಕರ್ನಾಟಕದಿಂದ ಬೇರೆಯೇ ಆಗುತ್ತೇವೆಂಬ ತಾರಕಕ್ಕೇರಿದ ಕೂಗಿನ ದಿನಗಳಲ್ಲಿ ಕಿತ್ತೂರು ಕನ್ನಡದ ಸಮಸ್ಯೆಗಳನ್ನು ಪಟ್ಟಿ ಮಾಡುವುದರಲ್ಲಿ ಅರ್ಥವೂ ಇಲ್ಲ.

ಕರ್ನಾಟಕದ ಏಕೀಕರಣವಾದ ನಂತರ ಮೈಸೂರು ಮತ್ತು ಹೈದರಾಬಾದ್ ಕನ್ನಡ ಪ್ರದೇಶಗಳಿಗಿಂತಲೂ ಕಿತ್ತೂರು ಕರ್ನಾಟಕದ ಪ್ರದೇಶಕ್ಕೆ ಅಧಿಕ ಅನ್ಯಾಯವಾಗಿದೆ ಎಂಬುದು ಈಗ ಇಲ್ಲಿಯ ಎಲ್ಲ ಜನರಿಗೆ ಮನದಟ್ಟಾಗಿದೆ. ನೀರಾವರಿ, ರಸ್ತೆ, ರೈಲು, ಶಿಕ್ಷಣ, ಪ್ರವಾಸೋದ್ಯಮ, ಔದ್ಯೋಗೀಕರಣ, ಒಂದೇ ಎರಡೇ, ಯಾವುದನ್ನು ಬೊಟ್ಟು ಮಾಡಿ ತೋರಿಸಬೇಕು ? ಕಳೆದ ಐವತ್ತು ವರುಷಗಳಿಂದ ಇಲ್ಲಿಯ ಯಾವ ನೀರಾವರಿ ಯೋಜನೆಗಳೂ ಪೂರ್ತಿಯಾಗಿಲ್ಲ. ಘಟಪ್ರಭೆ - ಮಲಪ್ರಭೆ ಅಣೆಕಟ್ಟುಗಳನ್ನು ಕಟ್ಟಿ ೩೦-೪೦ ವರುಷಗಳಾದರೂ ಅವುಗಳ ಪೂರ್ತಿ ಉಪಯೋಗ ಇನ್ನುವರೆಗೂ ಆಗಿಲ್ಲ. ಮುಖ್ಯ ಕಾಲುವೆಗಳ ನಿರ್ಮಾಣವೇ ಇಂದಿಗೂ ಮುಗಿದಿಲ್ಲ. ಅದರಂತೆ ಕೃಷ್ಣಾ ಮೇಲ್ದಂಡೆ ಯೋಜನೆಯ ಬಗ್ಗೆ ಅಖಂಡ ಕರ್ನಾಟಕದ ಜನರಲ್ಲಿ ಕೇಳದಿದ್ದವನೇ ಪುಣ್ಯವಂತ. ಶಂಕುಸ್ಥಾಪನೆಯಾಗಿ ಇಂದಿಗೆ ಸರಿಯಾಗಿ ನಾಲ್ವತ್ತು ವರುಷಗಳಾದುವು (೧೯೬೪ರಲ್ಲಿ ಮಾನ್ಯ ಲಾಲಬಹಾದ್ದೂರ ಶಾಸ್ತ್ರಿಗಳಿಂದ). ನೀರು ನಿಲ್ಲಿಸಿದ್ದೇವೆ. ಅದಕ್ಕಾಗಿ ಇಲ್ಲಿಯ ಮೂರು ಲಕ್ಷ ಎಕರೆಯಷ್ಟು ಭೂಮಿ, ೧೪೭ ಹಳ್ಳಿಗಳು, ಬಾಗಲಕೋಟೆಯಂಥ ಒಂದು ನಗರ ಕೃಷ್ಣಾರ್ಪಣವಾದುವು. ಆದರೆ ಈ ಭಾಗಕ್ಕೆ ನೀರಾವರಿ ಇಲ್ಲ. 'ಬಿ' ಸ್ಕೀಮಿನ ತೀರ್ಪು ಬಂದ ಮೇಲೆ, ಮುಳವಾಡ, ಚಿಮ್ಮಲಗಿ, ಇಂಡಿ ಏತ ನೀರಾವರಿ ಯೋಜನೆಗಳು ಪೂರ್ತಿಗೊಂಡರೆ ಈ ಭಾಗ ನೀರು ಕಾಣುವ ಆಶೆ ಇದೆ. ಅದು ಯಾವ ಕಾಲಕ್ಕೆ ಎಂಬುದನ್ನು ಕಾಲವೇ ನಿರ್ಧರಿಸಬೇಕು. ಇನ್ನು ಎರಡು ಅಥವಾ ಮೂರು ವರುಷ ಕರ್ನಾಟಕದ ಏಕೀಕರಣ ಮುಂದೆ ಹೋಗಿದ್ದರೆ ಬಿಜಾಪುರ ಜಿಲ್ಲೆ ನೀರಾವರಿಗೆ ಒಳಪಟ್ಟು ಐವತ್ತು ವರುಷಗಳಾಗುತ್ತಿದ್ದವು. ಮಹಾರಾಷ್ಟ್ರದ ಕೋಯನಾ ಯೋಜನೆ ಮುಗಿವ ಹಂತದಲ್ಲಿತ್ತು. ಅದರಲ್ಲಿ ಬಿಜಾಪುರ ಜಿಲ್ಲೆ ನೀರಾವರಿಗೆ ಒಳಪಟ್ಟಿತ್ತು. ರಾಜ್ಯ ಬದಲಾಯಿತು. ಆದರೂ ಮಹಾರಾಷ್ಟ್ರ ಅಂದು ಕೇವಲ ಎರಡೂವರೆ ಕೋಟಿ ಹಣವನ್ನು ಮೈಸೂರು ರಾಜ್ಯಕ್ಕೆ ಕೇಳಿತ್ತು. ಕೊಡಲಿಲ್ಲ. ೮೫ ಟಿಎಂಸಿ ನೀರನ್ನು ಅದು ಸಮುದ್ರಕ್ಕೆ ತಿರುಗಿಸಿತು. ಅಂದು ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದವರು ಬಿಜಾಪುರ ಜಿಲ್ಲೆಯವರೇ ಆಗಿದ್ದರು. ಮುಂದಿನ ದಿನಗಳಲ್ಲಿ ಮಹಾರಾಷ್ಟ್ರದ ಉಜನಿಯಲ್ಲಿ ಅವರು ಅಣೆಕಟ್ಟನ್ನು ಕಟ್ಟಿದಾಗ ಇಲ್ಲಿ ಹರಿಯುವ ಭೀಮಾ ನದಿಯೂ ಒಣಗಿ ಹೋಯಿತು. ಅದಕ್ಕಾಗಿ ಈಗ ಅಲ್ಲಿಯ ಜನರೇ ಸುಪ್ರೀಮ್ ಕೋರ್ಟಿನ ಕಟ್ಟೆಯನ್ನು ಹತ್ತಿ ನ್ಯಾಯ ದೊರಕಿಸಿಕೊಳ್ಳಬೇಕಾಗಿದೆ. ಇದಕ್ಕಿಂತ ದುರದೃಷ್ಟಕರ ಸಂಗತಿ ಈ ಪ್ರದೇಶದ ಜನರಿಗೆ ಇನ್ನಾವುದಿದೆ ?

ರಸ್ತೆಗಳ ದುರವಸ್ಥೆ ಹೇಳುವುದು ಬೇಡ. ರೈಲು ವಿಷಯದಲ್ಲಿ, ರಾಮಾಯಣ ಮಹಾಭಾರತಗಳು ಸಂಭವಿಸಿದ ಮೇಲೆ, ಹುಬ್ಬಳ್ಳಿಗೆ ನೈಋತ್ಯ ವಲಯ ದಕ್ಕಿತು. ಆದರೆ ಅದನ್ನೇನು ಉಪ್ಪು ಹಚ್ಚಿ ನೆಕ್ಕಬೇಕೆ ? ಅದರಿಂದ ಈ ಭಾಗಕ್ಕೆ ಏನು ಪ್ರಯೋಜನವಾಗಿದೆ. ಉದ್ಯೋಗದ ಅವಕಾಶಗಳು ಅಧಿಕವಾಗಿವೆಯೆ. ರೈಲು ಮಾರ್ಗಗಳು ಅಧಿಕವಾದುವೆ,

ಕಿತ್ತೂರು ಕರ್ನಾಟಕದ ಇಂದಿನ ತುರ್ತು ಸಮಸ್ಯೆಗಳು ಹಲವಾರು. ಅದು ಸಮಸ್ಯೆಗಳ ಆಗರವಾಗಿದೆ. ಉತ್ತರದಲ್ಲಿ ಬೆಳಗಾವಿ ಗಡಿ ಸಮಸ್ಯೆ ಭುಗಿಲೆದ್ದಿದೆ. ಮಹಾರಾಷ್ಟ್ರದವರು ಸರ್ವೋಚ್ಚ ನ್ಯಾಯಾಲಯದ ಕಟ್ಟೆಯನ್ನು ಏರಿದ್ದಾರೆ. ಈವರೆಗೆ ಸರ್ವೋಚ್ಚ ನ್ಯಾಯಾಲಯದಲ್ಲಿ ಕರ್ನಾಟಕ ರಾಜ್ಯವು ಕಾವೇರಿ, ಕೃಷ್ಣೆ ಭೀಮೆಯರ ವಿಷಯದಲ್ಲಿ ವಾದಿಸುತ್ತಿದ್ದುದನ್ನು ನೆನೆಪಿಸಿಕೊಂಡರೆ ಬೆಳಗಾವಿ ವಿಷಯದಲ್ಲಿ ಅಂಜಿಕೆ ಉಂಟಾಗುತ್ತಿದೆ. ಇತ್ತ ಪಶ್ಚಿಮದಲ್ಲಿ ಭೀಮೆ ಬತ್ತಿ ಹೋಗಿದೆ. ದಕ್ಷಿಣದಲ್ಲಿ ತ್ಯಾಗ ಮಾಡಿ ನೀರಿಲ್ಲದೆ ಬಳಲುತ್ತಿದ್ದಾರೆ. ಮಧ್ಯದಲ್ಲಿ ಹೈಕೋರ್ಟಿಗಾಗಿ ಬೇರೆ ರಾಜ್ಯವನ್ನೆ



ಕೇಳುತ್ತಿದ್ದಾರೆ. ಈ ಎಲ್ಲ ಸಮಸ್ಯೆಗಳನ್ನು ಎಂದೋ ಪರಿಹರಿಸಿಕೊಳ್ಳಬಹುದಾಗಿತ್ತು. ಬೆಂಗಳೂರು ಸರಕಾರದ ದಿವ್ಯ ನಿರ್ಲಕ್ಷ್ಯ, ಇಲ್ಲಿಯ ಜನಪ್ರತಿನಿಧಿಗಳಲ್ಲಿಯ ಇಚ್ಛಾಶಕ್ತಿಯ ಕೊರತೆ ಮತ್ತು ಶ್ರೀಸಾಮಾನ್ಯನಲ್ಲಿಯ ಸೋಮಾರಿತನಗಳಿಂದಾಗಿ ಯಾವ ಸಮಸ್ಯೆಗಳೂ ಬಗೆಹರಿಯುವ ಲಕ್ಷಣವಿಲ್ಲ ಎಂದು ವ್ಯಥೆಯಿಂದ ಹೇಳಬೇಕಾಗಿದೆ.

ಈ ಭಾಗಕ್ಕೆ ರೈಲು ಬಂದ ದಿನದಿಂದಲೇ ಅಂದರೆ ಸುಮಾರು ೧೫೦ ವರುಷಗಳಿಂದ, ಹುಬ್ಬಳ್ಳಿ, ಕಾರವಾರ ರೈಲುಮಾರ್ಗದ ಅಗತ್ಯವನ್ನು ಇಂದಿಗೂ ಪೂರೈಸುವುದು ಆಗಿಲ್ಲ. ಕಳೆದ ಹತ್ತು ವರುಷಗಳಿಗೂ ಮೇಲ್ಪಟ್ಟು ಅವಧಿಯಿಂದ ಬಿಜಾಪುರ-ಗದಗ ಮಾರ್ಗದ ಗೇಜು ಪರಿವರ್ತನೆ ಇನ್ನೂ ಮುಗಿಯದೆ ಅದಿಷ್ಟು ಭಾಗ ದ್ವೀಪವಾಗಿ ಬಿಟ್ಟಿದೆ. ಕರ್ನಾಟಕದ ಅತ್ಯಂತ ಶ್ರೀಮಂತ ಪ್ರವಾಸೋದ್ಯಮದ ಪ್ರದೇಶವನ್ನು ಕಡೆಗಣಿಸಿದ್ದು ಇಡೀ ನಾಡಿಗೆ ಹಾನಿಕರ ಎಂಬುದು ಆಳುವವರಿಗೆ ಗೊತ್ತಿಲ್ಲವೆ ?

ಶಿಕ್ಷಣದಲ್ಲಿ ಇಲ್ಲಿಯ ಬೆಳಗಾವಿಯ ಕೆಎಲ್‌ಇ ಮತ್ತು ಇತರ ಶಿಕ್ಷಣ ಸಂಸ್ಥೆಗಳು, ಬಿಜಾಪುರದ ಬಿಎಲ್‌ಡಿಇ ಮತ್ತು ಬಿಡಿಇ, ಬಾಗಲಕೋಟೆಯ ಬಿವಿವಿ ಮತ್ತು ವಿಪ್ರಮ ಸಂಘಗಳು ಶತಮಾನದಷ್ಟು ಹಿಂದೆ ಶಿಕ್ಷಣದಲ್ಲಿ ಕ್ರಾಂತಿಯನ್ನು ಮಾಡಿರದಿದ್ದರೆ ಪರಿಸ್ಥಿತಿಯನ್ನು ಊಹಿಸುವುದೂ ಸಾಧ್ಯವಿಲ್ಲ. ಏಕೀಕರಣದ ನಂತರ ಈ ಪ್ರದೇಶದಲ್ಲಿ ಶಿಕ್ಷಣಕ್ಷೇತ್ರದಲ್ಲಿ ಸರಕಾರದ ಸಾಧನೆ ಶೂನ್ಯ !... ಪ್ರತಿಯಾಗಿ ಈ ಖಾಸಗೀ ಶಿಕ್ಷಣ ಸಂಘಗಳಿಗೂ ಈಗ ಗ್ರಹಣ ಹಿಡಿಸಿದೆ ಸರಕಾರ.

ಔದ್ಯೋಗೀಕರಣದಲ್ಲಿ, ಕಳೆದ ಐವತ್ತು ವರ್ಷಗಳಿಂದ ಉದ್ಯೋಗ ಸೃಷ್ಟಿಸಿರುವ ಒಂದೇ ಒಂದು ಉದ್ಯಮ ಇಲ್ಲಿ ಬರಲಿಲ್ಲ. ಮೊದಲೇ ಇದ್ದ ಹುಬ್ಬಳ್ಳಿಯ ರೈಲ್ವೆ ವರ್ಕ್‌ಶಾಪು, ಇನ್ನಿತರ ಚಿಕ್ಕಪುಟ್ಟ ಮಿಲ್ಲುಗಳೂ ಉಸಿರುಗಟ್ಟಿದವು. ಇದಕ್ಕೆಲ್ಲ ಯಾರು ಕಾರಣ ?

ಈ ಪ್ರದೇಶದ ಕುರಿತು ಕಳಕಳಿ ಇರುವ ಹಿರಿಯ ಪತ್ರಕರ್ತರಾದ ಶ್ರೀ ಪಾಟೀಲ ಪುಟ್ಟಪ್ಪನವರು ಈ ಭಾಗಕ್ಕೆ ಆಗುತ್ತಿರುವ ಅನ್ಯಾಯವನ್ನು ಕಳೆದ ಎರಡು ದಶಕಗಳಿಂದ ಹೇಳುತ್ತಲೇ ಇದ್ದಾರೆ. ಅದಕ್ಕಾಗಿ ಒಂದು ಸಂಘಟನೆಯನ್ನು ರಚಿಸಿ ಹುಬ್ಬಳ್ಳಿ, ಬೆಳಗಾವಿ, ಬಿಜಾಪುರಗಳಲ್ಲಿ ಸಮಾವೇಶಗಳನ್ನೂ ನಡೆಸಿದರು. ಹಳೆಯ ಮೈಸೂರಿನ ಜನರು ಈ ಭಾಗದ ಜನರನ್ನು ಸೇರುತ್ತಿಲ್ಲ. ಅಖಂಡ ಕರ್ನಾಟಕದ ಬಹುತೇಕ ಅಧಿಕಾರ ಆ ಜನರ ಕೈಯಲ್ಲೇ ಇದ್ದುದರಿಂದ ಈ ಭಾಗಕ್ಕೆ ಅನ್ಯಾಯ ಆಗುತ್ತಿದೆ ಇತ್ಯಾದಿಯಾಗಿ ಹೇಳಲಾಗುತ್ತಿದೆ. ಅವುಗಳಲ್ಲಿ ಒಂದಿಷ್ಟು ತಥ್ಯ ಇರಬಹುದಾದರೂ ಅಷ್ಟು ಮಾತ್ರಕ್ಕೆ ಈ ಭಾಗಕ್ಕೆ ಅನ್ಯಾಯವಾಗಿದೆ ಎಂದು ಹೇಳಲಾಗುವುದಿಲ್ಲ.

ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ, ಹಳೆಯ ಮೈಸೂರು ಸಂಸ್ಥಾನದ ಜನರು ಆರಿಸಿ ಕಳಿಸಿದಂತೆ, ಈ ಪ್ರದೇಶದ ಜನರೂ ತಮ್ಮ ಜನಪ್ರತಿನಿಧಿಗಳನ್ನು ಆರಿಸಿ ಕಳಿಸಿದ್ದಾರೆ. ಆದರೆ ಏಕೀಕರಣವಾದ ನಂತರ ಹಳೆಯ ಮೈಸೂರು, ಹೈದರಾಬಾದ್ ಕನ್ನಡ ಪ್ರದೇಶಗಳೊಂದಿಗೆ ಹೋಲಿಸಿದರೆ ಕಿತ್ತೂರು ಕನ್ನಡ ಪ್ರದೇಶ ಅಭಿವೃದ್ಧಿ ಹೊಂದಿಲ್ಲ ಯಾಕೆ ? ಎಂಬುದನ್ನು ಇಲ್ಲಿಯ ಇಂದಿನ ಹಿಂದಿನ ಜನಪ್ರತಿನಿಧಿಗಳು ಯೋಚಿಸುವುದು ಅಗತ್ಯವಾಗಿದೆ. ಅವರು ತಮ್ಮ ಆತ್ಮಸಾಕ್ಷಿಯಾಗಿ ಈ ಪ್ರದೇಶಕ್ಕೆ ಯಾರಿಂದ ಅನ್ಯಾಯವಾಗಿದೆ ಎಂಬುದನ್ನು ಹೇಳಬೇಕು. ಕಳೆದ ನಲವತ್ತೆಂಟು ವರುಷಗಳಲ್ಲಿ ಈ ಪ್ರದೇಶವನ್ನು ಪ್ರತಿನಿಧಿಸುತ್ತಿದ್ದ, ಪ್ರತಿನಿಧಿಸುತ್ತಿರುವ ವಿಧಾನಸಭೆ, ವಿಧಾನಪರಿಷತ್ತು ಮತ್ತು ಲೋಕಸಭೆ, ರಾಜ್ಯಸಭೆಗಳಲ್ಲಿಯ ಸದಸ್ಯರು, ಅವರುಗಳಲ್ಲಿಯ ಹಲವಾರು ಜನರ ಕೈಯಲ್ಲಿ ರಾಜ್ಯ, ಕೇಂದ್ರ ಮಂತ್ರಿ, ಮುಖ್ಯಮಂತ್ರಿ ಪದವಿಗಳು ದೊರೆತಾಗಲೂ ಈ ಪ್ರದೇಶದ ಅಭಿವೃದ್ಧಿಗೆ ಏನು ಮಾಡಿದರು ಎಂಬುದನ್ನು, ಶ್ವೇತಪತ್ರ ಹೊರಡಿಸಿ ಹೇಳಬಹುದೆ ? ಅವರು ಎಷ್ಟು ಸಲ ಆಳುವ ಸರಕಾರದ ಮೇಲೆ ಒತ್ತಾಯ ತಂದರು. ಅದೆಷ್ಟು ಸಲ ವಿಧಾನಸಭೆ, ಪರಿಷತ್ತು, ಲೋಕ ಮತ್ತು ರಾಜ್ಯ ಸಭೆಗಳಲ್ಲಿ ತುಟಿ ಬಿಚ್ಚಿದರು ?

'ಮಗು ಅಳದ ಹೊರತು ತಾಯಿ ಹಾಲು ಕುಡಿಸುವುದಿಲ್ಲ, ಮುಂದೆ ಕರೆಯುವುದಿಲ್ಲ' ಎಂದು ಸಾವಿರ ಸಲ ಸನ್ಮಾನ್ಯ ಪಾಟೀಲ ಪುಟ್ಟಪ್ಪನವರು ಕೂಗಿ ಹೇಳಿದರೂ ಈ ಜನ ಎಷ್ಟು ಸಲ ಪ್ರತಿಕ್ರಿಯಿಸಿದರು ಎಂಬುದನ್ನು ಯೋಚಿಸಬೇಕಾಗಿದೆ. ಕೇವಲ ಕೈ-ಬೆರಳಮೇಲೆ ಎಣಿಸುವಷ್ಟು ಜನ ತಮ್ಮ ಮತಕ್ಷೇತ್ರಕ್ಕೆ-ಪ್ರದೇಶಕ್ಕೆ ನಿಷ್ಠರಾಗಿ ಉಳಿದರೇ ಹೊರತು ಉಳಿದವರು ತಮ್ಮ ಸ್ವಂತದ ಅಭಿವೃದ್ಧಿಗಾಗಿ ದುಡಿದುಕೊಂಡರು ಎಂದು ಈ ಪ್ರದೇಶದ ಬಹುತೇಕ ಜನರು ನಿಷ್ಠುರವಾಗಿ ಹೇಳುತ್ತಾರೆ. ಚುನಾಯಿತ ಪ್ರತಿನಿಧಿಗಳು ಆರ್ಥಿಕವಾಗಿ, ಆಸ್ತಿಕವಾಗಿ ಸಬಲ ಆಗಬಾರದು ಎಂದೇನೂ ಅಲ್ಲ. ಅದರೊಂದಿಗೆ ತಮ್ಮನ್ನು ಆರಿಸಿ ಕಳಿಸಿದ ಕ್ಷೇತ್ರಕ್ಕೂ ಕಿಂಚಿತ್ ಋಣ ಸಲ್ಲಿಸಬೇಕು ಎಂಬ ಭಾವನೆ ಇವರಲ್ಲಿ ಬರಲಿಲ್ಲವಲ್ಲ ಎಂದು ಇಲ್ಲಿಯ ಜನ ವ್ಯಥೆ ಪಡುತ್ತಾರೆ. ಪ್ರಾದೇಶಿಕ ಅಭಿಮಾನ ಇರುವುದು ಪಾಪವಲ್ಲ, ಅದು ಸಂಕುಚಿತ ದೃಷ್ಟಿಯೂ ಅಲ್ಲ. ಅವರು ಚುನಾಯಿತರಾಗಿ ಹೋಗುವುದೇ ತಮ್ಮ ಮತ ಕ್ಷೇತ್ರವನ್ನು ಪ್ರತಿನಿಧಿಸಲು ಮತ್ತು ಆ ಕ್ಷೇತ್ರದ ಜನರ ಏಳಿಗೆಯನ್ನು ಚಿಂತಿಸಲು. 'ಮೊದಲು ಮನೆ ಗೆದ್ದು, ಆ ಮೇಲೆ ಮಾರು ಗೆಲ್ಲು' ಎಂಬ ಗಾದೆಯ ಮಾತೇ ಇದೆ. ಅದು ಬಿಟ್ಟು ಈ ಜನರು ಊರ ಉಸಾಬರಿಯನ್ನೆ ಮಾಡಿದರು ಎಂಬುದನ್ನು ಉತ್ತರ ಕರ್ನಾಟಕ ಅಭಿವೃದ್ಧಿ ಹೋರಾಟ ಸಮಾವೇಶಗಳಲ್ಲಿ ಸೇರಿದ ಹಲವಾರು ಸದಸ್ಯರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.




ದಿನಾಂಕ ೨.೧೨.೨೦೦೪ರಂದು ಕುಂದಾಪುರದ ಭಂಡಾರ್‌ಕಾರ್ಸ್ ಕಾಲೇಜಿನಲ್ಲಿ ನಡೆದ ಸಮಾರಂಭದಲ್ಲಿ, ಪ್ರೊ|| ಪಾರ್ವತಿ ಜಿ. ಐತಾಳ್ ಮಲಯಾಳ ಭಾಷೆಯಿಂದ ಅನುವಾದಿಸಿರುವ ನವಕರ್ನಾಟಕದ ಪ್ರಕಟಣೆಯಾದ **'ಮಲಯಾಳದ ಹತ್ತು ಕಥೆಗಾರ್ತಿಯರು'** ಕಥಾಸಂಕಲನವನ್ನು ತೀರ್ಥಹಳ್ಳಿ ತುಂಗಾ ಕಾಲೇಜಿನ ಕನ್ನಡ ಪ್ರಾಧ್ಯಾಪಕಿ, ವಿಮರ್ಶಕಿ, ಡಾ|| ಎಲ್. ಸಿ. ಸುಮಿತ್ರಾ ಬಿಡುಗಡೆ ಮಾಡಿದರು. ಪ್ರೊ|| ಪಾರ್ವತಿ ಜಿ. ಐತಾಳರ ಕವನ ಸಂಕಲನ **'ಹೊನ್ನ ಬೆಳಕೇ ಬಾ'**ವನ್ನು ಭಂಡಾರ್‌ಕಾರ್ಸ್ ಕಾಲೇಜಿನ ಪ್ರಿನ್ಸಿಪಾಲರಾದ ಡಾ|| ಯು. ಶಾಂತಮೂರ್ತಿ ಐತಾಳರು ಬಿಡುಗಡೆ ಮಾಡಿದರು.

ತನ್ನ ಊರು, ಜಿಲ್ಲೆ, ಪ್ರದೇಶದ ಅಭಿವೃದ್ಧಿಯ ಪ್ರಶ್ನೆ ಬಂದಾಗ, ಜಾತಿ, ಮತ, ಪಕ್ಷ ಭೇದ ಮರೆತು ಒಂದಾಗಿ ದುಡಿಯಬೇಕು ಎಂಬುದನ್ನು ಹಳೆಯ ಮೈಸೂರಿನ ಹಲವಾರು ಜಿಲ್ಲೆಗಳ ಜನಪ್ರತಿನಿಧಿಗಳಿಂದ ಕಲಿಯಬೇಕು. ಒಂದು ಉದಾಹರಣೆಯನ್ನು ಕೊಡಬೇಕೆಂದರೆ ಹಾಸನ ಜಿಲ್ಲೆಯನ್ನು ತೆಗೆದುಕೊಳ್ಳಿ. ಬಾಹ್ಯದಲ್ಲಿ ಕಟ್ಟಾ ರಾಜಕೀಯ ಶತ್ರುಗಳೆಂದೇ ತಿಳಿಯುವ ಅಲ್ಲಿಯ ನಾಲ್ಕು ಜನ ಪ್ರಮುಖ ರಾಜಕಾರಣಿಗಳಾದ ಎಚ್. ಡಿ. ದೇವೇಗೌಡರು, ಪುಟ್ಟಸ್ವಾಮಿ ಗೌಡರು, ಶ್ರೀಕಂಠಯ್ಯನವರು ಮತ್ತು ಹಾರನಹಳ್ಳಿ ರಾಮಸ್ವಾಮಿ ಅವರು, ಹಾಸನ ಜಿಲ್ಲೆಯ ವಿಷಯ ಬಂದಾಗ ಎಲ್ಲ ವೈರತ್ವವನ್ನು ಮರೆತು ಒಂದಾಗಿಬಿಡುತ್ತಾರೆ. ಆಗ ಜಾತಿ, ಪಕ್ಷಗಳು ಅಡ್ಡಬರುವುದಿಲ್ಲ. ರಾಜ್ಯ, ಕೇಂದ್ರ ಸರಕಾರಗಳು ರೂಪಿಸಿದ ಯಾವುದೆ ಗ್ರಾಮಾಂತರ, ನಗರ ಮತ್ತು ಪಟ್ಟಣಗಳ ಅಭಿವೃದ್ಧಿ ಯೋಜನೆಗಳು ಕರ್ನಾಟಕದಲ್ಲಿ ಮೊದಲು ಪ್ರಾರಂಭವಾಗುವುದು ಹಾಸನ ಜಿಲ್ಲೆಯಲ್ಲಿ ಎಂಬುದನ್ನು ಕಳೆದ ಐದು ದಶಕಗಳ ರಾಜಕೀಯ ಚರಿತ್ರೆ ಹೇಳುತ್ತದೆ. ಅದನ್ನು ನೂರಾರು ದೃಷ್ಟಾಂತಗಳೊಂದಿಗೆ ಸಾಬೀತುಪಡಿಸಲೂಬಹುದು. ಅಂಥವರಲ್ಲೊಬ್ಬ ಪ್ರಧಾನ ಮಂತ್ರಿಯೇ ಆದರೆ ಕೇಳುವುದು ಬೇಡ.

ಕಿತ್ತೂರು ಕರ್ನಾಟಕದಲ್ಲಿ ಅಂಥವರು ಯಾಕೆ ಬರಲಿಲ್ಲ ಎಂಬುದೇ ಇಂದಿನ ಪ್ರಶ್ನೆಯಾಗಿದೆ. ಹೈದರಾಬಾದ್ ಕರ್ನಾಟಕದ ಅಭಿವೃದ್ಧಿಗೆ ಕಾರಣರಾದ ದಿ. ವೀರೇಂದ್ರ ಪಾಟೀಲರನ್ನು ಉಳಿದ ಯಾರೂ ಅಭಿನಂದಿಸಲೇಬೇಕು. ಹಾಗೆಂದ ಮಾತ್ರಕ್ಕೆ ಹೈದರಾಬಾದ್ ಕರ್ನಾಟಕ ಸಂಪೂರ್ಣ ಅಭಿವೃದ್ಧಿ ಆಗಿದೆ ಎಂದಲ್ಲ. ನಿಜಾಮ ಸಂಸ್ಥಾನದಿಂದ ಹೊರಬಂದ ಅಂದಿನ ಹೈದರಾಬಾದ್ ಕರ್ನಾಟಕಕ್ಕೂ ಮತ್ತು ಇಂದಿನ ಹೈದರಾಬಾದ್ ಕರ್ನಾಟಕಕ್ಕೂ ಹೋಲಿಸಿ ನೋಡಿದರೆ ಅದರಲ್ಲಿಯ ಅಂತರ ಸ್ಪಷ್ಟವಾಗಿ ಗೋಚರವಾಗುತ್ತದೆ. ಆ ಜನರ ಸುದೈವ ಎಂಬಂತೆ ಕರ್ನಾಟಕ ಏಕೀಕರಣದ ಹೊಸತರಲ್ಲೆ ಅವರ ವ್ಯಕ್ತಿಯೊಬ್ಬ ಮುಖ್ಯಮಂತ್ರಿಯಾದರು. ಅವರಿಗೆ ತಮ್ಮ ಪ್ರದೇಶದ ಅಭಿಮಾನ ತುಂಬ ಇತ್ತು. ತಕ್ಷಣ ಏನೆಲ್ಲ ಸಾಧ್ಯವೋ ಅದನ್ನೆಲ್ಲ ಮಾಡಿದರು. ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ ಮೊದಲು ಆಲಮಟ್ಟಿ ಅನಂತರ ನಾರಾಯಣಪುರ ಎಂದಾಗಿತ್ತು. ಆದರೆ ಆದದ್ದು ಮೊದಲು ನಾರಾಯಣಪುರ ಅಣೆಕಟ್ಟು. ಕಳೆದ ಕಾಲು ಶತಮಾನದಿಂದ ಆ ಪ್ರದೇಶ ನೀರಾವರಿಗೆ ಒಳಪಟ್ಟಿತು. ಅದಕ್ಕಾಗಿ ವ್ಯಥೆ ಇಲ್ಲ. ಇನ್ನೊಂದು ಪ್ರದೇಶವಾದರೂ ಕಿಂಚಿತ್ ಅಭಿವೃದ್ಧಿ ಹೊಂದಿತಲ್ಲ ಎಂಬ ಸಂತೋಷದೊಂದಿಗೆ ಅಂಥವರು ಕಿತ್ತೂರು ಕರ್ನಾಟಕದಲ್ಲಿ ಯಾಕೆ ದೊರೆಯಲಿಲ್ಲ ಎಂಬ ವ್ಯಥೆ ಮಾತ್ರ ಇದೆ.

ಬೆಳಗಾವಿ ಜಿಲ್ಲೆಯ ಜನ ಒಬ್ಬರನ್ನು ಏಳು ಸಲ ಇನ್ನೊಬ್ಬರನ್ನು ನಾಲ್ಕು ಸಲ ಲೋಕಸಭೆಗೆ ಆರಿಸಿ ಕಳಿಸಿತು. ಅವರು ತಮ್ಮ ಅವಧಿಯಲ್ಲಿ ಏನೆಲ್ಲ ಅಧಿಕಾರವನ್ನು ಅನುಭವಿಸಿದರು. ಆದರೆ ಬೆಳಗಾವಿ ಜಿಲ್ಲೆ ನೆನಪು ಇಡುವಂತೆ ಒಂದಾದರೂ ಕೆಲಸವನ್ನು ಮಾಡಿದರೆ? ಅಂಥದೇ ಪ್ರಶ್ನೆಯನ್ನು ಕಾರವಾರ, ಧಾರವಾಡ, ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗಳ ಸಂಸದರನ್ನೂ ಕೇಳಬೇಕು.

ಕಿತ್ತೂರು ಕರ್ನಾಟಕದ ಇಂದಿನ ತುರ್ತು ಸಮಸ್ಯೆಗಳು ಹಲವಾರು. ಅದು ಸಮಸ್ಯೆಗಳ ಆಗರವಾಗಿದೆ. ಉತ್ತರದಲ್ಲಿ ಬೆಳಗಾವಿ ಗಡಿ ಸಮಸ್ಯೆ ಭುಗಿಲೆದ್ದಿದೆ. ಮಹಾರಾಷ್ಟ್ರದವರು ಸರ್ವೋಚ್ಚ ನ್ಯಾಯಾಲಯದ ಕಟ್ಟೆಯನ್ನು ಏರಿದ್ದಾರೆ. ಈವರೆಗೆ ಸರ್ವೋಚ್ಚ ನ್ಯಾಯಾಲಯದಲ್ಲಿ ಕರ್ನಾಟಕ ರಾಜ್ಯವು ಕಾವೇರಿ, ಕೃಷ್ಣೆ, ಭೀಮೆಯರ ವಿಷಯದಲ್ಲಿ ವಾದಿಸುತ್ತಿದ್ದುದನ್ನು ನೆನೆಪಿಸಿಕೊಂಡರೆ ಬೆಳಗಾವಿ ವಿಷಯದಲ್ಲಿ ಅಂಜಿಕೆ ಉಂಟಾಗುತ್ತಿದೆ. ಇತ್ತ ಪಶ್ಚಿಮದಲ್ಲಿ ಭೀಮೆ ಬತ್ತಿ ಹೋಗಿದೆ. ದಕ್ಷಿಣದಲ್ಲಿ ತ್ಯಾಗ ಮಾಡಿ ನೀರಿಲ್ಲದೆ ಬಳಲುತ್ತಿದ್ದಾರೆ. ಮಧ್ಯದಲ್ಲಿ ಹೈಕೋರ್ಟಿಗಾಗಿ ಬೇರೆ ರಾಜ್ಯವನ್ನೆ ಕೇಳುತ್ತಿದ್ದಾರೆ. ಈ ಎಲ್ಲ ಸಮಸ್ಯೆಗಳನ್ನು ಎಂದೊ ಪರಿಹರಿಸಿಕೊಳ್ಳಬಹುದಾಗಿತ್ತು. ಬೆಂಗಳೂರು ಸರಕಾರದ ದಿವ್ಯ ನಿರ್ಲಕ್ಷ್ಯ. ಇಲ್ಲಿಯ ಜನಪ್ರತಿನಿಧಿಗಳಲ್ಲಿಯ ಇಚ್ಛಾ ಶಕ್ತಿಯ ಕೊರತೆ ಮತ್ತು ಶ್ರೀಸಾಮಾನ್ಯನಲ್ಲಿಯ ಸೋಮಾರಿತನಗಳಿಂದಾಗಿ ಯಾವ ಸಮಸ್ಯೆಗಳೂ ಬಗೆಹರಿಯುವ ಲಕ್ಷಣವಿಲ್ಲ ಎಂದು ವ್ಯಥೆಯಿಂದ ಹೇಳಬೇಕಾಗಿದೆ.

ಪರಿಹಾರವೆಂದು ಕೇವಲ ನಂಜುಂಡಪ್ಪ ವರದಿಯನ್ನು ತೋರಿಸಿ ಮೂಗಿಗೆ ತುಪ್ಪ ಹಚ್ಚಿ ಕುಳಿತುಕೊಳ್ಳುವುದಲ್ಲ. ಅಥವಾ ಬಾಗಲಕೋಟೆಗೆ ಪ್ಯಾಕೇಜನ್ನು ಕೊಟ್ಟಂತೂ ಅಲ್ಲ. ಮಾಡಿದ ಕೆಲಸ ತಕ್ಷಣ ಕಣ್ಣಿಗೆ ಕಾಣಿಸಬೇಕು. ಬೆಂಗಳೂರಿನಲ್ಲಿ ಇನ್ನು ಮುಂದೆ ಔದ್ಯೋಗೀಕರಣಕ್ಕೆ ಆಸ್ಪದವನ್ನೀಯದೆ, ಅದನ್ನು ಕಿತ್ತೂರು ಕರ್ನಾಟಕದ ಒಂದು ಊರಿನಲ್ಲಿ ಸ್ಥಾಪಿಸುವುದಾದರೆ ಪರವಾನಗಿ ಕೊಡುತ್ತೇವೆ ಎಂದು ಆದೇಶ ಹೊರಡಿಸ ಬೇಕು. ಕೃಷ್ಣಾ ಕೊಳ್ಳದ 'ಎ' ಅಥವಾ 'ಬಿ' ಸ್ಕೀಮು ಎನ್ನದೆ ಆಲಮಟ್ಟಿ ನೀರಿನಲ್ಲಿ ಮುಳವಾಡ, ಚಿಮ್ಮಲಗಿ ಮತ್ತು ಇಂಡಿ ಏತ ನೀರಾವರಿ ಯೋಜನೆಗಳಿಗೆ ಹಂಚಿ ತಕ್ಷಣ ಯೋಜನೆಗಳನ್ನು ಪೂರ್ತಿಗೊಳಿಸಿ ಅಲ್ಲಿ ಭೂಮಿ ಮನೆಗಳನ್ನು ಕಳೆದುಕೊಂಡವರಿಗೆ ಉದ್ಯೋಗ ದೊರಕಿಸಿಕೊಡಬೇಕು. ಬೆಳಗಾವಿಯಲ್ಲೊಂದು ಸರಕಾರೀ ಮೆಡಿಕಲ್ ಕಾಲೇಜನ್ನು ಪ್ರಾರಂಭಿಸುವುದಾಗಿ ಮುಖ್ಯಮಂತ್ರಿಗಳು ಇತ್ತೀಚೆಗೆ ಹೇಳಿದ್ದಾರೆ. ಹಾಗೆ ಕಿತ್ತೂರು ಕರ್ನಾಟಕದ ಏಳೂ ಜಿಲ್ಲೆಗಳಲ್ಲಿ ಇನ್ನೆರಡು ಮೆಡಿಕಲ್, ಏಳು ಇಂಜಿನಿಯರಿಂಗ್ ಕಾಲೇಜುಗಳನ್ನು ತೆರೆಯಬೇಕು. ಈ ಪ್ರದೇಶದಲ್ಲಿಯ ಮೆಡಿಕಲ್, ಇಂಜಿನಿಯರಿಂಗ್ ಕಾಲೇಜುಗಳ ಪ್ರವೇಶ ಪರೀಕ್ಷೆ ಮತ್ತು ಪ್ರವೇಶ ಈ ಪ್ರದೇಶದ ವಿದ್ಯಾರ್ಥಿಗಳಿಗೇ ಸೀಮಿತವಾಗಿರಬೇಕು. ಬತ್ತಿದ ಭೀಮಾ ನದಿಯಲ್ಲಿ ನೀರು ಹರಿಯುವಂತೆ ಮಹಾರಾಷ್ಟ್ರ ಉಜನಿ ಅಣೆಕಟ್ಟಿನಿಂದ ನೀರು ಬಿಡಿಸಬೇಕು. ಬಿಜಾಪುರ-ಗದಗ ರೈಲು ಮಾರ್ಗದ ಗೇಜ್ ಪರಿವರ್ತನೆ ಈ ವರ್ಷಾಂತ್ಯದಲ್ಲಿ ಮುಗಿದು, ಬಿಜಾಪುರ-ಬೆಂಗಳೂರು ನೇರ ರೈಲು ಸಂಪರ್ಕ ಸಾಧಿಸಬೇಕು. ಅದರಂತೆ ರಾಷ್ಟ್ರೀಯ ಹೆದ್ದಾರಿ ೨೧೮, ಸೋಲಾಪುರ-ಹುಬ್ಬಳ್ಳಿ ಮಾರ್ಗವನ್ನು ಶೀಘ್ರದಲ್ಲಿ ಸಂಚಾರಕ್ಕೆ ಅನುಕೂಲವಾಗುವಂತೆ, ಮಧ್ಯದಲ್ಲಿಯ ಕೊರ್ತಿ-ಕೊಲ್ಹಾರ ಸೇತುವೆಯನ್ನು ಪೂರ್ತಿ ಗೊಳಿಸಬೇಕು. ರಾಷ್ಟ್ರೀಯ ಹೆದ್ದಾರಿ ೧೩ನ್ನು ಚತುಷ್ಪಥ ರಸ್ತೆಯನ್ನಾಗಿ ಮಾರ್ಪಡಿಸ ಬೇಕು. ಹೋರಾಟವನ್ನು ಹತ್ತಿಕ್ಕಲು ದುಬಾರಿ ಖರ್ಚಿನ ಹೈಕೋರ್ಟಿನ ಸರ್ಕಿಟ್ ಬೆಂಚಗಳನ್ನು ಸ್ಥಾಪಿಸಲು ಮುಂದಾಗದೆ ಮಧ್ಯವರ್ತಿ ಸ್ಥಳದಲ್ಲಿ ಶಾಶ್ವತ ಹೈಕೋರ್ಟ್ ಪೀಠ ಸ್ಥಾಪನೆಯಾಗಬೇಕು. ಪ್ರವಾಸೋದ್ಯಮದ ಅಭಿವೃದ್ಧಿಯ ದೃಷ್ಟಿಯಿಂದ ಗದಗಿನಿಂದ ಬಿಜಾಪುರದವರೆಗೆ ಒಂದು ವಲಯವನ್ನಾಗಿ ಪರಿವರ್ತಿಸಿ ಚಾಲುಕ್ಯ ವಾಸ್ತುಶಿಲ್ಪದ ಬಾದಾಮಿ, ಪಟ್ಟದಕಲ್ಲು, ಐಹೊಳೆಗಳನ್ನು, ಕಲಚೂರಿ ಕಾಲದ ಬಸವಣ್ಣನವರ ಬಾಗೇವಾಡಿಯನ್ನು, ಮತ್ತು ಆದಿಲ್‌ಶಾಹಿಗಳ ವಿಶ್ವ ಪ್ರಸಿದ್ಧ ವಾಸ್ತು ಶಿಲ್ಪಗಳ ತಾಣವಾದ ಬಿಜಾಪುರವನ್ನು ಪ್ರಪಂಚದಾದ್ಯಂತದ ಜನರು ಬರುವಂತೆ ಅಲ್ಲಿಗೆ ಸಂಪರ್ಕ, ವಸತಿಗಳ ವ್ಯವಸ್ಥೆಯಾಗಬೇಕು. ಇಲ್ಲಿಯ ಸಮಸ್ಯೆಗಳನ್ನು ಚರ್ಚಿಸಲು ಎಂಬಂತೆ, ವರುಷದಲ್ಲಿ ಮೂರು ತಿಂಗಳು ವಿಧಾನಸಭೆ ಮತ್ತು ಪರಿಷತ್ತಿನ ಅಧಿವೇಶನಗಳು ಕಿತ್ತೂರು ಕನ್ನಡ ಪ್ರದೇಶದಲ್ಲಿ ನಡೆಯಬೇಕು. ಆಗ ಈ ಪ್ರದೇಶದ ಜನರಿಗೆ, ತಮ್ಮನ್ನು ನೋಡುವ, ಕೇಳುವ ಜನರೂ ಇದ್ದಾರೆ ಎಂಬ ವಿಶ್ವಾಸ ಹುಟ್ಟುತ್ತದೆ.

**ಡಾ॥ ಕೃಷ್ಣ ಕೊಲ್ಹಾರ ಕುಲಕರ್ಣಿ**
'ಮಹಿಪತಿ' ೬೩೩, ಕೀರ್ತಿನಗರ, ಬಿಜಾಪುರ - ೫೮೬ ೧೦೧

# ಕತ್ತಲೊಳಗಿನ ಬೆಳಕು

ಚಿತ್ರಶೇಖರ ಕಂಠಿ



**ಪಾ**ರದರ್ಶಕ ಗಾಜಿನ ಪಾತ್ರೆ...! ನಿಧಾನ... ಇನ್ನೂ ನಿಧಾನ ಕೈ ಬೆರಳುಗಳಿಂದ ಮುಟ್ಟಿ ನೋಡುವನು, ಬೆರಳುಗಳು ತೂರಿ ಹೋಗಿಬಿಡುತ್ತವೆ..., ಏನೊಂದೂ ತಾಕುವುದೇ ಇಲ್ಲ. ಸುತ್ತಲೊಂದು ಕವಚವಿರುವ ಹಾಗೆಯೇ ಭಾಸವಾಗುವುದು. ಭ್ರಮೆಯಿಂದ ಬಿಡಿಸಿಕೊಂಡವನಂತೆ ಕುಣಿದು ಕುಪ್ಪಳಿಸುವನು. ಅಷ್ಟು ದೂರ ಸರಿದವನ ನೋಟ ತೀಕ್ಷ್ಣವಾಗುತ್ತದೆ. ಗಾಜಿನ ಪಾತ್ರೆಯ ತುಂಬ ಏನೇನೋ ಕಣಗಳು...! ಕಣ್ಣಗಲಿಸಿ, ಹಿಗ್ಗಿಸಿ, ಹಣೆಯ ಮೇಲೆ ನೆರಿಗೆ ಮೂಡಿಸಿಕೊಂಡು ಕಣ್ಣು ಕುಗ್ಗಿಸಿ ನೋಡುವನು. ಹೌದು..., ಅದರೊಳಗೇನೇನೋ ಇರುವುದು ಖಾತ್ರಿಯಾಗುವುದು. ಗಾಜಿನ ಪಾತ್ರೆ ಬೋರಲಿರಬಹುದೇ..., ಅಥವಾ ತೆರೆದುಕೊಂಡಿರಬಹುದೇ ? ಕಾಡುತ್ತದೆ ಪ್ರಶ್ನೆ. ಅಕ್ಕ-ಪಕ್ಕ, ಹಿಂದೆ-ಮುಂದೆ, ಮೇಲೆ-ಕೆಳಗೆ ಇರಬಹುದೇ ಯಾರಾದರೂ..., ಅರಸುವನು. ಮತ್ತವನ ಬಿಟ್ಟು ಅನ್ಯಜೀವಿ ಇರುವ ಅನುಮಾನವೂ ಬರುವುದಿಲ್ಲ. ಮತ್ತೆ..... ತಾನಾದರೂ ಯಾಕಿರುವೆ !? ಉತ್ತರವಿರದ ಪ್ರಶ್ನೆ ಎದುರಾಗುತ್ತದೆ. ಅದೆಷ್ಟೊಂದು ವಿಶಾಲವಾದ ಪಾತ್ರೆ.... ! ಅರಸಿದಷ್ಟೂ ಆದಿ, ಅಂತ್ಯಗಳೇ ಇಲ್ಲ ಅನ್ನುವ ಹಾಗೆ. ಎಲ್ಲಿದರ ತಳ..., ಅಂಚು ? ಬೆಚ್ಚಗೆ ಮುದುಡಿ ಕುಳಿತು ಯೋಚಿಸುವನು. ಗಾಜಿನ ಪಾತ್ರೆಯೊಳಗೆ ಝಗ್ಗನೆ ಮಿಂಚಿ ಮಾಯವಾಗುವುದು. ಇವ ಗಾಬರಿಗೊಳ್ಳುವನು..., ಕಣ್ಣಗಲಿಸುವನು. ಕೋಟಿ ಕೋಟಿ ಕಣಗಳು ಗಾಜಿನ ಪಾತ್ರೆಯೊಳಗೆ. ವಿಸ್ಮಯಗೊಂಡು ಇನ್ನೂ ಹತ್ತಿರ ಬರುವನು. ಹತ್ತಿರವೇನು.... ಅವನಿರುವುದೇ ಹತ್ತಿರದಲ್ಲಿ..., ಅದೇ ಆ ಗಾಜಿನ ಪಾತ್ರೆಯೊಳಗೇ. ಆದರೆ ತಾನೆಲ್ಲೋ ನಿಂತು ಆ ವಿಸ್ಮಯದ ಪಾತ್ರೆ ನೋಡುತ್ತಿರುವೆನೆಂಬ ಭ್ರಮೆಯಲ್ಲಿದ್ದಾನಷ್ಟೆ.

ನೋಡುತ್ತಾನಿವ..., ಅಲ್ಲಲ್ಲ, ಅಲ್ಲಿ ಅದೆಷ್ಟೋ ನೂರಾರು ಮೈಲಿಗಳಾಚೆ ತಾನೇ ಕಾಣಿಸುತ್ತಿದೆ ಭವ್ಯವಾದ ಸಿಂಹಾಸನ ! ಅದೇನು ವರ್ಣರಂಜಿತ ವೈಭವ ! ನಿತ್ರಾಣನಾದ ಆಜಾನುಬಾಹು ಒಬ್ಬ ಆ ಸಿಂಹಾಸನದ ಮೇಲೆ ವಿರಾಜಮಾನನಾಗಿದ್ದಾನೆ. ಒಡ್ಡೋಲಗದ ತುಂಬ ಬಣ್ಣ ಬಣ್ಣದ ಪೋಷಾಕುಧಾರಿಗಳು. ಒಂದೆಡೆ ಬಹುಪರಾಕ್ ಹೇಳುವ ದೊಡ್ಡ ಗುಂಪು, ಮತ್ತೊಂದೆಡೆ ಧಿಕ್ಕಾರ ಕೂಗುವ ದಂಡು. ಜೈ... ಜೈ. ಕಾರಗಳು ಯಾವ ಯುದ್ಧ ಗೆದ್ದಿದ್ದಕ್ಕೋ...? ಮೂದಲಿಕೆ, ತೆಗಳಿಕೆ, ಧಿಕ್ಕಾರ ಮತ್ಯಾವ ಹೀನ ಕಾರ್ಯಕ್ಕೋ ? ಅಂತೂ ಹರಿವ ನದಿಯ ಎರಡು ದಡಗಳ ಹಾಗೆ ಸಮ ಸಮನಾಗಿಯೇ ಸಾಗಿವೆ. ಒಡ್ಡೋಲಗದ ವಿಶಾಲವಾದ ಸಭಾಂಗಣ, ನೂರಾರು ವೈಭವಯುತ ಕೋಣೆಗಳು, ನೆಲ ಕಾಣದಂತೆ ಮುಚ್ಚಿದ ರತ್ನಗಂಬಳಿಗಳು, ಎಲ್ಲ ಕೋಣೆಗಳಲ್ಲೂ ರತ್ನಖಚಿತ ಆಸನಗಳು. ಅಬ್ಬಾ..., ಅದೆಷ್ಟೊಂದು ಕುಬ್ಜರು ಅಲ್ಲಿ...! ಮನುಷ್ಯರಂತೆ ಕಾಣುತ್ತಾರಷ್ಟೆ ಅವರು. ನಿಜವಾದ ಮನಸ್ಸು, ಹೃದಯ, ಪ್ರೀತಿ, ವಾತ್ಸಲ್ಯ, ಕರುಣೆ ಇರುವ ಜೀವಜಂತುಗಳೇ ಅವು ? ಬಹುಮುಖ್ಯವಾದ ಪ್ರಶ್ನೆಯೊಂದು ಎದುರಾಗುತ್ತದವನಿಗೆ. ಅಲ್ಲಿರುವುದಷ್ಟು ಆಸನಗಳು ಮಾತ್ರ... ಇವರು ನೋಡಿದರೆ ಆಸನಗಳ ಹತ್ತರಷ್ಟು. ಎಲ್ಲರೂ ತನಗೊಂದು ಬೇಕೆನ್ನುವವರೇ. ಪಾಪ ಅವಕ್ಕೇನು ಗೊತ್ತು ಇದೇ ಈ ಗಾಜಿನ ಪಾತ್ರೆಯೊಳಗೇ ಲಕ್ಷ ಲಕ್ಷ ಹುಲ್ಲಿನ ಗುಡಿಸಲುಗಳಿರುವುದು..., ಅಲ್ಲೆಲ್ಲ ಹರಕು ನೆರಳಿರುವುದು. ಅರ್ಧಂಬರ್ಧ ನೆಲವನ್ನೇ ತೋರಿಸುವ ಹಾಸಿದ ಚಾಪೆಗಳು... ಅವನ್ನೇ ಬೆಚ್ಚಗೆ ತಬ್ಬಿ ಮಲಗಿದ ಕೋಟಿ ಕೋಟಿ ಕೃಶವಾದ ಜೀವಗಳು. ಎಷ್ಟೊಂದು ಒಣಮರಗಳು, ಅಲ್ಲೆಲ್ಲ ನೇಣುಹಗ್ಗಗಳು, ಮಾಂಸಖಂಡಗಳಿರದ ರುಂಡಗಳು. ನೇತಾಡುವ ಬಿಳಲುಗಳಲೆಲ್ಲ ನರಳುವ, ಸಂಕಟಪಡುವ, ರೋದಿಸುವ ಕೀರಲು ದನಿಗಳು.

ನಿಂತಲ್ಲೇ ನಿಂತು ಕಾಲುಗಳು ಮರಗಟ್ಟಿದಂತೆ..., ಜುಂ... ಅನ್ನಿಸುವಾಗ ಅವ, ಕ್ಷಣ ಕಾಲ ಗಲಿಬಿಲಿಗೊಂಡು ಗಕ್ಕನೆ ತಿರುಗುವನು..., ಒಂದಷ್ಟು ದೂರ ಚಲಿಸುವನು. ನಡೆ ನಡೆಯುತ್ತಿರುವಾಗಲೇ ಅದೇ ಆ ವ್ಯಾಪ್ತಿಯೊಳಗೇ ಅದೇನೇನೋ ವಿಸ್ಮಯಗಳು ವಿವಸ್ತ್ರವಾಗಿ ಎದ್ದು ನಿಲ್ಲುತ್ತವೆ... ಎದುರಾಗುತ್ತವೆ. ಹೌದ್ಹೌದು, ಸತ್ಯವಾಗಿಯೂ ಅವೆಲ್ಲ ನಡೆದಾಡುವ ಜೀವಗಳೇ...! ಮೆಟ್ಟುಗಳಿಲ್ಲದೇ ಮುಳ್ಳು ತುಳಿಯುತ್ತ..., ಟಾರು ಮೆತ್ತಿಕೊಳ್ಳುತ್ತ... ಚಲಿಸುತ್ತಿರುವ ಪಾದಗಳವು. ಕಪ್ಪು ಚರ್ಮ ಆ ಉರಿಬಿಸಿಲಿಗೆ ಮತ್ತಷ್ಟು ಕಪ್ಪಿಟ್ಟಿದೆ. ಬೆವರಿನ ಬಲೆ ಹೊದ್ದುಕೊಂಡ ಹಾಗೆ ಇಡೀ ದೇಹದ ತುಂಬ ಮಿಂಚು ಹನಿಗಳು. ಇನ್ನೂ ಕಣ್ಣ ತುದಿಯಲ್ಲಿ ಮಿಂಚು ಮಿಣುಕುವ ಎಲುಬಿನ ಗೂಡುಗಳು. ಹಿಂದೊಮ್ಮೆ ಹದಿ ಹರೆಯದಲ್ಲಿ ಎದೆ ತುಂಬಿಕೊಂಡು, ಕಂಡವರ ಕಣ್ಣುಕ್ಕಿ, ಎದೆ ಬಡಿತ ಹೆಚ್ಚಿಸಿದ ಅದೆಷ್ಟೋ ಪೋರಿಯರಿಂದು ಹೆಂಗಸರಾಗಿ, ಹಸಿರು ಫಸಲಿರದ ಹೊಲದಂತಾಗಿ, ಒಣದ್ರಾಕ್ಷಿಯಂತಾಗಿರುವ ಬತ್ತಿದ ಮೊಲೆತೊಟ್ಟು ಹಸಿವಿನಿಂದ ಹಲುಬುವ ಕಂದಮ್ಮಗಳ ಬಾಯಿಗಿಟ್ಟು, ಇಲ್ಲದ ಹಾಲು ಕುಡಿದು ಕೂಸಿನ ಹೊಟ್ಟೆ ತುಂಬದೆಂದು ತಿಳಿದೂ ಹನಿ ಹನಿಯಾದರೂ ಜಿನುಗೀತೆಂಬ ಭ್ರಮೆಯಲ್ಲಿ, ಬವಣೆ, ಬೇಗುದಿಗಳಿಂದ ಕೆಲವು ಕ್ಷಣ ವಿಮುಖರಾದ ಅವ್ವಂದಿರು.

ಅದೇ... ಆ ನಮ್ಮ ಇವನು ಇದೆಲ್ಲವನ್ನು ಕಂಡು ಏನಿದೆಲ್ಲ ?! ಎಷ್ಟೊಂದು ಮಡುಗಟ್ಟಿದ ನೋವುಗಳಿಲ್ಲಿ! ಎಲ್ಲೋ ಒಂದು ತುದಿಯಲ್ಲಿ, ಎತ್ತರೆತ್ತರದ ಕಾಂಕ್ರೀಟ್ ಕಟ್ಟೆಗಳಲ್ಲಿ..., ಬಣ್ಣ ಬಣ್ಣದ ಗೋಡೆಗಳಲ್ಲಿ ಫಳ್... ಫಳಗುಡುವ ಸೂರ್ಯನೂ ವಿಷಾದಪಡುವ ಹಾಗೆ ಬೆಳಕು, ಬೈತಾಕು... ಯಾಕೆ ಹೀಗೆ ? ಮರದ ಹಾಗೇ... ಮರದ ನೆರಳು, ಕೋಗಿಲೆಯ ಹಾಗೇ ಅದರ ನೆರಳು, ಇಲ್ಲೂ ಅವರ ಹಾಗೆಯೇ... ಇವರು ಕೂಡ. ಆದಾಗ್ಯೂ ಇವರೆಲ್ಲ ಹೀಗ್ಯಾಕೆ ? ಮರದಲ್ಲಿ ಜೀವವಿದೆ... ಆದರದರ ನೆರಳಲ್ಲಿಲ್ಲ, ಹೂವಿನಲ್ಲಿರುವ ಪರಿಮಳ ಅದರ ನೆರಳಿನಲ್ಲಿಲ್ಲ, ಅಂತೆಯೇ ಅವರೆಲ್ಲ ಕಂಡ ಕನಸುಗಳ ನನಸು ಮಾಡಿಕೊಳ್ಳುತ್ತಾರೆ... ಇವರು ಕನಸುಗಳಿರದ ಕತ್ತಲುಗಳಲ್ಲಿಯೇ ಕೃಶರಾಗಿ ಕರಗಿ ಹೋಗುತ್ತಾರೆ.

ಪಾದದಡಿಯ ನೆಲವನ್ನು ಹಿಂದೆ ಹಿಂದೆ ದೂಡುತ್ತಾ ಇವ ಮುಂದೆ ಮುಂದೆ ನಡೆವನು... ಧುಮ್ಮಸ್ಸಿರದ ನೆಲದಲ್ಲಿ ಧೂಳೆಬ್ಬಿಸುತ್ತ... ದಟ್ಟ ಧೂಳಿನ ರಾಶಿಯಲ್ಲಿ; ಯಾವುದಾದರೂ ಅಮಾಯಕ ಜೀವಿಯನ್ನು ತುಳಿದು ಘಾಸಿಗೊಳಿಸಿದರೆ ಅನ್ನುವ ಅಳುಕಿನಲ್ಲಿ.

''ಅಂತಿಮ್ಮ... ಹುಳಿ ತುಳಿಸಿಕೊಂಡ ಒಣ ತೊಗಲಿನವರು ನಾವು. ಸಿಟ್ಟಿಂದ ತುಳಿಸಿಕೊಂಡರೆ ತೊಟ್ಟಿಕ್ಕಲು ಹನಿ ನೆತ್ತರಿಲ್ಲ... ಝಾಡಿಸಿ ಒದೆಯಲು ತೊಡೆಗಳಲ್ಲಿ ತ್ರಾಣವಿಲ್ಲ. ಮುಜುಗರಪಡದೇ ನಡೆ..., ನಡೆ ಮುನ್ನಡೆ. ಬೇಕಿರುವುದು..., ಬೇಕಿಲ್ಲದಿರುವುದು..., ನೋಡಲಿಕ್ಕಿನ್ನೇನೋ ಎಲ್ಲವೂ ಮುಂದೆ ಮುಂದೆ ಇರುವುದರಿಂದ ಹಾಗೇ ನಡೆಯುತ್ತಿರು ಮುಂದೆ.'' ದಟ್ಟ ಧೂಳಿನೊಳಗಿನಿಂದ ಮಿಂಚಂತೆ ಭೇದಿಸಿಕೊಂಡು ಬಂದು ವ್ಯಂಗ್ಯದಿಂದ ಉಲಿಯುತ್ತೊಂದು ದನಿ. ಬೇತಾಳವನ್ನು ಹೇತು ಹಾಕಿಕೊಂಡ ತ್ರಿವಿಕ್ರಮನಂತೆ ಇವ ನಡೆದುಬಿಡುವನು. ತಗ್ಗು-ದಿಣ್ಣೆ, ಗಿರಿ-ಕಾನನ, ಮರುಭೂಮಿ ಏನೇನೋ ಕ್ರಮಿಸಿ ಸಾಗಿತಿವನ ಪಯಣ. ಅಲ್ಲೆಲ್ಲೋ ಹನಿ ನೀರಿಗೂ ಹಾಹಾಕಾರ..., ಮತ್ತೊಂದೆಡೆಯೆಲ್ಲೋ ಬರೀ ನೀರೇ ನೀರು... ಬೆಚ್ಚಗಿನ ಜಾಗಕ್ಕೂ ಪರದಾಟ.

ಎಲ್ಲೂ ಒಂದು ಹುಲ್ಲು ಕಡ್ಡಿಯೂ ಕಾಣಸಿಗದ... ಬಂಡೆಗಲ್ಲು - ಮಣ್ಣುಗಳನ್ನಷ್ಟೇ ಹೊದ್ದು ನಿಂತ ಕಡಿದಾದ ಗುಡ್ಡ. ಜಾರುತ್ತಿದ್ದ ಹೆಜ್ಜೆಗಳಲ್ಲಿ ತುಸು ಹೆಚ್ಚಿನ ಭಾರ ಹಾಕಲು ಪ್ರಯತ್ನಿಸುತ್ತಿದ್ದನಿವ. ಪಡುವಣದ ಆ ಬೆಳಕು ಕೆಂಪಾಗಿ ಮತ್ತೆ ಕಪ್ಪಾಗುವ ಮೊದಲು... ಅದೋ... ಅಲ್ಲಿ ಅಷ್ಟು ದೂರದಲ್ಲಿ ಎದ್ದ ತಾಣ ತಲುಪಿ ಬಿಡಬೇಕು ಅನ್ನುವ ಅಚಲ ಗುರಿಯೊಂದಿಗೆ ನಡೆಯತೊಡಗಿದನಿವ. ಅಬ್ಬಾ..., ಮರುಭೂಮಿಯಲ್ಲಿ ಎಂಥ ಭಯಂಕರ ಕುಳಿ ಇದು...! ಯಾವುದೋ ಕ್ಷುದ್ರ ಗ್ರಹವೊಂದು ಕಳಚಿಕೊಂಡು ಬಂದು ಬಿದ್ದಿರಬಹುದೇ ಇಲ್ಲಿ? ತೂಕದ ಹೆಜ್ಜೆಗಳನ್ನಿಡುತ್ತ ಉಸಿರು ಬಿಗಿ ಹಿಡಿದುಕೊಂಡು ನಡೆದನಿವ. ಕುಳಿಯ ಓ... ಆ ತುದಿಯಿಂದ ಕೇಕೇ ಹಾಕಿ ಕುಣಿದು ಕುಪ್ಪಳಿಸುವ ನಗೆ ಗೊಂಚಲು.

''ಏ... ಏ... ಮೂಢ..., ನಾವು ಮಾಡಿದ ಕುಳಿಯಿಂದು. ನೋಡು ಬಾಗಿ... ಇನ್ನೂ ಬಾಗಿ ನೋಡು ಒಂದೇ ಒಂದು ಜೀವ ಕಣದ ಅವಶೇಷವೂ ಇಲ್ಲ! ಇಂಥದೊಂದು ಕುಳಿಗೆ ಕಾರಣರಾದ ನಾವೆಲ್ಲ ನಗುತ್ತಿದ್ದೇವೆ..., ಅಲ್ಲಿ ಆ ಕುಳಿಯೊಳಗೆ ನಗೆ ಇಲ್ಲ'' ಎಂದು ಚೀರಿ ಚೀರಿ ಹೇಳಿತು. ನಗೆ ರೌದ್ರತೆಗೆ ಇವನೆದೆ ನಡುಗಿತು. ಈ ದೈತ್ಯಕುಳಿ ಮುಚ್ಚಿಹಾಕುವ ಹುನ್ನಾರ ಕಲ್ಪಿಸಿಕೊಳ್ಳುತ್ತ, ಕುಳಿಯತ್ತ ಬೆನ್ನು ಮಾಡಿ ಅಲ್ಲಿ ಆ ಹೊಗೆ ಇರುವತ್ತ ನಡೆದ. ಹಾಗೇ ನಡೆ ನಡೆಯುತ್ತ ಮತ್ತೊಮ್ಮೆ ಆ ವೈಭವಪೂರಿತ ಒಡ್ಡೋಲಗದತ್ತ ಒಮ್ಮೆ ನೋಟ ಹರಿಸುವನು. ಈ ಮೊದಲು ಜಗಳ, ಕಚ್ಚಾಟ, ಗೊಂದಲ-ಗೋಜಲುಗಳ ಗೂಡಾಗಿದ್ದ ಮಂದಿಯೆಲ್ಲ ಒಂದಾಗಿ, ಎಲ್ಲರೊಂದೇ ಪೋಷಾಕು ಧರಿಸಿ, ಮುಖ ಮೈಗಳಿಗೆ ಬಣ್ಣ ಬಳಿದುಕೊಂಡು, ಶಿಸ್ತಿನ ಸಿಪಾಯಿಗಳಂತೆ ಟನ್ನು ಟನ್ನು ಗಟ್ಟಲೇ ಗುಡ್ಡೆ ಹಾಕಿದ್ದ ಮಾಂಸದ ತುಣುಕುಗಳನ್ನು ವಿಲೇವಾರಿ ಮಾಡಿಕೊಳ್ಳುತ್ತಿದ್ದವು... ಲಕ್ಷ ಲಕ್ಷ ಗ್ಯಾಲನ್ನುಗಳಷ್ಟು ಕೆಂಪು ರಕ್ತ ಹಂಚಿಕೊಳ್ಳುತ್ತಿದ್ದವು. ಅತ್ತ ಆ ಮೂಲೆಯಲ್ಲಿ ಅಂಜಿಕೆ, ಅಸಹಾಯಕತೆಗಳು, ಅಮಾಯಕತೆಗಳೆಲ್ಲವೂ ಮಡುಗಟ್ಟಿ ಮಲಗಿದ್ದವು.

ಇಡಿಯಾಗಿ ಪಾದಗಳನ್ನೇ ಗಬಕ್ಕನೆ ನುಂಗಿಬಿಡುವ ಅದೇನು ಆ ನೆಲ. ಎಷ್ಟೇ ಜಾಗರೂಕತೆಯಿಂದ ನಾಜೂಕಾಗಿ ಪಾದ ಇಡುವಾಗಲೂ ಪಾದದಡಿಯಿಂದ ಹೊಮ್ಮುವ ಹಾ...! ಅಯ್ಯೋ...!! ಅಮ್ಮ...!!! ಅನ್ನುವ ಆರ್ತದನಿ, ನರಳಾಟ, ರೋದನ. ಹೊಗೆ ಹತ್ತಿರವಾಗತೊಡಗಿತು. ಬರ್ಬರ ಮಾರಣ ವರ್ತುಳದಿಂದ ದೂರವಾಗುತ್ತಿರುವ ಸಮಾಧಾನ ಇವನಿಗೆ.

ಮಾಂಸಖಂಡಗಳಿಲ್ಲ... ರಕ್ತದ ಒರತೆಯಿಲ್ಲ, ಬಳಲಿ, ಬಾಡಿ, ಬಸವಳಿದ ಒಣಗಿದ ಕಡ್ಡಿಯಂತಿದ್ದರೂ ಚೈತನ್ಯದ ತೇಜಸ್ಮೂರ್ತಿ ತನ್ನ ನೀಳ ಕೈಗಳು ಚಾಚಿ...

''ಬಾರೋ... ಬಾ ಕಂದ, ಎಲ್ಲಿ ಹೋಗಿದ್ದೆ ನೀನು ? ನೀನೇ ಬಚ್ಚಿಟ್ಟುಕೊಂಡರೆ ನನ್ನ ಗತಿ ಏನೋ ಮಗನೇ? ನೋಡು ಹ್ಯಾಗಾಗಿದ್ದೇನೆ ನಾನು. ಮನೆಯಂಗಳದಲ್ಲೆಲ್ಲ ನೀನು ಓಡಾಡಿಕೊಂಡಿದ್ದರೆ ನನ್ನನ್ನೂ ಈ ಪರಿಸ್ಥಿತೀಲಿ ನೋಡುವ ದುಃಸ್ಥಿತಿ ನಿನಗೆ ಬರುತ್ತಿರಲಿಲ್ಲ ಕಂದ. ಬಾ.., ಈಗಲಾದರೂ ಬಂದೆಯಲ್ಲ ಬಾ.'' ಪ್ರೀತಿ ಕಕ್ಕುಲಾತಿಯಿಂದ ಬರ ಮಾಡಿಕೊಂಡಿತು ನೊಂದ ಜೀವ. ಎಲ್ಲ ಮಾತು ಕೇಳಿ ಇವನ ಹೃದಯವೂ ತುಂಬಿ ಬಂದಿತು.

ಅವಳ ಹಣೆಬೊಟ್ಟಿನ ಹೊಳಪು, ಕೆಂಪು ಸೂರ್ಯನನ್ನೇ ಮಸುಕು ಮಾಡಿತು. ವಿಶಾಲವಾದ ಹಣೆಯ ತುಂಬ ಮುತ್ತು ಹರಡಿದಂತೆ ಬೆವರು ಹನಿಗಳು. ನೋಡ ನೋಡುತ್ತಿರುವಂತೆಯೇ ಕುಂಕುಮ ಕರಗಿ ಮುಖದ ತುಂಬೆಲ್ಲ ಹರಡಿಕೊಂಡಿತು. ಬಟ್ಟಲುಕಂಗಳಲ್ಲಿ ನೆತ್ತರು ಮಡುಗಟ್ಟಿದಂತೆ. ದುಃಖ ಉಮ್ಮಳಿಸಿ, ಬೆಂದ ಜೀವ ಬಿಕ್ಕಳಿಸುತ್ತಿರುವಂತೆ. ಇವನೆದೆಯಲ್ಲಿ ಗಾಬರಿ, ಆತಂಕಗಳ ಸಣ್ಣ ನಡುಕ.

''ಯಾಕವ್ವ ಇಷ್ಟೊಂದು ಎದೆಭಾರ?'' ಚುಟುಕಾಗಿ ಪ್ರಶ್ನಾರ್ಥಕ ದನಿ ಹೊರಡಿಸಿದವ, ಕತ್ತು ಹೊರಳಿಸಿ ಉತ್ತರದ ಎತ್ತರಕ್ಕೆ ನೋಟ ಹರಿಸಿದ. ಬೆಳ್ಳಿ ಮುಗಿಲಲ್ಲಿ

ರಕ್ತದೋಕುಳಿ. ಕೈ ಬಾಯಿಗಳಿಂದ ರಕ್ತ ಜಿನುಗುತ್ತಿತ್ತು. ನಾಲಗೆಯ ಚಪಲವಿನ್ನೂ ತೀರಿದಂತಿರಲಿಲ್ಲ. ಆ ಬಹುದೊಡ್ಡ ಸಮೂಹದೊಳಗೆ ಮಮ್ಮಲ ಮರುಗುವ ರೋದನ, ಆಕ್ರಂದನ! ಅಲ್ಲಿ ಆ ರಕ್ಕಸರ ಬಲಾಢ್ಯ ಆಜಾನುಬಾಹುಗಳಲ್ಲಿ ಬಂಧಿಯಾಗಿ, ನಜ್ಜುಗುಜ್ಜಾಗಿ ವಿವ್ಹಲಗೊಂಡು ನೋವು-ನರಳಾಟವನ್ನೆಲ್ಲ ಬಾಚಿ ತನ್ನ ಬೆಚ್ಚಗಿನ ಎದೆಗೊತ್ತಿಕೊಳ್ಳಬೇಕೆಂಬ ತವಕದಿಂದ ಈ ನೊಂದ ಜೀವ ತನ್ನೆರಡೂ ಕೈಗಳನ್ನು ಅತ್ತ ಚಾಚಿ, ಇನ್ನಷ್ಟು ಚಾಚಿ ಬಾಚಿಕೊಳ್ಳಲು ಯತ್ನಿಸುತ್ತಿದೆ.

''ಏನವ್ವ ಇದೆಲ್ಲ..? ಯಾಕೆ ಹೀಗೆ?'' ಮತ್ತೊಂದು ಭಯಾತಂಕದ ಪ್ರಶ್ನೆ ಕೇಳಿದನಿವ. ಆ ದೂರದ ಮೂಲೆಯೊಂದರಲ್ಲಿ ಬಹುದೊಡ್ಡ ದಿಡ್ಡಿ ಬಾಗಿಲೊಂದು ದಢಾರನೆ ತೆರೆದುಕೊಂಡಿತು. ಮುಗಿಲಿನೆಡೆ ಚಾಚಿಕೊಂಡ ಕೆನ್ನಾಲಿಗೆ! ದಟ್ಟ ಕರಿಮೋಡಗಳ ಅಣಕಿಸುವಂತೆ ಕಪ್ಪು ಹೊಗೆ! ಕೆಂಡದ ರಾಶಿಯಲ್ಲಿ ಫಳ್‌ಗುಡುವ ಬಳೆ..., ಬಟ್ಟುಂಗುರಗಳು. ಅರಳಿ ನಗಬೇಕಾಗಿದ್ದ ನಗೆಯೊಂದು ಕರಗಿ ಕರಕಲಾಗಿ ಬೂದಿಯಾಗುತ್ತಿರುವ ಕರುಳು ಕತ್ತರಿಸುವ ದೃಶ್ಯ. ಬೆಂಕಿಗುಪ್ಪೆಯ ಸುತ್ತಲೂ ಅಳುವೇ ಅಳು! ಎದೆಯಾಳದ್ದೋ... ಕೃತಕವೋ ವಿಂಗಡನೆ ಅಸಾಧ್ಯ. ಸೂತಕದ ಸ್ಥಳದಿಂದ ಬಹಳ ದೂರವೇನಲ್ಲ.. ಅಷ್ಟೇ... ಅಷ್ಟು ದೂರ ಮಾತ್ರ, ಅಲ್ಲೊಂದು ಮಂಟಪ. ಅದಕ್ಕೆ ಹಸಿರು ತೋರಣ. ಅಲ್ಲಿಯೂ ಒಂದು ಕುಬ್ಜ ಅಗ್ನಿಕುಂಡ. ಅದು ನೆಲಕ್ಕೆ ಅಂಟಿಕೊಂಡಂತಿದೆ. ಇಲ್ಲಿನ ಈ ರೌದ್ರ ಭಯಂಕರ ಝಳದ ಒಂದೇ ಒಂದು ಹನಿ ಅಲ್ಲಿನ ಆ ಕುಂಡ ಕೆಂಪಾಗಿಸಿದ್ದು. ದುಃಖದ ಮಡುವಿನಲ್ಲಿ ಮುಳುಗಿರುವ ಇದೇ ಈ ಮಂದಿ ಕೆಲವು ತಿಂಗಳುಗಳ ಹಿಂದಷ್ಟೇ ಯುದ್ಧಕ್ಕೆ ಹೊರಟ ಯುವರಾಜನೆಂದು ಮೆರವಣಿಗೆ ಮಾಡಿ ಅಲಂಕೃತ ರಥದಲ್ಲಿ ಜೋಡಿಯೊಂದನ್ನು ಕುಳ್ಳಿರಿಸಿ ಶುಭಯಾತ್ರೆ ಮಾಡಿಸಿದ್ದರು. ಅಳು, ಆಕ್ರಂದನಗಳ ಆರ್ಭಟಕ್ಕೇ ತೆರೆದುಕೊಂಡಿತ್ತೇನೋ ಅನ್ನುವ ಹಾಗೆ ಅಬ್ಬರ ಕ್ಷೀಣಿಸುತ್ತಿರುವಂತೆ ದಿಡ್ಡಿ ಬಾಗಿಲೂ ಮುಚ್ಚಿಕೊಂಡಿತು.

''ಏನವ್ವ ಅದೆಲ್ಲ ವಿಸ್ಮಯ? ನಿನ್ನ ತುಟಿಯಲ್ಲೇಕೆ ವಿಷಾದದ ನಗೆ?'' ಈಗಲಾದರೂ ಉತ್ತರಿಸಬಹುದೇನೋ ಅನ್ನುವ ನಿರೀಕ್ಷೆಯಲ್ಲಿ ಮತ್ತೊಂದು ಪ್ರಶ್ನೆಯಿಟ್ಟ. ಇವಳ ಕೆಂಪು ಕಡಲಗ್ಗಣ್ಣುಗಳ ನಡುವೆ ಕರಿಗುಡ್ಡೆಗಳು ಗಿರಗಿರನೆ ತಿರುಗುತ್ತಿದ್ದವು. ದೈತ್ಯ ತೆರೆಗಳಿಗೆ ದಿಕ್ಕೆಟ್ಟ ಸಮುದ್ರದ ದಡದಂತೆ ಜರ್ರನೆ ಜಾರಿತವಳ ಸೀರೆಯ ಸೆರಗು. ಚಿಂದಿ ಚಿಂದಿಯಾದ ಕುಪ್ಪಸ. ಬೇಟೆಗೆ ಬಲಿಯಾದ ಜಿಂಕೆಯಂತೆ ದೇಹದಿಂಚಿಂಚೂ ರಕ್ತ - ಮಾಂಸ! ಇವನ ಕಣ್ಣಿಗೆ ಕತ್ತಲಾವರಿಸಿತು. ಕಾಲು ಕುಸಿಯುತ್ತಿದ್ದವು. ದೂರದಲ್ಲೇ ನಿಂತ ಅವಳು ರಕ್ತಸಿಕ್ತ ಕೈ ಚಾಚಿ ಇವನ ತೋಳು ಹಿಡಿದು ಬೀಳದಂತೆ ಆಶ್ರಯ ನೀಡಿದಳು. ಸಾವರಿಸಿಕೊಂಡು ಹೆಜ್ಜೆ ಭದ್ರಗೊಳಿಸಿಕೊಂಡನಿವ.

ತನ್ನ ಕಂಡ ಮೊಟ್ಟಮೊದಲಿಗೊಂದು ಸಾರಿ ಮಾತ್ರ ಆದರದಿಂದ ಬರಮಾಡಿ ಕೊಂಡು, ಮಮತೆಯಿಂದ ಮಾತಾಡಿ ಕನಿಕರ ತೋರಿದವಳು ಮತ್ತೇಕೆ ತುಟಿ ಬಿಚ್ಚದೇ ಮಗುಮ್ಮಾಗಿರುವಳೆಂದು ಯೋಚಿಸತೊಡಗಿದನಿವ. ಅಂತೂ ಬೊಗಸೆ ಮಾತುಗಳೇನು ಇವನೆದುರು ಹರಡಬೇಕೆಂಬ ಹಂಬಲ ಅವಳಲ್ಲಿ ಉಂಟಾಗಲೇ ಇಲ್ಲ. ಪದ್ಮಾಸನ ಹಾಕಿಕೊಂಡು ಕುಳಿತ ಅವಳು ನೆಲದ ಮೇಲೆ ಬಿದ್ದಿದ್ದ ತನ್ನ ಸೀರೆಯ ಸೆರಗನ್ನು ನಾಜೂಕಾಗಿ ಎತ್ತಿ ತೊಡೆಯ ಮೇಲಿರಿಸಿಕೊಂಡು ಒಂದು ಗಂಟು ಬಿಚ್ಚಿದಳು. ಅರೆಬೆಂದ ಜೀವಗಳ ಅರಚಾಟ, ಕರಕಲಾದ ರೈಲು ಬೋಗಿಗಳು, ಬಿಲ್ಲಿನಂತೆ ಬಾಗಿದ ಕಂಬಿಗಳು, ಬಸ್ಸಿನ ತುಣುಕುಗಳು, ಕುದಿವ ಬಾಣಲೆಗಳು, ತೆಪ್ಪದಂತಾಗಿದ್ದ ಹೆಪ್ಪುಗಟ್ಟಿದ ನೆತ್ತರು. ಉರಿಯ ತಾಪ ಶಮನಗೊಳಿಸುವ ರೀತಿಯಲ್ಲಿ ಅವಳು ಚಾಮರದಿಂದ ಗಾಳಿ ಹಾಕಿದಳು. ಸೆರಗಿನ ಇನ್ನೊಂದು ತುದಿಯ ಗಂಟು ಸಡಿಲಾಗಿ ತಾನೇ ಬಿಚ್ಚಿಕೊಂಡಿತು. ಅಲ್ಲಿಂದು ಬುದು... ಬುದುನೆ ಪುಟಿದು ಬಂದ ಬೆತ್ತಲೆ ಬೇತಾಳಗಳು. ಎಲ್ಲವುಗಳ ಕೈಯಲ್ಲೂ ಉರಿವ ಪಂಜುಗಳು. ಎಲ್ಲವೂ ಗಹಗಹಿಸಿ ನಗುತ್ತಿವೆ, ಕುಣಿದು ಕುಪ್ಪಳಿಸುತ್ತಿವೆಯಾದರೂ ಪಾದಗಳು ಮಾತ್ರ ಹಿಮ್ಮುಖವಾಗಿದ್ದವು. ಅವೆಲ್ಲ ವಿಜಯದ ಮುನ್ನಡೆಯೆಂದು ಓಡುತ್ತಿವೆಯಾದರೂ ಪಾದ ಹಿಮ್ಮುಖವಾಗಿರುವುದರ ಪರಿವೆಯೇ ಅವಕ್ಕಿಲ್ಲ. ಎಲ್ಲವನ್ನೂ ನೋಡುತ್ತಿದ್ದ ಈ ನಮ್ಮ ಇವ ಗಾಬರಿಗೊಂಡು ತತ್‌ಕ್ಷಣ ಜಾಗೃತಗೊಂಡು ಹೆಜ್ಜೆಯೊಂದನ್ನು ಕಿತ್ತು ಮುಂದಿಟ್ಟ. ತನ್ನ ತೋಳುಗಳಿಗೆ ಚೈತನ್ಯ ತುಂಬಿದವನೇ ಉರಿಯುತ್ತಿದ್ದ ಎಲ್ಲ ಪಂಜುಗಳನ್ನು ಚಕಚಕನೆ ಕಿತ್ತುಕೊಂಡು ಗುಡ್ಡೆ ಹಾಕಿ, ತಲೆಯ ಮೇಲೆ ತೇಲಿ ಹೋಗುತ್ತಿದ್ದ ಮೋಡದ ತುಂಡೊಂದು ಬಾಚಿಕೊಂಡು ಆ ಗುಡ್ಡೆಯ ಮೇಲೆ ಸುರಿದ. ಬೆದರಿದ ಬೆತ್ತಲೆ ಬೇತಾಳಗಳೆಲ್ಲ ಇವನೆರಡೂ ಪಾದಗಳ ಸುತ್ತಲೂ ಮಂಡಿಯೂರಿ ಕುಳಿತವು. ಇನ್ನೊಮ್ಮೆ ತಲೆ ಎತ್ತಿ ತೇಲುತ್ತಿದ್ದ ಮೋಡಗಳತ್ತ ನೋಡುವನು..., ಅನೇಕ ಮಿಂಚುಳ್ಳಿಗಳು ಹಾರಾಡುತ್ತಿವೆಯಲ್ಲಿ, ಎಲ್ಲವುಗಳ ತಲೆಯಲ್ಲಿ ಹೊಳೆವ ಮಿಂಚು... ಒಡಲೊಳಗೆಲ್ಲ ನಿಗಿನಿಗಿ ಕೆಂಡ! ಅವೆಲ್ಲ ಸುಮ್ಮನೆ ಹಾರುತ್ತಿರುತ್ತವಷ್ಟೆ. 'ಅವುಗಳಿಂದ ಅಷ್ಟೊಂದು ಆತಂಕ ಪಡಬೇಕಾಗಿಲ್ಲ' ಎಂದು ಹೇಳಿದಂತಿತ್ತವಳ ನೋಟ. ಇವ ಅವಳತ್ತ ನೋಡಿ.... ಆಕೆಯ ತುಂಬಿದ ಮೊಗದಲ್ಲಿ ಚಂದಿರ ತೇಲಿ ಹೋಗುತ್ತಿದ್ದ.

''ನೀನಾಗಲೇ ನನ್ನ ನೆರಳಿನಂಚಲ್ಲೇ ಇದ್ದಿದ್ದರೆ ನನ್ನ ಸೆರಗಿನಲ್ಲಿ ನಾನಿವನ್ನೆಲ್ಲ ಕಟ್ಟಿ ಕೊಳ್ಳುತ್ತಿರಲಿಲ್ಲ... ಸೀರೆಯೂ ಚಿಂದಿಯಾಗುತ್ತಿರಲಿಲ್ಲ. ಅದಕ್ಕೇ ಹೇಳೋದು ವೈರಾಗಿಯಾಗಿ ನೀನೆಲ್ಲೋ ಕಳೆದು ಹೋಗಬೇಡ ಎಂದು.'' ಎಲ್ಲದಕ್ಕೂ ಮೌನವಾಗಿ ದ್ದವಳು ಈಗ ತಾನೇ ಮಾತನಾಡಿದ್ದಳು. ಇವ ಅವರ ಕೈಗಳನ್ನು ಹಿಡಿದು ತನ್ನ ತಲೆಯ ಮೇಲಿರಿಸಿಕೊಂಡು ನೇವರಿಸಿಕೊಂಡ. ಅವಳ ಎರಡೂ ಪಾದಗಳಿಗೆ ಚುಚ್ಚಿದ್ದ ಮುಳ್ಳು ಗಳನ್ನೆಲ್ಲ ಕಿತ್ತು ಕಂದಕಕ್ಕೆ ಚೆಲ್ಲಿದ. ತನ್ನ ಬೆಚ್ಚಗಿನ ಕಣ್ಣೀರಿಂದ ಅವಳ ಪಾದ ತೊಳೆದ. ಅವನ ತೋಳು ಹಿಡಿದು ಎಬ್ಬಿಸಿ ನಿಲ್ಲಿಸಿದವಳೇ ಕೆನ್ನೆಗೊಂದು ಪ್ರೀತಿಯ ಗುದ್ದು ಕೊಟ್ಟು.

''ಇಲ್ಲಿ ಹೀಗೇ ಕುಳಿತು ಮತ್ತೆ ಜಿಡ್ಡುಗಟ್ಟದಿರು. ಹಾಂ... ಜಾಗ್ರತೆ, ನಿನ್ನ ಕಂಡೇ ಕೆಂಡ ಮಂಡಲಾಗುವ ಕೂಪಮಂಡೂಕಗಳಿಗೇನೂ ಕೊರತೆ ಇಲ್ಲ ಈ ನೆಲದಲ್ಲಿ. ಮಳೆ-ಗಾಳಿ-ಬೆಂಕಿ-ಬಿರುಗಾಳಿ ನಿರೋಧಕ ಪಾಲಿಥಿಯನ್ ಚೀಲಗಳಲ್ಲಿ ನಿನ್ನ ಬಂಧಿಯಾಗಿಸಿ, ಉಸಿರುಗಟ್ಟಿಸುವ ಹುನ್ನಾರ ನಡೆಯಬಹುದು ಎಚ್ಚರ! ಅಗೋ... ಅಲ್ಲಿ... ಅಷ್ಟೇ ಅಷ್ಟು ದೂರದಲ್ಲಿ ಸದಾ ಜಾಗೃತನಾಗಿ ನಿಂತಿರು.'' ಎಂದು ಅಪ್ಪಣೆ ಕೊಡಿಸಿದಾಗ ಪುಟಿದು ನಿಂತನಿವ. ತನ್ನ ಶಕ್ತಿಶಾಲಿ ತೋಳುಗಳನ್ನು ಚಾಚಿ ಅವಳನ್ನು ಎಬ್ಬಿಸಿ ನಿಲ್ಲಿಸಿದ. ಅವಳ ಕೈ ಹಿಡಿದುಕೊಂಡು ಒಂದೊಂದೇ ಹೆಜ್ಜೆ ಮುಂದೆ ಮುಂದೆ ನಡೆದ. ಮುಳ್ಳು, ಕಲ್ಲುಗಳ ಸರಿಸಿ ಮೊದಲು ತಾನು ಹೆಜ್ಜೆ ಇರಿಸಿ, ತಾನು ಮೂಡಿಸಿದ ಹೆಜ್ಜೆ ಗುರುತುಗಳಲ್ಲಿ ಅವಳು ಪಾದ ಇರಿಸಿ ಮುನ್ನಡೆಯುವಂತೆ ಮಾಡಿದ. ಅವಳು ನಿರ್ದೇಶಿಸಿದ ದಿಕ್ಕಿನತ್ತ ಪಯಣ ಮುಂದುವರೆಸಿದ. ಇವನು ಮುಂದೆ ಮುಂದೆ ನಡೆದ, ಹಿಂದೆ ಹಿಂದೆ ಇವಳು ಮುನ್ನಡೆಸಿದಳು. ಸಾಲು ಸಾಲು ಗಂಧದ ಮರ, ಹಿಂಡು ಹಿಂಡು ಜಿಂಕೆ, ರೆಕ್ಕೆ ಬಿಚ್ಚಿ ಹಾರಾಡುತ್ತಿರುವ ಪಾರಿವಾಳ, ಪ್ರಶಾಂತ ನೀರವತೆಯಲ್ಲಿ ತೇಲಿ ಬರುತ್ತಿದ್ದ ಮಾಲಕೌಂಸ್ ರಾಗ. ಎಲ್ಲವನ್ನೂ ಬೊಗಸೆಯಲ್ಲಿ ತುಂಬಿಸಿಕೊಂಡು ಇವನ ಕಂಕುಳಲ್ಲಿ ನೇತಾಡುತ್ತಿರುವ ಜೋಳಿಗೆಗೆ ಸುರಿದು ತುಟಿಯ ತುಂಬ ತುಂಬು ನಗೆ ಚೆಲ್ಲಿದಳು.

''ಮುನ್ನಡೆಯಲು ಇಷ್ಟು ಸಾಕವ್ವ ನನಗೆ. ನೀನು ತೋರಿಸುವ ದಾರಿಯಲ್ಲಿ ನಿರ್ಭಯವಾಗಿ ನಡೆದುಬಿಡುವೆ. ಎಲ್ಲ ಬಲ್ಲ ನಿನ್ನ ಲೆಕ್ಕಾಚಾರ ಹುಸಿಯಾಗದ ಹಾಗೆ ಎಚ್ಚರ ವಹಿಸುವೆ. ಬೆನ್ನ ಹಿಂದಿನ ಬೆಳಕಾಗಿ ನೀನಿರು, ನಿನ್ನ ನಿರೀಕ್ಷೆಯಂತೆ ಮುನ್ನಡೆವೆ'' ಅಂದನಿವ.

''ಪಶ್ಚಿಮದ ಆ ಉರಿಬೆಂಕಿಗೆ ಕಂಗಾಲಾಗದೇ, ಬಿರುಗಾಳಿಗೆ ಬೆದರದೇ, ಕೆಂಪಿಗೆ ಕರಗದೇ ಕೆಚ್ಚೆದೆಯಿಂದ ಮುನ್ನಡೆಯುತ್ತಿರು. ಮೂಡಲದ ಕೆಂಪು ತಂಪಲ್ಲಿ ಬೆಂಕಿ ಜಳಕ ಮಾಡುತ್ತದೆ, ಬಿರುಗಾಳಿಯ ಬಾಲ ಮುದುಡಿಕೊಳ್ಳುತ್ತದೆ, ಬೆಳ್ಳಿ ಕಿರಣಗಳಿಗೆ ಕೆಂಪು ತನ್ನ ರಂಗು ಕಳೆದುಕೊಳ್ಳುತ್ತದೆ. ನೀನು ನಡೆಯುತ್ತಿರಬೇಕಷ್ಟೆ. ಅತ್ತಲಿರುವ ಆ ಒಡ್ಡೋಲಗದ ಪೋಷಾಕುಧಾರಿಗಳ ಬಗೆಗೆ ನೀನು ಅಷ್ಟೊಂದು ಚಿಂತಿತನಾಗಬೇಕಿಲ್ಲ. ನನ್ನೆಲ್ಲ ಒಡಲು ತುಂಬಿಕೊಂಡಿರುವ ಈ ಕೋಟಿ ಕೋಟಿ ಜೀವಕಣಗಳಿಗೆ ತುಸುವೇ ಹೊಸ ಚೈತನ್ಯ ಸಿಂಪಡಿಸಿದರೆ ಸಾಕು, ನಾನು ಮತ್ತು ನೀನು ನಿರೀಕ್ಷಿಸದಂತಹ ಬದಲಾವಣೆಯ ಹೊಸದೊಂದು ಸ್ಥಿತಿ ತಾನೇ ತಾನಾಗಿ ನಿರ್ಮಾಣವಾಗುತ್ತದೆ.

ಎಷ್ಟೊಂದು ಸಮಯ ಮೌನವಾಗಿದ್ದವಳು ಇಷ್ಟೊಂದು ಮಾತಾಡಿದ್ದಕ್ಕೆ ಪ್ರಸನ್ನಗೊಂಡನಿವ. ಸ್ವಲ್ಪ ಸ್ವಲ್ಪವೇ ಆಗಿ ಬೆಸೆದುಕೊಂಡಿದ್ದ ಕೈ ಸಡಿಲಿಸಿದಳು... ಸಂಪೂರ್ಣವಾಗಿ ಬಿಡಿಸಿಕೊಂಡಳು. ಪ್ರಶ್ನಾರ್ಥಕವಾಗಿ ತಿರುಗಿ ನೋಡಿದನಿವ.

''ಹೌದು..., ನೀನು ಸರ್ವಶಕ್ತ ಸ್ವತಂತ್ರ.... ಈ ಪಾರದರ್ಶಕ ಗಾಜಿನ ಪಾತ್ರೆಯೊಳಗೆ. ಈ ಸೀಮಾರೇಖೆಯ ಎಲ್ಲ ಪರಿಸರವೂ ನಿನ್ನದೇ. ಎಲ್ಲೆಲ್ಲೂ ನೀನು ನಡೆದಾಡಬೇಕು, ನೆಲೆಸಬೇಕು. ಹೂಂ... ನಡೆಯುತ್ತಿರು ಮುಂದೆ ಮುಂದೆ... ನೋಡದಿರು ಹಿಂದೆ. ಎಲ್ಲೆಲ್ಲಿ ಹೋದರೂ ನನ್ನ ರಕ್ಷಾಕವಚದ ಪರಿಧಿಯಲ್ಲೇ ನೀನಿರುವೆ, ಧೈರ್ಯದಿಂದ ಹೊರಡು.'' ಅವಳಿನ್ನೂ ಏನೇನೋ ಹೇಳುತ್ತಲೇ ಇದ್ದಳು.... ಜಿಂಕೆಯಾಗಿ ಇವನು ಕೆನೆಯುತ್ತಿದ್ದ, ಪಾರಿವಾಳವಾಗಿ ಹಾರುತ್ತಿದ್ದ, ಮೂಡಲದ ಕೆಂಪಾಗಿ ಹೊಳೆಯುತ್ತಿದ್ದ.

**ಚಿತ್ರಶೇಖರ ಕಂಠಿ**
'ಗ್ರೀಷ್ಮ', ಸಂ. ೧೪೫/೨, ಮಾಕಾ ಬಡಾವಣೆ, ಜೇವರ್ಗಿ ರಸ್ತೆ, ಗುಲಬರ್ಗಾ-೫೮೫ ೧೦೨

# ಬೀದಿ ನಾಟಕಗಳು

# ಅಂದು – ಇಂದು

**ಬೀ**ದಿ ನಾಟಕಗಳ ಸ್ವರೂಪವೇ ಒಂದು ಪ್ರತಿಭಟನೆಯ ಸ್ವರೂಪ ಎನ್ನಬಹುದು. ಭಾರತದಲ್ಲಿ ಈ ಬೀದಿ ನಾಟಕಕ್ಕೆ ಹೊಸ ಆವಿಷ್ಕಾರ ನೀಡಿದವರಲ್ಲಿ ಬಾದಲ್ ಸರ್ಕಾರ್ ಮೊದಲಿಗರೆಂದರೆ ತಪ್ಪಾಗಲಾರದು. ಏಕೆಂದರೆ ಬಾದಲ್ ಸರ್ಕಾರ್‌ರವರು ೧೯೭೦ರಲ್ಲೇ ಪ್ರೊಸೀನಿಯಂ ರಂಗಭೂಮಿಯಲ್ಲಿ ಸಾಕಷ್ಟು ಹೆಸರು ಮಾಡಿ, ಅದರಿಂದ ಹೆಚ್ಚು ಜನರನ್ನು ಸಮರ್ಪಕವಾಗಿ ತಲುಪಲು ಸಾಧ್ಯವಿಲ್ಲ ಎಂದು ಮನಗಂಡು ಹೆಚ್ಚು ಜನರನ್ನು ತಲುಪಲು ಹೊಸ ಮಾಧ್ಯಮಗಳನ್ನು ಹುಡುಕುತ್ತಾ ಹೋದಾಗ ಅವರ ಕಣ್ಣಿಗೆ ಕಂಡಿದ್ದು ನಮ್ಮ ಜನಪದರು ಕಂಡುಕೊಂಡಿದ್ದ ದೊಡ್ಡಾಟ, ಸಣ್ಣಾಟದ ಮಾದರಿಗಳು. ಈ ದೊಡ್ಡಾಟ, ಸಣ್ಣಾಟದ ಮಾದರಿಗಳಿಗೆ ಬಾದಲ್ ಸರ್ಕಾರ್‌ರವರು ಹೊಸ ಸ್ವರೂಪವನ್ನು ನೀಡಿ ನಟರ ಕೈಯಿಂದ ಹೆಚ್ಚು ದೇಹಶ್ರಮವನ್ನು, ಧ್ವನಿಯನ್ನು ಸಮರ್ಪಕವಾಗಿ ಬಳಸಿ ಕಲ್ಕತ್ತದಲ್ಲಿ ಪ್ರದರ್ಶನ ಮಾಡಿಯೇಬಿಟ್ಟರು. ಅಂದು ಅವರು ರೂಪಿಸಿದ 'ಭೋಮ', 'ಮಿಚ್ಚಿಲ್' ಎಂಬ ನಾಟಕಗಳಿಂದ ಹೊಸ ರಂಗ ಸಾಧ್ಯತೆಯನ್ನು ರಂಗಕರ್ಮಿಗಳಿಗೆ ನೀಡಿದರು.

ಇಷ್ಟೊತ್ತಿಗಾಗಲೆ ಪ್ರೊಸೀನಿಯಂ ರಂಗಭೂಮಿಯ ತೊಂದರೆಗಳನ್ನು ಹಲವು ರಂಗಕರ್ಮಿಗಳು ನಿವಾರಿಸಲು ಪ್ರಯತ್ನಿಸಿದ್ದರೂ ಅದು ಸಾಧ್ಯವೇ ಆಗಿರಲಿಲ್ಲ. ಪ್ರೊಸೀನಿಯಂ ರಂಗಭೂಮಿಯ ತೊಂದರೆಗಳೆಂದರೆ : ರಂಗಮಂದಿರ, ಬೆಳಕಿನ ವ್ಯವಸ್ಥೆ ಮತ್ತು ಜನಸಮುದಾಯ ರಂಗಮಂದಿರದ ಕಡೆ ಬರದಿರುವುದು, ಇತ್ಯಾದಿ ಸಮಸ್ಯೆಗಳಿಂದಾಗಿ ಒಂದಲ್ಲಾ ಒಂದು ರೀತಿ ಜನಸಾಮಾನ್ಯರಿಗೂ ಮತ್ತು ರಂಗಭೂಮಿಗೂ ನಂಟು ಸಾಧ್ಯವೇ ಇಲ್ಲ ಎಂದೆನಿಸಿಬಿಟ್ಟಿತ್ತು. ಅಷ್ಟರಲ್ಲಿ ಬಾದಲ್ ಸರ್ಕಾರ್‌ರವರು ಈ ಸಮಸ್ಯೆಗಳಿಗೆ ನೇರ ಉತ್ತರ ನೀಡಿ ಬೀದಿ ನಾಟಕಗಳ ಪ್ರಾಮುಖ್ಯತೆಯನ್ನು ಹೆಚ್ಚಿಸಿದರು. ಸಾಮಾನ್ಯವಾಗಿ ಬೀದಿಯಲ್ಲಿ ನಡೆಯುವುದೆಲ್ಲ ಬೀದಿ ನಾಟಕವಾಗುತ್ತದೆ ಎನ್ನುವ ಮಂದಿ ಇದ್ದಾರೆ. ಆದರೆ ಬಾದಲ್ ಸರ್ಕಾರ್‌ರವರು ನಾಟಕವೊಂದು ಬೀದಿಯಲ್ಲಿ ಆಗಬೇಕು ಆಗ ಮಾತ್ರ ಅದು ಬೀದಿ ನಾಟಕವಾಗುತ್ತದೆ ಎಂದು ತಮ್ಮ 'ಭೋಮ', 'ಮಿಚ್ಚಿಲ್' ನಾಟಕಗಳ ಮುಖಾಂತರ ಮಾಡಿ ತೋರಿಸಿದರು. ತುರ್ತು ಪರಿಸ್ಥಿತಿಯ ದಿನಗಳಲ್ಲಿ ಈ ಹೊಸ ರಂಗ ಆವಿಷ್ಕಾರ ನಮ್ಮನ್ನೆಲ್ಲಾ ಆವರಿಸಿಕೊಂಡು ಬಿಟ್ಟಿತ್ತು. ಬಾದಲ್ ಸರ್ಕಾರ್‌ರವರು ಕುಂಬಳಗೋಡಿನಲ್ಲಿ ನಡೆಸಿದ ವರ್ಕ್‌ಷಾಪ್, ಕರ್ನಾಟಕದಲ್ಲಿ ಹೊಸ ಅಧ್ಯಾಯವನ್ನೇ ಪ್ರಾರಂಭಿಸಿಬಿಟ್ಟಿತು. ಯಾವ ಅಕಾಡೆಮಿಕ್ ಶಿಸ್ತಿಗೂ ಒಳಗಾಗದ ನಾನು ಇಲ್ಲಿಯೂ ಕೂಡ ಅದೇ ರೀತಿ ಈ ಎಲ್ಲ ಕಮ್ಮಟಗಳಿಂದ ದೂರ ಉಳಿದು ಬೀದಿ ನಾಟಕಗಳ ಸ್ವರೂಪ ಮತ್ತು ಸೂಕ್ಷ್ಮತೆಯನ್ನು ಗಮನಿಸತೊಡಗಿದೆ. ನನ್ನ ಪ್ರಕಾರ ಬೀದಿ ನಾಟಕಗಳು ಜನಸಾಮಾನ್ಯರ ಧ್ವನಿಯಾಗಬೇಕು ಮತ್ತು ಅಷ್ಟೇ ಕಲಾತ್ಮಕವಾಗಿ ಆ ನಾಟಕಗಳನ್ನು ರೂಪಿಸುವ ಹೊಣೆ ನಿರ್ದೇಶಕನಿಗಿರುತ್ತದೆ ಎಂದು ತಿಳಿಯುತ್ತಾ ಹೋದೆ. ಈ ಹಿನ್ನೆಲೆಯಲ್ಲಿ ಅಂದು ಬಿಹಾರ ರಾಜ್ಯದ ಬೆಲ್ಚಿ ಗ್ರಾಮದಲ್ಲಿ ನಡೆದ ದಲಿತರ ದಾರುಣ ಹತ್ಯೆ ನನ್ನನ್ನು ಸಾಕಷ್ಟು ಕಾಡಿತು. ಈ ಘಟನೆಯನ್ನು ನಾಟಕವಾಗಿಸತೊಡಗಿದೆ. ಅಂದು ಕಲಾಕ್ಷೇತ್ರದ ರಂಗದ ಮೇಲೆ, ಪ್ರಜಾವಾಣಿಯ ಕಾಲಂಗಳಲ್ಲಿ ಹೆಸರು ಬಂದರೆ ಮಾತ್ರ ಜನ್ಮ ಸಾರ್ಥಕ ಎನ್ನುವ ನಟರ ಗುಂಪಿತ್ತು. ಈ ನಟರನ್ನು ಬಿಟ್ಟು ಏನಾದರೂ ಮಾಡಲೇಬೇಕೆಂದೆನಿಸಿ ಶ್ರೀರಾಂಪುರದ ಕೊಳಗೇರಿಯ ಕಡೆ ಹೆಜ್ಜೆ ಹಾಕಿದೆ. ಅಲ್ಲಿ ನನಗೆ ಸಿಕ್ಕ ನಟರು ಸಿ. ಬಸವಲಿಂಗಯ್ಯ, ಜನಾರ್ದನ್ ಮುಂತಾದವರು. ಬೆಲ್ಚಿ ನಾಟಕ ಎಲ್ಲ ಕೊಳಗೇರಿಗಳಲ್ಲಿ ಪ್ರದರ್ಶಿತವಾಗತೊಡಗಿತು. ಈ ನಾಟಕಕ್ಕಿದ್ದ ಹೊಸ ಆಯಾಮವೆಂದರೆ ಅದರ ವಿಷಯ ಹಾಗೂ ಅದರ ಸ್ವರೂಪ.

ಇಂದಿರಾ ಗಾಂಧಿಯವರನ್ನು ಹಾಗೂ ಮೊರಾರ್ಜಿ ದೇಸಾಯಿಯವರನ್ನು ಖಂಡಿಸಿದಾಗಲೂ ಜನ ಚಪ್ಪಾಳೆ ತಟ್ಟುತ್ತಿದ್ದರು. ಮತ್ತು ಬೀದಿ ನಾಟಕದ ಆಯಾಮ ನನ್ನ ಕಣ್ಣ ಮುಂದೆಯೇ ಬಿಚ್ಚಿಕೊಳ್ಳತೊಡಗಿತು. ಬೀದಿ ನಾಟಕವನ್ನು ಸಾಕಷ್ಟು ಜವಾಬ್ದಾರಿಯಿಂದ ನಿರ್ವಹಿಸಿದರೆ ಉತ್ತಮ ಜನಪರ ಕಾಳಜಿಗಳನ್ನು ಬಿಂಬಿಸುವ ನಾಟಕವಾಗಿಸಬಹುದು ಎಂದು ನನಗೆ ಮನವರಿಕೆಯಾಯಿತು.

ಬೆಲ್ಚಿ ನಾಟಕವು ಬೀದರ್ ಜಿಲ್ಲೆಯಿಂದ ಕೆ.ಜಿ.ಎಫ್.ನ ತನಕ ಹೊಸ ರಂಗ ಸಾಧ್ಯತೆಗಳನ್ನು ತೆರೆದಿಟ್ಟಿತು. ಸಮುದಾಯ ರೂಪಿಸಿದ ಸಾಂಸ್ಕೃತಿಕ ಜಾತಾದಲ್ಲಿ ಬೀದಿ ನಾಟಕದ ಪಾತ್ರ ಅತ್ಯಂತ ಹಿರಿಯದಾಗಿತ್ತು. ನಂತರ ನಡೆದ ಚಿಕ್ಕಮಗಳೂರು ಚುನಾವಣೆಯಲ್ಲಿ ''ತುರ್ತುಪರಿಸ್ಥಿತಿಯ ಕರಾಳ ರಾಣಿಯ ಕತೆಯನ್ನು ಹೇಳ್ತೀವಿ'' ಎನ್ನುವ ಹಾಡನ್ನು ಹಾಡುತ್ತಾ ಕುಣಿಯುತ್ತಿದ್ದಾಗ ಭೂಮಿಯು ಕಂಪಿಸುತ್ತಿದೆ ಎಂದೇ ಭಾವಿಸಿದ್ದೆವು. ನವ ನಿರ್ಮಾಣದ ಸಮಾಜ ಬೀದಿ ನಾಟಕಗಳ ಮುಖಾಂತರ ಸಾಧ್ಯ ಎಂದು ಭಾವಿಸಿ ಬೀದಿ ನಾಟಕವನ್ನು ಅಸಮಾನತೆಯ ವಿರುದ್ಧ ಒಂದು ಶಾಂತಿಯುತ ಅಸ್ತ್ರವೆಂದೇ ಭಾವಿಸಿದ್ದೆವು. ಆದರೆ ವ್ಯವಸ್ಥೆ ಹೇಗೆ ಇಂಥ ಎಲ್ಲಾ ಶಾಂತಿಯುತ ಅಸ್ತ್ರವನ್ನು ತನ್ನ ಕೈಗೆ ತೆಗೆದುಕೊಳ್ಳುತ್ತದೆ ಎಂಬುದಕ್ಕೆ ಮುಂದೆ ಆದ ಬೀದಿ ನಾಟಕಗಳ ದುರಂತವೇ ಸಾಕ್ಷಿ ಎನ್ನಬಹುದು. ಸಾಕ್ಷರತೆ ಹೆಸರಲ್ಲಿ ಬೀದಿ ನಾಟಕದ ಪ್ರಕಾರವನ್ನು ನುಂಗಿ ನೀರುಕುಡಿದ ಸರ್ಕಾರ, ನಂತರದ ದಿನಗಳಲ್ಲಿ ಬೀದಿ ನಾಟಕದ ಮಾಧ್ಯಮವನ್ನು ತನಗೆ ಇಷ್ಟ ಬಂದಂತೆ ಬಳಸಿಕೊಂಡು ಬೀದಿ ನಾಟಕದ ಪ್ರಮುಖ ನಟನಟಿಯರನ್ನು, ಸಂಘಟನಾಕಾರರನ್ನು ಸರ್ಕಾರ ಆಪೋಶನ ತೆಗೆದುಕೊಂಡುಬಿಟ್ಟಿತು. ಹಾಗೆಯೇ ನಂತರದ ದಿನಗಳಲ್ಲಿ ಗೊಬ್ಬರಕ್ಕೆ, ಕಾನೂನು ಅರಿವಿಗೆ ಹೀಗೆ ಎಲ್ಲ ಸಾಮಾಜಿಕ ಪಿಡುಗುಗಳಿಗೂ ಬೀದಿ ನಾಟಕವನ್ನು ಅಸ್ತ್ರವನ್ನಾಗಿ ಬಳಸಿ ಬೀದಿ ನಾಟಕವನ್ನು ಪ್ರತಿಭಟನಾ ಅಸ್ತ್ರವಾಗಿ ಇಟ್ಟುಕೊಂಡಿದ್ದವರನ್ನು ಸರ್ಕಾರ ಗುತ್ತಿಗೆಗೆ ತೆಗೆದುಕೊಂಡಿದ್ದು ಇನ್ನೊಂದು ವಿಪರ್ಯಾಸ. ಗುತ್ತಿಗೆ, ತುಂಡು ಗುತ್ತಿಗೆಯಿಂದ ಅನೇಕ ಸಂಘಟನೆಗಳು ಛಿದ್ರವಾಗಿ ಅನೇಕ ನಟನಟಿಯರು ನಾಟಕಕ್ಕೆ ಎಷ್ಟು ಹಣ ನೀಡುತ್ತೀರಿ ಎಂದು ಕೇಳುವ ದಲ್ಲಾಳಿಗಳನ್ನು ರೂಪಿಸುತ್ತಿರುವುದು ಮತ್ತೊಂದು ವಿಪರ್ಯಾಸ. ಸಾಮಾಜಿಕ ಅಸಮಾನತೆಯ ವಿರುದ್ಧ ಧ್ವನಿ ಎತ್ತುತ್ತಿದ್ದ ಸಂಘಟನೆಗಳೇ ಬೆರಳೆಣಿಕೆಯಷ್ಟಿದ್ದವು. ಈ ಸಂಘಟನಕಾರರು ಕೂಡ ಇಂದು ಮಾಯವಾಗಿ ಬೀದಿ ನಾಟಕಗಳ ಕಂಟ್ರಾಕ್ಟರ್‌ಗಳಾಗುತ್ತಿರುವುದು ಇನ್ನೊಂದು ವಿಪರ್ಯಾಸ. ಈ ಬೀದಿ ನಾಟಕದ ಪ್ರಾಬಲ್ಯವನ್ನು ಹೆಚ್ಚಿಸಲು ಮತ್ತೊಂದು ತುರ್ತುಪರಿಸ್ಥಿತಿ ಬರಬೇಕೆ? ಸ್ವಾರ್ಥದ ರಂಗ ಅಸ್ತ್ರಗಳು ಹೇಗೆ ತಮ್ಮ ನಿಜ ಬಣ್ಣವನ್ನು ರೂಪಿಸಿಕೊಳ್ಳಬೇಕು ಎನ್ನುವುದರ ಬಗ್ಗೆ ದೀರ್ಘ ಚರ್ಚೆಯೇ ಆಗಬೇಕಾಗಿದೆ.

ಸಿ.ಜಿ. ಕೃಷ್ಣಸ್ವಾಮಿ
ಪಿ-೫, ಜ್ಞಾನಭಾರತಿ, ಬೆಂಗಳೂರು-೫೬೦೦೫೬

# ಒಂದು ಬಾಳೆಗೊನೆಯ ಕತೆ

ಮಲೆಯ ಹೊಲೆಯನು ತನ್ನ ಗುಡಿಸಲಿನ ಮುಂದುಗಡೆ
ಮಳೆ ಬಂದ ದಿನ ನೆಟ್ಟನೊಂದು ಬಾಳೆ.
ಮನದೊಳಾಸೆಗಳ ತೆರ ಕಂದಿನಲಿ ಒಂದೊಂದೆ
ಹಸಿರು ಸುಳಿ ಹೊಮ್ಮಲದು ನಳನಳಿಸಿತು.
ಮುದ್ದು ಮಕ್ಕಳ ಜೊತೆಗೆ ಬಾಳೆಗೂ ಒಂದೊಂದು
ಮುದ್ದುಗೈದಳು ಮಡದಿ ಅಳಿಗಿ ಕೂಡ.

ಮಳೆಯೆಲ್ಲ ನಿಂತಾಗ ಬಾನು ತಿಳಿಯಾದಾಗ
ಹಾಡಿತ್ತು ಮಲೆಯನರಗಿಣಿಯು ಮುದದಿ,
ಮರವೆಲ್ಲ ಹೂತಾಗ ತಂಗಾಳಿ ಬಂದಾಗ
ಮಲೆಯನಾ ಗುಡಿಸಲೂ ಹೂಮುಡಿಯಿತು!

ಶುರುವಾಯ್ತು ಹೊಲದಲ್ಲಿ ಬೇಸಗೆಯ ಬೇಸಾಯ
ಅಗೆಯುವುದು, ಹೂಡುವುದು, ಅಗೆ ನೆಡುವುದು!
ಮುಂಜಾನೆ ಹೋದವರು ಮುಸ್ಸಂಜೆಯಾಗುವುದು
ಮಲೆಯ ದಂಪತಿ ಗುಡಿಸಲಿಗೆ ಮರಳಲು.
ಆದರೂ ನೀರ್ ತಂದು ಬಾಳೆ ಸಸಿಗೆರೆವುದನು
ಮರೆಯಲಿಲ್ಲಿಬ್ಬರೂ ಒಮ್ಮೆ ಕೂಡ.

ಆ ರೀತಿ ದಿನನಿತ್ಯ ಆರೈಕೆ ಪಡೆಯುತ್ತ
ಬಾಳೆ ಸಸಿ ಬೆಳೆಯುತ್ತ ಬಂತು ಬೇಗ;
ಕುರುಬ ತರುಣನ ಮೇಲೆ ಹಳ್ಳಿ ಹುಡುಗಿಯ ಎದೆಯ
ಅನುರಾಗ ಲತೆ ಹಬ್ಬಿ ಬೆಳೆವ ತರಹ.
ಹಗಲಿಡೀ ಹಸುಳೆಗಳು ಆ ಗಿಡವು ಹಾಸಿರುವ
ನೆರಳ ಹಾಸಿನ ಮೇಲೆ ಕುಳಿತಿರುವರು.
ಹೊಟ್ಟೆ ಚುರುಗುಟ್ಟುತಿರೆ ಸುಡುಬಿಸಿಲು ಸುರಿಯುತಿರೆ
ಆ ಮಕ್ಕಳಲ್ಲಿ ಕುಳಿತಿರುವ ಪರಿಯ
ಕಂಡಾಗ ಕರಗೀತು; ದಯೆಯಿಂದ ಮರುಗೀತು
ಯಾವನಿಗೆ ಆದರೂ ಇರಲು, ಹೃದಯ!
ಒಮ್ಮೊಮ್ಮೆ ಅಳುತಾರೆ ಒಮ್ಮೊಮ್ಮೆ ನಗುತಾರೆ
ಹೊಡೆದಾಡುತಾರೆ ಕೆಲವೊಮ್ಮೆ ಅವರು!
ಆ ಆಟ ಆ ನೋಟ ಸುಡು ಬಿಸಿಲಿನೆದೆಯಲ್ಲು
ಕನಿಕರವು ಹಾಸುವುದು ನೆರಳ ಸೆರಗು!

ಬಲುಕಷ್ಟ ಜೀವಿಗಳು ಕಡುಬಡತನದ ಜನರು
ತಲೆತಲಾಂತರದಿಂದ ಈ ದಲಿತರು;
ಅರ್ಧ ನಗ್ನರು ಬಿಸಿಲು ಮಳೆಗಳಲಿ ನಿಮಗ್ನರು
ಎಂದು ತಣಿವುದೋ ಅವರ ಒಡಲ ಬೇಗೆ!
ಆರ್ದ್ರಹೃದಯಿಗಳವರು, ಅಪಹಾಸ ಭಾಜನರು
ಅವರ ಕಡುಕಷ್ಟಗಳಿಗೆಂತ್ಯವೆಂದು?
ಎಷ್ಟೇ ಕಟ್ಟಳೆ ಕಾಯ್ದೆ ಜಾರಿಯಲ್ಲಿದ್ದರೂ
ಸ್ವಂತ ನೆಲ ಒಂದಡಿಯು ಹೊಂದದವರು!
ದಾಪುಗಾಲಲಿ ಮುಂದುವರೆಯುತಿಹ ಲೋಕಕ್ಕೆ
ಸಮಯವಿದೆಯೇ ಇದನು ನೋಡಲಿಕ್ಕೆ?
ತಿನ್ನಲೊಂದಗುಳಿರದೆ ಉಪವಾಸದಿಂದ ಅಸು
ನೀಗೆ ತರ್ಪಣಪಿಂಡ ದೊರಕದವರು!....

ಉನ್ಮತ್ತ ವಿತ್ತಪ್ರತಾಪವೇ ನೀ ನಿನ್ನ
ಮದಿರೆ, ಮದನೋತ್ಸವಗಳಲ್ಲಿ ಮುಳುಗು!!...

ಮಾದೇವ ಹೇಳಿದನು : "ಯಾಲಕ್ಕಿ ಬಾಳೆಯಿದು!
ಇದರ ಹಣ್ಣೊಪ್ಪೊಂದು ರುಚಿಯಿರುವುದೋ!"
ತಮ್ಮ ನುಡಿದುದ ಕೇಳಿ ಗೇಲಿ ಮಾಡುವ ಹಾಗೆ
ದೇವನೆಂದನು ನಗೆಯನುಕ್ಕಿಸುತ್ತ :
"ಗೊನೆಬಿಡುವ ಮೊದಲನೇನೆ ಹಣ್ಣು ರುಚಿ ನೆನೆಯುತ್ತ
ಜೊಲ್ಲು ಸುರಿಸುತ್ತಾನೆ ಆಸೆಬುರುಕ!"
ನೀಲಿ ನುಡಿದಳು : "ಅಪ್ಪ ಗೊನೆಯನ್ನು ಬಲಿತಾಗ
ಮಾರಲೂಬಹುದು ತುಸು ಅಕ್ಕಿಗಾಗಿ!"
"ಸೊಟ್ಟ ನಾಲಿಗೆಯಿಂದ ಕೆಡುಕನೆಣಿಸದಿರು ಹೆಣ್ಣೆ"
ಗದರಿದನು ನೀಲಿಯನು ಹಿರಿಯ, ಕರಿಯ!
ಇದ ಕೇಳಿ ನೀಲಿ ತುಸು ದೂರಕ್ಕೆ ಸರಿಯುತ್ತ
ಕರಿಯನನು ಛೇಡಿಸುತ್ತ ಹೀಗೆಂದಳು :
"ಕಾಯಿ ಹಣ್ಣಾದಾಗ ನಿಮ್ಮ ಕಣ್ ತಪ್ಪಿಸುತ್ತ
ತಿಂದೇನು ಅರ್ಧಗೊನೆ ನಾನೊಬ್ಬಳೇ!"
"ನೀನಾಗ ತಿನ್ನೋದು, ಹಣ್ಣಲ್ಲ; ನಿನ್ನನ್ನೆ
ಹಣ್ಣು ಮಾಡುವ ನನ್ನ ಕೈಯ ಗುದ್ದು!
ಕಡು ಆಸೆಬುರುಕಿ ನೀ ಕದ್ದು ತಿಂದರೆ ಹಣ್ಣು
ತೊಡೆ ತೊಗಲ ಸುಲಿದೇನು ನಾನು ನಿನ್ನ!..."

ನಿತ್ಯವೂ ಆ ಬಾಳೆ ಬುಡದಲ್ಲಿ ಈ ರೀತಿ
ಆಸೆಬುರುಕರ ಸಭೆಯು ಜರುಗುತಿರಲು,
ಆದಷ್ಟು ಬೇಗ ಗೊನೆಬಿಡಲು ಬಯಸಿರಬೇಕು
ಬಾಳೆಯೂ ತನ್ನ ಮನದಾಳದಲ್ಲಿ!
ಅಷ್ಟೊಂದು ತೀವ್ರವೂ ಅನುಕಂಪನೀಯವೂ
ಆಗಿತ್ತು ನಿಜಕೂ ಆ ಮಕ್ಕಳಾಸೆ!

---

**ಚಙ್ಙಂಪುಳ**

---



## ಧನಿಯರ ಸತ್ಯನಾರಾಯಣ ಮತ್ತು ವಾಳ್ಳಕ್ಕುಳಂ

ಡಾ॥ ಗಿರಡ್ಡಿ ಗೋವಿಂದರಾಜರು 'ಮರೆಯಲಾರದ ಹಳೆಯ ಕತೆಗಳು' ಪುಸ್ತಕದ ದಿ. ಕೊರಡ್ಕಲ್ ಶ್ರೀನಿವಾಸರಾಯರ 'ಧನಿಯರ ಸತ್ಯನಾರಾಯಣ' ಎಂಬ ಕತೆಗೆ ಅಡಿಟಿಪ್ಪಣಿ ಬರೆಯುತ್ತ "ಈ ಕತೆ ಪ್ರಕಟವಾದ ಮೇಲೆ ಈ ಕತೆಗೂ 'ವಾಳ್ಳಕ್ಕುಳಂ' ಎಂಬ ಹೆಸರಿನ ತಮಿಳು ಕಥನ ಕವನಕ್ಕೂ ಇರುವ ಸಾಮ್ಯವನ್ನು ಕೆ. ವಿ. ನಾರಾಯಣ ಅವರು ನನ್ನ ಗಮನಕ್ಕೆ ತಂದರು. ಆದರೆ ಇವುಗಳ ನಡುವಿನ ಸಂಬಂಧವನ್ನಾಗಲಿ ಅವುಗಳ ಪ್ರಕಟಣೆಯ ವರ್ಷಗಳನ್ನಾಗಲಿ ಪರೀಕ್ಷಿಸಲು ನನಗೆ ಸಾಧ್ಯವಾಗಲಿಲ್ಲ" ಎಂದು ದಾಖಲಿಸಿದ್ದಾರೆ.

ಇಲ್ಲಿ ಹೇಳಲಾದ ಕಥನಕಾವ್ಯ 'ವಾಳ್ಳಕ್ಕುಳಂ' ಅಲ್ಲ, 'ವಾಳಕ್ಕುಲ' ಎಂದು. ಅದರ ಭಾಷೆ ತಮಿಳು ಅಲ್ಲ, ಮಲಯಾಳಂ. 'ವಾಳಕ್ಕುಲ' ಎಂಬ ಮಲೆಯಾಳಂ ಕಥನಕಾವ್ಯವನ್ನು ಯಥಾವತ್ತಾಗಿ ಕನ್ನಡಕ್ಕೆ ಭಾಷಾಂತರಿಸಿ 'ಒಂದು ಬಾಳೆಗೊನೆಯ ಕತೆ' ಎಂಬ ಹೆಸರಿನಲ್ಲಿ ಇಲ್ಲಿ ಸಾದರಪಡಿಸುತ್ತಿದ್ದೇನೆ. ಮೂಲ ಕೃತಿಯನ್ನು ರಚಿಸಿದವರು ಸುಪ್ರಸಿದ್ಧ ಕವಿ ಚಙ್ಙಂಪುಳ ಕೃಷ್ಣಪಿಳ್ಳೆ. ಅವರ ಕಾಲ ೧೯೧೧-೧೯೪೮. 'ವಾಳಕ್ಕುಲ' ಮೊದಲು ಪ್ರಕಟಗೊಂಡದ್ದು ೧೯೩೮ರಲ್ಲಿ. 'ಧನಿಯರ ಸತ್ಯನಾರಾಯಣ' ಪ್ರಕಟವಾದದ್ದೂ ೧೯೩೮ರಲ್ಲೇ. ಕತೆಯಲ್ಲಿ ಬಾಳೆಗೊನೆಯನ್ನು ಕತೆಯ ಧನಿ ವಶಪಡಿಸುವುದು, ಒಕ್ಕಲು ಧನಿಗೆ ಸಲ್ಲತಕ್ಕ ಗೇಣಿ ಕೊಡಲಿಲ್ಲ ಎಂಬ (ನ್ಯಾಯವಾದ) ಕಾರಣಕ್ಕಾಗಿ. ಕಾವ್ಯದಲ್ಲಿ ಧನಿ ಗೊನೆಯನ್ನು ವಶಪಡಿಸುವುದು ಯಾವ 'ಹೊಲೆಯನಿಗೂ ಒಂದಡಿ ನೆಲಕ್ಕೂ ಹಕ್ಕಿಲ್ಲ' ಎಂಬ ಪರಂಪರಾಗತ ಕಟ್ಟುಕಟ್ಟಳೆಯಿಂದಾಗಿ! (ಇದು ಕಾರಂತರ ಚೋಮನದ್ದೇ ದುರವಸ್ಥೆ!) ಕತೆಯಲ್ಲಿ ಕತೆಯ ಮಕ್ಕಳು ಬಾಳೆಗಿಡಗಳನ್ನು ಕಿತ್ತುಹಾಕುವ ಮೂಲಕ ಪ್ರತಿಭಟಿಸುತ್ತಾರೆ; ಕಾವ್ಯದಲ್ಲಿ ಕವಿಯೇ ಶೋಷಿತರ ಪರವಾಗಿ ಮರುಗುತ್ತಾರೆ.

### ಕವಿ ಚಙ್ಙಂಪುಳ

ಜನನ : ೧೧-೧೦-೧೯೧೧ ಮರಣ : ೧೭-೦೬-೧೯೪೮

ಈ ಅಲ್ಪಾವಧಿಯಲ್ಲೇ ಅವರು ವಿವಿಧ ಪ್ರಕಾರಗಳಲ್ಲಿ ಐವತ್ತೇಳು ಅಮೋಘ ಸಾಹಿತ್ಯ ಕೃತಿಗಳನ್ನು ರಚಿಸಿ ಮಲಯಾಳ ಭಾಷೆಯನ್ನು ಸಂಪನ್ನಗೊಳಿಸಿದ್ದಾರೆ. ಅವರ ಪ್ರಪ್ರಥಮ ಕೃತಿ 'ರಮಣನ್' ಎಂಬ ಪ್ರಣಯ ಕಾವ್ಯ ಒಂದೂವರೆ ಲಕ್ಷ ಪ್ರತಿಗಳು ಒಂದು ದಶಕಕ್ಕೂ (೧೯೯೪) ಹಿಂದೆಯೇ ಮಾರಾಟವಾಗಿವೆ! ಅನಂತರದ ದಾಖಲೆ ತಿಳಿಯದು.

ಪ್ರಸ್ತುತ ಪ್ರಣಯ ಕಾವ್ಯದ ಹಾಗೆಯೇ ಪ್ರತಿಯೊಬ್ಬ ಮಲಯಾಳಿಯ ನಾಲಿಗೆಯಲ್ಲೂ ನರ್ತಿಸಿದ, ಹೃದಯವನ್ನು ಕ್ರಾಂತಿಗೆ ಅಣಿಗೊಳಿಸಿದ ಪ್ರಗತಿಶೀಲ ರಚನೆ 'ವಾಳಕ್ಕುಲ' (ಒಂದು ಬಾಳೆಗೊನೆಯ ಕತೆ)

ಅನುವಾದಕ - *ಕೆ. ಕೆ. ನಾಯರ್*

ಕೊನೆಗೊಂದು ದಿನ ಬಾಳೆಗೊನೆಯ ಬಿಟ್ಟಿತ್ತು, ತುಂಬಿ
ಹರಿದಿತ್ತು ಗುಡಿಸಲನು ಬಲು ಸಂಭ್ರಮ !
ಜಗಳವಾಡಲೆ ಇಲ್ಲ ಆ ಬಳಿಕ ನೀಲಿ ಜೊತೆ
ಕರಿಯ, ಕಿರಿಕಿರಿ ಮಾಡುತ್ತಿದ್ದ, ಅಣ್ಣ,
ಅವಳೊಬ್ಬ ಕಳ್ಳಿಯೇ ಯಾರಿಗೂ ತಿಳಿಯದೆಯೆ
ಕದ್ದು ನುಂಗುವುದರಲಿ ಬುದ್ಧಿವಂತೆ !
ಅವಳನ್ನು ಒಲಿಸಿದರೆ ಕರಿಯನಿಗು ದಕ್ಕುವುದು
ಕದ್ದ ಸ್ವತ್ತುಗಳಲ್ಲಿ ಒಂದು ಪಾಲು !
ಜೀವವಾದನು ಕರಿಯು, ತಂಗಿ, ನೀಲಿಗೆ ಈಗ,
ಮಾದೇವ ಒಲಿಸಿದನು ಕೇಲನನ್ನು !
ನೀಗಿತ್ತು ಕರಿನೆರಳು ನಿಮಿಷದಲೆ, ಬೆಳದಿಂಗ-
ಳಾಸ್ಥಾನ ಅಲ್ಲವೇ ಬಾಲ್ಯಕಾಲ !!
ಮಕ್ಕಳೆಲ್ಲರ ಮುದವ ಕಾಣುತಲೆ ಆಳಗಿಗೂ
ಉಕ್ಕಿತ್ತು ಹೃದಯದಲಿ ತುಂಬು ಹರುಷ
ಗೊನೆಯು ಬಲಿತೊಡನೆಯೇ ಕಡಿದದನು ಮಾಗಿಸಲು
ಮಲೆಯ ಹೊಲೆಯನ ಮನವು ಹಾತೊರೆಯಿತು !
ಆ ರೀತಿಯಾದರೂ ತನ್ನ ಮಕ್ಕಳಿಗೊಂದು
ಉಡುಗೊರೆಯ ನೀಡಲವನಾಶಿಸಿದನು !
ಮೂಳೆ ಹುಡಿ ಮಾಡಿ ದುಡಿದರು ಆಗದವನಿಂದ
ಅರೆಹೊಟ್ಟೆ ಗಂಜಿ ನೀಡಲು ಅವರಿಗೆ.
ಒಡೆಯರಾ ಮಹಲಿನಲಿ ಮೃಷ್ಟಾನ್ನವನು ಉಂಡು
ಅವರ ಸಂತಾನಗಳು ನಲಿಯುತಿರಲು
ಅವನ ಕಂದಮ್ಮಗಳು ಬರಿಹೊಟ್ಟೆಯಲ್ಲಿದ್ದು
ಅತ್ತಿತ್ತ ಅಲೆಯುವರು ಉರಿಬಿಸಿಲಲಿ !
ಅವರ ಗಂಟಲನೊದ್ದೆ ಮಾಡಲಿಕ್ಕಿರುವುದೋ
ನೆರೆಯ ಗುಡ್ಡದ ಬುಡದ ತೊರೆಯ ನೀರು !

ದಯೆಯಿರದ ಜಗವೇ ನೀ ವಿಹರಿಸುತ್ತಿರು ನಿನ್ನ
ಕಲ್ಪನೆಯ ಪುಷ್ಪಕ ವಿಮಾನವೇರಿ !
ತುಂಬ ಚಂದಿರ ಸುರಿಪ ಹಾಲುಬೆಳದಿಂಗಳಿಗೆ
ಮೈಯೊಡ್ಡಿ ಅಲೆಯುತಿರು ಸೊಬಗನರಸಿ !
ಪ್ರಣಯದಾ ಕಲ್ಪಕೋದ್ಯಾನದಲಿ ಹಸುರೆಲೆಯ
ನೆರಳಿನಲಿ ಕುಳಿತು ನೀ ಕನಸ ಕಾಣು !
ಎದೆಯೊಡೆದು ಬಡಹೊಲೆಯರಲ್ಲಲ್ಲೆ ಬಿದ್ದಿರಲಿ
ನಿನಗೇಕೆ ನಿರ್ಗತಿಕರವರ ಗೊಡವೆ !
ಅವರ ತಲೆಬುರುಡೆಗಳ ಆಳವಡಿಸಿ ಕಟ್ಟಿಸಲಿ
ಭವ್ಯ ಬಂಗಲೆಗಳನು ಸಿರಿವಂತರು !
ಅವರೆದೆಯ ನೆತ್ತರನು ಬಸಿದು ಹೀರಿದ ಮಂದಿ
ಹಕ್ಕುಗಳ ಸೊಕ್ಕಿಂದ ಮೆರೆಯುತಿರಲಿ !
ನೀನಿದನು ಯಾವುದನು ನೋಡದೆಯು ಕಾಣದೆಯು
ನಿನ್ನ ನಂದನವನದಿ ಖುಷಿಯಾಗಿರು...!

೨

ಮಲಯ ಹೊಲೆಯನು ತನ್ನ ಬಾಳೆಯನು ಸ್ಪರ್ಶಿಸಲು
ಮೊಳಗಿತ್ತು ಅವನೊಳಗೆ ಒಂದು ಗುಡುಗು !
ಅದರ ಪ್ರತಿಧ್ವನಿಯು ದಿಕ್ತಟಗಳನು ಪುಡಿಗೈದು
ಗರ್ಜಿಸುತ್ತಿರುವಂತೆ ಅವನಿಗನಿಸಿತು.
ಹಗಲಿನೆದೆಯನು ಸೀಳಿ ಬಿಸಿ ನೆತ್ತರನು ಹೀರಿ
ಕಡುಕೆಂಪ ತಳೆದಿದ್ದ ಸಂಜೆಯ ರವಿ !
ಕೊರಡ ಗೊಂಬೆಯ ತರದಿ ನಿಂತಿರುವ ಮಲಯನಿಗೆ
ಹನಿ ನೆತ್ತರೂ ಇಲ್ಲ ಮೋರೆಯಲ್ಲಿ!
ಕ್ಷಣ ಕ್ಷಣವು ಸುಡುತಿಹುದು ಅವನ ಬಡ ಜೀವವನು
ತಾಳಲಾಗದ ಒಂದು ಧಗೆಯ ಜ್ವಾಲೆ !
ತುಂಬು ಸಂತಸದಿಂದ ಹಾಡಿ ಕುಣಿಯುತ್ತಿಹರು
ಅವನ ಅಕ್ಕರೆಯ ಮಕ್ಕಳು ಸುತ್ತಲೂ;
ಎಲೆಯಿರದ, ಹೂವಿರದ, ಮುರುಟು ಮುತ್ತುಗವನ್ನು
ಸುತ್ತಿ ತೊನೆದಾಡುತಿಹ ಲತೆಗಳಂತೆ.
ಅವರ ಹೊಳೆಹೊಳೆವರಳು ಕಂಗಳನು ಅಳುಕದೆಯೆ
ದಿಟ್ಟಿಸಲು ಅವನಾದನಸಮರ್ಥನು !
ಅವರು ಚಪ್ಪಾಳೆ ತಟ್ಟಿ ಗಹಗಹಿಸಿ ನಗುವುದನು
ಕಂಡು ಖತಿಗೊಂಡು ಬಲು ಕುಸಿದನವನು !
ಗೊನೆಯನ್ನು ಕಡಿಯಲ್ಕೆ ಅವನು ಕತ್ತಿಯನೆತ್ತೆ
ಬಲಗುಂದಿ ಬಳಲಿದವು ಕೈಗಳೆರಡೂ...



ಕರಿಯ ನೀಲಿಗೆ ಕೊಟ್ಟನೊಂದು ಸಿಹಿಮುತ್ತನು
ಎದೆತುಂಬಿ ತುಳುಕುತಿಹ ಮುದದೊಂದಿಗೆ,
ನೀಲಿಗರಿಯದೆ ಅವಳ ತುಟಿಗಳೆಡೆಯಿಂದುದುರಿ-
ಹರಡಿತಲ್ಲಲ್ಲೆಡೆಯು ಬಿಳಿಮಲ್ಲಿಗೆ...

ನಿಶ್ಶಬ್ದ ಬಿಕ್ಕಿದನು ಮಲಯ, ಹನಿಹನಿಯಾಗಿ
ಉದುರಿತ್ತು ಅವನ ಕಂಬನಿ ಮಣ್ಣಿಗೆ
ಇನಿತು ಮಿಸುಕಾಡದೆಯೆ ಸನಿಹದಲು, ದೂರದಲು
ನಿಂತಿಹವು ಅಸಮರ್ಥ ಮರಗಿಡಗಳು !
ಮುದದಿಂದ ಮಾದೇವ ಕೇಲನಾ ಭುಜದಲ್ಲಿ
ತಾಳವನು ಬಾರಿಸುತ ನಿಂತಿರುವನು !
ಕ್ಷಣ ಕ್ಷಣವು ಮಿರ ಮಿರನೆ ಬೆಳಗುತಿದೆ ಕೇಲನಾ
ಬೊಗಸೆ ಕಣ್ಣುಗಳಲ್ಲಿ ಹರುಷ ಕಿರಣ !

ಕತ್ತಲೆಯು ಕವಿಯುತಿದೆ ಕಣ್ಣಲ್ಲಿ ಮಲಯನಿಗೆ
ಕಾಲುಗಳು ಎಡವುತಿವೆ- ಏನು ಮಾಡುವನೊ ?...
ಕತ್ತಲೆಯು ಕರಗುತಿಹುದೆದುರಿನೋಕುಳಿಯಲ್ಲಿ
ಬೀಸುತಿದೆ ಮೋಸ ಹಬ್ಬಿಸುವ ಗಾಳಿ !....

ಬಿಕ್ಕುತ್ತ ಅಳುತಿಹಳು ಆಳಗಿ ಗುಡಿಸಲಿನೊಳಗೆ
ಏನು ಕಾರಣವೊ ಈ ತಳಮಳಕ್ಕೆ ?

ಗೊನೆ ಕಡಿದ ! ಹಂಬಲಿಸಿ ಹಂಬಲಿಸಿ ಲಾಲಿಸಿದ
ಕೌತುಕದ ಹಚ್ಚನೆಯ ಕತ್ತು ಕಡಿದ –
ಗೊನೆ ಕಡಿದ ! – ಶೈಶವದ ಮುದ ಪಾರಿವಾಳದಾ
ತಣ್ಣಗಿನ ನುಣ್ಣನೆಯ ಕತ್ತು ಕಡಿದ !
ಗರಗರನೆ ಚಪ್ಪಾಳೆ ತಟ್ಟಿ ಕುಣಿದಾಡಿದರು
ಹರ್ಷ ಪುಳಕಿತರಾಗಿ ಆ ಮಕ್ಕಳು !

ಪ್ರೇತದ್ದೋ ಎಂಬಂತೆ ಬಿಳುಚಿಬಿಟ್ಟಿದೆ ಪೂರ್ತಿ
ಮಲಯಹೊಲೆಯನ ರಕ್ತರಹಿತ ಮೋರೆ !
ಗೊನೆಯನ್ನು ಹೆಗಲಿಗೇರಿಸಿ ನಿಂತುಬಿಟ್ಟನವ
ಪ್ರತಿಮೆಯೊಂದರ ಹಾಗೆ ಬಹಳ ಹೊತ್ತು !

ಇದು ತೀರ ಅನ್ಯಾಯ ಅತಿಘೋರ ಅಪಚಾರ
ಕನಸಿನಲು ಕಲ್ಪಿಸದ ಸಿಡಿಲ ಹೊಡೆತ !
ಕಪಟವೇನೆಂಬುದೇ ಗೊತ್ತಿರದ ಹಸುಳೆಗಳು,
ದಯೆಯಿರದ ಈ ಲೋಕ ಕಪಟಲೋಕ !
ಸ್ವಾರ್ಥ ಸೋಂಕದ ಸೇವೆ, ಮಾಡಿದವರಿಗೆ ನೋವೆ !
ಸ್ವಾರ್ಥಿಗಳ ಕೊಡುಗೆಯೋ ನಿತ್ಯ ದುಃಖ !
ಇವಕ್ಕೆಲ್ಲ ಪ್ರತಿಕಾರ ತೀರಿಸದೆ ವಿರಮಿಸರು
ಶೋಷಿತರೆ, ನಿಮ್ಮ ಮುಂದಿನ ಪೀಳಿಗೆ !
ಧ್ವನಿ ಹೊರಡುತ್ತಿಲ್ಲವಗೆ, ಹೊಡೆದುಕೊಳುತಿದೆ ಹೃದಯ
ಬಲು ರಭಸವಾಗಿ ಬಲುಗಟ್ಟಿಯಾಗಿ !
ಬಿಕ್ಕಳಿಕೆ ಹಿಸುಕಿರುವ ಕೆಲವು ನುಡಿಗಳು ಹೇಗೋ
ನುಗ್ಗಿದವು ಅವನಿಂದ ಹೊರಗೆ ಹೀಗೆ–
"ಅಳಬೇಡಿ ಮಕ್ಕಳೇ... ಒಡೆಯದಿರ ಅಪ್ಪಣೆ...
ಬೇರೊಂದು ಬಾಳೆಯನು...ನಾ...ಒಯ್ಯಲೇ !"

ಮಲಯ ನಡೆದನು–ನಡೆಯುತಿಹುದು
ಗುಡಿಸಲಿನೊಳಗೆ
ಅಳು, ಬೊಬ್ಬೆ, ಗೋಳಾಟ ತಡೆಯಿಲ್ಲದೆ !
ದುರ್ಬಲರು, ದುಃಖಿತರು, ಆಸರೆಯೆ ಇರದವರು
ಅವರ ಸಂಕಷ್ಟಗಳ ಅರಿವರಾರು ?
ಮೇಲ್ವರ್ಗ ಹೇರಿರುವ ಈ ನಿಯಮಗಳ ಬಗ್ಗೆ
ಏನೆನ್ನುವಿರಿ ? ಇನ್ನು ವಿರಮಿಸುವೆನು !

---

ಅನುವಾದ : ಕೆ. ಕೆ. ನಾಯರ್

ಎಂ.ಐ.ಜಿ. ನಂ. ೧೨೬, ಹುಡ್ಕೊ ಕಾಲೊನಿ,
ಮಣಿಪಾಲ - ೫೭೬ ೧೦೪





ಹಾದಿಯಲ್ಲಿ ಚಾರಣಿಗ



[illegible]



ಚಾರಣದ ಹಾದಿಯಲ್ಲಿ



[illegible]

# ಹಿಮಾಲಯ ಚಾರಣ ಒಂದು ಮಾರ್ಗದರ್ಶಿ

**ಜ**ಗತ್ತಿನ ಅಚ್ಚರಿಗಳಲ್ಲೊಂದು ಎನಿಸಿರುವ ಹಿಮಾಲಯ ಕೇವಲ ಪರ್ವತಗಳ ಸಾಲು ಮಾತ್ರವಲ್ಲ. ಹಿಮಾಲಯದ ಅಗಾಧತೆ, ಭವ್ಯತೆಯ ಸೌಂದರ್ಯಕ್ಕೆ ಬೇರೆ ಹೋಲಿಕೆಯೇ ಇಲ್ಲ. ಹಿಮಾಲಯಕ್ಕೆ ಹಿಮಾಲಯವೇ ಸಾಟಿ. ಹಿಮಾಲಯಕ್ಕೆ ಉಪಮೆಯನ್ನು ಹುಡುಕಲು ಕಾಳಿದಾಸನಂತಹ ಕವಿಗೇ ಸಾಧ್ಯವಾಗಿಲ್ಲ ಎಂಬ ಉಕ್ತಿಯೂ ಉಂಟು. ಹಿಮಾಲಯವು ನಿಸರ್ಗ ರಮಣೀಯತೆಯ ಆಗರ. ನಮ್ಮ ಸಂಸ್ಕೃತಿಯ ಸಮೃದ್ಧಿಯ ಸಂಕೇತ. ಹಲವು ಕುತೂಹಲಗಳನ್ನು ಒಳಗೊಂಡು ರಸಿಕರನ್ನೂ, ವಿಜ್ಞಾನಿಗಳನ್ನೂ ಕಾಡುವ ಹಿಮಾಲಯವು ಒಗಟು, ವಿಸ್ಮಯಗಳ ಹಂದರವಾಗಿದೆ.

ಇತ್ತೀಚಿನ ದಿನಗಳಲ್ಲಿ ಹಿಮಾಲಯ ಯಾತ್ರೆ, ಪ್ರವಾಸ, ಚಾರಣ, ಪರ್ವತಾರೋಹಣಕ್ಕಾಗಿ ಹೋಗುವವರ ಸಂಖ್ಯೆ ಹೆಚ್ಚಾಗಿದೆ. ಪ್ರತಿಯೊಬ್ಬನಿಗೂ ನಗರ ಜೀವನದ ಬದುಕು ಎಷ್ಟೇ ಪ್ರಿಯವಾಗಿದ್ದು, ಹಲವು ಸವಲತ್ತುಗಳಿಂದ ಕೂಡಿದ್ದರೂ, ಪ್ರಕೃತಿಯ ಮಡಿಲಲ್ಲಿ ತನ್ನೆಲ್ಲ ಕಷ್ಟ ಕೋಟಲೆಗಳನ್ನು ಮರೆಯುತ್ತಾನೆ.

ಚಾರಣ ಇದು ಸಂಸ್ಕೃತ ಪದ. ಇದಕ್ಕೆ ತಿರುಗಾಟ, ಸಂಚಾರ, ಚಲನೆ ಇತ್ಯಾದಿ ಅರ್ಥಗಳಿವೆ. ಪ್ರಸ್ತುತ trekking ಎಂಬ ಆಂಗ್ಲ ಪದವನ್ನು ಇದಕ್ಕೆ ಸಂವಾದಿಯಾಗಿ ಬಳಸಲಾಗುತ್ತಿದೆ. ಇದು ಬೆಟ್ಟ, ಕಾಡು, ಮರಳುಗಾಡುಗಳಲ್ಲಿ ತಿರುಗಾಡುವುದು ಎಂಬ ಅರ್ಥ ವಿಸ್ತಾರವನ್ನು ಪಡೆದಿದೆ. ಹಿಮಾಲಯದ ಚಾರಣ ಕ್ರಮದಲ್ಲಿ ಸಾಮಾನ್ಯವಾಗಿ ಎರಡು ವಿಧ : ಕಡಿಮೆ ಎತ್ತರ ಪ್ರದೇಶದ ಚಾರಣ ಮತ್ತು ಹೆಚ್ಚು ಎತ್ತರ ಪ್ರದೇಶದ ಚಾರಣ.

**ಕಡಿಮೆ ಎತ್ತರ ಪ್ರದೇಶದಲ್ಲಿ ಚಾರಣ (low altitude trekking) :** ಈ ಪ್ರದೇಶವು ಜನವಸತಿಯಿಂದ ಕೂಡಿದ್ದು, ಸಮುದ್ರ ಮಟ್ಟದಿಂದ ಸುಮಾರು ೧೫,೦೦೦ ಅಡಿಗೂ ಕಡಿಮೆ ಎತ್ತರದ ಪ್ರದೇಶವಾಗಿದೆ. ಇಂತಹ ಪ್ರದೇಶದಲ್ಲಿ ಚಾರಣ ಮಾಡಲು ತೊಂದರೆ ಇಲ್ಲ. ಆದರೂ ಕೆಲವು ಪ್ರದೇಶಗಳಲ್ಲಿ ನಡೆಯಲು ದೈಹಿಕ ಹಾಗೂ ಮಾನಸಿಕ ಸಾಮರ್ಥ್ಯದ ಅಗತ್ಯವಿದೆ. ಊಟ-ವಸತಿಗಳಿಗಾಗಿ ಹೆಚ್ಚಿನ ಸಾಮಗ್ರಿಗಳನ್ನು ತೆಗೆದುಕೊಂಡು ಹೋಗುವ ಅವಶ್ಯಕತೆ ಇಲ್ಲ. ಈ ಪ್ರದೇಶದಲ್ಲಿ ಚಾರಣ ಮಾಡಲು ೧೦ ವರ್ಷ ವಯಸ್ಸಿನ ಹುಡುಗರಿಂದ ೭೦ಕ್ಕೂ ಹೆಚ್ಚು ವಯಸ್ಸಿನವರು ಹೋಗುತ್ತಾರೆ.

ಚಾರಣದಲ್ಲಿ ನಾವೇ ಎಲ್ಲಾ ತಯಾರಿಮಾಡಿಕೊಂಡು ಹೋಗುವುದು ಒಂದಾದರೆ, ಇನ್ನು ಕೆಲವು ಪ್ರದೇಶದಲ್ಲಿ ಚಾರಣವನ್ನು ಸಂಘ ಸಂಸ್ಥೆಗಳೇ ಯೋಜಿಸಿರುತ್ತವೆ. ವೈಯಕ್ತಿಕವಾಗಿ ಕೆಲವು ಸಾಮಗ್ರಿಗಳನ್ನು ತೆಗೆದುಕೊಂಡರೆ ಸಾಕು. ಉಳಿದೆಲ್ಲಾ ವಿಚಾರವನ್ನು ಸಂಸ್ಥೆಗಳೇ ನೋಡಿಕೊಳ್ಳುತ್ತವೆ. ಅವರು ನಿಗದಿಪಡಿಸಿದ ಹಣ ಕೊಟ್ಟರಾಯಿತು.

**ಹೆಚ್ಚು ಎತ್ತರ ಪ್ರದೇಶದಲ್ಲಿ ಚಾರಣ (high altitude trekking) :** ಈ ಪ್ರದೇಶವು ಸಮುದ್ರ ಮಟ್ಟದಿಂದ ೧೫,೦೦೦ ಅಡಿಗೂ ಎತ್ತರ ಪ್ರದೇಶವಾಗಿರುತ್ತದೆ. ಈ ಪ್ರದೇಶದಲ್ಲಿ ಜನ ವಸತಿ ಇರುವುದಿಲ್ಲ ಹಾಗೂ ಹವಾಮಾನ ವೈಪರೀತ್ಯವನ್ನು ಎದುರಿಸಬೇಕಾಗುತ್ತದೆ. ಚಾರಣ ಸಮಯದಲ್ಲಿ ಹಿಮದ ಮೇಲೆ, ನೀರ್ಗಲ್ಲ ಮೇಲೆ, ಪರ್ವತ ಕಣಿವೆಗಳ ಮಧ್ಯೆ ಹಾದು ಹೋಗುವುದು ಇದರಿಂದಾಗಿ ದುರ್ಗಮವಾದ ಹಾದಿಯಲ್ಲಿ ಚಲಿಸಬೇಕಾಗುತ್ತದೆ. ಬೆಚ್ಚನೆಯ ಉಡುಪುಗಳು, ಪರ್ವತಾರೋಹಣ ಸಾಮಗ್ರಿಗಳೂ ಮತ್ತು ಸ್ವಲ್ಪ ಚಾರಣಾನು ಭವವೂ ಬೇಕಾಗುತ್ತದೆ. ಈ ಪ್ರದೇಶದಲ್ಲಿ ಯಾವುದೇ ಸೌಲಭ್ಯಗಳು ಅಲಭ್ಯವಾದ ಕಾರಣ, ಊಟ ವಸತಿ ಇತ್ಯಾದಿ ಸಾಮಗ್ರಿಗಳನ್ನು ನಾವೇ ಬೆನ್ನ ಮೇಲೆ ಹೊತ್ತು ನಡೆಯಬೇಕು. ಈ ಪ್ರದೇಶವು ಹಿಮರೇಖೆಗಿಂತ ಮೇಲ್ಪಟ್ಟದ್ದಾಗಿದ್ದು, ಈ ಪ್ರದೇಶದಲ್ಲಿ ಚಾರಣ ಕೈಗೊಳ್ಳುವಾಗ ವಿಶೇಷ ತಯಾರಿ ಬೇಕಾಗುತ್ತದೆ.

ಹಿಮಾಲಯ ಪರ್ವತ ಶ್ರೇಣಿಯ ಸೃಷ್ಟಿಯ ಬಗ್ಗೆ ಭೂ ವಿಜ್ಞಾನಿಗಳು ಮುಖ್ಯವಾಗಿ ಎರಡು ವಾದಗಳನ್ನು ಮಂಡಿಸುತ್ತಾರೆ. ಮೊದಲನೆಯದಾಗಿ, ಹಿಮಾಲಯ ಪರ್ವತ ಶ್ರೇಣಿಯು ಇರುವ ಜಾಗದಲ್ಲಿ ಸುಮಾರು ೧,೨೦೦ ಮಿಲಿಯನ್ ವರ್ಷಗಳಿಗೂ ಹಿಂದೆ ತುಂಬಾ

— ಜೆ. ಕೆ. ದೇವರಾಜಸ್ವಾಮಿ —

ಆಳವಾದ ತಗ್ಗಾದ ಪ್ರದೇಶವಿತ್ತು. ಇದನ್ನು ಥೇತಿಸ್ ಸಾಗರವೆಂದು ಕರೆದಿದ್ದಾರೆ. ಈ ತಗ್ಗು ಪ್ರದೇಶದಲ್ಲಿ ನದಿಗಳು ಹಲವು ಮಿಲಿಯ ವರ್ಷಗಳಿಂದ ಮಣ್ಣು, ಕಲ್ಲುಗಳನ್ನು ತುಂಬುತ್ತಾ ಬಂದು ಒಳ ಒತ್ತಡದಿಂದ ಸುಮಾರು ೬೫ ಮಿಲಿಯನ್ ವರ್ಷಗಳ ಹಿಂದೆ ಹಿಮಾಲಯವು ಈಗಿರುವ ರೂಪ ಪಡೆದಿದೆ. ಥೇತಿಸ್ ಸಮುದ್ರದ ಜಲ ಶಿಲೆಗಳೇ ಮಡಿಕೆಯಾಗಿ ಹಿಮಾಲಯದ ರಚನೆಯಾಗಿದೆ ಎಂಬ ವಾದ ಇದು. ಮತ್ತೊಂದು ಖಂಡಾಂತರ ಚಲನೆ. ಹಲವು ಮಿಲಿಯ ವರ್ಷಗಳ ಹಿಂದೆ ಒಟ್ಟಾಗಿದ್ದ ಈಗಿನ ಪ್ರಪಂಚದ ಭೂ ಭಾಗಗಳು ವಿಭಾಗವಾಯಿತೆಂದೂ, ಅದರಲ್ಲಿ ಉತ್ತರ ಅಮೆರಿಕಾ, ಗ್ರೀನ್‌ಲ್ಯಾಂಡ್ ಮತ್ತು ಯುರೇಷಿಯಾ ಖಂಡ ಭಾಗವು ಉತ್ತರದತ್ತ ಚಲಿಸಿರುವುದನ್ನು **ಲಾರೇಷಿಯಾ** ಎಂದು ಕರೆಯಲಾಗಿದೆ. ದಕ್ಷಿಣ ಅಮೆರಿಕಾ, ಆಫ್ರಿಕ, ಅಂಟಾರ್ಟಿಕಾ, ಇಂಡಿಯಾ, ಆಸ್ಟ್ರೇಲಿಯಾ ಖಂಡ ಭಾಗಗಳು ದಕ್ಷಿಣದತ್ತ ಚಲಿಸಿರುವುದನ್ನು **ಗೊಂಡ್ವಾನ** ಎಂದು ಕರೆಯಲಾಗಿದೆ. ಈ ಭೂಖಂಡಗಳ ಅಲೆಮಾರಿ ಅಲೆತದಲ್ಲಿ ಒಂದಕ್ಕೊಂದು ಡಿಕ್ಕಿ ಹೊಡೆದು, ಇಂಡಿಯನ್ ಪ್ಲೇಟ್ ಮತ್ತು ಯುರೇಷಿಯನ್ ಪ್ಲೇಟ್ ಅಪ್ಪಳಿಸಿದ ಹೊಡೆತದ ಪರಿಣಾಮಕ್ಕೆ ಭೂಪದರವು ಮುದುಡಿ ಎದ್ದು ಬೆಳೆದು ಹಿಮಾಲಯದ ರಚನೆಗೆ ಕಾರಣವಾಯಿತೆಂಬ ವಾದವಿದೆ. ಮಿಲಿಯಾಂತರ ವರ್ಷಗಳ ಹಿಂದೆ ಇಷ್ಟೆಲ್ಲಾ ಅದ್ಭುತಗಳು ನಡೆದು ಹಿಮಾಲಯದ ರಚನೆಗೆ ಕಾರಣವಾಗಿದ್ದರೂ, ಹಿಮಾಲಯವು ಪ್ರಪಂಚದಲ್ಲಿ 'ಅತ್ಯಂತ ಕಿರಿಯ ಪರ್ವತ ಶ್ರೇಣಿ'.



ಹಿಮಾಲಯದ ಸೃಷ್ಟಿ ಪ್ರಕ್ರಿಯೆಯಲ್ಲಿ ಹಿಮಪರ್ವತಗಳ ಶ್ರೇಣಿಯ ದಕ್ಷಿಣಭಾಗದಲ್ಲಿ ರೂಪಗೊಂಡು ರಚಿತವಾದ ಪರ್ವತ ಶ್ರೇಣಿಗಳೇ **ಶಿವಾಲಿಕ್ ಪರ್ವತ ಶ್ರೇಣಿ**. ಈ ರಚನೆಗೆ ಕಾರಣವೇನೆಂದರೆ, ದಕ್ಷಿಣ ಭಾಗದಲ್ಲಿ ತಗ್ಗಾದ ಪ್ರದೇಶಗಳಿದ್ದು, ಉತ್ತರದಲ್ಲಿದ್ದ ಪರ್ವತ ಶ್ರೇಣಿಗಳಿಂದ ಹರಿದು ಬರುತ್ತಿದ್ದ ನದಿಗಳು ಕಲ್ಲು, ಬಂಡೆ, ಮೆಕ್ಕಲುಮಣ್ಣು ಮುಂತಾದ ಸಾಮಗ್ರಿಗಳನ್ನು ಸಾಗಿಸಿಕೊಂಡು ದಕ್ಷಿಣದ ತಪ್ಪಲಿನ ತಗ್ಗಿನ ಪ್ರದೇಶದಲ್ಲಿ ರಾಶಿ ಹಾಕುತ್ತಿದ್ದವು. ಇವುಗಳಿಂದ ರೂಪಗೊಂಡಿರುವ ಮಿಲಿಯಾಂತರ ವರ್ಷಗಳ ಈ ಕ್ರಿಯೆಯಲ್ಲಿ ರಚನೆಯಾದ ಪರ್ವತಗಳೇ 'ಶಿವಾಲಿಕ್' ಶಿಲಾಸ್ತೋಮಗಳು. ಹರಿದ್ವಾರದ ಸಮೀಪ ಶಿವಾಲಿಕ್ ಬೆಟ್ಟಗಳಲ್ಲಿ ಮೊದಲು ಇದನ್ನು ಗುರುತಿಸಿರುವುದರಿಂದ ಈ ಹೆಸರು ಬಂದಿದೆ. ಶಿವಾಲಿಕ್ ಪರ್ವತ ಶ್ರೇಣಿಯು ಜೀವ ಅವಶೇಷಗಳ ಅಧ್ಯಯನಕ್ಕೊಂದು ಪ್ರಯೋಗಶಾಲೆಯಂತಿದೆ.



ಹಿಮಾಲಯದ ಪರ್ವತ ಶ್ರೇಣಿಯಷ್ಟು ಉದ್ದವಾದ ಹಾಗೂ ಎತ್ತರವಾದ ಪರ್ವತ ಶ್ರೇಣಿಗಳು ಜಗತ್ತಿನಲ್ಲಿ ಎಲ್ಲೂ ಇಲ್ಲವೆನ್ನಬಹುದು. ಈ ಪರ್ವತಾವಳಿಯು ಪೂರ್ವ-ಪಶ್ಚಿಮವಾಗಿ ಸುಮಾರು ೨,೫೦೦ ಕಿಲೋಮೀಟರ್‌ಗಳಷ್ಟು, ಅಂದರೆ ಸಿಂಧೂ ಕಣಿವೆಯಿಂದ ಪೂರ್ವದ ಬ್ರಹ್ಮಪುತ್ರ ನದಿ ದಂಡೆವರೆಗೆ ಹಾಗೂ ಉತ್ತರ-ದಕ್ಷಿಣವಾಗಿ ಸುಮಾರು ೨೦೦ರಿಂದ ४೨೫ ಕಿಲೋಮೀಟರ್‌ಗಳಷ್ಟು. ಅಂದರೆ ದಕ್ಷಿಣ ಏಷ್ಯಾ ಹಾಗೂ ಚೀನಾ ದೇಶದ ನಡುವೆ ನಿಸರ್ಗವೇ ನಿರ್ಮಿಸಿದ ಅಭೇದ್ಯ ಕೋಟೆಯಾಗಿದೆ. ಪ್ರಪಂಚ ವಿಖ್ಯಾತ 'ಆಲ್ಪ್ಸ್' ಪರ್ವತ ಶ್ರೇಣಿಯ ಉದ್ದ ಇದರ ಅರ್ಧದಷ್ಟು ಮಾತ್ರ. ಮತ್ತು ಐರೋಪ್ಯ ಜಗತ್ತಿನ ಎತ್ತರವಾದ ಪ್ರಸಿದ್ಧ ಪರ್ವತ 'ಮಾಂಟೆರ್ ಹಾರ್ನ್'ಗಿಂತ ಹಿಮಾಲಯದ ಎವರೆಸ್ಟ್ ಪರ್ವತ ಎರಡುಪಟ್ಟು ಎತ್ತರವಾಗಿದೆ. ಜಗತ್ತಿನ ಅತ್ಯಂತ ಎತ್ತರದ ೨೦ಕ್ಕೂ ಹೆಚ್ಚು ಪರ್ವತಗಳು (ಸಮುದ್ರಮಟ್ಟದಿಂದ ೨೫,೦೦೦ ಅಡಿ ಮೇಲ್ಪಟ್ಟು) ಹಿಮಾಲಯದಲ್ಲಿವೆ. ಹಾಗೂ ೨೩,೦೦೦ ಅಡಿಗೂ ಹೆಚ್ಚು ಎತ್ತರವಿರುವ ಪರ್ವತಗಳು ಸುಮಾರು ೩೦೦ ಇದೆ ಎಂದು ಅಂದಾಜಿಸಲಾಗಿದೆ.



ಹಿಮಾಲಯ ಪ್ರದೇಶದಲ್ಲಿ ಸಮುದ್ರ ಮಟ್ಟದಿಂದ ಸುಮಾರು ೧೫,೦೦೦ ಅಡಿಗೂ ಹೆಚ್ಚು ಎತ್ತರ ಪ್ರದೇಶದವರೆಗೆ ಕಾಲ್ನಡಿಗೆಯಿಂದ ಹೆಚ್ಚು ಎತ್ತರದಲ್ಲಿ, ಬೆಟ್ಟಗುಡ್ಡ, ನದಿ, ಹಳ್ಳ ಕೊಳ್ಳಗಳ ಮುಖಾಂತರ ಮತ್ತು ಹಿಮದ ಮೇಲೆ, ಕೆಲವೊಮ್ಮೆ ಹಿಮಗಡ್ಡೆಯ ಮೇಲೆ ಚಲಿಸಿ ನಿಶ್ಚಿತ ಪ್ರದೇಶ ತಲುಪುವುದನ್ನು ಹೈ ಆಲ್ಟಿಟ್ಯೂಡ್ ಟ್ರೆಕ್ಕಿಂಗ್ (ಚಾರಣ)ಎಂದೂ, ಅದಕ್ಕಿಂತಲೂ ಎತ್ತರವಾದ ಹಿಮಾವೃತ ಪರ್ವತದ ಮೇಲೆ ಹೋಗುವುದು, ಶಿಖರವೇರು ವುದನ್ನು ಪರ್ವತಾರೋಹಣವೆನ್ನುತ್ತೇವೆ. ಚಾರಣಕ್ಕೆ ಕೆಲವು ಉಪಕರಣಗಳು ಸಾಕಾದರೆ, ಪರ್ವತಾರೋಹಣಕ್ಕೆ ವಿಶೇಷವಾದ ತರಬೇತಿ, ಅನುಮತಿ, ಸಿದ್ಧತೆ, ಪರ್ವತಾರೋಹಣ ಉಪಕರಣಗಳು ಬೇಕೇ ಬೇಕು.



ಚಾರಣದಲ್ಲಿ ನಡೆಯುವುದೇ ಮುಖ್ಯವಾದ್ದರಿಂದ ಕಾಲಿನ ರಕ್ಷಣೆ ಮುಖ್ಯ. ಅದಕ್ಕಾಗಿ ಕ್ಯಾನ್‌ವಾಸ್ ಶೂ ಅಥವಾ ಹಂಟರ್ ಶೂಗಳನ್ನು ಬಳಸಬಹುದು. ಶೂನಲ್ಲಿರುವ ಸೋಲ್ ಸಾಕಷ್ಟು ಗ್ರಿಪ್ ಹೊಂದಿರಬೇಕು. ಬೆಟ್ಟ ಹತ್ತಿಳಿಯುವಾಗ, ಹಿಮದ ಮೇಲೆ ಹಾಗೂ ಜೌಗು ಪ್ರದೇಶದಲ್ಲಿ ನಡೆಯುವಾಗ ಶೂ ಬಹಳ ಮುಖ್ಯ. ಹೊರಡುವ ಮುನ್ನ ಹೊಸ ಶೂ ತೆಗೆದುಕೊಂಡು ಹೋದಲ್ಲಿ ಹಲವಾರು ಸಮಸ್ಯೆಗಳು ಉದ್ಭವಿಸುತ್ತವೆ. ಒಂದು ತಿಂಗಳು ಮೊದಲಿನಿಂದಲೇ ಆ ಶೂ ಹಾಕಿಕೊಂಡು ಅಭ್ಯಾಸ ಮಾಡುವುದು ಕ್ಷೇಮ. ಉಲ್ಲನ್ ಗ್ಲೌಸ್, ಮಂಕಿಕ್ಯಾಪ್ (ಬಾಲಕ್ಲವ), ಮಫ್ಲರ್, ಸ್ಕಾರ್ಫ್, ಕಪ್ಪು ಕೂಲಿಂಗ್ ಗ್ಲಾಸ್ ಇದು ಕಣ್ಣಿನ

ಬದಿಗಳಲ್ಲಿ ಸಂಪೂರ್ಣ ಮುಚ್ಚುವ ರೀತಿಯಲ್ಲಿರಬೇಕು. ಏಕೆಂದರೆ ಹಿಮದ ಮೇಲೆ ಬೀಳುವ ಅಲ್ಟ್ರಾವಯಲೆಟ್ ಕಿರಣಗಳು ಪ್ರತಿಫಲಿಸುವುದರಿಂದ ಕಣ್ಣಿಗೆ ರಕ್ಷಣೆ ಬಹಳ ಮುಖ್ಯ.

ಹಿಮಾಲಯದಲ್ಲಿ ರಾತ್ರಿ ಹೊತ್ತು ಮಲಗುವಾಗ ಸ್ಲೀಪಿಂಗ್ ಬ್ಯಾಗ್ ಇದು ಅವಶ್ಯಕ. ಇದು ಚೀಲದಂತಿದ್ದು, ದೇಹದ ಉದ್ದಕ್ಕೆ ಸರಿಯಾಗಿರುವುದು ದೊರೆಯುತ್ತದೆ. ಇದರಲ್ಲಿ ಮಲಗುವಾಗ ಕಾಲು ನಂತರ ದೇಹವನ್ನು ಬ್ಯಾಗ್‌ನಲ್ಲಿ ತೂರಿಸಿ ನಂತರ ಮೇಲ್ಭಾಗದ ಜಿಪ್‌ನ್ನು ಎಳೆದರೆ ದೇಹವು ಸಂಪೂರ್ಣ ಬ್ಯಾಗ್ ಒಳಭಾಗದಲ್ಲಿ ಸೇರಿರುತ್ತದೆ ಮತ್ತು ದೇಹವನ್ನು ಥಂಡಿಯಿಂದ ರಕ್ಷಿಸುತ್ತದೆ. ಇದು ಫೆದರ್ ಜಾಕೇಟಿನಂತೆಯೇ ಮಾಡಲ್ಪಟ್ಟಿದ್ದು, ಈಗೀಗ ಅತ್ಯುತ್ತಮ ಮಟ್ಟದ, ಮಡಿಚಿದರೆ ಕ್ಯಾಶ್ ಬ್ಯಾಗ್‌ನಷ್ಟು ಚಿಕ್ಕದಾದ ಸ್ಲೀಪಿಂಗ್ ಬ್ಯಾಗ್ ಹಾಗೂ ಫೆದರ್ ಜಾಕೇಟ್‌ಗಳು ಮಾರುಕಟ್ಟೆಯಲ್ಲಿ ದೊರೆತರೂ ಸಾಮಾನ್ಯನಿಗೆ ಕೈಗೆ ಎಟುಕುವುದಿಲ್ಲ.

ಚಾರಣದಲ್ಲಿ ಬಳಸುವ ಹಗ್ಗವೂ ಮುಖ್ಯ. ಇದು ನೈಲಾನ್‌ನಿಂದ ಮಾಡಲಾಗಿದ್ದು ಅದರ ಸುತ್ತಲೂ ಹತ್ತಿ ದಾರದಿಂದ ಅತಿ ನಾಜೂಕಾಗಿ ನೇಯ್ಗೆ ಮಾಡಿರುತ್ತಾರೆ. ನೈಲಾನ್ ಇದೆ ಎಂಬುದೇ ತಿಳಿಯುವುದಿಲ್ಲ. ಇದರಲ್ಲಿ ಬೇರೆ ಬೇರೆ ದಪ್ಪ ಹಾಗೂ ಉದ್ದವಾದ ಹಗ್ಗಗಳು ನಮ್ಮ ಅನುಕೂಲಕ್ಕೆ ತಕ್ಕಂತೆ ದೊರೆಯುತ್ತವೆ. ಇದನ್ನು ಸಾಹಸ ಕ್ರೀಡೆಗಳಿಗಾಗಿಯೇ ತಯಾರಿಸಲಾಗುತ್ತದೆ. ಇತ್ತೀಚೆಗೆ ಭಾರತದಲ್ಲೂ ತಯಾರಿಸಲಾಗುತ್ತಿದೆ. ಚಾರಣದ ಸಮಯದಲ್ಲಿ ಕೆಲವೊಮ್ಮೆ ನದಿದಾಟಲು, ಹಿಮದ ಮೇಲೆ ನಡೆಯಲು, ಕೆಲವೆಡೆ ಬೆಟ್ಟ ಹತ್ತುವಾಗ, ಇಳಿಯುವಾಗ ಹಗ್ಗವನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳಬೇಕಾಗುತ್ತದೆ.

ಔಷಧಿ ಸಾಮಗ್ರಿಗಳು ಚಾರಣದಲ್ಲಿ ಬಹಳ ಮುಖ್ಯ. ವೈಯಕ್ತಿಕವಾಗಿ ಸದಸ್ಯರು ತಾವು ದಿನಾ ತೆಗದುಕೊಳ್ಳುವಂತಹ ಔಷಧಿಗಳನ್ನು ಹೊರಡುವ ಮೊದಲು, ಚಾರಣ ದಿನಗಳಿಗೆ ಬೇಕಾಗುವುದಕ್ಕಿಂತ ಹೆಚ್ಚಿನದಾಗಿಯೇ ತೆಗೆದು ಸಿದ್ಧಪಡಿಸಿಕೊಂಡಿರಬೇಕು. ನಾಯಕನ ಗಮನಕ್ಕೂ ತಂದಿರಬೇಕು.

ಕರ್ನಾಟಕದವರು ಹಿಮಾಲಯ ಚಾರಣ ಮಾಡುವಾಗ ಸಾಮಾನ್ಯವಾಗಿ ದೆಹಲಿಯನ್ನು ತಲುಪಲೇಬೇಕು. ಅಲ್ಲಿಗೆ ತಲುಪಿದ ನಂತರ ಅಲ್ಲಿ Indian Mountaineering Foundation (IMF)ಗೆ ಹೋಗಿ, ಬಾಡಿಗೆ ವಸ್ತು, ಸದಸ್ಯರ ಅನುಮತಿ, ಇತ್ಯಾದಿ ಕೆಲಸಗಳಿಗೆ ನಾಯಕ ಹಾಗೂ ಒಂದೆರಡು ಸದಸ್ಯರು ಅಲ್ಲಿಗೆ ಹೋದರೆ ಸಾಕು. ಉಳಿದ ಸದಸ್ಯರು, ನಿಗದಿತ ನಿಲ್ದಾಣದಲ್ಲಿ ಲಗ್ಗೇಜ್‌ನೊಂದಿಗಿರಬಹುದು. ಇಂಥ ಸ್ಥಳದಲ್ಲಿ ಊಟ, ತಿಂಡಿಗೆ, ತಂಡ ತಂಡವಾಗಿ ಮಾಡಿಕೊಂಡು ಹೋಗುವುದರಿಂದ ಉಳಿದವರು ಲಗ್ಗೇಜ್ ನೋಡಿಕೊಳ್ಳಬಹುದು. ನಂತರದಲ್ಲಿ ನಮ್ಮ ಚಾರಣ ಪ್ರದೇಶದ ಸಮೀಪದ ಪಟ್ಟಣವನ್ನು ಸೇರುವುದು. ಒಂದು ದಿನವಿರುವ ಹಾಗೆ ಇಲ್ಲಿ ಸಮಯ ಹೊಂದಿಸಿಕೊಂಡಿದ್ದರೆ ಒಳ್ಳೆಯದು. ಪರ್ವತಗಳಲ್ಲಿ ಪೆಟ್ಟಿಗೆ ಹೊತ್ತು ನಡೆಯುವ ಪೋರ್ಟರ್(ಕೂಲಿ)ಗಳು ಸಾಮಾನ್ಯವಾಗಿ ಶೆರ್ಪಾ ಜನಾಂಗಕ್ಕೆ ಸೇರಿದವರಾಗಿರುತ್ತಾರೆ. ಅವರನ್ನು ಸಂಪರ್ಕಿಸಿ ನಮಗೆ ಎಷ್ಟು ಜನ ಪೋರ್ಟರ್ ಬೇಕು ಎಂಬುದನ್ನು ತಿಳಿಸಿ ವ್ಯವಸ್ಥೆ ಮಾಡಿಕೊಳ್ಳಬಹುದು. ಇವರನ್ನು ಹೈ ಆಲ್ಟಿಟ್ಯೂಡ್ ಪೋರ್ಟರ್ಸ್ (high altitude porters) ಮತ್ತು ಲೋ ಆಲ್ಟಿಟ್ಯೂಡ್ ಪೋರ್ಟರ್ಸ್ (low altitude porters) ಎಂದು ವಿಭಾಗಿಸಿದೆ. ಪರ್ವತಾರೋಹಣಕ್ಕೆ ಹೆಚ್ಚು ಎತ್ತರದಲ್ಲಿ ಚಲಿಸಿ ಅನುಭವವಿರುವ ಪೋರ್ಟರ್ (HAP), ಚಾರಣಕ್ಕೆ ಕಡಿಮೆ ಎತ್ತರ ಪ್ರದೇಶದಲ್ಲಿ ಚಾರಣ ಮಾರ್ಗಗಳನ್ನು ಬಲ್ಲ ಪೋರ್ಟರ್ (LAP) ಆಗಿರುತ್ತಾನೆ. ಅದರಲ್ಲಿ ಕೆಲವರು ಮಾರ್ಗದರ್ಶಿಗಳು ಇರುತ್ತಾರೆ, ಇವರು ಲಗ್ಗೇಜ್ ಹೊರುವುದಿಲ್ಲ. ಆದರೆ ಮಾರ್ಗದರ್ಶಿಗಳೂ ಲಗ್ಗೇಜ್ ಹೊರುವಂತಹ ಪೋರ್ಟರ್ (guide cum porter)ಗಳನ್ನು ನಾವು ಗೊತ್ತುಪಡಿಸಿಕೊಂಡರೆ ಚಾರಣಕ್ಕೆ ಸೂಕ್ತವಾಗಿರುತ್ತದೆ.

ಶೆರ್ಪಾಗಳನ್ನು ಗೊತ್ತುಪಡಿಸಿದ ನಂತರ ಅವರನ್ನು ಹೊರಡುವ ದಿನ ನಿಶ್ಚಿತ ಜಾಗಕ್ಕೆ ಮೊದಲೇ ಬರುವಂತೆ ತಿಳಿಸಬೇಕು. ಸ್ಥಳೀಯ ಪೊಲೀಸ್ ಸ್ಟೇಷನ್ನಿಗೆ ಅಥವಾ ಹಿರಿಯ ಅಧಿಕಾರಿಗೆ ನಾವು ಚಾರಣ ಮಾಡುವ ಪ್ರದೇಶ, ಸದಸ್ಯರ ಮಾಹಿತಿಗಳನ್ನೊಳಗೊಂಡ ಪತ್ರ ನೀಡಬೇಕು. ಇದನ್ನು ನಾವು ಮರೆಯುವಂತಿಲ್ಲ. ಚಾರಣದ ಹಾದಿಯು ಸಾಮಾನ್ಯವಾಗಿ ಸಮೀಪದ ಯಾವುದೋ ಹಳ್ಳಿಯಿಂದ ಪ್ರಾರಂಭವಾಗುತ್ತದೆ. ಅಲ್ಲಿಗೆ ತಲುಪಿದ ನಂತರ ನಾಯಕನ ಜವಾಬ್ದಾರಿಯೂ ಹೆಚ್ಚುತ್ತದೆ. ಹಳ್ಳಿಯಲ್ಲಿ ನಮ್ಮ ಲಗ್ಗೇಜುಗಳನ್ನು ಮತ್ತೊಮ್ಮೆ ಪರಿಶೀಲಿಸಿ, ಸರಿಪಡಿಸಿಕೊಂಡು ಚಾರಣ ಪ್ರಾರಂಭಿಸಲಾಗುವುದು. ಚಾರಣದ ಹಾದಿಯಲ್ಲಿ ಸ್ಥಳೀಯರನ್ನು ಗೌರವಿಸಿ, ನಮಸ್ಕಾರ ಹೇಳಿ, ಅವರ ಉಡುಗೆ ತೊಡುಗೆ, ಪೂಜೆ, ಸಂಸ್ಕೃತಿಯನ್ನು ಗೌರವಿಸಿ ಮತ್ತು ಅದನ್ನು ತಿಳಿದುಕೊಳ್ಳಲು ಪ್ರಯತ್ನಿಸಬೇಕು. ಪೋರ್ಟರ್‌ಗಳನ್ನು ನಮ್ಮ ತಂಡದ ಸದಸ್ಯರೆಂದೇ ಪರಿಗಣಿಸಿ ಅವರೊಂದಿಗೆ ಆತ್ಮೀಯತೆಯಿಂದ ವರ್ತಿಸಬೇಕು.



ಹಿಮದ ಮೇಲೆ ಚಾರಣದ ಹೆಜ್ಜೆ ಗುರುತು

ಚಾರಣ ಅಥವಾ ಪರ್ವತಾರೋಹಣದಲ್ಲಿ ಮೊದಲನೆಯದು ರಕ್ಷಣೆ. ಕೆಲವೊಮ್ಮೆ 'ಒಂದು ತಪ್ಪು ಕೊನೆಯ ತಪ್ಪೂ ಆಗಬಹುದು'. ಅನಾಹುತವಾದರೆ ಏನೂ ಮಾಡುವಂತಿಲ್ಲ. ನಾವು ಗುರಿ ಮುಟ್ಟದಿದ್ದರೂ ಆರೋಗ್ಯದಿಂದ ಹಿಂದಿರುಗುವುದು ಮುಖ್ಯ. ಏಕೆಂದರೆ ಇನ್ನೊಮ್ಮೆ ಪ್ರಯತ್ನಿಸಿ ಆ ಸ್ಥಳಕ್ಕೆ ಹೋಗುವ ಸಾಧ್ಯತೆ ಇದೆ ಎನ್ನುವುದು ಸದಾ ಜ್ಞಾಪಕದಲ್ಲಿ ಇಟ್ಟುಕೊಳ್ಳಬೇಕು. ಹಿಮಾಲಯದ ಚಾರಣದಲ್ಲಿ ಯಶಸ್ವಿಯಾಗಿ ಹಿಂದಿರುಗಿದರೆ ಅದೂ ನಾವು ಸಾಧಿಸಿದ ಸಾಧನೆಯೇ.

ನಾವು ಸಮುದ್ರಮಟ್ಟದಿಂದ ಮೇಲೆ ಹೋದಂತೆ ಆಮ್ಲಜನಕವು ಕಡಿಮೆಯಾಗುವುದರಿಂದ ದೈಹಿಕವಾಗಿ ಹಲವಾರು ಬದಲಾವಣೆಗಳಾಗುತ್ತವೆ. ದೈಹಿಕ ಚಟುವಟಿಕೆ ಮತ್ತು ಸಾಮರ್ಥ್ಯ ಕಡಿಮೆಯಾಗುವುದು. ಸಮುದ್ರ ಮಟ್ಟದಲ್ಲಿ ಆಮ್ಲಜನಕದ ಸಾಮರ್ಥ್ಯ ಶೇ. ೧೦೦ ಇದ್ದರೆ, ಸಮುದ್ರ ಮಟ್ಟದಿಂದ ೧೦,೦೦೦ ಅಡಿ ಎತ್ತರ ಸರಾಸರಿ ಚಾರಣ ಪ್ರದೇಶವಾಗಿದ್ದಲ್ಲಿ, ಶೇ. ೬೭ರಷ್ಟು ಆಮ್ಲಜನಕದ ಪ್ರಯಾಣ ಸಾಮರ್ಥ್ಯವಿರುತ್ತದೆ. ಇನ್ನೂ ಎತ್ತರಕ್ಕೆ ಹೋದಂತೆ ಕಡಿಮೆಯಾಗುತ್ತದೆ. ಎವರೆಸ್ಟ್ ಮೇಲೆ ಶೇ. ೨೫ರಷ್ಟು ಮಾತ್ರ ಆಮ್ಲಜನಕ ಪ್ರಯಾಣ ಸಾಮರ್ಥ್ಯ ಇರುತ್ತದೆ.

---

**ಚಾರಣವು ಒಂದು ಸಾಹಸ ಕ್ರೀಡೆ. ಇದಕ್ಕೆ ದೈಹಿಕ–ಮಾನಸಿಕ ಆರೋಗ್ಯ, ವಿಶಾಲ ಮನೋಭಾವ, ಕಷ್ಟ ಸಹಿಷ್ಣುತೆ, ದೃಢ ವಿಶ್ವಾಸ, ಪ್ರತಿಭೆ, ಸಮಯ ಪ್ರಜ್ಞೆ, ತ್ಯಾಗ, ಕುತೂಹಲ, ಕಲಿಯುವ ಇಚ್ಛೆ ಸಂಯಮ, ಕರ್ತವ್ಯ ಪ್ರಜ್ಞೆ, ಪ್ರಕೃತಿ ಪ್ರೇಮ ಅಗತ್ಯ. ಜೀವನಾನುಭವದ ತಿಳುವಳಿಕೆಯುಳ್ಳ ಯಾರೇ ಆದರೂ ಈ ಸಾಹಸ ಕೈಗೊಳ್ಳಬಹುದು. ಪ್ರಕೃತಿಯ ಮತ್ತು ಮಾನವ ಸಂಬಂಧದ ಅರ್ಥವ್ಯಾಪ್ತಿಯನ್ನು ತಿಳಿಯಬಹುದು. ಪ್ರತಿಯೊಬ್ಬನೂ ತನ್ನ ಜೀವಿತದಲ್ಲಿ ಒಮ್ಮೆಯಾದರೂ ಹಿಮಾಲಯಕ್ಕೆ ಬರಬೇಕು. ಇಲ್ಲಿನ ಭವ್ಯ ದಿವ್ಯ ಹಿಮಶಿಖರಗಳ ನಡುವೆ ಅಣುವಿನಲ್ಲಿ ಅಣುವಾಗಿ, ತೃಣದಲ್ಲಿ ತೃಣವಾಗಿ 'ನಾನು' ಎಂಬ ಭಾವನೆ ನಾಶವಾಗಿ ಮುಗಿಲನ್ನು ಚುಂಬಿಸುವ ಹಿಮಶಿಖರಗಳ ಧೀರ, ಗಂಭೀರ ನಿಲುವಿನಲ್ಲಿ ಲೀನವಾಗುವ ದಿವ್ಯ ಅನುಭೂತಿಯನ್ನು ಒಮ್ಮೆಯಾದರೂ ಪಡೆಯಬೇಕು.**

ಈ ಹಿನ್ನೆಲೆಯಿಂದ ಎತ್ತರ ಪ್ರದೇಶದಲ್ಲಿ ಕಾಣಿಸಿಕೊಳ್ಳುವ ತಲೆನೋವು, ತಲೆಸುತ್ತು, ಕಣ್ಣು ಮಂಜಾಗುವುದು, ನಿರಾಸಕ್ತಿ, ಅತಿನಿದ್ರೆ, ಮಾಂಸ ಖಂಡಗಳ ನೋವು, ಹಸಿವಿಲ್ಲದಿರುವುದು, ಶಕ್ತಿಹೀನತೆ, ಜ್ವರ, ಸುಸ್ತು ಇವುಗಳು ಸಾಮಾನ್ಯವಾಗಿ ಕಾಣಿಸಿಕೊಳ್ಳಬಹುದು. ಇವುಗಳನ್ನು ತಡೆಗಟ್ಟಲು ಮೂಲ ಶಿಬಿರದಲ್ಲಿ ತರಬೇತಿ ಹಾಗೂ ೧೦,೦೦೦ ಅಡಿಯ ನಂತರದ ಶಿಬಿರದಲ್ಲಿ ೨-೩ ದಿನವಿದ್ದು, ಅಲ್ಲಿಯ ಹವಾಮಾನಕ್ಕೆ ದೇಹ ಹೊಂದಿಕೊಂಡ ನಂತರ ಮುಂದುವರೆಯುವುದು ಒಳ್ಳೆಯದು. ವೈದ್ಯರು ನೀಡಿದ ಸಲಹೆ ಮೇರೆಗೆ ಮಾತ್ರೆ ತೆಗೆದುಕೊಳ್ಳಬಹುದು. ಅನಾವಶ್ಯಕ ಮಾತ್ರೆಗಳನ್ನು ತೆಗೆದುಕೊಳ್ಳದೆ ಹವಾಮಾನಕ್ಕೆ ನಮ್ಮ ದೇಹ ನಿಧಾನವಾಗಿ ಹೊಂದಿಕೊಳ್ಳುವಂತೆ ನೋಡಿಕೊಳ್ಳಬೇಕು.



ಚಾರಣ ಮಧ್ಯದಲ್ಲಿ ಹಾಗೂ ಕ್ಯಾಂಪ್‌ನಲ್ಲಿಯ ಯಥೇಚ್ಛ ಪಾನೀಯಗಳನ್ನು, ಟೀ, ಕಾಫಿ, ಹಾರ್ಲಿಕ್ಸ್ ಇತ್ಯಾದಿಗಳನ್ನು ಸೇವಿಸುವುದರಿಂದ ದೇಹದಲ್ಲಿ ನೀರಿನಂಶ ಕೂಡಿ ನಿರ್ಜಲತ್ವವನ್ನು ಕಡಿಮೆ ಮಾಡುತ್ತದೆ. ಅತಿಯಾದ ತಲೆನೋವು, ಬಳಲಿಕೆ, ಮಾನಸಿಕ ಅಸ್ವಸ್ಥತೆ, ಕಂಡುಬಂದಲ್ಲಿ ಎತ್ತರದಿಂದ ಹಿಂದಿನ ಜಾಗಕ್ಕೆ ಅಂದರೆ ತಗ್ಗಿನ ಪ್ರದೇಶದ ಕ್ಯಾಂಪ್‌ಗೆ ಬಂದು ತಂಗಬೇಕು. ಪುನಃ ಮುಂದುವರೆಯಬಹುದು.

ಹಿಮಾಲಯದ ರಮಣೀಯತೆ, ವೈವಿಧ್ಯತೆ, ಭವ್ಯತೆಗಳಿಂದ ಶಿಖರಗಳು ಹಾದಿಯಲ್ಲಿ ನಮ್ಮನ್ನು ಸ್ವಾಗತಿಸುತ್ತವೆ. ಪ್ರಕೃತಿಯ ನಡುವೆ ಆದಷ್ಟು ಸದ್ದಿಲ್ಲದೆ ಸೌಂದರ್ಯವನ್ನು ಸವಿಯುತ್ತಾ, ನಡೆಯುವುದು ಮನಸ್ಸಿಗೆ ಆನಂದವುಂಟು ಮಾಡುತ್ತದೆ. ಕಿರಿದಾದ ದಾರಿಯಲ್ಲಿ ಹಾಗೂ ಕಲ್ಲು ಬೀಳುವ ಪ್ರದೇಶಗಳಲ್ಲಿ ಒಬ್ಬೊಬ್ಬರಾಗಿ ಎಚ್ಚರಿಕೆಯಿಂದ ದಾಟಬೇಕಾಗುತ್ತದೆ. ನದಿಯಲ್ಲಿ ಹಾಗೂ ಹಿಮದ ಮೇಲೆ ಕೆಲವು ವೇಳೆ ದುಃಸಾಹಸ ಮಾಡುವುದಕ್ಕಿಂತ, ಯೋಚಿಸಿ ಸಾಧ್ಯವಿದ್ದಲ್ಲಿ ಎಲ್ಲರೂ ದಾರವನ್ನು ಕಟ್ಟಿಕೊಂಡು ಐಸಾಕ್ಸ್‌ನೊಂದಿಗೆ ಅಥವಾ ತಂಡದೊಂದಿಗೆ ನಿಧಾನವಾಗಿ ಚಲಿಸಬೇಕಾಗುತ್ತದೆ. ವಿಶ್ರಾಂತಿಯು ಅವರವರ ದೈಹಿಕ ಸಾಮರ್ಥ್ಯವನ್ನು ಅವಲಂಬಿಸಿದೆ.

ಹಾದಿಯ ಮಧ್ಯ ಬೇರೆ ಬೇರೆ ಎತ್ತರದಲ್ಲಿ ವಿವಿಧ ರೀತಿ ಸಸ್ಯಗಳನ್ನು ಕಾಣಬಹುದು. ಇಲ್ಲಿಯ ಮರಗಳಲ್ಲಿ ಸಾಮಾನ್ಯವಾಗಿ ಎಲೆ ಉದುರುವುದಿಲ್ಲ. ಕಡ್ಡಿ (ಸೂಜಿ)ಯಾಕಾರದ ಕೋನಿಫರಸ್, ಪೈನಸ್, ಲಾಂಗಿಪೋಲಿಯ ಮುಂತಾದವು ಕಂಡುಬರುತ್ತವೆ. ಬೆಂಕಿಯಿಂದ ರಕ್ಷಿಸಿಕೊಳ್ಳುವ ಶಕ್ತಿ ಹೊಂದಿವೆ. ಬಕ್, ಎಸಿಪೆಟಿಕ್ ಜಾತಿ ಮರಗಳು ಸರ್ವೇಸಾಮಾನ್ಯ.

ಸಮುದ್ರಮಟ್ಟದಿಂದ ಸುಮಾರು ೯,೦೦೦ ಅಡಿಯಿಂದ ೧೨,೦೦೦ ಅಡಿವರೆಗೆ ಬಿಟ್ಟಿಯಲ್, ರೋಡೈನ್‌ಡ್ರನ್, ಒಬೋವಟ ಸಸ್ಯಗಳು ಬೆಳೆಯುತ್ತವೆ. ಇನ್ನೂ ಎತ್ತರದಲ್ಲಿ ಪ್ರದೇಶದಲ್ಲಿ ಬೆಳೆಯುವ ಕುರುಚಲು ರೀತಿಯ ಸಸ್ಯಗಳಾದ ವಿಲ್ಲೋಸ್, ಜೋನಿಫರಸ್ ಸಸ್ಯಗಳನ್ನು ಯಾಕ್‌ಗಳು ತಿನ್ನುತ್ತವೆ.



ಮಂಜಿನ ನಡುವೆ ಶಿಖರ

ಹಿಮಾಲಯದಲ್ಲಿ ನೂರಾರು ಜಾತಿಯ ಹೂವಿನ ಗಿಡಗಳಿವೆ. ವಿವಿಧ ಬಣ್ಣ ಬಣ್ಣದ ಹೂವುಗಳನ್ನು ಕಾಣಬಹುದು. ಜಗತ್ಪ್ರಸಿದ್ಧ ಹೂವಿನ ಕಣಿವೆಯು (ವ್ಯಾಲಿ ಆಫ್ ಫ್ಲವರ್ಸ್) ಗರ್‌ವಾಲ್ ಪ್ರದೇಶದಲ್ಲಿದ್ದು ಸುಮಾರು ೧೨ ಕಿ.ಮೀ. ಉದ್ದ ೩ ಕಿ.ಮೀ. ಗಳಷ್ಟು ಅಗಲ ವಿಸ್ತಾರದಲ್ಲಿ, ವಿವಿಧ ಜಾತಿಯ ನೂರಾರು ಪ್ರಭೇದದ ಹೂವುಗಳನ್ನು ಹೊಂದಿದೆ. ಚಾರಣ ಸಮಯದಲ್ಲಿ ಹಾದಿಯಲ್ಲಿ ಕಂಡುಬರುವ ಹೂ, ಸಸ್ಯಗಳ ವಾಸನೆಯನ್ನು ಅಥವಾ ರುಚಿಯನ್ನು ನೋಡಬಾರದು. ಲೇಖಕ ಒಮ್ಮೆ ಹಿಮಾಲಯದಲ್ಲಿ ಚಾರಣ ಕೈಗೊಂಡಿದ್ದಾಗ ಸುಮಾರು ೯ ಎಮ್ಮೆಗಳು ಸತ್ತಿರುವುದನ್ನು ಕಂಡು ಈ ಬಗ್ಗೆ ಪೋರ್ಟರ್‌ನ ಬಳಿ ಮಾಹಿತಿ ಪಡೆದಾಗ ಅವುಗಳು ಅಲ್ಲಿರುವ ಸಿಮರು (ಕ್ಯಾಲ್ಮಿಯ-ಲಾರೆಲ್) ಎಂಬ ಸಸ್ಯದ ಹೂಗಳನ್ನು ತಿಂದು ಸತ್ತಿರುವುದಾಗಿ ತಿಳಿಯಿತು.

ಹಿಮಾಲಯದಲ್ಲಿ ಲಂಗೂರ್, ಹುಲಿ, ಆನೆ, ಚಿರತೆ, ಮುಂಗುಸಿ, ಕರಡಿ ಜಾತಿ ಬೆಕ್ಕು, ಹಿಮಾಲಯನ್ ಗೋಟ್ (ಐಬೆಕ್ಸ್) ಮುಂತಾದ ಪ್ರಾಣಿಗಳು ಇದ್ದರೂ ಎಲ್ಲಾ ಭಾಗಗಳಲ್ಲಿ ಕಂಡುಬರುವುದಿಲ್ಲ. ಎತ್ತರ ಪ್ರದೇಶದಲ್ಲಿ ಸಾಮಾನ್ಯವಾಗಿ ಜಿಂಕೆ, ಮೌಂಟನ್‌ಗೋಟ್, ಹಿಮಚಿರತೆಗಳನ್ನು ಕಾಣಬಹುದು. ಚಾರಣ ಮಾಡುವ ಹಾದಿಯ ಸಮೀಪ ಜಿಂಕೆ, ಮೌಂಟನ್ ಗೋಟ್‌ಗಳನ್ನು ಕಾಣುವ ಸಾಧ್ಯತೆ ಹೆಚ್ಚು. ಇದರೊಂದಿಗೆ ನಾನಾ ರೀತಿಯ ಪಕ್ಷಿಗಳನ್ನು ವೀಕ್ಷಿಸಬಹುದು. ಇಲ್ಲಿಯ ಪ್ರಾಣಿಗಳಾದ ಕುರಿ, ನಾಯಿ, ಮೊಲ ಇವುಗಳು ಹವಾಮಾನಕ್ಕೆ ಹೊಂದುವಂತಹ ಉಣ್ಣೆಯ ರೋಮ ಹೊಂದಿದ್ದು, ವಾತಾವರಣಕ್ಕೆ ಹೊಂದುವ ಗಾಢವಾದ ಬೂದು, ಕಂದು ಬಣ್ಣಗಳನ್ನು ಹೊಂದಿರುತ್ತವೆ. ಹಕ್ಕಿಗಳೂ ಈ ರೀತಿಯಲ್ಲಿ ಹವಾಮಾನದಿಂದ ರಕ್ಷಣಾ ವ್ಯವಸ್ಥೆಯನ್ನು ಹೊಂದಿರುತ್ತವೆ.

ಚಾರಣದ ಹಾದಿಯ ಮಧ್ಯ ಜನವಸತಿ ಪ್ರದೇಶಗಳಿದ್ದು ಬೇಸಾಯ ಪದ್ಧತಿಯು ಪರ್ವತದ ಇಳಿಜಾರಿನಲ್ಲಿ ಮೆಟ್ಟಿಲು ಮೆಟ್ಟಿಲಾಗಿ ಸಮತಟ್ಟಾದ ಜಾಗ ನಿರ್ಮಿಸಿ ಬೇಸಾಯ ಮಾಡುವುದನ್ನು ಕಾಣಬಹುದು. ಇದನ್ನು 'ಟೆರೇಸ್' ಬೇಸಾಯವೆನ್ನುತ್ತಾರೆ.

"Take nothing but pictures, leave nothing but footprints" - ಇದು ನಮ್ಮ ಧ್ಯೇಯವಾಗಬೇಕು. ಚಾರಣದ ಅಂತಿಮ ಘಟ್ಟ ಮುಟ್ಟಿದ ಮೇಲೂ ಯಶಸ್ವಿಯಾಗಿದ್ದೇವೆ ಎಂದು ಗಡಿಬಿಡಿಯಿಂದ, ಅಜಾಗರೂಕತೆಯಿಂದ ಹಿಂದಿರುಗಬಾರದು. ಸದಾ ಜಾಗ್ರತೆ ಬಗ್ಗೆ ಗಮನವಿರಬೇಕು.

ಚಾರಣವು ಒಂದು ಸಾಹಸ ಕ್ರೀಡೆ. ಇದಕ್ಕೆ ದೈಹಿಕ-ಮಾನಸಿಕ ಆರೋಗ್ಯ, ವಿಶಾಲ ಮನೋಭಾವ, ಕಷ್ಟ ಸಹಿಷ್ಣುತೆ, ದೃಢ ವಿಶ್ವಾಸ, ಪ್ರತಿಭೆ, ಸಮಯ ಪ್ರಜ್ಞೆ, ತ್ಯಾಗ, ಕುತೂಹಲ, ಕಲಿಯುವ ಇಚ್ಛೆ, ಸಂಯಮ, ಕರ್ತವ್ಯ ಪ್ರಜ್ಞೆ, ಪ್ರಕೃತಿ ಪ್ರೇಮ ಅಗತ್ಯ. ಜೀವನಾನುಭವದ ತಿಳುವಳಿಕೆಯುಳ್ಳ ಯಾರೇ ಆದರೂ ಈ ಸಾಹಸ ಕೈಗೊಳ್ಳಬಹುದು. ಪ್ರಕೃತಿಯ ಮತ್ತು ಮಾನವ ಸಂಬಂಧದ ಅರ್ಥವ್ಯಾಪ್ತಿಯನ್ನು ತಿಳಿಯಬಹುದು.

ಪ್ರತಿಯೊಬ್ಬನೂ ತನ್ನ ಜೀವಿತದಲ್ಲಿ ಒಮ್ಮೆಯಾದರೂ ಹಿಮಾಲಯಕ್ಕೆ ಬರಬೇಕು. ಇಲ್ಲಿನ ಭವ್ಯ ದಿವ್ಯ ಹಿಮಶಿಖರಗಳ ನಡುವೆ ಅಣುವಿನಲ್ಲಿ ಅಣುವಾಗಿ, ತೃಣದಲ್ಲಿ ತೃಣವಾಗಿ 'ನಾನು' ಎಂಬ ಭಾವನೆ ನಾಶವಾಗಿ ಮುಗಿಲನ್ನು ಚುಂಬಿಸುವ ಹಿಮ ಶಿಖರಗಳ ಧೀರ, ಗಂಭೀರ ನಿಲುವಿನಲ್ಲಿ ಲೀನವಾಗುವ ದಿವ್ಯ ಅನುಭೂತಿಯನ್ನು ಒಮ್ಮೆಯಾದರೂ ಪಡೆಯಬೇಕು.

ಜಿ. ಕೆ. ದೇವರಾಜಸ್ವಾಮಿ
ನಂ. ೩೯೩೬, ೨ನೇ ಅಡ್ಡರಸ್ತೆ, 'ಬಿ' ಬ್ಲಾಕ್, ೨ನೇ ಹಂತ, ಗಾಯತ್ರಿನಗರ, ಬೆಂಗಳೂರು - ೫೬೦ ೦೨೧




**ಹೊಸತು** ವಾಚಿಕೆ

## ಕನ್ನಡ ಓದುಗರಿಗೆ ನವಕರ್ನಾಟಕದ ಮತ್ತೊಂದು ಹೊಸ ಕೊಡುಗೆ !

# ಹೊಸತು ವಾಚಿಕೆ ಮಾಲೆಯ ಹದಿನೆಂಟು ಸಂಪುಟಗಳು

೧೯೯೯ರ ಆಗಸ್ಟ್ ಮೊದಲ ಸಂಚಿಕೆಯಿಂದ ೨೦೦೪ರ ಜುಲೈವರೆಗಿನ ಐದು ವರ್ಷಗಳಲ್ಲಿ 'ಹೊಸತು' ಪತ್ರಿಕೆಯಲ್ಲಿ ಪ್ರಕಟವಾಗಿರುವ ಅತ್ಯುತ್ತಮ ಲೇಖನ, ಕಥೆ, ಕವಿತೆ, ಸಂವಾದ, ಸಂದರ್ಶನಗಳು, ವಿಡಂಬನೆ, ಪ್ರಬಂಧಗಳು ಇತ್ಯಾದಿಗಳ ಸಂಕಲಿತ ಸಂಪುಟಗಳು

**ಪ್ರತಿಯೊಂದು ಮನೆಯ ಗ್ರಂಥಾಲಯದಲ್ಲಿ ಇರಲೇಬೇಕಾದ ಕೃತಿಗಳು !**

| | ಸಂಗ್ರಾಹಕರು |
|---|---|
| ೧. ವಿಚಾರ ಸಂಪತ್ತು (ವೈಚಾರಿಕ ಮತ್ತು ಸೈದ್ಧಾಂತಿಕ ಲೇಖನಗಳ ಸಂಕಲನ) | ಕೆ. ಎಲ್. ಗೋಪಾಲಕೃಷ್ಣರಾವ್ |
| ೨. ತಿಳಿವು | ಡಾ॥ ಎಂ. ಎನ್. ಕೇಶವರಾವ್ |
| ೩. ಪ್ರಚಲಿತ ವಿದ್ಯಮಾನ (ಸಮಕಾಲೀನ ಸಾಮಾಜಿಕ ಆರ್ಥಿಕ) | ಸಿ. ಆರ್. ಕೃಷ್ಣರಾವ್ |
| ೪. ಆಕಾಶಕ್ಕೆ ಆಹ್ವಾನ (ಅನಂತಕ್ಕೊಂದು ಕಣ್ಣು) | ಡಾ॥ ಬಿ. ಎಸ್. ಶೈಲಜಾ |
| ೫. ಆಯ್ದ ಸಂಪಾದಕೀಯಗಳು | ಡಾ॥ ಎನ್. ಗಾಯತ್ರಿ |
| ೬. ಇದು ನಮ್ಮ ಕರ್ನಾಟಕ (ಆಗು-ಹೋಗುಗಳು) | ರಾ. ನಂ. ಚಂದ್ರಶೇಖರ್ |
| ೭. ಸಾಹಿತ್ಯ ಸಂವಾದ | ಡಾ॥ ಎಚ್. ಎಸ್. ರಾಘವೇಂದ್ರರಾವ್ |
| ೮. ಪರಿಮಳದ ಸುಗ್ಗಿ (ಕವಿತೆಗಳು) | ಪ್ರೊ॥ ಜಿ. ಶ್ರೀನಿವಾಸರಾಜು |
| ೯. ಕಥಾಂಕುರ (ಸಣ್ಣ ಕಥೆಗಳು) | ರವಿಕುಮಾರ್ ಅಜ್ಜೀಪುರ |
| ೧೦. ಬಂಧ ಬಂಧುರ (ವಿಡಂಬನೆ, ಪ್ರಬಂಧ, ಹರಟೆ) | ಭಾರತೀ ಕಾಸರಗೋಡು |
| ೧೧. ಇತಿಹಾಸದ ಪರಾಮರ್ಶೆ (ಇತಿಹಾಸ ಕುರಿತ ಲೇಖನಗಳು) | ಡಾ॥ ಎಚ್ ಎಸ್. ಗೋಪಾಲರಾವ್ |
| ೧೨. ದರ್ಶನ-ಸಂದರ್ಶನ (ಸಂದರ್ಶನ ಲೇಖನಗಳು) | ಕೆ. ಎಸ್. ಪಾರ್ಥಸಾರಥಿ |
| ೧೩. ವಿಜ್ಞಾನ ಮತ್ತು ವೈಜ್ಞಾನಿಕ ಮನೋಭಾವ | ಕೆ. ಎಸ್. ನವೀನ್ |
| ೧೪. ವೈದ್ಯ ವೈವಿಧ್ಯ (ವೈದ್ಯಕೀಯ ಲೇಖನಗಳು) | ಡಾ॥ ವಸುಂಧರಾ ಭೂಪತಿ |
| ೧೫. ಮಹಿಳಾಲೋಕ | ನೇಮಿಚಂದ್ರ |
| ೧೬. ವಚನಸಾಹಿತ್ಯ | ಚಂದ್ರಶೇಖರ ನಂಗಲಿ |
| ೧೭. ಬಿಂಬ ಪ್ರತಿಬಿಂಬ (ವ್ಯಕ್ತಿಚಿತ್ರಗಳು) | ಪರಂಜ್ಯೋತಿ |
| ೧೮. ಶಿಕ್ಷಣ ಸಂಸ್ಕೃತಿ | ಪ್ರೊ॥ ಬಿ. ವಿ. ವೀರಭದ್ರಪ್ಪ |







ಪುಸ್ತಕಗಳ ಪುಟಸಂಖ್ಯೆ, ಬೆಲೆ, ಪ್ರಕಟಣಪೂರ್ವ ರಿಯಾಯಿತಿ, ಅನಾವರಣದ ದಿನಾಂಕ ಇತ್ಯಾದಿ ವಿವರಗಳಿಗೆ 'ಹೊಸತು' ಮುಂದಿನ ಸಂಚಿಕೆಗಳಲ್ಲಿ ನಿರೀಕ್ಷಿಸಿ !




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೮, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ/ಫ್ಯಾಕ್ಸ್: ೨೨೨೦೩೫೮೦/೮೧/೮೨ e-mail: nkp@bgl.vsnl.net.in

# ಗಾಂಧೀಜಿ ಕೊನೆಗೂ ಸಾಯಲೇಬೇಕಾಯಿತು



ಒಂದು ಕಡೆ ಹಿಂದೂಗಳು, ಮುಸ್ಲಿಮರು, ಸಿಖ್ಖರು, ಕ್ರೈಸ್ತರು ಎನ್ನದೇ ವಿಭಿನ್ನ ಧಾರ್ಮಿಕ ಸಮುದಾಯಕ್ಕೆ ಸೇರಿದವರು ಬಾಪುವನ್ನು ಕಳೆದುಕೊಂಡು ಶೋಕಸಾಗರದಲ್ಲಿ ದುಃಖಿಸುತ್ತಿದ್ದರೆ ಆಘಾತಗೊಂಡ ರಾಷ್ಟ್ರ, ಗಾಂಧೀಜಿ ಒದಗಿಸಿದ ಬೆಳಕಿಗಾಗಿ ತತ್ತರಿಸುತ್ತಿದ್ದರೆ, ಇನ್ನೊಂದು ಕಡೆ ಬಹುಸಂಸ್ಕೃತಿ ಸಮಾಜ ವಿರೋಧಿಗಳು, ಕುತಂತ್ರಿಗಳು, ಭಯೋತ್ಪಾದಕರು, ಧರ್ಮಾಂಧರು ಮತ್ತು ಹಿಂದು ಮಹಾಸಭಾದ ಕಾರ್ಯಕರ್ತರು ಮತ್ತು ಅಭಿಮಾನಿಗಳು ಮಹಾತ್ಮಾ ಗಾಂಧಿಯವರನ್ನು ಕೊಂದಿದ್ದಕ್ಕೆ ವಿಜಯೋತ್ಸವ ಆಚರಿಸಿದರು.

**ಮೊದಲ ಯತ್ನ : ಜೂನ್ ೧೯೩೪**

**ಪುಣೆಯಲ್ಲಿ ಬಾಂಬ್ ಎಸೆತ**

೧೯೩೪ರಲ್ಲಿ ಮಹಾತ್ಮಾ ಗಾಂಧಿ ಹರಿಜನ ಯಾತ್ರೆಯ ಸಂದರ್ಭದಲ್ಲಿ ಪುಣೆಗೆ ಭೇಟಿ ನೀಡಿದರು. ಅವರು ಜೂನ್ ೨೫ರಂದು ನಗರಸಭೆಯ ಸಭಾಂಗಣದಲ್ಲಿ ಭಾಷಣ ಮಾಡಬೇಕಿತ್ತು. ಅದಕ್ಕಾಗಿ ಒಂದೇ ರೀತಿ ಕಾಣುವ ಎರಡು ವಾಹನಗಳ (ಕಾರ್) ವ್ಯವಸ್ಥೆ ಮಾಡಲಾಗಿತ್ತು. ಪ್ರಯಾಣಿಸಲು ಮಹಾತ್ಮಾ ಗಾಂಧಿ ಮತ್ತು ಕಸ್ತೂರ ಬಾ ಎರಡನೇ ಕಾರನ್ನು ಆಯ್ಕೆ ಮಾಡಿದರು. ರಸ್ತೆಯಲ್ಲಿ ರೇಲ್ವೆ ಲೆವೆಲ್ ಕ್ರಾಸಿಂಗ್‌ನಿಂದಾಗಿ, ಮುಂದಿದ್ದ ಕಾರ್ ಅವರಿಂದ ದೂರವಾಯಿತು. ಮಹಾತ್ಮಾ ಗಾಂಧಿ ಹಾಗೂ ಇನ್ನಿತರರು ಪ್ರಯಾಣಿಸುತ್ತಿದ್ದ ಕಾರು ಹಿಂದೆ ಬಿತ್ತು.

ಮುಂದಿದ್ದ ಕಾರ್ ಬೇಗನೇ ನಗರಸಭೆಯ ಪ್ರಾಂಗಣ ತಲುಪಿತು. ಅದಕ್ಕೆ ಅದ್ದೂರಿ ಸ್ವಾಗತವೂ ಸಿಕ್ಕಿತು. ಗಾಂಧಿಯವರು ಆಗಮಿಸಿದ್ದಾರೆಂದು ತಿಳಿದು ಸ್ವಾಗತ ಸಮಿತಿಯ ಸದಸ್ಯರು ಕಾರಿನತ್ತ ಧಾವಿಸಿದ ಮರುಕ್ಷಣವೇ, ಬಾಂಬೆಸೆಯಲಾಯಿತು. ಬಾಂಬ್ ಸ್ಫೋಟ ಗೊಂಡಿದ್ದಲ್ಲದೇ ನಗರಸಭೆಯ ಮುಖ್ಯಾಧಿಕಾರಿ, ಇಬ್ಬರು ಪೊಲೀಸ್ ಪೇದೆಗಳು ಮತ್ತು ಇನ್ನಿತರ ಏಳು ಜನರನ್ನು ಗಾಯಗೊಳಿಸಿತು. ಇದು ಸ್ಪಷ್ಟವಾಗಿ ಗಾಂಧಿ ವಿರೋಧಿ ಹಿಂದೂ ಮೂಲಭೂತವಾದಿಗಳ ಕೃತ್ಯವಾಗಿದ್ದು, ಇದರ ಉಲ್ಲೇಖ ಮಹಾತ್ಮಾ ಗಾಂಧಿಯವರ ಕಾರ್ಯದರ್ಶಿ ಪ್ಯಾರೆಲಾಲ್ ಅವರ 'Mahatma Gandhi : The last phase'ದಲ್ಲಿ ಕಾಣಬಹುದು.

''ಗಾಂಧಿ, ನೆಹರೂ ಹಾಗೂ ಅನೇಕ ಕಾಂಗ್ರೆಸ್ ನಾಯಕರುಗಳ ಭಾವಚಿತ್ರಣಗಳನ್ನು ತಮ್ಮ ಬೂಟುಗಳಲ್ಲಿ ಇಟ್ಟುಕೊಳ್ಳುತ್ತಿದ್ದರು. ಗಾಂಧಿಯವರ ಭಾವಚಿತ್ರವನ್ನು ಗುರಿಯಾಗಿಸಿ ಗುಂಡಿಕ್ಕುವ ತರಬೇತಿಯನ್ನು ಸಹ ನೀಡುತ್ತಿದ್ದರು. ಮತ್ತದೇ ಜನ, ೧೯೪೮ರಲ್ಲಿ ಕೋಮು-ದಂಗೆಗಳಿಂದ ಬೆಂದು ಹೋಗಿದ್ದ ದೆಹಲಿಯಲ್ಲಿ ಶಾಂತಿ ಸಾರಲು ಬಂದ ಮಹಾತ್ಮಾ ಅವರನ್ನು ಕೊಂದು ಹಾಕಿದರು'' ಎಂದು ಪ್ಯಾರೆಲಾಲ್ ತಮ್ಮ ಪುಸ್ತಕದಲ್ಲಿ ಹೇಳಿದ್ದಾರೆ.

ಬಾಂಬ್ ಎಸೆದ ಘಟನೆಯ ನಂತರ, ಸಭೆಯನ್ನುದ್ದೇಶಿಸಿ ಮಾತನಾಡಿದ ಮಹಾತ್ಮಾ ಗಾಂಧಿ, ''ಹರಿಜನರಿಗಾಗಿ ಅಭಿವೃದ್ಧಿ ಕೆಲಸಗಳು ಮಾಡುತ್ತಿರುವ ಸಂದರ್ಭದಲ್ಲಿ, ಈ ರೀತಿಯ ಘಟನೆ ನಡೆದದ್ದು ಶೋಚನೀಯ. ನನಗೀಗಲೇ ಸಾಯುವ ಇಚ್ಛೆ ಇಲ್ಲ. ಆದರೆ ಅಂತಹ ಸಂದರ್ಭ ಬಂದರೆ, ನಾನು ಸಾಯಲು ಸಿದ್ಧ. ನನ್ನನ್ನು ಕೊಲ್ಲುವುದು ಸುಲಭ. ಆದರೆ ನನ್ನ ಹತ್ಯೆಯ ಯತ್ನದಲ್ಲಿ ಮುಗ್ಧರನ್ನೇಕೆ ಶಿಕ್ಷಿಸುತ್ತೀರಿ? ಅವರನ್ನೇಕೆ ಗಾಯಗೊಳಿಸುತ್ತೀರಿ? ನನ್ನ ಹೆಂಡ್ತಿ, ಮಕ್ಕಳಂತೆಯೇ ಇರುವ ಮೂವರು ಹುಡುಗಿಯರು ನನ್ನ ಜೊತೆ ಕಾರಿನಲ್ಲಿ ಪ್ರಯಾಣಿಸುತ್ತಿದ್ದರು. ನಿಮಗೆ ಅವರ ಮೇಲೆ ಸಿಟ್ಟೇಕೆ?'' ಎಂದು ಪ್ರಶ್ನಿಸಿದರು.

**ರಾಹುಲ್ ಬೆಳಗಲಿ**

ಬಾಂಬ್ ದಾಳಿ ಮಾಡಿದವನು ಆ ಸ್ಥಳದಿಂದ ತಪ್ಪಿಸಿಕೊಂಡ. ತದನಂತರ ಪೊಲೀಸರು ತನಿಖೆ ನಡೆಸಿದ ಅಥವಾ ಬಂಧಿಸಿದ ಯಾವುದೇ ದಾಖಲೆಗಳಿಲ್ಲ. ಭಾರತದಲ್ಲಿ ಮಹಾತ್ಮಾ ಗಾಂಧಿಯವರ ಮೇಲೆ ನಡೆದ ಪ್ರಥಮ ಹತ್ಯೆ ಯತ್ನ ಇದಾಗಿತ್ತು. ಹಲವಾರು ಇತಿಹಾಸತಜ್ಞರ ಪ್ರಕಾರ, ಈ ಕೃತ್ಯದಲ್ಲಿ ಭಾಗಿಯಾಗಿದ್ದು ನಾಥುರಾಮ ಗೋಡ್ಸೆ ಮತ್ತು ನಾರಾಯಣ ಆಪ್ಟೆಯವರ ಗ್ಯಾಂಗ್ (ಗುಂಪು).

**ಎರಡನೇ ಯತ್ನ : ಜುಲೈ ೧೯೪೪**

**ಪಂಚಗಣಿಯಲ್ಲಿ ನಾಥುರಾಮ ಗೋಡ್ಸೆಯಿಂದ ಮಹಾತ್ಮಾ ಗಾಂಧಿ ಮೇಲೆ ಹಲ್ಲೆ**

ಮೇ ೧೯೪೪ರಲ್ಲಿ, ಆಘಾಖಾನ್ ಸೆರೆಮನೆಯಿಂದ ಬಿಡುಗಡೆಗೊಂಡ ಗಾಂಧಿಯವರಿಗೆ ಮಲೇರಿಯ ರೋಗ ಕಾಡಿತು. ವಿರಾಮ ಅತ್ಯಗತ್ಯವೆಂದು ವೈದ್ಯರು ತಿಳಿಸಿದರು. ಈ ಕಾರಣಕ್ಕಾಗಿ ಉತ್ತಮ ಹವೆಗಾಗಿ ಪುಣೆಯ ಸಮೀಪದ ಪಂಚಗಣಿ ಪ್ರವಾಸಿ ಪರ್ವತಶ್ರೇಣಿಯ ದಿಲ್‌ಕುಶ್ ಪ್ರವಾಸಿ ಬಂಗಲೆಯಲ್ಲಿ ಕೆಲದಿನಗಳ ಮಟ್ಟಿಗೆ ತಂಗಿದರು. ಇದೇ ಸಂದರ್ಭದಲ್ಲಿ, ೧೮-೨೦ ಜನಗಳಿಂದ ಕೂಡಿದ ಗುಂಪೊಂದು ಪುಣೆಯಿಂದ ಬಸ್ ಮೂಲಕ ಪಂಚಗಣಿ ತಲುಪಿತು. ಗಾಂಧಿ ವಿರೋಧಿ ಘೋಷಣೆಗಳು ಕೂಗುವುದಲ್ಲದೇ, ಇಡೀದಿನ ಪ್ರತಿಭಟನಾ ಕಾರ್ಯಕ್ರಮ ಹಮ್ಮಿಕೊಂಡಿತು. ಇದನ್ನರಿತ ಮಹಾತ್ಮಾ ಗಾಂಧಿ, ಗುಂಪಿನ ನಾಯಕ ನಾಥುರಾಮ ವಿನಾಯಕ್ ಗೋಡ್ಸೆಯನ್ನು ಮಾತುಕತೆಗೆ ಆಹ್ವಾನಿಸಿದರು. ಆಹ್ವಾನ ತಿರಸ್ಕರಿಸಿ, ಗೋಡ್ಸೆ ಪ್ರತಿಭಟನೆಯಲ್ಲಿ ನಿರತನಾದನು.

ಸಂಜೆ ಪ್ರಾರ್ಥನಾ ಸಮಯದಲ್ಲಿ, ನಾಥುರಾಮ ಗೋಡ್ಸೆ, ನೆಹರೂ ಶರ್ಟ್-ಪೈಜಾಮ, ಅದರ ಮೇಲೆ ಜಾಕೆಟ್ ಧರಿಸಿ ಮಹಾತ್ಮಾ ಗಾಂಧಿಯವರತ್ತ ಮುನ್ನುಗ್ಗಿದ. ಚೂರಿಯನ್ನು ಕೈಯಲ್ಲಿ ಹಿಡಿದು ಗಾಂಧಿ ವಿರೋಧೀ ಘೋಷಣೆಗಳನ್ನು ಕೂಗುತ್ತ ಮುಂದೆ ಸಾಗಿದನು. ಪುಣೆಯ ಸುರ್ತಿ ಲಾಡ್ಜ್ ಮಾಲೀಕ ಮಣಿಶಂಕರ ಪುರೋಹಿತ ಮತ್ತು ಸತಾರಾ ಪ್ರದೇಶದ ಡಿ. ಬಿಲ್ಲಾರೆ ಗುರೂಜಿ, ಗೋಡ್ಸೆ ಮುಂದೆ ಹೋಗದಂತೆ ತಡೆಯಲು ಪ್ರಯತ್ನಿಸಿದರೂ ಸಫಲರಾಗಲಿಲ್ಲ. ಈ

ದಾಳಿಯ ಸತ್ಯಾಸತ್ಯತೆಯ ಕುರಿತು, ಮಹಾತ್ಮಾ ಗಾಂಧಿ ಹತ್ಯಾ ಯತ್ನ ಕುರಿತು, ತನಿಖೆ ನಡೆಸಲು ನೇಮಿಸಲಾಗಿದ್ದ ಕಪೂರ್ ಕಮೀಶನ್‌ಗೆ ಅವರಿಬ್ಬರೂ ವಿವರಣೆ ನೀಡಿದ್ದಾರೆ.

ಗಾಂಧಿ ಅವರತ್ತ ಮುನ್ನುಗ್ಗುತ್ತಿರುವಾಗ, ಗೋಡ್ಸೆಯ ಜೊತೆಗಾರ ಅಚಾನಕ್ಕಾಗಿ ಅಲ್ಲಿಂದ ಓಡಿದ. ಜನರಲ್ಲಿ ಒಮ್ಮೆಲೇ ಗೊಂದಲ ಮೂಡಿತು. ಆದರೆ ಗಾಂಧಿ ಶಾಂತಚಿತ್ತರಾಗಿದ್ದರು. ತಮ್ಮ ಜೊತೆ ಎಂಟು ದಿನಗಳ ಕಾಲ ಇರಲು ಗೋಡ್ಸೆಗೆ ಗಾಂಧಿ ಆಹ್ವಾನ ನೀಡಿದರು. 'ಗೋಡ್ಸೆಯ ದೃಷ್ಟಿಕೋನ' ಅರಿಯುವುದಕ್ಕಾಗಿಯಾದರೂ ಕೆಲ ಕಾಲ ತಮ್ಮ ಸಂಗಡ ಇರಲು ಕೇಳಿಕೊಂಡರು. ಗೋಡ್ಸೆ ಆಹ್ವಾನ ತಿರಸ್ಕರಿಸಿದ. ಗಾಂಧಿ ಯವರ ಅಪ್ಪಣೆಯ ಮೇರೆಗೆ, ಯಾವುದೇ ಅಡ್ಡಿ-ಆತಂಕ ಉಂಟುಮಾಡದೇ ಗೋಡ್ಸೆಗೆ ಹೋಗಲು ಅವಕಾಶ ನೀಡಿದರು.

ಪುಣೆ ಬಿಡುವ ಮುನ್ನ, ಗೋಡ್ಸೆ ತನ್ನ ಪತ್ರಿಕಾ ಮಿತ್ರರಿಗೆ ಪಂಚಗಣಿಯಿಂದ ಮಹಾತ್ಮಾ ಗಾಂಧಿಯ ಕುರಿತು ಮಹತ್ವದ ಸುದ್ದಿ ಬರಲಿದೆಯೆಂದು ಹೇಳಿಕೊಂಡಿದ್ದನು. ನಾಥುರಾಮ ಗೋಡ್ಸೆ ಹೊರತರುತ್ತಿದ್ದ 'ಅಗ್ರಾಣಿ' ಎಂಬ ಮರಾಠಿ ಪತ್ರಿಕೆಯ ವರದಿಗಾರ ಜೋಗಲೇಕರ್ ಈ ಸಂಗತಿಯನ್ನು ದೃಢಪಡಿಸಿದ. 'ಪುಣೆ ಹೆರಾಲ್ಡ್' ಪತ್ರಿಕೆಯ ಸಂಪಾದಕ ಐ. ಡೇವಿಡ್ ಪಂಚಗಣಿಯಲ್ಲಿ ಗಾಂಧಿ ಹತ್ಯೆಗೆ ಪ್ರಯತ್ನಿಸಿದ್ದ ನಾಥುರಾಮ ಗೋಡ್ಸೆ, ಬೇರೆ ಯಾರೂ ಅಲ್ಲ, ಎಂದು ಕಪೂರ್ ಕಮೀಶನ್ ಎದುರು ಪ್ರಮಾಣೀಕರಿಸಿದ. ಆದರೆ ಪ್ರಾರ್ಥನಾ ಸಮಯದಲ್ಲಿ ಉಪಸ್ಥಿತರಿಲ್ಲದ ಮಹಾತ್ಮಾ ಗಾಂಧಿಯ ಕೆಲ ಆಪ್ತರು ಈ ಸಂಗತಿಯನ್ನು ದೃಢಪಡಿಸದ ಕಾರಣದಿಂದಾಗಿ ಡೇವಿಡ್ ಅವರ ಹೇಳಿಕೆಯನ್ನು ತಿರಸ್ಕರಿಸಲಾಯಿತು.

ಪೊಲೀಸ್ ದಾಖಲೆಗಳು ಗಾಂಧಿ ವಿರುದ್ಧ ಘೋಷಣೆಗಳು ಮತ್ತು ನಾಥುರಾಮ ಗೋಡ್ಸೆ ಗಾಂಧಿಯವರತ್ತ ಮುನ್ನುಗ್ಗಿದ್ದರ ಕುರಿತು ಮಾಹಿತಿ ನೀಡುತ್ತದೆಯೇ ಹೊರತು ಗೋಡ್ಸೆ ಶಸ್ತ್ರವನ್ನು ಹೊಂದಿದ್ದನೆಂಬುದಕ್ಕೆ ಯಾವುದೇ ಪುರಾವೆಗಳಿಲ್ಲ. ಗಾಂಧಿಯವರ ವೈದ್ಯೆ ಹಾಗೂ ಆಪ್ತ ಸಹದ್ಯೋಗಿ ಡಾ|| ಸುಶೀಲಾ ನಯ್ಯರ್, ''ಪ್ರತಿಭಟನೆಯಲ್ಲಿ ನಿರತ ಕಾರ್ಯಕರ್ತನೊಬ್ಬ ಚೂರಿ ಹೊಂದಿದ್ದ'' ಎಂದು ಹೇಳುತ್ತಾರೆ. ಆದರೆ ಆತನೇ ನಾಥುರಾಮ ಗೋಡ್ಸೆಯೆಂದು ದೃಢಪಡಿಸುವುದಿಲ್ಲ. ಆದರೆ ನಾಥುರಾಮ ಗೋಡ್ಸೆಯನ್ನು ತಡೆದ ಇಬ್ಬರು ವ್ಯಕ್ತಿಗಳು, ಆ ಘಟನೆಯ ಕುರಿತು ಸಂಪೂರ್ಣ ವಿವರಣೆಯನ್ನು ನೀಡುತ್ತಾ, ತಾವು ಗೋಡ್ಸೆಯನ್ನು ಹಿಡಿದಿದ್ದಲ್ಲದೇ ಚೂರಿಯನ್ನು ಕಸಿದುಕೊಂಡರೆಂದು ದಾಖಲಿಸಿದ್ದಾರೆ.

ಈ ಎಲ್ಲ ಸಂಗತಿಗಳಿಂದ ಒಂದು ಮಾತು ಸ್ಪಷ್ಟವಾಗುತ್ತದೆ. ನಾಥುರಾಮ ಗೋಡ್ಸೆ ಪ್ರತಿಭಟನೆಯಲ್ಲಿ ತೊಡಗಿದ್ದ ಶಸ್ತ್ರಸಜ್ಜಿತ ಗ್ಯಾಂಗಿನ ಓರ್ವ ಸದಸ್ಯನಾಗಿದ್ದನು. ನಾರಾಯಣ್ ಆಪ್ಟೆ, ಕರ್ಕರೆ, ಗೋಪಾಲ್ ಗೋಡ್ಸೆ ಮುಂತಾದವರು ಸಹಸದಸ್ಯರಾಗಿದ್ದರು. ಆ ಗ್ಯಾಂಗ್ ವಿನಾಯಕ ದಾಮೋದರ ಸಾವರ್ಕರರನ್ನು ಆರಾಧಿಸುತ್ತಿತ್ತು.

**ಮೂರನೇ ಯತ್ನ : ಸೆಪ್ಟೆಂಬರ್ ೧೯೪೪**

**ಸೇವಾಗ್ರಾಮದಲ್ಲಿ ಗಾಂಧೀಜಿಗೆ ಗೋಡ್ಸೆಯಿಂದ ಜೀವ ಬೆದರಿಕೆ**

ಮಹಾತ್ಮಾ ಗಾಂಧಿ ಮುಸ್ಲಿಂ ಲೀಗ್ ಮುಖಂಡ ಮಹ್ಮದ್ ಅಲಿ ಜಿನ್ನಾ ಜೊತೆ ಮಾತುಕತೆ ನಡೆಸುವ ಸಿದ್ಧತೆಯಲ್ಲಿದ್ದರು. ಹಿಂದೂ ಮಹಾಸಭಾ ಇದಕ್ಕೆ ವಿರೋಧ ವ್ಯಕ್ತಪಡಿಸಿತು. ನಾಥುರಾಮ ಗೋಡ್ಸೆ ಮತ್ತು ಎಲ್. ಜಿ. ತಟ್ಟೆ 'ಗಾಂಧಿ-ಜಿನ್ನಾ' ಭೇಟಿಯ ವಿರುದ್ಧ ಪ್ರತಿಭಟನೆ ನಡೆಸಿದರು. ಗಾಂಧಿ ಮತ್ತು ಜಿನ್ನಾ ನಡುವಿನ ಮಾತುಕತೆ ತಡೆಯಲು ಯಾವುದೇ ಕೃತ್ಯವನ್ನೆಸಗಲು ಹೇಸುವುದಿಲ್ಲವೆಂದು ಬೆದರಿಕೆ ಸಹ ಒಡ್ಡಿದರು. ಗಾಂಧಿ ಜಿನ್ನಾ ಮಾತುಕತೆ ೯ ಸೆಪ್ಟೆಂಬರ್ ೧೯೪೪ರಂದು ಆರಂಭವಾಯಿತು. ೧೮ ದಿನಗಳ ಕಾಲ ನಡೆಯಿತು.

ಮಾತುಕತೆಗಾಗಿ ಮಹಾತ್ಮಾ ಗಾಂಧೀ ಸೇವಾಗ್ರಾಮದಿಂದ ಬಾಂಬೆಗೆ ತೆರಳುವ ವರಿದ್ದರು. ಗುಂಪನ್ನು ಕಟ್ಟಿಕೊಂಡು ಗೋಡ್ಸೆ ಮತ್ತು ತಟ್ಟೆ ಗಾಂಧೀಜಿಯವರನ್ನು ಹೋಗದಂತೆ ತಡೆಯಲು ಮುಂದಾದರು. ಬಂಗಾಳದಿಂದ ಉಳಿದ ಕಾರ್ಯಕರ್ತರು ಸಹ ಸೇರಿಕೊಂಡರು. ಗಾಂಧೀಜಿ ಬಾಂಬೆಗೆ ಹೋಗದಂತೆ ಆಶ್ರಮದ ಸುತ್ತಲೂ ಕಾವಲನ್ನು ಸಹ ಕಾದರು. ಡಾ|| ಸುಶೀಲಾ ನಯ್ಯರ್ ಅವರ ಪ್ರಕಾರ, ನಾಥುರಾಮ ಗೋಡ್ಸೆ ಚೂರಿಯನ್ನಿಡಿದು ಗಾಂಧೀಜಿಯತ್ತ ಮುನ್ನುಗ್ಗಿದಾಗ ಆಶ್ರಮವಾಸಿಗಳು ಆತನನ್ನು ತಡೆದರು. ಇದನ್ನು ಡಾ|| ಸುಶೀಲಾ ನಯ್ಯರ್ ಕಪೂರ್ ಕಮೀಶನ್ ಎದುರು ಪ್ರಮಾಣೀಕರಿಸಿದ್ದಾರೆ. ಪೊಲೀಸ್ ವರದಿಯ ಪ್ರಕಾರ, 'ಜಾಂಬಿಯಾ' (ಭಾರತೀಯ ಮಾದರಿ ಚೂರಿ) ಎಂಬ ಶಸ್ತ್ರ ನಾಥುರಾಮ ಗೋಡ್ಸೆ ಮತ್ತು ಎಲ್.ಜಿ. ತಟ್ಟೆ ನೇತೃತ್ವ ವಹಿಸಿದ ಗುಂಪನ್ನು ಬಂಧಿಸಿದಾಗ ಚೂರಿಯನ್ನು ವಶಪಡಿಸಿಕೊಳ್ಳಲಾಯಿತು. ಪೊಲೀಸ್ ವರದಿಯ ಪ್ರಕಾರ, 'ಚೂರಿ ವಶಪಡಿಸಿಕೊಂಡಿದ್ದಂತೂ ನಿಜ. ಆದರೆ ಅದನ್ನು ಗಾಂಧಿ ಯವರ ಮೇಲೆ ಹಲ್ಲೆ ಮಾಡಲು ಅಥವಾ ಬಾಂಬೆಗೆ ಹೋಗದಂತೆ ತಡೆಯಲು ಬಳಸುವವರಿದ್ದರೆಂಬುವುದು ಸ್ಪಷ್ಟವಾಗಿಲ್ಲ'.

ಆ ಘಟನೆಯ ಕುರಿತು ಪ್ಯಾರೆಲಾಲ್, ತೇಜ್ ಬಹದ್ದೂರ ಸಪ್ರೂಗೆ ಈ ರೀತಿ ಪತ್ರ ಬರೆದಿದ್ದಾರೆ : ''ಸೇವಾಗ್ರಾಮಕ್ಕೆ ಬಂದಿದ್ದ ಪ್ರತಿಭಟನಾ ಗುಂಪಿನ ನಾಯಕ ಧರ್ಮಾಧೀಸ ನಾಗಿದ್ದ, ಗಾಂಧಿ-ಜಿನ್ನಾ ಭೇಟಿಯಾಗದಂತೆ ತಡೆಯಲು ಯಾವುದೇ ಹಂತದವರೆಗೆ ಹೋಗಲು ಸಹ ಸಿದ್ಧನಿದ್ದನು. ಗುಂಪಿನ ಕಾರ್ಯಕರ್ತರನ್ನು ಬಂಧಿಸಲು ಬಂದಿದ್ದ ಪೊಲೀಸ್ ಅಧಿಕಾರಿ ಚೂರಿಯನ್ನು ವಶಪಡಿಸಿಕೊಂಡು ಗುಂಪಿನ ನಾಯಕನನ್ನು ವ್ಯಂಗ್ಯವಾಗಿ, ''ಹುತಾತ್ಮನಾಗಲು ಬಯಸಿದ್ದೀಯಾ ?'' ಎಂದು ಪ್ರಶ್ನಿಸಿದಾಗ, ಗುಂಪಿನ ನಾಯಕ, ''ಗಾಂಧೀಜಿಯನ್ನು ಒಮ್ಮೆ ಕೊಂದುಬಿಟ್ಟರೆ ಸಾಕು, ನಮ್ಮ ಗುಂಪಿನ ಓರ್ವ ಕಾರ್ಯಕರ್ತ ಹುತಾತ್ಮನಾದಂತೆಯೇ'' ಎಂದು ಮಾರುತ್ತರ ನೀಡಿದನು.

''ನಿಮ್ಮ ನಾಯಕರು ಮತ್ತು ಗಾಂಧೀಜಿ ನಡುವೆ ಮಾತುಕತೆ ಏರ್ಪಡಿಸುವುದು ಬಿಟ್ಟು, ಅನಗತ್ಯ ಪ್ರತಿಭಟನೆಗಳ ಮೂಲಕ ಸಮಯವೇಕೆ ವ್ಯರ್ಥ ಮಾಡುತ್ತೀರಿ ?'' ಎಂದು ಅಧಿಕಾರಿ ಪ್ರಶ್ನಿಸಿದರು. ಗಾಂಧೀಜಿಯವರು ಬಾಂಬೆಗೆ ಹೋಗದಂತೆ ತಡೆಯುವುದಿದ್ದರೆ, ಆ ಜವಾಬ್ದಾರಿ ನಿಮ್ಮ ನಾಯಕ ಸಾವರ್ಕರ್‌ಗೆ ಯಾಕೆ ನೀಡಬಾರದೆಂದು ಪ್ರಶ್ನಿಸಿದ್ದಕ್ಕೆ, ಗುಂಪಿನ ನಾಯಕ, ''ಸಾವರ್ಕರ್ ಗಾಂಧೀಜಿಯ ಜೊತೆ ಮಾತನಾಡಿದ್ದರೆ, ಗಾಂಧಿಯ ಘನತೆ ಹೆಚ್ಚುತ್ತದೆ. ಸಾವರ್ಕರ್ ಗಾಂಧಿಯ ಜೊತೆ ಮಾತನಾಡುವ ಪ್ರಮೇಯವೇ ಬರುವುದಿಲ್ಲ. ಗಾಂಧಿಯ ಜೊತೆ ವ್ಯವಹಾರ, ನಾವು ಕೆಳಗಿನ ಹಂತದ ಕಾರ್ಯಕರ್ತರೇ ನಿರ್ವಹಿಸುತ್ತೇವೆ'' ಎಂದು ಮಾರುತ್ತರ ನೀಡಿದನು.'' ಪತ್ರದಲ್ಲಿ ಪ್ಯಾರೆಲಾಲ್ ಆ ಗುಂಪಿನ ನಾಯಕ ನಾಥುರಾಮ ಗೋಡ್ಸೆ ಅಲ್ಲದೇ ಬೇರಾರು ಅಲ್ಲವೆಂದು ಸ್ಪಷ್ಟನೆ ಸಹ ನೀಡಿದರು.

ಗುಂಪಿನ ಇನ್ನಿತರ ಕಾರ್ಯಕರ್ತರ ಕುರಿತು ಹೆಚ್ಚಿನ ಮಾಹಿತಿ ಇಲ್ಲ. ಈ ರೀತಿಯ ಘಟನೆಯಲ್ಲಿ ಪುಣೆಯ ಹಿಂದು ಮಹಾಸಭಾದ ಕಾರ್ಯಕರ್ತರು ಮೂರನೆಯ ಬಾರಿ ಶಾಮೀಲಾಗಿದ್ದರು. ಈ ಮುಂಚಿನ ಎರಡು ಘಟನೆಗಳಲ್ಲಿ ನಾಥುರಾಮ ಗೋಡ್ಸೆಯ ಹೆಸರು ಕೇಳಿಬಂದಿತ್ತು. ಹಿಂದೂ ಮಹಾಸಭಾದ ಹೆಸರಿಸದ ಕಾರ್ಯಕರ್ತರುಗಳೇ ಕೊನೆಗೂ ಮಹಾತ್ಮಾ ಗಾಂಧಿ ಹತ್ಯೆಗಯ್ಯುವಲ್ಲಿ ಯಶಸ್ವಿಯಾದರೆಂದು ದೃಢಪಟ್ಟಿದೆ.

**ನಾಲ್ಕನೇ ಯತ್ನ : ಜೂನ್ ೧೯೪೬**

**ಪುಣೆ ಮಾರ್ಗದ ರೈಲು ಹಳಿಗೆ ಹಾನಿ**

ಪುಣೆಗೆ ಹೋಗುವ ಮಾರ್ಗದಲ್ಲಿ, ಮಹಾತ್ಮಾ ಗಾಂಧಿ ಪ್ರಯಾಣಿಸುತ್ತಿದ್ದ 'ಗಾಂಧಿ ಸ್ಪೆಷಲ್' ಎಂಬ ರೈಲು ನೇರಳ್ ಮತ್ತು ಕರ್ಜತ್ ನಿಲ್ದಾಣಗಳ ನಡುವೆ ಅಪಘಾತ ಕ್ಕೀಡಾಯಿತು. ಆ ರೈಲಿನ ಚಾಲಕ ವರದಿ ನೀಡಿದ ಪ್ರಕಾರ, ರೈಲು ಅಪಘಾತ ಕ್ಕೀಡಾಗಲಿಯೆಂದೇ ಹಳಿಗಳ ಮೇಲೆ ಗುಂಡುಕಲ್ಲುಗಳನ್ನು ಇರಿಸಲಾಗಿತ್ತು. ರೈಲು ಗುಂಡುಕಲ್ಲುಗಳಿಗೆ ಅಪ್ಪಳಿಸಿತಾದರೂ, ಇಂಜಿನ್ ಚಾಲಕ ಸಮಯಪ್ರಜ್ಞೆ ತೋರಿ ಜಾಗರೂಕತೆಯಿಂದ ರೈಲು ನಿಧಾನಗೊಳಿಸಿದ್ದರಿಂದ ಹೆಚ್ಚಿನ ಹಾನಿಯಾಗುವುದು ತಪ್ಪಿತು. ಪುಣೆಯ ಪೊಲೀಸರು ದರೋಡೆಕೋರರು ಗೂಡ್ಸ್ ರೈಲು ಲೂಟಿ ಮಾಡುವುದ ಕ್ಕೋಸ್ಕರ ಗುಂಡುಕಲ್ಲುಗಳನ್ನು ಹಳಿಯ ಮೇಲಿರಿಸಿದ್ದರೆಂದು ತಿಳಿಸಿದರು. ಆದರೆ ಆ ಸಮಯಕ್ಕೆ, ಆ ಮಾರ್ಗದಲ್ಲಿ ಗಾಂಧಿ ಮತ್ತು ಕಾರ್ಯಕರ್ತರನ್ನು ಹೊತ್ತೊಯ್ಯುತ್ತಿದ್ದ 'ಗಾಂಧಿ ಸ್ಪೆಷಲ್ ಹೊರತುಪಡಿಸಿ, ಆ ರೈಲಿನ ಮುಂಚೆ ಅಥವಾ ನಂತರ ಗೂಡ್ಸ್ ರೈಲು ಹಾದು ಹೋಗುವ ಮಾಹಿತಿ ಇರಲಿಲ್ಲ. ಆ ಸಮಯದಲ್ಲಿ, 'ಗಾಂಧಿ ಸ್ಪೆಷಲ್' ರೈಲು ಮಾತ್ರ ಚಲಿಸುತ್ತಿದ್ದರಿಂದ, ಅದೇ ರೈಲಿನ ಹಳಿ ತಪ್ಪಿಸುವ ಗುರಿಯನ್ನು ಹೊಂದಿದ್ದರೆಂಬುವುದು ಸ್ಪಷ್ಟವಾಗುತ್ತದೆ.

ಜೂನ ೩೦ರಂದು, ಪುಣೆಯಲ್ಲಿ ಪ್ರಾರ್ಥನಾ ಸಭೆಯನ್ನುದ್ದೇಶಿಸಿ ಗಾಂಧಿ, ''ದೇವರ ದಯೆಯಿಂದ ನಾನು ಏಳು ಬಾರಿ ಸಾವಿನ ಬಾಯಿಯಿಂದ ಪಾರಾಗಿದ್ದೇನೆ. ನಾನು ಯಾರಿಗೂ ಹಾನಿ ಉಂಟುಮಾಡಿಲ್ಲ ಮತ್ತು ಯಾರನ್ನೂ ಶತ್ರುವೆಂದು ಭಾವಿಸಿಲ್ಲ. ಆದರೆ ನನ್ನ ಮೇಲೆ ಹತ್ಯಾ ಯತ್ನಗಳು ಏಕೆ ನಡೆಯುತ್ತಿವೆಯೆಂಬುದು ಅರ್ಥವಾಗುತ್ತಿಲ್ಲ. ನಿನ್ನೆಯು ಸಹ ನನ್ನ ಸಾಯಿಸುವ ವಿಫಲಯತ್ನ ನಡೆಯಿತು. ನಾನು ಈಗಲೆ ಸಾಯುವುದಿಲ್ಲ ೧೨೫ ವರ್ಷಗಳವರೆಗೂ ಬದುಕುವ ಇಚ್ಛೆ ಹೊಂದಿದ್ದೇನೆ'' ಎಂದು ಹೇಳಿದರು. ''ನಿನ್ನ ಅಷ್ಟು ದಿನಗಳವರೆಗೆ ಬದುಕಲು ಬಿಡುವವರಾದರೂ ಯಾರು ?'' ಎಂದ ನಾಥುರಾಮ ಗೋಡ್ಸೆ ಕೊನೆಗೂ ಗಾಂಧಿಯವರನ್ನು ಕೊಂದುಹಾಕಿದನು.

**ಐದನೇ ಯತ್ನ : ೨೦ ಜನವರಿ ೧೯೪೮**

**ನವದೆಹಲಿಯಲ್ಲಿ ಮದನಲಾಲ್‌ನಿಂದ ಬಾಂಬ್ ಸ್ಫೋಟ**

ಮಹಾತ್ಮಾ ಗಾಂಧಿ ಅಂದು ಪ್ರಾರ್ಥನಾ ಸಭೆಗೆ ತಡವಾಗಿ ಆಗಮಿಸಿದರು. ಗಾಂಧಿ

ಉಪವಾಸ ಸತ್ಯಾಗ್ರಹ ಅಂತ್ಯಗೊಳಿಸಿ ಕೇವಲ ಎರಡು ದಿನ ಕಳೆದಿತ್ತು. ಜನರೆಲ್ಲರೂ ದೆಹಲಿಯಲ್ಲಿ ಶಾಂತಿ ತರಲು ಶ್ರಮಿಸುತ್ತೇವೆಂದು ಭರವಸೆ ನೀಡಿದ್ದರಿಂದ, ಉಪವಾಸ ಸತ್ಯಾಗ್ರಹ ಹಿಂತೆಗೆದುಕೊಳ್ಳಲು ಅವರು ಒಪ್ಪಿಕೊಂಡಿದ್ದರು. ಆಗ ತಾನೇ ಭಾರತ ಮತ್ತು ಪಾಕಿಸ್ತಾನ ಇಬ್ಭಾಗವಾಗಿ ಕೆಲವೇ ದಿನಗಳು ಕಳೆದಿದ್ದವು. ಭಾರತ ಸರ್ಕಾರ ಪಾಕಿಸ್ತಾನಕ್ಕೆ ೫೫ ಮಿಲಿಯನ್ ಹಣವನ್ನು ನೀಡಲು ಸಹ ನಿರ್ಧರಿಸಿತ್ತು.

ಮದನಲಾಲ್ ಪಹ್ವಾ, ನಾಥುರಾಮ ವಿನಾಯಕ ಗೋಡ್ಸೆ, ನಾರಾಯಣ ದತ್ತಾತ್ರೇಯ ಆಪ್ಟೆ, ವಿಷ್ಣು ರಾಮಕೃಷ್ಣ ಕರ್ಕರೆ, ದಿಗಂಬರ ರಾಮಚಂದ್ರ ಖಡ್ಗೆ, ಗೋಪಾಲ ಗೋಡ್ಸೆ ಮತ್ತು ಶಂಕರ ಕಿಶ್ತ, ಪ್ರಾರ್ಥನಾ ಸಭೆ ನಡೆಯಲಿದ್ದ ಬಿರ್ಲಾ ಭವನ್‌ದಲ್ಲಿ ಒಟ್ಟು ಗೂಡಿದರು. ಮದನಲಾಲ್ ಕಶ್ಮೀರಲಾಲ್ ಪಹ್ವಾ ಮತ್ತು ವಿಷ್ಣು ಕರ್ಕರೆ ಬಿರ್ಲಾ ಭವನ ದಲ್ಲಿಯೇ ನಿಂತರೆ, ಉಳಿದವರು ಸುರ್ಜಿತ ಸಿಂಗ್ ಎಂಬ ಟ್ಯಾಕ್ಸಿ ಚಾಲಕನ ಸಹಾಯದಿಂದ ಪ್ರಾರ್ಥನಾ ಸಭೆಯತ್ತ ಬಂದರು. ಸುರ್ಜಿತ ಸಿಂಗ್ ಮಹಾತ್ಮಾ ಗಾಂಧಿ ಹತ್ಯೆಯ ನ್ಯಾಯಾಂಗ ವಿಚಾರಣೆಯಲ್ಲಿ ೧೪ನೇ ಸಾಕ್ಷಿದಾರನಾಗಿದ್ದನು. ನಾಥುರಾಮ ಗೋಡ್ಸೆ ತಡವಾಗಿ ಬಿರ್ಲಾ ಭವನಕ್ಕೆ ಬಂದನು. ಮದನಲಾಲ್ ಪಹ್ವಾ ಮಹಾತ್ಮಾ ಗಾಂಧಿಯವರ ಚಿತ್ರವನ್ನು ಹತ್ತಿರದಿಂದ ತೆಗೆಯಬೇಕೆಂದು ಸುಳ್ಳು ಹೇಳಿ, ಬಿರ್ಲಾ ಭವನದಲ್ಲಿಯೇ ವಾಸಿಸುತ್ತಿದ್ದ ಚಾಲಕ ಚೋಟುರಾಮಗೆ ಲಂಚದ ಆಮಿಷವೊಡ್ಡಿ ಗಾಂಧೀಜಿ ಕುಳಿತು ಕೊಳ್ಳುವ ವೇದಿಕೆಯ ಬಳಿ ಹೋಗಲು ಅವಕಾಶ ಮಾಡಿಕೊಡಬೇಕೆಂದು ಕೇಳಿಕೊಂಡನು. ಆದರೆ ಚೋಟುರಾಮ ಮಹಾತ್ಮಾ ಗಾಂಧಿಯವರ ಚಿತ್ರ ತೆಗೆಯುವುದರ ಅಗತ್ಯತೆ ಮತ್ತು ಕ್ಯಾಮೆರಾ ಬಗ್ಗೆ ವಿಚಾರಿಸಿದಾಗ, ಮದನಲಾಲ್ ಪಹ್ವಾ ಪೇಚಿಗೆ ಸಿಲುಕಿ ಟ್ಯಾಕ್ಸಿಯತ್ತ ಹೋಗುತ್ತಿರುವಂತೆ ನಟಿಸಿದನು. ಆದರೆ ಆತ ನೇರವಾಗಿ ವೇದಿಕೆ ಹಿಂದಿನ ಗೋಡೆಯತ್ತ ಹೋಗಿ ಬಾಂಬ್ ಸ್ಫೋಟಿಸಲು ಮುಂದಾದನು.

ಗುಂಪಿನ ಉಳಿದ ಸದಸ್ಯರು ಈ ಸಲವೂ ಬಾಂಬ್ ಸ್ಫೋಟಿಸುವಲ್ಲಿ ವಿಫಲವಾಗುತ್ತಿರು ವುದನ್ನರಿತು, ಕಾದಿರಿಸಲಾಗಿದ್ದ ಟ್ಯಾಕ್ಸಿಯತ್ತ ಓಡಿದರು. ಮದನಲಾಲ್ ಪಹ್ವಾ, ಕರ್ಕರೆ, ಬಡ್ಗೆ ಮತ್ತು ಶಂಕರ ಕಿಶ್ಯ ಅಲ್ಲಿಯೇ ಉಳಿದುಕೊಂಡರು. ಬಾಂಬ್ ಸ್ಫೋಟ ಹೆಚ್ಚಿನ ಅಪಾಯ ಮತ್ತು ಗೊಂದಲ ಸೃಷ್ಟಿಸಲಿಲ್ಲ. ಬಾಂಬ್ ಸ್ಫೋಟಿಸಲು ಪ್ರಯತ್ನಪಟ್ಟವನು ಮತ್ತು ಸ್ಫೋಟಿಸಿದವನು ಮದನಲಾಲ್‌ನೆಂದು ಸುಲೋಚನಾದೇವಿ ಮಾಹಿತಿ ನೀಡಿದಳು. ಮಹಾತ್ಮಾ ಗಾಂಧಿ ಹತ್ಯೆಯ ಕುರಿತು ನ್ಯಾಯಾಂಗ ವಿಚಾರಣೆಯಲ್ಲಿ, ಸುಲೋಚನಾದೇವಿ ಹದಿನೈದನೇ ಸಾಕ್ಷಿದಾರಳಾಗಿದ್ದಳು. ಅವಳು ಆ ಘಟನೆ ನಡೆದ ದಿವಸ ಮದನಲಾಲ್‌ನಿಂದ ಕೇವಲ ೧೦೦ ಮೀಟರುಗಳ ಅಂತರದಲ್ಲಿ ನಿಂತಿದ್ದಳು. ಅವಳು ತನ್ನ ಮೂರುವರೆ ವರ್ಷದ ವಯಸ್ಸಿನ ಮಹೇಂದ್ರನನ್ನು ಹುಡುಕುತ್ತ ಬಂದಿದ್ದಳು. ಮಹೇಂದ್ರ ದಿನಾಲೂ ತನ್ನ ಗೆಳೆಯರೊಂದಿಗೆ ಆಟವನ್ನಾಡಲು ಬಿರ್ಲಾ ಭವನಕ್ಕೆ ಬರುತ್ತಿದ್ದನು.

ಮಹಾತ್ಮಾ ಗಾಂಧಿಯವರನ್ನು ಹತ್ಯೆಗೈಯಲು ಬಿರ್ಲಾ ಭವನಕ್ಕೆ ಗುಂಪು ಬಂದಿದ್ದು, ಮದನಲಾಲ್ ಪಹ್ವಾ ಚೋಟುರಾಮನ ಜೊತೆ ಮಾಡನಾಡಿಸಿದ್ದು, ಗೋಡೆಯ ಮೇಲೆ ಬಾಂಬ ಇರಿಸಿದ್ದು, ಮದನಲಾಲ್ ಬಾಂಬ್ ಸ್ಫೋಟಿಸಲು ಸಿದ್ಧನಾಗಿದ್ದು, ಬಾಂಬ್ ಸ್ಫೋಟಗೊಂಡಿದ್ದು, ಮದನಲಾಲ್ ಪಹ್ವಾನ ಸಹಕಾರ್ಯಕರ್ತರು ಟ್ಯಾಕ್ಸಿಯತ್ತ ಓಡಿದ್ದು, ಮದನಲಾಲ್ ಪಹ್ವಾನನ್ನು ಬಿಟ್ಟು ಟ್ಯಾಕ್ಸಿ ವೇಗವಾಗಿ ಚಲಿಸಿದ್ದು – ಎಲ್ಲದಕ್ಕೂ ಸುಲೋಚನಾ ದೇವಿ ಪ್ರತ್ಯಕ್ಷದರ್ಶಿಯಾದಳು. ಬಾಂಬ್ ಸ್ಫೋಟಿಸಿದ್ದು 'ಮದನಲಾಲ್ ಪಹ್ವಾ'ನೆಂದು ಸುಲೋಚನಾದೇವಿ ಬಿರ್ಲಾ ಭವನದ ಕಾವಲುಗಾರ ಫುಲ್ಲಸಿಂಗ್, ಶಸ್ತ್ರಸಜ್ಜಿತ ಪೊಲೀಸರಿಗೆ, ಸೈನಿಕನಿಗೆ ಮತ್ತು ಇನ್ನಿತರರಿಗೆ ಮಾಹಿತಿ ನೀಡಿದಳು. ಇವರೆಲ್ಲರೂ ಸೇರಿ ತಪ್ಪಿಸಿಕೊಳ್ಳುತ್ತಿದ್ದ ಮದನಲಾಲ್‌ನನ್ನು ಹಿಡಿದರು. ಆತನನ್ನು ಬಂಧಿ ಸಿದಾಗ, ಆತನ ಕೈಯಲ್ಲಿ ಗ್ರೆನೈಡ್ ಸಹ ಸಿಕ್ಕಿತು. ಈ ರೀತಿ ಮಹಾತ್ಮಾ ಗಾಂಧಿಯವರ ಮೇಲೆ ನಡೆದ ಇನ್ನೊಂದು ಹತ್ಯಾ ಯತ್ನ ವಿಫಲವಾಯಿತು.

ವಿಚಾರಣೆಯಲ್ಲಿ ಮದನಲಾಲ್, ಗಾಂಧಿಯವರನ್ನು ಕೊಲ್ಲಲು ಸೃಷ್ಟಿಸಲಾಗಿದ್ದ ಏಳು ಜನರ ಗ್ಯಾಂಗ್‌ನಲ್ಲಿ ತಾನು ಸಹ ಒಬ್ಬನೆಂದು ಒಪ್ಪಿಕೊಂಡನು. ಅವತ್ತಿನ ಯೋಜನೆಯ ಪ್ರಕಾರ, ಮದನಲಾಲ್ ಗಾಂಧಿಯವರ ವೇದಿಕೆಯ ಬಳಿ ಬಾಂಬ್‌ಸ್ಫೋಟಿಸಿದ ತದನಂತರವೇ ಗೌಜು-ಗದ್ದಲದಲ್ಲಿ ಬಡ್ಗೆ ಮತ್ತು ಕಿಶ್ಯ ಗಾಂಧಿಯವರ ಮೇಲೆ ಗುಂಡು ಹೊಡೆಯಬೇಕಿತ್ತು. ಹತ್ಯೆ ನಂತರದ ಗೊಂದಲ ವಾತಾವರಣದಲ್ಲಿ ತಪ್ಪಿಸಿಕೊಳ್ಳುವ ಹವಣಿಕೆ ಸಹ ಮಾಡಿದ್ದರು. ಘಟನೆಯ ಮುಂದಿನ ಹಂತವಾಗಿ ಕರ್ಕರೆ ಎಂಬಾತ ಆ ಸ್ಥಳದಲ್ಲಿ ಗ್ರೆನೈಡ್ ಸ್ಫೋಟಿಸಿ ಇನ್ನಷ್ಟು ಗೊಂದಲಮಯ ವಾತಾವರಣ ಸೃಷ್ಟಿಸಬೇಕಾಗಿತ್ತು. ಆದರೆ ಗೋಡ್ಸೆ ಮತ್ತು ಆಪ್ಟೆಯವರ ಸ್ಥಿತಿಯನ್ನು ಕಂಡು ಆ ಸ್ಥಳದಿಂದ ಪಾರಾಗಲು ಅಸಾಧ್ಯವಾಗುತ್ತೆಂದು ತಿಳಿದು ಏನೂ ಮಾಡದೇ ಸುಮ್ಮನಾಗಿಬಿಟ್ಟನು. ಇನ್ನೊಂದು ಕಡೆ, ಬಡ್ಗೆ ತನ್ನ ಪಿಸ್ತೂಲ್ ಟ್ಯಾಕ್ಸಿಯಲ್ಲಿಯೇ ಬಿಟ್ಟು, ಮುಂದಿನ ಸೂಚನೆ ನೀಡುವವರೆಗೂ ಯಾವುದೇ ಚಟುವಟಿಕೆಯಲ್ಲಿ ತೊಡಗಬಾರದೆಂದು ತನ್ನ ಸೇವಕ ಕರ್ಕರೆಗೆ ಹೇಳಿದನು.

ಪ್ರಾರ್ಥನೆ ತಡವಾಗಿ ಶುರುಗೊಂಡಿದ್ದು, ಚೋಟುರಾಮ ಮದನಲಾಲ್‌ನನ್ನು ಪ್ರಶ್ನಿಸಿದ್ದು, ಮದನಲಾಲ್ ಬಾಂಬ್ ಸೂಕ್ತ ರೀತಿಯಲ್ಲಿ ಸ್ಫೋಟಗೊಳಿಸುವಲ್ಲಿ ವಿಫಲನಾಗಿದ್ದು – ಹೀಗೆ ಹಲವಾರು ಕಾರಣಗಳಿಂದ ಗಾಂಧಿಯವರನ್ನು ಕೊಲ್ಲಲು ಬಂದಿದ್ದ ಗ್ಯಾಂಗ್ ಗೊಂದಲಕ್ಕೆ ಸಿಕ್ಕಿತು. ಆ ಗ್ಯಾಂಗ್ (ಗುಂಪು) ತಕ್ಷಣವೇ ಹತ್ಯಾ ಯೋಚನೆ ಮತ್ತು ಮದನಲಾಲ್‌ನನ್ನು ಅಲ್ಲಿಯೇ ಬಿಟ್ಟು, ಆ ಸ್ಥಳದಿಂದ ತಪ್ಪಿಸಿಕೊಂಡಿತು. ಕರ್ಕರೆ, ಬಡ್ಗೆ ಮತ್ತು ಕಿಶ್ಯ ಹಿಂದೂ ಮಹಾಸಭಾ ಕಛೇರಿಯತ್ತ ದೌಡಾಯಿಸಿದರು. ಇದರ ಪರಿಣಾಮವಾಗಿ, ಗೋಡ್ಸೆ ಮತ್ತು ಆಪ್ಟೆಯ ಬೈಗುಳಗಳಿಗೆ ತುತ್ತಾಗಬೇಕಾಯಿತು.

ಅದೇ ರಾತ್ರಿ, ಮದನಲಾಲ್ ಪೊಲೀಸರನ್ನು ತಮ್ಮ ಗ್ಯಾಂಗಿನ ಸದಸ್ಯರು ತಂಗಿದ್ದ ಹೋಟೆಲ್‌ಗೆ ಕರೆದೊಯ್ದನು. ಗೋಡ್ಸೆ ಮತ್ತು ಆಪ್ಟೆ ಮರೀನಾ ಹೋಟೆಲ್‌ನಲ್ಲಿದ್ದರೆ, ಉಳಿದವರು ಶರೀಫಾ ಹೋಟೆಲ್‌ನಲ್ಲಿ ತಂಗಿದ್ದರು. ಪೊಲೀಸರು ಅಲ್ಲಿ ದೊರೆತ ವಸ್ತುಗಳನ್ನೆಲ್ಲ ವಶಪಡಿಸಿಕೊಂಡರು. ಗ್ಯಾಂಗಿನ ಸದಸ್ಯರೆಲ್ಲರೂ ತಮ್ಮ ತಮ್ಮ ಊರಿಗೆ ಮರಳಿದರು. ನಾಥುರಾಮ ಗೋಡ್ಸೆ ಮತ್ತು ನಾರಾಯಣ ಆಪ್ಟೆ ಬಾಂಬೆ ಮೂಲಕ ಪುಣೆ ತಲುಪಿದರೂ, ಮಹಾತ್ಮಾ ಗಾಂಧಿಯವರನ್ನು ಕೊಲ್ಲುವ ಯೋಜನೆ ಕೈಬಿಡಲಿಲ್ಲ. ಇಬ್ಬರೂ ಗ್ವಾಲಿಯರ್‌ಗೆ ತೆರಳಿ ಡಾ|| ಪರ್ಚೂರ ಮತ್ತು ದಂಡವತೆಯ ಸಹಾಯದಿಂದ ಬೆರೆಟ್ಟಾ ಆಟೋಮೆಟಿಕ್ ಪಿಸ್ತೂಲ್ ಮತ್ತು ಹನ್ನೆರಡು ಗುಂಡು ಮದ್ದುಗಳನ್ನು ತೆಗೆದುಕೊಂಡರು. ಜನವರಿ ೨೯, ೧೯೪೮ರಂದು ದೆಹಲಿಗೆ ತಲುಪಿ, ಅಲ್ಲಿಯ ರೇಲ್ವೆ ನಿಲ್ದಾಣದ ನಿವೃತ್ತಿ ಕೊಠಡಿಯಲ್ಲಿ ವಿರಮಿಸಿದರು.

**ಕೊನೆಯ ಯತ್ನ : ೩೦ ಜನವರಿ ೧೯೪೮**

**ಮಹಾತ್ಮಾ ಗಾಂಧಿ ಕೊನೆ ಉಸಿರೆಳೆದರು**

ದೇಶದ ಯಾವುದೇ ಭಾಗದಲ್ಲಿ ಕೋಮುಗಲಭೆ ನಡೆದರೂ, ಆದಷ್ಟು ಬೇಗ ಶಾಂತಿ ನೆಲೆಸಲಿಯೆಂದು ಬಯಸುತ್ತಿದ್ದರು. ಅದಕ್ಕಾಗಿ ತಕ್ಕ ಪ್ರಯತ್ನ ಮಾಡುತ್ತಿದ್ದರು. ಕಲ್ಕತ್ತದಲ್ಲಿ ಕೋಮು ಗಲಭೆಯಿಂದಾಗಿ ಹೆಚ್ಚಿನ ಸಾವು-ನೋವು, ತಿಪ್ಪರಲಾಗ ಹಾಕಿದರೂ, ಯಾರಿಂದಲೂ ಮಿತಿ ಮೀರುತ್ತಿರುವ ಗಲಭೆಯನ್ನು ತಡೆಯಲಾಗಲಿಲ್ಲ. ಇದೇ ಸಮಯದಲ್ಲಿ, ಮಹಾತ್ಮಾ ಗಾಂಧಿ ಯಾವುದಕ್ಕೂ ಅಂಜದೇ ಕಲ್ಕತ್ತದ ಬೀದಿ-ಬೀದಿ ಗಳಲ್ಲಿ ನಡೆದುಬಿಟ್ಟರು. ಪಾದಯಾತ್ರೆ ಮಾಡಿದರು. ಯಾವುದೋ ಮಾಯೆಯಂತೆ ರಕ್ತಪಾತದಲ್ಲಿ ತೊಡಗಿದ್ದವರು ಗಾಂಧಿಯವರನ್ನು ನೋಡಿದ ಕೂಡಲೇ ತಣ್ಣಗಾಗಿ ಬಿಟ್ಟರು. ಕಲ್ಲು ತೂರಾಟ ದಲ್ಲಿದ್ದವರು ಕಲ್ಲುಗಳನ್ನೆಸೆಯುವುದನ್ನೇ ನಿಲ್ಲಿಸಿಬಿಟ್ಟರು, ತಲೆ ಒಡೆಯಲು ಕಲ್ಲು ತೆಗೆದುಕೊಳ್ಳುವ ಮನಸ್ಸು ಮಾಡಲಿಲ್ಲ. ಗಾಂಧಿ ನಡೆದು ಹೋದ ಪ್ರದೇಶಗಳೆಲ್ಲ ಸ್ತಬ್ಧತೆ ಆವರಿಸಿತು. ಗಾಂಧಿ ಮಾತನ್ನು ಕೇಳಿದ ಜನರು ಶಾಂತಿಯತ್ತ ಒಲವು ತೋರಿದರು. ಕಲ್ಕತ್ತ ಮತ್ತೆ ಸಹಜ ಸ್ಥಿತಿಗೆ ಬರಲು ಮತ್ತು ಅಲ್ಲಿ ಶಾಂತಿ ನೆಲಸಲು ಗಾಂಧಿ ಏಕಮೇವ ಶಕ್ತಿಯಾಗಿದ್ದರು.

ಮಹಾತ್ಮಾ ಗಾಂಧಿ ಬಹುಸಂಸ್ಕೃತಿಯಲ್ಲಿ ನಂಬಿಕೆಯಿಟ್ಟುಕೊಂಡಿದ್ದರು. ಹಿಂದೂ

೧೬೫ನೇ ಪುಟಕ್ಕೆ



# ಶಿಕ್ಷಣ ಕ್ಷೇತ್ರದ ಸಮಸ್ಯೆಗಳನ್ನು ಬಗೆಹರಿಸಲು ವೈಜ್ಞಾನಿಕ ವಿಧಾನದ ಅವಶ್ಯಕತೆಯಿದೆ

ವೈಜ್ಞಾನಿಕ ವಿಧಾನವೆಂದರೆ ಆ ಪದಪ್ರಯೋಗದ ತತ್ವಶಾಸ್ತ್ರ ಸಂಬಂಧಿತ ಚರ್ಚೆಯಲ್ಲಿ ತೊಡಗಿಕೊಳ್ಳದೆ ಆ ಮೂಲಕ ನಮ್ಮ ಮುಂದಿರುವ ವಾಸ್ತವ ಪರಿಸ್ಥಿತಿಯನ್ನು ಆಳವಾಗಿ ವಿಶ್ಲೇಷಿಸುವುದು ಎಂದಷ್ಟೆ ಅರ್ಥ. ಯಾವತ್ತಿಗೂ ವೈಜ್ಞಾನಿಕ ವಿಧಾನವನ್ನು ಬಳಸಿ ಸಮಾಜದ ಎಲ್ಲ ಸಮಸ್ಯೆಗಳನ್ನು ಅರ್ಥೈಸುವುದು ಸರಿಯಾದ ಮಾರ್ಗವೆಂದು ನಮ್ಮೆಲ್ಲರ ಅನುಭವಕ್ಕೆ ಬಂದಿದೆ. ಜಗತ್ತಿನ ಎಲ್ಲ ಬಗೆಯ ಘಟನೆಗಳಿಗೂ, ಅದರಲ್ಲೂ ಸಾಮಾಜಿಕ ಬೆಳವಣಿಗೆಗಳಿಗೂ ಮತ್ತು ಭೌತಿಕ ಹಾಗೂ ಆರ್ಥಿಕ ವಾಸ್ತವತೆಗಳಿಗೂ ಪರಸ್ಪರ ಮೂಲಭೂತ ಅಂತರ್‌ಸಂಬಂಧಗಳಿವೆಯೆಂಬುದನ್ನು ವೈಜ್ಞಾನಿಕ ವಿಧಾನ ಮತ್ತು ವಿಶ್ಲೇಷಣೆಗಳಿಂದ ಗುರುತಿಸಬಹುದಾಗಿದೆ. ಇದೇ ತತ್ವವನ್ನಾಧರಿಸಿ ನಮ್ಮ ಶಿಕ್ಷಣ ಕ್ಷೇತ್ರದ ಮತ್ತು ಆರ್ಥಿಕ ವ್ಯವಸ್ಥೆಗಳಲ್ಲಿನ ಆಂತರಿಕ ವೈರುಧ್ಯಗಳು ಹಾಗೂ ಬಿಕ್ಕಟ್ಟುಗಳನ್ನು ಕುರಿತು ಚರ್ಚಿಸುವುದು ಸಾಂದರ್ಭಿಕವೆನಿಸುತ್ತದೆ.

ಕೆ. ಕೆ. ಥೇಕೆಡತ್

ನಮ್ಮ ಶಿಕ್ಷಣ ಕ್ಷೇತ್ರವು ಹತ್ತು ಹಲವು ಸಮಸ್ಯೆಗಳಿಗೆ ತುತ್ತಾಗಿ ನಲುಗಿಹೋಗುತ್ತಿದೆ. ವೈಜ್ಞಾನಿಕ ದೃಷ್ಟಿಕೋನ ಮತ್ತು ವೈಜ್ಞಾನಿಕ ವಿಧಾನಗಳನ್ನು ಅಳವಡಿಸಿಕೊಂಡು ಅವುಗಳಿಗೆ ಸೂಕ್ತ ಪರಿಹಾರಗಳನ್ನು ಕಂಡುಕೊಳ್ಳುವುದು ಇಂದಿನ ಅವಶ್ಯಕತೆಯಾಗಿದೆ. ವೈಜ್ಞಾನಿಕ ವಿಧಾನವೆಂದರೆ ಆ ಪದಪ್ರಯೋಗದ ತತ್ವಶಾಸ್ತ್ರ ಸಂಬಂಧಿತ ಚರ್ಚೆಯಲ್ಲಿ ತೊಡಗಿಕೊಳ್ಳದೆ ಆ ಮೂಲಕ ನಮ್ಮ ಮುಂದಿರುವ ವಾಸ್ತವ ಪರಿಸ್ಥಿತಿಯನ್ನು ಆಳವಾಗಿ ವಿಶ್ಲೇಷಿಸುವುದು ಎಂದಷ್ಟೆ ಅರ್ಥ. ಯಾವತ್ತಿಗೂ ವೈಜ್ಞಾನಿಕ ವಿಧಾನವನ್ನು ಬಳಸಿ ಸಮಾಜದ ಎಲ್ಲ ಸಮಸ್ಯೆಗಳನ್ನು ಅರ್ಥೈಸುವುದು ಸರಿಯಾದ ಮಾರ್ಗವೆಂದು ನಮ್ಮೆಲ್ಲರ ಅನುಭವಕ್ಕೆ ಬಂದಿದೆ. ಜಗತ್ತಿನ ಎಲ್ಲ ಬಗೆಯ ಘಟನೆಗಳಿಗೂ, ಅದರಲ್ಲೂ ಸಾಮಾಜಿಕ ಬೆಳವಣಿಗೆಗಳಿಗೂ ಮತ್ತು ಭೌತಿಕ ಹಾಗೂ ಆರ್ಥಿಕ ವಾಸ್ತವತೆಗಳಿಗೂ ಪರಸ್ಪರ ಮೂಲಭೂತ ಅಂತರ್‌ಸಂಬಂಧಗಳಿವೆಯೆಂಬುದನ್ನು ವೈಜ್ಞಾನಿಕ ವಿಧಾನ ಮತ್ತು ವಿಶ್ಲೇಷಣೆಗಳಿಂದ ಗುರುತಿಸಬಹುದಾಗಿದೆ. ಇದೇ ತತ್ವವನ್ನಾಧರಿಸಿ ನಮ್ಮ ಶಿಕ್ಷಣ ಕ್ಷೇತ್ರದ ಮತ್ತು ಆರ್ಥಿಕ ವ್ಯವಸ್ಥೆಗಳಲ್ಲಿನ ಆಂತರಿಕ ವೈರುಧ್ಯಗಳು ಹಾಗೂ ಬಿಕ್ಕಟ್ಟುಗಳನ್ನು ಕುರಿತು ಚರ್ಚಿಸುವುದು ಸಾಂದರ್ಭಿಕವೆನಿಸುತ್ತದೆ.

೧೯೮೦ರ ನಂತರದ ಅವಧಿಯಲ್ಲಿ ಸಂಭವಿಸಿದ ಜಾಗತಿಕ ಬಂಡವಾಳಶಾಹಿ ಬಿಕ್ಕಟ್ಟು ಭಾರತದ ಆರ್ಥಿಕತೆಯ ಮೇಲೂ ಸಾಕಷ್ಟು ದುಷ್ಪರಿಣಾಮವನ್ನು ಬೀರಿ ಇಲ್ಲಿನ ಆಡಳಿತ ವರ್ಗ ಸುಖೀ ರಾಜ್ಯದ ಪರಿಕಲ್ಪನೆಯನ್ನೇ ಕೈಬಿಡುವುದಲ್ಲದೆ ಹಲವಾರು ಜನಪರ ಯೋಜನೆಗಳಿಂದ ದೂರಸರಿಯುವುದಕ್ಕೆ ಕಾರಣವಾಯಿತು. ಇದರಿಂದಾಗಿ ಜವಾಹರಲಾಲ ನೆಹರು ಅವರು ನಿರೂಪಿಸಿದ ಅನುದಾನಿತ ಸಾರ್ವಜನಿಕ ಸೇವೆಗಳಂತಹ ಪ್ರಗತಿಪರ ಯೋಜನೆಗಳ ಬದಲಾಗಿ ಕೇವಲ ಹಣಕಾಸು ದೃಷ್ಟಿಯಲ್ಲಿ ಪರಿಗಣಿಸಿದ ವಿಧೇಯಕಗಳನ್ನು ಅಳವಡಿಸಿಕೊಳ್ಳಲಾಯಿತು, ಅರ್ಥಶಾಸ್ತ್ರ ತಜ್ಞ ಕೇನ್ಸ್ ಪ್ರತಿಪಾದಿಸಿದ ಬೇಡಿಕೆ ಆಧಾರಿತ ನಿರ್ವಹಣೆ (Demand Management) ಮಾದರಿಗಳನ್ನು ಕಡೆಗಣಿಸಲಾಯಿತು. ವ್ಯಾಪಾರಿ ಮನೋಧರ್ಮ ಮತ್ತು ಲಾಭಗಳಿಕೆ ನೀತಿಯನ್ನನುಸರಿಸಿ ಸರಕಾರ ತನ್ನ ಧೋರಣೆಗಳನ್ನು ಬದಲಾಯಿಸಿಕೊಳ್ಳಲು ಪ್ರಾರಂಭಿಸಿದ್ದು ಈ ಕಾಲಘಟ್ಟದಲ್ಲಿ.

**ಶೈಕ್ಷಣಿಕ ಕಾರ್ಯಕ್ರಮಗಳು**

ಈ ಹಿನ್ನೆಲೆಯಲ್ಲಿ ರಾಜೀವ್ ಗಾಂಧಿ, ನರಸಿಂಹ ರಾವ್, ವಾಜಪೇಯಿ ಮತ್ತು ಮನಮೋಹನ ಸಿಂಗ್ ಅವರ ಸರಕಾರಗಳು ಈವರೆಗೆ ಜನತೆಯ ಮುಂದಿಟ್ಟಿರುವ ಶೈಕ್ಷಣಿಕ ಕಾರ್ಯಕ್ರಮಗಳನ್ನು ವಸ್ತುನಿಷ್ಠವಾಗಿ ಮೌಲ್ಯಮಾಪನ ಮಾಡುವುದು ಇಲ್ಲಿನ ಚರ್ಚೆಗೆ ಪೂರಕವಾಗಿದೆ.

ರಾಜೀವ್-ನರಸಿಂಹ ರಾವ್ ಸರಕಾರದ ಅವಧಿಯಲ್ಲಿ 'ಶಿಕ್ಷಣ ಕ್ಷೇತ್ರದ ಸವಾಲುಗಳು' ಎಂಬ ಘೋಷಣಾಪತ್ರ ಹಾಗೂ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯ ಮೂಲಕ ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಖಾಸಗಿ ಅನುದಾನರಹಿತ ಶಿಕ್ಷಣ ಪದ್ಧತಿಯನ್ನು ಜಾರಿಗೆ ತರಲಾಯಿತು. ವಿದ್ಯಾರ್ಥಿ ಸಮೂಹಕ್ಕೆ ಅದರಿಂದ ಲಭಿಸಿದ 'ಉಡುಗೊರೆ'ಯೆಂದರೆ ಶುಲ್ಕದ ಏರಿಕೆ ಮತ್ತು ಬಡ ವಿದ್ಯಾರ್ಥಿಗಳಿಗೆ ನೀಡಲಾಗುತ್ತಿದ್ದ ಶುಲ್ಕವಿನಾಯಿತಿಯಲ್ಲಿ ಕಡಿತ.

ಇನ್ನು, ಎನ್‌ಡಿಎ ಸರಕಾರದ ಆಡಳಿತಾವಧಿಯಲ್ಲಿ ಜರುಗಿದ ಪ್ರಹಸನ ಬಹಳ ಸ್ವಾರಸ್ಯಕರವಾಗಿದೆ. ಪ್ರಧಾನಿ ವಾಜಪೇಯಿ, ಅದ್ವಾನಿ, ಮುರಳಿ ಮನೋಹರ ಜೋಷಿ ಮತ್ತು ಅವರ ಪಾಳೆಯದವರು ಶಿಕ್ಷಣ ವ್ಯವಸ್ಥೆ ಕುರಿತಾಗಲಿ, ವಿದ್ಯಾರ್ಥಿಗಳ ಭವಿಷ್ಯವನ್ನು ಕುರಿತಾಗಲಿ ಅತೀವ 'ಕಾಳಜಿ' ವಹಿಸಿದ, ವಹಿಸುತ್ತಿರುವ ಮಹನೀಯರು. ಅವರ 'ಕಾಳಜಿ'ಗೆ ಬಲಿಯಾದ ಶಿಕ್ಷಣಕ್ಷೇತ್ರ ಬಳಲಿ ಹೋಗಿದೆ. ಇದರ ದುರಸ್ತಿಗೆ ಇನ್ನೂ ಬಹುಕಾಲ ಬೇಕಾದೀತು. ವಾಣಿಜ್ಯ ಮತ್ತು ಉದ್ದಿಮೆ ಕುರಿತು ಅಧ್ಯಯನ ನಡೆಸಲು ವಾಜಪೇಯಿ ಸರಕಾರ ನೇಮಿಸಿದ್ದ ಸಮಿತಿಯು ತನ್ನ ವರದಿಯಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ತರಲಿಚ್ಛಿಸಿದ್ದ ಸುಧಾರಣೆಗಳ ಬಗ್ಗೆ ವಿವರಿಸಿದೆ. ಈ ವರದಿಯಲ್ಲಿ ಶಿಕ್ಷಣ ಕ್ಷೇತ್ರ ಹಾಗೂ ಅದರ ಹಣಕಾಸು ವ್ಯವಹಾರಗಳಿಗೆ ಸಂಬಂಧಿಸಿದಂತೆ ಸರಕಾರಕ್ಕಿದ್ದ ಧೋರಣೆಯ ಬಗ್ಗೆ ಪ್ರಸ್ತಾಪವಿದೆ. ಇದು ಬಿರ್ಲಾ-ಅಂಬಾನಿ ವರದಿ ಎಂದೇ ಪರಿಚಿತ. ಬಿರ್ಲಾ-ಅಂಬಾನಿ ಇಬ್ಬರು ಮಹಾಶಯರೂ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯ ಪುನಾರಚನೆಯ ನೀತಿನಿಯಮಗಳನ್ನು ವರದಿಯಲ್ಲಿ ನಿರೂಪಿಸುತ್ತಾ ಪ್ರೌಢ ಮತ್ತು ವೃತ್ತಿ ಶಿಕ್ಷಣದಲ್ಲಿ ಸರಕಾರವು ಹೂಡಿರುವ ಎಲ್ಲ ಹಣಕಾಸು ಯೋಜನೆಗಳನ್ನು ಹಿಂತೆಗೆದುಕೊಳ್ಳಬೇಕೆಂದು ಸ್ಪಷ್ಟವಾಗಿ ಸೂಚಿಸಿದ್ದಾರೆ.

೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯು ಸಮಗ್ರ ಅಂತರ್‌ದೇಶೀಯ ಉತ್ಪಾದನೆಯ ಪೈಕಿ ತನ್ನ ಹೂಡಿಕೆಯನ್ನು ಶೇ. ೩ರಿಂದ ೬ಕ್ಕೆ ಏರಿಸಲು ಭರವಸೆ ನೀಡಿದರೆ, ಬಿರ್ಲಾ-ಅಂಬಾನಿ ವರದಿಯು ಎಲ್ಲ ಬಗೆಯ ಮೀಸಲಾತಿಯನ್ನು ಗಾಳಿಗೆ ತೂರಿ ಜಿಡಿಪಿಯ ಶೇ. ೧.೯೮ರಷ್ಟು ಮಾತ್ರ ಶಿಕ್ಷಣಕ್ಷೇತ್ರಕ್ಕಾಗಿ ಸರಕಾರ ವಿನಿಯೋಗಿಸಿದರೆ ಸಾಕು, ಅಲ್ಲದೆ ಮಿಕ್ಕ ಎಲ್ಲ ಹಣಕಾಸು ಅಗತ್ಯತೆಗಳನ್ನು ಪೂರೈಸಲು ಇನ್ನು ಮುಂದೆ ಖಾಸಗಿ ಮೂಲಗಳಿಂದ ನೆರವು ಪಡೆದು ಲಾಭ-ನಷ್ಟದ ಆಧಾರದ ಮೇಲೆ ವ್ಯವಹರಿಸಬೇಕೆಂದು ಘೋಷಿಸಿದೆ. ಇದು ಆ ಪ್ರಹಸನದ ಮುಂದುವರೆದ ಭಾಗವೆಂದರೆ ತಪ್ಪಾಗದು.

''ಖಾಸಗಿ ಮೂಲಗಳು ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಹಣಕಾಸು ಒದಗಿಸುವುದನ್ನು ಇಲ್ಲವೇ ಆ ಮೂಲಗಳು ಸಾರ್ವಜನಿಕ ಸಂಸ್ಥೆಗಳಿಗೆ ನೆರವು ನೀಡುವುದನ್ನು ಪ್ರೋತ್ಸಾಹಿಸಬಹುದಾಗಿದೆ. ಖಾಸಗಿ ಶಾಲಾಸಂಸ್ಥೆಗಳು ಮತ್ತು ವಿಶ್ವವಿದ್ಯಾನಿಲಯಗಳಿಗೆ ಮೇಲ್ವರ್ಗದ ಜನವಿಭಾಗದಿಂದ ವಿದ್ಯಾರ್ಥಿಗಳು

ಹೆಚ್ಚಾಗಿ ಬರುತ್ತಿರುವುದು ಅಲ್ಲಿನ ವೈವಿಧ್ಯತೆ ಮತ್ತು ಸಾರ್ವಜನಿಕ ಸಂಸ್ಥೆಗಳ ಸಡುವೆ ಅದರಲ್ಲೂ ಉನ್ನತ ಮಾಧ್ಯಮಿಕ ಹಂತದ ಶಿಕ್ಷಣದಲ್ಲಿ ಆರೋಗ್ಯಕರ ಪೈಪೋಟಿಗೆ ಎಡೆ ಮಾಡಿಕೊಡುತ್ತದೆ'' ಎಂದು ಸ್ಪಷ್ಟಪಡಿಸುವುದರ ಮೂಲಕ ಬಿರ್ಲಾ-ಅಂಬಾನಿ ವರದಿಯು ತನ್ನ ಮೇಲ್ವರ್ಗಪರ ಧೋರಣೆಯನ್ನು ಮುಚ್ಚುಮರೆಯಿಲ್ಲದೇ ಸಮರ್ಥಿಸಿಕೊಂಡಿದೆ.

ವ್ಯಾಪಕ ಅನಕ್ಷರತೆ, ಬಡತನ ಮತ್ತು ಸಾಮಾಜಿಕ-ಆರ್ಥಿಕ ಕಾರಣಗಳಿಂದಾಗಿ ಅಸಂಖ್ಯಾತ ವಿದ್ಯಾರ್ಥಿಗಳು ಶಾಲೆಗಳನ್ನು ಬಿಟ್ಟುಹೋಗುತ್ತಿರುವುದು ನಮ್ಮ ಗ್ರಾಮಾಂತರ ಪ್ರದೇಶಗಳ ಜನಜೀವನದ ಬವಣೆಗೆ ಹಿಡಿದ ಕನ್ನಡಿಯಾಗಿದೆ. ವೈಜ್ಞಾನಿಕ ಆಧಾರದ ಮೇಲೆ ಪರಿಗಣಿಸಿದ್ದರೆ ಬಿರ್ಲಾ-ಅಂಬಾನಿ ವರದಿಯು ಈ ಮೂಲಭೂತ ಅಂಶಕ್ಕೂ ಹೆಚ್ಚು ಒತ್ತು ಕೊಡಬಹುದಿತ್ತು. ಅಂತೆಯೇ, ರಾಜ್ಯಮಟ್ಟದಲ್ಲಿ ಅಕ್ಷರಸ್ಥರ ಸಂಖ್ಯೆ ಏಕರೀತಿಯದಲ್ಲ. ಒಂದೊಂದು ರಾಜ್ಯದಲ್ಲಿ ಒಂದೊಂದು ಪ್ರಮಾಣದಲ್ಲಿದ್ದಾರೆ. ಉದಾಹರಣೆಗೆ, ಕೇರಳದಲ್ಲಿ ಓದುಬರಹ ತಿಳಿದ ಮಹಿಳೆಯರು ಶೇ. ೯೨ರಷ್ಟಿದ್ದರೆ, ರಾಜಾಸ್ಥಾನದಲ್ಲಿ ಅವರ ಸಂಖ್ಯೆ ಕೇವಲ ಶೇ. ೧೨ರಷ್ಟು. ಕೇರಳ ರಾಜ್ಯದಲ್ಲಿನ ಎಡ ಮತ್ತು ಪ್ರಜಾತಾಂತ್ರಿಕ ಚಳವಳಿಗಳು ಮತ್ತು ಅಲ್ಲಿನ ಜನತೆಯ ಸಾಮಾಜಿಕ ಪ್ರಜ್ಞೆ ಹಾಗೂ ರಾಜಾಸ್ಥಾನದಲ್ಲಿ ಇಂದಿಗೂ ಮುಂದುವರೆದು ಕೊಂಡುಬಂದಿರುವ ಊಳಿಗಮಾನ್ಯ ಪದ್ಧತಿಯಂತಹ ಅಂಶಗಳೇ ಈ ಏರುಪೇರಿನ ಬೆಳವಣಿಗೆಗೆ ಈ ಅಂಶಗಳು ಕಾರಣವೆಂಬುದನ್ನು ಗುರುತಿಸಬಹುದು. ಕೇರಳದ ಎಡಪಕ್ಷಗಳ ನಾಯಕತ್ವದ ಮತ್ತು ರಾಜಾಸ್ಥಾನದಲ್ಲಿ ಭಾಜಪ ನೇತೃತ್ವದ ಸರಕಾರಗಳನ್ನು ಮತದಾರರು ಅಧಿಕಾರಕ್ಕೆ ತಂದಿರುವುದರ ಹಿನ್ನೆಲೆ ಇಲ್ಲಿದೆ.

ಇಡೀ ಜಗತ್ತಿನಲ್ಲೇ ಅತಿ ಹೆಚ್ಚು ಜನಸಂಖ್ಯೆಯನ್ನು ಮತ್ತು ಹತ್ತಾರು ಆರ್ಥಿಕ ಸಮಸ್ಯೆಗಳನ್ನು ಸಮರ್ಥವಾಗಿ ಎದುರಿಸುತ್ತಿರುವ ಚೀನಾದ ಅನುಭವ ಈ ಚರ್ಚೆಗೆ ಪ್ರಸ್ತುತವೆನಿಸುತ್ತದೆ. ಬಿರ್ಲಾ-ಅಂಬಾನಿ ವರದಿಯಲ್ಲಿ ಪ್ರಸ್ತಾಪಿಸಿರುವಂತೆ ಆ ರಾಷ್ಟ್ರದಲ್ಲಿ ಕಾಲೇಜು ಮಟ್ಟದವರೆಗೂ ಉಚಿತ ಶಿಕ್ಷಣದ ಸೌಲಭ್ಯವಿದೆ. ಶಿಕ್ಷಣ ಸೌಲಭ್ಯವು ಲಕ್ಷಾಂತರ ಜನರಿಗೆ ದೊರಕುವಂತಾಗಲು, ಸಾಕ್ಷರತೆಗೆ ಒತ್ತುಕೊಡುವಾಗ ಚೀನೀ ಸರಕಾರವು ಮಾರುಕಟ್ಟೆಯ ಅಂಶಗಳು, ಲಾಭನಷ್ಟಗಳ ಪರಿಕಲ್ಪನೆಗಳನ್ನು ಪರಿಗಣಿಸಲೇ ಇಲ್ಲ. ಏಕೆಂದರೆ, ಅದು ಅವರ ಸೈದ್ಧಾಂತಿಕ ಮನೋಧರ್ಮ. ಅವರ ನೀತಿಗಳು ಅಷ್ಟು ಜನಪರವಾದುವು.

ಸಮಾಜವಾದಿ ರಾಷ್ಟ್ರಗಳು, ಅದರಲ್ಲೂ ಚೀನಾ, ಶಿಕ್ಷಣ ಕ್ಷೇತ್ರದಲ್ಲಿ ಗಳಿಸಿರುವ ಸಾಧನೆಗಳು ಮತ್ತು ಅಲ್ಲಿನ ಸರಕಾರಗಳ ಅನುಭವಗಳಿಗೆ ಅದರ ಪೂರ್ವಗ್ರಹಪೀಡಿತ ಮನೋವೃತ್ತಿಯೇ ಕಾರಣವೆನ್ನಬಹುದು. ಚೀನೀ ಸರಕಾರದ ರೀತಿನೀತಿಗಳು ಕಾರ್ಯ ವಿಧಾನಗಳು ಭಾರತದ ಅವಶ್ಯಕತೆಗಳಿಗೆ ಪ್ರಸ್ತುತವಲ್ಲ ಎಂಬುದು ಅವರ ವಾದ. ಮಾರುಕಟ್ಟೆ ಆರ್ಥಿಕತೆ ಮತ್ತು ಬಂಡವಾಳಶಾಹಿ ನೀತಿಗಳು ಅವರ ಮೂಲಪ್ರೇರಣೆ. ಜಗತ್ತಿನ ಶೇ. ೮೦ ರಷ್ಟು ರಾಷ್ಟ್ರಗಳಲ್ಲಿ ಜನವಿಭಾಗವನ್ನು ಹೊಂದಿರುವ ರಾಷ್ಟ್ರಗಳಲ್ಲಿ ಈ ಮಾರುಕಟ್ಟೆ ಆರ್ಥಿಕ ನೀತಿಗಳನ್ನು ಅನುಸರಿಸಲಾಗುತ್ತದೆ ಎಂಬ ಮಾತನ್ನು ವರದಿಯಲ್ಲಿ ತೇಲಿಬಿಡಲಾಗಿದೆ.

ಮೌಲ್ಯಾಧಾರಿತ ಶಿಕ್ಷಣ ಕುರಿತಂತೆ ಚರ್ಚಿಸುತ್ತಾ ಶಿಕ್ಷಣ ವ್ಯವಸ್ಥೆಯಲ್ಲಿ ಯಾವುದೇ ಬಗೆಯ ಸೈದ್ಧಾಂತಿಕ ಒಲವುಗಳಿಗೂ ಎಂದರೆ 'ಇಸಂ'ಗಳಿಗೂ ಅವಕಾಶವಿರಬಾರದು ಎಂದು ಇದೇ ವರದಿ ತನ್ನ 'ಮೌಲ್ಯಾಧಾರಿತ' ಸಲಹೆಯನ್ನು ನೀಡುವ ಔದಾರ್ಯವನ್ನು ತೋರಿದೆ. ಬಂಡವಾಳಶಾಹಿ ಆಧಾರಿತ ರಾಜಕೀಯ ವ್ಯವಸ್ಥೆ ಮತ್ತು ಜೀವನ ಪದ್ಧತಿ ಇಂದು ನಮ್ಮಲ್ಲಿದೆ. ಆ ಮೌಲ್ಯಗಳೇ ಕಲೆ, ಸಾಹಿತ್ಯ, ನಾಟಕ, ಸಿನಿಮಾ ಮತ್ತಿತರ ನಮ್ಮ ಒಟ್ಟಾರೆಯ ಜೀವನಶೈಲಿಯಲ್ಲಿ ಅಂತರ್ಗತವಾಗಿ ಹೋಗಿವೆ. ಈ ಮಹನೀಯರಿಗೆ ಇದು ಮಾತ್ರ 'ಇಸಂ' ಎನಿಸದು. ಸಮಾಜವಾದ ಮತ್ತು ಸಮಾಜವಾದಿ ಮೌಲ್ಯಗಳು ಮಾತ್ರ ಇವರ ಕಣ್ಣುಗಳಿಗೆ 'ಇಸಂ' ಆಗಿ ಗೋಚರಿಸುತ್ತದೆ. ಎನ್‌ಡಿಎ ಸರಕಾರದ ಇತ್ತೀಚಿನ ಚುನಾವಣಾ ಸೋಲು, ಅದರ ಹಿಂದಿರುವ ಕಾರಣಗಳು ಈಗಿನ ಯುಪಿಎ ಸರಕಾರ ತನ್ನ ರೀತಿನೀತಿಗಳನ್ನು ರೂಪಿಸುವಾಗ ಎಚ್ಚರ ವಹಿಸುವಂತೆ ಮಾಡಿದೆ. ಇದರ ಕುರುಹುಗಳನ್ನು ಅವರು ರಾಷ್ಟ್ರದ ಮುಂದಿಟ್ಟಿರುವ ತಮ್ಮ ರಾಷ್ಟ್ರೀಯ ಕನಿಷ್ಠ ಕಾರ್ಯಕ್ರಮದ ಕೆಲವು ಅಂಶಗಳನ್ನು ಗಮನಿಸಿದರೆ ತಿಳಿಯುತ್ತದೆ. ಈ ನಿಟ್ಟಿನಲ್ಲಿ ಸಂಸತ್ತಿನಲ್ಲಿ ಈ ಬಾರಿ ತಮ್ಮ ಪ್ರಾತಿನಿಧ್ಯವನ್ನು ಹೆಚ್ಚಿಸಿಕೊಂಡಿರುವ ಎಡಪಕ್ಷಗಳ ಪಾತ್ರ ನಿರ್ಣಾಯಕವಾಗಿರುವುದು ಒಂದು ಮುಖ್ಯ ಬೆಳವಣಿಗೆ.

**ಬರಲಿರುವ ಸುಧಾರಣೆಗಳು**

ಸಮಗ್ರ ಅಂತರ್‌ದೇಶೀಯ ಉತ್ಪಾದನೆ (GDP)ಯ ಶೇ. ೬ರಷ್ಟನ್ನು ಶಿಕ್ಷಣ ಕ್ಷೇತ್ರಕ್ಕೆ ಮೀಸಲಾಗಿಡುವುದಲ್ಲದೆ ಅದರ ಅರ್ಧಭಾಗವನ್ನು ಪ್ರಾಥಮಿಕ ಮತ್ತು ಮಾಧ್ಯಮಿಕ ಮಟ್ಟದ ಶಿಕ್ಷಣಕ್ಕೆ ಒದಗಿಸಲಾಗುವುದೆಂದು ರಾಷ್ಟ್ರೀಯ ಕನಿಷ್ಠ ಕಾರ್ಯಕ್ರಮ ಒತ್ತಿ ಹೇಳುತ್ತದೆ. ಹೀಗೆಯೇ ಮೊದಲ ಹಂತದ ಶಿಕ್ಷಣವು ಜನಸಾಮಾನ್ಯರಿಗೂ ಲಭ್ಯವಾಗುವ ದೃಷ್ಟಿಯಿಂದ ಕೇಂದ್ರ ವಿಧಿಸುವ ಎಲ್ಲ ತೆರಿಗೆಗಳ ಮೇಲೂ ಶೇ. ೨ರಷ್ಟು ಮೇಲ್ಗಂದಾಯ

ವಿಧಿಸುವ ಪ್ರಸ್ತಾವನೆ ಸ್ವಾಗತಾರ್ಹವಾದುದು. ಶಾಲಾಮಟ್ಟದಲ್ಲಿ ಎಲ್ಲ ವಿದ್ಯಾರ್ಥಿಗಳಿಗೂ ಮಧ್ಯಾಹ್ನದ ವೇಳೆಯಲ್ಲಿ ಪುಷ್ಟಿಕರ ಆಹಾರವನ್ನು ಒದಗಿಸುವ ರಾಷ್ಟ್ರಮಟ್ಟದ ಯೋಜನೆಯನ್ನು ಸರಕಾರ ರೂಪಿಸುತ್ತಿದೆ. ಮಕ್ಕಳ ಸರ್ವಾಂಗೀಣ ಅಭಿವೃದ್ಧಿಯ ಸಲುವಾಗಿ ನಿರ್ದಿಷ್ಟ ಕಾರ್ಯಮಿತಿಯುಳ್ಳ ಅಂಗನವಾಡಿಗಳನ್ನು ಒದಗಿಸಿ ಶಿಶು ಅಭಿವೃದ್ಧಿ ಸೇವಾಕೇಂದ್ರಗಳನ್ನು ಪ್ರಾರಂಭಿಸುವ ಭರವಸೆ ನೀಡಲಾಗಿದೆ.

ಈ ಎಲ್ಲ ಯೋಜನೆಗಳೂ ಕಾರ್ಯಗತವಾದರೆ ಜನತೆ, ಅದರಲ್ಲೂ ಹಿಂದುಳಿದ ವರ್ಗದವರು ಸ್ವಲ್ಪಮಟ್ಟಿಗೆ ನಿಟ್ಟುಸಿರು ಬಿಡುವಂತಾಗಬಹುದು. ಮಧ್ಯಾಹ್ನದ ಊಟದ ಕಾರ್ಯಕ್ರಮದಿಂದಾಗಿ ಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿ ಶಾಲೆಗೆ ಹಾಜರಾಗುವುದಲ್ಲದೆ ಅವರ ಆರೋಗ್ಯವೂ ಸುಧಾರಿಸುತ್ತದೆ. ಅಂತೆಯೇ ಅವರು ತಮ್ಮ ಸೃಜನಶೀಲತೆ ದಕ್ಷತೆಗಳನ್ನು ಹೆಚ್ಚಿಸಿಕೊಳ್ಳುವುದಕ್ಕೂ ಅವಕಾಶವಿದೆ. ಅದೇ ಸಂದರ್ಭದಲ್ಲಿ, ಬಂಡವಾಳಶಾಹಿಗಳು ಮತ್ತು ಭೂ ಒಡೆಯರ ಹಿಡಿತದಲ್ಲಿರುವ ಇಂದಿನ ಕೇಂದ್ರ ಸರಕಾರವು ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ನಮೂದಿಸಲಾಗಿರುವ ಎಲ್ಲ ಭರವಸೆಗಳನ್ನೂ ಈಡೇರಿಸುವುದು ಸಾಧ್ಯವಿಲ್ಲವೆಂಬ ಅರಿವು ನಮಗಿರಬೇಕು. ಏಕೆಂದರೆ, ಅದಕ್ಕೆ ತಗಲುವ ಸಾವಿರಾರು ಕೋಟಿ ಖರ್ಚಿನ ಬಾಬ್ತನ್ನು ಸರಕಾರ ಎಲ್ಲಿಂದ ತಾನೇ ತಂದೀತು? ಉದಾಹರಣೆಗೆ, ಶಿಕ್ಷಣ ಮತ್ತು ಯುವಜನತೆಗಾಗಿ ಉದ್ಯೋಗಾವಕಾಶಗಳನ್ನು ಹೆಚ್ಚಿಸುವಂತಹ ಅಂಶಗಳು ಕಾರ್ಯಕ್ರಮದಲ್ಲಿವೆ: ಎಲ್ಲ ಗ್ರಾಮೀಣ ಕುಟುಂಬಗಳ ಒಬ್ಬ ಸದಸ್ಯನಿಗೆ ಕಡೆಯಪಕ್ಷ ವರ್ಷಕ್ಕೆ ನೂರು ದಿವಸಗಳಷ್ಟು ಅವಧಿಯ ಉದ್ಯೋಗ ಎಂದರೆ ದುಡಿಯುವ ಅವಕಾಶವನ್ನು ಸೃಷ್ಟಿಸಲಾಗುವುದೆಂದು ಹೇಳಲಾಗಿದೆ. ಕನಿಷ್ಠ ಕೂಲಿ ದರವನ್ನು ಗಣನೆಗೆ ತೆಗೆದುಕೊಂಡರೂ ಈ ಎಲ್ಲ ಅಂಶಗಳೂ ಕಾರ್ಯಸಿದ್ಧಿಯಾಗಲು ಸುಮಾರು ೯೬,೦೦೦ಕೋಟಿ ರೂ.ಗಳಷ್ಟು ಬೇಕಾಗುತ್ತದೆ ಎಂಬ ಅಂದಾಜಿದೆ. ಈ ವರುಷದ ಬಜೆಟ್‌ನಲ್ಲಿ ಇದಕ್ಕಾಗಿ ನಿಗದಿಗೊಳಿಸಿರುವ ಮೊತ್ತ ೧೦,೦೦೦ಕೋಟಿ ರೂ.ಗಳು ಮಾತ್ರ. ಖೋತಾ ಬಜೆಟ್‌ನಂತಹ ವಿಧಾನಗಳ ಮೂಲಕ ಸಂಪನ್ಮೂಲಗಳ ಕೊರತೆಯನ್ನು ಬಗೆಹರಿಸಿಕೊಳ್ಳುವುದು ರೂಢಿಯಲ್ಲಿದೆ. ಈಗ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಮತ್ತು ವಿಶ್ವ ಬ್ಯಾಂಕುಗಳ ಒತ್ತಾಯ ಮತ್ತು ಷರತ್ತುಗಳಿಂದಾಗಿ ಬಜೆಟ್‌ನಲ್ಲಿ ಖೋತಾ ಹೆಚ್ಚಿಸುವ ಅವಕಾಶವಿಲ್ಲವಾದರೂ ಆ ನಿಟ್ಟಿನಲ್ಲಿ ಅಷ್ಟಿಷ್ಟು ವಿನಾಯಿತಿ ತೋರಿ ಒಂದು ಗರಿಷ್ಠ ಮಿತಿಯನ್ನು ವಿಧಿಸಿ ಹೆಚ್ಚಿಸಬಹುದಾಗಿದೆ.

ಇತರ ರಾಷ್ಟ್ರಗಳಿಗಿಂತಲೂ ಭಾರತದಲ್ಲಿ ಸಮಗ್ರ ಅಂತರ್‌ದೇಶೀಯ ಉತ್ಪಾದನೆ (GDP)ಯ ಪ್ರಮಾಣ ಅತಿ ಕನಿಷ್ಠಮಟ್ಟದ್ದಾಗಿದೆ. ಇದನ್ನು ಬ್ರಿಟನ್‌ನಲ್ಲಿ ಈಗಿರುವ ಪ್ರಮಾಣದ ಮಟ್ಟಕ್ಕೆ ಏರಿಸಬಹುದಾಗಿದೆ. ಆದರೆ ಆಡಳಿತ ವರ್ಗವು ಇಂತಹ ಕ್ರಮಗಳಿಗೆ ಅವಕಾಶ ನೀಡುವುದು ದೂರದ ಮಾತು. ಶೇರು ಮಾರುಕಟ್ಟೆ ದಳ್ಳಾಳಿಗಳ ಸಟ್ಟಾ ವ್ಯಾಪಾರಿಗಳ ವ್ಯವಹಾರಗಳ ಮೇಲೆ ಕೇವಲ ೦.೧೫ರಷ್ಟು ತೆರಿಗೆ ವಿಧಿಸಿದ್ದನ್ನು ಸಚಿವ ಚಿದಂಬರಂ ಹಿಂತೆದುಕೊಳ್ಳಬೇಕಾಗಿ ಬಂದದ್ದು ಜನಪರ ಯೋಜನೆಗಳಿಗೆ ಹೆಚ್ಚು ತೆರಿಗೆ ವಿಧಿಸಿ ಹಣ ಸಂಗ್ರಹಿಸುವ ಉಪಕ್ರಮ ಎಷ್ಟು ಕಷ್ಟಸಾಧ್ಯ ಎಂಬುದಕ್ಕೆ ಒಂದು ಉದಾಹರಣೆ.

ಒಂದು ಅಂಶವಂತೂ ಸ್ಪಷ್ಟ. ಸಾಮಾನ್ಯ ಕನಿಷ್ಠ ಕಾರ್ಯಕ್ರಮದಂತಹ ಯಾವುದೇ ಅಭಿವೃದ್ಧಿಪರ ಯೋಜನೆಗಳನ್ನು ಕೇವಲ ಶಾಸನಗಳ ಮೂಲಕ ಸಂಸತ್ತು, ವಿಧಾನಸಭೆಗಳಲ್ಲಿನ ಒಣಚರ್ಚೆಗಳ ಮೂಲಕ ಜಾರಿಗೆ ತರಲಾಗದು. ಜನಸಾಮಾನ್ಯರನ್ನೊಳಗೊಂಡ ಸಾಮೂಹಿಕ ಹೋರಾಟಗಳನ್ನು ಸಂಘಟಿಸಿ ಸರಕಾರದ ಮೇಲೆ ಆಡಳಿತ ವರ್ಗದ ಮೇಲೆ ಒತ್ತಾಯ ತರುವುದರಿಂದ ಮಾತ್ರ ಇದು ಸಾಧ್ಯ. ಶಿಕ್ಷಣ ಕ್ಷೇತ್ರಕ್ಕೆ ಶೇ. ೬ರಷ್ಟು ಮೊತ್ತವನ್ನು ಸರಕಾರ ವಿನಿಯೋಗಿಸುವಂತಾಗಬೇಕಾದರೆ, ಶಾಲಾ ಮಕ್ಕಳಿಗೆ ಮಧ್ಯಾಹ್ನದ ಊಟ ನೀಡುವ ಯೋಜನೆ ಜಾರಿಯಾಗಬೇಕಾದರೆ ಇಂತಹ ಹೋರಾಟಗಳೇ ಏಕೈಕ ಮಾರ್ಗ. ಬೇರೆ ಪರ್ಯಾಯವಿಲ್ಲ.

ಇನ್ನು, ಶಿಕ್ಷಣ ಮತ್ತು ಪರಿಸರ ಜಾಗೃತಿ ಎರಡನ್ನೂ ಮೇಳೈಸಿಕೊಂಡು ಹೋಗಬೇಕಾದ ಅನಿವಾರ್ಯತೆ ಕುರಿತಂತೆ ಒಂದು ಮಾತು. ವೈಜ್ಞಾನಿಕ ವಿಧಾನಗಳನ್ನನುಸರಿಸಿ ನಮ್ಮ ಬದುಕಿನ ರೂಪುರೇಷೆಗಳು ಜೀವನ ವಿಧಾನಗಳು ಎಂದರೆ ಒಟ್ಟಾರೆಯ ಜೀವನ ಕ್ರಮವನ್ನು ಕುರಿತಂತೆ ಮಾರ್ಗಸೂಚಿಗಳನ್ನು ಕಂಡುಕೊಳ್ಳುವುದು ಅವಶ್ಯಕವಾಗಿದೆ. ಪರಿಸರ ನಾಶ ಅವ್ಯಾಹತವಾಗಿ ಜರುಗತ್ತಲೇ ಇದೆ. ಅದೇ ಸಂದರ್ಭದಲ್ಲಿ ಪರಿಸರ ಸಂರಕ್ಷಣೆಗಾಗಿ ಮಾನವನು ಸಂಘರ್ಷ ಹೂಡುತ್ತಲೇ ಬಂದಿದ್ದಾನೆ. ಮನುಕುಲದ ಭವಿಷ್ಯವು ಈ ಸಂಘರ್ಷವನ್ನು ಹೊಂದಿಕೊಂಡಿದೆಯೆಂಬುದು ನಿರ್ವಿವಾದ. ಆರ್ಥಿಕ, ಸಾಮಾಜಿಕ ಅಸಮಾನತೆಯ ವಿರುದ್ಧದ ಹೋರಾಟಗಳು ಪರಿಸರ ವಿನಾಶದ ವಿರುದ್ಧದ ಹೋರಾಟಗಳು ಈಗಿರುವ ಜಡವ್ಯವಸ್ಥೆಗಳಿಂದ ಮುಕ್ತವಾಗುವ ಹೋರಾಟಗಳ ಇನ್ನೊಂದು ಮುಖ, ಅಷ್ಟೆ.

ನಮ್ಮ ಶಿಕ್ಷಣ ವ್ಯವಸ್ಥೆಯು ವೈಜ್ಞಾನಿಕ ವಿಧಾನಗಳನ್ನನುಸರಿಸಿ ಈ ನಿಟ್ಟಿನಲ್ಲಿ ಜಾಗೃತ ಮನಸ್ಸುಗಳನ್ನು ರೂಪಿಸಲು ಸಜ್ಜಾಗಬೇಕಿದೆ.

**ಕೆ. ಕೆ. ಥೇಕೆದತ್**
ಪ್ರಧಾನ ಸಂಪಾದಕರು, ಟೀಚರ್ಸ್ ಆಫ್ ದಿ ವರ್ಲ್ಡ್, ಎ-೬/೧೧, 'ಸಾವಂತ್ ಸದನ',
ಜೀವನ್‌ಭೀಮಾ ನಗರ, ಬೋರಿವಿಲ್ಲಿ (ಪಶ್ಚಿಮ) ಮುಂಬೈ - ೪೦೦ ೧೦೩

ಕನ್ನಡಕ್ಕೆ : ಎಸ್. ಸುರೇಂದ್ರ
ನಂ. ೨೪, ೧ನೇ ಅಡ್ಡರಸ್ತೆ ಕೆನರಾ ಬ್ಯಾಂಕ್ ಕಾಲೋನಿ, ಜಯನಗರ ಪೂರ್ವ, ಬೆಂಗಳೂರು - ೧೧

*೧೬೧ನೇ ಪುಟದಿಂದ*

ಮತ್ತು ಮುಸ್ಲಿಮ್ ತಮ್ಮ ಕಣ್ಣುಗಳೆಂದು ಯಾವಾಗಲೂ ಹೇಳುತ್ತಿದ್ದರು. ಬಹುಸಂಸ್ಕೃತಿಯನ್ನು ಪೋಷಿಸುವ ಧ್ಯೇಯವೇ ಅವರ ಮರಣಕ್ಕೆ ಕಾರಣವಾಗಿದ್ದು ದುರಂತ.

೩೦ ಜನವರಿ ೧೯೪೮ ಎಂದಿಗಿಂತಲೂ ಬಿರ್ಲಾದ ಭವನದ ಪ್ರಾರ್ಥನಾ ಸಭೆಯಲ್ಲಿ ಹೆಚ್ಚಿನ ಜನ ಸೇರಿದ್ದರು. ಸಂಜೆ ೫ ಗಂಟೆಯ ನಂತರ ಪ್ರಾರ್ಥನೆ ಶುರುವಾಗಬೇಕಿತ್ತು. ಅವತ್ತ್ಯಾಕೋ ಮಹಾತ್ಮಾ ಗಾಂಧಿ ಸಂಜೆ ತಮ್ಮ ಕೋಣೆಯಿಂದ ಪ್ರಾರ್ಥನಾ ಸಭೆಯ ಸ್ಥಳಕ್ಕೆ ತಡವಾಗಿ ಆಗಮಿಸುತ್ತಿದ್ದರು. ಗಾಂಧಿಯವರಿಗೆ ಕೆಲವೇ ಕ್ಷಣಗಳಲ್ಲಿ ಸಾವು ಕಾದಿದೆಯೆಂಬುವುದು ಗೊತ್ತಿರಲಿಲ್ಲ. ನೆರೆದಂತಹ ಜನ ಅದರ ನಿರೀಕ್ಷೆ ಸಹ ಮಾಡಿರಲಿಲ್ಲ. ಪ್ರಾರ್ಥನಾ ಸಭೆಗೆ ಇನ್ನೂ ಅರ್ಧದಾರಿ ಯಿರುವಾಗಲೇ ಒಬ್ಬಾತ ಒಂದು ಗಾಂಧಿಯನ್ನು ನಮಸ್ಕರಿಸಿದ. ಏನೋ ಮಾತನಾಡಬೇಕೆನ್ನುವಂತೆ ನಟಿಸಿ, ಮರುಕ್ಷಣವೇ ಪಿಸ್ತೂಲ್‌ನ್ನು ತೆಗೆದು ಮಹಾತ್ಮಾ ಗಾಂಧಿಯ ಎದೆಗೆ ಮೂರು ಗುಂಡುಗಳನ್ನು ಹಾರಿಸಿಬಿಟ್ಟ. ಮಾತನಾಡಲು ಸಹ ಆಗದಿರುವಂತಹ ಸ್ಥಿತಿಗೆ ತಂದ ಗುಂಡಿನ ಹೊಡೆತದ ರಭಸಕ್ಕೆ ಗಾಂಧಿ ಒಮ್ಮೆ ಉಸಿರೆಳೆದು, ''ಹೇ ರಾಮ'' ಎಂದು ಕೆಳಗೆ ಬಿದ್ದರು. ಕೊಲೆಗಾರ ಹಲವಾರು ವಿಫಲಯತ್ನಗಳ ಬಳಿಕ ಗಾಂಧಿಯವರನ್ನ ಕೊಲ್ಲುವಲ್ಲಿ ಯಶಸ್ವಿಯಾಗಿದ್ದ. ಹಿಂದು ಮತಾಂಧ ನಾಥುರಾಮ ಗೋಡ್ಸೆ ಮಹಾತ್ಮಾ ಗಾಂಧಿಯವರನ್ನು ಕೊಲ್ಲುವ ಕನಸು ನನಸಾಗಿದ್ದಕ್ಕೆ ಸಂತಸಪಟ್ಟ.

ಸಾವಿನ ಸುದ್ದಿ ತಿಳಿದು ಹಲವಾರು ನಾಯಕರು ಬಿರ್ಲಾ ಭವನಕ್ಕೆ ಆಗಮಿಸಿದರು. ಗಾಂಧಿಯವರ ದೇಹ ಕಂಡು, ಜವಾಹರಲಾಲ್ ನೆಹರೂ ಆಡಿದ ಮಾತುಗಳಿವು: ''ಬೆಳಕು ನಂದಿ ಹೋಗಿದೆ. ಬಾಪೂ ಇನ್ನಿಲ್ಲ ಆ ದಿವ್ಯಪ್ರಭೆ ದೂರವಾಗಿದೆ. ನಮ್ಮ ಬದುಕನ್ನು ಬೆಳಗಿಸಿ ಬೆಚ್ಚವಾಗಿಸುತ್ತಿದ್ದ ಸೂರ್ಯ ಮುಳುಗಿದ್ದಾನೆ. ಶೀತ, ಕತ್ತಲೆಯಲ್ಲಿ ನಡುಗುವ ಸ್ಥಿತಿ ನಮ್ಮದಾಗಿದೆ.''

ಒಂದು ಕಡೆ ಹಿಂದೂಗಳು, ಮುಸ್ಲಿಮರು, ಸಿಖ್ಖರು, ಕ್ರೈಸ್ತರು ಎನ್ನದೇ ವಿಭಿನ್ನ ಧಾರ್ಮಿಕ ಸಮುದಾಯಕ್ಕೆ ಸೇರಿದವರು ಶೋಕಸಾಗರದಲ್ಲಿ ಮುಂದೆ, ಬಾಪೂವನ್ನು ಕಳೆದುಕೊಂಡು ದುಃಖಿಸುತ್ತಿದ್ದರೆ, ಆಘಾತಗೊಂಡ ರಾಷ್ಟ್ರ, ಗಾಂಧೀಜಿ ಒದಗಿಸಿದ ಬೆಳಕಿಗಾಗಿ ತತ್ತರಿಸುತ್ತಿದ್ದರೆ, ಇನ್ನೊಂದು ಕಡೆ ಬಹುಸಂಸ್ಕೃತಿ ಸಮಾಜದ ವಿರೋಧಿಗಳು, ಕುತಂತ್ರಿಗಳು, ಭಯೋತ್ಪಾದಕರು, ಧರ್ಮಾಂಧರು ಮತ್ತು ಹಿಂದು ಮಹಾಸಭಾದ ಕಾರ್ಯಕರ್ತರು ಮತ್ತು ಅಭಿಮಾನಿಗಳು ಮಹಾತ್ಮಾ ಗಾಂಧಿಯವರನ್ನು ಕೊಂದಿದ್ದಕ್ಕೆ ವಿಜಯೋತ್ಸವ ಆಚರಿಸಿದರು. ಬೀದಿಬೀದಿಗಳಲ್ಲಿ ಸಿಹಿ ಹಂಚಿದರು. ವಿಕೃತ ಮನಸ್ಸಿನವರು ಮಾತ್ರ ಹೀಗೆ ಮಾಡಲು ಸಾಧ್ಯ. ಒಂದು ಮಿಲಿಯಗಿಂತಲೂ ಹೆಚ್ಚಿನ ಜನರು ಅಂತ್ಯಕ್ರಿಯೆಯಲ್ಲಿ ಪಾಲ್ಗೊಂಡರು.

ಈ ಸಂದರ್ಭದಲ್ಲಿ ಮಹಾತ್ಮಾ ಗಾಂಧೀಜಿ ಕುರಿತು ಇಬ್ಬರು ವ್ಯಕ್ತಿಗಳು ಆಡಿದ ಮಾತುಗಳನ್ನು ಸ್ಮರಿಸದೇ ಇರಲಾಗುವುದಿಲ್ಲ. ಪ್ರಸಿದ್ಧ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೀನ್, ''ಮುಂದೊಂದು ಕಾಲದಲ್ಲಿ ಗಾಂಧೀಜಿ ಎಂಬಾತ ವ್ಯಕ್ತಿ ಈ ಭೂಮಿಯ ಮೇಲೆ ತುಂಡು ಬಟ್ಟೆಯುಟ್ಟುಕೊಂಡು ನಡೆಯುತ್ತಿದ್ದನೆಂದರೆ ಯಾರೂ ನಂಬುವುದಿಲ್ಲ'' – ಎಂದಿದ್ದರು.

ಮಹಾತ್ಮಾ ಗಾಂಧಿ ಸಾವನ್ನಪ್ಪಿ ಕೆಲವೇ ಕ್ಷಣಗಳು ಕಳೆದಿದ್ದವು. ಆಗ ಲಾರ್ಡ್ ಮೌಂಟ್‌ಬ್ಯಾಟನ್ ಒಂದೇ ಒಂದು ಮಾತನ್ನಾಡಿದರು: ಮಹಾತ್ಮಾ ಗಾಂಧಿ ಜೀಸಸ್ ಕ್ರೈಸ್ತನಂತೆ ಅಥವಾ ಗೌತಮ ಬುದ್ಧನಂಥವರು.

**ರಾಹುಲ್ ಬೆಳಗಲಿ**
ಎಲ್‌ಎಫ್ ೧೭/೬, ಬಿಡಿಎ ಫ್ಲ್ಯಾಟ್ಸ್,
ಬಿಟಿಎಂ ಲೇಔಟ್, ಬೆಂಗಳೂರು - ೫೬೦೦೭೬

# ರಾಜಾರೋಡಿನ ಗಲ್ಲಿಯಲ್ಲಿ

ಭಾರತೀ ಕಾಸರಗೋಡು



ಎಲ್ಲೋ ಏನೋ ಕಾದ ಸೀದ ಅನುಭವ. ಉಸಿರುಗಟ್ಟಿಸುವ ವಿಕ್ಷಿಪ್ತ ಅನುಭವ. ಮನುಷ್ಯರಿದ್ದಾರೆ ಸುತ್ತಮುತ್ತ... ಆದರೆ ಮನುಷ್ಯತ್ವದ ಭರವಸೆಯಿಲ್ಲ.

ಓಣಿ ಓಣಿಗಳಲ್ಲಿ ಸಂದುಗೊಂದುಗಳಲ್ಲಿ ಚಿತ್ರವಿಚಿತ್ರ ಪ್ರಜೆಗಳು ಗುಪ್ಪೆ ಗುಪ್ಪೆಗಳಾಗಿ ಪೇರಿಸಿಕೊಂಡಿದ್ದಾರೆ. ಆದರೆ ಒಬ್ಬರಿಗಿನ್ನೊಬ್ಬರ ಪರಿವೆಯಿಲ್ಲ, ಹಂಗಿಲ್ಲ, ಕಾಳಜಿಯಿಲ್ಲ. ಭ್ರಮಾಲೋಕಗಳಲ್ಲೆಂಬಂತೆ ನಿರ್ಲಿಪ್ತವಾಗಿ ಸುಳಿದಾಡಿ ಬಿಡುವ ಅನಾದಿ ಅನಂತ ಆತ್ಮಗಳಲ್ಲಿ ಪ್ರೀತಿಯ ಒರತೆಯಿಲ್ಲ.

ಇನ್ನು ಒತ್ತರಿಸಲಾಗದ ಇಕ್ಕಟ್ಟಾದ ಫುಟ್‌ಪಾತು ಸಂಶಯಾತ್ಮರಿಂದ ಕಿಕ್ಕಿರಿದಿದೆ. ಅಡಿಯಿಡುವ ನೆಲಕ್ಕೆ, ಅನಿವಾರ್ಯ ಉಸಿರಿಗೆ ಇಲ್ಲಿ ಸ್ಪರ್ಧೆಯಿದೆ. ಸಮಗ್ರ ವಾತಾವರಣವೇ ಒಂದು ಅಸೀಮ ವ್ಯಗ್ರತೆಯಿಂದ ನಲುಗಿ ಹೋದಂತಿದೆ. ಅಂಗಡಿಯೊಳಗಿನ ವರ್ತಕರು, ಅಂಗಡಿ ಹೊರಗಿನ ಗಿರಾಕಿಗಳು ಒಬ್ಬರನ್ನೊಬ್ಬರು ನಂಬದೆಯೇ ನಂಬಿಕೆಯ ವ್ಯವಹಾರಗಳಲ್ಲಿ ತೊಡಗಿದ್ದಾರೆ.

ಇದೆಂಥ ರಸ್ತೆ ಇದೆಂಥ ಗಲ್ಲಿ!

ಚಿಂದಿಯುಟ್ಟು ಅಕಾರಣವಾಗಿ ಅಂಡಲೆಯುವ ಪುಂಡಪೋರರು, ದಪ್ಪ ಕೆನ್ನೆಗಳ ಸಿಡುಬಿನ ಪಾತಿಗಳಲ್ಲಿ ಕೂಡ ಅಗಾಧ ಪೋಲಿತನ ತುಂಬಿಕೊಂಡ ಮದನಕಾಮ ರಾಜರುಗಳು, ದೈನ್ಯದಿಂದ ಕಣ್ಣುಚ್ಚಿ ನೇತಾಡುವ ಮುಗ್ಧ ಕುರಿತಲೆಗಳ ನಡುವೆಯೇ ಹೊಸದೊಂದು ಹುನ್ನಾರಕ್ಕೆ ಮಚ್ಚು ಸಾಣೆ ಹಿಡಿಯುತ್ತಿರುವ ಉಲ್ಲಸಿತ ಕಟುಕ, ಸಭ್ಯರನ್ನು ತಾತ್ಸಾರದಿಂದ ನೋಡುವ ಗಿಲೀಟು ಹೆಂಗಸರು, ಯಾರ ಪಾಕೇಟು ಎಲ್ಲಿ ಅಡಗಿದೆಯೆಂಬುದನ್ನು ಹದ್ದುನೋಟಗಳಿಂದ ಕ್ಷಣಮಾತ್ರದಲ್ಲಿ ಪತ್ತೆ ಹಚ್ಚಿಬಿಡುವ ಅನುಭವಿ ಚೋರರು, ನಿಷ್ಕರುಣವಾಗಿ ಕಣ್ಣು-ಮೂಗುಗಳನ್ನು ಉರಿಸುತ್ತ ಕೆಲ ವಾಹನ ದಟ್ಟವಾಗಿ ತೂರಿಬಿಡುವ ಕಲ್ರಗಿನ ಸೀಮೆಯೆಣ್ಣೆ ಹೊಗೆ, ಸುಟ್ಟ ಮೀನಿನ-ಬೆಂದ ಮೊಟ್ಟೆಗಳ ಕಟು ಘಾಟುವಾಸನೆ!

ಛೇ! ಬೆಳಗಾಗೆದ್ದು ದೊಡ್ಡದೊಂದು ಸುವಿಹಾರದ ಕಲ್ಪನೆಯಲ್ಲಿ ಮಗಳೊಂದಿಗೆ ಹೊರಟು ಬಂದಿದ್ದೇ ತಪ್ಪಾಯಿತು. ಸುಮ್ಮನೆ ಸೋಫಾದಲ್ಲೊರಗಿ ಚೆಂಬೈ ಮುದದಿಂದ ನಾಲ್ಕನೇ ಕಾಲದಲ್ಲಿ ಪಾಡುವ "ಸಾರ್ಸ ನೀಸ್ನಿ ದಾನ್ದಪಾ... ನೀಸ್ನಿದಾನ್ದಪಾದಪ್ಪಾ"ಗಳನ್ನು ಕೇಳುತ್ತ ತಣ್ಣಗೆ ಮನೆಯಲ್ಲೇ ಉಳಿಯಬಹುದಿತ್ತು. ಪಾಪ ವಿನುಮರಿಯೇನೂ ತನ್ನನ್ನು ಬಾ ಅಂತ ಬಲವಂತ ಮಾಡಲಿಲ್ಲ. ಅವಳು ಸ್ವಾವಲಂಬಿ. ತನ್ನೆಲ್ಲ ಕೆಲಸಗಳನ್ನು ತಾನೇ ಮಾಡಿಕೊಳ್ಳುತ್ತಾಳೆ. ತಾನು ತನ್ನ ಅಮ್ಮನನ್ನು ಕಾಡಿದ ಹಾಗೆ ಅವಳೇನು ತನ್ನನ್ನು ಕಾಡುವುದಿಲ್ಲ. ನಾವಂತು ಅಮ್ಮನನ್ನು ಅದೆಷ್ಟು ಗೋಳು ಹುಯ್ದುಕೊಳ್ಳುತ್ತಿದ್ದೆವು! ಎಲ್ಲಕ್ಕೂ ಆಕೆಯೇ ಬೇಕು. ಕೆಲವೊಮ್ಮೆ ಸ್ನಾನಕ್ಕೂ ಆಕೆಯ ದಿವ್ಯ ಸಾನ್ನಿಧ್ಯ ಬೇಕು. ಕಡೆಗೆ ಪರೀಕ್ಷೆ ಸಮಯದಲ್ಲಿ ತನ್ನ ಪಾಡಿಗೆ ಮನೆಯ ಯಾವುದೋ ಮೂಲೆಯಲ್ಲಿ ಓದಿಕೊಳ್ಳುತ್ತಿದ್ದಾಗಲೂ ಮನೆಯೊಳಗೆ ಅಮ್ಮ ಇರಬೇಕು. ತನಗೆ ಮಾತ್ರವಲ್ಲ, ಆಕೆಯನ್ನು ಅಷ್ಟಾಗಿ ಪರಿಗಣಿಸದ ಅಪ್ಪಯ್ಯನಿಗೂ ಕೂಡ! ಹೊಸ್ತಿಲಕ್ಕೆ ಹೂವಿಡುತ್ತಲೋ, ಹಿತ್ತಲಲ್ಲಿ ಬೃಂದಾವನ ಬಳಸುತ್ತಲೋ, ಸೌತೆಕಾಯಿ ಮಜ್ಜಿಗೆಹುಳಿಗೆ ಒಗ್ಗರಣೆ ಹಾಕುತ್ತಲೋ ಅಮ್ಮ ಇರಬೇಕು. ಅವಳ ಇರವಿನ ಸುಗಂಧ ಮನೆಯೊಳಗೆ ಹಿತವಾಗಿ ಸುಳಿಯುತ್ತಿರಬೇಕು. ಆದರೆ ಅಮ್ಮ ಕೂಡ ಬಿಸುಪು-ತಣಪುಗಳ ರಾಗ-ಭಾವಗಳ ಒಬ್ಬ ಮನುಷ್ಯಳಲ್ಲವೇ? ಅವಳ ಸಾಮರ್ಥ್ಯಗಳಿಗೂ ಸೀಮಿತತೆ ಇತ್ತಲ್ಲವೇ? ತೀರಾ ಬೇಸರವಾದಾಗ "ಎಲ್ಲಕ್ಕೂ ನನ್ನೇ ಆಶ್ರಯಿಸ್ತೀರಲ್ರೋ? ಸತ್ತು ಹೋದ್ರೆ ಏನು ಮಾಡ್ತೀರಿ? ಒಣಗಿಸಿ ಇಟ್ಟುಕೊಳ್ತೀರಾ?" ಅಂತ ರೇಗಿಬಿಡುತ್ತಿದ್ದಳು. ಅಮ್ಮ ಕೆಟ್ಟ ಮಾತು ಆಡುತ್ತಾಳಲ್ಲ ಅಂತ ನೋವಾಗುತ್ತಿತ್ತು. ಆದರೆ ಆ ಮಾತುಗಳ ಹಿಂದಿನ ನೋವು ಆಗ ಅಷ್ಟಾಗಿ ತಟ್ಟುತ್ತಿರಲಿಲ್ಲ.

ತನ್ನ ವಿನುಮರಿ ಹಾಗಲ್ಲ. ಸ್ವಭಾವವೋ ಅಥವಾ ತನ್ನಂಥ ಅಂತರ್ಮುಖಿ ಅಮ್ಮನನ್ನು ಆಶ್ರಯಿಸಿ ಪ್ರಯೋಜನವಿಲ್ಲವೆಂದೋ ತನ್ನೆಲ್ಲ ಕೆಲಸಗಳನ್ನು ತಾನೇ ಅಚ್ಚುಕಟ್ಟಾಗಿ ಮಾಡಿಕೊಳ್ಳುತ್ತಾಳೆ. ಇವತ್ತು ಕೂಡ ಒಬ್ಬಳೇ ಹೊರಟಿದ್ದಳು. ಕಡೆಗೆ ತಾನೇ ಪಾಪ ಮೊದಲ ಸಾರಿ ಡ್ಯಾನ್ಸ್ ಡ್ರೆಸ್ ಹೊಲಿಸೋದಲ್ವ ತಾನೂ ಜತೆಗಿದ್ದರೆ ಏನಾದರೂ ಸಲಹೆ ಕೊಡಬಹುದಲ್ವ ಅಂತ ಅವಳ ಜತೆ ಹೊರಟದ್ದು. ಈಗ ನೋಡಿದರೆ ಈ ಗಲಾಟೆ ಗಲ್ಲಿಯಲ್ಲಿ ಈ ಪರಿ ಸಿಕ್ಕಿಕೊಂಡು ಪರಿತಪಿಸುವುದಾಗಿದೆ.

ಇದಾದರೂ ಅದೆಂಥ ಬಿಕ್ಕಟ್ಟಿನ ಬೀದಿ!

ಕೌಪೀನದಗಲತೆಯ ಈ ಬಡಪಾಯಿ ರಸ್ತೆಯ ಮೇಲೆ ಪ್ರತಿಯೊಬ್ಬನೂ ಜನ್ಮಸಿದ್ಧ ಹಕ್ಕನ್ನು ಸ್ಥಾಪಿಸಲೆತ್ನಿಸುತ್ತಾನೆ. ಸ್ಪರ್ಧೆಗೆ ಬಿದ್ದವರ ಹಾಗೆ ವಾಹನ ಚಾಲಕರು, ಪಾದಚಾರಿಗಳು ಒಬ್ಬರನ್ನೊಬ್ಬರು ಬಾಧೆ ಪಡಿಸುತ್ತಾರೆ. ಶಾಂತಿ ಮಂತ್ರದ ಮೂಲವೇ ಇಲ್ಲಿ ಸುಳಿವಿಲ್ಲದೆ ಕಳೆದುಹೋಗಿದೆ. ಸಹಾನುಭೂತಿ ಯಾವತ್ತೋ ತಲೆಮರೆಸಿಕೊಂಡಿದೆ. ಇರುವುದೆಲ್ಲ ವೇಗ-ಉದ್ವೇಗ! ಪೈಪೋಟಿ, ಅಸಹನೆ-ಆಕ್ರೋಶಗಳ ಬಿಸಿ ಉಸಿರಿನಿಂದ ಹವೆ ಭಾರವಾಗಿಬಿಟ್ಟಿದೆ. ಮ್ಲಾನವಾಗಿದೆ ದಿಕ್ಕು. ಅನಾಗರಿಕ ಚಲನ-ವಲನಗಳನ್ನು ಎದೆ ಮೇಲೇ ಹೊತ್ತು ಮಲಗಿದ ಜರ್ಜರಿತ ನಾಗರಿಕ ರಸ್ತೆ ಸದ್ದಿಲ್ಲದೆ ಬಿಕ್ಕಳಿಸುತ್ತಿದೆ. ಇಂಥಲ್ಲಿ ಕಾರು ಚಲಿಸುವುದೆಂಬುದು ಅಂಗುಲ ಅಂಗುಲದಲ್ಲಿಯೂ ತ್ರಾಸವಾಗುತ್ತಿದೆ.

ಅಷ್ಟೊಂದು ಚೆನ್ನಾಗಿ ಅಂದಚಂದದ ನೃತ್ಯದುಡುಪು ಹೊಲಿಯುವ ನಿಪುಣ ದರ್ಜಿ ಇಂಥದೊಂದು ಅನಾಮಧೇಯ ಗಲ್ಲಿಯಲ್ಲಿ ಯಾಕಾದರೂ ಮನೆ

ಮಾಡಿದ್ದಾನೋ ಎಂದು ಶಚಿ ಯೋಚಿಸುತ್ತಿರುವಾಗಲೇ ಎದುರಿನಿಂದ ದೊಡ್ಡದೊಂದು ಜರ್ಜರಿ ಏಣಿಯನ್ನು ಹೆಗಲ ಮೇಲೆ ಹೊತ್ತು ಪರಿಸರದ ಪರಿವೆಯೇ ಇಲ್ಲದವನಂತೆ ಉಡಾಫೆಯಿಂದ ನಡೆದುಬರುತ್ತಿದ್ದ ಆ ಉದ್ದಗಾಲಿನ ಮನುಷ್ಯ ಪಕ್ಕದಲ್ಲಿದ್ದ ಕಾರನ್ನು ಸಂಪೂರ್ಣವಾಗಿ ಉಪೇಕ್ಷಿಸುತ್ತ ಏಣಿಯ ಮೊನಚು ಭಾಗಗಳನ್ನು ಮುಲಾಜಿಲ್ಲದೆ ಕಾರಿನ ಪಾರ್ಶ್ವಕ್ಕೆ ದಡಬಡ ತಾಗಿಸುತ್ತ ನಿರ್ಲಕ್ಷ್ಯವಾಗಿ ನಡೆದುಹೋದ. ಬಹು ಮಟ್ಟಿಗೆ ಇದು ಉದ್ದೇಶಿತವೂ ಇರಬಹುದು. ಅವಳಿಗಂತೂ ತನ್ನ ಶರೀರಕ್ಕೇ ಪೆಟ್ಟು ಬಿದ್ದಷ್ಟು ನೋವಾಯಿತು. ಅಪ್ಪಯ್ಯ ನೆನಪಾದರು. ''ನೋಡು ಮರಿ, ಪುಸ್ತಕ-ಪೆನ್ನು ಮುಂತಾದ ಯಾವುದೇ ನಿರ್ಜೀವ ವಸ್ತುಗೆ ನಾವು ಗಾಯ ಮಾಡಬಾರದು. ಈಗ್ನೋಡು, ನಿಂಗೆ ಗಾಯ ಆದ್ರೆ ನನ್ನತ್ರ ಓಡಿಬರ್ತೀಯ. ನಾನು ಟಿಂಚರ್ ಹಾಕ್ತೀನಿ, ಗಾಯ ವಾಸಿ ಆಗಿಬಿಡುತ್ತೆ. ಆದ್ರೆ ಪಾಪ ಪುಸ್ತಕಕ್ಕೆ ಗಾಯ ಆದ್ರೆ ಹೇಳಕ್ಕೆ ಅದಿಕ್ಕೆ ಬಾಯಿ ಇದೆಯಾ ಮರೀ ?''

ಮಗಳು ಸಡನ್ ಬ್ರೇಕ್ ಹಾಕಿದ್ದರಿಂದ ಮತ್ತೊಮ್ಮೆ ಅವಳ ಆಲೋಚನಾಸರಣಿ ತುಂಡಾಯಿತು. ಮುಂದಕ್ಕೆ ಮುಗ್ಗರಿಸಿ ಜೋಲಿ ಹೊಡೆದವಳು ಸಾವರಿಸಿಕೊಂಡು ಕತ್ತೆತ್ತಿ ನೋಡಿದರೆ, ಬಣ್ಣ ಮಾಸಿದ ದೊಡ್ಡದೊಂದು ವ್ಯಾನಿಟಿ ಬ್ಯಾಗನ್ನು ಹೆಗಲಲ್ಲಿ ನೇತಾಡಿಸಿಕೊಂಡಿದ್ದ ಹೆಂಗಸೊಬ್ಬಳು ರಸ್ತೆಯ ನಟ್ಟನಡುವೆ ನಿಂತು ತಮ್ಮತ್ತಲೇ ದುರುನೋಟ ಬೀರುತ್ತಿದ್ದಾಳೆ. ಅವಸರದಲ್ಲಿ ರಸ್ತೆ ಕ್ರಾಸ್ ಮಾಡಿಬಿಡಲು ಓಡಿ ಬಂದಾಕೆ ಅದೃಷ್ಟ ಚೆನ್ನಾಗಿದ್ದುದರಿಂದ ಶರೀರವೆಲ್ಲ ಇನ್ನೂ ಒಂದು ಇಡಿಯಾಗಿ ಉಳಿದು ಕೊಂಡಿದ್ದಾಳೆ. ಮರಿಯ ಸಡನ್ ಬ್ರೇಕ್ ಕೆಲಸ ಮಾಡಿರದಿದ್ದರೆ ಈಕೆಯ ತಲೆ ಒಡೆಯ ಬಹುದಿತ್ತು ಅಥವಾ ಪಕ್ಕದಲ್ಲೇ ಇದ್ದ ಗಟಾರಕ್ಕೆ ಹಾರಿ ಮೈಮೂಳೆ ಹುಡಿಯಾಗಿ ಬಿಡಬಹುದಿತ್ತು. ಆದರೇನು ಅವಳಿಗಂತು ಇದೆಲ್ಲ ಲಕ್ಷ್ಯವೇ ಇಲ್ಲ. ಇದಕ್ಕೆಲ್ಲ ಸಮಸ್ತ ಕಾರಣ ಕಾರು ಮತ್ತು ಕಾರಿನ ಮಾಲೀಕರೇ ಅನ್ನುವಂತೆ ಕ್ರುದ್ಧ ಕ್ಷುದ್ರನೋಟಗಳನ್ನು ಇವರೆಡೆಗೆ ಬೀರುತ್ತ ಸಡ್ಡು ಹೊಡೆದು ನಿಂತಿದ್ದಾಳೆ. ಇಷ್ಟಕ್ಕೂ ಇಂಥವರ ಜೀವ ಸಂರಕ್ಷಣೆಯ ಹೊಣೆ ಆಚೀಚೆ ಸರಿದಾಡುವ ವಾಹನ ಚಾಲಕರದಷ್ಟೇ! ವಿನುಮರಿಗೆ ರೇಗಿ ''ನೋಡ್ಕೊಂಡು ಕ್ರಾಸ್ ಮಾಡೋದಲ್ವ ?'' ಅಂದರೆ ಅವಳು ಧಿಮಾಕಿನಿಂದ ''ಯಾಕೆ, ನಿಂಗೇನಾಯ್ತು ಈಗಾ ?'' ಅಂತಂದು, ಜಗಳ ಮುಂದುವರಿಯಬಹುದೆನ್ನುವ ಸಿಸಿ ನಿರೀಕ್ಷೆಯಲ್ಲಿ ಒಳಗೊಳಗೆ ಭದ್ರವಾಗುತ್ತ ಶಬ್ದಕೋಶವನ್ನು ಹುರಿಗೊಳಿಸಿಕೊಳ್ಳುತ್ತ ಅಲಕ್ಷ್ಯವಾಗಿ ನಿಂತುಕೊಂಡಿದ್ದಳು. ಇನ್ನವಳು ಅತಿ ಏಕವಚನ ಮತ್ತು ಅವಾಚ್ಯ ಪ್ರಾರಂಭಿಸುವ ಮುನ್ನ ಸಭ್ಯವಾಗಿ ಜಾಗ ಖಾಲಿ ಮಾಡಬೇಕು. ''ನೀನಿನ್ನೇನೂ ಮಾತಾಡಬೇಡ. ಪುಟ್ಟಿ, ಗಾಜು ಮುಚ್ಚಿಬಿಡು'' ಶಚಿ ಮಗಳಿಗೆ ಆದೇಶಿದಳು.

ಸಾಕಷ್ಟು ಹೊತ್ತು ಕಾದು ಕೂಡ ಕದನ ಆರಂಭವಾಗುವ ಸೂಚನೆ ಸಹ ಕಾಣದ್ದರಿಂದ ಅವಳು ಭುಜ, ಬೆನ್ನು ಇತ್ಯಾದಿಗಳನ್ನು ಅಸಡ್ಡೆಯಿಂದ ಕುಣಿಸುತ್ತ ಮತ್ತಾವುದೋ ಸಂದು-ಗೊಂದುಗಳಲ್ಲಿ ಮತ್ತಾರಿಗೋ ಕಿರುಕುಳ ಕೊಡುತ್ತಾ ನುಸುಳಿಬಿಟ್ಟಳು.

''ಅಮ್ಮ, ಬೇಜಾರಾಗ್ತಾ ಇದ್ಯಾ ?'' ಅಮ್ಮನ ಮುಖವನ್ನು ಓದಿದವಳಂತೆ ಮಗಳು ಕೇಳಿದಳು. ''ಹಾಗೇನಿಲ್ಲ ಪುಟ್ಟಿ.. ಸಂತೆಗೆ ಬಂದು ಗದ್ದಲಕ್ಕೆ ಅಂಜಿದರೆ ಹೇಗೆ ? ನೀನು ನೋಡಿಕೊಂಡು ಗಾಡಿ ಓಡಿಸು.'' ಅವಳಂದಳು ಉದಾಸಳಾಗಿ.

ಪುಟ್ಟಿಯೇನೋ ಪಾಪ ನಿಧಾನವಾಗೇ ನೋಡಿಕೊಂಡೇ ಗಾಡಿ ಓಡಿಸುತ್ತಿತ್ತು. ಆದರೆ ಅಸುಪಾಸಿನ ಖಗ-ಮೃಗ-ಮನುಜರು ಈ ನಿಧಾನಕ್ಕೆ ನಿಯಮ ಪಾಲನೆಗೆ ಸಹಕರಿಸುತ್ತಿಲ್ಲ. ನೋಡನೋಡುತ್ತಿರುವಂತೆ ವಿಶಾಲ ಬಿಳಿಯ ಬೆನ್ನ ಮೇಲೆ ಕಡುಗಪ್ಪು ಚಿತ್ತಾರಗಳಿದ್ದ ಭಾರೀ ಸೀಮೆಹಸುವೊಂದು ಗರ್ಭಭಾರದಿಂದ ನಿಧಾನವಾಗಿ ನಡೆಯುತ್ತ ಬಂದು ಕಾರಿನ ಮುಂದೆ ಏಕಾಏಕಿ ಪ್ರತಿಷ್ಠಾಪನೆಯಾಗಿಬಿಟ್ಟಿತು; ತನಗೂ ಈ ಲೋಕಕ್ಕೂ ಏನೇನೂ ಸಂಬಂಧವಿಲ್ಲವೇನೋ ಅನ್ನುವಂತೆ! ಪ್ರಕೃತಿಸಹಜ ಮಿಲನಪುಳಕವೂ ಇಲ್ಲದೆ ಯಾರಿಗೋ ಬಕೇಟುಗಟ್ಟಲೆ ಹಾಲನ್ನು ಪೂರೈಸಲು ಇನ್ನಾರಿಂದಲೋ ಒಂದು ನೀರಸ ಚುಚ್ಚುಮದ್ದನ್ನು ಗರ್ಭಕ್ಕೇ ಚುಚ್ಚಿಸಿಕೊಂಡು ಅದರ ಫಲವನ್ನು ಹೀಗೆ ಮೈತುಂಬ ಹೊತ್ತು ನಿಂತ ಮುಗ್ಧ ಗೋವನಿತೆಯನ್ನು ಕಂಡು ಅಯ್ಯೋ ಅನ್ನಿಸಿತು. ಇನ್ನದರ ಅಮಾಯಕ ಕಣ್ಣುಗಳೋ! ಆ ಮುಗ್ಧತೆ, ಅಸಹಾಯಕತೆ ಮುದ್ದಿಗೆ ಅರ್ಹವೇ ಹೊರತು ಗದರಲು ಅಲ್ಲವೇ ಅಲ್ಲ. ಆದರೆ ಈಕೆ ಹೀಗೆ ದಾರಿಯನ್ನು ಪೂರಾ ಬಂದ್ ಮಾಡಿಬಿಟ್ಟರೆ ನಾವು ಹೋಗುವುದಾದರೂ ಹೇಗೆ? ವಿನುಮರಿ ನಾಟಕೀಯವಾಗಿ ಕಿಟಕಿಯಿಂದ ಬಾಗಿ ಬೇಕಾದಷ್ಟು ಹುಶ್‌ಹುಶ್‌ಗಳನ್ನು ಕೋಮಲವಾಗಿ ಅಭಿನಯಿಸಿದಳು. ಡಜನ್‌ಗಟ್ಟಲೆ ಹಾರ್ನ್ ಹೊಡೆದಳು. ಏನೂ ಪ್ರಯೋಜನವಾಗಲಿಲ್ಲ.

ಸುತ್ತಮುತ್ತಲ ಹಾದಿಹೋಕರು ಈ ದೃಶ್ಯವನ್ನು ಮನಸಾರೆ ಆಸ್ವಾದಿಸುತ್ತ ಕಾರಿನೊಳಗಿನ ಹೆಂಗಸರನ್ನು ಚುಡಾಯಿಸುತ್ತ ಮೋದದಿಂದ ಮುಂದುವರಿದುಬಿಡುವಾಗ ಅದೆಲ್ಲಿಂದಲೋ ಪ್ರತ್ಯಕ್ಷನಾದ ಆ ಆಪದ್ಬಾಂಧವ. ಸಣಕಲು ಸೊಟ್ಟ ಶರೀರ, ಪಕ್ಕಕ್ಕೆ ಒಲಿದ ಪುಟ್ಟ ಮುಖ. ಕುಂಟುತ್ತ ಕುಂಟುತ್ತಲೇ ಓಡೋಡಿ ಬಂದ ಆತ ಹಸುವನ್ನು ಪ್ರೀತಿಯಿಂದ ಮೈದಡವಿ ''ಯಾಕವ್ವಾ ಇಂಗೆ ಓಗೋರು ಬರೋರನೆಲ್ಲ ಗೋಳು ಆಕ್ಕಂಡಿ? ಅದೇನ ಇನವಂದ ನಿನಗೆ? ವೋಗತ್ತ..: ದಾರಿಬುಡು...'' ನೊಸಲು ಚಪ್ಪರಿಸಿದ. ಕದಲಲಿಲ್ಲ ಆ ಗಬ್ಬಗೋವು! ಮನುಷ್ಯರ ಮುದ್ದನ್ನು ನಾನು ನಂಬುವುದೇ ಇಲ್ಲ ಅನ್ನುವಂತೆ ಅಚಲವಾಗಿ ನಿಂತುಬಿಟ್ಟಿತ್ತು! ಈ ಅವಜ್ಞೆ ಆತನಲ್ಲಿ ಮತ್ತಷ್ಟು ಮುದ್ದನ್ನೇ ಉಕ್ಕಿಸಿಬಿಟ್ಟಿತು. ಪಕ್ಕವಾಗಿ ಮುಗುಳು ನಗುತ್ತ ''ಏ, ಬವ್ವಾ ಸಾಕು ಕಂಡಿವ್ನಿ... ಸುಮ್ಮೆ ಆಟ ಮಾಡಬ್ಯಾಡ...'' ಅಂತೆಲ್ಲ ಪ್ರೀತಿಯಿಂದ ಗದರಿಕೊಳ್ಳುತ್ತ, ಮತ್ತೆ ಮತ್ತದರ ಬಾಲ ಬೆನ್ನು ಮೃದುವಾಗಿ ನೇವರಿಸುತ್ತ ಕಡೆಗೂ ಅದನ್ನು ಪಕ್ಕಕ್ಕೆ ನಡೆಸುವಲ್ಲಿ ಯಶಸ್ವಿಯಾದ. ನಿಟ್ಟುಸಿರಿಟ್ಟು, ಟವೆಲಿನಂಥ ಕರ್ಚೀಫಿನಲ್ಲಿ ಮುಖವೊರಸಿಕೊಂಡು ರಥವನ್ನು ಮುಂದಕ್ಕೆ ಚಲಿಸಿದಳು ವಿನುಮರಿ. ನಿರ್ನಿಮಿತ್ತವಾಗಿ ಬಂದೊದಗಿದ ಆ ಅಂಗವಿಕಲ ಬಂಧುಗೆ ಒಂದು ಧನ್ಯವಾದ ಹೇಳೋಣವೆಂದು ತಿರುಗಿ ನೋಡಿದರೆ ಮತ್ತವ ಕಾಣಿಸಲೇ ಇಲ್ಲ. ಅವರ ದಾರಿ ಸುಗಮಗೊಳಿಸಲು ಮಾತ್ರ ಬಂದಿದ್ದವನೋ ಅನ್ನುವಂತೆ ಆ ಕೆಲಸ ಮುಗಿದ ಕೂಡಲೇ ತಿರುಗಿ ನೋಡದೆ ಜನಜಂಗುಳಿಯಲ್ಲಿ ಅದೃಶ್ಯನಾಗಿಬಿಟ್ಟಿದ್ದ.

ಹೇಗೋ ಆ ಇಕ್ಕಟ್ಟಿನ ಗಲ್ಲಿಯಲ್ಲಿ ಅಡಿಗಡಿಗೂ ಪ್ರಯಾಸಪಡುತ್ತಾ ತೆವಳುತ್ತಾ ಮುಂದೆ ಸಾಗಿ ಇನ್ನೇನು ಬಲಕ್ಕೆ ತಿರುಗಿಬಿಡಬೇಕೆನ್ನುವಾಗ ಒಂದಿಷ್ಟೂ ಸೂಚನೆ ಕೊಡದೆ ಆ್ಯಂಬುಲೆನ್ಸಿನಂಥ ಉದ್ದನೆಯ ಬಿಳಿಯ ವ್ಯಾನೊಂದು ನಿರ್ದಾಕ್ಷಿಣ್ಯವಾಗಿ ಮೂತಿ ತೂರಿಸಿಕೊಂಡು ಮುನ್ನುಗ್ಗಿ ಮುಂದೆ ಹೋಗಲು ತಾವಿಲ್ಲದೆ ಕಾರಿನೆದುರು ಧುತ್ತನೆ ನಿಂತುಬಿಟ್ಟಿತು. ''ನಾನು ತಿರುಗಿಕೊಂಡು ಹೋಗಿಬಿಡ್ತೀನಿ ಗಾಡಿಸ್ವಲ್ಪ ಹಿಂದಕ್ಕೆ ತಗೊಳ್ಳಿ'' ಅಂತ ವಿನು ಹೇಳಿದರೆ ಅವ ಸುತಾರಾಂ ಒಪ್ಪಲಿಲ್ಲ. ''ನನ್ನದು ದೊಡ್ಡ ಬಾಡಿ ಕಣ್ರೀ ಆಗೋಲ್ಲ ನೀವೇ ಸರಿದು ಜಾಗ ಬಿಡ್ಬೇಕು'' ಕೆಂಗಣ್ಣು ತೋರಿದ. ಆದರೆ ಇವರ ಕಾರಂತು ಹಿಂದಕ್ಕೆ ಹೋಗುವ ಪ್ರಶ್ನೆಯೇ ಇರಲಿಲ್ಲ. ಕಾರಿನ ಹಿಂದೆ ಅದಾಗಲೇ ಸಾಲುಸಾಲಾಗಿ ಆಟೋಗಳು, ಸ್ಕೂಟರುಗಳು, ರಾಶಿರಾಶಿ ಬೈಸಿಕಲ್ಲುಗಳು ಪೇರಿಸಿಕೊಂಡುಬಿಟ್ಟಿದ್ದವು. ಎಡಗಡೆಗೆ ದೊಡ್ಡದೊಂದು ಹೊಂಡ ಬೇರೆ! ಇದನ್ನೆಲ್ಲ ವಿಧಿ ಯಿಲ್ಲದೆ ಮನಗಂಡ ವ್ಯಾನಿನ ಡ್ರೈವರು ಅರೆಮನಸ್ಸಿನಿಂದ ಹಾಗೂ ಹೀಗೂ ತನ್ನ ದೊಡ್ಡ ಬಾಡಿಯನ್ನು ಇಂಚಿಂಚಾಗಿ ಇಂಚಿಂಚಾಗಿ ಹಿಂದಕ್ಕೆ ಸರಿಸತೊಡಗಿದ. ಆದರೂ ಕಾರು ತೂರುವಷ್ಟು ಜಾಗವಂತು ಆಗಲಿಲ್ಲ. ಮೂಲೆಯಲ್ಲೇ ಒಂದು ಸಣ್ಣ ಕಾಫಿ ಶಾಪು. ಒಂದು ಅಲಂಕಾರದ ಹೆಂಗಸು ಶಾಪಿನ ಮುಂದೆಯೇ ಕುರ್ಚಿ ಹಾಕಿಕೊಂಡು ಹೋಗುತ್ತ ಬರುತ್ತ ಇರುವವರನ್ನು ಶೃಂಗಾರ ಲಹರಿಯಿಂದ ಅವಲೋಕಿಸುತ್ತ ಶೋಕಾಗಿ ಕೂತುಕೊಂಡಿದ್ದಳು. ರಸ್ತೆ ಮೇಲಿಂದ ಅವಳು ಕುರ್ಚಿ ತೆಗೆದರೆ ಇವರು ಹೇಗೋ ಪಾರಾಗಬಹುದಿತ್ತು. ವಿನುಮರಿ ಆಕೆಗೆ ''ನೀವು ಸ್ವಲ್ಪ ಏಳಿ ಜಾಗಬಿಡಿ'' ಅನ್ನುತ್ತಿರುವಷ್ಟರಲ್ಲೇ ಒಳಗಿನಿಂದ ಇದೆಲ್ಲವನ್ನು ಸಂಶಯದ ಕಣ್ಣುಗಳಿಂದ ಗಮನಿಸುತ್ತಿದ್ದ ಶಾಪಿನ ಓನರು ಕೈಲಿದ್ದ ಭೇಲ್‌ಪುರಿ ತಟ್ಟೆಯನ್ನು ಗಿರಾಕಿಗೂ ರವಾನಿಸದೆ ಅದರ ಸಮೇತವೇ ಸ್ಪೀಡಾಗಿ ಓಡಿಬಂದು ''ಯಕ್ರೀ ನಿಮ್ಗೇನ್ರೀ ಆಯ್ತೂ? ಅವಳು ಯಾಕ್ರೀ ಏಳ್ಬೇಕೂ ?'' ಅಂತ ಯುದ್ಧಕ್ಕೇ ಬಂದುಬಿಟ್ಟ ಅಲ್ಲೇ ಕಟ್ಟೆಯೊಂದರ ಮೇಲೆ ಉದ್ಭವ ಮೂರ್ತಿಯಂತೆ ಖಚಿತವಾಗಿ ಕೂತುಕೊಂಡಿದ್ದ ಅಡುಗೂಲಜ್ಜಿ ಅಕಾರಣವಾಗಿ ಬೊಚ್ಚುಬಾಯಗಲಿಸಿ ಕಿಸಕ್ಕಂತ ನಕ್ಕುಬಿಟ್ಟಿತು. ಅಷ್ಟರಲ್ಲಿ ಅಲ್ಲಿ ಒಂದು ಮಿನಿ ವಾಹನ ದಟ್ಟಣೆ ಏರ್ಪಟ್ಟೇ ಬಿಟ್ಟಿತ್ತು! ಸೆಕೆ-ಧಗೆ-ಧೂಳು-ಇಕ್ಕಟ್ಟು, ಕಿವಿತಮಟೆ ಚೂರಾಗುವಷ್ಟು ಹಾರ್ನ್‌ಗಳು, ಪುಕ್ಕಟೆ ಪರೋಪಕಾರಿ ಸಲಹೆಗಳು, ಈ ಮಧ್ಯವೇ ಕ್ಷಿಪ್ರದಲ್ಲೇ ಏರ್ಪಟ್ಟ ನೋಟಕರ ಗುಂಪು!

ಅಷ್ಟರಲ್ಲಿ ಹಠಾತ್ತನೆ ಅದೆಲ್ಲಿಂದಲೋ ಆವಿರ್ಭವಿಸಿಬಿಟ್ಟ ರಾಜತೇಜಸ್ಸಿನ ಧಡಿಯರಿಬ್ಬರು ಧಡಧಡನೆ ಡೈನೋಸಾರ್ ನಡಿಗೆಯಲ್ಲಿ ಧಾವಿಸಿ ಬಂದವರೇ ಕುರ್ಚಿ ಹೆಂಗಸನ್ನು ಕುರ್ಚಿಸಮೇತ ಖಾಲಿ ಮಾಡಿಸಿದರು. ಸರಾಸರಿ ಕಾಲು ಕೆಜಿ ತೂಗುವ ಚಿನ್ನದ ಸರಪಳಿಗಳಿಂದ ಶೋಭಿತವಾದ ಧಡೂತಿ ಕೈಗಳಿಂದಲೇ ಅಡ್ಡ ಇದ್ದ ಬೈಸಿಕಲ್ಲುಗಳನ್ನೆಲ್ಲ ಅನಾಮತ್ತಾಗಿ ದೂರ ಎತ್ತಿರಿಸಿದರು. ಸ್ಕೂಟರುಗಳ ಪೃಷ್ಠಕ್ಕೆ ಗುದ್ದಿಗುದ್ದಿ ರೈಟ್ ರೈಟ್ ಅಂದರು. ಆಟೋಗಳಿಗೆ ಚುರುಕಾಗಿ ಗ್ರೀನ್‌ಸಿಗ್ನಲ್ ಕೊಟ್ಟು ಓಡಿಸಿದರು. ಅಂತೂ ಇಂತೂ ಆ ಮೂಲೆಯಲ್ಲಿ ಕಾರು ತೂರಲು ಒಂದಿಷ್ಟು ಜಾಗ ನಿಚ್ಚಳವಾಯಿತು. ಹುಶ್ ಭಗವಂತಾ ಅಂತ ಸರಕ್ಕನೆ ಬಲಕ್ಕೆ ತೂರಿ ನೆಟ್ಟಗೆ ನಡೆದರು.

ಅದಂತೂ ಮತ್ತೂ ಕಿರಿದಾದ ಓಣಿ. ಯಥಾಪ್ರಕಾರ ಜನಗಳು, ದನಗಳು, ಇಕ್ಕಟ್ಟು, ಅರಾಜಕತೆ. ವಿನುಮರಿ ಸುಸ್ತಾಗಿಬಿಟ್ಟಳು. ''ಇದೇ ಗಲ್ಲಿ ತಾನೇ ? ಇಲ್ಲಂತು ಎಲ್ಲಾ ಒಂದೇ



ಥರ ಕಾಣತ್ತಪ್ಪ! ಯಾಕೋ ಕನ್‌ಫ್ಯೂಸ್ ಆಗ್ತಾ ಇದೆಯಲ್ಲ...'' ಆಯಾಸದಿಂದ ಗೊಣಗಾಡಿದಳು. ''ಹಾಗಾದ್ರೆ ಯಾರನ್ನಾದ್ರೂ ಒನ್ಸಾರಿ ಕೇಳ್ಕೊಂಡ್‌ಬಿಡು ಮರಿ... ಸುಮ್ನೆ ಮುಂದಕ್ಹೋಗಿ ಹಿಂದಕ್ಕೆ ಬರೋ ಕತೇನೇ ಬೇಡ'' ಅಮ್ಮನೆಂದಳು. ಅದೇನೋ ಸರಿ. ಆದರೆ ಸಮೀಪಿಸಲು ಕೂಡ ಭಯವಾಗುವಷ್ಟು ನಿರ್ಭಾವುಕ ಮುಖವನ್ನೇ ಪ್ರತಿಯೊಬ್ಬರೂ ಹೊತ್ತು ತಿರುಗುತ್ತಿರುವಾಗ ವಿಳಾಸ ಕೇಳುವುದಾದರೂ ಯಾರನ್ನು ಅಂತ ಒಂದಿಷ್ಟು ಪೇಚಾಟವಾಯಿತು. ಅದೇ ವೇಳೆಗೆ ಬಾಗಿದ ಬಗಲಲ್ಲಿ ವೀಳೆಯದೆಲೆ ಕುಕ್ಕೆಯನ್ನು ಅಕ್ಕರೆಯಿಂದ ಇರುಕಿಕೊಂಡು ಒಬ್ಬ ಅಜ್ಜಿ ಅಲ್ಲೇ ಹಸನ್ಮುಖಳಾಗಿ ಹಾದು ಬಂದಳು. ಆಕೆಯನ್ನೇ ದರ್ಜಿಯ ಮನೆ ಎಲ್ಲೆಂದು ವಿಚಾರಿಸಿದರು. ತನ್ನನ್ನೊಬ್ಬರು ವಿಳಾಸ ಕೇಳಿದ್ದೆಂಬುದು ಆ ಅಜ್ಜಿಗಂತು ಅತಿಶಯ ಹಿಗ್ಗುಂಟಾಗಿಬಿಟ್ಟಿತು. ಕಂಕುಳಲ್ಲಿದ್ದ ಮುರುಕು ಗೂಡೆಯನ್ನು ವಿನಾಕಾರಣ ಸರಿಪಡಿಸಿಕೊಳ್ಳುತ್ತ ಸಡಗರದ ಹಾವ-ಭಾವಗಳಲ್ಲಿ ಪ್ರಯತ್ನಪೂರ್ವಕವಾಗಿ ಜವಾಬ್ದಾರಿಯನ್ನು ನಿರ್ವಹಿಸುತ್ತ ''ನೀವು ವನ್ಕೆಲ್ಲ ಮಾಡ್ರಿ... ಇಗಾ, ಇಂಗೇ ವಸಿ ಮುಂದ್ಹೋಗ್ರಿ... ಅಲ್ಲೇ ಒಂದು ತೊಪ್ಪೆ ತೊಟ್ಟಿ ಐತೆ.. ಅದರ ತಾವ್ಲೇ ಅವ್ರ ಮನೆ...'' ಅಂತ ಬೆರಳೆತ್ತಿ ನಿರ್ದೇಶಿಸಿ, ಅದೊಂದು ಬಗೆಯ ಮುಗ್ಧ ವಿಲಾಸದಲ್ಲಿ ನಗು ಹೊಮ್ಮಿಸಿ ಆತ್ಮೀಯವಾಗಿ ಬೀಳ್ಕೊಟ್ಟಳು.

ತೊಪ್ಪೆ ತೊಟ್ಟಿಯನ್ನು ಹುಡುಕುವ ಆಗತ್ಯವೇ ಬೀಳಲಿಲ್ಲ. ಅದರ ಸುಗಂಧವೇ ಅದರ ವಿಳಾಸವನ್ನು ಕೂಗಿ ಹೇಳುತ್ತಿತ್ತು. ಅದೊಂದು ಭಾರೀ ತೊಟ್ಟಿ. ಹಳೆ-ಹೊಸ ಸೆಗಣಿಗಳಿಂದ ತುಂಬಿ ತುಳುಕುತ್ತಿತ್ತು. ನಾಲ್ಕಾರು ಜನ ಆಳುಗಳು ಸರಸರನೆ ಓಡಾಡುತ್ತ ಸನಿಕೆಗಳಿಂದ ಎತ್ತೆತ್ತಿ ಬಾಣಲೆಗೆ ತುಂಬಿಸುತ್ತ ಲಾರಿಗೆ ಲೋಡು ಮಾಡುತ್ತಿದ್ದರು. ಲಾರಿ ಭರ್ತಿಯಾಗುವುದನ್ನೇ ಸಹನೆಯಿಂದ ಕಾಯುತ್ತ ಕೃಷ್ಣಭಂಗಿಯಲ್ಲಿ ಬೀಡಿಸೇದುತ್ತ ನಿಂತ ಡ್ರೈವರಿನಿಗಾಗಲೀ, ಸೆಗಣಿ ಮಧ್ಯವೇ ವಿಹರಿಸುತ್ತ ಅದನ್ನು ತುಂಬುತ್ತ ಖಾಲಿಮಾಡುತ್ತ ಇದ್ದ ಆಳು ಮನುಷ್ಯರಿಗಾಗಲೀ ಸ್ವಲ್ಪವಾದರೂ ಬೇಸರ-ಅಸಹ್ಯ ಇದ್ದಂತಿರಲಿಲ್ಲ. ತಮ್ಮತಮ್ಮಲ್ಲೇ ಜೋಕು ಮಾಡಿಕೊಳ್ಳುತ್ತ ಸಿನಿಮಾ ಹಾಡುಗಳನ್ನು ಗುನುಗಿಕೊಳ್ಳುತ್ತ ಅವರಷ್ಟಕ್ಕೆ ಆನಂದವಾಗಿಯೇ ಇದ್ದರು.

ಆದರೆ ಇವರಿಬ್ಬರಿಗೆ ಆ ವಿಲಕ್ಷಣ ವಾತಾವರಣ ಓಕರಿಕೆ ತರಿಸಿತು. ಆ ಹಸಿರುಕೆಸರು, ಭೂಮ್ಯಾಕಾಶ ತುಂಬಿ ಹಬ್ಬಿದ ಹಸಿಸೆಗಣಿವಾಸನೆ ಅಸಹನೀಯವಾಯಿತು. ಕರ್ಚೀಫನ್ನು ಬಿಗಿಯಾಗಿ ಮೂಗಿಗೆ ಒತ್ತಿಟ್ಟುಕೊಂಡು ಕಣ್ಣುಕಣ್ಣು ಬಿಡುತ್ತ ನಿಂತಾಗಲೇ ಓಡೋಡಿ ಬಂದ ಕೃಷ್ಣನಂಥ ದರ್ಜಿ ಹುಡುಗ. ಅವನ ಹೆಸರು ವಿಶ್ವ.

''ಮೇಡಂ ಬನ್ನಿ ಬನ್ನಿ ಇದೇ ಮನೆ. ಬೇಗ ಒಳಗೆ ಬಂದು ಬಿಡಿ. ಪಾಪ ನಿಮ್ಗೆ ವಾಸನೆ ಸಹಿಸೋಕಾಗಲ್ಲ.'' ಸಂಕೋಚದಿಂದ ಆಹ್ವಾನಿಸಿದ.

ವಿಶ್ವನ ಪುಟ್ಟಮನೆಯೊಳಗೆ ಕಾಲಿರಿಸಿದ್ದೇ ಮನಸ್ಸು ಏಕಾಏಕಿ ತಂಪಾಗಿಬಿಟ್ಟಿತು. ಹೇವ ಬರಿಸುವ ಸಿನಿಮಾ ನಾಯಕಿಯ ಅಸಹ್ಯ ಚಡ್ಡಿನರ್ತನದ ಮರುಕ್ಷಣವೇ ಪರದೆ ಮೇಲೆ ತೋರುವ ಸ್ವಚ್ಛ ರಮಣೀಯ ಕಾನನದಂತೆ ದೃಶ್ಯ ಸಂಪೂರ್ಣವಾಗಿ ಬದಲಾಗಿ ಹೋಯಿತು. ಆ ಪುಟ್ಟ ಬಿಡಾರ ಪರಿಶುಭ್ರವಾದೊಂದು ಪರ್ಣಕುಟಿಯ ಹಾಗೆ ಭಾಸವಾಗುತ್ತ ಕಳೆದುಹೋಗಿದ್ದ ಭರವಸೆ ಒಳಗೆಲ್ಲೋ ಮತ್ತೆ ಮಿನುಗಿದಂತಾಯಿತು. ಶುಭ್ರವಾಗಿ ಸಾರಿಸಿದ ಕೆಂಪುಗಾರೆ ನೆಲ, ಒಪ್ಪವಾಗಿ ಒಗೆದು ಹಾಕಿದ ಬಾಗಿಲು ಪರದೆಗಳು, ಧೂಳಿಲ್ಲದ ಷೋಕೇಸಿನಲ್ಲಿ ಅಣಿಯಾಗಿ ಕೂತ ಮಣ್ಣಿನ ಸೀತಾರಾಮರು, ಗಣಪ ಆಂಜನೇಯರು, ಬಣ್ಣಬಣ್ಣದ ಮಣಿ ಸಾಮಾನು. ಒಂದು ರೀತಿಯಲ್ಲಿ ಇಡೀ ವಾತಾವರಣವೇ ಆಹ್ಲಾದಕರವಾಗಿ ಫಳಗುಡುತ್ತಿತ್ತು.

ಎಲ್ಲಕ್ಕಿಂತ ಹೆಚ್ಚಾಗಿ ಅವಳನ್ನು ಆಕರ್ಷಿಸಿದ್ದು ಅಲ್ಲೇ ಮೂಲೆಯಲ್ಲಿ ಮಿಣ್ಣಗೆ ಗೋಡೆಗೊರಗಿ ಕೂತ ಒಂದು ಪುಟ್ಟ ಆಕಾರ! ಯಾವ ಮಾಯಾನಗರಿಯ ಚೆಲುವೆಯಪ್ಪ ಈ ಸ್ಫಟಿಕಶುಭ್ರ ಸುಭಗೆ! ಕೂತ ತಾವನ್ನೆ ದಿವ್ಯವಾಗಿ ಬೆಳಗಿಬಿಡುತ್ತ ಮನೆಯೊಳಗಿನ ತಿಳಿಬೆಳಕಿನಂತೆ ಸುಳಿದಿದ್ದಾರೆ. ಆ ನಿಲುವು, ಚೆಲುವು ಅಂತರಂಗವನ್ನು ತಂಪಾಗಿ ತುಂಬಿಕೊಳ್ಳುತ್ತಿದೆ. ಮಿರುಗುವ ಬಿಳಿಗೆನ್ನೆ, ಅದರಂಚಿನಲ್ಲಿ ತೆಳುವಾದ ಅರಿಶಿನ ಲೇಪನ, ಇಳಿ ವಯಸ್ಸಲ್ಲೂ ಮೋಹ ಉಕ್ಕಿಸುವ ಕಿತ್ತಳೆದುಟಿ, ಹೊಳೆ ಹೊಳೆಯುವ ಸುಂದರಕಣ್ಣು, ಗಾಜುಮೂಗು. ಒಟ್ಟಾರೆ ನವನೀರದ ನಿರ್ಮಲೆ... ರವಿವರ್ಮನ ಅಪ್ಸರೆ! ''ನನ್ನ ತಾಯಿ!'' ಹುಡುಗ ಪರಿಚಯಿಸಿದ. ಕಣ್ಣಲ್ಲೇ ನಕ್ಕರು. ಬಹುಶಃ ಹೊರಗಣ ಪರಿಸರದ ಮನುಷ್ಯ ಮಾಲಿನ್ಯ ಈಕೆಯನ್ನು ತಾಗಿದಂತಿಲ್ಲ. ವಿಶಾಲ ಪ್ರಕೃತಿಯಲ್ಲಿ ಯಾರ ಗೊಡವೆ ಇಲ್ಲದೆ ತನ್ನಷ್ಟಕ್ಕೆ ಅರಳಿದ ಹೊಸ ಹೂವಿನಂತೆ ಇದ್ದಾರೆ.

''ನಿಮ್ಮ ತಂದೆ ಎಲ್ಲಿ?'' ಶಚಿ ಮೇಲುದನಿಯಲ್ಲಿ ವಿಶ್ವನನ್ನು ವಿಚಾರಿಸಿದಳು. ''ಒಳಗೆ ಮಲಗಿದಾರೆ ಮೇಡಂ. ಅವರಿಗೀಗ ಕಣ್ಣು ಕಾಣೋಲ್ಲ. ಬೇಕಾದಷ್ಟು ಕಡೆ ತೋರ್ಸಿದ್ವಿ. ಪ್ರಯೋಜನ ಆಗ್ಲಿಲ್ಲ. ದರ್ಜಿ ಅಲ್ವ ಮೇಡಂ? ಕಣ್ಣಿಗೆ ತುಂಬ ಶ್ರಮ ಆಗಿಬಿಟ್ಟಿದೆ, ದೃಷ್ಟಿ ಬರೋಲ್ಲ ಅಂದುಬಿಟ್ರು'', ವಿಶ್ವ ವಿಷಾದದಿಂದ ವಿವರಿಸಿದ. ಅಂತಃಕರಣದಲ್ಲೆಲ್ಲೋ ಗೀರಿದಂತಾಯಿತು. ಯಾರು ಯಾರಿಗೆ ಎಂತೆಂಥ ನೋವೋ ತಾಪತ್ರಯದ ಈ ಸಂಸಾರದಲ್ಲಿ!

ಕಾಸ್ಟ್ಯೂಂ ಹೊಲಿಸಲು ತಂದಿದ್ದ ಕೆನೆಬಣ್ಣದ ಕಂಚೀ ಸೀರೆಯನ್ನು ಚೀಲದಿಂದ ತೆಗೆದುಕೊಟ್ಟಳು ವಿನ್ನುಮರಿ. ಆಮೇಲಾತ ತೋರಿಸಿದ ಆಲ್ಬಂನಿಂದ ತನಗೆ ಬೇಕಾದಂಥ ನಮೂನೆಯನ್ನು ಆರಿಸಿದ್ದೂ ಆಯಿತು. ''ಒಂದೇ ವಾರದಲ್ಲಿ ಬೇಕಪ್ಪ ಅರ್ಜೆಂಟಿದೆ'' ಶಚಿ ವಿನಂತಿಸಿದಳು. ''ಖಂಡಿತ ಕೊಡ್ತೀನಿ ಮೇಡಂ'' ನಗುನಗುತ್ತ ಅವನಂದ ಸಿದ್ಧ ಸೌಜನ್ಯದಲ್ಲಿ!

''ಯಾರದು ಮಗಾ? ಏನು ನಡೀತಾ ಇದೆ?'' ಹಜಾರಕ್ಕೆ ತಾಗಿದಂತಿದ್ದ ಪಕ್ಕದ ಕೋಣೆಯಿಂದ ತಂದೆಯ ದುರ್ಬಲ ಸ್ವರ ನಿಧಾನವಾಗಿ ತೇಲಿ ಬಂತು.

''ಕಾಸ್ಟ್ಯೂಂ ಹೊಲಿಸೋಕೆ ಬಂದಿದಾರೆ ಅಪ್ಪ... ಇವತ್ತು ಒಬ್ರು ಬರ್ತಾರೆ ಅಂತ ಹೇಳಿದ್ನಲ್ಲ ನಾನು?''

''ಹಾಗಾ? ಸಂತೋಷ ಸಂತೋಷ! ಏನು, ಪ್ರೋಗ್ರಾಂ ಅಂತಾ?''

''ಹೌದಪ್ಪ... ರಂಗಪ್ರವೇಶ! ಮುಂದಿನ ವಾರಾನೇ!''

''ತುಂಬ ಸಂತೋಷ. ಹೊಲಿದುಕೊಡು ಒಳ್ಳೇದಾಗಲಿ. ಅಂದ್ಹಾಗೆ ಅಳತೆ ತೊಗೊಂಡ್ಯಾ?''

''ಇನ್ನೂ ಇಲ್ಲಪ್ಪ. ಈಗ ತೊಗೋತೀನಿ.''

''ಹುಶಾರು ಮಗಾ.. ಶ್ರದ್ಧೆಯಿಂದ ಗಮನ ಕೊಟ್ಟು ಅಳತೆ ತಗೋಬೇಕು... ಅಳತೆ ತಗೊಳ್ಳೋದ್ರಲ್ಲೇ ಇರೋದು ಉಡುಪಿನ ಅಂದ! ಎಲ್ಲಿ, ನಂಗೂ ಮಗುವಿನ ಮೆಶರ್‌ಮೆಂಟ್ಸ್ ಹೇಳು?''

ಗೋಡೆಬದಿಗೆ ವಿನ್ನುವನ್ನು ನಿಲ್ಲಿಸಿ ವಿಶ್ವ ನಿಧಾನವಾಗಿ ಅಳತೆ ತೆಗೆದುಕೊಳ್ಳತೊಡಗಿದ. ಒಂದೊಂದೇ ಅಳತೆಯನ್ನು ಆತ ಒಳಗಿರುವ ತಂದೆಗೆ ಗಟ್ಟಿಯಾಗಿ ಹೇಳುತ್ತಿದ್ದಂತೆ, ಕೋಣೆಯೊಳಗಿಂದ ಆಹ ಆಹ... ಭಲೆ... ಭೇಷ್... ಮುಂತಾದ ಮೆಚ್ಚುಗೆಯ ಪ್ರಸನ್ನ ಉದ್ಗಾರಗಳು! ಆ ಮೆಚ್ಚುಗೆಯಲ್ಲೆ ವೃತ್ತಿ ಪರಿಣತಿ ಇತ್ತು, ಆತ್ಮೀಯತೆ ಇತ್ತು, ಖುಷಿ ಇತ್ತು. ಪುಟ್ಟ ಮಾಟವೊಂದನ್ನು ಒಳಗಣ್ಣಿನಿಂದಲೇ ಅಲಂಕರಿಸಿ ಹಿಗ್ಗುವ ರಸಿಕ ಶಿಲ್ಪಿಯಂತೆ ಭಾಸವಾದರು ಆ ವಯೋವೃದ್ಧ ದರ್ಜಿ! ಅಳತೆ ತಗೊಂಡಿದ್ದೆಲ್ಲ ಮುಗಿದ ಮೇಲೆ ಮಗನಿಗೆ ಹೇಳಿದರು – ''ಗೊಂಬೆ ಹಾಗಿದಾಳೆ ಹುಡುಗಿ... ಚೆನ್ನಾಗಿ ಹೊಲಿದುಕೊಡು. ಚೆನ್ನಾಗಿ ಡ್ಯಾನ್ಸ್ ಮಾಡಲಿ.'' ಆದರೆ ಮಾತು ಮುಗಿಯುವಷ್ಟರಲ್ಲೆ ಒಳಗಿಂದ ಯಾತನಾಮಯ ಕೆಮ್ಮು ಒತ್ತರಿಸಿಕೊಂಡು ಬಂದುಬಿಟ್ಟಿತು. ಕೆಮ್ಮುತ್ತ ಸುಧಾರಿಸಿಕೊಳ್ಳುತ್ತ ಸುಮ್ಮನಾದರು.

ಅಷ್ಟರಲ್ಲಿ ಅಡುಗೆ ಮನೆಯಿಂದ ಥಳಥಳಿಸುವ ಲೋಟಗಳಲ್ಲಿ ಷರಬತ್ತು ಬಂತು. ''ಅಯ್ಯೋ ನಿಮಗೆ ತೊಂದರೆ!'' ಬಾಯಿನುಡಿದರೂ ಬೆಂದು ಬಂದಿದ್ದ ಒಡಲಿಗೆ ಈ ಸಿಹಿಪಾನಕ ಅಮೃತವೇ ಆಯಿತು.

ಹೊರಡುವ ಮುನ್ನ ಶಚಿ ಅಂದಳು: ''ವಿಶ್ವ, ನಿಮ್ಮ ತಂದೆಯವರನ್ನು ಕಂಡು ನಮಸ್ಕಾರ ಹೇಳಿ ಹೋಗ್ತೀನಿ. ದೊಡ್ಡ ದೊಡ್ಡ ಕಲಾವಿದರಿಗೆ ಉಡುಪು ಹೊಲಿದವರು; ದೊಡ್ಡವರು. ಕಂಡುಹೋಗ್ತೀನಿ.''

''ಬನ್ನಿ ಮೇಡಂ ಅದಕ್ಕೇನು?'' ವಿಶ್ವ ಅವರನ್ನು ರೂಮಿಗೆ ಕರೆದೊಯ್ದ. ಇಷ್ಟುಹೊತ್ತಿಗೆ ಈ ಮಾತು ಕೇಳಿ ಆ ಹಿರಿಯರು ಹಾಸಿಗೆ ಮೇಲೆ ಎದ್ದುಕುಳಿತಿದ್ದರು. ಅವರೇ ''ಹೊರಟ್ರಾ ತಾಯೀ? ನಮಸ್ಕಾರ. ನೀವೇನೂ ಯೋಚ್ನೆ ಮಾಡ್ಬೇಡಿ. ನನ್ನ ಮಗ ಕೂಡ ಕಾಸ್ಟ್ಯೂಂ ಚೆನ್ನಾಗಿ ಹೊಲೀತಾನೆ. ಟ್ರೇನಿಂಗ್ ಆಗಿದೆ ಅವನಿಗೆ'' ನಗುನಗುತ್ತ ಹೇಳಿದರು. ಆ ನಿಶ್ಶಬ್ದ ಕತ್ತಲ ಕೋಣೆಯಲ್ಲಿ ಒಂದು ಸೌಮ್ಯ ಹಣತೆಯ ಹಾಗೆ ಭಾಸವಾದ ಆ ವೃದ್ಧ ಗಾತ್ರವನ್ನೇ ಅವಳು ಗೌರವದಿಂದ ದಿಟ್ಟಿಸಿದಳು. ದುಡಿದು ಸೋತುಹೋದ ಜೀವ. ಅದರಲ್ಲಿ ನಿರಾಶೆ ಇರಲಿಲ್ಲ, ಬದಲಿಗೆ ದಿವ್ಯವಾದೊಂದು ಸಮಾಧಾನ ಇದ್ದಂತಿತ್ತು. ಮುನಿಯಂಥ ಮುಖಭಾವ ತುಟಿ-ಕೆನ್ನೆ-ಗಲ್ಲಗಳಲ್ಲಿ ತುಳುಕಿತ್ತು. ಆದರವರ ಕಣ್ಣು ಮಾತ್ರ ಮುಚ್ಚಿಬಿಟ್ಟಿತ್ತು, ಹೌದು. ಚಂದ್ರಭಾಗಾದೇವಿ, ವೈಜಯಂತಿ ಮಾಲಾ, ಪದ್ಮಿನಿ-ರಾಗಿಣಿಯರ ಒನಪಿನ ಅಡವುಗಳಿಗೆ ಚಂದದ ನಿರಿಗೆ ಕೂರಿಸಿದ ಕಲಾವಿದ ಕಣ್ಣು ಮತ್ತೆಂದೂ ಬಿಚ್ಚಲಾಗದಂತೆ ಮುಚ್ಚಿಕೊಂಡಿದೆ. ಇನ್ನವರು ಸೂಜಿ ಪೋಣಿಸಲಾರರು. ನೂಲಿನ ಹೊಳಪನ್ನು ಕಂಡು ಹಿಗ್ಗಲಾರರು. ನಯವಾದ ರೇಶಿಮೆಯನ್ನು ಕಲಾತ್ಮಕವಾಗಿ ಕತ್ತರಿಸಲಾರರು. ಈವರೆಗೆ ದುಡಿದು ದಣಿದದ್ದೇ ಹೆಚ್ಚಾಗಿಬಿಟ್ಟಿತೋ ಅನ್ನುವಂತೆ ಒಂದು ಶಾಶ್ವತ ಕತ್ತಲೆ ಅವರ ಕಣ್ಮುಂದೆ ಆವರಿಸಿಬಿಟ್ಟಿದೆ. ಬಣ್ಣವಿಲ್ಲದ, ಬೆಳಕಿಲ್ಲದ ಆ ಶೂನ್ಯ ನೋಟದಲ್ಲಿ ಯಾವ ಕನಸು ಕುಣಿಯುತ್ತಿರಬಹುದು? ಅನುಷ್ಠಾನಕ್ಕೆ ತರಲಾಗದ ಅದೆಷ್ಟು ಅಸಹಾಯಕ ಆಕಾಂಕ್ಷೆಗಳು ಒಳಗೊಳಗೆ ಬಾಧಿಸುತ್ತಿರಬಹುದು? ಎಲ್ಲೋ ಹುಟ್ಟಿಸಿ, ಇನ್ನೆಲ್ಲೋ ಸುತ್ತಿಸುಳಿಸಿ ಎಷ್ಟೆಲ್ಲ ನೋಟ ಕಾಣಿಸಿ ಬಿಡುತ್ತದೆಯ ಜೀವನ? ವಿಷಾದದಿಂದ ನಿಟ್ಟುಸಿರಿಟ್ಟು ಅವಳು ಹೊರಬಿದ್ದರೆ, ಅಮ್ಮ ಆಗತಾನೇ ಎಸೆದುಹೋಗಿದ್ದ ಖಾಲಿ ಗಾರೆ ಬಾಣಲೆಯಲ್ಲಿ ಸ್ವಸ್ಥವಾಗಿ ಕೂತು ಹಿಂದಕ್ಕೂ ಮುಂದಕ್ಕೂ ಆನಂದವಾಗಿ ಜೀಕಿಕೊಳ್ಳುತ್ತಿದ್ದ ಪುಟ್ಟ ಪುಟ್ಟಿಯೊಂದು ಇವಳನ್ನು ಕಂಡು ತನ್ನ ಸುಳಿಪಲ್ಲುಗಳನ್ನು ಮಿಂಚಿಸಿ ಮುದ್ದಾಗಿ ಮುಸಿಮುಸಿ ನಕ್ಕಿತು!

ಭಾರತೀ ಕಾಸರಗೋಡು
೨೩೬, ೧೪ನೇ ಕ್ರಾಸ್, ಬಿ.ಇ.ಎಲ್. ಬಡಾವಣೆ (ಮೊದಲ ಹಂತ), ಭಾರತ್‌ನಗರ
ಮಾಗಡಿ ರಸ್ತೆ, ಬೆಂಗಳೂರು - ೫೬೦ ೦೯೧

## ಜೀವವಾಗೋ ಬಯಕೆ



ಒಂದಾನೊಂದು ಕಾಲದಲ್ಲಿ
ಅಲ್ಲ
ನಿನ್ನೆ ಮೊನ್ನೆ ಎಂಬ ಕಾಲದಲ್ಲಿ
ಸಾಧ್ಯವೇ ಇಲ್ಲ
ಒಂದಾನೊಂದು ಕಾಲದಲ್ಲ
ಥೂ
ಯಾವುದೊ ಒಂದು
ಕಾಲವೆಂಬೋ ಕಾಲದಲ್ಲೊಂದು
ಕೋಟೆ
ಕೋಟೆಯೊಳಗೊಂದರಮನೆ
ಕೋಟೆಯೊಳಗೊಂದರಮನೆಗೊಬ್ಬ
ಪೇಟತೊಟ್ಟ ರಾಜ
ರಾಜನೆಂಬೊನಿಗೊಬ್ಬ ರಾಣಿ
ಕಾಲು ಮುರಿದ ಲಕ್ಷ್ಮಿಯರು
ಪರಮಾನ್ನ, ಪನ್ನೀರು
ಹೆಜ್ಜೆಗೊಬ್ಬ ಆಳು
ಹಚ್ಚ ಹಸುರಿನ
ಉದ್ಯಾನವೆಂಬೊ ವನ
ಚಿಮ್ಮುವ ಕಾರಂಜಿ
ಎತ್ತರದಲಷ್ಟಗಲ ಆಕಾಶ
ಸುತ್ತಲಿನ ಹಸಿರು
ಏನುಂಟು ಏನಿಲ್ಲ ಆ
ಕೋಟೆ ಎಂಬೋ ಕೋಟೆಯೊಳಗೆ
ಭೂಮಿ ಮಂಡಲವಾಗಿ ಮುದುಡಿದಂತೆ
ಆ ಕೋಟೆ ಎಂಬೋ
ಭೂಮಂಡಲದೊಳಗಿನರಮನೆ
ಸೆರೆಮನೆ ಎನಿಸಿದ
ನಾಳೆ ಎಂಬೊ ಹುಡುಗಿ
ಆಳುಕಾಳು ತೊರೆದು
ವನವೆಂಬ ಉದ್ಯಾನಕ್ಕಡಿಯಿಟ್ಟು
ಹಸಿರಲ್ಲಿ ಹೊರಳಾಡಿ
ಕಾರಂಜಿಯಲ್ಲಿ ಮಿಂದು
ಅಷ್ಟೆತ್ತರದಲ್ಲಷ್ಟಗಲ
ಆಕಾಶ ಕಂಡು
ಕಡೆಗೂ ಬಿಡುಗಡೆಯಾಯ್ತೆಂದು
ನಿರಾಳಾದವಳ ಕಂಡು
ಮರುಳೆಂದು
ನಕ್ಕಿತು ಗರುಕೆ ಹುಲ್ಲು
ಸಿಟ್ಟಾದ ಹುಡುಗಿ
ಹೊಸಕಿದಂತೆಲ್ಲ
ಚಿಗುರೊಡೆದು
ನಡೆದ ಗರುಕೆಯ
ಗುರಿಯಾಗಿಸಿಕೊಂಡ
ಹುಡುಗಿ ನಡೆದೆ
ನಡೆದಳು
ನಡೆ ನಡೆದು ನಿಂತಿದ್ದು
ಜುಳು ಜುಳು ಹೊಳೆಯಂಚಿಗೆ
ಅಂಚಿನಿಂದೆಂತ ಚಂದ ಹೊಳೆ!
ಬೆಳಕಿಗೆ ಹೊಳೆದೊಳೆದು
ಪಳಗುಡುವ ಹರಿವ ಹೊಳೆಯೊಳಗರಿದಾಡುವ
ಥಳಥಳ ಮೀನು ನೋಡಿ
ಬೆರಗಾದವಳ ಕಂಡು ಮರುಗಿತು ಗರುಕೆ
ಗರುಕೆ – 'ಏಯ್! ಹುಸುಳೆ, ಹೊಳೆಯಲ್ಲವದೊಂದು ಕಂದಕ
ತಳದಲ್ಲಿ ಮೊಸಳೆ,
ಇತ್ತ ನೋಡೇ ವನವೆಂಬೋ ವನ ಜೀವವೆಂಬ ಜಾಲದೊಳಗೆ
ಜಾಲಾಡಿ ಹುಡುಕು ನಿನ್ನ ಬಿಡುಗಡೆ.'
ಹುಡುಗಿ – ಹೇಗೆ ಬರಲಿ,
ಗರುಕೆ – ಹಗುರಾಗಿ ಹಾರಿ ಬಾ ಇಲ್ಲ, ಬಿದ್ದು ಗುದ್ದಾಡಿ ಬಾ
ಹುಡುಗಿ – ಕಣ್ಣು ಮುಚ್ಚಿ ವನವ
ಬಯಸುತ್ತಾ ದೇನಿಸುತ್ತಾ ಸವೆಯುತ್ತಾ ಹಾರಿ ಬಿದ್ದಿದ್ದು
ಕಣಿವೆ ಎಂಬ ಮೌನಕ್ಕೆ
ಹಗಲು ಇಂಚರವಾಗೋ ಮೌನ
ಇರುಳು ಭೀಕರವಾಗುವ ಮೌನ
ನಲಿಯುತ್ತಾ ನವೆಯುತ್ತಾ ಸಾಗಿತ್ತು ನಾಳೆ
ಅಲ್ಲಿ ಆಕಾಶ ಮುಟ್ಟೋ ಬೆಟ್ಟದ ತುದಿಯಲ್ಲಿ
ಮಿನುಗುವ ಬೆಳಕೆಂಬೋ ಜೀವದಲಿ
ಜೀವವಾಗೋ ಬಯಕೆಯಲಿ

ದು. ಸರಸ್ವತಿ
ನಂ. ೧೧೯, ಪಶ್ಚಿಮ ಕಾರ್ಡ್ ರಸ್ತೆ, ಎರಡನೆಯ ಹಂತ,
ಮಹಾಲಕ್ಷ್ಮೀಪುರ, ಬೆಂಗಳೂರು - ೫೬೦ ೦೮೬

# ಪಥೇರ್ ಪಾಂಚಾಲಿ

## ಭಾರತ ಚಲನಚಿತ್ರರಂಗದ ವಿಶಿಷ್ಟ ಮೈಲಿಗಲ್ಲು




ಐವತ್ತು ವರ್ಷಗಳ ಹಿಂದೆ ತೆರೆಕಂಡ 'ಪಥೇರ್ ಪಾಂಚಾಲಿ' ಬಗ್ಗೆ ಪರ-ವಿರೋಧ ಅಭಿಪ್ರಾಯಗಳೇನೇ ಇರಲಿ, ಈ ಚಲನಚಿತ್ರ ನಮ್ಮ ರಾಷ್ಟ್ರದ ಚಲನಚಿತ್ರ ರಂಗದಲ್ಲಿ ಒಂದು ಮೈಲಿಗಲ್ಲು. ಅದು ಸಿನಿಮಾದ ಪರಿಭಾಷೆಯನ್ನೇ ಬದಲಿಸಿತು. ವೀಕ್ಷಕರ ಸೂಕ್ಷ್ಮಗ್ರಹಣಕ್ಕೆ ಉತ್ತಮ ಗ್ರಾಸವನ್ನು ಒದಗಿಸಿತು.

ಮ. ಶ್ರೀ. ಮುರಳಿ ಕೃಷ್ಣ

**ಚ**ಲನಚಿತ್ರ ಮಾಧ್ಯಮ ಬಹಳ ಶಕ್ತಿಯುತವಾದದ್ದು. ವೀಕ್ಷಕರ ಮೇಲೆ ಗಾಢವಾದ ಪರಿಣಾಮ ಬೀರುವ ಈ ಮಾಧ್ಯಮ ೨೦ನೇ ಶತಮಾನದ ಅಪೂರ್ವ ಕೊಡುಗೆ. ಮೂಕಿಯಿಂದ ಟಾಕಿಯ ಮೂಲಕ ಇಂದು ತಂತ್ರಜ್ಞಾನದ ನೂತನ ಆವಿಷ್ಕಾರಗಳನ್ನು ಬಳಸಿಕೊಂಡು ಮುನ್ನುಗ್ಗುತ್ತಿದೆ ಈ ಮಾಧ್ಯಮ. ಸಿನಿಮಾದ ಮೋಡಿಗೆ ಮರುಳಾಗದವರಾರು ?

ಭಾರತದ ಚಲನಚಿತ್ರ ಇತಿಹಾಸ ವರ್ಣಮಯ. ಹಂತ-ಹಂತವಾಗಿ ಬೆಳೆದ ಅದರ ಯಶೋಗಾಥೆ ರೋಚಕ. ಅನೇಕರು ಈ ಕ್ಷೇತ್ರದಲ್ಲಿ ತಮ್ಮ ವಿಶಿಷ್ಟವಾದ ಛಾಪನ್ನು ಮೂಡಿಸಿದ್ದಾರೆ. ಬೆಳ್ಳಿತೆರೆಯಲ್ಲಿ ತಮ್ಮ ಸಾಮರ್ಥ್ಯವನ್ನು ಬೆಳಗಿಸಿ ವೀಕ್ಷಕರು ಬೆಕ್ಕಸಬೆರಗಾಗುವಂತೆ ಮಾಡಿದ್ದಾರೆ. ಆದರೆ ಅಂತರರಾಷ್ಟ್ರೀಯ ಸಿನಿಮಾ ಭೂಪಟದಲ್ಲಿ ಭಾರತಕ್ಕೆ ಪ್ರಥಮ ಬಾರಿಗೆ ಸ್ಥಾನವನ್ನು ಗಳಿಸಿಕೊಟ್ಟ ಕೀರ್ತಿ ಪ್ರತಿಭಾ ಸಂಪನ್ನ ನಿರ್ದೇಶಕ ಸತ್ಯಜಿತ್ ರಾಯ್ ಅವರಿಗೆ ಸಲ್ಲಬೇಕು.

ಮೊದಲು, ರಾಯ್ ಕಲ್ಕತ್ತಾದ ಜಾಹೀರಾತು ಕಂಪನಿಯೊಂದರಲ್ಲಿ ಕೆಲಸಕ್ಕೆ ಸೇರಿದರು. ಅಲ್ಲಿ ಕಲಾ ನಿರ್ದೇಶನ, ಪುಸ್ತಕ ವಿನ್ಯಾಸ ಮುಂತಾದ ಪ್ರಕಾರಗಳಲ್ಲಿ ಪರಿಣತಿ ಪಡೆದರು. ಶಾಲಾದಿನಗಳಿಂದಲೂ ಚಲನಚಿತ್ರಗಳಿಗೆ ಮನಸೋತಿದ್ದ ರಾಯ್ ೧೯೪೭ರಲ್ಲಿ ಕಲ್ಕತ್ತ ಫಿಲಂ ಸೊಸೈಟಿಯನ್ನು ಸ್ಥಾಪಿಸಿದರು. ನಂತರ ಲಂಡನ್‌ನಲ್ಲಿದ್ದ ಮೂರು ತಿಂಗಳ ಅವಧಿಯಲ್ಲಿ ಸುಮಾರು ೧೦೦ಕ್ಕೂ ಹೆಚ್ಚಿನ ಚಲನಚಿತ್ರಗಳನ್ನು ವೀಕ್ಷಿಸಿದರು. ಅವುಗಳಲ್ಲಿ ಮುಖ್ಯವಾಗಿ ವಿಟ್ಟೋರಿಯೊ ಡಿ ಸಿಕಾನ 'ಬೈಸಿಕಲ್ ಥೀವ್ಸ್' ಚಲನಚಿತ್ರದಿಂದ ಬಹಳ ಪ್ರಭಾವಿತರಾದರು. ಜಾಹೀರಾತು ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದಾಗಲೇ ಅವರು ನಿರ್ದೇಶಿಸಿದ ಪ್ರಥಮ ಚಲನಚಿತ್ರ **ಪಥೇರ್ ಪಾಂಚಾಲಿ** (೧೯೫೫) ರೂಪುಗೊಂಡಿತು. ವಾರಾಂತ್ಯಗಳಲ್ಲಿ ಶೂಟಿಂಗ್‌ನಲ್ಲಿ ನಿರತರಾಗುತ್ತಿದ್ದ ರಾಯ್ ಈ ಚಲನಚಿತ್ರದ ಮೂಲಕ ಭಾರತದ ಚಲನಚಿತ್ರರಂಗದಲ್ಲಿ ಒಂದು ನೂತನ ಪ್ರಯೋಗಕ್ಕೆ ನಾಂದಿ ಹಾಡಿದರು.

**ಪಥೇರ್ ಪಾಂಚಾಲಿ** (ರಸ್ತೆಯ ಹಾಡು) ಬಂಗಾಳಿ ಲೇಖಕ ಬಿಭೂತಿ ಭೂಷಣ್ ಬ್ಯಾನರ್ಜಿಯವರ ಕಾದಂಬರಿಯನ್ನು ಆಧರಿಸಿದೆ. ಅದನ್ನು ನಿರ್ಮಿಸಲು ರಾಯ್ ಅವರ ಬಳಿ ಹಣವಿರಲಿಲ್ಲ. ನ್ಯೂಯಾರ್ಕ್‌ನ ಮ್ಯೂಸಿಯಂ ಆಫ್ ಮಾಡರ್ನ್ ಆರ್ಟ್ ಮತ್ತು ಪಶ್ಚಿಮ ಬಂಗಾಳ ಸರ್ಕಾರ ನಿರ್ಮಾಣಕ್ಕೆ ಧನ ಸಹಾಯ ನೀಡಿದವು. ಆದರೂ ಕೆಲವು ತಿಂಗಳ ಕಾಲ ಹಣದ ಮುಗ್ಗಟ್ಟಿನಿಂದ ಶೂಟಿಂಗ್‌ಅನ್ನು ನಿಲ್ಲಿಸಬೇಕಾಯಿತು. ನಂತರ ತಮ್ಮ ಬಳಿಯಿದ್ದ ಅಮೂಲ್ಯ ಗ್ರಂಥಗಳನ್ನು ಹಾಗೂ ಶ್ರೀಮತಿಯವರ ಚಿನ್ನಾಭರಣಗಳನ್ನು ಮಾರಿ ಹಣವನ್ನು ಸಂಗ್ರಹಿಸಿದರು. ಅಂತೂ ಕೊನೆಗೆ ಚಿತ್ರ ಪೂರ್ಣಗೊಂಡಿತು. ೧೧೫ ನಿಮಿಷಗಳ ಕಪ್ಪು-ಬಿಳುಪಿನ



'ಪಥೇರ್ ಪಾಂಚಾಲಿ' ಚಲನಚಿತ್ರದ ಅಪು ಪಾತ್ರ.....

ಈ ಚಲನಚಿತ್ರದ ಮುಖ್ಯ ಪಾತ್ರಗಳಲ್ಲಿ ಕರುಣಾ ಬ್ಯಾನರ್ಜಿ, ಕಾನು ಬ್ಯಾನರ್ಜಿ, ರುಂಕಿ ಬ್ಯಾನರ್ಜಿ, ಉಮಾ ದಾಸ್‌ಗುಪ್ತ, ಚುನ್ನಿಬಾಲ ದೇವಿ ಮುಂತಾದ ನಟ-ನಟಿಯರಿದ್ದರು.

**ಪಥೇರ್ ಪಾಂಚಾಲಿ**ಯ ಚಿತ್ರಕಥೆ ರಾಯ್ ಅವರದೇ. ಈ ಕಥೆ ೧೯೨೦ರ ದಶಕದ ಅವಧಿಯದ್ದಾಗಿತ್ತು. ಒಂದು ಬ್ರಾಹ್ಮಣ ಕುಟುಂಬದ ಸುತ್ತ ಕಥಾ ಹಂದರವನ್ನು ಹೆಣೆಯಲಾಗಿತ್ತು. ಕುಟುಂಬದ ಮುಖ್ಯಸ್ಥ ಒಬ್ಬ ಕವಿ ಹಾಗೂ ಪೂಜಾರಿ. ಅವನು ಆಶಾವಾದಿ. ಆದರೆ ಜೀವನವನ್ನು ವಾಸ್ತವಿಕ ನೆಲೆಯಲ್ಲಿ ಗುರುತಿಸುವಲ್ಲಿ ಅಸಮರ್ಥ. ಆತನ ಮಡದಿಯೋ ತದ್ವಿರುದ್ಧ ಸ್ವಭಾವದವಳು. ಆಕೆ ಕುಟುಂಬ ಎದುರಿಸುವ ದೈನಂದಿನ ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸುತ್ತಾಳೆ. ಅವರಿಗೆ ದುರ್ಗಾ ಮತ್ತು ಅಪು ಇಬ್ಬರು ಮಕ್ಕಳು. ದುರ್ಗಾಳಿಗೆ ತನ್ನ ಗ್ರಾಮದ ತೋಟಗಳಿಂದ ಮಾವಿನ ಹಣ್ಣುಗಳನ್ನು

ಕದಿಯುವುದೆಂದರೆ ಪಂಚಪ್ರಾಣ. ಅಪು ಒಂದು ಸಣ್ಣ ಶಾಲೆಗೆ ಹೋಗುತ್ತಿರುತ್ತಾನೆ. ಅವರ ಮನೆ ದುರಸ್ತಿ ಕಾಣದೆ ಆತಂಕಕಾರಿ ಸ್ಥಿತಿಯಲ್ಲಿರುತ್ತದೆ. ಮನೆಯ ಯಜಮಾನ ಹೆಚ್ಚಿನ ಸಂಬಳಕ್ಕಾಗಿ ನಗರದತ್ತ ಪಯಣಿಸುತ್ತಾನೆ. ಅವನು ವಾಪಸ್ಸು ಬರುವ ವೇಳೆಗೆ ದುರ್ಗಾ ಗತಿಸಿರುತ್ತಾಳೆ. ನಂತರ ಆತ ಬದುಕನ್ನು ವಾಸ್ತವಿಕ ದೃಷ್ಟಿಯಿಂದ ಕಾಣಲು ತೊಡಗುತ್ತಾನೆ. ಹೊಸ ಬದುಕನ್ನು ಅರಸಿ ಕುಟುಂಬವನ್ನು ಬನಾರಸ್‌ಗೆ ಕರೆದೊಯ್ಯುತ್ತಾನೆ. ಚಿತ್ರ ಆಶಾವಾದದ ಸಂದೇಶವನ್ನು ಸಾರುತ್ತ ಕೊನೆಗೊಳ್ಳುತ್ತದೆ.

ಇಡೀ ಚಿತ್ರದಲ್ಲಿ ರೂಪಕಗಳು ವಿಜೃಂಭಿಸುತ್ತವೆ. ದುರ್ಗಾ ಹಾಗೂ ಅಪು ಮೊದಲ ಬಾರಿಗೆ ಟೆಲಿಗ್ರಾಫ್ ಕಂಬ ಮತ್ತು ರೈಲು ಗಾಡಿಯನ್ನು ಕಂಡಾಗ ಪ್ರತಿಕ್ರಿಯಿಸುವುದನ್ನು ರಾಯ್ ಮಾರ್ಮಿಕವಾಗಿ ಚಿತ್ರೀಕರಿಸಿದ್ದಾರೆ. ಸ್ವಾತಂತ್ರ್ಯ ಗಳಿಸಿದ ಹೊಸತರಲ್ಲಿ ನಮ್ಮ ರಾಷ್ಟ್ರದ ಆಶೋತ್ತರಗಳನ್ನು, ಉತ್ತಮ ನಾಳೆಗಳ ಭರವಸೆಯನ್ನು ನಿರೀಕ್ಷಿಸುವ ಸೆಲೆಗಳನ್ನು ದುರ್ಗಾಳ ಕುಟುಂಬದ ಮೂಲಕ ಅರ್ಥಪೂರ್ಣವಾಗಿ ಸಂಕೇತಿಸಿದ್ದಾರೆ. ಮೆಲೊಡ್ರಾಮ ಹಾಗೂ ಹಾಡು-ಕುಣಿತಗಳ ಸನ್ನಿವೇಶಗಳಿರದಿದ್ದ ಈ ಚಲನಚಿತ್ರ ನೈಜ ಬದುಕನ್ನು ಸ್ಪಂದಿಸುತ್ತದೆ.

ಕಲ್ಕತ್ತದಲ್ಲಿ 'ಪಥೇರ್ ಪಾಂಚಾಲಿ'ಯನ್ನು ವೀಕ್ಷಿಸಿದ ಅಂದಿನ ಪಶ್ಚಿಮ ಬಂಗಾಳದ ಮುಖ್ಯಮಂತ್ರಿ ಡಾ|| ಬಿ. ಸಿ. ರಾಯ್ ಇದು ಗ್ರಾಮೀಣ ಅಭಿವೃದ್ಧಿ ಬಗ್ಗೆ ನಿರ್ಮಿಸಿದ ಸಾಕ್ಷ್ಯಚಿತ್ರವೆಂದು ಬಗೆದರು. ಚಲನಚಿತ್ರವನ್ನು ಇತ್ಯಾತ್ಮಕ ನೆಲೆಯಲ್ಲಿ ಅಂತ್ಯಗೊಳಿಸಿಲ್ಲ ಎಂಬುದು ಅವರ ಅಭಿಮತವಾಗಿತ್ತು. ಇನ್ನೂ ಅನೇಕ ಅಪಸ್ವರಗಳೂ ಎದ್ದವು. ಆದರೆ ಜವಹರಲಾಲ್ ನೆಹರೂ ಅವರ ಮಧ್ಯ ಪ್ರವೇಶದಿಂದ ಈ ಚಲನಚಿತ್ರ ೧೯೫೬ರಲ್ಲಿ ಕಾನ್(Cannes) ಫಿಲಂ ಉತ್ಸವದಲ್ಲಿ ಪ್ರದರ್ಶಿಸಲ್ಪಟ್ಟಿತು. ಅಲ್ಲಿ ಅದು ಉತ್ಕೃಷ್ಟ ಮಾನವೀಯ ಸಾಕ್ಷ್ಯ ವಿಭಾಗದಲ್ಲಿ ವಿಶೇಷ ಪುರಸ್ಕಾರಕ್ಕೆ ಪಾತ್ರವಾಯಿತು. ಅಂತರರಾಷ್ಟ್ರೀಯ ಮಟ್ಟದಲ್ಲಿ ಭಾರತದ ಚಲನಚಿತ್ರರಂಗದ ಪತಾಕೆಯನ್ನು ಹಾರಿಸಿದ



'ಪಥೇರ್ ಪಾಂಚಾಲಿ' ಚಲನಚಿತ್ರದ ಒಂದು ದೃಶ್ಯ

ಕೀರ್ತಿ ರಾಯ್ ಅವರಿಗೆ ಸಂದಿತು.

'ಪಥೇರ್ ಪಾಂಚಾಲಿ' ಚಲನಚಿತ್ರದಲ್ಲಿ ಕೆಲವು ವೈಶಿಷ್ಟ್ಯಗಳಿದ್ದವು. ವೃತ್ತಿಯಲ್ಲಿ ಛಾಯಾಗ್ರಾಹಕರಾಗಿದ್ದ ಹಾಗೂ ಎಂದೂ ಚಲನಚಿತ್ರರಂಗದಲ್ಲಿ ಕೆಲಸ ಮಾಡದಿದ್ದ ಶುಭ್ರತ ಮಿತ್ರ ಈ ಚಲನಚಿತ್ರದ ಸಿನಿಮೋಟೋಗ್ರಾಫರಾಗಿ ದುಡಿದರು. ಈ ಸಿನಿಮಾ ನೋಡದೆಯೇ ಹನ್ನೊಂದು ಗಂಟೆಗಳ ಕಾಲ ಸಂಗೀತವನ್ನು ರೆಕಾರ್ಡ್ ಮಾಡಿದ್ದು ಖ್ಯಾತ ಸಿತಾರ್ ವಾದಕ ರವಿಶಂಕರ್. ಆ ಕಾಲದಲ್ಲಿ ಅವರಿನ್ನೂ ಕೀರ್ತಿಯ ಶಿಖರ ಏರಿರಲಿಲ್ಲ. ಈ ಚಲನಚಿತ್ರದ ಶೂಟಿಂಗ್ ಶುರುವಾದಾಗ ವೃದ್ಧೆಯ ಪಾತ್ರದಲ್ಲಿ ಮಿಂಚಿದ ಚುನ್ನಿಬಾಲ ದೇವಿಗೆ ೮೦ ವರ್ಷ ವಯಸ್ಸು. ಆಕೆ ಕೆಲವು ದಶಕಗಳ ಹಿಂದೆ ನಟಿಯಾಗಿದ್ದವಳು. ರಾಯ್ ಈಕೆಯನ್ನು ಪತ್ತೆ ಮಾಡಿದಾಗ ಅವಳು ವೇಶ್ಯಾಗೃಹ ವೊಂದರಲ್ಲಿ ವಾಸಿಸುತ್ತಿದ್ದಳು. ಯಾವುದೋ ಹುಡುಗಿಗಾಗಿ ರಾಯ್ ಬಂದಿರ ಬೇಕೆಂಬುದು ಆಕೆಯ ಲೆಕ್ಕಾಚಾರ. ಆದರೆ ಅವರು ಬಂದದ್ದು ತನ್ನನ್ನು ಕಾಣಲು ಎಂದು ಅರಿತಾಗ, ಸಿನಿಮಾದಲ್ಲಿ ಪಾತ್ರ ಮಾಡಲು ಎರಡು ನಿಬಂಧನೆಗಳನ್ನು ಹಾಕಿದಳು. ಒಂದು, ಅವಳಿಗೆ ನಿಗದಿತ ಸಂಬಳ ಕೊಡಬೇಕು. ಎರಡು, ಅವಳು ನಿತ್ಯ ಸೇವಿಸುವ ಅಫೀಮ್‌ನ ಲಭ್ಯವಿರಬೇಕು!

'ಪಥೇರ್ ಪಾಂಚಾಲಿ' ತೆರೆ ಕಂಡು ೨೫ ವರ್ಷಗಳ ತರುವಾಯ ಜಪಾನಿನ ಖ್ಯಾತ ಚಲನಚಿತ್ರ ನಿರ್ದೇಶಕ ಅಕಿರ ಕುರೋಸವ ಅದರ ಬಗ್ಗೆ ಪ್ರತಿಕ್ರಿಯಿಸುತ್ತ ''ಇದನ್ನು ವೀಕ್ಷಿಸಿ ನನಗೆ ಬಹಳ ಸಂತಸವಾಯಿತು. ನಂತರ, ನಾನು ಈ ಚಿತ್ರವನ್ನು ಅನೇಕ ಬಾರಿ ವೀಕ್ಷಿಸಿದ್ದೇನೆ. ಪ್ರತಿ ಬಾರಿಯೂ ನಾನು ಭಾವಪರವಶನಾಗಿದ್ದೇನೆ. ಒಂದು ದೊಡ್ಡ ನದಿಯ ಪ್ರಸನ್ನತೆ ಹಾಗೂ ಘನತೆಯಂತೆ ಈ ಚಲನಚಿತ್ರ ಅನಾವರಣಗೊಳ್ಳುತ್ತದೆ'' ಎಂದು ಹೇಳಿದ್ದು ಈ ಚಲನಚಿತ್ರದ ವೈಶಿಷ್ಟ್ಯತೆಗೆ ಹಿಡಿದ ಕೈಗನ್ನಡಿ.

ಆದರೆ ರಾಯ್ ಅವರ ಚಲನಚಿತ್ರಗಳು ಕಟುಟೀಕೆಗಳಿಗೂ ಗುರಿಯಾದವು. ೧೯೮೦ರಲ್ಲಿ ನರ್ಗಿಸ್ ದತ್ ಸಂಸತ್‌ನಲ್ಲಿ ಮಾತನಾಡುತ್ತ ಅಪು ತ್ರಿವಳಿ ಚಲನಚಿತ್ರಗಳ (ಅವುಗಳಲ್ಲಿ 'ಪಥೇರ್ ಪಾಂಚಾಲಿ' ಮೊದಲನೆಯದು) ಬಗ್ಗೆ ತಮ್ಮ ಭಿನ್ನಾಭಿಪ್ರಾಯಗಳನ್ನು ವ್ಯಕ್ತ ಪಡಿಸಿದರು. ವಿದೇಶಗಳಲ್ಲಿ ಅವು ಭಾರತವನ್ನು ನೇತ್ಯಾತ್ಮಕ ನೆಲೆಯಲ್ಲಿ ಪ್ರತಿನಿಧಿಸಿವೆಯೆಂದು ಆರೋಪಿಸಿದರು. ''ಈ ಚಲನಚಿತ್ರಗಳ ಮೂಲಕ ಅಲ್ಲಿನ ವೀಕ್ಷಕರಿಗೆ ನಮ್ಮ ರಾಷ್ಟ್ರದ ಬಡತನ ಪ್ರದರ್ಶಿಸಿದ್ದರಿಂದ ಅವು ಜನಪ್ರಿಯವಾದುವೇ ?'' ಎಂದು ಪ್ರಶ್ನೆ ಮಾಡಿದರು.

ಐವತ್ತು ವರ್ಷಗಳ ಹಿಂದೆ ತೆರೆ ಕಂಡ 'ಪಥೇರ್ ಪಾಂಚಾಲಿ' ಬಗ್ಗೆ ಪರ-ವಿರೋಧ ಅಭಿಪ್ರಾಯಗಳೇನೇ ಇರಲಿ, ಈ ಚಲನಚಿತ್ರ ನಮ್ಮ ರಾಷ್ಟ್ರದ ಚಲನಚಿತ್ರ ರಂಗದಲ್ಲಿ ಒಂದು ಮೈಲಿಗಲ್ಲು. ಅದು ಸಿನಿಮಾದ ಪರಿಭಾಷೆಯನ್ನೇ ಬದಲಿಸಿತು. ವೀಕ್ಷಕರ ಸೂಕ್ಷ್ಮಗ್ರಹಣಕ್ಕೆ ಉತ್ತಮ ಗ್ರಾಸವನ್ನು ಒದಗಿಸಿತು.

ಆಧಾರ: ಹಲವು ಮೂಲಗಳು

ಮ. ಶ್ರೀ. ಮುರಳಿ ಕೃಷ್ಣ
ನಂ. ೮೮೩/೧೦೧೬, (ಔಟ್‌ಹೌಸ್), ೧ನೇ 'ಇ' ಮುಖ್ಯರಸ್ತೆ,
ಗಿರಿನಗರ ೨ನೇ ಹಂತ, ಬೆಂಗಳೂರು - ೫೬೦ ೦೮೫

# ನಮ್ಮ ಪ್ರಜಾಪ್ರಭುತ್ವ
# ಏಕಪಕ್ಷ ಆಡಳಿತದಿಂದ ಸಂಯುಕ್ತರಂಗದತ್ತ

ಇನ್ನು ಮುಂದೆ ನಮ್ಮ ರಾಷ್ಟ್ರದಲ್ಲಿ ಒಕ್ಕೂಟಗಳು ಇಲ್ಲವೇ ಸಮ್ಮಿಶ್ರ ಸರ್ಕಾರಗಳ ಅನಿವಾರ್ಯತೆ ಇದೆಯೆಂಬುದನ್ನು ರಾಜಕೀಯ ಪಕ್ಷಗಳು ಪದೇಪದೇ ಕಂಡುಕೊಳ್ಳುತ್ತಿವೆ. ಕಾಂಗ್ರೆಸ್ ಪಕ್ಷವೂ ಈ ವಾಸ್ತವತೆಯನ್ನು ಸ್ವೀಕರಿಸಿರುವುದು ಇತ್ತೀಚಿನ ಬೆಳವಣಿಗೆ. ಹೀನಾಯ ಸೋಲನ್ನುಂಡಿರುವ ಅದ್ವಾನಿಯವರು ಸಣ್ಣಪುಟ್ಟ ಪಕ್ಷಗಳೆಲ್ಲಾ ಒಟ್ಟಾಗಿ ಸೇರಿ, ಕಾಂಗ್ರೆಸ್ಸಿನ ಲಂಚಕೋರ ಆಡಳಿತದ ವಿರುದ್ಧ ಹೋರಾಡಬೇಕೆಂದು ಕರೆ ನೀಡಿ ಒಂದಿಷ್ಟು ನಗೆಪಾಟಲಿಗೆ ಗುರಿಯಾಗಿದ್ದಾರೆ. ಅವರದೇ ಆದ ಅಂಥ 'ಕಟಿಬಂಧ' ಸರ್ಕಾರವೇ ಅಲ್ಲವೆ ಈಗಷ್ಟೆ ಮಣ್ಣುಮುಕ್ಕಿದ್ದು? ಸಮ್ಮಿಶ್ರ ಸರ್ಕಾರ ಸಿದ್ಧಾಂತದ ತಜ್ಞರೆಂದೇ ಹೇಳಿಕೊಳ್ಳುವ ಭಾಜಪ ನೇತೃತ್ವದ ಈ ಬಗೆಯ ಪ್ರಯೋಗ ಒಂದು ಅವಕಾಶವಾದದ, ಸಂದರ್ಭಕ್ಕೆ ರಚಿಸಿದ ಒಕ್ಕೂಟವಾಗಿದ್ದು, ಆ ಸಂದರ್ಭವು ಬದಲಾಯಿಸಿದೊಡನೆಯೇ ಅದು ಬಿಚ್ಚಿಕೊಂಡಿದ್ದರಲ್ಲಿ ಆಶ್ಚರ್ಯವೇನಿಲ್ಲ. ಅದೇ ಕೇರಳ, ಪಶ್ಚಿಮ ಬಂಗಾಳ ರಾಜ್ಯಗಳಲ್ಲಿ ಬಹಳ ಕಾಲದ ಅನುಭವ ಮತ್ತು ಪಕ್ವತೆಯನ್ನು ಪಡೆದಿರುವ ಎರಡು ಒಕ್ಕೂಟಗಳೂ ಒಕ್ಕೂಟದ ಆಡಳಿತಕ್ಕೆ ಮಾದರಿಗಳೆಂಬಂತೆ ಮುಂದುವರಿದಿವೆ. ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಎರಡು ಪಕ್ಷಗಳ ಒಕ್ಕೂಟ ಈಗ ಅಧಿಕಾರಕ್ಕೆ ಬಂದಿದೆ. ಜನತಾದಳದ ಬಹುತೇಕ ನಾಯಕರು ಮೂಲತಃ ಕಾಂಗ್ರೆಸ್ಸಿಗೆ ಸೇರಿದ್ದ ಜನರೇ ಎಂಬುದು ಗಮನಾರ್ಹ. ಈ ಎಲ್ಲ ಪ್ರಯೋಗಗಳಲ್ಲಿರುವ ಮುಖ್ಯ ವ್ಯತ್ಯಾಸವೆಂದರೆ, ಅವುಗಳ ಸೈದ್ಧಾಂತಿಕ ಹಾಗೂ ಕನಿಷ್ಠ ಕಾರ್ಯಕ್ರಮಗಳ ಆಧಾರಿತ ನೆಲೆ. ಒಂದು ಕಡೆ, ನೀತಿರಹಿತ ಒಕ್ಕೂಟಗಳು ಅಧಿಕಾರದ ತೆರವು ಇದ್ದು ಅದನ್ನು ಸಾಧ್ಯವಾದಾಗಲೆಲ್ಲಾ ಒಟ್ಟಾಗಿ ಸೇರಿಕೊಂಡು ಹಿಡಿದು ಅಸ್ತಿತ್ವಕ್ಕೆ ಬರಲು ಹವಣಿಸುತ್ತವೆ. ಸ್ವತಂತ್ರ ಭಾರತದ ಆರು ದಶಕಗಳಲ್ಲಿ, ಅದರಲ್ಲೂ ಕಳೆದ ಹದಿನೈದು ವರ್ಷಗಳ ರಾಜಕೀಯ ಅಸ್ಥಿರ ಭೂಮಿಕೆಯಲ್ಲಿ ಈ ಎಲ್ಲಾ ಪ್ರಯೋಗಗಳು ನಡೆಯುತ್ತಿವೆ. ಈ ಪ್ರಯೋಗಗಳು ಇನ್ನೂ ನಿರ್ದಿಷ್ಟ ಸ್ವರೂಪವನ್ನು ಪಡೆಯಬೇಕಿದೆ. ಸಂಯುಕ್ತ ರಂಗದ ರಾಜಕೀಯ ಬೆಳವಣಿಗೆಗಳ ಹಿಂದೆ ಇರುವ ಒತ್ತಡಗಳು ಎಂಥವು? ಅವು ಕೇವಲ ರಾಜಕೀಯ ಮೂಲದವೇ? ಆರ್ಥಿಕ ಅಥವಾ ಸಾಮಾಜಿಕ ಮೂಲದವೇ? ಇವಕ್ಕೆಲ್ಲಾ ಒಂದು ಸೈದ್ಧಾಂತಿಕ ವಿವರಣೆ ಸಾಧ್ಯವೇ?

ನಮ್ಮಲ್ಲೀಗ ಅಸ್ತಿತ್ವಕ್ಕೆ ಬಂದಿರುವ ಪ್ರಜಾಪ್ರಭುತ್ವ ಮಾದರಿಯು ಬ್ರಿಟಿಷರಿಂದ ಆಮದು ಮಾಡಿಕೊಂಡದ್ದು. ನಿನ್ನೆ ಮೊನ್ನೆಯವರೆಗೆ ಅಲ್ಲಿ ಹೆಸರಿಗೆ ಲಿಬರಲ್, ಗ್ರೀನ್‌ಪೀಸ್, ಕಮ್ಯುನಿಸ್ಟ್ ಮುಂತಾದ ಕೆಲವು ಚಿಲ್ಲರೆ ಪಕ್ಷಗಳಿದ್ದರೂ ಅಧಿಕಾರವು ಮುಖ್ಯವಾಹಿನಿಯ ಪಕ್ಷಗಳಾದ ಲೇಬರ್ ಮತ್ತು ಕನ್ಸರ್ವೇಟಿವ್ ಎರಡು ಪಕ್ಷಗಳದ್ದೇ. ಟೋನಿ ಬ್ಲೆಯರ್ ಕಾಲಕ್ಕೆ ಸೈದ್ಧಾಂತಿಕವಾಗಿ ಲೇಬರ್ ಮತ್ತು ಕನ್ಸರ್ವೇಟಿವ್ ಪಕ್ಷಗಳು ತಮ್ಮ ಹೆಸರು ಸೂಚಿಸುವ ಎಲ್ಲಾ ಗುಣವಿಶೇಷಗಳನ್ನೂ ಕಳೆದುಕೊಳ್ಳುವಷ್ಟರಮಟ್ಟಿಗೆ ಏಕರೂಪೀ ಪಕ್ಷಗಳಾಗಿಬಿಟ್ಟಿವೆ. ಅಂತೆಯೇ ಅಮೆರಿಕದಲ್ಲೂ ಹೆಸರಿಗೆ ಎರಡು ಪಕ್ಷಗಳಾದರೂ ಅವುಗಳ ನಡುವೆ ಯಾವ ವ್ಯತ್ಯಾಸವೂ ಇಲ್ಲದಂತಾಗಿದೆ. ಅಲ್ಲಿಯ ಚುನಾವಣೆಗಳು ವ್ಯಕ್ತಿಗಳನ್ನು ಬದಲಾಯಿಸುತ್ತಿವೆಯೇ ವಿನಾ ನೀತಿ ನಿರೂಪಣೆಯ ದಿಶೆಗಳನ್ನಲ್ಲ. ಅಂದರೆ ಅಮೆರಿಕದ ಮತದಾರನಿಗೆ ಆಯ್ಕೆ ಎಂಬುದೇ ಅರ್ಥಹೀನವಾಗಿದೆ. ಆ ರಾಷ್ಟ್ರದ ಮಾಧ್ಯಮದ ವರದಿಗಳನ್ನು ಗಮನಿಸಿದಾಗ ಅಲ್ಲಿ ವ್ಯಾಪಕವಾಗಿ ಯಾವುದೇ ರೀತಿಯ ಸಾಮಾಜಿಕ ಪರಿವರ್ತನೆಗಳಾಗಬೇಕೆಂದಾದರೆ ಅದು ರಾಜಕೀಯ ಪಕ್ಷಗಳಿಂದ ಸಾಧ್ಯವಿಲ್ಲ ಎಂಬಂತಾಗಿದೆ. ಅಲ್ಲಿಯ ಆರ್ಥಿಕ ರಚನೆಯ ಏಳುಬೀಳುಗಳು ಜನಪರ ಪರಿವರ್ತನೆಗಳನ್ನು ತರಬಲ್ಲವೇ ಎಂಬುದನ್ನು ಕಾದುನೋಡಬೇಕಾಗಿದೆ.

ಕಾಲಕಾಲಕ್ಕೆ ಅಗತ್ಯವಾದ ಪರಿವರ್ತನೆಗಳನ್ನು ತರಲಾರದ ರಾಜಕೀಯ ಪ್ರಕ್ರಿಯೆ ನಿಂತ ನೀರಾಗುತ್ತದೆ, ವ್ಯವಸ್ಥೆ ರೋಗಗ್ರಸ್ತವಾಗುತ್ತದೆ.

ಭಾರತದಲ್ಲಿ ಐವತ್ತರ ದಶಕದಲ್ಲಿ ಕಾಂಗ್ರೆಸ್ಸಿನ ಏಕಪಕ್ಷೀಯ ಆಡಳಿತವೇ ಇದ್ದದ್ದು ಎಂಬುದು ಎಲ್ಲರ ತಿಳಿವಳಿಕೆ. ಸ್ವಾತಂತ್ರ್ಯ ತಂದುಕೊಟ್ಟ ಪಕ್ಷವೆಂಬ ಕೀರ್ತಿ ಪಡೆದ ಕಾಂಗ್ರೆಸ್ ಚುನಾವಣಾ ಕಣಕ್ಕೆ ಇಳಿದೊಡನೆ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳಿಂದಾಗಿ ಆ ಪಕ್ಷವನ್ನು ಬಿಟ್ಟು ಅನೇಕರು ಹೊರಬಂದರು. ಕಮ್ಯುನಿಸ್ಟ್ ಪಕ್ಷವನ್ನು ಸೇರಲಾರದ ಸಮಾಜವಾದಿಗಳು ಆಗಿನ ಕಾಲದ ಪ್ರಮುಖ ವ್ಯಕ್ತಿಗಳ ಸುತ್ತ ತಮ್ಮದೇ ಪಕ್ಷಗಳನ್ನು ನಿರ್ಮಿಸಿಕೊಂಡರು. ಪ್ರಥಮ ಲೋಕಸಭೆಯನ್ನು ರಚಿಸಿದ ಸಂದರ್ಭದಲ್ಲಿ ಮಾತ್ರ ಕಮ್ಯುನಿಸ್ಟ್ ಪಕ್ಷವು ವಿರೋಧಪಕ್ಷವಾಗಿ ಗೋಚರಿಸಿತು. ಆನಂತರದ ಮಹತ್ವದ ಬೆಳವಣಿಗೆಯೆಂದರೆ, ಇಂದಿರಾ ಗಾಂಧಿಯವರ ನಾಯಕತ್ವದಲ್ಲಿ ಕಾಂಗ್ರೆಸ್ ಪಕ್ಷವು ಸೈದ್ಧಾಂತಿಕ ಆಧಾರದ ಮೇಲೆ ಇಬ್ಭಾಗವಾಗಿದ್ದು. ಅಂದಿನ ಸಂದರ್ಭದಲ್ಲಿ ಒಂದಿಷ್ಟು ಸಿದ್ಧಾಂತ, ಒಂದಿಷ್ಟು ಕನಿಷ್ಠ ಕಾರ್ಯಕ್ರಮಗಳ ಆಧಾರದ ಮೇಲೆ ಆಕೆ ಪ್ರಚಂಡ ಬಹುಮತ ಗಳಿಸಿ ಅಧಿಕಾರಕ್ಕೆ ಬಂದರು. ಕೆಲವೇ ವರ್ಷಗಳಲ್ಲಿ ಇದು ಸರ್ವಾಧಿಕಾರದ ಲಕ್ಷಣಗಳಿಗೆ ಎಡೆಮಾಡಿಕೊಟ್ಟಿತು. ಕೆಲವು ಮಹತ್ವದ ಸಾಧನೆಗಳಿದ್ದಾಗ್ಯೂ ಚುನಾವಣೆಯಲ್ಲಿ ಅಧಿಕಾರ ಕಳೆದುಕೊಂಡು ಕಾಂಗ್ರೆಸ್ ತನ್ನ ವಿರೋಧಿ ಬಣಕ್ಕೆ ಅಧಿಕಾರ ಬಿಟ್ಟುಕೊಡಬೇಕಾಯಿತು. ಈ ವಿರೋಧಿ ಬಣ ರಚಿಸಿದ ಒಕ್ಕೂಟ ವಾಸ್ತವದಲ್ಲಿ ಸಂಸ್ಥಾ ಕಾಂಗ್ರೆಸ್ಸಿನೊಡನೆ ಐಕ್ಯಗೊಂಡಿದ್ದ ಜನಸಂಘ, ಸಮಾಜವಾದಿ ಬಣಗಳನ್ನು ಸೇರಿಸಿಕೊಂಡು, ಸೈದ್ಧಾಂತಿಕ ವೈರುಧ್ಯಗಳ ನಡುವಿನ, ಅದರಲ್ಲೂ ಇಂದಿರಾ ಗಾಂಧಿಯನ್ನು ವಿರೋಧಿಸಬೇಕೆಂಬ ಏಕೈಕ ಸೂತ್ರದ ಮೇಲೆ ರಚಿಸಿದ್ದ ಒಕ್ಕೂಟವಾಗಿತ್ತು. ಆ ಸರ್ಕಾರವು ಬಹಳ ಕಾಲ ಉಳಿಯಲಾಗದೆ ತನ್ನ ಆಂತರಿಕ ಅನಿವಾರ್ಯ ಅಸಾಂಗತ್ಯಗಳಿಗೆ ಬಲಿಯಾಗಬೇಕಾಯಿತು. ಪುನಃ ಅಧಿಕಾರಕ್ಕೆ ಬಂದ ಕಾಂಗ್ರೆಸ್ ಪಕ್ಷವು ತನ್ನ ಬಹುಮತವನ್ನು ಕಳೆದುಕೊಂಡಿತಾದರೂ ಅಧಿಕಾರಕ್ಕೆ ಆತುಕೊಳ್ಳುವ ಅವಕಾಶವಾದಿ ಒಡಂಬಡಿಕೆಗಳನ್ನು ಮಾಡಿಕೊಂಡು ಮುಂದುವರಿಯುವ ರಾಜಕೀಯ ರಚನೆಯಾಗಿತ್ತು. ಅಂತಿಮವಾಗಿ, ನರಸಿಂಹರಾಯರ ಕಾಲಕ್ಕೆ, ಬಹುಮತವಿಲ್ಲದೆ ಭಾಜಪದ ತೆರೆಮರೆಯ ಬೆಂಬಲದಲ್ಲಿ ಆಡಳಿತ ನಡೆಸಿ ಮುಂದೆ ದಶಕದ ಕಾಲ ಅಧಿಕಾರದಿಂದ ನಿರ್ಗಮಿಸಿತು. ಈ ಮಧ್ಯೆ ಅಸ್ತಿತ್ವದಲ್ಲಿದ್ದ ವಿ. ಪಿ. ಸಿಂಗ್ ಸರ್ಕಾರವು ಸ್ವಲ್ಪಮಟ್ಟಿಗೆ ಕಾರ್ಯಕ್ರಮಾಧಾರಿತ ಮತ್ತು ಸೈದ್ಧಾಂತಿಕ ಸಮ್ಮಿಶ್ರ ಆಡಳಿತದ ಲಕ್ಷಣ ಪಡೆದಿತ್ತು. ಆದರೆ, ಅದೂ ಆಂತರಿಕ ವೈರುಧ್ಯಗಳಿಂದಾಗಿ ಅಧಿಕಾರ ನಡೆಸಲಾಗಲಿಲ್ಲ. ಎನ್‌ಡಿಎಯ ಒಕ್ಕೂಟದ ಆಡಳಿತವು ವಾಸ್ತವದಲ್ಲಿ ಭಾಜಪದ ಏಕಪಕ್ಷದ ಅಧಿಕಾರವಾಗಿತ್ತು. ಅದು ತನ್ನೊಟ್ಟಿಗಿದ್ದ ಸಣ್ಣ ಪಕ್ಷಗಳ ಅಧಿಕಾರಲಾಲಸೆಯನ್ನು ಸಮರ್ಥವಾಗಿ ಬಳಸಿಕೊಂಡು ಕೋಮುವಾದಿ ಪ್ರತಿಗಾಮಿ ಆಡಳಿತ ನಡೆಸಿತು. ಎನ್‌ಡಿಎ ಅಧಿಕಾರ ಕಳೆದುಕೊಂಡಿದ್ದು ಈ ನೀತಿಯಿಂದಾಗಿ ಎನ್ನುವುದು ಈಗ ಸ್ಪಷ್ಟವಾಗಿದೆ. ಕಳೆದ ಚುನಾವಣೆಯಲ್ಲಿ ಕಾಂಗ್ರೆಸ್ ಗೆದ್ದಿತು ಎನ್ನುವುದಕ್ಕಿಂತ ಭಾಜಪ ಸೋತಿತು ಎನ್ನುವುದೇ ಸರಿ. ಈಗಿನ ಕಾಂಗ್ರೆಸ್ ನಾಯಕತ್ವದ ಒಕ್ಕೂಟ ಏನಿದ್ದರೂ ಚುನಾವಣೆಯ ನಂತರ ಅಸ್ತಿತ್ವಕ್ಕೆ ಬಂದದ್ದು. ಕಾಂಗ್ರೆಸ್ ಪಕ್ಷದಲ್ಲಿ ಸಂಯುಕ್ತರಂಗ ಸೇರಬೇಕೆಂಬ ಪರಿಪಕ್ವತೆ ಇತ್ತೀಚೆಗೆ ಬೆಳೆದದ್ದು ಒಂದು ವಿಶೇಷ ಬೆಳವಣಿಗೆ. ಈ ಒಕ್ಕೂಟ ರಚನೆಯಾಗಿರುವುದೇ ಕನಿಷ್ಠ ಕಾರ್ಯಕ್ರಮದ ಆಧಾರದ ಮೇಲೆ ಮತ್ತು ಕೋಮುವಾದ ವಿರುದ್ಧದ ಖಚಿತ ನೆಲೆಯಲ್ಲಿ, ಅದೂ ಚುನಾವಣೆಯ ನಂತರ. ಈ ಎರಡೂ ಆಧಾರಗಳು ಕುಸಿದುಬಿದ್ದರೆ ಯುಪಿಎ ಒಕ್ಕೂಟವೂ ಬಹಳ ಕಾಲ ನಿಲ್ಲಲಾರದು. ಅಂತೆಯೇ ಇಂದಿನ ಪರಿಸ್ಥಿತಿಯಲ್ಲಿ ಭಾಜಪ ಹೊಸ ದಾರಿ ಹಿಡಿಯದೆ ಕೋಮುವಾದಕ್ಕೇ ಶರಣುಹೋದರೆ ಮತ್ತೆ ಅಧಿಕಾರಕ್ಕೆ ಬರುವುದು ಸಾಧ್ಯವಿಲ್ಲ. ಕಾಂಗ್ರೆಸ್, ಭಾಜಪ ಎರಡು ಪಕ್ಷಗಳಿಗೂ ಆರ್ಥಿಕ ನೀತಿಗಳ ಕುರಿತಂತೆ ಭಿನ್ನಾಭಿಪ್ರಾಯವಿದ್ದಂತಿಲ್ಲ. ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿರುವ ಕೆಲವು ಅಂಶಗಳು ಎನ್‌ಡಿಎ ಮತ್ತು ಇದೇ ಕಾಂಗ್ರೆಸ್ ಪಕ್ಷ ಅನುಸರಿಸುತ್ತಿದ್ದ ಹಲವಾರು ಆರ್ಥಿಕ ನೀತಿಗಳಿಗೆ ವಿರುದ್ಧವಾಗಿರುವುದಲ್ಲದೆ ಒಂದಿಷ್ಟು ಜನಪರವಾಗಿಯೂ ಇವೆ.

ಸ್ವಾತಂತ್ರ್ಯೋತ್ತರ ಭಾರತದ ರಾಜಕೀಯ ಕ್ಷೇತ್ರದ ಈ ಸಂಕ್ಷಿಪ್ತ ಸರ್ವೇಕ್ಷಣದಿಂದ ತಿಳಿಯಬಹುದಾದ ಕೆಲವು ಸಂಗತಿಗಳು ಎಂದರೆ, ಜನತೆ ತುರ್ತು ಪರಿಸ್ಥಿತಿಯಂಥ ಸರ್ವಾಧಿಕಾರವನ್ನು ಸಹಿಸುವುದಿಲ್ಲ; ಭಾರತದ ಮತದಾರರಲ್ಲಿ ರಾಜಕೀಯ ಪ್ರಜ್ಞೆ ಹೆಚ್ಚುವ ಲಕ್ಷಣಗಳು ಕಂಡುಬರುತ್ತಿವೆ; ಸಾಮಾಜಿಕ ಭಿನ್ನತೆಗಳಲ್ಲಿ,

ಕೆ. ಎಸ್. ಪಾರ್ಥಸಾರಥಿ

ಯಾವೊಂದು ಭಿನ್ನತೆಯೂ ತಂತಾನೇ ಬಹುಮತವನ್ನು ಗಳಿಸಲಾಗದು. ಈಗ ಮತದಾರ ಸೈದ್ಧಾಂತಿಕ ವ್ಯತ್ಯಾಸಗಳನ್ನು ತೂಗಿನೋಡಿ ಮತ ನೀಡಬಲ್ಲ, ಬಡತನದ ಪ್ರಶ್ನೆಗೆ ಸಮರ್ಥ ಪರಿಹಾರ ನೀಡಬಲ್ಲ ರಾಜಕೀಯ ವ್ಯವಸ್ಥೆಗೆ, ಶೋಷಣೆಯ ವಿರುದ್ಧದ, ಜಾತಿ-ದಲಿತ ಸಂಘರ್ಷಗಳಿಗೆ ಸಮಾಧಾನ ನೀಡಬಲ್ಲ ಸಿದ್ಧಾಂತಗಳ ರಾಜಕೀಯ ಪ್ರಕ್ರಿಯೆಗಾಗಿ ನಿರಂತರ ಹುಡುಕಾಟ ಈಗ ನಡೆಯುತ್ತಿದೆ. ಮತ ಧರ್ಮಾಧಾರಿತ ಪ್ರತಿಗಾಮಿ ರಾಜಕಾರಣ ತನ್ನ ನೆಲೆಯನ್ನು ಖಚಿತವಾಗಿ ಕಳೆದು ಕೊಳ್ಳುತ್ತಿದೆ. ಭಾಜಪ ಮತ್ತು ಕಾಂಗ್ರೆಸ್ ಪಕ್ಷಗಳು ಆರ್ಥಿಕ ನೀತಿಯಲ್ಲಿ ತಮ್ಮ ಭಿನ್ನಾಭಿಪ್ರಾಯಗಳನ್ನು ಬಗೆಹರಿಸಿಕೊಂಡು ಚುನಾವಣೆಯಲ್ಲಿ ಸ್ಪರ್ಧಿಸಿದರೂ ಅವು ಅಧಿಕಾರಕ್ಕೆ ಬರುವ ಸಾಧ್ಯತೆಗಳಿಲ್ಲ. ವಿರೋಧಿ ಶಕ್ತಿಗಳು ಒಂದಾದರೆ ಈ ನೀತಿಗೆ ಬಹುಮತವಿಲ್ಲವೆಂಬ ಅರಿವು ಕ್ರಮೇಣ ಉಂಟಾಗುತ್ತಿದೆ. ಈ ಅರ್ಥನೀತಿಗೆ ಪರ್ಯಾಯವಾದ ಕಾರ್ಯಕ್ರಮಾಧಾರಿತ, ಯೋಜನಾಬದ್ಧ ಜನಪರ ಕ್ರಿಯೆಗೆ ಆದ್ಯತೆಯನ್ನು ಮತದಾರ ನಿರೀಕ್ಷಿಸುತ್ತಾನೆ. ಅಂಥ ಪರ್ಯಾಯ ನೀತಿ ಬಡವರ, ದಲಿತರ, ಎಲ್ಲ ಮತಗಳ, ಜಾತಿಗಳ, ಶೋಷಿತರ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಗೂ ಪರಿಹಾರ ನೀಡುವಂಥದ್ದಾಗಿರಬೇಕು. ಯಾವ ಒಕ್ಕೂಟವು ಅಂಥ ಕೆಲಸ ನಿರ್ವಹಿಸ ಬಲ್ಲುದೋ ಅಂಥ ಒಕ್ಕೂಟಕ್ಕೆ ಮತದಾರ ಒಲವು ತೋರಿಸುತ್ತಾನೆ. ಅಂಥ ಬೆಸುಗೆಯ ಸಂಯುಕ್ತರಂಗ ಬರುವವರೆಗೂ ರಾಜಕೀಯ ಅಸ್ಥಿರತೆ ಮುಂದುವರಿ ಯುತ್ತದೆ. ಇದೇನೂ ಹೊಸ ಬೆಳವಣಿಗೆಯಲ್ಲ. ಕಮ್ಯುನಿಸ್ಟರನ್ನು ಹೊರಗಿಟ್ಟು ಎಲ್ಲಾ ಪಕ್ಷಗಳಿಗೂ ಮಾತೃಪಕ್ಷವೆನಿಸಿದ ಕಾಂಗ್ರೆಸ್ ಪಕ್ಷ ಅಂಥ ಸಂಯುಕ್ತರಂಗ ರೂಪು ಗೊಂಡಿದ್ದರಿಂದಲೇ ಹಲವು ದಶಕಗಳ ಕಾಲ ಅಧಿಕಾರದಲ್ಲಿ ಮುಂದುವರೆಯಲು ಸಾಧ್ಯವಾಗಿದೆ. ಆ ಪಕ್ಷ ತನ್ನ ಸ್ವಭಾವವನ್ನು ಕಳೆದುಕೊಂಡು ಕೋಮುವಾದದೊಡನೆ ರಾಜಿ ಮಾಡಿ ಕೊಳ್ಳುತ್ತಾ ಭೂ ಮಾಲಿಕ ಹಾಗೂ ಬಂಡವಳಿಗರ ಪರವಾಗಿ ಮುಂದುವರಿದಂತೆಲ್ಲಾ ತನ್ನ ಸಂಯುಕ್ತರಂಗ ಸ್ವರೂಪ ಕಳೆದುಕೊಂಡು ಏಕವರ್ಗ ಪಕ್ಷದ ಸ್ವರೂಪ ಪಡೆದು ಬಹುಮತ ಕಳೆದುಕೊಳ್ಳಬೇಕಾಯಿತು. ಭಾಜಪ ಒಂದು ಪಕ್ಷವಾಗಿ ಬಂದದ್ದು ಇತ್ತೀಚೆಗೆ. ಆದರ ಚರಿತ್ರೆ ಕೆಲವು ದಶಕಗಳದ್ದು. ಆರ್‌ಎಸ್‌ಎಸ್ ಸಂಘಟಿಸಿದ ಪಕ್ಷ ಅದು. ವಿಚ್ಛಿದ್ರಕಾರಕ ಹಾಗೂ ಪ್ರತಿಗಾಮಿಯಾಗಿಯೇ ಉಳಿಯುವುದು ಅದರ ಮೂಲ ಸ್ವಭಾವ. ಅದರಿಂದಾಗಿ ರಾಷ್ಟ್ರದಲ್ಲಿ ಪ್ರಕ್ಷೋಭೆ ಉಂಟಾಗುತ್ತದೆಯೇ ವಿನಾ ಪ್ರಜಾಪ್ರಭುತ್ವದ ಬಲವರ್ಧನೆಯೇನೂ ಆಗದು. ಆರ್‌ಎಸ್‌ಎಸ್‌ನ ಉದ್ದೇಶವೇ ಸಂಕುಚಿತವಾದದ್ದು. ವಿವೇಕಯುತ ರಾಜಕೀಯ ಮತ್ತು ಪ್ರಜಾಪ್ರಭುತ್ವದ ರಕ್ಷಣೆಗಾಗಿ ಪ್ರಗತಿಪರ ಶಕ್ತಿಗಳು ಒಂದಾಗಿ ಈ ಆತಂಕವನ್ನು ಎದುರಿಸಬೇಕಾಗುತ್ತದೆ, ತಮ್ಮ ಜನಪರ ರಾಜಕೀಯವನ್ನು ಸಂಘಟಿಸಬೇಕಾಗುತ್ತದೆ. ಕಾರಣ, ಚುನಾವಣೆಯಲ್ಲಿ ಅಧಿಕಾರ ಕಳೆದುಕೊಂಡಿರುವ ಕೋಮುವಾದಿಗಳು, ಪ್ರತಿಗಾಮಿ ಶಕ್ತಿಗಳು ತಮ್ಮ ಫ್ಯಾಸೀ ಸ್ವರೂಪವನ್ನು ರಾಜಕೀಯೇತರ ಚಟುವಟಿಕೆಗಳನ್ನಾಗಿ ಪರಿವರ್ತಿಸಿ ಭಯಂಕರ ಸವಾಲು ಒಡ್ಡುವ ಆತಂಕ ಸಾರ್ವಕಾಲಿಕವಾದುದು.

ಭಾರತದಂತಹ ಜಾತಿ ಆಧಾರಿತ ಮತ್ತು ವರ್ಗೀಕೃತ ಸಮಾಜದಲ್ಲಿ ಜರುಗುವ ನಿರಂತರ ಸಂಘರ್ಷಗಳ ಪರಿಣಾಮವಾಗಿ ಮಹತ್ವದ ಹಾಗೂ ಗುಣಾತ್ಮಕ ಬದಲಾವಣೆಗಳಾಗಿವೆ. ಜಾತಿಗಳೊಳಗೆ, ದಲಿತರ ನಡುವೆ ರಾಜಕೀಯ ಪ್ರಭೇದ ಗಳಾಗಿವೆ. ಅವು ಕೇವಲ ಪ್ರತಿಗಾಮಿ ಸ್ವರೂಪದ ತಮ್ಮ ಉಚ್ಚ ನೀಚ ಬ್ರಾಹ್ಮಣ-ಅಬ್ರಾಹ್ಮಣ ಸ್ವರೂಪಗಳನ್ನು ನೀಗಿಕೊಳ್ಳುತ್ತಾ, ಅಧಿಕಾರದಲ್ಲಿ ದಕ್ಕಿಸಿಕೊಳ್ಳಬೇಕಾದ, ಸಿಕ್ಕ, ಸಿಗದ ಅವಕಾಶಗಳನ್ನು, ಆರ್ಥಿಕ ಬೆಳವಣಿಗೆಗಳನ್ನು, ಅತೃಪ್ತಿಯ ಆಧಾರದ ಮೇಲೆ ವಿವಿಧ ವಿಘಟನೆಯಾಗುತ್ತವೆ. ಕರ್ನಾಟಕದಲ್ಲಿ ದೇವರಾಜ ಅರಸರ ರಾಜಕೀಯ ಪ್ರಜ್ಞೆ ಇದನ್ನು ಬಹುಮಟ್ಟಿಗೆ ಸಾಧಿಸಿತು. ಹಾಗಾಗಿ ಕರ್ನಾಟಕದ ರಾಜಕೀಯ ಹಿಂದಿನಿಂದ ನಡೆದುಬಂದಂತೆ ಕೇವಲ ಎರಡು ಪ್ರಬಲ ಜಾತಿಗಳ ನಡುವಿನ ಪೈಪೋಟಿಯಾಗಿ ಮಾತ್ರ ಉಳಿಯಲಾಗಲಿಲ್ಲ. ದಲಿತರಿಗೂ ಇತರ ಜಾತಿಯವರಿಗೂ ಸ್ವಲ್ಪಮಟ್ಟಿಗೆ ಅಧಿಕಾರ ದೊರೆಯಿತು. ಹೀಗೆ ದೊರೆತ ಅಧಿಕಾರ ಒಂದೇ ಜಾತಿಯೊಳಗೆ ಎಲ್ಲಾ ಜನರಿಗೆ ಸಮಾನವಾಗಿ ಅವಕಾಶ ತರದೆ, ಬರಲಿರುವ ದಿನಗಳಲ್ಲಿ ಅಧಿಕಾರದಲ್ಲಿ ಪಾಲು ಪಡೆದವರು, ಪಡೆಯುವವರ ನಡುವೆ ಪ್ರತ್ಯೇಕ ಸಂಯುಕ್ತರಂಗ ರಚನೆಯಾಗುವ ಬೆಳವಣಿಗೆ ಕಂಡುಬರುತ್ತಿದೆ. ಇದನ್ನು ಸೈದ್ಧಾಂತಿಕವಾಗಿ ವರ್ಣಾಧಾರಿತ ರಾಜಕೀಯ ವಿಭಜನೆ ಎಂದು ಕರೆಯಬಹುದು. ಪಕ್ವವಾದ ಪ್ರಜಾಪ್ರಭುತ್ವದ ಬೆಳವಣಿಗೆ ಈ ಉಳ್ಳವರ ಮತ್ತು ಇಲ್ಲದವರ ನಡುವಿನ ಪ್ರಜಾಪ್ರಭುತ್ವಾತ್ಮಕ ಪೈಪೋಟಿಯಾಗಿ ಬೆಳೆದರೆ ಅದೊಂದು ಆರೋಗ್ಯಕರ ಬೆಳವಣಿಗೆ ಎನ್ನಬಹುದು. ಎಷ್ಟರಮಟ್ಟಿಗೆ ಈ ಬೆಳವಣಿಗೆಗೆ ಅಡಚಣೆ ಉಂಟಾಗುತ್ತದೋ ಅಷ್ಟರಮಟ್ಟಿಗೆ ಈ ಪೈಪೋಟಿ ಸಂಘರ್ಷವಾಗಿ ಬೆಳೆಯುವುದು ಅನಿವಾರ್ಯವಾಗುತ್ತದೆ. ಸಂಘರ್ಷದ ಹಾದಿಗೆ ದೂಡಿದಾಗ ಅದರ ಹಿಂದೆ ಫ್ಯಾಸೀ ಶಕ್ತಿಗಳ ಕೈವಾಡಕ್ಕೆ ಅವಕಾಶವೂ ಆಗುತ್ತದೆ. ಇದು ಜರ್ಮನಿ, ಇಟಲಿ ರಾಷ್ಟ್ರಗಳಲ್ಲಿನ ರಾಜಕೀಯ ಬೆಳವಣಿಗೆಗಳಿಂದ ತಿಳಿದುಬರುವ ಐತಿಹಾಸಿಕ ಪಾಠ. ಪ್ರಗತಿಪರ ಸಂಯುಕ್ತರಂಗವನ್ನು ರಚಿಸಬಯಸುವವರು ಇಂಥ ಭಯಂಕರ ವಾಸ್ತವಗಳಿಗೆ ಮುಖಾಮುಖಿಯಾಗುವುದು ಅನಿವಾರ್ಯ. ಉಳ್ಳವರು ತಾವಾಗೇ ಸಾಮಾಜಿಕ ನ್ಯಾಯವೆಂದು ಗ್ರಹಿಸಿ ಇಲ್ಲದವರಿಗಾಗಿ ಕಾಲಕಾಲದ ಒತ್ತಡಕ್ಕೆ ಮಣಿದಾದರೂ ಒಂದಿಷ್ಟು ಬಿಟ್ಟುಕೊಡುತ್ತಾ ಹೋಗುವುದು ಸುಧಾರಣೆಯ ಮಾರ್ಗ. ಬ್ರಿಟಿಷ್ ರಾಜಕೀಯ ಇತ್ತೀಚಿನವರೆಗೂ ಈ ಮಾರ್ಗವನ್ನೇ ಅನುಸರಿಸಿ ಸಾಮಾಜಿಕ ಸಂಘರ್ಷ, ಸಮಾಜವಾದೀಯ ಕ್ಷಿಪ್ರ ಕ್ರಾಂತಿಯಿಂದ ತಪ್ಪಿಸಿಕೊಂಡಿತು ಎಂಬ ಮಾತಿದೆ. ಅಂಥ ಅಲ್ಪ ಸುಧಾರಣೆಗಳಿಗೂ ಅವಕಾಶ ನೀಡದಾಗ ಸಂಘರ್ಷ ಅನಿವಾರ್ಯವಾಗುತ್ತದೆ. ಅದು ಸಂಘಟಿಸುತ್ತಿದ್ದಂತೆ ಉಳ್ಳವರು ಅದನ್ನು ಬಗ್ಗುಬಡಿಯಲು, ರಷ್ಯನ್ ಕ್ರಾಂತಿಯ ನಂತರ ರೂಪಿಸಿಕೊಂಡ ಉಪಾಯ ಫ್ಯಾಸೀವಾದ. ಇದು ಜನರ ಐಕಮತ್ಯವನ್ನು ಪ್ರತಿಗಾಮಿ ಭಾವುಕ ವಿಷಯಗಳ ಆಧಾರದ ಮೇಲೆ ಒಡೆಯಲು ಪ್ರಯತ್ನಿಸುತ್ತದೆ. ಅನುಭವದಿಂದ ಅರಿವು ಮೂಡುವವರೆಗೆ ಸ್ವಲ್ಪಕಾಲ ಜನತೆ ಇದರ ಆಕರ್ಷಣೆಗೆ ಬಲಿಯಾಗುತ್ತಾರೆ. ಇದು ಪ್ರಗತಿಪರ ಬೆಳವಣಿಗೆಗೆ ತಾತ್ಕಾಲಿಕ ತಡೆ ಒಡ್ಡಬಹುದು. ನಾವು ಈಗ ಈ ಆತಂಕವನ್ನು ಪರಿಹರಿಸಿಕೊಳ್ಳುವ ಸಂಧಿಕಾಲದಲ್ಲಿದ್ದೇವೆ ಎನ್ನಬಹುದು.

ಸಾಮಾಜಿಕ ನ್ಯಾಯ ಸಾಧನೆ, ಸಂಪತ್ತಿನ ನ್ಯಾಯಯುತ ಹಂಚಿಕೆ, ಅದೇ ಕಾಲದಲ್ಲಿ ನಿರಂತರ ಆರ್ಥಿಕ ವಿಕಾಸದ ಅಗತ್ಯಗಳನ್ನು ರಕ್ಷಿಸಿಕೊಳ್ಳುವುದು, ಇವು ಯಾವುದೇ ರಾಜಕೀಯ ಪ್ರಕ್ರಿಯೆಯ ಉದ್ದೇಶವಾಗಿರಬೇಕು. ಬೆಳವಣಿಗೆಯ ಹಾದಿಯಲ್ಲಿ ಐತಿಹಾಸಿಕವಾಗಿ ಅನೇಕ ಪ್ರತಿಗಾಮಿ ಹೊರೆಗಳನ್ನು ಪ್ರಗತಿಪರ ತಿಳಿವಳಿಕೆಗಳನ್ನು ಬಳುವಳಿಯಾಗಿ ಪಡೆದುಕೊಂಡಿರುತ್ತೇವೆ. ಇವೆರಡರ ನಡುವೆ ಸುಪ್ತವಾಗಿಯೋ, ಜಾಗೃತವಾಗಿಯೋ ಸಂಘರ್ಷಗಳು ನಡೆಯುತ್ತಲೇ ಇರುತ್ತವೆ. ವಿವಿಧ ರಾಜಕೀಯ ಪಕ್ಷಗಳು ಈ ಸಂಘರ್ಷಗಳನ್ನು ವಿವಿಧ ಹಂತದಲ್ಲಿ ಪ್ರತಿನಿಧಿಸುತ್ತವೆ, ಅವುಗಳ ಸೂತ್ರ ಹಿಡಿದಿರುತ್ತವೆ. ಇವೆಲ್ಲದರ ನಡುವೆ ಪದೇ ಪದೇ ಹೊಂದಾಣಿಕೆಗಳು ಆಗುತ್ತಲೇ ಇರುತ್ತವೆ. ಮೇಲ್ನೋಟಕ್ಕೆ ಅಧಿಕಾರ ಹಿಡಿಯುವ ತಾತ್ಕಾಲಿಕ ಉದ್ದೇಶ ಕಂಡು ಬಂದರೂ ಕ್ರಮೇಣ, ಅನುಭವ ಗಟ್ಟಿಯಾದಂತೆ, ಅವು ಸಾಮರಸ್ಯದ ಆಧಾರದ ಮೇಲೆ ಪರಸ್ಪರ ಹೊಂದಾಣಿಕೆಗಳಾಗಿ ರೂಪುಗೊಂಡು ಗಟ್ಟಿಯಾಗಿ ನಿಲ್ಲುತ್ತವೆ; ಕೇರಳದಲ್ಲಿ, ಪಶ್ಚಿಮ ಬಂಗಾಳದಲ್ಲಿ ಆಗಿರುವಂತೆ. ಹಾಗಲ್ಲದೆ ಸದ್ಯದ ಅವಕಾಶ ವಾದವಾಗಿ ಪರಸ್ಪರ ವಿರೋಧಿ ಸ್ವರೂಪದ ಗುಂಪುಗಳ ಹೊಂದಾಣಿಕೆ ಮಾಡಿ ಕೊಂಡಾಗ ಅವು ಬಹುಕಾಲ ನಿಲ್ಲದೇಹೋಗುತ್ತವೆ. ಸೈದ್ಧಾಂತಿಕ ವೈರುಧ್ಯಗಳಿಲ್ಲದ ಹೊಂದಾಣಿಕೆಗಳು ಸಂಯುಕ್ತರಂಗವನ್ನು ನಡೆಸುತ್ತಾ, ಅನುಭವದಲ್ಲಿ ಇತರ ಭಿನ್ನಾಭಿಪ್ರಾಯಗಳನ್ನು ನೀಗಿಕೊಳ್ಳುತ್ತಾ, ತಮ್ಮ ಸ್ವಂತ ಶಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಾ, ಒಬ್ಬರನ್ನೊಬ್ಬರು ಕಬಳಿಸದೇ ಮುಂದುವರಿಯುತ್ತವೆ. ಕಾಂಗ್ರೆಸ್ ಬಗ್ಗೆ, ಕಮ್ಯುನಿಸ್ಟ್ ಪಕ್ಷಗಳ ಬಗ್ಗೆ, ಭಾಜಪ ಬಗ್ಗೆ, ಅವರೊಡನೆ ಸೇರುವ ಪಕ್ಷಗಳಿಗೆ ಈ ಪಕ್ಷಗಳು ಎಷ್ಟರ ಮಟ್ಟಿಗೆ ಈ ಭರವಸೆಯನ್ನು ನೀಡಬಲ್ಲುವು ಎಂಬುದು ಮುಖ್ಯವಾಗುತ್ತದೆ. ಸದ್ಯದಲ್ಲಿ ಯುಪಿಎ ಸರ್ಕಾರದ ಸಂಯುಕ್ತರಂಗ ಕನಿಷ್ಠ ಕಾರ್ಯಕ್ರಮದ ಆಧಾರದ ಮೇಲೆ ಆರೋಗ್ಯಕರ ತಳಹದಿ ಪಡೆದಿದೆ ಎನ್ನಬಹುದು. ಎನ್‌ಡಿಎ ಒಕ್ಕೂಟದಲ್ಲಿ ಹೀಗೆಲ್ಲಾ ಮಾಡುವುದಿಲ್ಲ; ಅಯೋಧ್ಯೆ, ಕಾಶ್ಮೀರ ಮುಂತಾದುವುಗಳನ್ನು ಬದಿಗಿಡುತ್ತೇವೆ, ಇತ್ಯಾದಿ ಅಂಶಗಳು ನಿಷೇಧಾತ್ಮಕ ತಳಹದಿಯದಾಗಿದ್ದವು. ಆದರೆ ಯುಪಿಎ ಸರ್ಕಾರದ ಕನಿಷ್ಠ ಕಾರ್ಯಕ್ರಮ ಸ್ವಲ್ಪ ಮಟ್ಟಿಗಾದರೂ ಸುಧಾರಣಾ ಆರ್ಥಿಕ ನೀತಿಗೆ ಧನಾತ್ಮಕ ತಿದ್ದುಪಡಿ ಮಾಡುವ ಜನಪರ ಕಾರ್ಯಕ್ರಮಗಳನ್ನು ಒಳಗೊಂಡಿದೆ. ಯುಪಿಎನಲ್ಲಿ ಪ್ರಥಮ ಪಕ್ಷವಾದ ಕಾಂಗ್ರೆಸ್ ಎಷ್ಟು ಪರಿಪಕ್ವತೆಯನ್ನು ಪ್ರಕಟಿಸುವುದು

**ಅಂತರ**

ಬಡಜನರ ಕಲಾ ಚಿತ್ರಗಳು
ಕಲೆಗಾರನ ಕಲೆ ತೋರಿಸುತಿವೆ
ಬಡಜನರ ನಿಜ ಚಿತ್ರಗಳು
ಕಣ್ಣೀರ ಹನಿಗಳನು ತೋರಿಸುತಿವೆ

**ಶಂಕರಗೌಡ ಸತ್ಮಾರ**
ಸರಕಾರಿ ಪ್ರಥಮ ದರ್ಜೆ ಕಾಲೇಜು,
ಮುಂಡಗೋಡ

ಎಂಬುದನ್ನು ಆಧರಿಸಿ ಮುಂದೊಮ್ಮೆ ಕಮ್ಯುನಿಸ್ಟ್ ಪಕ್ಷಗಳು ಅಧಿಕಾರದಲ್ಲೂ ಸೇರಬಹುದು. ಹಾಗೆ ಸೇರಿ ಈ ಒಕ್ಕೂಟಕ್ಕೆ ಒಂದು ಜನಪರ ಸೈದ್ಧಾಂತಿಕ ಮೆರುಗು ತರಬಹುದಾಗಿದೆ. ಮೂಲಭೂತ ವ್ಯತ್ಯಾಸವಿಲ್ಲದ, ಕೇವಲ ವ್ಯಕ್ತಿಗಳನ್ನು ಮಾತ್ರ ಬದಲಾಯಿಸುವ ಎರಡೇ ಪಕ್ಷಗಳ ಅಮೆರಿಕದ ಮಾದರಿಯ ಪ್ರಜಾಪ್ರಭುತ್ವದ ಕನಸು ಕಾಣುತ್ತಿದ್ದವರಿಗೆ ಈಗ ಭ್ರಮನಿರಸನವಾಗಿರಬೇಕು. ಈ ಅರ್ಥದಲ್ಲಿ ಮುಂಬರುವ ದಿನಗಳು ಭಾರತದಲ್ಲಿ ಸಮ್ಮಿಶ್ರ ಸರ್ಕಾರಗಳ ಕಾಲ. ಭಾರತದ ಮಾರ್ಗ ಬ್ರಿಟಿಷ್ ಅಥವಾ ಅಮೆರಿಕಾ ಮಾದರಿಯಲ್ಲಾದ ಹೊಸ ಆವಿಷ್ಕಾರ. ನೂರು ಕೋಟಿ ಜನರ ಪ್ರಜಾಪ್ರಭುತ್ವದಲ್ಲಿ ಈ ಬೆಳವಣಿಗೆ ಅನಿವಾರ್ಯವಾಗಿದೆ. ನಕ್ಸಲೀಯರ ಪ್ರಭಾವ ಇರುವೆಡೆ ಚುನಾವಣಾಕಾಲದಲ್ಲಿ ಅವರ ಸಹಕಾರ ಬೇಡುವುದು ಎಂದರೆ ಒಂದಿಷ್ಟಾದರೂ ಪರಸ್ಪರ ಒಪ್ಪಿಕೊಂಡ ಅಂಶಗಳ ಆಧಾರದ ಮೇಲೆ ರಚಿಸುವ ಸಂಯುಕ್ತರಂಗವೇ ಆಗುತ್ತದೆ. ತನ್ಮೂಲಕ ಕಾಂಗ್ರೆಸ್ ಪಕ್ಷ ನಕ್ಸಲೀಯರಿಗಿರುವ ಪ್ರಜಾಬೆಂಬಲವನ್ನು ಗುರುತಿಸಿದಂತೆ ಆಗುತ್ತದೆ. ಚುನಾವಣೆಯಲ್ಲಿ ಜಯಿಸಿದ ನಂತರ ಒಪ್ಪಿಕೊಂಡ ವಿಷಯಗಳನ್ನು ಕಾರ್ಯಗತಗೊಳಿಸದೆ ಷರತ್ತು ಹಾಕಿ ಈ ಸಂಯುಕ್ತ ರಂಗವನ್ನು ಒಡೆಯಬಹುದು. ಆಗ ಮೊದಲಿನ ಒಡಂಬಡಿಕೆ ಅವಕಾಶವಾದ ವಾಗುತ್ತದೆ. ಅವಕಾಶವಾದ ತಾತ್ಕಾಲಿಕವಾಗಿ ಲಾಭ ತಂದುಕೊಡುತ್ತದೆ ಕೂಡ. ಆದರೆ ಇದು ಆರೋಗ್ಯಕರ ಪ್ರಜಾಪ್ರಭುತ್ವದ ಬೆಳವಣಿಗೆ ಎನಿಸದು. ಅಂಥ ಬೆಳವಣಿಗೆ ಎಂದರೆ ಒಪ್ಪಿಕೊಂಡ ಅಂಶಗಳನ್ನು ಕಾರ್ಯಗತಗೊಳಿಸಿ ನಕ್ಸಲೀಯರಿಗೆ ಇರುವ ಸಮರ್ಥನೆ ಇಲ್ಲವಾಗಿಸಿ, ಅವರನ್ನು ತಮ್ಮ ಸ್ವರೂಪದ ಪ್ರಜಾಪ್ರಭುತ್ವಕ್ಕೆ ಪಳಗಿಸುವುದು. ಸಂಬಂಧಪಟ್ಟ ಪಕ್ಷಗಳು ಈ ಕಟಿಬದ್ಧತೆಯ ಬಗ್ಗೆ ಡೋಲಾಯಮಾನ ವಾಗಿರುವುದು ಬೆಳವಣಿಗೆಯ ಹಾದಿಯಲ್ಲಿ ಸಹಜವೆನಿಸಿದರೂ ಎತ್ತ ತೂಗುವುದೋ ಎನ್ನುವ ಆತಂಕವನ್ನು ಉಂಟುಮಾಡುತ್ತದೆ. ಒಪ್ಪಿಕೊಂಡಂತೆ ನಡೆದುಕೊಂಡುಬಿಟ್ಟರೆ ನಕ್ಸಲೀಯರಿಗೆ ಸಮರ್ಥನೆ ಹೆಚ್ಚಾಗಿಬಿಡುತ್ತದೆ ಎನ್ನುವ ಗಾಬರಿಯೂ ಸರಿಯಲ್ಲ. ನುಡಿದಂತೆ ನಡೆದೆವೆಂದು ಒಪ್ಪಿಕೊಂಡವರ ಸಮರ್ಥನೆಯೂ ಹೆಚ್ಚಬಹುದು. ಇಬ್ಬರೂ ಬೆಳೆಯುವುದು ಒಂದು ಹಾದಿ. ಒಬ್ಬರನ್ನು ಮೆಟ್ಟಿ ಮತ್ತೊಬ್ಬರು ಬೆಳೆಯುವುದು ಇನ್ನೊಂದು ಹಾದಿ. ಎರಡನೇ ಹಾದಿಯಲ್ಲಿ ಸಂಯುಕ್ತರಂಗ ರಾಜಕೀಯ ಸಾಧ್ಯವಾಗುವುದಿಲ್ಲ. ಆ ಹಾದಿಯಲ್ಲಿ ಪ್ರಜಾಪ್ರಭುತ್ವಕ್ಕೆ ಕೇವಲ ತೋರಿಕೆಯ ಸಮರ್ಥನೆ ನೀಡುವವರು ಪ್ರಜಾಪ್ರಭುತ್ವ ವಿರೋಧಿಗಳು ಎಂದು ಹೆಸರಿಸುವ ಸಂಘರ್ಷದ ಹಾದಿಗೆ ತೆರೆದುಕೊಳ್ಳುತ್ತಾರೆ. ಸಂಘರ್ಷ ಮಾರ್ಗಕ್ಕೆ ವರ್ಗಾಧಾರಿತ ಪ್ರಜಾಪ್ರಭುತ್ವದ ಮತಗಟ್ಟೆಯ ಮಿತಿಗಳನ್ನು ಮೀರಿದ ಪ್ರಜಾ ಸಮರ್ಥನೆ ಇರುತ್ತದೆ. ಅಂಥ ಸಂದರ್ಭದಲ್ಲಿಯೇ ಸಂಘರ್ಷ ಉಂಟಾಗುತ್ತದೆ. ಅಂಥ ಸಂಘರ್ಷ ಮೂಲಭೂತ ಪರಿವರ್ತನೆಯನ್ನು ತರುತ್ತದೆ. ಅದನ್ನು ಯಾರೂ ತಡೆಯಲಾರರು. ಫ್ಯಾಸೀಗಳಿಗೂ ಸಾಧ್ಯವಾಗದು. ಹೀಗೆಂದು ಕಳೆದ ಶತಮಾನದ ಅನುಭವ ಸಾರಿಹೇಳುತ್ತದೆ.

ರಾಜಕೀಯ ಅಸ್ಥಿರತೆ ಎಂದು ಹೆದರಿಸಿ, ಅಧ್ಯಕ್ಷೀಯ ಮಾದರಿಯ ಎರಡೇ ಪಕ್ಷಗಳ ವ್ಯವಸ್ಥೆಯನ್ನು ಪ್ರತಿಪಾದಿಸುವವರ ಬಗ್ಗೆ ಎಚ್ಚರವಹಿಸಬೇಕು. ರಾಜಕೀಯ ಪಕ್ಷಗಳು ಬಹುಮತ ಸಾಧಿಸದೇ ಉಂಟಾದ ಅಸ್ಥಿರತೆಯನ್ನು ನಾವು ಸಾಕಷ್ಟು ನೋಡಿಯಾಗಿದೆ. ಇಂಥ ಪರಿಸ್ಥಿತಿಯನ್ನು ನಿರ್ವಹಿಸುವಷ್ಟು ಗಟ್ಟಿಯಾಗಿದೆ ನಮ್ಮ ವ್ಯವಸ್ಥೆ. ಜನಪರವಾದ ಸಾಮಾಜಿಕ ಆರ್ಥಿಕ ನೀತಿಗಳನ್ನು ಕೈಬಿಟ್ಟಂತೆ ರಾಜಕೀಯ ಅಸ್ಥಿರತೆ ಉಂಟಾಗುವುದನ್ನೂ ಈ ನೀತಿಗಾಗಿ ಸ್ವಲ್ಪಮಟ್ಟಿಗೆ ಶ್ರಮಿಸುವ ರಂಗ ರಚನೆಯಾದಾಗಲೂ ಜನರೇ ಅವರಿಗೆ ನಿರ್ಣಾಯಕ ಮತ ನೀಡುವುದನ್ನೂ ನಾವು ಕಂಡಿದ್ದೇವೆ. ಅಸ್ಥಿರತೆ ರಾಜ್ಯಾಂಗದ ರಚನೆಯಲ್ಲಿ ಅಲ್ಲ. ಜನಪರ ಕಾಳಜಿ, ಅವುಗಳ ನಿರ್ವಹಣೆಯನ್ನು ಸಂಘಟಿಸುವುದರಲ್ಲಿ ರಾಜಕೀಯ ಪಕ್ಷಗಳ ವೈಫಲ್ಯಗಳೇ ಇದಕ್ಕೆ ಕಾರಣ. ಕಳೆದ ಹತ್ತು ವರ್ಷಗಳ ಖಾಸಗೀಕರಣ ಜಾಗತೀಕರಣದ ಹುಯ್ಲು ಈ ಅಸ್ಥಿರತೆಯನ್ನು ಉಂಟುಮಾಡಿದೆ ಎಂಬುದನ್ನು ಗುರುತಿಸಿದರೆ, ತಕ್ಕ ತಿದ್ದುಪಡಿ ಮಾಡಲು ಮುಂದಾದರೆ ಸುಸ್ಥಿರತೆ ತಾನಾಗಿಯೇ ಬರುತ್ತದೆ. ಯುಪಿಎ ಬಹುಶಃ ಅಂಥ ಒಂದು ಸಣ್ಣ ಪ್ರಯತ್ನ. ಇದು ಫಲಕಾರಿಯಾದರೆ ಮುಂದೆ ಚುನಾವಣೆಗೆ ಮುಂಚೆಯೇ ಸಂಯುಕ್ತರಂಗ ರಚನೆಯ ಪರಿಪಾಠ ಉಂಟಾಗುತ್ತದೆ.

**ಕೆ. ಎಸ್. ಪಾರ್ಥಸಾರಥಿ**
ಸಿ-೧, 'ನಾಗಾರ್ಜುನ ಎನ್‌ಕ್ಲೇವ್', ೭೬/ಎ, ೧೪ನೇ ಅಡ್ಡರಸ್ತೆ
೧ನೇ ಹಂತ, ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

# ಹೊಸ ವರ್ಷಕ್ಕೆ ಹೊಸ ಅತಿಥಿ

**ಸಂ**ಜೆಯ ಶುಭ್ರವಾದ ಆಕಾಶವೇ ಚಳಿಗಾಲದ ವಿಶೇಷ. ಪೂರ್ವದಿಂದ ನೆತ್ತಿಯವರೆಗೂ ಹರಡಿದ ಆಕಾಶಗಂಗೆಯ ಚುಕ್ಕೆಗಳ ರಂಗೋಲಿ ಮುಂದೆ ವಾಯವ್ಯದವರೆಗೂ ವಿಸ್ತರಿಸಿದೆ. ಉತ್ತರದಲ್ಲಿ ಕುಂತಿ (ಕಾಸಿಯೋಪಿಯಾ), ಪರ್ಸಿಯುಸ್ (ಅರ್ಜುನ), ಆಂಡ್ರೋಮಿಡಾ (ದ್ರೌಪದಿ) ಇವುಗಳ ರಂಗಭೂಮಿ ಸಜ್ಜಾಗಿದೆ. ನೆತ್ತಿಯಲ್ಲಿ ಪೆಗಸಸ್ (ನಕುಲ) ಚೌಕ, ಅದರ ಎರಡು ಪಕ್ಕಗಳಲ್ಲಿ ಮೀನರಾಶಿಯ ಎರಡು ಮೀನುಗಳು, ಪೂರ್ವದತ್ತ ದೃಷ್ಟಿ ಹೊರಳಿಸಿದಂತೆ ಮೇಷರಾಶಿಯ ಪುಟ್ಟ ತ್ರಿಕೋಣ, ವೃಷಭದ ಫಳಗುಟ್ಟುವ ರೋಹಿಣಿ ಸೆರೆಹಿಡಿಯುತ್ತವೆ. ಪೂರ್ವದ ಅಂಚಿನಲ್ಲಿ ಹೊಳೆಯುವ ಒರೈಯನ್ (ಮಹಾವ್ಯಾಧ). ಏಳು ಗಂಟೆಯಾದಂತೆ ಪೂರ್ವದ ದಿಗಂತದ ಅಂಚಿನಲ್ಲಿ ಎರಡು ಪ್ರಕಾಶಮಾನ ಚುಕ್ಕೆಗಳು ಕಾಣುತ್ತವೆ. ಒಂದು ಲುಬ್ಧಕ (ಸಿರಿಯಸ್) ಇನ್ನೊಂದು ಶನಿಗ್ರಹ. ಸಂಜೆಯ ಆಕಾಶಕ್ಕೆ ಕಾಲಿಡುತ್ತಿರುವ ಗ್ರಹ ಇದೊಂದೇ. ಜನವರಿ ೧೩ರಂದು ಸೂರ್ಯ-ಭೂಮಿ-ಶನಿ ಒಂದೇ ನೇರಕ್ಕೆ (ಸರಳರೇಖೆ ಅಲ್ಲ). ಇದೇ ವಿಯುತಿ. ಇದರರ್ಥ ಸರಳ: ಶನಿ-ಭೂಮಿ ದೂರ (ಸದ್ಯಕ್ಕೆ) ಕನಿಷ್ಠ. ಆದ್ದರಿಂದ ಪ್ರಕಾಶ ಗರಿಷ್ಠ. ಅಷ್ಟೇ ಅಲ್ಲ; ರಾತ್ರಿ ಇಡೀ ಶನಿಯ ದರ್ಶನ ಲಭ್ಯ. ಸೂರ್ಯ ಕಂತುವಾಗ ಶನಿಯ ಉದಯ; ಸೂರ್ಯೋದಯದಲ್ಲಿ ಶನಿಯ ಅಸ್ತಮಾನ. ದುರ್ಬೀನುಗಳಿಂದಲೇ ಉಂಗುರವನ್ನೂ ಕಾಣುವ ಸಾಧ್ಯತೆ ಇದೆ.

ಸಂಜೆಯ ಆಕಾಶಕ್ಕೆ ಬಂದಿರುವ ಹೊಸ ಅತಿಥಿಯನ್ನು ಹುಡುಕಲು ಸ್ವಲ್ಪ ಕಷ್ಟಪಡಬೇಕು. ರೋಹಿಣಿ ಮತ್ತು ಕೃತ್ತಿಕೆಯ ಆಸುಪಾಸನ್ನು ಸೂಕ್ಷ್ಮವಾಗಿ ಗಮನಿಸಿ. ಚುಕ್ಕೆಯಲ್ಲದ ಹತ್ತಿಯಂತಹ ಕಾಯವೊಂದು ಕಾಣುತ್ತದೆ. ೭-೮ರಂದು ಕೃತ್ತಿಕೆಯ ಸಮೀಪವೇ ಇರುತ್ತದೆ. ಇದೇ ಮಕ್‌ಹೋಲ್ಟ್ಸ್ ಧೂಮಕೇತು. ಸಾಕಷ್ಟು ದೊಡ್ಡ ಕಕ್ಷೆಯ ಇದು ಜನವರಿ ೨೪ರಂದು ಸೂರ್ಯನನ್ನು ಬಳಸಿ ಹಿಂದಿರುಗುವಾಗ ಗರಿಷ್ಠ ಪ್ರಕಾಶ ಪಡೆಯುತ್ತದೆ. ಅದು ಉಳಿದ ಧೂಮಕೇತುಗಳಂತೆ ಸಂಧ್ಯಾ ಪ್ರಕಾಶದಲ್ಲಿ ಕರಗಿಹೋಗದೆ ಸ್ಪಷ್ಟವಾಗಿ ಕಾಣುವುದೆಂಬುದೇ ವಿಶೇಷ. ಚಿಕ್ಕ ಬಾಲವೂ ಇರಬಹುದು. ಹಾಗಿದ್ದಲ್ಲಿ ಆ ಬಾಲ ಕೃತ್ತಿಕೆಯತ್ತ ಚಾಚಬಹುದು ಎಂಬುದೊಂದು ನಿರೀಕ್ಷೆ. ಲೆಕ್ಕ ಹಾಕಿದ್ದಕ್ಕಿಂತ ಹೆಚ್ಚು ಪ್ರಕಾಶ ಪಡೆದಂತೆ ಕಾಣುತ್ತಿರುವ ಇದು ಬರಿಗಣ್ಣಿಗೆ ಕಾಣಬಹುದು. ಸಂಜೆಯ ಆಕಾಶದಲ್ಲಿದ್ದು ಸುಮಾರು ಮಧ್ಯರಾತ್ರಿಯವರೆಗೂ ನೋಡಲು ಸಿಗುವುದರಿಂದ ಜನಪ್ರಿಯಗೊಳಿಸುವ ಕಾರ್ಯಕ್ರಮಗಳನ್ನೂ ಹಾಕಿಕೊಳ್ಳಬಹುದು. ೭-೯ರ ಅವಧಿಯಲ್ಲಿ ಕೃತ್ತಿಕಾದ ಪಕ್ಕವನ್ನು ಗಮನಿಸಿ. ಆಗ ಭೂಮಿಯಿಂದ ಅದರ ದೂರ ಕೇವಲ (!) ೫೩ ಮಿಲಿಯನ್ ಕಿ.ಮೀ.ಗಳು. ಮುಂದೆ ಅದು ಪರ್ಸಿಯುಸ್ ಪುಂಜದ ಮೂಲಕ ಹಾದುಹೋಗುವಷ್ಟರಲ್ಲಿ ಕ್ಷೀಣವಾಗಿಬಿಡುತ್ತದೆ.

ಉಳಿದ ಗ್ರಹಗಳೆಲ್ಲ ಬೆಳಗಿನ ಜಾವಕ್ಕೆ ಕಾಣಲಿವೆ. ಸಿರಿಯಸ್‌ಗಿಂತ ಗುರು ಪ್ರಕಾಶಮಾನವಾಗಿ ಕಾಣಬಹುದು. ಶುಕ್ರದ ದೂರ ಹೆಚ್ಚುತ್ತಿದೆ. ಆದರೂ ಅದಕ್ಕಿಂತ ಪ್ರಕಾಶವಾದ ಬೇರೆ ಕಾಯ ಆಗಸದಲ್ಲಿಲ್ಲ. ಮಂಗಳವಂತೂ ಗುರುತಿಸಲಾಗದಷ್ಟು ಕ್ಷೀಣ. ಅಂಟಾರೆಸ್ ಪಕ್ಕದಲ್ಲೇ ಅದರ ಸ್ಥಾನ. ಅಂಟಾರೆಸ್ ಅಂದರೆ ಆರೆಸ್‌ನ ಪ್ರತಿಸ್ಪರ್ಧಿ. ಆರೆಸ್ ಮಂಗಳದ ಮೂಲ ಹೆಸರು. ಈ ಬಾರಿ ಅಂಟಾರೆಸ್‌ಗೂ (ಜ್ಯೇಷ್ಠಾ) ಆರೆಸ್‌ಗೂ (ಮಂಗಳ) ಏನೇನೂ ಸಾಮ್ಯವಿಲ್ಲ ಎನ್ನಿಸಬಹುದು. ಆದರೆ ಬರುಬರುತ್ತಾ ಮಂಗಳದ ಪ್ರಕಾಶ ಹೆಚ್ಚುವುದನ್ನು ಗಮನಿಸಿ.

ಬುಧ-ಶುಕ್ರ ಇವುಗಳ ಅಪ್ಪಾಲೆ ತಿಪ್ಪಾಲೆ ಆಟ ಪೂರ್ವ ದಿಗಂತದ ಅಂಚಿನಲ್ಲಿ ಬಹಳ ಚೆನ್ನಾಗಿ ಕಾಣುತ್ತದೆ. ಮೊದಲಲ್ಲಿ ಬುಧ ಮೇಲೆ ಶುಕ್ರ ಕೆಳಗೆ; ತಿಂಗಳ ಮಧ್ಯದಲ್ಲಿ ಶುಕ್ರ ಮೇಲೆ ಬುಧ ಕೆಳಗೆ. ಛಾಯಾಗ್ರಾಹಕರಿಗೆ ಇದು ಸದವಕಾಶ. ತಿಂಗಳ ಕೊನೆಗೆ ಬುಧ ದಿಗಂತದಂಚಿನಿಂದ ಮಾಯವಾಗುತ್ತದೆ.

ನಮ್ಮ ಮಾರ್ಗದರ್ಶಿ ಚಂದ್ರ ತಿಂಗಳ ಮೊದಲವಾರ ಮಧ್ಯರಾತ್ರಿಯ ನಂತರ ಕಾಣಸಿಗುತ್ತದೆ. ೪ರಂದು ಗುರುಗ್ರಹಕ್ಕೆ ಅಂಟಿಕೊಂಡಂತೆ ಕಾಣುವ ಇದು ಛಾಯಾಗ್ರಾಹಕರಿಗೆ ಒಳ್ಳೆಯ ಅವಕಾಶ ಒದಗಿಸುತ್ತದೆ. ಆಚ್ಛಾದನೆಯ ನೋಟ ಆಫ್ರಿಕಾ, ಆಸ್ಟ್ರೇಲಿಯಾದವರಿಗೆ ಲಭ್ಯವಿದೆ. ಎಂಟರಂದು ಮಂಗಳ ಗ್ರಹವನ್ನು ಹಾದು ಮರುದಿನ ಬುಧ-ಶುಕ್ರಗಳ ಗುಂಪನ್ನು ಸೇರಲಿದೆ. ಈ ಮಧ್ಯೆ ಜ್ಯೇಷ್ಠಾ ನಕ್ಷತ್ರವನ್ನು ಆಚ್ಛಾದಿಸಲಿದೆ. ಈ ನೋಟ ಮಾತ್ರ ನಮಗಿಲ್ಲ.

ಅಮಾವಾಸ್ಯೆಯ ನಂತರ ಸಂಜೆಯ ಆಕಾಶದಲ್ಲಿ ಹಾಜರು. ನಕ್ಷತ್ರಗಳೇ ಇಲ್ಲವೇನೋ ಎನ್ನಿಸುವ ಪಶ್ಚಿಮ ಆಕಾಶದಲ್ಲಿ ಇದರದ್ದೇ ದರ್ಬಾರು. ೧೯ರಂದು ಕೃತ್ತಿಕಾ ನಕ್ಷತ್ರಗುಚ್ಛವನ್ನು ಸವರಿಕೊಂಡು ಹೋಗುವ ನೋಟ ಪುನಃ ಕ್ಯಾಮರಾಗೆ ಕೆಲಸ ಕೊಡಬಹುದು. ಹುಣ್ಣಿಮೆಯ ಚಂದ್ರ ಶನಿಯ ಜೊತೆಗೂಡುತ್ತದೆ. ೨೩-೨೪ರಲ್ಲಿ ಚಂದ್ರನ ಸುತ್ತ ಪ್ರಕಾಶಮಾನ ಚುಕ್ಕೆಗಳ ಚಿತ್ತಾರ. ೩೧ರಂದು ಪುನಃ ಗುರುಗ್ರಹವನ್ನು ಸವರಿಕೊಂಡು ಸಾಗುತ್ತದೆ.

ಅಮಾವಾಸ್ಯೆ ೧೦ರಂದು ೧೮:೩೩ಕ್ಕೆ. ಇದಕ್ಕೆ ಒಂದು ಗಂಟೆ ಮುಂಚೆ ಚಂದ್ರ-ಭೂಮಿ ದೂರ ಕನಿಷ್ಠ ಆದ್ದರಿಂದ ಭರತದ ಆರ್ಭಟ ಸಾಮಾನ್ಯಕ್ಕಿಂತ ಹೆಚ್ಚು ಎಂಬುದನ್ನು ಕರಾವಳಿಯವರು ಗಮನಿಸಬಹುದು.

ಕ್ವಾಡ್ರಾಂಟಿಡ್ಸ್ ಎಂಬುದೊಂದು ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ ಜನವರಿ ೩ರಂದು. ಗಂಟೆಗೆ ೨೦-೪೦ ಉಲ್ಕೆಗಳು ಬೀಳುವ ಸಾಧ್ಯತೆ ಇದೆ.

ಜನವರಿ ೨ರಂದು ಭೂಮಿ ಸೂರ್ಯರ ಅಂತರ ಕನಿಷ್ಠ ೧೪೭,೦೯೯,೧೧೧ ಕಿ.ಮೀ.

## ಖಗೋಳ ದಿನಚರಿ

೧ ಬುಧ-ಶುಕ್ರ ನಡುವಿನ ಅಂತರ ೧-೧ ಡಿಗ್ರಿ.
೨-೩ ಕ್ವಾಡ್ರಾಂಟಿಡ್ಸ್ ಉಲ್ಕಾವೃಷ್ಟಿ
೨ ಭೂಮಿ-ಸೂರ್ಯರ ದೂರ ಕನಿಷ್ಠ
೩ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೪ ಚಂದ್ರದ ಪಕ್ಕ ಗುರು
೮ ಚಂದ್ರನ ಪಕ್ಕ ಮಂಗಳ-ಜ್ಯೇಷ್ಠಾ
೧೦ ಅಮಾವಾಸ್ಯೆ ೧೮:೩೩ಕ್ಕೆ, ಭೂಮಿ-ಚಂದ್ರ ಕನಿಷ್ಠ ದೂರ ೧೭:೩೦ಕ್ಕೆ.
೧೩ ಶನಿಗ್ರಹದ ವಿಯುತಿ
೧೫ ಬುಧ-ಶುಕ್ರ ನಡುವಿನ ಅಂತರ ೦.೫ ಡಿಗ್ರಿ
೧೭ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೧೯ ಕೃತ್ತಿಕಾ ಪುಂಜದ ಪಕ್ಕ ಚಂದ್ರ
೨೩ ಚಂದ್ರ-ಭೂಮಿ ದೂರ ಗರಿಷ್ಠ
೨೫ ಹುಣ್ಣಿಮೆ ೧೬:೦೨ಕ್ಕೆ, ಚಂದ್ರನ ಪಕ್ಕ ಶನಿ
೩೧ ಚಂದ್ರನ ಪಕ್ಕ ಗುರು ಗ್ರಹ

**ಡಾ|| ಬಿ.ಎಸ್. ಶೈಲಜಾ**
ಜವಹರಲಾಲ್ ನೆಹರು ತಾರಾಲಯ, ಬೆಂಗಳೂರು - ೫೬೦ ೦೦೧

# ಕರ್ನಾಟಕ ರಾಜ್ಯದಲ್ಲಿ ಶಿಕ್ಷಣ ಮಾಧ್ಯಮ ಭಾಷೆ ಮುಂತಾಗಿ...

ಎಚ್. ಜಿ. ಸಣ್ಣಗುಡ್ಡಯ್ಯ

ಶಿಕ್ಷಣದ ಭೂಪಟದಲ್ಲಿ ಈಗ ಎದ್ದು ಕಾಣುವ ರಾಜ್ಯ ಕರ್ನಾಟಕ. ಅಥವಾ ಭಾರತದ ಭೂಪಟದಲ್ಲಿ ಶಿಕ್ಷಣದ ಕಾರಣವಾಗಿ ಕಣ್ಣು ಕೋರೈಸುವ ರಾಜ್ಯ ಕರ್ನಾಟಕ. ಹಿಂದೆ ಅಧ್ಯಯನಕ್ಕಾಗಿ ನಳಂದ, ತಕ್ಷಶಿಲೆಗಳನ್ನೊ ವಾರಾಣಸಿಯನ್ನೊ ಹುಡುಕಿಕೊಂಡು ವಿವಿಧ ರಾಜ್ಯಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದಂತೆ ಈಗ ಕರ್ನಾಟಕದ ಕಡೆಗೆ ಬರುತ್ತಿದ್ದಾರೆ ಎಂದು ನಾವು ಬೆನ್ನುತಟ್ಟಿಕೊಳ್ಳಬಹುದು. ಇಂಥ ಮಾತುಗಳು ನೇರ ಸತ್ಯವೊಂದನ್ನು ಹೇಳುವ ಬದಲು ಮೂದಲೆಯ ವ್ಯಂಗ್ಯೋಕ್ತಿಗಳಾಗಿ ಕಾಣುವುದೇ ಹೆಚ್ಚು. ಪರಿಸ್ಥಿತಿ ಎಷ್ಟು ಸಂಕೀರ್ಣವಾಗಿದೆ ಎಂದರೆ, ಈಗ ಶಿಕ್ಷಣವನ್ನು ಕುರಿತು ತಜ್ಞರು ಮಾತಾಡುವುದನ್ನೇ ನಿಲ್ಲಿಸಿದ್ದಾರೆ.

ಶಿಕ್ಷಣದ ಭೂಪಟದಲ್ಲಿ ಈಗ ಎದ್ದು ಕಾಣುವ ರಾಜ್ಯ ಕರ್ನಾಟಕ. ಅಥವಾ ಭಾರತದ ಭೂಪಟದಲ್ಲಿ ಶಿಕ್ಷಣದ ಕಾರಣವಾಗಿ ಕಣ್ಣು ಕೋರೈಸುವ ರಾಜ್ಯ ಕರ್ನಾಟಕ. ಹಿಂದೆ ಅಧ್ಯಯನಕ್ಕಾಗಿ ನಳಂದ, ತಕ್ಷಶಿಲೆಗಳನ್ನೊ ವಾರಾಣಸಿಯನ್ನೊ ಹುಡುಕಿಕೊಂಡು ವಿವಿಧ ರಾಜ್ಯಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದಂತೆ ಈಗ ಕರ್ನಾಟಕದ ಕಡೆಗೆ ಬರುತ್ತಿದ್ದಾರೆ ಎಂದು ನಾವು ಬೆನ್ನುತಟ್ಟಿಕೊಳ್ಳಬಹುದು. ಇಂಥ ಮಾತುಗಳು ನೇರ ಸತ್ಯವೊಂದನ್ನು ಹೇಳುವ ಬದಲು ಮೂದಲೆಯ ವ್ಯಂಗ್ಯೋಕ್ತಿಗಳಾಗಿ ಕಾಣುವುದೇ ಹೆಚ್ಚು. ಪರಿಸ್ಥಿತಿ ಎಷ್ಟು ಸಂಕೀರ್ಣವಾಗಿದೆ ಎಂದರೆ, ಈಗ ಶಿಕ್ಷಣವನ್ನು ಕುರಿತು ತಜ್ಞರು ಮಾತಾಡುವುದನ್ನೇ ನಿಲ್ಲಿಸಿದ್ದಾರೆ. ತಜ್ಞರೆಂದರೆ ಯಾರು? ಒಂದು ಪಕ್ಷ ಶಿಕ್ಷಣದಲ್ಲಿ ಅನುಭವ, ಪರಿಣತಿಗಳನ್ನೂ ಹೆಸರನ್ನೂ ಸಂಪಾದಿಸಿದವರಿದ್ದರೆ ಅವರು ಯಾವುದಾದರೂ ದೊಡ್ಡ ಖಾಸಗಿ ಮ್ಯಾನೇಜ್‌ಮೆಂಟ್ ಸ್ಥಾಪಿಸುವ ವೈದ್ಯಕೀಯ ಅಥವಾ ತಾಂತ್ರಿಕ ಮಹಾವಿದ್ಯಾಲಯವೊಂದರ ಪ್ರಾಚಾರ್ಯನ ಸ್ಥಾನಕ್ಕೆ ತನಗೆ ಕರೆ ಬರಬಹುದೆ ಎಂದೋ, ಒಂದೊಂದಾಗಿ ಅಸ್ತಿತ್ವಕ್ಕೆ ಬರುತ್ತಿರುವ ಹೊಸ ವಿ.ವಿ. ನಿಲಯ ಒಂದರ ಉಪಕುಲಪತಿ ಸ್ಥಾನಕ್ಕೆ ತನ್ನನ್ನು ಕರೆದಾರೆ ಎಂದೋ ರಾಜಕಾರಣಿಗಳತ್ತ ಆಸೆಗಣ್ಣು ನೆಟ್ಟು ಬಕಧ್ಯಾನದಲ್ಲಿ ಲೀನವಾದವರಿರಬೇಕು. ವಾಸ್ತವವಾಗಿ ಈಗ ತಜ್ಞರ ದನಿಯಿಂದ ಮಾತಾಡುತ್ತಿರುವವರು ಖಾಸಗಿ ಶಿ.ಸಂ.ಗಳ ಅಧಿಪತಿಗಳೆನಿಸಿಕೊಂಡಿರುವ ಶಾಮನೂರು ಶಿವಶಂಕರಪ್ಪ, ಆರ್.ಎಲ್. ಜಾಲಪ್ಪ ಮುಂತಾದವರು. ನಿರ್ಣಾಯಕ ಮುಹೂರ್ತದಲ್ಲಿ ಒಬ್ಬಿಬ್ಬರು ಜಗದ್ಗುರುಗಳು ದನಿ ತೆಗೆದು ತಮ್ಮ ಅಪ್ಪಣೆ ಕೊಡಬಹುದು. ಅಥವಾ ದನಿತೆಗೆಯದೆಯೇ ರಿಮೋಟ್‌ಗಳನ್ನು ವಿರಳವಾಗಿ ಬಳಸಿ ನಮ್ಮ ಸಿ.ಎಂ. ಅಥವಾ ಇ.ಎಂ.ಗಳ ಮೂಗುದಾರವನ್ನು ಜಗ್ಗಬಹುದು. ಮೂಗುದಾರ ಧರಿಸದ ನಿರಂಕುಶ ರಾಜಕಾರಣಿಗಳೇ ಈಗ ಕಾಣುತ್ತಿಲ್ಲ. ಸಾಮಾನ್ಯರ ಕಣ್ಣಿಗೆ ಅತ್ಯಂತ ಧೀಮಂತನಂತೆ ಕಾಣುವ ರಾಜಕೀಯ ಮುಖಂಡನೂ ಧನಪತಿಗಳಾಗಿ ಪ್ರತಿಷ್ಠಿತರಾದ ದಣಿಗಳಿಗೂ ಕಾಷಾಯ ವಸ್ತ್ರಧಾರಿಗಳಿಗೂ ಅಲಿಖಿತ ವಿಧೇಯತೆಯಿಂದ ನಡೆದುಕೊಳ್ಳುವುದೇ ಹೆಚ್ಚು. ಈಗ ಬಗೆಹರಿದಂತೆ ಕಾಣುವ, ಹಲವು ತಿಂಗಳುಗಳ ಕಾಲ ನಡೆದ ಸಿ.ಇ.ಟಿ. ಪರೀಕ್ಷೆಗಳ ಕದನ ಮತ್ತು ಮೆರಿಟ್ ಕೋಟ - ಪೇಮೆಂಟ್ ಕೋಟ (ಗೆಲ್ಲುವ ಸ್ಥಾನ - ಕೊಳ್ಳುವ ಸ್ಥಾನಗಳೆಂದು ಇವನ್ನು ಕರೆದರೆ ಒಪ್ಪುತ್ತದೆ)ಗಳ ಅನುಪಾತದ ಹಗ್ಗ ಜಗ್ಗಾಟ ವಿದ್ಯಾರ್ಥಿಗಳನ್ನೂ ಅವರ ಪೋಷಕರುಗಳನ್ನೂ ಹತಾಶರನ್ನಾಗಿ ಮಾಡಿಬಿಟ್ಟಿತು. ಆ ಕದನದಲ್ಲಿ ಮ್ಯಾನೇಜ್‌ಮೆಂಟ್ ಧಣಿಗಳಾಗಲಿ, ಸರಕಾರವಾಗಲಿ ಸೋಲಲಿಲ್ಲ. ಸೋತು ಶರಣಾದವರು ವಿದ್ಯಾರ್ಥಿಗಳೇ ಎನ್ನಬಹುದು. ತಾತ್ಪರ್ಯವೆಂದರೆ ಶಿಕ್ಷಣ ಪ್ರಸಾರ, ನಿಯಂತ್ರಣ ಮತ್ತು ನಿರ್ವಹಣೆಗಳ ಜವಾಬ್ದಾರಿಯನ್ನು ನಿರ್ವಹಿಸಬೇಕಾದ ಸಾಂವಿಧಾನಿಕ ಹೊಣೆ ಹೊತ್ತ ಸರ್ಕಾರದ ಧುರೀಣರು ಖಾಸಗಿ ಸಂಸ್ಥೆಗಳ ಕುಬೇರರ ಹಸ್ತಕರಾಗಿ ಪರಿವರ್ತಿತರಾಗಿರುವುದು.

ಪರಿಹಾರವೇನು? ನಿರ್ವಸಿತರು, ಅರಣ್ಯವಾಸಿಗಳು, ಬುಡಕಟ್ಟು ಜನರು, ಭೂರಹಿತರು ಮೊದಲಾದ ಅಸಂಘಟಿತ ದುರ್ಬಲ ವರ್ಗಗಳ ಸಮಸ್ಯೆಗಳನ್ನು ಸರ್ಕಾರಗಳು ಪರಿಹರಿಸದೆ ಹೋಗಿ ಪೀಪಲ್ಸ್ ವಾರ್‌ಗ್ರೂಪ್, ಮಾವೊವಾದಿಗಳು, ನಕ್ಸಲೈಟರು ಮುಂತಾದ ವಾಮಪಂಥೀಯ ಶಕ್ತಿಗಳು ಜನಾದರಣೆಗೆ ಪಾತ್ರರಾಗುತ್ತಿರುವಂತೆ ಯುವಜನರ ಶೈಕ್ಷಣಿಕ ಸಮಸ್ಯೆಗಳ 'ಗಾರ್ಡಿಯನ್ ಗಂಟ'ನ್ನು ಬಿಚ್ಚಲು ಹೊಸ ಜನಸೇನೆಗಳೇನಾದರೂ ಹುಟ್ಟಿಕೊಳ್ಳಬಹುದೇ?

**ಸ್ಥಳೀಯ ಪತ್ರಿಕೆ ಒಂದರ ಇತ್ತೀಚಿನ (೭.೧೧.೨೦೦೪)** ವರದಿ: ನರ್ಸಿಂಗ್ ಶಾಲೆಯ (ಬಸವೇಶ್ವರ ಸ್ಕೂಲ್ ಆಫ್ ನರ್ಸಿಂಗ್, ತಿಪಟೂರು) ವಿದ್ಯಾರ್ಥಿಗಳ ತಂಡವೊಂದು ಉಪವಿಭಾಗಾಧಿಕಾರಿಗೆ ಪತ್ರ ಬರೆದು ಹೀಗೆ ದೂರಿದ್ದಾರೆ – 'ನಾವು ಮೂರು ವರ್ಷಗಳ ನರ್ಸಿಂಗ್ ಡಿಪ್ಲೊಮಾದ ವಿದ್ಯಾರ್ಥಿಗಳು. ಸಾವಿರಾರು ರೂ. ಹಣ ತೆತ್ತು ಕಾಲೇಜಿಗೆ ಸೇರಿದ್ದರೂ ಕನಿಷ್ಠ ಸೌಲಭ್ಯಗಳನ್ನೂ ನಮಗೆ ನೀಡಿಲ್ಲ. ಪ್ರಾಂಶುಪಾಲರು ಸರ್ವಾಧಿಕಾರಿಯಂತೆ ವರ್ತಿಸುತ್ತಾರೆ. ನ್ಯಾಯ ಕೇಳಿದರೆ ಅವಾಚ್ಯ ಶಬ್ದಗಳಲ್ಲಿ ನಿಂದಿಸುತ್ತಾರೆ. ನಮ್ಮ ತಂದೆತಾಯಂದಿರಿಗೆ ನಮ್ಮ ಬಗ್ಗೆ ಇಲ್ಲಸಲ್ಲದ ಆರೋಪಗಳನ್ನು ಮಾಡಿ ಕೆಟ್ಟ ಅಭಿಪ್ರಾಯ ತರುವ ತಂತ್ರ ಮಾಡುತ್ತಾರೆ... ಸರಿಯಾದ ಪ್ರಯೋಗಾಲಯ ವಿಲ್ಲ. ಕಾಲೇಜು ಪ್ರಾರಂಭವಾಗಿ ಏಳು ವರ್ಷ ಕಳೆದರೂ ಆಸ್ಪತ್ರೆಯ ಸೌಲಭ್ಯವಿಲ್ಲ. ಪ್ರಾಂಶುಪಾಲರಿಗೆ ಭವ್ಯವಾದ ಮನೆ ನಿರ್ಮಾಣವಾಗಿದೆ. ಕನ್ವೇಯನ್ಸ್ ಫೀ ಪಡೆದುಕೊಂಡೂ ಸಮರ್ಪಕ ಬಸ್ಸಿನ ವ್ಯವಸ್ಥೆಯಿಲ್ಲ... ಅನುಭವವಿಲ್ಲದ ಶಿಕ್ಷಕರನ್ನು ನೇಮಕ ಮಾಡುತ್ತಾರೆ. ಪ್ರಿನ್ಸಿಪಾಲರಿಗೆ ನರ್ಸಿಂಗ್ ಎಂ.ಎಸ್‌ಸಿ. ಪದವಿಯಿಲ್ಲ. ಸರಿಯಾದ ಹಾಸ್ಟೆಲ್ ವ್ಯವಸ್ಥೆ ಇಲ್ಲ. ಪ್ರತಿ ರೂಮಿಗೆ ಐದರಿಂದ ಏಳು ಮಂದಿ ವಿದ್ಯಾರ್ಥಿನಿಯರನ್ನು ತುರುಕಿದ್ದಾರೆ. ಕೇರಳದ ಹೆಣ್ಣು ಮಕ್ಕಳಿಗಂತೂ ಇಲ್ಲಿ ತುಂಬ ಕಷ್ಟ.. ಸರಿಯಾದ ಶೌಚಾಲಯಗಳಿಲ್ಲ. ಕಟ್ಟಿದ ಹಣಕ್ಕೆ ಸರಿಯಾದ ರಸೀದಿ ದೊರೆಯುತ್ತಿಲ್ಲ. ವಸೂಲಿಯಾದ ಹಣ ಸಂಸ್ಥೆಯ ಅಭಿವೃದ್ಧಿಗೆ ಬಳಕೆಯಾಗುತ್ತಿಲ್ಲ. ಪ್ರಾಂಶುಪಾಲರ ಬೈಗುಳಕ್ಕೆ ಮನನೊಂದು ಒಂದಿಬ್ಬರು ವಿದ್ಯಾರ್ಥಿನಿಯರು ಆತ್ಮಹತ್ಯೆಗೂ ಯತ್ನಿಸಿರುವ ಉದಾಹರಣೆಗಳಿವೆ.' ದೂರುಗಳು ಇವು. ವರದಿ ಸರ್ಕಾರದ ಮಧ್ಯಪ್ರವೇಶಕ್ಕೆ ಅರ್ಹವಾಗಿಲ್ಲವೆ? ಮೇಲಿನ ದೂರುಗಳಲ್ಲಿ ಶೇ. ೫೦ ನಿಜವಾಗಿದ್ದರೂ ಸಂಸ್ಥೆಯ ಮಾನ್ಯತೆ ಕೂಡಲೇ ರದ್ದಾಗಬೇಕಲ್ಲವೆ? ಆದರೆ ಈ ದಕ್ಷತೆಯನ್ನು ಯಾರೂ ಸರ್ಕಾರದಿಂದ ನಿರೀಕ್ಷಿಸುವಂತಿಲ್ಲ. ಸರ್ಕಾರ ತನ್ನ ಇಲಾಖಾಧಿಕಾರಿಗಳ ತನಿಖೆಯ ಮೂಲಕ ಸ್ಪಂದಿಸುವಂತಿದ್ದರೆ ಇತ್ತೀಚೆಗೆ ತಮಿಳುನಾಡಿನ ಕುಂಭಕೋಣಂನಲ್ಲಿ ನಡೆದಂಥ ಆಧುನಿಕ 'ಖಾಂಡವ ದಹನ'ಗಳು ನಡೆಯುತ್ತಿದ್ದುವೇ?

ನೂರೂ ಚಿಲ್ಲರೆ ತಾಂತ್ರಿಕ ಮಹಾವಿದ್ಯಾಲಯಗಳು, ಸರಿಸುಮಾರು ಅದರ ಅರ್ಧದಷ್ಟು ವೈದ್ಯಕೀಯ ವಿದ್ಯಾಲಯಗಳು ಮಾತ್ರವಲ್ಲದೆ ಮೇಲೆ ಹೇಳಿದಂಥ ತರಹೇವಾರಿ ಶಿಕ್ಷಣ ಸಂಸ್ಥೆಗಳು, ತರಬೇತಿ ಸಂಸ್ಥೆಗಳು ರಾಜ್ಯದಲ್ಲಿ ಎಷ್ಟಿವೆ ಎಂಬುದು ಊಹೆಗೆ ದಕ್ಕುವ ಗಣಿತವಲ್ಲ. ಕೇವಲ ಟಿ.ಸಿ.ಎಚ್. (ಇಂದಿನ ಡಿ.ಇಡಿ.) ಒಂದನ್ನು ನೋಡೋಣ. ಈ ತರಬೇತಿಗೆ ಪ್ರವೇಶ ಸಿಗಲು ಅತ್ಯಂತ ಅಧಿಕ ಅಂಕಗಳನ್ನು ಗಳಿಸಿರಬೇಕು ಅಥವಾ ಬೇರೆ ಎಲ್ಲ ತರಬೇತಿಗಳಿಗಿಂತ ಹೆಚ್ಚಿನ ಮೊತ್ತದ ಪ್ರವೇಶ

ಶುಲ್ಕ ತೆರಬೇಕು. ಹಿಂದೆ ಲೋಯರ್ ಸೆಕೆಂಡರಿ ಅಥವಾ ಎಸ್.ಎಸ್.ಎಲ್.ಸಿ. (ಇ.ಪಿ.ಎಸ್. ಉತ್ತೀರ್ಣರೂ ಸೇರಿ) ಆದವರನ್ನು ಪ್ರಾಥಮಿಕ ಶಿಕ್ಷಣದ ಸೇವೆಗೆ ಆಯ್ಕೆ ಮಾಡಿ ಮೂಲ ಅರ್ಹತೆಯ ಜೊತೆಗೆ ತರಬೇತಿಯನ್ನೂ ಅಗತ್ಯವೆಂದು ಮಾಡಿದ್ದರು. ಆಯ್ಕೆಯಾದ ಶಿಕ್ಷಕರನ್ನು ತರಬೇತಿಗಾಗಿ ಇಲಾಖೆಯೇ ನಿಯೋಜನೆ ಮಾಡಿ ಕಳಿಸುತ್ತಿದ್ದಿತು. ಆದರೆ ಈಗ ತರಬೇತಿಯೇ ಮೂಲ ಅರ್ಹತೆ ಎಂಬಂತಾಗಿದೆ. ಅಲ್ಲದೆ ಆ ಹುದ್ದೆಗಳು ಉನ್ನತ ಶಿಕ್ಷಣದ ಅವಕಾಶದಿಂದ ವಂಚಿತರಾದ ದುರ್ಬಲ ವರ್ಗಗಳ ವಿದ್ಯಾವಂತರಿಗೆ ಮೀಸಲಾದಂತೆ ಇದ್ದುವು. ಈ ತರಬೇತಿ ಶಾಲೆಗಳು ಇಷ್ಟೊಂದು ದುಬಾರಿಯಾದದ್ದು ಹೇಗೆ? ಕಾರಣ, ಸರ್ಕಾರಗಳ ಹೊಣೆಗೇಡಿತನವಲ್ಲವೆ? ಈ ಕ್ಷೇತ್ರಕ್ಕೆ ಖಾಸಗಿ ಶಿಕ್ಷಣೋದ್ಯೋಗಪತಿಗಳನ್ನು ಪ್ರವೇಶ ಮಾಡಲು ಬಿಟ್ಟದ್ದೇಕೆ? ಕಾಡಿನಲ್ಲಿರ ಬೇಕಾದ ಆನೆಗಳನ್ನು ಕೃಷಿಕ್ಷೇತ್ರಗಳಿಗೆ ತಂದು ಬಿಟ್ಟಂತಾಗಲಿಲ್ಲವೆ ಇದು?

ಉನ್ನತ ಶಿಕ್ಷಣದ ಪ್ರವೇಶ ಪ್ರಕ್ರಿಯೆಯಲ್ಲಿ, ವೈದ್ಯಕೀಯ ಸ್ನಾತಕೋತ್ತರ ಪದವಿ ಪ್ರವೇಶದಲ್ಲಿ ಅಪಾರ ಮೊತ್ತದ ಹಣ ಕೈಬದಲಾಯಿಸುವುದು, ಮಧ್ಯವರ್ತಿಗಳು ನಡೆಸುವ ವಂಚನೆಯ ಪ್ರಕರಣಗಳು, ಹಣದ ಥೈಲಿಗಳೊಡನೆ ಪ್ರವೇಶಾರ್ಥಿ ಮಕ್ಕಳನ್ನು ಕರೆದು ಕೊಂಡು ಬಂದು ಪಡಿಪಾಟಲು ಬೀಳುವ ಪರರಾಜ್ಯದ ಪೋಷಕರ ಒತ್ತೆ, ಅಪಹರಣ ಮುಂತಾದ ಪ್ರಕರಣಗಳು ಈಗ ಯಾರನ್ನೂ ಬೆಚ್ಚಿಸುವುದಿಲ್ಲ. ವೈದ್ಯ ಕಾಲೇಜಿನ ಪ್ರವೇಶ ವ್ಯವಹಾರಕ್ಕಾಗಿ ಬಂದ ವಕೀಲನೊಬ್ಬ ಬೆಂಗಳೂರಿನ ಹೋಟೆಲೊಂದರಲ್ಲಿ ಕೊಲೆ ಯಾದದ್ದು, ಬೀದರ್ ನಗರದ ಅಲ್ಪಸಂಖ್ಯಾತರ ವಿದ್ಯಾ ಸಂಸ್ಥೆ ನಡೆಸುವ ಇಂಜನಿಯರಿಂಗ್ ಕಾಲೇಜಿನ ವಿದ್ಯಾರ್ಥಿ ಸಮೂಹಗಳು ನಗರದಲ್ಲಿ ನಡೆಸಿದ ಸಿವಿಲ್ ವಾರ್ ಮುಂತಾದುವೆಲ್ಲ ರಾಜ್ಯದ ಶಿಕ್ಷಣ ನೀತಿಯನ್ನು ಸುಧಾರಿಸದೆ ಹೋದುವು. ತಾಂತ್ರಿಕ ಶಿಕ್ಷಣಕ್ಕೆ ಬೇಕಾದ ಅಂಕಗಳು ಬರಲಿಲ್ಲವೆಂದೊ, ಸಿ.ಇ.ಟಿ. ಪರೀಕ್ಷೆಯಲ್ಲಿ ರ್‍ಯಾಂಕ್ ಸಿಗಲಿಲ್ಲವೆಂದೊ ಮುಗ್ಧ ಬಾಲಕಿಯರು ಆತ್ಮಹತ್ಯೆ ಮಾಡಿಕೊಂಡ ವಿವರಗಳು ಕಥೆಗಳಾಗಿ ಮರೆತುಹೋಗಿವೆ. ಅರ್ಹತೆ ಪಡೆದು ಮಧ್ಯಮ ವರ್ಗದ ಗೃಹಸ್ಥರ ಮಕ್ಕಳು ಯಾವಯಾವಾಗಲೊ ಏರ್ಪಡುವ ಕೌನ್ಸೆಲಿಂಗ್ ತೆಗೆದುಕೊಂಡು ತೋರಿಸಿದ ಕಡೆ – ಮುಂದೇನಾದೀತೊ ಎಂಬ ಅನಿಶ್ಚಿತದ ಆತುರದಲ್ಲಿ – ಶುಲ್ಕ ತೆತ್ತು ಪ್ರವೇಶ ಪಡೆದು ಆಮೇಲೆ ಎಂದೋ ನಡೆದ ಇನ್ನೊಂದು ಫ್ಯಾಕಲ್ಟಿಯ ಕೌನ್ಸೆಲಿಂಗ್‌ಗೆ ಹಾಜರಾಗಿ ಅಲ್ಲೂ ಸೀಟು ಸಿಕ್ಕಿತೆಂದು ಅಲ್ಲಿಗೆ ಓಡಿ, ಮತ್ತೊಮ್ಮೆ ಶುಲ್ಕ ತೆತ್ತು ಮುಂಚೆ ಕಟ್ಟಿದ ಹಣ ಪೂರ್ತಿ ಮರುಪಾವತಿ ಆಗದೆ ಬಿ.ಇ., ಬಿ.ಎಸ್‌ಸಿ. ಎಜಿ., ಬಿ.ವಿ.ಎಸ್‌ಸಿ., ಎಂ.ಬಿ.ಬಿ.ಎಸ್. – ಹೀಗೆ ಇಲಾಖೆಯಿಂದ ಇಲಾಖೆಗೆ ಪ್ರವೇಶ ಗಿಟ್ಟಿಸಲು ಓಡಾಟದ ವೆಚ್ಚದ ಜತೆಗೆ ಮರುಪಾವತಿಯಾಗದ ಹತ್ತಾರು ಸಾವಿರ ರೂ. ಕಳೆದುಕೊಂಡ ಗೃಹಸ್ಥರ ಅಹವಾಲುಗಳು ಈಗ ಸಾಮಾನ್ಯವಾಗಿವೆ. ಈ ವರದಿಗಳನ್ನು ಕೇಳಕೇಳುತ್ತ ತಮ್ಮ ಮಕ್ಕಳನ್ನು ಡಾಕ್ಟರ್ ಅಥವಾ ಇಂಜಿನಿಯರ್‌ಗಳನ್ನಾಗಿ ಮಾಡಬೇಕೆಂಬ ಕೆಳವರ್ಗದ ಕುಟುಂಬಗಳ ಮಹದಾಸೆ, ರಾತ್ರಿ ಕಂಡ ಕನಸು ಬೆಳಕು ಹರಿಯುವಲ್ಲಿ ತನಗೆ ತಾನೇ ಕರಗಿ ಕಾಣದಾಗುವಂತೆ, ಮಾಯವಾಗುತ್ತಿದೆ. ತಾಂತ್ರಿಕ ಶಿಕ್ಷಣ ನಮಗಲ್ಲ, ಕುಟುಂಬದ ಆರ್ಥಿಕ ದುಃಸ್ಥಿತಿ ಈ ಜನ್ಮಕ್ಕೆ ಬದಲಾಗದು ಎಂಬ ವಿಧಿವಾದ ಅವರಿಗೆ ಗಟ್ಟಿ. ವಿಶ್ವವಿದ್ಯಾಲಯಗಳು ಈಗ ಉನ್ನತ ಶಿಕ್ಷಣದ ಹಲವು ಶಾಖೆಗಳಿಗೆ ಪ್ರವೇಶ ಮತ್ತು ವಾರ್ಷಿಕ ಶುಲ್ಕಗಳ ಮೊತ್ತವನ್ನು ಪರಿಷ್ಕರಿಸಿ ಹತ್ತು-ಹದಿನೈದು ಸಾವಿರಗಳು ಏನೂ ಅಲ್ಲ ಎಂಬಂಥ ಪರಿಸ್ಥಿತಿಯನ್ನು ಸೃಷ್ಟಿಸುತ್ತಿವೆ. ಹಿಂದೆ ಸ್ನಾತಕೋತ್ತರ ಶಿಕ್ಷಣಕ್ಕೆ ಬೇಕಾದ ಅರ್ಹತೆ ಇದ್ದು, ಪ್ರವೇಶವೊಂದು ಸಿಕ್ಕಿದರೆ ವಾರ್ಷಿಕ ಶುಲ್ಕ ಮುಂತಾದ್ದು ನಗಣ್ಯ, ಕಾಡಿ ಬೇಡಿ ಪೂರೈಸಬಹುದು ಎಂಬ ಸ್ಥಿತಿ ಇತ್ತು. ಈಗ ಅದು ಬದಲಾಗಿದೆ. ವಿ.ವಿ. ನಿಲಯಗಳು ಈ ನೀತಿಪಾಠವನ್ನು ಖಾಸಗಿ ಸಂಸ್ಥೆಗಳಿಂದಲೇ ಕಲಿತಂತೆ ಕಾಣುತ್ತದೆ!

ಮೇಲ್ಜಾತಿಯ ಕುಟುಂಬಗಳ ಜಾಣ ಹುಡುಗರು ಸೀಟು ಗಿಟ್ಟಿಸಿ ಪದವಿ ಪಡೆದರೂ ಓದಿಗೆ ತಕ್ಕ ಉದ್ಯೋಗ ಈ ದೇಶದಲ್ಲಿ ಸಿಕ್ಕದೆಂದು ದೇಶಭ್ರಷ್ಟರಾಗಿ ಅಮೆರಿಕೆ, ಯೂರೋಪ್ ಅಥವಾ ಯಾವುದೋ ಅರಬ್ ಸೀಮೆಯನ್ನು ಸೇರಿ ಪರಕೀಯ ರಾಗುವುದು ಒಂದು ಕಡೆ ಸಾಮಾನ್ಯ. ಇನ್ನೊಂದು ಕಡೆ – ಒಂದೊಂದಾಗಿ ಖಾಸಗಿಯಾಗಿ ರೂಪಾಂತರಗೊಳ್ಳುತ್ತಿರುವ ಉದ್ಯಮಸಂಸ್ಥೆಗಳಲ್ಲಿ ಮೀಸಲಾತಿ ಸೌಲಭ್ಯ ಇಲ್ಲದ್ದರಿಂದ ಹೊಸದೊಂದು ಬಗೆಯ ಅನಾಥ ಸ್ಥಿತಿಗೆ ಮರಳುತ್ತಿರುವ ಹಿಂದುಳಿದವರು ಅಥವಾ ದಲಿತರ ಅಳಲು. ಈ ಪ್ರಕ್ಷೋಭೆಯ ಮಥಿತ ಪರಿಣಾಮವೇನು? ಹೊಸ ಬಗೆಯ militancy ಸಮಾಜದಲ್ಲಿ ಹುಟ್ಟಿಕೊಂಡರೆ ಆಶ್ಚರ್ಯವೇನು? ಹುಟ್ಟಿದರೆ ತಪ್ಪೇನು? ಈ ಹತಾಶ ಸ್ಥಿತಿ ಒಂದು ಶುಭಕಾಮನೆಯೂ ಆಗುವುದಾದರೆ ಸ್ವಾಗತಾರ್ಹವೇ.

ನಮ್ಮ ಯುವಜನಾಂಗವನ್ನು ಕ್ರಾಂತಿಕಾರಿ ಚಳುವಳಿಗಳು ಆಕರ್ಷಿಸದೆ ಕ್ರಿಕೆಟ್ ಪಟುಗಳೊ ಸಿನಿಮಾ ತಾರೆಯರೊ, ರೂಪದರ್ಶಿಗಳೊ ಆಗಿ ಹಣ ಸಂಪಾದಿಸುವ ಅವಕಾಶಗಳು ಹೆಚ್ಚು ಆಕರ್ಷಿಸುತ್ತಿರುವುದು ಒಂದು ವಿಪರ್ಯಾಸ. ದುರ್ಬಲ ವರ್ಗಗಳ ಉದ್ಧಾರಕ್ಕಾಗಿ ಅಹರ್ನಿಶಿ ದುಡಿದು ಅಪಾರವಾದ ಕ್ರಾಂತಿಕಾರಿ ಸಾಹಿತ್ಯವನ್ನು ಬಿಟ್ಟು ಹೋದ ಕಾರ್ಲ್ ಮಾರ್ಕ್ಸ್ ಆಗಲಿ, ಭಾರತದ ಅಂಬೇಡ್ಕರ್ ಆಗಲಿ ನಮ್ಮ ಯುವಕರಿಗೆ ಸ್ಫೂರ್ತಿ ಕೊಡುವ ಹಾಗಿದ್ದಿದ್ದರೆ ಈ ದೇಶದ ಚರಿತ್ರೆಯ ಗತಿ ಬೇರೆ ಆಗಬೇಕಾಗಿತ್ತು. ಸುಭಾಸ್ ಚಂದ್ರ ಬೋಸ್, ಭಗತ್ ಸಿಂಗ್, ರಾಜಗುರು, ಸಾವರ್ಕರ್‌ಗಳಂಥ ದೇಶ ಪ್ರೇಮಿಗಳಾದರೂ ಭಾರತದ ಜನರ ಮನೆಮಾತಾಗಬೇಕಾಗಿತ್ತು. ಆದರೆ ಅಂಥವರ ಬಗೆಗೆ ಕೂಡ ಏನೊಂದೂ ತಿಳಿಯದಂಥ ಅನಕ್ಷರರ ಸಂಖ್ಯೆ ದೇಶದ ಜನರ ಅರ್ಧದಷ್ಟು ಇರಬಹುದು. ಅವರನ್ನೆಲ್ಲ ಸಾಕ್ಷರರನ್ನಾಗಿ ಮಾಡುವ ಮೊದಲೇ ವಿದ್ಯಾಭ್ಯಾಸ ಹಣ ಗಳಿಕೆಯ ಉದ್ಯಮವಾಗಿಬಿಟ್ಟಿದೆ. ಅದು ಕರ್ನಾಟಕದಲ್ಲಿ ಮಿಕ್ಕೆಲ್ಲ ಕಡೆಗಿಂತ ಪ್ರೋಜ್ವಲವಾಗಿ ಬೆಳೆಯುತ್ತಿದೆ. ಇದನ್ನು ಪರಿಭಾವಿಸಿದಾಗ ಇಲ್ಲಿ ಚರಿತ್ರೆಯ ನಿರ್ಮಾಪಕರುಗಳ ಸಂತತಿಗಿಂತ ಚರಿತ್ರಹೀನರ ಸಂತತಿ ಸಮೃದ್ಧವಾಗಿ ಬೆಳೆಯುತ್ತಿದೆಯೋ ಎನಿಸದೆ ಇರದು.

ಅನಕ್ಷರತೆಯನ್ನು ನಿರ್ಮೂಲನ ಮಾಡಿ ಎಲ್ಲ ವರ್ಗದ ಜನರ ಮಕ್ಕಳಿಗೂ ಅವರವರು ಇಷ್ಟಪಡುವಂಥ ವಿದ್ಯಾಭ್ಯಾಸಕ್ಕೆ ಸಮಾನ ಅವಕಾಶಗಳನ್ನು ಕಲ್ಪಿಸಬೇಕಾಗಿದ್ದ ಸರ್ಕಾರ ಹೊಣೆಗೇಡಿಯಾಗಿರುವುದು ಸರ್ವವಿದಿತ. ಸೋತದ್ದಕ್ಕೆ ಸಬೂಬು ಎಂಬಂತೆ, ಮುಖಸ್ತುತಿ ಮಾಡಿ ಅಭಿನಂದನೆ ಸಲ್ಲಿಸಲು ಖಾಸಗಿ ವಿದ್ಯಾಸಂಸ್ಥೆಗಳವರು ಕರೆಯುವ ಸಮಾರಂಭ ಗಳಿಗೆ ದಯಮಾಡಿಸುವ ಪ್ರತಿಯೊಬ್ಬ ಸಚಿವನೂ ಎಲ್ಲರಿಗೂ ಶಿಕ್ಷಣ ಒದಗಿಸುವ ಶಕ್ತಿ ಸರ್ಕಾರಕ್ಕಿಲ್ಲ, ಆದ್ದರಿಂದಲೇ ಸಾರ್ವಜನಿಕ ಶಿಕ್ಷಣ ಪ್ರಸಾರದಲ್ಲಿ ಖಾಸಗಿ ಸಂಸ್ಥೆಗಳ ಪಾತ್ರ ಮುಖ್ಯವಾದದ್ದೆಂದು ಧಾರ್ಮಿಕ ನಿಷ್ಠೆಯಿಂದ ತೀಡಿ ತೀಡಿ ಹೇಳುತ್ತಾನೆ. ಪರಸ್ಪರ ಸ್ತುತಿಯ ಈ ಸನ್ನಡತೆ ದೇಶದಲ್ಲಿ ಬೆಳೆದುಬಂದ ಒಂದು ರಾಷ್ಟ್ರೀಯ ಚಾರಿತ್ರ್ಯವಾಗಿದೆ. ನಮ್ಮ ಸಮಾಜದ ಬುನಾದಿಯಾದ ಕೊಡು-ಬೇಡು ಸಂಸ್ಕೃತಿ ಇದಕ್ಕೆ ಕಾರಣವಿರಬಹುದೇ?

ಈ ಸಂಸ್ಥೆಗಳು ಶಿಕ್ಷಣಾರ್ಥಿಗಳು ಕೊಡುವ ಕ್ಯಾಪಿಟೇಷನ್ ಶುಲ್ಕದ ಬಲದಿಂದಲೇ – ಅದಕ್ಕಾಗಿಯೇ – ನಡೆಯುತ್ತವೆ. ಇನ್ನಿತರ ನೂರಾರು ಬಗೆಯ ಸಂಸ್ಥೆಗಳು (ತಾಂತ್ರಿಕ ಶಿಕ್ಷಣದ ಕಾಲೇಜುಗಳು ಕೂಡ ಈ ಗುಂಪಿನಲ್ಲಿವೆ) ಸರ್ಕಾರದ ಅನುದಾನವನ್ನು ಅವಲಂಬಿಸಿವೆ. ಅವುಗಳಲ್ಲಿ ಅನುದಾನವಿಲ್ಲದೆಯೂ ನಡೆಯಬಲ್ಲ ಸಂಸ್ಥೆಗಳಿದ್ದರೂ ಅನುದಾನದ ರುಚಿಯನ್ನು ಕಂಡ ಅವರು ಯಾರೂ ಅದನ್ನು ನಿರಾಕರಿಸುವುದಿಲ್ಲ. ಬದಲಾಗಿ, ಅನುದಾನವನ್ನು ಸಲೀಸಾಗಿ ಪಡೆಯಲು ಅದರ ಒಂದು ಪಾಲನ್ನು ಪೂಜಾರಿ ಗಳಿಗೆ ಕಾಣಿಕೆಯಾಗಿಯೋ ರುಷುವತ್ತಾಗಿಯೋ ಕೊಡಲು ಯಾವಾಗಲೂ ತಯಾರಿದ್ದಾರೆ. ಇದು ಕೂಡ ಮೇಲೆ ಹೇಳಿದ ಕೊಡು-ಬೇಡು ಸಂಸ್ಕೃತಿಯ ಒಂದು ಅಂಗ.

ಸರ್ಕಾರ ಎಷ್ಟಾದರೂ ಅನುದಾನ ಕೊಡಲಿ – ಈ ಸಂಸ್ಥೆಗಳ ಸಿಬ್ಬಂದಿ ಮತ್ತು ಶಿಕ್ಷಕರುಗಳನ್ನು ನೇಮಕ ಮಾಡುವ, ಪ್ರವೇಶಕ್ಕೆ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ಅಧಿಕಾರವನ್ನು ತಾನಿರಿಸಿಕೊಳ್ಳಲಿ! ಈ ಷರತ್ತಿನ ಮೇಲೆ ಅನುದಾನ ಪಡೆಯಲು ಎಷ್ಟು ಸಂಸ್ಥೆಗಳು ಸಿದ್ಧವಾಗಿವೆ? ಸರ್ಕಾರವಾದರೂ ಈ ಷರತ್ತನ್ನು ವಿಧಿಸಲು ಸಿದ್ಧವಿದೆಯೆ? ಅವ್ಯವಹಾರದ ಮೂಲ ಇರುವುದೇ ಇಲ್ಲಿ. ಹಿಂದಿನ ಕರ್ನಾಟಕ ಸರ್ಕಾರದ ಪ್ರಾಥಮಿಕ ಶಿಕ್ಷಣ ಖಾತೆಯ ಸಚಿವರಾಗಿದ್ದ ವಿಶ್ವನಾಥ್ ಅವರು, ಅಸ್ತಿತ್ವದಲ್ಲೇ ಇಲ್ಲದೆ ಅನುದಾನ ಪಡೆಯುತ್ತಿದ್ದ ಅನೇಕ ಸಂಸ್ಥೆಗಳನ್ನೂ, ಸುಳ್ಳು ದಾಖಲಾತಿ ಕೊಟ್ಟು ತೋರಿಸುತ್ತಿದ್ದ ವಿದ್ಯಾರ್ಥಿ ಮತ್ತು ಶಿಕ್ಷಕ ಸಂಖ್ಯಾಬಲವನ್ನೂ ಇನ್ನಿತರ ಹಲವು ತರದ ಅವ್ಯವಹಾರಗಳನ್ನೂ ಪತ್ತೆಹಚ್ಚಿ ಪಟ್ಟಿ ಮಾಡಿದ್ದರು. ಆ ಶೋಧನೆಯ ಅನುಸಾರ ಇಲಾಖೆ ಏನು ಕ್ರಮ ಕೈಗೊಂಡಿತು? ಬಹುಶಃ ಸಚಿವರ ಖಾತೆ ಬದಲಾದದ್ದೇ ಸರ್ಕಾರ ತೆಗೆದುಕೊಂಡ ದಿಟ್ಟ ಕ್ರಮ! ಈ ಸಂಸ್ಥೆಗಳಲ್ಲಿ ಶಿಕ್ಷಕರ ನೇಮಕಾತಿ ಮತ್ತು ಬಡತಿಗಳಲ್ಲಿ ನಡೆಯುವ ಅವ್ಯವಹಾರ ಪ್ರಸಿದ್ಧವಾದದ್ದೇ. ನೆಪಕ್ಕಿರುವ ನೇಮಕಾತಿ ಸಮಿತಿಗಳೊಡನೆ ಇಲಾಖೆಯ, ಇಲಾಖೆ ಕಳಿಸಿಕೊಡುವ ಪ್ರತಿನಿಧಿಗಳ, ಸಹಕಾರದಿಂದಲೇ ಇದು ನಡೆಯುತ್ತದೆ. ಪ್ರತಿನಿಧಿಗಳು (ನಿರ್ದೇಶಕ ನಾಮಿನಿಗಳು, ವಿಷಯ ತಜ್ಞರು ಇತ್ಯಾದಿ) ಸಹಕರಿಸದೆ ಹೋದರೆ ಆಯಾ ಸಲದ ನೇಮಕಾತಿ ಪ್ರಕ್ರಿಯೆಯನ್ನೇ ಅಸಿಂಧುಗೊಳಿಸಿ, ಮುಂದೂಡಿ ಹೊಸ ಪ್ರತಿನಿಧಿ ಗಳನ್ನು ಬರಮಾಡಿಕೊಂಡು ಆಯ್ಕೆ ಅಥವಾ ನೇಮಕಾತಿ ಪ್ರಕ್ರಿಯೆಗಳನ್ನು ನಡೆಸಬಲ್ಲ ಸವಲತ್ತು ಈ ಸಂಸ್ಥೆಗಳಿಗಿದೆ. ಆಯ್ಕೆ, ಬಡತಿ ಮುಂತಾದ ಪ್ರಸ್ತಾವಗಳಿಗೆ ಮನ್ನಣೆ ಅಥವಾ ಸ್ಥಿರೀಕರಣಗಳನ್ನು ಪ್ರದಾನ ಮಾಡುವ ಅಧಿಕಾರಶಾಹಿ ಪ್ರತಿಯೊಂದಕ್ಕೂ ಇಂತಿಷ್ಟು ದಕ್ಷಿಣೆ ಅಥವಾ ದುರ್ದಾನ ಎಂದು ನಿಗದಿಪಡಿಸಿರುತ್ತದೆ. ಆಯ್ಕೆಯ ಪ್ರಕ್ರಿಯೆಯಲ್ಲಿ ಭಾಗವಹಿಸಲು ದೂರದಿಂದ ಕರೆಸಿಕೊಳ್ಳುವ ಇಲಾಖೆಯ ಪ್ರತಿನಿಧಿಗಳು ತಮಗೆ ಸಿಗುವ ಯಾದೃಚ್ಛಿಕ (arbitrary) ಪ್ರವಾಸ ಭತ್ಯೆಯಿಂದಲೇ ಕೃತಾರ್ಥರಾಗುವುದು ವಾಡಿಕೆಯಾಗಿದೆ. ಈ ಸಂಸ್ಥೆಗಳು ನಡೆಸುವ ಶಾಲಾ ಕಾಲೇಜುಗಳ ಮುಖ್ಯಸ್ಥರ ಸ್ಥಾನವನ್ನು ಎಂದಾದರೂ ಎಲ್ಲಿಯಾದರೂ ಕೇವಲ ಅರ್ಹತೆಯ ಆಧಾರದ ಮೇಲೆ ಜಾತ್ಯಾತೀತವಾಗಿ ತುಂಬಿರುವ ಉದಾಹರಣೆಯುಂಟೆ? ಅನುದಾನವನ್ನು ದಾನಮಾಡುವ ಸರ್ಕಾರ ಇದೊಂದು ವಿಷಯವನ್ನಾದರೂ ತನಿಖೆ ಮಾಡಿದ್ದಿದ್ದರೆ ಎಷ್ಟು ಬಗೆಯ ಸ್ವಾರಸ್ಯವಾದ ಅಂಕಿ ಅಂಶಗಳು ದೊರೆಯುತ್ತಿದ್ದುವೋ ಏನೋ. ಮ್ಯಾನೇಜ್‌ಮೆಂಟುಗಳ ಆಪ್ತವರ್ಗದಲ್ಲಿ ಅಥವಾ ಕುಲ-ಜಾತಿ ವಲಯದಲ್ಲಿ ಒಪ್ಪುವಂಥ ವ್ಯಕ್ತಿ ದೊರೆಯದಿದ್ದಾಗ ಮಾತ್ರ ಅಪರೂಪವಾಗಿ ಜಾತ್ಯತೀತ ನೇಮಕಾತಿ ಆಗಿದ್ದೀತೋ ಏನೋ. ಈ ಪ್ರತಿಯೊಂದು ವಿಷಯದಲ್ಲೂ ಕೊಂಕಣ ಸುತ್ತಿ ಮೈಲಾರಕ್ಕೆ ನಡೆದಂತೆ ನಿಯಮಾವಳಿಗಳಿದ್ದರೂ ಸರ್ಕಾರ ಮಾತ್ರ ಎಲ್ಲ ಸಂದರ್ಭಗಳಲ್ಲೂ ವಿಶೇಷ ಔದಾರ್ಯವನ್ನೇ ತೋರಿಸುತ್ತ ಬಂದಿದೆ.

ತಾಂತ್ರಿಕ ಶಿಕ್ಷಣ ಕ್ಷೇತ್ರದ ಪ್ರವೇಶ ಮತ್ತು ಅನುಪಾತ ಪ್ರಕ್ರಿಯೆಗಳ ಗೊಂದಲದ ನಡುವೆಯೇ ಇತರ ಶೈಕ್ಷಣಿಕ ಶಾಖೆಗಳಲ್ಲೂ ಹೊಸ ಹೊಸ ಹಗರಣಗಳು ತಲೆ ಎತ್ತುತ್ತಿವೆ. ಇತ್ತೀಚಿನ ವರದಿಯೊಂದು ಬೆಂಗಳೂರು ವಿ.ವಿ. ನಿಲಯದ ಸಿಂಡಿಕೇಟ್ ಮತ್ತು ಅಕಾಡೆಮಿಕ್ ಕೌನ್ಸಿಲ್‌ಗಳ ಸದಸ್ಯತ್ವದ ಬೆಲೆಯನ್ನು ಕುರಿತದ್ದು: ಸಿಂಡಿಕೇಟ್ ಸದಸ್ಯ ನಾಗಲು ೩೦-೩೫ ಲಕ್ಷ ರೂ.ಗಳ ಬೆಲೆಯಂತೆ. ಬಹುತೇಕ ಸದಸ್ಯರುಗಳನ್ನು ಸರ್ಕಾರ ನಾಮಕರಣ ಮೂಲಕ ಆಯ್ಕೆ ಮಾಡುವುದರಿಂದ ಅವು ಈಗ ಹಣಕೊಟ್ಟು ಸಂಪಾದಿಸ ಬಹುದಾದ ಸ್ಥಾನಗಳಾಗಿವೆಯಂತೆ. ಬೆಂಗಳೂರು ವಿ.ವಿ. ನಿಲಯದ ವ್ಯಾಪ್ತಿಗೆ ಬರುವ ಕಾಲೇಜುಗಳ ಸಂಖ್ಯೆ ೪೦೦ಕ್ಕೂ ಹೆಚ್ಚು ಇದ್ದು ಆ ಸದಸ್ಯರುಗಳಿಗೆ ಕಾಲೇಜುಗಳ ಮಾನ್ಯತೆ, ಹೊಸ ಕೋರ್ಸುಗಳಿಗೆ ಹಸಿರು ನಿಶಾನೆ, ಮಾನ್ಯತೆಯ ನವೀಕರಣ ಮುಂತಾದ ಎಲ್ಲ ಸಂದರ್ಭಗಳಲ್ಲೂ ಅಭಿಪ್ರಾಯ ಕೊಡುವ ಮತ್ತು ಶಿಫಾರಸು ಮಾಡುವ ನಿರ್ಣಾಯಕ ಶಕ್ತಿ ಇರುವುದರಿಂದ ಸದಸ್ಯತ್ವದ ಸಂಪಾದನೆಗೆ ವೆಚ್ಚ ಮಾಡಿದ ಹಣಕ್ಕೆ ಹಲವು ಪಟ್ಟು ಮಿಗಿಲಾಗಿ ಲಾಭಗಳಿಸಲು ಅವಕಾಶವಿದೆಯಂತೆ. ಸಾರ್ವಜನಿಕರಿಗೆ ಈ ಸಂಗತಿಗಳು ಅದ್ಭುತವಾಗಿ ಕಾಣಬಹುದು. ಅಲ್ಲಿನ ಹಣದ ವಹಿವಾಟು ಅಷ್ಟು ದುಬಾರಿ. ಉದಾ ಹರಣೆಗೆ ಬಯೋಟೆಕ್ನಾಲಜಿ ಎಂಬಂಥ ಒಂದು ಹೊಸ ಕೋರ್ಸಿಗೆ ಅನುಮತಿ ಪಡೆಯಲು ಕಾಲೇಜು ಖರ್ಚು ಮಾಡುವ ಹಣ ಸುಮಾರು ೨೦ಲಕ್ಷ ರೂಗಳು ಎನ್ನಲಾಗಿದೆ.

೨

ಕರ್ನಾಟಕ ರಾಜ್ಯದಲ್ಲಿ ಬಿಡಿಸಲಾರದ ಕಗ್ಗಂಟಿನಂತೆ ಕಾಣುತ್ತಿರುವ ಇನ್ನೊಂದು ಸಮಸ್ಯೆ **ಶಿಕ್ಷಣ ಮಾಧ್ಯಮ.** ಇದು ಭಾರತದ ಎಲ್ಲ ರಾಜ್ಯಗಳಲ್ಲೂ ಸ್ವಲ್ಪಮಟ್ಟಿಗೆ ಇರಬಹು ದಾದಂಥ ಗೊಂದಲ. ಎಡಪಕ್ಷಗಳ ಆಡಳಿತವಿದ್ದ ಕೆಲವು ರಾಜ್ಯಗಳಲ್ಲಿ ಮೊದಲು ಸ್ಪಷ್ಟ ವಾಗಿದ್ದ ಭಾಷಾ ಶಿಕ್ಷಣದ ನೀತಿ ಸಾರ್ವಜನಿಕರ, ಕಾಲಕಾಲಕ್ಕೆ ಬದಲಾಗುವ, ಮರ್ಜಿಯ ಒತ್ತಡದಿಂದಾಗಿ ಈಗ ಸಡಿಲವಾಗುತ್ತ ಬಂದು ಅಲ್ಲಿಯೂ ಗೊಂದಲ ಉಂಟಾದಂತೆ ಕಾಣುತ್ತದೆ. ಆದರೆ ಬೇರೆ ಎಲ್ಲೂ ಕರ್ನಾಟಕದಲ್ಲಿನ ಪ್ರಕರ್ಷ ಸ್ಥಿತಿ ಇದ್ದಂತೆ ಕಾಣುವುದಿಲ್ಲ. ಅದಕ್ಕೂ ಕಾರಣ ಮಕ್ಕಳ ಶಿಕ್ಷಣ ಬೇರೆಲ್ಲ ವಾಣಿಜ್ಯೋದ್ಯಮಗಳಂತೆ ಅಧಿಕ ಲಾಭದ ಉದ್ಯಮವಾಗಿ ಪರಿಣಮಿಸಿರುವುದೇ.

ಮಾಧ್ಯಮದ ಸಮಸ್ಯೆಯ ಮೂಲವನ್ನು ಹೀಗೆ ವಿಶ್ಲೇಷಿಸಬಹುದು: **ಬದುಕು ದುಬಾರಿಯಾಗಿದೆ.** ಕಡಮೆ ಆದಾಯದಿಂದ ಜೀವನ ನಿರ್ವಹಣೆ ಸಾಧ್ಯವಿಲ್ಲ. ಆಹಾರ ಧಾನ್ಯ, ಹಣ್ಣು-ತರಕಾರಿ, ಹಾಲು-ಮೊಸರು, ವನಸ್ಪತಿ ಯಾವುದೂ ಅಗ್ಗವಲ್ಲ. ಸಾರಿಗೆ ಸಂಚಾರಗಳ ಸಾಧನವಾದ ಪೆಟ್ರೋಲ್, ಡೀಸೆಲ್, ಅಡುಗೆ ಅನಿಲ ಎಲ್ಲವೂ ತುಟ್ಟಿ. ಔಷಧಿ, ಚಿಕಿತ್ಸೆ, ತೊಡುವ ವಸ್ತ್ರಗಳು, ಶಾಲೆಯ ಮಕ್ಕಳು ಉಪಯೋಗಿಸುವ ಕಾಗದ, ಪುಸ್ತಕ, ಪೆನ್ನು ಎಲ್ಲವೂ ತುಟ್ಟಿ. ಅಗತ್ಯ ಸೌಲಭ್ಯಗಳಾದ ವಿದ್ಯುಚ್ಛಕ್ತಿ, ಟಿ.ವಿ. ಚಾನಲ್ ಸಂಪರ್ಕಗಳು, ಟೆಲಿಫೋನ್ ಎಲ್ಲವೂ ದುಬಾರಿ. ದೊಡ್ಡ ಕಾಯಿಲೆಗಳಿಗೆ ಚಿಕಿತ್ಸೆ, ಮಕ್ಕಳ ಮದುವೆ, ವಾಹನಗಳ ಕೊಳ್ಳುಹ, ವಾಸದ ಮನೆ ಬೇಕೆಂದರೆ ಸೈಟು-ಕಟ್ಟಡಗಳ ಮೇಲಿನ ವೆಚ್ಚ ಇವೆಲ್ಲ ಜೀವನ ದುಬಾರಿಯಾಗಲು ಕಾರಣಗಳು. ಹೀಗಿದ್ದೂ ಬದುಕುವ ಆಸೆ, ಜೀವನಮಟ್ಟದ ಸುಧಾರಣೆಯ ಬಯಕೆ ಯಾರಿಗಿಲ್ಲ? ಅದಕ್ಕಾಗಿಯೇ ಹೆಚ್ಚು ಆದಾಯ ಬೇಕು. ಆದಾಯಕ್ಕಾಗಿ ಉದ್ಯೋಗ. ಆಧುನಿಕ ವಿದ್ಯಾಭ್ಯಾಸ ಪದ್ಧತಿಯ ಜೊತೆಜೊತೆಗೇ ಹೊಸ ನಾಗರಿಕತೆ ವಿಕಾಸ ಹೊಂದುತ್ತ ಬಂದು ಕಳೆದ ಹಲವು ದಶಕಗಳಿಂದ (ಕೈಗಾರಿಕೋದ್ಯಮಿ ಮತ್ತು ಗುತ್ತಿಗೆದಾರರನ್ನು ಆಧರಿಸಿದ) ಇಂಜನಿಯರ್‌ಗಳು ಮತ್ತು (ಕಾಯಿಲೆಗಳನ್ನು ಆಧರಿಸಿದ) ವೈದ್ಯರುಗಳು ಮಿಕ್ಕ ಎಲ್ಲರಿಗಿಂತ ಬೇಗ ಹಣ ಗಳಿಸುತ್ತಾರೆ, ಮೇಲ್ಮಟ್ಟದ ಜನರಾಗುತ್ತಾರೆ – ಎಂಬ ಪ್ರತೀತಿ ಬೆಳೆದುಬಿಟ್ಟಿತು. ಇಂಜನಿಯರುಗಳನ್ನೂ ವೈದ್ಯರುಗಳನ್ನೂ ತಯಾರುಮಾಡುವ ತಾಂತ್ರಿಕ ಶಿಕ್ಷಣದ ಸರ್ಕಾರಿ ಸಂಸ್ಥೆಗಳು ಕಡಮೆ

ಇದ್ದುವು. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಲಭ್ಯವಿದ್ದ ಆಧುನಿಕ ತಾಂತ್ರಿಕ ಸೌಲಭ್ಯಗಳ ಉಪಯೋಗ ಪಡೆದ ಬಂಡವಾಳಸ್ಥರು ತಮ್ಮ ಆದಾಯದಲ್ಲಿ ಅಧಿಕಾಧಿಕ ಮಿಗಿತಾಯವನ್ನು ಸಾಧಿಸಿ ಕಪ್ಪು ಹಣವನ್ನು ಕೂಡಿ ಹಾಕಿದ್ದರು. ಈ ಹಣ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಸಾರ್ವಜನಿಕರ ಜೀವನ ಸುಧಾರಣೆಗೆ ವಿನಿಯೋಗವಾಗುವಂಥ ಅರ್ಥನೀತಿಯನ್ನು ಸರ್ಕಾರಗಳು ಅನುಸರಿಸದೆ ಹೋದಾಗ ಖಾಸಗಿ ಒಡೆತನದ ಕಪ್ಪು ಹಣ ಇನ್ನಷ್ಟು ಕಪ್ಪು ಹಣವನ್ನು ಉತ್ಪಾದಿಸುವುದಕ್ಕಾಗಿ, ಅಂದರೆ ಖಾಸಗಿ ಐಶ್ವರ್ಯವನ್ನು ಬೆಳೆಸುವ ಬಂಡವಾಳವಾಗಿ ಹೂಡಲ್ಪಡುವುದು ಒಂದು ಸಹಜ ಅರ್ಥ ಪ್ರಕ್ರಿಯೆ. ಸ್ವಾತಂತ್ರ್ಯದ ಅನಂತರದ ದಿನಗಳಲ್ಲಿ ತೆರಿಗೆ ಕದಿಯುವಿಕೆ, ಸೋರಿಕೆ ಮತ್ತು ಅಗ್ಗವಾದ ಕಾರ್ಮಿಕ ಶ್ರಮಗಳು ಈ ಬಂಡವಾಳವನ್ನು ಅಪಾರವಾಗಿ ಬೆಳೆಸಿವೆ. ಧಾರ್ಮಿಕ ಸಂಸ್ಥೆಗಳೆನಿಸಿದ ಮಠಮಾನ್ಯಗಳಿಗಂತೂ ತೆರಿಗೆಯ ಕಡಿವಾಣ ಇಲ್ಲವೇ ಇಲ್ಲ.

ಇಂಜನಿಯರಿಂಗ್ ಕಾಲೇಜುಗಳು, ವೈದ್ಯಕೀಯ ಕಾಲೇಜುಗಳು ಮತ್ತು ಕ್ಯಾಪಿಟೇಶನ್ ಮೇಲೆ ನಿಂತ ಇನ್ನಿತರ ಹಲವು ತರದ ವಿದ್ಯಾಸಂಸ್ಥೆಗಳು ಆಶ್ಚರ್ಯಕರವಾದಷ್ಟು ಅಧಿಕ ಸಂಖ್ಯೆಯಲ್ಲಿ ಅಸ್ತಿತ್ವಕ್ಕೆ ಬಂದದ್ದು ಹೀಗೆ. ಆದರೆ ಇವುಗಳ ಬೆಳವಣಿಗೆ ಈ ಅತಿರೇಕಕ್ಕೆ ಏರಿ ಅವುಗಳ ಮೇಲಿನ ನಿಯಂತ್ರಣ ಇಷ್ಟು ದುಸ್ಸಾಧ್ಯವಾಗುತ್ತದೆ ಎಂಬುದು ಸರ್ಕಾರಕ್ಕೆ ತಿಳಿಯದೆ ಹೋದದ್ದು ಆಶ್ಚರ್ಯದ ಸಂಗತಿ. ಆದರೆ ಆಶ್ಚರ್ಯಪಡುವಂಥಾದ್ದು ಇಲ್ಲಿ ಏನೂ ಇಲ್ಲ. ನಾವು ಬೆಳೆಸಿದ ರಾಜಕೀಯ ಪಕ್ಷಗಳು ಮತ್ತು ಅವು ರಚನೆ ಮಾಡಿದ ಸರ್ಕಾರಗಳ ಸ್ವರೂಪವೇ ಅಂಥಾದ್ದು. ಈ ಪಕ್ಷಗಳು, ಅವು ಕಟ್ಟುವ ಸರ್ಕಾರಗಳು, ಪ್ರಜಾಪ್ರಭುತ್ವದ ಮುಖವಾಡ ತೊಟ್ಟ ಚುನಾವಣೆಗಳು ಕಪ್ಪು ಹಣವನ್ನು ಅವಲಂಬಿಸಿವೆ. ನಾವು ಕುರಿತು ಮಾತಾಡುತ್ತಿರುವ ಖಾಸಗಿ ವಿದ್ಯಾಸಂಸ್ಥೆಗಳ ಅಧಿಪತಿಗಳನೇಕರು ಶಾಸಕರೂ ಮಂತ್ರಿಗಳೂ ಆಗಿ ನಮ್ಮನ್ನು ಆಳುತ್ತಿರುವುದು ಕೂಡ ತಿಳಿದ ವಿಷಯ. ಆದ್ದರಿಂದಲೇ ಈ ಸಮಸ್ಯೆಗಳ ಪರಿಹಾರಕ್ಕೆ ನಮ್ಮ ಯುವಜನರ ಸಮುದಾಯವನ್ನೊಳಗೊಂಡ ಮಿಲಿಟೆಂಟ್ ಸಂಘಟನೆಗಳೇ ಬೇಕಾಗಬಹುದು ಎಂದದ್ದು.

ನಾವು ಎತ್ತಿಕೊಂಡಿದ್ದ ಶಿಕ್ಷಣ ಮಾಧ್ಯಮದ ವಿಷಯಕ್ಕೆ ಈಗ ಮತ್ತೆ ಬರೋಣ: ಎಂಜನಿಯರಿಂಗ್ ಮತ್ತು ವೈದ್ಯಕೀಯ ಕಾಲೇಜುಗಳಲ್ಲಿ (ಇತರ ತರಬೇತಿ ಸಂಸ್ಥೆಗಳಲ್ಲಿ ಕೂಡ) ಅರ್ಹತಾ ಪಟ್ಟಿಯಲ್ಲಿ ಸೀಟು ಪಡೆಯಲು ಹೆಚ್ಚು ಅಂಕಗಳನ್ನು ಗಳಿಸಬೇಕು. ಪ್ರವೇಶ ಶುಲ್ಕ ತೆತ್ತು ಪಡೆಯುವ ಸೀಟುಗಳ ಬೆಲೆ ಕೂಡ ಗಳಿಸಿದ ಅಂಕಗಳ ಶೇಕಡಾವಾರನ್ನು ಅವಲಂಬಿಸುತ್ತದೆ. ಕಡಮೆ ಅಂಕಗಳಿದ್ದು ಸೀಟು ಬೇಕೆಂದರೆ ಹೆಚ್ಚು ಶುಲ್ಕ, ಸ್ವಲ್ಪ ಹೆಚ್ಚು ಅಂಕಗಳನ್ನು ಗಳಿಸಿದವರಿಗೆ ಶುಲ್ಕದಲ್ಲಿ ಅದಕ್ಕೆ ತಕ್ಕಂತೆ ರಿಯಾಯಿತಿ – ಹೀಗೆ. ಪ್ರವೇಶಪೂರ್ವದ ಪದವಿಪೂರ್ವ (ವಿಜ್ಞಾನ) ಶಿಕ್ಷಣ ಬಹುತೇಕ ಇಂಗ್ಲಿಷ್ ಮಾಧ್ಯಮದಲ್ಲಿ ಕೊಡಲ್ಪಡುತ್ತಿದೆ. ಆದ್ದರಿಂದ ಇಂಗ್ಲಿಷ್ ಮಾಧ್ಯಮದಲ್ಲಿ ಓದಿದವರಷ್ಟೆ ಹೆಚ್ಚು ಅಂಕಗಳನ್ನು ಗಳಿಸಬಹುದೆಂಬ ಒಂದು ಹುಸಿ ಮತ್ತು ಅವೈಜ್ಞಾನಿಕ ನಂಬಿಕೆ ಪ್ರಚಲಿತವಾಗಿದೆ. ಪದವಿಪೂರ್ವ ಶಿಕ್ಷಣಕ್ಕೆ ಮುನ್ನಿನ ಪ್ರಾಥಮಿಕ ಶಿಕ್ಷಣವನ್ನು ಅದಕ್ಕೂ ಮುನ್ನಿನ ಶಿಶುವಿಹಾರದ ಶಿಕ್ಷಣವನ್ನೂ ಇಂಗ್ಲಿಷಿನಲ್ಲಿಯೆ ಕೊಡಿಸಿಬಿಟ್ಟರೆ ಮಕ್ಕಳು ಹೆಚ್ಚು ಬುದ್ಧಿವಂತರಾಗುತ್ತಾರೆ; ಹೆಚ್ಚು ಅಂಕಗಳನ್ನು ಗಳಿಸುತ್ತಾರೆ ಎಂಬುದು ಈ ನಂಬಿಕೆಯ ತಾತ್ಪರ್ಯ.

ನಂಬಿಕೆ ಹೀಗಿರುವಾಗ ನಮ್ಮ ಹೊಸ ಸಮ್ಮಿಶ್ರ ಸಚಿವ ಸಂಪುಟದ ಉನ್ನತ ಶಿಕ್ಷಣ ಸಚಿವರಾದ ಶ್ರೀ ಡಿ. ಮಂಜುನಾಥ್ ಅವರು (ವಿಜಯ ಕರ್ನಾಟಕ : ೬.೯.೨೦೦೪) ಕೊಟ್ಟ ಒಂದು ಅಧಿಕೃತ ಹೇಳಿಕೆ 'ಇತ್ತೀಚೆಗೆ ನಡೆದ ಸಿ.ಇ.ಟಿ. ಪರೀಕ್ಷೆಯಲ್ಲಿ ಯಾವುದೇ ಪ್ರತಿಷ್ಠಿತ ಕಾಲೇಜಿನ ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ರ್‍ಯಾಂಕ್ ಗಳಿಸಿಲ್ಲ ಎಂದಿದೆ. ಜೊತೆಗೆ 'ಇಂಗ್ಲಿಷ್ ಮಾಧ್ಯಮದಲ್ಲಿ ಕಲಿತವರೆಲ್ಲ ಬುದ್ಧಿವಂತರಲ್ಲ; ಕನ್ನಡ ಭಾಷೆಯಲ್ಲಿ ಓದಿ ಖ್ಯಾತಿ ಪಡೆದವರೂ ಇದ್ದಾರೆ' ಎಂಬ ಮಾತನ್ನೂ ಹೇಳಿಕೆಗೆ ಸೇರಿಸಿದ್ದಾರೆ. ಈ ತಿಳಿವಳಿಕೆ ನಮ್ಮ ಶಿಕ್ಷಣ ಸಚಿವರಿಗೆ ನಿಚ್ಚಳವಾಗಿ ಇರುವುದಾದರೆ ಅದು ಸಂತೋಷದ ಸಂಗತಿ. ಗ್ರಾಮಾಂತರ ಪ್ರದೇಶಗಳಲ್ಲಿ ಕನ್ನಡ ಮಾಧ್ಯಮದಲ್ಲೇ ಶಿಕ್ಷಣ ಪಡೆಯುವ ಕೆಳವರ್ಗದವರನ್ನು ಪುಸಲಾಯಿಸಲು ಕೊಟ್ಟ ಹೇಳಿಕೆ ಇದಲ್ಲವಾದರೆ ಇನ್ನೂ ಸಂತೋಷ.

ಸೃಷ್ಟಿಯ ಸ್ವರೂಪವನ್ನೂ ಪ್ರಕೃತಿಯ ಅದ್ಭುತಗಳನ್ನೂ ಲೋಕದ ವಸ್ತುಗಳ ರಚನೆಯ ವೈಜ್ಞಾನಿಕ ವಿಧಾನಗಳನ್ನೂ ನಾಗರಿಕ ಸಮಾಜದ ವಿದ್ಯಮಾನಗಳನ್ನೂ ತಮ್ಮ ತಮ್ಮ ಮಾತೃಭಾಷೆಗಳಲ್ಲಿ ಕಲಿಯಲು ತೊಡಗಿದರೆ ಮಕ್ಕಳ ಕ್ರಿಯಾಶೀಲತೆ ಹೆಚ್ಚು ಸಹಜವಾಗಿ ವಿಕಾಸಗೊಂಡು ಅವರ ಬೌದ್ಧಿಕ ಸಾಧನೆ ಗರಿಷ್ಠ ಮಟ್ಟವನ್ನು ಮುಟ್ಟುತ್ತದೆಯೇ ಅಥವಾ ತಮಗೆ ಸಹಜವಾಗಿ ತಿಳಿಯದ, ಕೇವಲ ನಿರ್ಬಂಧದ ನಿತ್ಯ ಡ್ರಿಲ್ಲಿಂಗ್ ಮೂಲಕ ಅಪೂರ್ಣವಾಗಿ ಕೈವಶವಾಗಬಲ್ಲ ಪರಭಾಷೆಯಲ್ಲಿ ಕಲಿತರೆ ಅದು ಹೆಚ್ಚು ಸಮರ್ಪಕವಾಗಿ ಸಿದ್ಧಿಸುವುದೇ ಎಂಬುದು ಮುಖ್ಯವಾದ ಪ್ರಶ್ನೆ. ಭಾಷಾ ವಿಜ್ಞಾನಿಗಳು, ಭಾಷೆಗಳನ್ನು – ಆ ಮೂಲಕ ಇತರ ವಿಷಯಗಳನ್ನೂ ಬೋಧಿಸಿದ ದೀರ್ಘ ಅನುಭವವುಳ್ಳ ಬುದ್ಧಿವಂತ ಶಿಕ್ಷಕರು ಮತ್ತು ಬಹುಶ್ರುತ ಪ್ರಾಜ್ಞರು ಮಾತ್ರ ಈ ಪ್ರಶ್ನೆಗೆ ಉತ್ತರ ಹೇಳಬಲ್ಲರು. ರಾಜಕಾರಣಿಗಳಾಗಲಿ, ಆ ವಿಷಯದಲ್ಲಿ ಪರಿಣತಿ ಇಲ್ಲದ ವಿದ್ಯಾರ್ಥಿ ಪೋಷಕರುಗಳಾಗಲಿ ಅದನ್ನು ನಿರ್ಣಯಿಸಲಾರರು. ಆದರೆ ಈಗ ಆ ವಿಷಯವನ್ನು ಕುರಿತ ಚರ್ಚೆ ನಿಂತುಹೋಗಿದೆ. ಶಿಕ್ಷಣತಜ್ಞರು (ಸರ್ಕಾರ ಅಥವಾ ಇತರ ಶ್ರೀಮಂತ ಸಂಸ್ಥೆಗಳ ಯಾವ ಅನುಗ್ರಹವನ್ನೂ ನಿರೀಕ್ಷಿಸದವರು ಕೂಡ) ಈಗ ವಿರಕ್ತಿ ಬಂದವರಂತೆ ಆ ಬಗ್ಗೆ ಮಾತನ್ನೇ ನಿಲ್ಲಿಸಿದ್ದಾರೆ. ನಗರಗಳಲ್ಲಿ ಇಂಗ್ಲಿಷ್ ಶಾಲೆಗಳ ಹಾವಳಿಯ ವರದಿಗಳು ಬರುವ ಸೀಸನ್ನಿನಲ್ಲಿ ಕೆಲವರು ಮಾತಾಡುತ್ತಾರೆ (ಕೇಳುವವರಿದ್ದರೆ!). ಕಳೆದ ವರ್ಷ ನಿವೃತ್ತ ಶಿಕ್ಷಣ ಇಲಾಖೆಯ ನಿರ್ದೇಶಕ ಶ್ರೀ ಎಸ್. ಮಂಚಯ್ಯ, ಕನ್ನಡದಲ್ಲಿ ವಿಜ್ಞಾನವನ್ನು ಕುರಿತು ಲೇಖನಗಳನ್ನೂ ಪುಸ್ತಕಗಳನ್ನೂ ಬರೆದಿರುವ, ವಿಶ್ವಕೋಶ-ವಿಜ್ಞಾನ ವಸ್ತುಕೋಶಗಳ ಸಂಪಾದಕ ಸಮಿತಿಯಲ್ಲಿ ಕೆಲಸ ಮಾಡಿದ ದೀರ್ಘ ಪರಿಶ್ರಮ ಉಳ್ಳವರೂ ಆದ ಶ್ರೀ ಜೆ.ಆರ್. ಲಕ್ಷ್ಮಣರಾವ್ ಮತ್ತು ಶ್ರೀ ಜಿ. ಟಿ. ನಾರಾಯಣರಾವ್ ಮುಂತಾದ ಇಬ್ಬರು ಮೂವರು ಮಾತಾಡಿದುದು ವರದಿಯಾಗಿತ್ತು. ಮಾತಾಡಬಲ್ಲವರು ನೂರಾರು ಜನ ಇದ್ದಾರೆ. ಆದರೆ ಅವರಿಗೆಲ್ಲ ತಮ್ಮ ಮಾತಿನಿಂದೇನಾದೀತು ಎಂಬ ಹತಾಶ ಭಾವನೆ ಬಂದುಬಿಟ್ಟಿದೆ. ಅಲ್ಲದೆ ಅವರ ಅಭಿಪ್ರಾಯಗಳನ್ನು ಪ್ರಚುರಪಡಿಸುವವರಾದರೂ ಯಾರು ? ಅಂಥವರ ಅಭಿಪ್ರಾಯಗಳಿಂದ ಏನೂ ಆಗುವುದಿಲ್ಲ ಎಂಬ ತೀರ್ಮಾನಕ್ಕೆ ಬರುವಂಥ ಪರಿಸ್ಥಿತಿ ಬೆಂಗಳೂರು ಮೊದಲಾದ ದೊಡ್ಡ ನಗರಗಳಲ್ಲಿ ಮಾತ್ರವಲ್ಲದೆ ಚಿಕ್ಕ ಜಿಲ್ಲಾ ಕೇಂದ್ರಗಳಲ್ಲೂ ನಿರ್ಮಾಣವಾಗಿದೆ. ಹೀಗೆ ಆಗಿರುವುದು ಆಂಗ್ಲ ಮಾಧ್ಯಮ ಶಾಲೆಗಳನ್ನು ನಡೆಸುತ್ತಿರುವ ಬಂಡವಾಳ ಪತಿಗಳ ಪ್ರಾಬಲ್ಯ ಮತ್ತು ಅವರೊಡನೆ ತೆರೆಯ ಮರೆಯಲ್ಲಿ ಕೈ ಜೋಡಿಸಿರುವ ರಾಜಕಾರಣಿಗಳಿಂದ. ಇದೇ ರಾಜಕಾರಣಿಗಳ ಉಸ್ತುವಾರಿಯಲ್ಲಿ ನಡೆಯುವ ಸರ್ಕಾರ ಸರ್ಕಾರಿ ಶಾಲೆಗಳಿಗೆ – ಕನ್ನಡ ಮಾಧ್ಯಮದ ಶಾಲೆಗಳಿಗೆ – ಒದಗಿಸುತ್ತಿರುವ ಹಣಕಾಸಿನ ಪ್ರಮಾಣ ನಿಕೃಷ್ಟವಾದದ್ದು. ಅವುಗಳು ಆಕರ್ಷಕವಾಗಿಯೂ ಗೌರವಯುತವಾಗಿಯೂ ಕಾಣುವಂತೆ ಮಾಡುವಲ್ಲಿ ಸರ್ಕಾರ ಸಂಪೂರ್ಣವಾಗಿ ವಿಫಲವಾಗಿದೆ.

ನಗರದ ವಿದ್ಯಾರ್ಥಿಗಳ ಜೊತೆ ಓದಬೇಕಾಗಿರುವ ಗ್ರಾಮೀಣ ವಿದ್ಯಾರ್ಥಿಗಳು ಕೀಳರಿಮೆಯಿಂದ ಬಳಲುತ್ತಾರೆ ಎಂಬ ಒಂದು ಗೊಡ್ಡುವಾದವನ್ನು ಗ್ರಾಮೀಣ ಪ್ರದೇಶದ ಅರೆವಿದ್ಯಾವಂತರುಗಳು ಈಚೆಗೆ ಮುಂದೊಡ್ಡುತ್ತಿದ್ದಾರೆ. ಇದು ಆಧಾರ ರಹಿತ. ಕೀಳರಿಮೆ ಹಲವು ಕಾರಣದಿಂದ ಬರುತ್ತದೆ. ವಿದ್ಯಾರ್ಥಿಗಳು ಪಡೆದಿರುವ ಸೌಲಭ್ಯಗಳು, ಅವರ ದೇಹಾರೋಗ್ಯದಲ್ಲಿ ಕಂಡುಬರುವ ತಾರತಮ್ಯ, ಅವರ ವೇಷ ಭೂಷಣಗಳು ಮತ್ತು ವಸ್ತು ವಾಹನಗಳಲ್ಲಿನ ವ್ಯತ್ಯಾಸ (ಹಿಂದೆ ಪೇಟೆ ಸೇರಿದ ಹಳ್ಳಿಯ ಹುಡುಗರು ಉತ್ತಮವಾದ ಪಾದರಕ್ಷೆ ಕೊಳ್ಳುವುದೂ ಕಷ್ಟವಾಗಿದ್ದಾಗ ನಗರದ ಹುಡುಗರು ಸೈಕಲ್‌ಗಳಲ್ಲಿ ಬರುತ್ತಿದ್ದರು. ಈಗ ನಗರದ ವಿದ್ಯಾರ್ಥಿಗಳು ದ್ವಿಚಕ್ರ ವಾಹನಗಳಲ್ಲಿ ಬರುತ್ತಾರೆ. ಗ್ರಾಮಗಳಿಂದ ಬಂದವರು ವಾಹನಗಳಲ್ಲಿ ಅಡ್ಡಾಡುವುದು ಅಪರೂಪ) ಮತ್ತು ಅವರುಗಳಿಗೆ ಮನೆಗಳಲ್ಲಿ ಅಥವಾ ವಿದ್ಯಾರ್ಥಿ ನಿಲಯಗಳಲ್ಲಿ ಸಿಗುವ ಊಟೋಪಚಾರಗಳ ವ್ಯತ್ಯಾಸ – ಈ ಕಾರಣಗಳಿಂದಲೂ ಅವರು ಕೀಳರಿಮೆಗೆ ಒಳಗಾಗಬಹುದು. ಇಷ್ಟಕ್ಕೂ, ಅವರಿಗೆ ಈ ಸಮಸ್ಯೆ ಉದ್ಭವವಾಗುವುದು ತಾಂತ್ರಿಕ ಅಥವಾ ಉನ್ನತ ಶಿಕ್ಷಣಕ್ಕೆ ಅವಕಾಶ ಸಿಕ್ಕಿ ಪೇಟೆ ಸೇರಿದಾಗ. ಆ ಘಟ್ಟದಲ್ಲಿ ವಿದ್ಯಾರ್ಥಿಗಳು ಇತರ ವಿದ್ಯಾರ್ಥಿಗಳೊಡನೆ ಸಂಭಾಷಣೆ ಅಥವಾ ಚರ್ಚೆ ನಡೆಸುವುದು ತೀರಾ ಕಡಿಮೆ. ಈಗಿನ ಶಿಕ್ಷಣದ ರೀತಿಯನ್ನು ಹತ್ತಿರದಿಂದ

ನೋಡಿದವರಿಗೆ ಇದು ತಿಳಿಯುತ್ತದೆ. ಅಧ್ಯಾಪಕರುಗಳು ಕೂಡ ಬೋಧನೆಯಲ್ಲಿ ಪ್ರಶ್ನೆ ಕೇಳುವ, ಉತ್ತರ ಹೇಳುವ ಸಂವಾದ ಕ್ರಮವನ್ನು ಅನುಸರಿಸುವುದು ಅಪರೂಪ. ಕಣ್‌ಪಟ್ಟಿ ಕಟ್ಟಿಕೊಂಡ ಕುದುರೆಗಳಂತೆ ಟಿಪ್ಪಣಿ ತೆಗೆಯುವ, ನಕಲು ಮಾಡುವ, ಕೊಟ್ಟ ಅಸೈನ್‌ಮೆಂಟ್ ಅಥವಾ ಪ್ರಾಜೆಕ್ಟ್‌ಗಳ ಕೆಲಸವನ್ನು, ಶಿಕ್ಷಕರು ಕೊಟ್ಟ ಸಲಹೆಗಳನ್ವಯ ಮಾಡಿ ಮುಗಿಸುವುದೇ ಹೆಚ್ಚು. ಅಧಿಕ ಅಂಕಗಳ ಗಳಿಕೆಗೆ ಬೇಕಾದ ಉಪಾಯಗಳ ಮೇಲೆಯೇ ಅವರ ಗಮನ ಕೇಂದ್ರೀಕೃತವಾಗಿರುತ್ತದೆ. ಹೊರ ರಾಜ್ಯಗಳಿಂದ ಅಥವಾ ದೇಶಗಳಿಂದ ಬಂದು ಕರ್ನಾಟಕದ ಕಾಲೇಜುಗಳಲ್ಲಿ ಕಲಿಯಬೇಕಾದವರು ಸ್ಥಳೀಯ ಭಾಷೆ ತಿಳಿಯದ್ದರಿಂದ ಇಲ್ಲಿನ ವಿದ್ಯಾರ್ಥಿಗಳು, ಅಧ್ಯಾಪಕರು ಮತ್ತು ಪುರಜನರ ನಡುವೆ ಅನುಭವಿಸಬಹುದಾದ ಕೀಳರಿಮೆ ಅಥವಾ ಪರಕೀಯ ಪ್ರಜ್ಞೆ ಅಧಿಕತರ ಎನ್ನಬಹುದು. ಆದರೆ ಅವರಾರೂ ಈ ಕೀಳರಿಮೆಯಿಂದ ಬಳಲುವಂತೆ ಕಾಣುವುದಿಲ್ಲ. ಅದಕ್ಕೆ ಬದಲಾಗಿ ಅವರು ಅತ್ಯಾಧುನಿಕ ವಾಹನಗಳನ್ನೇರಿ ಭೋರ್ಗರೆಯುತ್ತ ಧೀರರಂತೆ ಓಡಾಡುವುದನ್ನು ನೋಡಬಹುದು. ಅದನ್ನು ಕಂಡು ನಮ್ಮ ಕೆಳ ಮಧ್ಯಮವರ್ಗದ ವಿದ್ಯಾರ್ಥಿಗಳು ಕೀಳರಿಮೆಗೆ ಬಲಿಯಾಗಬಹುದು. ಕಾರಣವೆಂದರೆ, ಅವರಲ್ಲಿ ಚೆಲ್ಲಾಡುವಷ್ಟು ಹಣವಿರುತ್ತದೆ; ಇವರಲ್ಲಿ ಇರುವುದಿಲ್ಲ. ಸತ್ಯಸಂಗತಿ ಇದು.

ಗ್ರಾಮೀಣರು, ದಲಿತರು ಮುಂತಾದ ದುರ್ಬಲ ವರ್ಗದವರು ಸಮಾಜದ ಮೇಲು ವರ್ಗದವರೊಡನೆ ಸಮಾನತೆಯನ್ನು ಸಾಧಿಸಬೇಕೆಂದರೆ ಅದು ಇಂಗ್ಲಿಷ್ ಕಲಿಯುವುದರ ಮೂಲಕ ಅಥವಾ ಕಾನ್ವೆಂಟ್ ಶಿಕ್ಷಣದ ಮೂಲಕವೇ ಎಂಬಂಥ ವಿಪರೀತದ ಹೇಳಿಕೆಗಳು ನಮ್ಮ ಬುದ್ಧಿಜೀವಿಗಳೆನಿಸಿಕೊಂಡವರ ಮುಖದಿಂದಲೇ ಬಂದಿರುವುದುಂಟು. ಇಂಥ ಅಭಿಪ್ರಾಯಗಳ ಬಲವನ್ನು ಬಳಸಿಕೊಂಡು ತನಗೂ ಸ್ಪಷ್ಟವಾದ ಒಂದು ಭಾಷಾ ನೀತಿ ಇಲ್ಲದ್ದರಿಂದ ಸರ್ಕಾರ ಪ್ರಾಥಮಿಕ ಒಂದನೇ ತರಗತಿಯಿಂದಲೇ ಇಂಗ್ಲಿಷನ್ನು ಕಡ್ಡಾಯ ಮಾಡುತ್ತೇವೆ ಎಂದು ವಾಗ್ದಾನ ಮಾಡಿದೆ. ರಾಜ್ಯದಲ್ಲಿರುವ ಪ್ರತಿಯೊಂದು ಪ್ರಾಥಮಿಕ ಶಾಲೆಗೂ ಇಂಗ್ಲಿಷನ್ನು ಚೆನ್ನಾಗಿ (ವ್ಯಾಕರಣ, ಭಾಷಾ ವಿಜ್ಞಾನಗಳ ಸಕ್ರಮ ಕಲಿಕೆಯ ಮೂಲಕ) ಬಲ್ಲ, ಇಂಗ್ಲಿಷನ್ನು ಆಡಬಲ್ಲ, ತರಬೇತಿ ಹೊಂದಿದ ಶಿಕ್ಷಕರನ್ನು ಎಲ್ಲಿಂದ ತರುತ್ತಾರೆ ? ಪ್ರಾಥಮಿಕಕ್ಕೆ ಬೇಡ, ನಮ್ಮ ಪ್ರತಿಯೊಂದು ಪ್ರೌಢಶಾಲೆಯಲ್ಲೂ ಪರಿಣತರಾದ ಇಂಗ್ಲಿಷ್ ಶಿಕ್ಷಕರು ಲಭ್ಯವಿದ್ದಿದ್ದರೆ ಇಂಗ್ಲಿಷ್ ನಮ್ಮ ವಿದ್ಯಾರ್ಥಿಗಳಿಗೆ ಕಬ್ಬಿಣದ ಕಡಲೆಯಾಗಲಿ, ಕವಿ ಕುವೆಂಪು ಹೇಳಿದಂತೆ, ಕಲ್ಲು ಚಪ್ಪಡಿಯಾಗಲಿ ಆಗಬೇಕಾಗಿರಲಿಲ್ಲ. ಇಂದಿಗೂ ಎಸ್.ಎಸ್.ಎಲ್.ಸಿ. ಅಥವಾ ಪಿ.ಯು.ಸಿ. ಪರೀಕ್ಷೆಗಳಲ್ಲಿ ಅನುತ್ತೀರ್ಣಗೊಳ್ಳುವವರ ಸಂಖ್ಯೆ ಹೆಚ್ಚು, ಫಲಿತಾಂಶಗಳು ಸುಧಾರಿಸಿಲ್ಲ – ಇದು ವಿದ್ಯಾರ್ಥಿ ಮತ್ತು ಪೋಷಕರಿಗಾದ ನಷ್ಟ ಎಂದು ಎಲ್ಲರೂ ಹೇಳುತ್ತಾರೆ. ಆದರೆ ಒಟ್ಟು ಫಲಿತಾಂಶಗಳು ಇಂಗ್ಲಿಷ್‌ನಲ್ಲಿ ಎಷ್ಟು ಜನ ಪಾಸಾದರು ಎಂಬುದನ್ನೇ ಅವಲಂಬಿಸುತ್ತದೆ ಎಂಬುದು ಶಿಕ್ಷಕರಿಗೆ ಗೊತ್ತು. ಬಹುಶಃ ಸಾರ್ವಜನಿಕರಿಗೆ ತಿಳಿಯದು. ಉದಾಹರಣೆಗೆ ಕನ್ನಡ, ಇತಿಹಾಸ ಮುಂತಾದ್ದರಲ್ಲಿ ಶೇ. ೯೮ ಜನ ಉತ್ತೀರ್ಣರಾಗಿ, ಗಣಿತದಲ್ಲಿ ಶೇ. ೭೫ ಜನ ಉತ್ತೀರ್ಣರಾದರೂ, ಇಂಗ್ಲಿಷ್ ಭಾಷೆಯಲ್ಲಿ ಕೇವಲ ಶೇ. ೪೫ ಪಾಸಾಗಿದ್ದರೆ ಆಗ ತರಗತಿಯ ಒಟ್ಟು ಫಲಿತಾಂಶ (ಅಂದರೆ ಪಾಸಾದವರು) ಶೇ. ೪೫ ಮಾತ್ರ. ಅಂದರೆ ಆಂಗ್ಲಭಾಷೆ ಹುಡುಗರಿಗೆ ಎಂಥ ಹೊರೆಯಾಗಿದೆ ಎಂಬುದು ಅರ್ಥವಾಗುತ್ತದೆ. ಪಠ್ಯ ಕ್ರಮದಲ್ಲಿ ಇಂಗ್ಲಿಷನ್ನು ಆಯ್ಕೆ ಮಾಡಿಕೊಳ್ಳದೆಯೇ – ಮೊದಲ ವಿಷಯ ಭಾಗದಲ್ಲಿ ಕನ್ನಡ ಅಥವಾ ಮಾತೃಭಾಷೆ; ದ್ವಿತೀಯ ಭಾಗದಲ್ಲಿ ಇಂಗ್ಲಿಷ್ ಸೇರಿ ಹಿಂದಿ, ತೆಲುಗು, ತಮಿಳು, ಸಂಸ್ಕೃತ, ಫ್ರೆಂಚ್ ಮುಂತಾದ ಭಾಷೆಗಳಲ್ಲಿ ಒಂದು; ಅನಂತರ ಐಚ್ಛಿಕ ವಿಷಯಗಳು, ಹೀಗೆ – ಅಭ್ಯಾಸ ಮಾಡಿ ಉತ್ತೀರ್ಣರಾಗಲು ಅವಕಾಶವಿದೆ. ಆದರೂ ವಿದ್ಯಾರ್ಥಿಗಳು ದ್ವಿತೀಯ ಭಾಗದಲ್ಲಿ ಇಂಗ್ಲಿಷನ್ನೇ ಆಯ್ಕೆ ಮಾಡಿಕೊಂಡು ನಪಾಸಿನ ಅಪಾಯವನ್ನು ಎದುರಿಸುತ್ತಾರೆ. ಇದಕ್ಕೆ ಕಾರಣ ಒಂದು – ಪಠ್ಯಕ್ರಮದಲ್ಲಿ ಅವಕಾಶವಿರುವ ಹಿಂದಿ, ಸಂಸ್ಕೃತ, ತೆಲುಗು ಇತ್ಯಾದಿ ವಿಷಯಗಳನ್ನು ಬೋಧಿಸಲು ಸಂಸ್ಥೆಯಲ್ಲಿ ಶಿಕ್ಷಕರೇ ಇಲ್ಲದಿರುವುದು; ಕಾರಣ ಎರಡು – ಇಂಗ್ಲಿಷನ್ನು ಪೂರ್ತಿಯಾಗಿ ತೊರೆದರೆ ಮುಂದೇನಾಗುವುದೋ ಎಂಬ ಆತಂಕ.

ಹಿಂದೆ ಇದ್ದಂತೆ ಐದನೆಯ ತರಗತಿಯಿಂದ ಆರಂಭಿಸಿ ಇಂಗ್ಲಿಷ್ ಕಲಿಸಿದರೂ ಪಿ.ಯು. ಪರೀಕ್ಷೆ ಮುಗಿಸುವಷ್ಟರಲ್ಲಿ ಎಂಟು ವರ್ಷ, ಪದವಿ ಓದನ್ನೂ ಗಣನೆಗೆ ತೆಗೆದುಕೊಂಡರೆ ಹನ್ನೊಂದು ಅಥವಾ ಹದಿಮೂರು (೬+೨+೩/೫) ವರ್ಷಗಳ ತನಕ ಇಂಗ್ಲಿಷ್ ಕಲಿಯುವ ಅವಕಾಶವಿದೆ. ಹನ್ನೆರಡು ವರ್ಷಕ್ಕೂ ಹೆಚ್ಚು ಕಾಲ ಕಲಿತರೂ ಇಂಗ್ಲಿಷ್ ಕರಗತವಾಗದಿದ್ದರೆ ಅದೆಂಥ ಭಾಷೆ? ಅದನ್ನು ಕಲಿತು ಸಿದ್ಧಿಸುವ ಪುರುಷಾರ್ಥವೇನು ? ಚೆನ್ನಾಗಿ ಕಲಿಸಿದರೆ ಹತ್ತು ವರ್ಷಗಳ ಅಭ್ಯಾಸ ಸಾಕು. ಒಂದನೆಯ ತರಗತಿಯಿಂದಲೇ ಇಂಗ್ಲಿಷ್ ಸಾಧನೆಗೆ ತೊಡಗಿಸಿದರೆ ಮಕ್ಕಳು ಇಂಗ್ಲಿಷನ್ನೇ ದೊಡ್ಡ ಶತ್ರುವೆಂದು ತಿಳಿಯುವಂತಾಗಬಹುದು.

ಕನ್ನಡಿಗರಿಗೆ ಬೇರೆ ರಾಜ್ಯದವರಿಗಿಂತ **ಇಂಗ್ಲಿಷ್ ಮೋಹ** ಹೆಚ್ಚು ಎಂದು ಹೇಳುವ ವಾಡಿಕೆಯ ಮಾತಿದೆ. ಅದು ಪೂರ್ತಿ ನಿಜವಲ್ಲ. ಅದು ಕೇವಲ ಮೋಹವಲ್ಲ. ಮಕ್ಕಳ ಉದ್ಯೋಗದ ಭವಿಷ್ಯ, ಉನ್ನತ ಶಿಕ್ಷಣ ಮತ್ತು ಅನಂತರದ ಅವರ ಆರ್ಥಿಕಾಭಿವೃದ್ಧಿ (ವಿದೇಶಿ ಓದು, ಉದ್ಯೋಗಗಳ ಅವಕಾಶ ಇತ್ಯಾದಿ) – ಇವುಗಳನ್ನು ಕುರಿತು ಪೋಷಕರಿಗೆ ಇರುವ ಹೆದರಿಕೆ ಮತ್ತು ಅತಿಯಾದ ನಿರೀಕ್ಷೆಗಳೇ ಅವರ ಇಂಗ್ಲಿಷ್ ಆಯ್ಕೆಗೆ ಕಾರಣ. ಹಾಗೆಯೇ ಸ್ವಾತಂತ್ರ್ಯದ ಅನಂತರ ನಮ್ಮ ಸರ್ಕಾರಗಳು ಜನರ ಉದ್ಯೋಗ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿ ಆ ದಿಕ್ಕಿನಲ್ಲಿ ಹೆಚ್ಚಿನ ಪ್ರಗತಿ ತೋರಿಸದೆ ಜನರು ಉದ್ಯೋಗಕ್ಕಾಗಿ ಹೊರರಾಜ್ಯಗಳತ್ತಲೋ ವಿದೇಶಗಳತ್ತಲೋ ನೋಡುವಂತೆ ಮಾಡಿರುವುದು ಸಮಸ್ಯೆಯ ಇನ್ನೊಂದು ಮುಖ.

ಮಕ್ಕಳ ಶಿಕ್ಷಣ ಮತ್ತು ಶಿಕ್ಷಣ ಮಾಧ್ಯಮದ ಆಯ್ಕೆಯಲ್ಲಿ ಜನರಿಗೆ ಸಂವಿಧಾನ ಕೊಟ್ಟಿರುವ ಸ್ವಾತಂತ್ರ್ಯವನ್ನು ಇಂಗ್ಲಿಷ್ ಶಾಲೆಗಳ ಮೂಲಕ ಹಣ ಗಳಿಸಲು ಹೊರಟಿರುವ ಶಿಕ್ಷಣೋದ್ಯಮಿಗಳು ಚೆನ್ನಾಗಿಯೇ ಚಲಾಯಿಸುತ್ತಿದ್ದಾರೆ. ಸಂವಿಧಾನದ ನಿಬಂಧನೆಗಳ ಅಕ್ಷರ ಸತ್ಯವನ್ನೇ ಎತ್ತಿ ಹಿಡಿಯುವ ನ್ಯಾಯಾಲಯಗಳು ತಮ್ಮ ಸಂದಿಗ್ಧದ ತೀರ್ಪುಗಳಿಂದ ಈ ಖಾಸಗಿ ಉದ್ಯಮಿಗಳ ನೆರವಿಗೆ ಬರುತ್ತವೆ.

೩

**ಭಾಷೆ** ಶಿಕ್ಷಣದ ಒಂದು ಮುಖ್ಯ ಭಾಗ. ಅದು ಜ್ಞಾನದ ವಾಹಕ ಕೂಡ. ನಮ್ಮ ನಮ್ಮ ಭಾಷೆ ಮತ್ತು ಅದರಲ್ಲಿರುವ ಸಾರಸ್ವತ ಸಂಪತ್ತು ನಮ್ಮ ನಮ್ಮ ಇತಿಹಾಸ, ಪರಂಪರೆ ಮತ್ತು ಕಲೆ ಸಂಸ್ಕೃತಿಗಳ ಖಜಾನೆ ಎನ್ನಬಹುದು. ನಮ್ಮ ಭಾಷೆಯಲ್ಲಿ ನಮ್ಮ ಸಾಂಸ್ಕೃತಿಕ ಬಂಡವಾಳ ನಿಕ್ಷಿಪ್ತವಾಗಿರುತ್ತದೆ. ಭಾಷೆಗಳ ಸ್ಥಾನಮಾನಗಳನ್ನು, ಅರ್ಥಾತ್ ಮಾತೃಭಾಷೆಗೆ ಇರುವ ಮಹತ್ವವನ್ನು ಕುರಿತು ೧೯೩೦-೩೨ರ ಕಾಲಘಟ್ಟದಿಂದಲೂ ನಮ್ಮ ಹಿರಿಯ ವಿದ್ವಾಂಸರ ನಡುವೆ ಚರ್ಚೆ, ವಾದಗಳು ನಡೆದಿದ್ದುವು. ಕನ್ನಡ ಭಾಷೆ-ಸಾಹಿತ್ಯಗಳ ಪುನರುಜ್ಜೀವನಕ್ಕಾಗಿ ತಮ್ಮ ಜೀವನವನ್ನು ಮುಡುಪಿಟ್ಟಿದ್ದ ಹೊಸಗನ್ನಡ ಸಾಹಿತ್ಯದ ಹರಿಕಾರ ಬಿ.ಎಂ. ಶ್ರೀಕಂಠಯ್ಯ ಮತ್ತು ಆಧುನಿಕ ಭಾರತದ ಅತ್ಯಂತ ಶ್ರೇಷ್ಠ ಭಾಷಾ ಶಾಸ್ತ್ರಜ್ಞರಲ್ಲಿ ಒಬ್ಬರಾಗಿದ್ದ ಪ್ರೊ. ತೀ.ನಂ. ಶ್ರೀಕಂಠಯ್ಯ ಇವರುಗಳು ತಮ್ಮ ಬರಹ, ಲೇಖನ ಮತ್ತು ಉಪನ್ಯಾಸಗಳಲ್ಲಿ ನಾವು ವಿವಿಧ ಭಾಷೆಗಳಿಗೆ ಕೊಡಬೇಕಾದ ಆದ್ಯತೆ ಮತ್ತು ಮಹತ್ವಗಳ ಬಗೆಗೆ ವಿವಾದಕ್ಕೆ ಎಡೆ ಇಲ್ಲದಂಥ ತಿಳಿವಳಿಕೆಯನ್ನು ಕೊಟ್ಟಿದ್ದರು. ಅದನ್ನು ಅದರ ಪರಿಚಯ ಇಲ್ಲದವರಷ್ಟೇ ಈಗ ಮತ್ತೆ ಕೆಣಕಿ ಗೊಂದಲವೆಬ್ಬಿಸುತ್ತಿದ್ದಾರೆ. ಆ ಕಾಲಕ್ಕೆ ಇಂಗ್ಲಿಷಿನ ಪ್ರಾಧಾನ್ಯ ಮತ್ತು ಅಭಿವೃದ್ಧಿಶೀಲವಾದ ಭಾರತಕ್ಕೆ ಅದರಿಂದಾದ, ಆಗಬೇಕಾಗಿದ್ದ ಪ್ರಯೋಜನಗಳನ್ನು ಮನಸಾರೆ ಒಪ್ಪಲಾಗಿತ್ತು. ಆದರೆ ಆಂಗ್ಲ ಭಾಷೆಯಾಗಲೀ ಅಖಿಲ ಭಾರತದ ಎಲ್ಲ ಭಾರತದ ಭಾಷೆಗಳಿಗೂ ಪೋಷಕ ಸ್ಥಾನದಲ್ಲಿದ್ದ (ಇರುವ) ಸಂಸ್ಕೃತ ಭಾಷೆಯಾಗಲೀ 'ಕನ್ನಡದ ಸ್ಥಾನವನ್ನು ಆಕ್ರಮಿಸುವುದು ಯುಕ್ತವಲ್ಲ' ಮತ್ತು ಕನ್ನಡದ ಕೆಲಸವನ್ನು ಅವು ಮಾಡಲಾರವು ಎಂದು ಘಂಟಾಘೋಷವಾಗಿ ಅವರು ಹೇಳಿದ್ದರು. (ನೋಡಿ : ದಿವಂಗತ ತೀ.ನಂ.ಶ್ರೀ ಅವರ 'ಕಾವ್ಯಾನುಭವ' ಸಂಕಲನದ 'ಕನ್ನಡ ಸಂಸ್ಕೃತವಾದ ಭೂಮಿ' – ಲೇಖನ). ಆ ಕಾಲದ ವಿದ್ವಾಂಸರುಗಳ ಅಭಿಪ್ರಾಯಗಳನ್ನು ಪರಿಶೀಲಿಸಿದಾಗ ಕನ್ನಡಿಗರಿಗೆ ಕನ್ನಡವೇ ತಾರಕ ಮತ್ತು ಭವಿಷ್ಯದ ಸುಖ-ಸಮೃದ್ಧಿಗೆ ಸಾಧನ ಎಂದು ಅವರು ನಂಬಿದ್ದುದು ತಿಳಿಯುತ್ತದೆ; ಕನ್ನಡದ ಅನಂತರ ಸಂಸ್ಕೃತ ಮತ್ತು ಆಂಗ್ಲ ಭಾಷೆಗಳು. ಅವೆರಡರಲ್ಲಿ ಯಾವುದು ಮೊದಲು, ಯಾವುದು ಅನಂತರ ಎಂಬ ನಿರ್ಣಯ ಕಾಲಕಾಲಕ್ಕೆ ಬದಲಾಗಿದೆ. ಮುಂದೆಯೂ ಆಗಬಹುದು. ಅದರ ಬಗೆಗೆ ಅತಿ ಭಾವುಕರಾಗಿ ಅಥವಾ ಆವೇಶಯುಕ್ತರಾಗಿ ಮಾತಾಡುವುದರಿಂದ ಪ್ರಯೋಜನವಿಲ್ಲ. ಅಷ್ಟು ಹಿಂದೆ ಚರ್ಚೆಗೆ ಗ್ರಾಸವಾಗಿದ್ದ ಅವರ ಕೆಲವು ವಾಕ್ಯಗಳನ್ನಷ್ಟೆ ಓದುಗರ ಪರಿಭಾವನೆಗಾಗಿ ಇಲ್ಲಿ ಕೊಟ್ಟಿದೆ :

೧) 'ಇಂಗ್ಲಿಷಿನ ವಿಶಾಲವಾದ ಸಾಹಿತ್ಯ ಕ್ಷೇತ್ರದಲ್ಲಿ ವಿಹರಿಸಿದವರು ಯಾರು ತಾನೆ ಕನ್ನಡವೂ ಅದೇ ರೀತಿ ಬೆಳೆಯಬೇಕೆಂದು ಹಾರೈಸುವುದಿಲ್ಲ! ಇಂಗ್ಲಿಷಿನಲ್ಲಿರುವ ಸಾಹಿತ್ಯದ ಮಾದರಿಗಳು ನಮ್ಮ ಕನ್ನಡಕ್ಕೆ ಮಾತ್ರ ಏಕೆ, ಹಿಂದೂ ದೇಶದ ಸಮಸ್ತ ಭಾಷೆಗಳಿಗೂ ಅನುಕರಣೀಯವಾಗಿವೆ. ಕಾದಂಬರಿ, ಸಣ್ಣಕತೆ, ಪ್ರಬಂಧ, ಲಘು ಗೀತ – ಈ ಮೊದಲಾದ ಸಾಹಿತ್ಯ ರೂಪಗಳೆಲ್ಲವೂ ಇಂಗ್ಲಿಷಿನ ಸಂಪರ್ಕದಿಂದಲೇ ನಮ್ಮಲ್ಲಿ ಪ್ರಚುರವಾದದ್ದು. ಇವುಗಳ ಲೇಖಕರನ್ನು ಇಂದಿಗೂ ಚೋದಿಸುತ್ತಿರುವವು ಇಂಗ್ಲಿಷಿನ ಮಾದರಿಗಳೇ. ಇಂಗ್ಲಿಷಿನಿಂದ ಕನ್ನಡಿಗರು ಕಲಿಯತಕ್ಕದ್ದು ಇನ್ನೂ ಬಹಳವಿದೆ. ವಿಜ್ಞಾನಾದಿ ಆಧುನಿಕ ಶಾಸ್ತ್ರಗಳ ಸಾರವೆಲ್ಲ ಕನ್ನಡಕ್ಕೆ ಇಂಗ್ಲಿಷಿನಿಂದಲೇ

ಇಳಿಯಬೇಕಾಗಿದೆ. ವಸ್ತುಸ್ಥಿತಿಯನ್ನು ಒಪ್ಪಿಕೊಂಡರೆ ತಪ್ಪೇನು ?' (ಪ್ರಸ್ತುತ ಲೇಖಕರ 'ತೀ.ನಂ. ಶ್ರೀಕಂಠಯ್ಯ' ಪುಸ್ತಕ, ಪು.೧೪೯)

೨. 'ನಮ್ಮ ದೇಶಭಾಷೆಗಳಲ್ಲಿ ವೈಜ್ಞಾನಿಕ ಶಾಸ್ತ್ರಗಳನ್ನು ಪ್ರೌಢ ತರಗತಿಗಳಿಗೆ ಬೋಧಿಸ ಬೇಕಾದರೆ, ಆ ವಿಷಯದ ಗ್ರಂಥರಾಶಿ ಬೆಳೆಯಬೇಕಾದರೆ, ಅಖಿಲ ಭಾರತಕ್ಕೆ ಅನ್ವಯಿಸಬಲ್ಲ ಪಾರಿಭಾಷಿಕ ಶಬ್ದಕೋಶವು ನಿರ್ಮಾಣವಾಗಿ ಅಂಗೀಕಾರ ಪಡೆಯ ಬೇಕಾದದ್ದು ಅತ್ಯವಶ್ಯ. ಕೆಲವು ಜಟಿಲ ಸಮಸ್ಯೆಗಳನ್ನು ಇಲ್ಲಿ ಎದುರಿಸ ಬೇಕಾಗಿರುವುದು ನಿಜವಾದರೂ, ಈ ಕೋಶದ ಬಹುಭಾಗ ಸಂಸ್ಕೃತವನ್ನೇ ಅವಲಂಬಿಸಬೇಕೆಂಬುದು ಮಾತ್ರ ನಿರ್ವಿವಾದ.' (ಅದೇ. ಪು.೧೨೧)

೩. 'ಸಂಸ್ಕೃತವಾಣಿ ಇಂದಿಗೂ ಹೇಗೆ ಸಜೀವವಾಗಿ ನಮ್ಮ ಜನತೆಯ ನುಡಿಯಲ್ಲಿ ಹಾಸುಹೊಕ್ಕಾಗಿ ವಿರಾಜಿಸುತ್ತಿದೆ, ಅದರ ಸುವರ್ಣ ಸಂಪತ್ತು ನಮ್ಮ ದೇಶಭಾಷೆ ಗಳನ್ನು ಇಂದಿಗೂ ಹೇಗೆ ಅಲಂಕರಿಸುತ್ತಿದೆ, ಅದರ ಅಮೃತರಸವು ಆಧುನಿಕ ಶಾಸ್ತ್ರ ಸಾಹಿತ್ಯಗಳಿಗೆ ಇಂದಿಗೂ ಹೇಗೆ ತ್ರಾಣದಾಯಕವಾಗಿದೆ ಎಂಬುದನ್ನು ಕೆಲವು ಮಟ್ಟಿಗೆ ವಿಶದಪಡಿಸಿ, ಸಂಸ್ಕೃತ ವಿದ್ವಾಂಸರ ಗಮನವನ್ನು ಸಂಸ್ಕೃತದ ಈ 'ಸೀಮೋಲ್ಲಂಘನ'ದ ಕಡೆಗೆ – ಈ ವಿಜಯಯಾತ್ರೆಯ ಕಡೆಗೆ – ಸೆಳೆಯುವುದು ನನ್ನ ಇಂದಿನ ಉದ್ದೇಶಗಳಲ್ಲಿ ಒಂದು. ಅಲ್ಲದೆ ದೇಶಭಾಷೆಗಳಲ್ಲಿ ಹೀಗೆ ಸಂಸ್ಕೃತವು ಕಾಲದಿಂದ ಕಾಲಕ್ಕೆ ಅಭಿನವ ರೂಪಗಳಲ್ಲಿ ಅವತರಿಸುತ್ತಿರುವಾಗ ಆ ವಿಷಯವಾಗಿ ಸಂಸ್ಕೃತ ವಿದ್ವಾಂಸರು ಆಸಕ್ತಿ ತಳೆಯುವುದು ಅವಶ್ಯ...' (ಅದೇ. ಪು. ೧೨೩)

೪. 'ಕಾಲೇಜಿನ ವಿದ್ಯಾರ್ಥಿಗಳೆಲ್ಲರೂ ಕನ್ನಡವನ್ನು ಓದಲೇಬೇಕೆನ್ನುವುದಕ್ಕೆ ಕನ್ನಡದ ಮೇಲಿನ ಮಮತೆಯೊಂದೇ ಪ್ರೇರಕವಲ್ಲ. ಅದಕ್ಕೆ ಸಂಗತವಾದ ಕಾರಣಗಳೂ ಉಂಟು. ನಮ್ಮಲ್ಲಿ ಪ್ರೌಢ ವಿದ್ಯಾಭ್ಯಾಸವನ್ನು ಮಾಡತಕ್ಕವರು ಎಲ್ಲೋ ಕೆಲವು ಮಂದಿ. ಇವರ ವಿದ್ಯೆಯೆಲ್ಲ ಇವರ ಅಂಗದಲ್ಲೇ ಜೀರ್ಣವಾಗಬೇಕೋ ಅಥವಾ ಅವರಿಂದ ದೇಶದ ಮಿಕ್ಕ ಪ್ರಜೆಗಳಿಗೆ ಉಪಕಾರವಾಗಬೇಕೋ ? ನಮ್ಮ ಪ್ರೌಢ ವಿದ್ವಾಂಸರು ಜ್ಞಾನಪ್ರಚಾರ ಕಾರ್ಯವನ್ನು ಕೈಗೊಂಡ ಹೊರತು ಜನಜೀವನವು ಸಮರ್ಪಕವಾಗುವುದಿಲ್ಲ. ಇದು ಯಾವ ರೀತಿ ನಡೆಯಬೇಕು ? ನಮ್ಮ ದೇಶದಲ್ಲಿ ಇಂಗ್ಲಿಷನ್ನು ಬಲ್ಲವರು ನೂರಕ್ಕೆ ಒಬ್ಬರಾದರೂ ಇದ್ದಾರೋ ಇಲ್ಲವೋ ತಿಳಿಯದು (ಈ ಮಾತು ೧೯೪೦ಕ್ಕೆ ಮುಂಚೆ ಬಂದದ್ದು – ಲೇಖಕ). ಮಿಕ್ಕವರಿಗೆ ಗೊತ್ತಾಗುವ ಭಾಷೆ ಕನ್ನಡವೊಂದೇ. (ಅದನ್ನೂ ಹಲವರು ಓದಿ ಬರೆಯಲಾರರು). ವಿದ್ವಾಂಸರ ಜ್ಞಾನವು ಇವರಿಗೆ ಮುಟ್ಟಬೇಕಾದರೆ ಕನ್ನಡದ ಮೂಲಕವೇ ಹರಿಯಬೇಕು. ಈ ಜ್ಞಾನ ಪ್ರದಾನಕ್ಕೆ ದೇಶದಲ್ಲಿರುವ ವಿದ್ಯಾವಂತರೆಲ್ಲರೂ ತೊಡಗಿದರೂ ಸಾಲದಿರುವಾಗ ಇವರಲ್ಲಿ ಅನೇಕರಿಗೆ ಅದರ ಸಾಧನವಾದ ಕನ್ನಡದಲ್ಲಿ ಸಾಕಾದಷ್ಟು ವ್ಯುತ್ಪತ್ತಿ ಇಲ್ಲದಿದ್ದರೆ ದೇಶಕ್ಕೆ ಎಷ್ಟು ನಷ್ಟ!... ಇಂಗ್ಲಿಷಿನ ಜ್ಞಾನವೇನೋ ಸದ್ಯದಲ್ಲಿ ನಮಗೆ ಅಗತ್ಯವಾಗಿದ್ದರೂ ಇಂಗ್ಲಿಷ್ ಭಾಷೆಯ ಮೂಲಕವೇ ಹೈಸ್ಕೂಲು ಕಾಲೇಜುಗಳಲ್ಲಿ ಪಾಠಗಳು ನಡೆಯುತ್ತಿರುವುದರಿಂದ ವಿದ್ಯಾರ್ಥಿಗಳ ಕಾಲವೂ ಶಕ್ತಿಯೂ ತುಂಬ ಅಪವ್ಯಯವಾಗುತ್ತಿದೆ. ಸದ್ಯಕ್ಕೆ ಹೈಸ್ಕೂಲುಗಳಲ್ಲಾದರೂ ದೇಶಭಾಷೆಯಾದ ಕನ್ನಡದ ಮೂಲಕ ಶಿಕ್ಷಣವನ್ನು ಕೊಡುವುದು ಅತ್ಯಗತ್ಯ. ಇದನ್ನು ವಿದ್ಯಾ ವಿಧಾಯಕರೆಲ್ಲರೂ ಒಪ್ಪುತ್ತಾರೆ. ಹೈಸ್ಕೂಲುಗಳಲ್ಲಿ ಪಾಠ ಹೇಳತಕ್ಕ ಉಪಾಧ್ಯಾಯರು ವಿಶ್ವವಿದ್ಯಾನಿಲಯದ ಪದವೀಧರರು. ಕನ್ನಡ ಚೆನ್ನಾಗಿ ಬಾರದಿದ್ದರೆ ಇವರು ಕನ್ನಡದಲ್ಲಿ ಶಾಸ್ತ್ರೀಯ ವಿಷಯಗಳನ್ನು ಹುಡುಗರಿಗೆ ಬೋಧಿಸುವುದು ಹೇಗೆ ?' (ಅದೇ. ಪು.೧೩೧)

ಆಧುನಿಕ ಜೀವನ ಬಹುರೂಪಿಯಾದದ್ದು. ಅದು ಒಂದು ದೇಶಕ್ಕಾಗಲಿ ಒಂದು ಭಾಷೆಗಾಗಲಿ ಸೀಮಿತವಾಗಿ ನಿಲ್ಲುವುದಿಲ್ಲ. ಲೋಕವ್ಯವಹಾರದಲ್ಲಿ ತನ್ನನ್ನು ತೊಡಗಿಸಿ ಕೊಳ್ಳುವ ಯಾವ ವಿದ್ಯಾವಂತನೂ ಈಗ ಕೇವಲ ಒಂದು ಭಾಷೆಯನ್ನು ಕಲಿತು ಅದರ ಸಾರಸ್ವತ ಸಂಪತ್ತನ್ನು ಸವಿದು ತೃಪ್ತನಾಗಲಾರ. ಕನ್ನಡಿಗರು ಕನ್ನಡಕ್ಕೆ ಅಗ್ರಸ್ಥಾನವನ್ನು ಕೊಟ್ಟು ಅದರ ಪೂರ್ಣ ಪ್ರಯೋಜನವನ್ನು ಪಡೆಯುತ್ತ ಇನ್ನೂ ಬೆಳೆದು ಪ್ರಪಂಚದ ಇತರ ಭಾಷೆ ಸಾಹಿತ್ಯಗಳ ಜೊತೆಗೆ ಹೆಗಲೆಣೆಯಾಗಿ ನಿಲ್ಲಬೇಕಾಗಿರುವ ಕನ್ನಡಕ್ಕೆ ಸಂಸ್ಕೃತ ಭಾಷೆಯ ಸಹಾಯ ಬೇಕೇ ಬೇಕು. ಆದ್ದರಿಂದ ಕೇವಲ ಧಾರ್ಮಿಕ ಕಾರಣಗಳಿಗಾಗಿ ಮಾತ್ರವಲ್ಲ, ಲೌಕಿಕ ಏಳಿಗೆಗಾಗಿಯೂ ಸಂಸ್ಕೃತದ ಅಧ್ಯಯನ ಅಗತ್ಯವಾಗಿದೆ. ನಮ್ಮ ವಿದ್ಯಾವಂತ ಕುಟುಂಬಗಳು ತಮ್ಮ ಮಕ್ಕಳಿಗೆ ಸಂಗೀತ ನೃತ್ಯ ಚಿತ್ರಕಲೆಗಳನ್ನು ಕಲಿಸುವಂತೆಯೇ, ಆರೋಗ್ಯ ಪಾಠಗಳನ್ನು ತಿಳಿದಿರಬೇಕೆಂದು ಬಯಸುವಂತೆಯೇ, ಸಂಸ್ಕೃತ ಭಾಷೆಯನ್ನು ಕೂಡ ಕಲಿಸಬೇಕೆಂಬ ಒಂದು ಆದರ್ಶವನ್ನು ಇರಿಸಿಕೊಂಡರೆ ಖಂಡಿತವಾಗಿಯೂ ನಮ್ಮ ಭಾಷೆ, ನಮ್ಮ ಬದುಕು ಹಸನಾಗುತ್ತವೆ. ನಮ್ಮ ಸಂಸ್ಕೃತಿಯೂ ಗೌರವಕ್ಕೆ ಪಾತ್ರವಾಗುತ್ತದೆ. ಅನಂತರ ಮತ್ತು ಅದರ ಜೊತೆ ಜೊತೆಗೇ ನಮ್ಮ ಶಾಲಾ ಕಾಲೇಜುಗಳಲ್ಲಿ ಇಂಗ್ಲಿಷ್ ಭಾಷೆಯ ಶಿಕ್ಷಣಕ್ಕೂ ಪ್ರಾಮುಖ್ಯವನ್ನು ಕೊಡಲೇಬೇಕು. ಆದರೆ ಕನ್ನಡಕ್ಕೆ ಬದಲಿಯಾಗಿ ಸಂಸ್ಕೃತ ಅಥವಾ ಇಂಗ್ಲಿಷ್ ಎಂದು ಯಾವಾಗಲೂ ಆಗಕೂಡದು. ಇಂಗ್ಲಿಷ್ ಭಾಷೆ ಸದ್ಯಕ್ಕೆ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಹೆಚ್ಚು ವ್ಯಾಪಕವಾಗಿ ಬೆಳೆದು ವ್ಯವಹಾರ ಮಾಧ್ಯಮವಾಗಿರುವ ಭಾಷೆ. ಹಾಗೆಯೇ ವಿಜ್ಞಾನ, ಸಾಹಿತ್ಯ ಮತ್ತು ಇತರ ಲಲಿತ ಕಲೆಗಳ ವಿಸ್ತಾರ ಪ್ರಪಂಚಕ್ಕೂ ಇದು ಹೆದ್ದಾರಿಯಾಗಿರು ವುದನ್ನು ಮರೆಯುವಂತಿಲ್ಲ. ಈಗ ಇಂಗ್ಲಿಷಿನ ಕಲಿಕೆಗೆ ಇರುವ ಸೌಲಭ್ಯಗಳ ಗುಣಮಟ್ಟ ಏನೇನೂ ಸಾಲದು. ಅದು ಇನ್ನಷ್ಟು ಉತ್ಕೃಷ್ಟಗೊಳ್ಳಬೇಕು.

ಭಾಷೆಗಳನ್ನು ಕುರಿತ ನಮ್ಮ ಪರ್ಯಾಲೋಚನೆಯಲ್ಲಿ ನಮ್ಮ **ಸೋದರ ಭಾಷೆ**ಗಳಾದ ತೆಲುಗು, ತಮಿಳು, ಮಲೆಯಾಳ, ತುಳು ಭಾಷೆಗಳ ಬಗೆಗೂ ನಮ್ಮ ಆಲೋಚನೆ ಹರಿಯಬೇಕು. ಈ ಭಾಷೆಗಳ ಸಂಪರ್ಕ, ಕೊಳು-ಕೊಡೆಗಳ ಮೂಲಕ ನಮ್ಮ ಸಾಹಿತ್ಯಕ್ಕೆ ಇನ್ನಷ್ಟು ಕಸುವು ಬರಬಲ್ಲುದು. ನಮ್ಮ ರಾಜಕೀಯ ವ್ಯವಸ್ಥೆಯಿಂದಾಗಿ ದೂರದರ್ಶನ ಮೊದಲಾದ ಮಾಧ್ಯಮಗಳ ಮೇಲೆ ಕೇಂದ್ರ ಸರ್ಕಾರದ ನಿಯಂತ್ರಣವಿದ್ದು ಹಿಂದಿ ಭಾಷೆ ನಾವು ಬೇಡವೆಂದರೂ ಹಿಂಬಾಲಿಗಿನಿಂದ ತನ್ನ ಆಕ್ರಮಣವನ್ನು ಮುಂದುವರಿಸುತ್ತಿದೆ. ಅದರ ಪ್ರಯೋಜನಗಳು ಏನೇ ಇರಲಿ, ಅದರ ಕಲಿಕೆ ಮತ್ತು ಅದರ ಸ್ಥಾನಮಾನಗಳ ಬಗೆಗೆ ಯಾರೂ ಶಿಫಾರಸು ಮಾಡುವ ಅಗತ್ಯವಿಲ್ಲ. ಅದರ ಆಕ್ರಮಣಕ್ಕೆ ತಡೆಹಾಕುವುದು ಹೇಗೆಂದು ಬೇಕಾದರೆ ಯೋಚಿಸಬಹುದು. ಅವಸರದಲ್ಲಿ ಇಂಗ್ಲಿಷ್ ಕಲಿತು ಎಲೆಕ್ಟ್ರಾನಿಕ್ಸ್ ಶಿಕ್ಷಣ ಪಡೆದು ಪಶ್ಚಿಮಕ್ಕೆ ಹಾರಿ 'ಪರದೇಶಿ'ಗಳಾಗುವ ಆದರ್ಶವನ್ನು ಬಿಟ್ಟು ನಮ್ಮ ನೆರೆಹೊರೆಯ ರಾಜ್ಯಗಳನ್ನೂ ಅಲ್ಲಿನ ಪ್ರಾಕೃತಿಕ ಸೌಂದರ್ಯವನ್ನೂ ಹೋಗಿ ನೋಡುವ ಆಸೆಯನ್ನು ಏಕೆ ಬೆಳೆಸಿಕೊಳ್ಳಬಾರದು ? ಕನ್ನಡದ ಜೊತೆಗೆ ಅದರ ಸೋದರಿಯರೆಂದು ಧಾರಾಳವಾಗಿ ಹೇಳಬೇಕಾದ ಭಾಷೆಗಳನ್ನು ನಾವು ಏಕೆ ಕಲಿಯಬಾರದು ? ಈ ಬಗೆಗೆ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಸಾಕಷ್ಟು ಸೌಲಭ್ಯಗಳಿಲ್ಲದಿರುವುದು ಒಂದು ದೊಡ್ಡ ಕೊರತೆ. ಸರಸ್ವತಿ ಎನ್ನುವವಳು ಬಹುಭಾಷಾಮಯಿ. ಕನ್ನಡದ ವ್ಯಾಕರಣಕಾರನೊಬ್ಬ ಆಕೆಯನ್ನು 'ಸರ್ವಭಾಷಾ ಸರಸ್ವತಿ' ಎಂದು ಕರೆದಿದ್ದಾನೆ. ದಕ್ಷಿಣದ ಭಾಷೆಗಳು ತಮ್ಮ ದ್ರಾವಿಡ ಮೂಲದ ತವರಿನ ಸಂಬಂಧವನ್ನು ಉಳಿಸಿಕೊಂಡು ಬೆಳೆದಿದ್ದರೆ ಉತ್ತರದ ಹಿಂದೀ ಭಾಷೆಯ ಪ್ರಾಬಲ್ಯ ಮತ್ತು ಅಪಾಯಗಳನ್ನು ಹೆಚ್ಚು ಸಮರ್ಥವಾಗಿ ಎದುರಿಸಬಹುದಾಗಿತ್ತು. ಪ್ರಪಂಚದಾದ್ಯಂತ ದಿಕ್ಪಾಪಾಲಾಗಿ ಹೋಗಿ ನೆಲೆಯಿಲ್ಲದೆ ಅಲೆಯುತ್ತಿದ್ದ ಯಹೂದಿ ಜನಾಂಗವು ಇಸ್ರೇಲ್ ರಾಜ್ಯ ಸ್ಥಾಪನೆಯಾಗಿ ತಮಗೊಂದು ತಾಯ್ನಾಡು ದೊರೆಯಿತೆಂದ ಕೂಡಲೆ ಮೃತಭಾಷೆಯಾಗಿ ಯಾರ ನಾಲಗೆಯ ಮೇಲೂ ಉಳಿಯದೆ ಅಳಿಸಿಹೋಗಿದ್ದ ಹೀಬ್ರೂ ಭಾಷೆಗೆ ಪುನರ್ಜನ್ಮ ಕೊಟ್ಟು ಆಡುಭಾಷೆಯನ್ನಾಗಿ ಮಾಡಿಕೊಂಡು ಅದರ ಮೂಲಕ ಶಿಕ್ಷಣ ಮತ್ತು ಆಡಳಿತ ವ್ಯವಹಾರಗಳನ್ನು ಆರಂಭಿಸಿದ್ದು ಒಂದು ರೋಮಾಂಚಕಾರಿ ಪ್ರಯೋಗ. ನಮ್ಮ ದಕ್ಷಿಣ ರಾಜ್ಯಗಳ ಭಾಷಾವಿದ್ವಾಂಸರುಗಳಲ್ಲಿ ಕೆಲವರಾದರೂ ಮೇಧಾವಿಗಳು ಮನಸ್ಸು ಮಾಡಿದರೆ ನಮ್ಮ ದ್ರಾವಿಡ ರಾಜ್ಯಗಳಿಗೆಲ್ಲ ಸಮಾನವಾದ ಒಂದೇ ಒಂದು ಭಾಷೆಯನ್ನು ರೂಪಿಸುವ ಒಂದು ಪ್ರಯೋಗವನ್ನು ಮಾಡಲಾರರೆ ? ವಿಶ್ವದೆಲ್ಲೆಡೆ ಅರ್ಥವಾಗುವಂಥ ಎಸ್ಪರಾಂಟೊ ಭಾಷೆಯ ಸಿದ್ಧತೆ ಪ್ರಸಾರಗಳಲ್ಲಿ ನಿರತರಾದವರು ಇನ್ನೂ ಇರುವಾಗ ನಮ್ಮ ಈ ಕನಸನ್ನು ಯಾರೂ ಗೇಲಿ ಮಾಡುವ ಅಗತ್ಯವಿಲ್ಲ. ಶ್ರೀಮಾನ್ ಚಂದ್ರಬಾಬು ನಾಯ್ಡು ಅವರು ಮಹತ್ವಾಕಾಂಕ್ಷೆಯಿಂದ ಕುಪ್ಪಮ್‌ನಲ್ಲಿ ಸ್ಥಾಪಿಸಿರುವ ಹೊಸ **ದ್ರಾವಿಡ ವಿಶ್ವವಿದ್ಯಾನಿಲಯವು** ಇಂಥ ಮಹತ್ಸಾಧನೆಗೆ ನಾಂದಿಯಾದೀತೆ ಎಂದು ನೋಡಬೇಕು.

ಈ ರಾಜ್ಯದ ಶೈಕ್ಷಣಿಕ ಸಮಸ್ಯೆಗಳ ಪರಿಹಾರಕ್ಕೂ ಮಿಲಿಟೆಂಟ್ ಸಂಘಟನೆಯೊಂದು ಬೇಕಾಗಬಹುದೆ ಅಂದುಕೊಂಡೆವು. ರಾಜ್ಯೋತ್ಸವಕ್ಕೆಂದು ಮೀಸಲಾಗಿರುವ ನವೆಂಬರ್ ತಿಂಗಳ ಎರಡನೆಯ ವಾರದಲ್ಲಿ **ಕರುನಾಡ ಸೇನೆ** ಎಂಬ ಹೆಸರಿನ ಸಂಘಟನೆಯೊಂದನ್ನು ಬೆಂಗಳೂರಿನ ಸಮಾನ ಮನೋಧರ್ಮದ ಕೆಲ ಗೆಳೆಯರು ಉದ್ಘಾಟಿಸಿದರು. ನಗರದಲ್ಲಿನ ಕನ್ನಡಿಗರ ಸಂಕಷ್ಟಗಳ ನಿವಾರಣೆಗಷ್ಟೇ ಅದು ತನ್ನ ಕಾರ್ಯ ವ್ಯಾಪ್ತಿಯನ್ನು ಮೊಟಕು ಮಾಡದೆ ಇಡೀ ರಾಜ್ಯದ ಕನ್ನಡಿಗರ ದಿಟವಾದ ಸಮಸ್ಯೆಗಳೆಲ್ಲವನ್ನೂ ಕೈಗೆತ್ತಿಕೊಂಡು ಹೋರಾಡುವಂಥ ಸಂಘಟನೆಯಾಗಿ ಅದು ಬೆಳೆಯುವುದಾದರೆ ಅದಕ್ಕಿಂತ ಸಂತೋಷದ ಸಂಗತಿ ಮತ್ತೊಂದಿಲ್ಲ.

**ಎಚ್. ಜಿ. ಸಣ್ಣಗುಡ್ಡಯ್ಯ**
ನಂ. ೧, 'ಎ' ಅಡ್ಡರಸ್ತೆ, ಸಿದ್ಧಗಂಗಾ ಬಡಾವಣೆ, ತುಮಕೂರು - ೫೭೨ ೧೦೨

# ಒಂದು ಊರಿನ ಕಥೆ

■ ದಿನೇಶ್ ಹಾಸನ್



**ಈ** ಊರಿನ ಕಥೆ ಬರೆಯುವಾಗ, ನಮ್ಮ ಸೀಮೆಯಲ್ಲಿ ಇದು ಹೇಗೆ ಎಲ್ಲ ನಿಯಮಗಳಿಗೆ ಅಪವಾದ ಆಗಿದೆ ಕೆಲವು ರೀತಿಗಳಲ್ಲಿ ಅನ್ನೋ ಕುತೂಹಲ ನನಗೆ. ಈ ಊರು ನಮ್ಮ ದೇಶದ ಬೇರೆಲ್ಲ ಕಡೆಗಳಿಗಿಂತ ಚಲನ ಶೀಲತೆಗೆ ತನ್ನನ್ನು ತಾನೇ ಒಡ್ಡಿಕೊಂಡ ಸ್ಥಳ. ಕಾನಕಾನಹಳ್ಳಿ ಕನಕಪುರ ಆದಂತೆ, ಗೊಲ್ಲರಕೇರಿ ಎಂದು ಇದ್ದ ಹೆಸರನ್ನು ಬಿಟ್ಟು ಈಗ ಈ ಊರು ಯಾದವಪುರ ಆಯಿತು. ಬೆಂಗಳೂರು ಮತ್ತು ಮಂಡ್ಯದ ನಡುವೆ ಮಧ್ಯ ಚುಕ್ಕಿಯಂತೆ ಇರುವ ಈ ಊರಿನ ಜನಸಂಖ್ಯೆ ಸುಮಾರು ಮೂರು ಸಾವಿರ. ಸುತ್ತಮುತ್ತಣ ಪ್ರದೇಶದಲ್ಲಿ ಇದೊಂದು ಮಾದರಿ ಹಳ್ಳಿ ಅಥವಾ ಅರೆ-ಪಟ್ಟಣ. ಇಲ್ಲಿನ ಪ್ರೈಮರಿ ಸ್ಕೂಲಿನ ಹೆಸರು ಸಂಜಯಗಾಂಧಿ ಪ್ರೈಮರಿ ಶಾಲೆ. ಅದರ ನಂತರ ಮಕ್ಕಳು ಹೋಗುವುದು ವಾಜಪೇಯಿ ಮಾಧ್ಯಮಿಕ ಶಾಲೆಗೆ. ಇತ್ತೀಚೆಗೆ ಸ್ಥಾನ ತ್ಯಜಿಸಿದ ಮುಖ್ಯಮಂತ್ರಿಯೊಬ್ಬರ ಹೆಸರಿನಲ್ಲಿ ಒಂದು ಹೈಸ್ಕೂಲ್ ಶುರು ಮಾಡುವ ಪ್ರಸ್ತಾವನೆ ನಡೆಯುತ್ತಿದೆ. ಕೇವಲ ನೂರೈವತ್ತು ಮಕ್ಕಳಿಗಾಗಿ ಹೈಸ್ಕೂಲ್ ತೆರೆಯುವುದು ಸೂಕ್ತವಲ್ಲ ಎಂಬುದು ಜಿಲ್ಲಾ ಪಂಚಾಯತಿಯ ಅನಿಸಿಕೆ. ನಿವೃತ್ತ ಮುಖ್ಯಮಂತ್ರಿಗಳು ಈ ಸಮಸ್ಯೆಯ ಪರಿಹಾರಕ್ಕೆ ಈ ಶಾಲೆ ನಡೆಸುವ ಪೂರ್ಣ ವೆಚ್ಚವನ್ನು ತಾವೇ ಭರಿಸಲು ಸಿದ್ಧರಾಗಿದ್ದಾರೆ, ಆದರೆ ಹಾಗೆ ಮಾಡಲು ಶಾಲೆಗೆ ಇಟ್ಟ ಹೆಸರನ್ನು ಎಂದೂ ಬದಲಾಯಿಸಬಾರದು ಎಂಬ ಕರಾರನ್ನು ಊರು ಪಂಚಾಯತಿಯ ಮೂಲಕ ಒಪ್ಪಿಕೊಳ್ಳಬೇಕು ಅಂತ ಹಠ ಹಿಡಿದಿದ್ದಾರೆ ಅಂತ ಒಂದು ಪುಕಾರಿದೆ. ಮಹಾತ್ಮ ಗಾಂಧಿ ಪ್ರಾಥಮಿಕ ಶಾಲೆಯನ್ನು ಸಂಜಯ ಗಾಂಧಿ ಎಂಬ ಯುವ ಮಹಾತ್ಮನ ಸ್ಮಾರಕ ಮಾಡಲು ಅವರೇ ಕಾರಣ ಎಂದೂ ಗುಲ್ಲಿದೆ. ಆದರೆ ಗುಲ್ಲಿನ ಸೊಲ್ಲಿನಲ್ಲಿ ಬದುಕದ ಊರು ಯಾವುದಿದೆ ನೀವೇ ಹೇಳಿ.

ಹೊಸ ಚತುಷ್ಪದ ಹೆದ್ದಾರಿಯಿಂದ ಈ ಊರು ನಾಲ್ಕು ಕಿಲೋಮೀಟರ್ ದೂರ ಅಷ್ಟೆ. ಹೀಗಾಗಿ ತಮ್ಮ ಜಮೀನನ್ನು ಸರ್ಕಾರಕ್ಕೆ ಕಾಸಿಗೆ ಮಾರಿ ದುಡ್ಡಿಗೆ ನಾಲ್ಕಾರು ವರ್ಷ ಕಾಯಬೇಕಾಗಿಲ್ಲ ಎಂದು ಕೆಲವು ಜನಕ್ಕೆ ನೆಮ್ಮದಿ. ಇನ್ನೂ ಸ್ವಲ್ಪ ಹೆದ್ದಾರಿಗೆ ಹತ್ತಿರವಿದ್ದರೆ ಮಧ್ಯವರ್ತಿಗಳಾಗಿ ಒಂದಷ್ಟು ಕೋಟಿ ಗಳಿಸಿ ಬೆಂಗಳೂರಿನಲ್ಲಿ ಗ್ರಾನೈಟ್ ಗೋಡೆಗಳ ಮಧ್ಯ ಜೀವಿಸಬಹುದಾಗಿತ್ತಲ್ಲಾ ಅಂತ ಕೆಲವರಿಗೆ ಕೊರಗು. ಅದೇನೇ ಆದರೂ, ಬದುಕು ಯಾದವಪುರದಲ್ಲಿ ಆರಾಮವಾಗಿ ನಡೆಸಬಹುದಂತಹದ್ದು. ಹೆಚ್ಚು ಕಡಿಮೆ ಬೆಂಗಳೂರಿನಂಥದ್ದೇ: ಬಿಸಿಲಿನಲ್ಲಿ ಬೇಯಿಸದ, ಚಳಿಯಲ್ಲಿ ನಡುಗಿಸದಂತಹ ಹವಾಮಾನ. ಮಳೆ ಬೀಳದೆ ಇದ್ದರೂ ಮಂಡ್ಯದ ನಾಲೆಗಳಿಂದ ಯಥೇಚ್ಛವಾಗಿ ನೀರು ಬರುತ್ತದೆ. ರಾಗಿ, ಭತ್ತ, ಕಬ್ಬು ಅಥವಾ ಈರುಳ್ಳಿ, ಟೊಮೆಟೊ ಹೀಗೆಲ್ಲಾ ತಮಗಿಷ್ಟ ಬಂದ ಬೆಳೆ ಮಾಡಿ ಅಷ್ಟೊಂದು ಖರ್ಚಿಲ್ಲದೆ ಮಂಡ್ಯಕ್ಕೋ, ಬೆಂಗಳೂರಿಗೋ ಸಾಗಹಾಕಿ ಸಾಕಷ್ಟು ಪ್ರತಿಫಲ ಯಾದವಪುರದ ರೈತರು ಪಡೆಯುತ್ತಾರೆ.

ಕನ್ನಡದ ಪ್ರಮುಖ ಸಾಹಿತಿಯೊಬ್ಬರು ಕನ್ನಡಿಗರು ದುರಭಿಮಾನಕ್ಕೆ ಬಲಿಯಾಗದೆ ತಮ್ಮ ನಾಡನ್ನು ಮಿನಿ ಭಾರತ ಎಂದೇ ಭಾವಿಸಿ ಸರ್ವ ಧರ್ಮ, ಸರ್ವ ಭಾಷಾ ಸಮನ್ವಯತೆಯನ್ನು ಆದರ್ಶವಾಗಿಟ್ಟುಕೊಂಡು, ಕರ್ನಾಟಕವು ಕನ್ನಡವಿಲ್ಲದಿದ್ದರೂ ಇಡೀ ರಾಷ್ಟ್ರಕ್ಕೆ ಮಾದರಿಯಾಗಬೇಕೆಂದು ತುಂಬ ದಿನದಿಂದ ಹಂಬಲಿಸುತ್ತಿದ್ದಾರೆ. ಧರ್ಮದ ಬಗ್ಗೆಯಾದರೂ ಅವರ ಹಂಬಲ ಯಾದವ ಪುರದಲ್ಲಿ ಸಾಕಾರವಾಗಿದೆ ಎಂದು ಧಾರಾಳವಾಗಿ ಹೇಳಬಹುದು. ಒಂದು ಸಮಯ ನೀವೇನಾದರೂ ಇಲ್ಲಿಗೆ ಭೇಟಿ ನೀಡಿದರೆ, ಊರ ಮುಂದೆ ಒಂದು ಚಿಕ್ಕ, ಚೊಕ್ಕ ಹನುಮಂತರಾಯನ ಗುಡಿ ಕಾಣುತ್ತೀರಿ. ಊರ ಮುಖ್ಯ ದಾರಿಯಲ್ಲಿ, ಪಂಚಾಯತಿ ಕಚೇರಿ ಹಾದುಹೋದರೆ, ಬೀದಿಯ ಅಂಚಿನಲ್ಲಿ ನಿಮ್ಮ ಕಣ್ಣಿಗೆ ಬೀಳುವುದು ಚೆನ್ನಕೇಶವನ ದೇವಸ್ಥಾನ. ತಮ್ಮ ಕುದುರೆಗಳಿಗೆ ಕುಡಿಯಲು ಊರಿನ ಜನ ನೀರು ಕೊಟ್ಟರು ಅಂತ ಹೊಯ್ಸಳರು ಕೃತಜ್ಞತೆಯ ಪ್ರತೀಕವಾಗಿ ಈ ದೇವಸ್ಥಾನ ಕಟ್ಟಿದರು ಎಂದು ಒಂದು ಸ್ಥಳಪುರಾಣ ಹೇಳುತ್ತದೆ. ಸಂಪ್ರದಾಯವಾದಿಗಳಿಗೆ ಸ್ವಲ್ಪ ಕಿರಿಕಿರಿಯಾಗುವ ಅಂಶ ಎಂದರೆ, ಈ ಎರಡೂ ದೇವಸ್ಥಾನಗಳ ಅರ್ಚಕರು ಬ್ರಾಹ್ಮಣರಲ್ಲ. ಯಾವ ಜಾತಿಯ ಹೆಸರನ್ನೂ ಬಾಯಿಬಿಟ್ಟು ಎನ್ನಬಾರದೆಂಬ ನಿಯಮ ನಮ್ಮಲ್ಲಿ ಈಗ ರೂಢಿಯಾಗುತ್ತಿರುವ ವಿಚಾರ ನಿಮಗೆ ಗೊತ್ತಿದ್ದದ್ದೇ. ಆದ್ದರಿಂದ ಅರ್ಚಕರ ಹುಟ್ಟಿನ ಬಗ್ಗೆ ಮಾತು ಬೇಡ. ಸರಿ, ಊರಿನ ಹೊರಗೆ ಒಂದು ಮಸೀದಿ ಇದೆ. ರಮ್‌ಜಾನ್ ಸಮಯದಲ್ಲಿ ಮುಸ್ಲಿಮರು ತಜಿಯೊಂದನ್ನು ಯಾವ ಅಡ್ಡಿಯಿಲ್ಲದೆ ಉತ್ಸವ ಮಾಡುತ್ತಾರೆ. ಜನ ಬಾಗಿಲಿಗೆ ಬಂದು ಕಾಣಿಕೆ ಕೊಟ್ಟು ಬತ್ತಾಸು ತಿನ್ನುತ್ತಾರೆ. ಮಸೀದಿಯಿಂದ ಒಂದು ಐದಾರು ಮಾರು ದೂರದಲ್ಲಿ ಒಂದು ಚರ್ಚ್ ಇದೆ. ಅದರ ಸೂರಿನಿಂದ ಹಾಕಿರುವ ಬೋರ್ಡು ''ಶ್ರೀ ಕ್ರಿಸ್ತ ದೇವಾಲಯ'' ಎಂದು ಅನೌನ್ಸ್ ಮಾಡುತ್ತದೆ. ಯಾವ ಸಂದರ್ಭದಲ್ಲೂ ಈ ಊರಿನಲ್ಲಿ ಮತೀಯ ಗಲಭೆಗಳು ನಡೆದಿಲ್ಲ.

ಯಾದವಪುರದ ಜನ ತಮ್ಮ ಪಾಡಿಗೆ ತಾವು ತಲೆತಲಾಂತರದಿಂದ ನಿರಾಳವಾಗಿ ಜೀವನ ನಡೆಸುತ್ತಿದ್ದಾರೆ. ಎಲ್ಲರ ಬದುಕಿನಲ್ಲಿರುವಂತೆ ಸಣ್ಣ ಪುಟ್ಟ ತಾಪತ್ರಯ ಅವರನ್ನು ಕಾಡುತ್ತದೆ. ಅದೇನೂ ಮಹಾವಿಷಯವಲ್ಲ. ಮನರಂಜನೆ ಬೇಕೆಂದರೆ ಜನ ಮದ್ದೂರಿಗೋ ರಾಮನಗರಕ್ಕೋ ಸ್ಕೂಟರ್‌ನಲ್ಲಿ ಹೋಗುತ್ತಾರೆ. ಟೆಲಿವಿಷನ್ ನೋಡುತ್ತಾರೆ. ಪರಂಪರೆಯ ಕಂದಾಚಾರಗಳ ಗುಲಾಮರಾಗಿರದೆ, ಬದುಕಿನ ಸಾಧ್ಯತೆಗಳನ್ನು ಎಷ್ಟರಮಟ್ಟಿಗೆ ಸ್ಥಿರೀಕರಣ ಮಾಡಲು

ಸಾಧ್ಯವೋ ಅಷ್ಟರಮಟ್ಟಿಗೆ ಮಾಡಿ ಬದುಕುತ್ತಿದ್ದಾರೆ.

ಇಲ್ಲಿಯತನಕ ನನ್ನ ಪುರಾಣದಲ್ಲಿ ಯಾದವಪುರದ ಬದುಕು ಸಾಹಿತ್ಯದ ಸಾಮಗ್ರಿಯೋ ಅಥವಾ ಸಮಾಜಶಾಸ್ತ್ರದ ಅಭ್ಯಾಸದಲ್ಲಿ ಒಂದು ಅಧ್ಯಾಯವೋ ಅನ್ನೋ ಗೊಂದಲ ನಿಮ್ಮನ್ನು ಕಾಡಿದೆ ಅನ್ನೋದು ನಿಮಗೆ ಹೊಳೆದೇ ಹೊಳೆದಿದೆ. ಚಲನಶೀಲರು, ಸಹಿಷ್ಣುಗಳು, ಸಂಪ್ರದಾಯವಾದಿಗಳಲ್ಲ ಎಂದೆಲ್ಲ ನಾನು ಇವರ ಗುಣಗಾನ ಮಾಡಿರುವುದನ್ನು ಕೇಳಿ, ಅಲ್ಲಿಗೆ ವಲಸೆ ಹೋಗಲು ಅಥವಾ ನಿಮ್ಮ ವಿಶ್ರಾಂತಿ ಜೀವನವನ್ನು ಅಲ್ಲಿ ಕಳೆಯುವ ಅನಿಸಿಕೆ ನಿಮ್ಮ ಮನಸ್ಸಿನಲ್ಲಿ ಬೀಡುಬಿಟ್ಟಿದ್ದರೆ ಅಚ್ಚರಿಯೇನಲ್ಲ. ಅಂಥ ಇಚ್ಛೆ ಇದ್ದರೆ, ಬಸ್ಸಿನಲ್ಲೋ, ರೈಲಿನಲ್ಲೋ ಹೋಗಿ ಆ ಊರಿನ ಹತ್ತಿರ ಇಳಿಯಿರಿ. ಒಂದು ಆಟೋ ಹಿಡ್ಕೊಂಡು ಯಾದವಪುರ ಹೇಗಿದೆ ಅಂತ ನೀವೇ ನೋಡಿ. ನನ್ನ ಸಲಹೆ ಒಪ್ಕೊಳ್ಳಕ್ಕೆ ಮುಂಚೆ ಇಲ್ಲೀವರೆಗೆ ನಾನು ಹೇಳದೆ ಇರೋ ಒಂದು ವಿಷಯ ನಾನು ನಿಮಗೆ ತಿಳಿಸಬೇಕು. ಅದನ್ನ ಕೇಳಕ್ಕೆ ಮುಂಚೆ ಯಾದವಪುರದ ಸಂತೆಮಾಳದ ವಿಚಾರ ತಿಳಿಸಕ್ಕೆ ಅಪ್ಪಣೆ ಕೊಡಿ.

ಯಾದವಪುರದ ಬೇರೆ ಎಲ್ಲ ಲಕ್ಷಣಗಳಂತೆ, ಅದರ ಸಂತೆಮಾಳ ಕೂಡ ಮುಖ್ಯವಾದದ್ದು. ಹಾಪ್‌ಕಾಮ್ಸ್ ಪ್ರಸಿದ್ಧಿಗೆ ಬರೋ ಮುಂಚೆ ದವಸ, ಧಾನ್ಯ, ತರಕಾರಿ ಇತ್ಯಾದಿಗಳನ್ನ ತಾಜ ಇಡಲು ಗ್ಲೋಬಲೀಕರಣ ನಮಗೆ ಹೇಳಿಕೊಡುವ ದಶಕಗಳ ಮುಂಚೆ, ಈ ಊರಿನ ಸಂತೆಮಾಳ ಸ್ವಚ್ಛವಾದ ಸಣ್ಣ ರಸ್ತೆಗಳಿಂದ, ಬೇರೆಬೇರೆ ವಸ್ತುಗಳಿಗೆ ಚೊಕ್ಕವಾಗಿ ಕಟ್ಟಿದ ಜಗಲಿಗಳಿಂದ, ದನಕರುಗಳಿಗೆ ಹೇರಳವಾಗಿ ದೊರಕುತ್ತಿದ್ದ ನೀರಿನಿಂದ, ಹುಲ್ಲಿನಿಂದ, ಆ ಪ್ರಾಣಿಗಳು ಮರಗಳ ನೆರಳಿನಲ್ಲಿ ನಿಶ್ಚಿಂತೆಯಿಂದ ಮೆಲುಕು ಹಾಕಲು ಅವಕಾಶ ದೊರಕಿಸುವ ಮರಗಳಿಂದ ಅಲಂಕೃತವಾಗಿತ್ತು. ಈ ಕಾರಣದಿಂದ ಅಲ್ಲಿ ನಡೆಯುವ ಸಂತೆ ತುಂಬ ಜನಪ್ರಿಯವಾಗಿತ್ತು. ಕೆಲವು ಸಾರಿ ಸಂತೆಗೆ ಸುತ್ತಮುತ್ತಲ ಸಂತೆಬಾಚನಹಳ್ಳಿ, ನಾಗಮಂಗಲ, ಅಕ್ಕಿಹೆಬ್ಬಾಳು, ಕಿರಂಗೂರುಗಳಿಂದಲ್ಲದೆ, ದೂರದ ಹಾಸನದ ನವಿಲೆಬಾಗಿಲು, ಶ್ಯಾಮಲಾಪುರದಿಂದ ಕೂಡ ಜನ ಬರುತ್ತಿದ್ದರು. (ಆ ಊರುಗಳಲ್ಲಿ ಪೊಲೀಸರ ದಬ್ಬಾಳಿಕೆಯಿಂದ ಇದ್ದಕ್ಕಿದ್ದಂತೆ ಪುರುಷರ ಸಂಖ್ಯೆ ಇಳಿಮುಖವಾಗಿ, ಸಂತೆಗೆ ಬರುವವರ ಸಂಖ್ಯೆ ಕಡಿಮೆಯಾಯಿತು ಎನ್ನುವುದು ಬೇರೆ ವಿಚಾರ.)

ಇಲ್ಲಿ ನನಗೆ ನಿಮ್ಮಿಂದ ಸಹಾಯ ದೊರಕಲು ಸಾಧ್ಯವಿಲ್ಲ. ಆದ್ರೂ ನಾನು ವರ್ತಮಾನದಿಂದ ಭೂತಕ್ಕೆ ನೆಗೆಯುತ್ತಿದ್ದೇನೆ ಅನ್ನುವುದನ್ನು ದಯವಿಟ್ಟು ಗಮನಿಸಿ. (ಅದ್ಯಾರೋ ಮಹಾವ್ಯಾಕರಣಿ, ಸಿದ್ಧಾಂತಿ ರಾಮಕೃಷ್ಣ ಅಂತ ಇದ್ದಾನಂತೆ, ಇಂತಹ ವಿಚಾರಗಳಲ್ಲಿ ಸಂಸ್ಕಾರ'ದ 'ಪ್ರಾಣೇಶಾಚಾರಿ' ತರ; ಅವನಿಗೆ ಬರೆಯೋ ವ್ಯವಧಾನ ನನಗೆ ಇಲ್ಲ.)

ಸಂತೆ ನಡೆಯುತ್ತಿದ್ದ ದಿನ ಬುಧವಾರ. ಊರಿನ ಜನಗಳಿಗೆ ಆ ಸಂತೆ ಅದೆಷ್ಟು ಮುಖ್ಯ ಅನ್ನೋ ಐಡಿಯಾ ಹೊಳೆಯಲು, ಆ ದಿನ ಎಲ್ಲ ಶಾಲೆಗಳಿಗೂ ರಜ ಅನ್ನೋದನ್ನ ಗಮನಿಸಿ. ಅಪ್ಪ-ಅಮ್ಮಂದಿರ ಜೊತೆ ಮಕ್ಕಳು ಬಂದು ತಮಗಿಷ್ಟವಾದ ಸಾಮಾನುಗಳನ್ನ ಕೊಂಡುಕೋತಿದ್ರು. ತುಂಬಾ ಬುದ್ಧಿವಂತರು ಈ ಜನ ಅಂತ ಆಗ್ಲೇ ಹೇಳಿದ್ದೆನಲ್ಲ, ಮಕ್ಕಳಿಗೆ ಗೆಂಡೆ ಕೋಸು ಬೇಡ ಅಂದ್ರೆ ಬಲವಂತ ಮಾಡ್ತಾ ಇರಲಿಲ್ಲ. ಕಡಿಮೆ ಬೆಲೆದು ಅಂತ ಬೆಂಡೇಕಾಯಿ ಕೊಂಡ್ಕೊಂಡು ನಾಕು ದಿನ ಅದರ ಪಲ್ಯ, ಸಾರು, ಹುಳಿ ಮಾಡಿ, 'ತಿನ್ನು, ತಿನ್ನದಿದ್ರೆ ಹಾಳಾಗು'' ಅಂತೆಲ್ಲಾ ಮಕ್ಕಳನ್ನ ಗೋಳು ಹುಯ್ಕೋತಿರಲಿಲ್ಲ. ಸಂತೆ ಈ ಊರಲ್ಲಿ ಹಬ್ಬ ಇದ್ದ ಹಾಗೆ. ಎಲ್ಲರಿಗೂ ಬಿಡುವು, ಎಲ್ಲರಿಗೂ ಸಂತೋಷ. ಹಣ್ಣು ಮಾರೋ ನಿಸ್ಸಾರ್ ಅಹಮದ್ ಸಾಹೇಬರ ಕಟ್ಟೆಗೆ ಯಾರಾದ್ರೂ ಬಂದು, ''ಸಾಹೇಬ್ರೇ, ಒಂದು ಕೇಜಿ ಕಾಶ್ಮೀರಿ ಸೇಬು ಎಷ್ಟು?'' ಅಂದ್ರೆ, ಸಾಹೇಬ್ರು ತಮ್ಮ ಗಡ್ಡ ನೀವಿಕೊಳ್ಳುತ್ತಾ ''ಆರು ರೂಪಾಯಿ, ಅಷ್ಟೆ, ಬೇಕಾ?'' ಅಂತಿದ್ರು. ನಮ್ಮ ಕಂಚುಗಾರ್ರ ಬೀದಿ ಹುಡುಗಿ ಶೀಲಾ, ಅವಳ ಹೆಸರು ''ಗುಂಡಮ್ಮ'' ಆಗ್ಲಿ ಅಂತ ಅವಳ ಅಮ್ಮನ ಆಸೆ ಇತ್ತು, ''ಅಯ್ಯೋ ಸಾಹೇಬ್ರೆ, ನನ್ನ ತಾವ ಇರೋದು ನಾಕೇ ರುಪಾಯಿ'' ಅಂದ್ರೆ ಸಾಹೇಬ್ರು ನಕ್ಕು, ''ಹೋಗ್ಲಿ ಬಿಡಮ್ಮಾ. ಸಾಯಂಕಾಲ ಆಗ್ತಾ ಬಂತು, ಮುಚ್ಚೋ ಸಮಯ. ಕೊಡು ನಾಕು ರುಪಾಯಿ. ಎರಡು ಕೇಜಿ ತಗೊ. ಮುಂದಿನ ಬುಧವಾರ ನಿಮ್ಮಪ್ಪನ ಬಟ್ಟೆ ಅಂಗಡಿಗೆ ನಾನು ಹೋದಾಗ ನನ್ನ ಮರೀಬೇಡ ಅಂತ ಹೇಳು'' ಅಂತ ತೂಕ ಮಾಡಿ ಒಂದು ಪೇಪರ್ ಬ್ಯಾಗಿನಲ್ಲಿ ಸೇಬು ತುರುಕಿ ಕೊಡ್ತಿದ್ರು. ಒಟ್ಟಿನಲ್ಲಿ ಸಂತೆಗೆ ಹೋಗೋದು ಅಂದ್ರೆ ನಾವೆಲ್ಲಾ ಒಂದೇ ಸಮುದಾಯಕ್ಕೆ ಸೇರಿದವರು, ಸಮರಸವೇ ಜೀವನ, ಕನ್ನಡವೇ ನಿತ್ಯ ಇತ್ಯಾದಿ ಪಾಂಡಿತ್ಯಪೂರ್ಣ ಹೇಳಿಕೆಗಳನ್ನ ನಿಜ ಅನ್ನಿಸುವ ಅನುಭವ ಯಾದವಪುರದ ಜನಕ್ಕೆ.

ಈ ಸಂತೆ ಬಗ್ಗೆ ಇನ್ನೊಂದು ಆಸಕ್ತಿ ಹುಟ್ಟಿಸೋವಂಥ ಸಮಾಚಾರ: ಪ್ರತಿ ಏಪ್ರಿಲ್‌ನಲ್ಲಿ, ಶ್ರಾವಣ ಮಾಸ ಶುರುವಾಗೋ ಮುಂಚೆ, ಮೊದಲನೆ ಬುಧವಾರ ಮಾತ್ರ ಸಂತೆ ನಡೀತಾ ಇರಲಿಲ್ಲ. ಏನೇ ಆದ್ರೂ ಊರಿನ ಜನ ಎಲ್ಲಾ ಮಕ್ಕಳು, ಮುದುಕರು, ಹೆಣ್ಣುಗಳು, ಗಂಡುಗಳು, ಅವತ್ತು ವಿಧಿ ಇಲ್ಲದೆ ಸಂತೆಮಾಳದಲ್ಲಿ ಬೆಳಿಗ್ಗೆ ಹತ್ತು ಗಂಟೆಗೆ ಪ್ರತ್ಯಕ್ಷ ಆಗಲೇಬೇಕು ಅನ್ನೋ ನಿಯಮಾನ ಯಾದವಪುರದ ಮಂದಿ ಅನೂಚಾನವಾಗಿ ಪಾಲಿಸಿಕೊಂಡಿದ್ದರು. ಬೇರೆ ಯಾವ ಊರಿನ ಜನವೂ ಅವತ್ತು ಯಾದವಪುರದ ಕಡೆ ತಲೆ ಕೂಡ ಹಾಕಿ ಮಲಗುತ್ತಿರಲಿಲ್ಲ. ಮಂಗಳವಾರ ರಾತ್ರಿ ಊರಿನ ಎಲ್ಲ ಬೀದಿಗಳಲ್ಲಿ, ಡಂಗೂರ ಎನ್ನುವ ಸಂಸ್ಥೆ ನಿರ್ನಾಮವಾಗಿದ್ದರೂ, ಗ್ರಾಮಸ್ಥನೊಬ್ಬ ಕಹಳೆ ಊದುತ್ತಾ, ಡೋಲು ಬಾರಿಸುತ್ತಾ, ಮಾರನೆ ದಿನ ಬೆಳಿಗ್ಗೆ ಎಲ್ಲರೂ ಸಬೂಬಿಲ್ಲದೆ ಸಂತೆಮಾಳದಲ್ಲಿ ಹಾಜರಾಗಬೇಕೆಂಬ ಸಂದೇಶವನ್ನು ಬಿತ್ತರಿಸುತ್ತಿದ್ದ.

ಶ್ರಾವಣಮಾಸದ ಒಂದು ಮೊದಲನೆ ಬುಧವಾರ ಯಾದವಪುರದಲ್ಲಿ ಏನಾಯಿತು ಎಂದು ಸಾಕ್ಷಿ ನುಡಿಯಲು ನನಗೆ ಈಗ ಅಪ್ಪಣೆ ಕೊಡಿ.

ಮೊದಲು ಸಂತೆಮಾಳಕ್ಕೆ ಬಂದ ಮಂದಿ ಮಕ್ಕಳು. ಆ ದಿನ ತುಂಬ ಚೆನ್ನಾದ ಬೇಸಿಗೆಯ, ಆಹ್ಲಾದಕರ ವಾತಾವರಣ ಹೊಂದಿತ್ತು. ಬೀಳುವ ಮಳೆಯ ಸ್ವಾಗತಕ್ಕಾಗಿ ಎಲ್ಲೆಡೆ ಎಳೆಯ ಹಸಿರು ಕಂಗೊಳಿಸಲು ಶುರು ಮಾಡಿತ್ತು. ಭತ್ತ, ಕಬ್ಬಿನ ನಾಟಿ ಆಗಿನ್ನೂ ಮುಗಿದು, ನೀಲ ಆಕಾಶ ಕಾರ್ಮೋಡಗಳಿಂದ ಕವಿಯಲು ಸಿದ್ಧವಾಗುವ ಸಮಯ. ಅಭ್ಯಾಸದಿಂದ ಹೆಂಗಸರು ಹಿಂದಿನ ರಾತ್ರಿ ಸೋಬಾನೆ ಪದಗಳನ್ನು ಗುಣುಗಿದ್ದರು. ಮಾಧ್ಯಮಿಕ ಶಾಲೆಯ ಮಕ್ಕಳು ''ಹುಯ್ಯೊ, ಹುಯ್ಯೊ ಮಳೆರಾಯ'' ಎಂಬ ರೂಪಕವನ್ನು ತುಂಬ ರಂಜನೀಯವಾಗಿ ಪ್ರದರ್ಶಿಸಿದ್ದರು. ಅದರಲ್ಲಿ ಪಟೇಲರ ಮಗಳು, ವರ್ಷ, ತನ್ನ ಅಭಿನಯಕ್ಕಾಗಿ ಪ್ರಥಮ ಪಾರಿತೋಷಕವನ್ನು ಪಡೆದಿದ್ದಳು. ''ಆಯುಕ್ತ'' ಎನ್ನಲು ಹಿಂದೇಟು ಹೊಡೆಯದ ಕನ್ನಡ ವರ್ತಮಾನ ಪತ್ರಿಕೆಗಳು ಈ ಅವರನ್ನು ಕರೆಯುವಂತೆ ''ಚಿಣ್ಣರು'' ಸಣ್ಣ ಕಲ್ಲುಗುಡ್ಡೆಗಳನ್ನು ಮಾಡಿ ವಿರೋಧಿ ಮಕ್ಕಳು ಅವುಗಳ ಹತ್ತಿರ ಬರದಂತೆ ಕಾವಲು ಕಾಯುತ್ತಿದ್ದರು. ಓದುವ, ಬರೆಯುವ ಕಾಟದಿಂದ ಒಂದೂವರೆ ತಿಂಗಳು ಮುಕ್ತಿ ದೊರಕಿದ್ದರೂ ಅವರೆಲ್ಲರ ಮುಖಗಳಲ್ಲಿ ವಿಷಾದದ, ದಿಗಿಲಿನ ಛಾಯೆಯಿತ್ತು. ಹೆಣ್ಣುಮಕ್ಕಳು ಕಲ್ಲಿನ ಸಂಗತಿಗೆ ಹೋಗದೆ ತಮ್ಮತಮ್ಮಲ್ಲೇ ಪಿಸುಪಿಸು ಗುಸುಗುಸು ಎನ್ನುತ್ತಿದ್ದರು.

ಈ ವಿಶೇಷ ದಿನ ಸಂತೆಯ ಮಾಳದ ಕಾರ್ಯಕ್ರಮದ ಉಸ್ತುವಾರಿ ಹೊತ್ತಿದ್ದ ವ್ಯಕ್ತಿ ಪಟೇಲ ಎಂದು ಕರೆಸಿಕೊಳ್ಳುತ್ತಿದ್ದ ಕ್ಷೀರನಾಯಕ. ಅವನು ಚಿಕ್ಕವನಾಗಿದ್ದಾಗ ಅವನ ನಿರಕ್ಷರ ಪೋಷಕರು ಅವನಿಗೆ ಹಾಲೇಗೌಡ ಎಂದು ಹೆಸರಿಟ್ಟಿದ್ದರು. ಅವತ್ತಿನ ಕಾರ್ಯಕ್ರಮ ನಡೆಸಿಕೊಡಲು ಅವನಿಗೆ ಸಹಾಯ ನೀಡಲು ಇದ್ದವನು ಗ್ರಾಮ ಲೆಕ್ಕಿಗ (ಅವನ ಪೂರ್ವಜರು ಶಾನುಭೋಗರೆಂದು ಸಂಬೋಧಿಸಲ್ಪಡುತ್ತಿದ್ದರು), ಪೂರ್ಣಯ್ಯಾ. ಹತ್ತು ಗಂಟೆ ಸಮಯಕ್ಕೆ ಸರಿಯಾಗಿ ಹೆಚ್ಚುಕಡಿಮೆ ಗ್ರಾಮಸ್ಥರೆಲ್ಲ ಸಂತೆಮಾಳಕ್ಕೆ ಬಂದಿದ್ದರು.

ಕೆಸರುಗದ್ದೆ ಉಳುವಾಗ ಕಾಲಿನ ಕೀಲಿ ಮುರಿದು ಓಡಾಡಲಾಗದ ಕುಲವಂತ ಅವನ ಹೆಂಡತಿಗೆ ಹೇಳಿದ: ''ನೋಡೆ, ಮುಕ್ಕಾದವರು ಇವತ್ತು ಮನೆಯಾಗೆ ಕುಂತು ಇರಬೋದಂತ ಒಪ್ಗೆ ಇದೆ. ನೀ ಯಾಕೆ ತಡ ಮಾಡ್ತಾ ಇದ್ದೀ? ಒಗವ್ವ, ಈಗ್ಲೇ ಒಗು.''

''ಒಗಕ್ಕೆ ರೆಡಿ ಆಯ್ತಿವ್ನಿ, ಅದೆಂಗೆ ಈ ದಿನ ಮನೆಯಾಗೆ ಇರೋದು?'' ಅಂದ್ಲು ಅವನ ಹೆಂಡತಿ. ಒಂದು ಹಳೆ ಸೀರೆ ಉಟ್ಕೊಂಡಿದ್ರೂ, ತುಂಬಾ ಚೆನ್ನಾಗಿ ಕಂಡ್ಲು ಅವಳು ಅವಳ ಗಂಡನಿಗೆ. ''ಉಳಿದವೆಲ್ಲಾ ಆಗ್ಲೇ ಹೋಗಾವೆ. ನೀನು ಬೇಕಾದ್ರೆ ಚಿಕ್ಕೋನ್ನ ಕಳಿಸ್ತೀನಿ,'' ಎಂದು ಚೆನ್ನಮ್ಮ ಮಾಳದ ಕಡೆ ದಪದಪ ಹೆಜ್ಜೆ ಹಾಕಿದಳು.

ಚೆನ್ನಮ್ಮನ್ನ ನೋಡಿ ಆಕೆಯ ವಾರಗಿತ್ತಿ ಸಣ್ಣಮ್ಮನಿಗೆ ಭಲೇ ಖುಷಿ ಆಯಿತು. ''ಅಂತೂ ಬಂದ್ಯಲ್ಲಾ. ಎಲ್ಲಾ ವಾರೆ ತಾನೆ?''

''ನನ್ನ ಗಂಡನ ಕಥೆ ನಿನಗೆ ಗೊತ್ತಲ್ಲ? ಕೇರಿ ಹೋಯ್ತು ಅಂದ್ರೆ ಊರೇ ಹೋಯ್ತು ಅನ್ನೋ ಅಂಗೆ ಆಡ್ತಾನೆ. ಹೆಬ್ಬೆರಳಾಗೆ ನೋವಂತೆ. ಕಾಲೇ ಮುರಿದೈತೆ ಅನ್ನಂಗೆ ಆಡ್ತವ್ನೆ. ಇಲ್ಲಿ ಎಲ್ಲ ಸರಿಯಾಗಿ ನಡೆದೈತಾ?''

''ಏನು ಹೇಳೋದು ಕಾಣೆ'', ಅಂದ್ಲು ಸಣ್ಣಮ್ಮ. ''ಅಲ್ನೋಡು, ಆ ಬ್ರಾಂಬ್ರ ಪೂರ್ಣಯ್ಯಾ ಮತ್ತೆ ನಮ್ಮ ಪೈಕಿ ಕೀರಯ್ಯನ ಜತೆಗೆ ಅಲ್ಲಿ ನಿಂತಗೊಂಡು ಇದೇನೋ ಮಹಾ ತಮಾಷೆ ಅನ್ನೋ ಅನ್ನಂಗೆ ಲೊಳಕು ಮಾಡ್ತಾವ್ರೆ. ಇದು ಮುಗಿದು ಮನೆಗೆ ಹೋದ್ರೆ ಸಾಕು ಅಂತ ನಾನು ಕಾಯ್ತಿವ್ನಿ.''

''ಈ ಹಳ್ಳಿಮುಕ್ಕಗಳ ಕತೇನೆ ಹಿಂಗೆ. ಹಿಂದಿನಿಂದ ಬಂದ ಹೆಸರೈತೆ ಅಂದುಬುಟ್ರೆ ಧಿಮಾಕು ಮಾಡಾದ್ ಬುಟ್ರೆ ಅವಕ್ಕೆ ಬೇರೇನೂ ಗೊತ್ತಿಲ್ಲ. ಪೂರ್ಣಯ್ಯನ ಮಗಳು, ಮಹಾ ಗರತಿ, ರಂಗೇಗೌಡನ ಮಗನ್ನ ಕೂಡಿಕೆ ಮಾಡ್ಕೊಂಡವ್ಳೆ ಅಂತ ಯಾರಿಗೆ ಗೊತ್ತಿಲ್ಲ ಏಳು.''

''ಮಾಡಿದವ್ರ ಪಾಪ ನಮ್ಮ ಬಾಯಲ್ಲಿ ಯಾಕಮ್ಮ? ಕೀರಪ್ಪ ಪಟ್ಟಿ ಹಿಡ್ಕೊಂಡು ಹೆಸರು ಕರಿತಾವ್ನೆ.''

ಊರಿನ ಸಮಸ್ತರ ಗುಂಪು ಗರಬಡಿದಂತೆ ಕ್ಷೀರನಾಯಕನ ಮಾತು ಆಲಿಸುತ್ತಿತ್ತು. ಅವನು ಪೂರ್ಣಯ್ಯ ಗೋಣು ಅಲ್ಲಾಡಿಸುತ್ತಿದ್ದಂತೆ, ಎಲ್ಲರ ಹೆಸರು ಕರೆಯಲು ಆರಂಭಿಸಿದ.

''ಅಣ್ಣಪ್ಪ, ಆನೂರು ತಿಮ್ಮಪ್ಪ, ಓಂಕಾರಪ್ಪ, ಅಂದಾನಯ್ಯ, ಕಲ್ಲಪ್ಪ, ಗುಂಡಣ್ಣ, ಮೇರಿ ದಾಸ, ಸುಬ್ಬಾಶಾಸ್ತ್ರಿ, ಸುಬ್ಬಯ್ಯ, ಲಿಂಗಪ್ಪಯ್ಯ...''

ಅಕ್ಷರಾನುಕ್ರಮದಲ್ಲಿ ಹೆಸರು ಹೇಳುವಿಕೆ ಈ ಆಚಾರದ ಮುಖ್ಯ ಪಡಿಪಾಟು ಆಗಿತ್ತು. ತಮ್ಮ ಹೆಸರು ಕೇಳಿದಂತೆ, ವ್ಯಕ್ತಿಗಳು, ''ಹೌದು, ಇಲ್ಲಿದ್ದೀನಿ'' ಎಂದರು.

ಆಕಾಶದ ನೀಲಿ ಬಣ್ಣ ಸ್ವಲ್ಪವೂ ಕಂದಿಲ್ಲ. ಸೂರ್ಯ ಯಥಾಪ್ರಕಾರ ಹೊಳೆಯುತ್ತಿದ್ದ. ಹಕ್ಕಿಗಳು ಬಾನಗಲದಲ್ಲಿ ನಿರಾಳವಾಗಿ ಹಾರಾಡಿದವು. ಅಲ್ಲೋ ಇಲ್ಲೋ ಕಾಯುತ್ತಿದ್ದ ಹದ್ದುಗಳನ್ನು ಸಣ್ಣ ಹಕ್ಕಿಗಳು ಗುಂಪಾಗಿ ಅಟ್ಟಾಡಿಸಿದವು. ಊರಿನಲ್ಲಿ ಎರಡು ನಾಯಿಗಳು ಬೊಗಳಿದವು.

''ಹಾಗಾದ್ರೆ ಎಲ್ಲ ಇಲ್ಲಿ ಇದೀವಿ ಅಂತಾಯ್ತು.'' ಕ್ಷೀರನಾಯಕ ಗದ್ಗದ ಕಂಠದಲ್ಲಿ ಉಲ್ಲೇಖಿಸಿದ. ''ನನ್ನ ಹೆಂಡತಿ ಲಕ್ಷ್ಮಿ, ನನ್ನ ಮಗಳು ಸುಂದರಿ ಇಲ್ಲಿದ್ದಾರೆ.''

ಗುಂಪಿನಲ್ಲಿ ಗುಸುಗುಸು, ಮಂದ್ರದಲ್ಲಿ ಪಿಸುಪಿಸು. ''ಜಯೇಂದ್ರಪ್ಪನ ಮನೆಯವರು ಯಾರೂ ಇಲ್ಲಿಲ್ಲ. ಜಯೇಂದ್ರಪ್ಪನ ಮನೆಯವರು ಯಾರೂ ಇಲ್ಲಿಲ್ಲ. ಜಯೇಂದ್ರಪ್ಪನ ಮನೆಯವರು ಯಾರೂ ಇಲ್ಲಿಲ್ಲ.''

''ಅಯ್ಯೋ, ನಿನ್ನ ಕಣ್ಣಿಗೇನು ಅಣ್ಣಪ್ಪ ಹಿಡಿದವನಾ ? ಜಯೇಂದ್ರಪ್ಪ ಅಲ್ಲೇ ನಿಂತವನೆ, ಮಲ್ಲಪ್ಪನ ಪಕ್ಕ.''

''ಅವನೆಂಡ್ತಿ, ಬಾಳಿಯಮ್ಮ, ಮಕ್ಕಳು ಇಲ್ಲಿಲ್ಲ.''

''ಎಂತಾ ಚೆಂಗುಲಿ ಚಿನಾಲಿ ಅವಳು ಅಂತ ನಮಗೆಲ್ಲಾ ಗೊತ್ತೈತೆ'' ಅಂತ ಎಲ್ಲರೂ ಕೇಳುವಂತೆ ಒಂದು ಧ್ವನಿ ಉಸುರಿತು.

''ಜಯಪ್ಪ, ನೋಡಪ್ಪ. ನಿನ್ನ ಅದೃಷ್ಟ ಖುಲಾಯಿಸ್ತು. ಬಾಳಿಯಮ್ಮ ಮತ್ತೆ ನಿನ್ನ ಮಕ್ಕಳು ಬರ್ತಾವ್ರೆ.'' ಒಂದು ಮಾಸಿದ ಹಸಿರು ಸೀರೆಯುಟ್ಟಿದ್ದ ಬಾಳಿಯಮ್ಮ ಎಲ್ಲರ ಕಣ್ಣಿಗೆ ಬಿದ್ದಳು. ''ಕ್ಷೀರಪ್ಪ, ಮನೆಯಾಗೆ ಮಾಡೊ ಕೆಲಸ ಭಾಳ ಇತ್ತು. ಹಸುಗೆ ಹುಲ್ಲಾಕಿ, ಹಾಲಿಗೆ ಹೆಪ್ಪಾಕಿ ಬಂದೆ.''

''ತಂಗಿ, ಬಾಳಿಯಮ್ಮ, ನೀನು ಬಂದೆ ಅಂತ ನಮ್ಗೆ ಬಾಳ ಸಂತೋಷ. ಜಯಪ್ಪ ಮತ್ತೆ ನಿನ್ನ ಮಕ್ಕಳು ರವಷ್ಟು ಸಂಕಟದಾಗಿದ್ದಾರೆ. ಅವರ ಜತೆ ನಿಂತ್ಗೊ.''

ಪ್ರತಿವರ್ಷ, ಶ್ರಾವಣದ ಮೊದಲನೆ ಬುಧವಾರ ಒಂದು ಲಾಟರಿ ನಡೀಬೇಕು ಅನ್ನೋ ಸಂಪ್ರದಾಯ ಯಾದವಪುರ ಸದಾ ಕಾಪಾಡಿಕೊಂಡು ಬಂದಿತ್ತು. ಈ ನಿಯಮದ ಉಲ್ಲಂಘನೆ ಆಗದೇ ಇದ್ರೂ, ಇದು ಯಾಕೆ ಮುಂದುವರೀಬೇಕು ಅನ್ನೋ ಆತಂಕ ಆಗೀಗ ವ್ಯಕ್ತವಾಗದೆ ಇರುತ್ತಿರಲಿಲ್ಲ.

ಕ್ಷೀರನಾಯಕ ಮತ್ತು ಪೂರ್ಣಯ್ಯ ಒಂದು ಹುಂಡಿಯಲ್ಲಿ ಬಿಳಿ ಕಾಗದದ ಚೂರುಗಳನ್ನಿಟ್ಟು ಲಾಟರಿಗೆ ಅಣಿ ಮಾಡುತ್ತಿದ್ದರು.

''ಚೀಟಿ ಅಂತೂ ನೆನ್ನೆ ನಡೆದ ಹಾಗೆ ಅನ್ನಿಸ್ತಿದೆ'' ಅಂದಳು ಕೇರಿಯ ಭಾಗಮ್ಮ.

''ಉತ್ತರಹಳ್ಳಿ ಚೀಟಿ ಹಾಕೋದು ನಿಲ್ಲಿಸಿಬಿಟ್ಟಿದ್ದದಂತೆ'' ಅಂತ ಗುಣುಗಿದ ಅಗ್ರಹಾರದ ಮೋಗಣ್ಣ ಜೋಯಿಸ.

ಪಕ್ಕದಲ್ಲೆ ನಿಂತಿದ್ದ, ಎಂಭತ್ತು ವರ್ಷದ ಘುಲಾಮ್ ಅಹಮ್ಮದನಿಗೆ ಇದನ್ನೆಲ್ಲ ಕೇಳಿ ಭಾಳ ಕೋಪ ಬಂತು.

''ಇದೆಂತ ಹುಚ್ಚುಮಾತು ? ಎಂಭತ್ತು ವರ್ಷದಿಂದ ಈ ಲಾಟರಿಗೆ ನಾನು ಬರ್ತಾ ಇದ್ದೀನಿ. ಚೀಟಿ ಆಯ್ತು ಮಳೆ ಬಂತು, ಅಂತ ಕೇಳಿಲ್ವ ನೀವು ? ಚೀಟಿ ಬಿಟ್ರೆ ನಮ್ಮೆಲ್ಲರ ಗತಿ ಏನು ?''

ಅಹಮದ್ದ ಒಂಟಿಯಾಗಿ ಬಾಳಿದ ಜೀವ. ಅವನಿಗೆ ಮಕ್ಕಳಾಗಲಿ, ಸಂಬಂಧಿಗಳಾಗಿ ಇರಲಿಲ್ಲ.

''ಹಾಲೂರಿನಲ್ಲಿ ಚೀಟಿ ಕೈಬಿಟ್ರು. ಅವರ ಕತೆ ಏನಾಯ್ತು ಗೊತ್ತಿದ್ಯಾ ನಿಮಗೆ ? ಹಾಲೂರು ಈಗ ಹಾಳೂರಾಗಿದೆ. ನಾಲೆ ನೀರು ಅಲ್ಲಿಗೆ ಹೋಗಕ್ಕೆ ಮುಂಚೆ ಬತ್ತಿ ಹೋಗುತ್ತೆ. ಕಣ್ಣು ಕಿವಿ ಇಲ್ಲದ ಮಕ್ಕಳು ಎಣಿಸಕ್ಕಾಗದಷ್ಟು. ಚೀಟಿ ಹಾಕದೆ ಬದುಕೋದು ಸಾಧ್ಯ ಇಲ್ಲ.''

''ಎಲ್ಲರ ಹೆಸರು ಕರೆದಿದ್ದೀನಿ ಅಲ್ವಾ ?'' ಕ್ಷೀರನಾಯಕನ ಧ್ವನಿಯಲ್ಲಿ ಸಮಾಧಾನಕ್ಕಿಂತ ಆತಂಕದ ಸುಳಿವೇ ಜಾಸ್ತಿ ಇತ್ತು. ಅವನು ಮತ್ತು ಅವನ ಹೆಂಡತಿಯನ್ನು ಬಿಟ್ಟರೆ ಅವನಿಗೆ ಬೇರೆ ಸಂಸಾರವಿರಲಿಲ್ಲ. ರಾತ್ರಿ ಅವನ ಹೆಂಡತಿ ಅವನನ್ನು ಹತ್ತಿರ ಬರಗೊಡುತ್ತಿರಲಿಲ್ಲ ಅಂತ ಊರಿನವರೆಲ್ಲ ಆಡಿಕೊಳ್ಳುತ್ತಿದ್ದರು.

''ಸರಿ. ಈ ಚೀಟಿ ಕೆಲಸ ಶುರು ಮಾಡಿ ಮುಗಿಸೋಣ. ಹನ್ನೆರಡು ಗಂಟೆ ಮುಂಚೆ ನಾವೆಲ್ಲಾ ಮನೆಗೆ ಹೋಗಿ ಊಟ ಮಾಡಬೇಕು.'' ಕ್ಷೀರನಾಯಕ ಇದೇನು ಜನಕ್ಕೆ ಗೊತ್ತಿರೋ ವಿಷಯ ಅಲ್ಲ ಅನ್ನುವಂತೆ ತುಂಬ ಗಂಭೀರವಾಗಿ ಹೇಳಿದ. ಒಂದು ಕಾಲದಲ್ಲಿ

ಚೀಟಿ ಎಂಟು ಗಂಟೆಗೆ ಶುರುವಾಗಿ ನಾಕು ಗಂಟೆಗೆ ಮುಗಿಯುತ್ತಿತ್ತು.

''ಕುಲವಂತ ಎಲ್ಲಿದ್ದಾನೆ ?'' ಎಂದು ಯಾರೋ ಕೇಳಿದರು.

ಕ್ಷೀರನಾಯಕ ತನ್ನ ಪಟ್ಟಿಯ ಕಡೆ ಕಣ್ಣು ಹಾಯಿಸಿದ. ''ಕುಲವಂತ... ಕುಲವಂತ... ಅವನ ಕಾಲು ಮುರಿದಿದೆ ಅಂತ ಯಾರೋ ಹೇಳಿದ್ರು. ಚಿಂತೆ ಮಾಡ್ಬೇಡಿ ಅವನ ಹೆಸರು ಬಂದರೆ ಅವನ್ನ ಬಾ ಅಂತ ಹೇಳಕ್ಕೆ ಏರ್ಪಾಟು ಮಾಡಿದೀನಿ !''

ಸೇರಿದ್ದ ಗುಂಪಿನಲ್ಲಿ ತಡೆಯಲಾಗದಷ್ಟು ಉತ್ಸುಕತೆ.

''ಇದ್ಯಾಕೆ ಹಿಂಗೆ ಸಮಯ ದಂಡ ಮಾಡ್ತವ್ರೆ ? ಚೀಟಿ ಗೆದ್ದೋರ ಹೆಸರು ಹೇಳಿ, ಕೆಲಸ ಮುಗಿಸಿ ಮನೆಗೆ ಹೋಗ್ಬಾರ್ದ?'' ಹೀಗೆ ಅನ್ನುತ್ತ ಚೆನ್ನಮ್ಮ ಸೀರೆ ಮೊಣಕಾಲಿಗೆ ಏರಿಸಿ ಒಂದು ಸಣ್ಣ ಕಲ್ಲು ಕೈಗೆತ್ತಿಕೊಂಡಳು.

''ನೀನೇಳಾದು ಸರಿ. ಕೀರಯ್ಯನಿಗೆ ಮಾತಾಡೋದು ಅಂದ್ರೆ ಬಾಳ ಆಸೆ'' ಅನ್ನುತ್ತ ಸಣ್ಣಮ್ಮ ದೊಡ್ಡ ಕಲ್ಲೊಂದನ್ನು ಕೈಗೆತ್ತಿಕೊಂಡಳು.

''ನೋಡ್ರಪ್ಪ, ನಿಮಗೆಲ್ಲ ಗೊತ್ತು. ಈ ಹುಂಡೀಲಿ ಎಲ್ಲರ ಮನೆ ಹೆಸರಿರೊ ಚೀಟಿ ಇದೆ. ಕುಟುಂಬದ ಮುಖ್ಯಸ್ಥ ಬಂದು ಒಂದು ಕಾಗದದ ಚೂರು ಮನೆಯೋರಿಗೆಲ್ಲಾ ತಗೋಬೇಕು. ಅದನ್ನು ಹಂಚಬೇಕು. ನಾನು ಹೇಳೋ ತನಕ ಎಲ್ಲರೂ ತಮ್ಮ ಚೀಟಿಗಳನ್ನ ಕೈನಲ್ಲಿ ಮುಚ್ಚಿ ಇಟ್ಟುಕೊಂಡಿರಬೇಕು. ಯಾರ ಚೀಟೀಲಿ ಒಂದು ಕರಿ ಗುರುತು ಇರುತ್ತೊ ಅವನು ಅಥವಾ ಅವಳು ಚೀಟಿಯನ್ನು ಗೆದ್ದವರು.''

ಒಬ್ಬೊಬ್ಬರಾಗಿ ಎಲ್ಲರೂ ಹುಂಡಿಯ ಹತ್ತಿರ ಹೋದರು. ಅದರಲ್ಲಿ ಕೈ ಹಾಕುವ ಮುನ್ನ ಮೇಲೆ ಕೆಳಗೆ ನೋಡಿ ಮೀನ-ಮೇಷ ಎಣಿಸಿದರು. ''ಯಾಕೆ ಸಮಯ ಹಾಳು ಮಾಡ್ತಾ ಇದ್ದೀರಿ ? ನಿಮ್ಮ ಚೀಟಿ ತಗೊಂಡು ನಮಗೆ ಜಾಗ ಬಿಡಿ'' ಅಂತ ಇತರರು ಸಿಡಿಯುತ್ತಿದ್ದದ್ದು ಎಲ್ಲರಿಗೂ ಕೇಳಿಸುತ್ತಿತ್ತು.

ಎಲ್ಲ ಕುಟುಂಬಗಳೂ, ಅವುಗಳ ಸದಸ್ಯರೂ ತಮ್ಮ ತಮ್ಮ ಚೀಟಿ ಕೈಯಲ್ಲಿ ಮಡಿಸಿ ಇಟ್ಟುಕೊಂಡು ಸುತ್ತಾಗಿ ನಿಂತರು. ಸೂರ್ಯ ನೆತ್ತಿಗೇರುವ ಸಮಯ. ಬಾನಾಡಿಗಳೆಲ್ಲಾ ಇದ್ದಕ್ಕಿದ್ದಂತೆ ಮಾಯವಾಗಿ ಆಗಸದಲ್ಲಿ ಸುಳಿದಾಡುತ್ತಿದ್ದವು ಹದ್ದುಗಳು ಮಾತ್ರ.

''ನಿಧಾನವಾಗಿ ಚೀಟಿ ನೋಡಿ'' ಅಂದ ಕ್ಷೀರನಾಯಕ. ತಮ್ಮ ಚೀಟಿಯಲ್ಲಿ ಒಂದು ಕಪ್ಪು ಸಂಕೇತ ಇಲ್ಲದಿದ್ದರೆ ಅವರು ಗೆಲ್ಲಲಿಲ್ಲ ಅನ್ನುವುದು ಖಾತ್ರಿ. ಉಸಿರು ಗಟ್ಟಿಯಾಗಿ ಹಿಡಿದುಕೊಂಡು ಎಲ್ಲರೂ ತಮ್ಮ ಚೀಟಿಗಳನ್ನು ನೋಡಿದರು. ಆ ಗಂಭೀರತೆಯಲ್ಲೂ ಒಂದು ದೊಡ್ಡ ನಿಟ್ಟುಸಿರು ಕೇಳಿಸಿತು ಎಲ್ಲರಿಗೂ.

''ಕಪ್ಪು ಚುಕ್ಕೆ ಇರೋ ಮಂದಿ ಮುಂದೆ ಬನ್ನಿ'' ಅಂತ ಕ್ಷೀರನಾಯಕ ಆಜ್ಞೆ ಮಾಡಿದ.

ಯಾರೂ ಒಂದು ಸ್ವಲ್ಪವೂ ಅಲುಗಲಿಲ್ಲ. ಎಲ್ಲರೂ ತಮ್ಮ ಚೀಟಿಗಳನ್ನು ಮತ್ತೆ ಪರೀಕ್ಷಿಸಿ ಒಂದು ಹೆಜ್ಜೆ ಹಿಂದೆ ಸರಿದರು. ಜಯಪ್ಪನ ಕುಟುಂಬ ಸ್ತಂಭಿತವಾಗಿ ನಿಂತಿತ್ತು.

''ಜಯಪ್ಪ, ನೀನು ಗೆದ್ದ ಹಾಗೆ ಕಾಣುತ್ತೆ ? ಸರೀನಾ ?'' ಕ್ಷೀರನಾಯಕ ಅಮಿತಾಭ್ ಬಚ್ಚನ್ ತರಾ ಕೇಳಿದ.

''ಎರಡು ಚುಕ್ಕಿ ಇರೋ ಚೀಟಿ ಯಾರ ತಾವ ಇದೆಯೋ ಅಂತ ಗೊತ್ತಿಲ್ಲ. ನನ್ನ ಹತ್ರ ಮಾತ್ರ ಇಲ್ಲ'' ಅಂದ ಜಯಪ್ಪ.

''ನೋಡಿ ಅಂತ ನಿನ್ನ ಮಕ್ಕಳಿಗೆ ಮತ್ತು ಹೆಂಡ್ತಿಗೆ ಹೇಳು.''

ಜಯಪ್ಪನ ಕುಟುಂಬದಲ್ಲಿ ಇದ್ದ ಸದಸ್ಯರು ಬಾಳಿಯಮ್ಮ, ಸಿಂಗಾರಿ ಮತ್ತು ನವೀನ. ಸಿಂಗಾರಿ ತನ್ನ ಚೀಟಿ ನೋಡಿದಳು. ಅವಳ ಮಂದಹಾಸ ಅವಳ ಮುಖಕ್ಕಿಂತ ದೊಡ್ಡದಾಗಿತ್ತು. ಮೂಗು ಒರೆಸಿಕೊಳ್ಳುತ್ತಾ ನವೀನ ತನ್ನ ಚೀಟಿ ನೋಡಿದ. ಅದು ಖಾಲಿ ಇದ್ದದ್ದು ನೋಡಿ ಕುಣಿದಾಡಬೇಕೆನ್ನಿಸಿದರೂ, ಅದನ್ನು ಎಲ್ಲರಿಗೆ ತೋರಿಸಬಾರದು ಅಂತ ಸುಮ್ಮನಾದ. ಬಾಳಿಯಮ್ಮ ತನ್ನ ಚೀಟಿ ನೋಡಿದಳು.

''ಇದು ಸರಿಯಲ್ಲ. ಬಲೇ ಮೋಸ. ಬೇಕಂತಲೇ ನೀವು ನಮಗೆ ಈ ಚೀಟಿ ಕೊಟ್ಟಿದ್ದೀರಿ.'' ಅವಳ ಚೀರಾಟ ಆಕಾಶಕ್ಕೆ ಮುಟ್ಟಿ ಹದ್ದುಗಳನ್ನು ಹೆದರಿಸುವಂತಿತ್ತು.

''ಬಾಳಿಯಮ್ಮ ನಾವು ಯಾರಿಗೂ ಮೋಸ ಮಾಡಲ್ಲ ಅಂತ ನಿನಗೇ ಗೊತ್ತು. ನೀನು ಸುಮಾರು ಮೂವತ್ತು ಚೀಟೀಲಿ ಇದ್ದೀ. ಯಾವತ್ತೂ ನೀನು ಆಕ್ಷೇಪಣೆ ಮಾಡಲಿಲ್ಲ! ಕ್ಷೀರ ನಾಯಕ ಸಮಾಧಾನದಿಂದ ನುಡಿದ. ''ನೀನು ಎಲ್ಲರಂತೆ ನಿನ್ನ ಚಾನ್ಸ್ ತಗೊಬೇಕು, ಅಷ್ಟೆ.''

ಚಿಕ್ಕ ಮಕ್ಕಳು, ಅದರಲ್ಲೂ ಹೆಣ್ಣುಮಕ್ಕಳು ತುಂಬಾ ಖುಷಿಯಾಗಿದ್ದರು. ಸಿಂಗಾರಿ ಗೆಲ್ಲಲಿಲ್ಲ ಎಂದು ಅವರಿಗೆಲ್ಲ ಬಲೇ ಸಂತೋಷ. ಹಾಗೆನ್ನುತ್ತಾ ಅವರೆಲ್ಲ ಕಲ್ಲುಗಳನ್ನು ಆರಿಸಿಕೊಂಡರು, ತಮ್ಮ ಶಕ್ತಿಗೆ ಅನುಗುಣವಾಗಿ.

ಚೆನ್ನಮ್ಮ ಬಾಳಿಯಮ್ಮನ ಹಳೆ ಗೆಳತಿ. ಕೋಳಿ ಸಾರು ಮಾಡಿದಾಗೆಲ್ಲ ಅದನ್ನು ಸ್ವಲ್ಪ ಒಂದು ಪಾತ್ರೇಲಿ ತುಂಬಿ ತನ್ನ ಗೆಳತಿಯ ಮನೆಗೆ ತಗೊಂಡು ಹೋಗುತ್ತಿದ್ದವಳು. ಚೆನ್ನಮ್ಮ ಈಗ ಒಂದು ದೊಡ್ಡ ಗುಂಡಾದ ಕಲ್ಲನ್ನು ಎತ್ತಿಕೊಂಡು, ಸಣ್ಣಮ್ಮನಿಗೆ ಹೇಳಿದಳು, ''ಬಾರೇ ಬೇಗ'' ಸ್ಥೂಲಕಾಯದ ಸಣ್ಣಮ್ಮ, ''ನೀ ಹೋಗು ಮುಂದೆ, ನಾನು ಬರ್ತೀನಿ'' ಅಂದಳು. ಎತ್ತಲಾಗದಿದ್ದರೂ ಅವಳ ಕೈಯಲ್ಲಿ ದೊಡ್ಡದೊಂದು ಕಲ್ಲಿತ್ತು.



''ನೀವೆಲ್ಲಾ ಪಿಶಾಚಿಗಳು. ಇದು ಸರಿಯಲ್ಲ. ನನ್ನ ಗಂಡನ ಚೀಟಿ ಮತ್ತೆ ನೋಡಿ. ನನ್ನ ಮಕ್ಕಳ ಚೀಟಿ ಮತ್ತೆ ನೋಡಿ.'' ಬಾಳಿಯಮ್ಮನ ಅರಚಾಟ ಯಾರ ಕಿವಿಗೂ ಕೇಳಿಸಲಿಲ್ಲ. ತನ್ನ ಕೈಗಳನ್ನು ಕಣ್ಣಿನ ಮುಂದೆ ಇಟ್ಟುಕೊಂಡು ಆಕೆ ''ಕೇಳಿರಪ್ಪ, ನೋಡಿರಪ್ಪ, ಅಮ್ಮ, ಅಯ್ಯ'' ಎಂದು ಆಕ್ರಂದನ ಮಾಡತೊಡಗಿದಳು.

ಒಂದು ಹುಡುಗಿ ಒಂದು ನುಣುಪಾದ ಕಲ್ಲನ್ನೆತ್ತಿ ಅದನ್ನು ಸಿಂಗಾರಿಯ ಕೈಯಲ್ಲಿ ಇರಿಸಿದಳು. ನವೀನ ಅದಕ್ಕಿಂತ ಒಂದು ದೊಡ್ಡ ಕಲ್ಲನ್ನು ತೆಗೆದುಕೊಳ್ಳಲು ಹೆಣಗಿದ.

''ಇವರ ಮನೆ ಕಾಯ್ವಾಗ. ಇವರ ಹುಟ್ಟಡಗ. ದೇವ್ರೇ ಕಾಪಾಡು.'' ಬಾಳಿಯಮ್ಮ ತಲೆ ತಗ್ಗಿಸಿ ಚೀರಿದಳು. ದಪ್ಪಂತ ಚೆನ್ನಮ್ಮ ಬೀಸಿದ ಕಲ್ಲು ಅವಳ ತಲೆಯಿಂದ ರಕ್ತ ಸುರಿಸಿತು. ಓಡಿಹೋಗಿ ಕುಲವಂತರನ್ನ ಕರಕೊಂಡು ಬಾ ಅಂತ ತನ್ನ ಮಗನಿಗೆ ಹೇಳೋದನ್ನ ಆಕೆ ಮರೆಯಲಿಲ್ಲ.

ಒಕ್ಕಣ್ಣಿನ ಸುಬ್ಬಾಶಾಸ್ತ್ರಿಯ ಉತ್ಸಾಹ ಹಳ್ಳಿಗರಿಗೆ ಮಾದರಿಯಾಗಿತ್ತು. ಉಬ್ಬಸ ವಿದ್ದರೂ ಅವನೆತ್ತಿ ತೂರಿದ ಕಲ್ಲು ನೇರವಾಗಿ ಬಾಳಿಯಮ್ಮನ ಮೂಗಿಗೆ ಸೇರಿ ಅದನ್ನು ಚಪ್ಪಟೆ ಮಾಡಿತು.

ಸಿಂಗಾರಿ ಒಮ್ಮೆ ತನ್ನ ಕಲ್ಲನ್ನು, ಒಮ್ಮೆ ತನ್ನ ಅಮ್ಮನ ರಕ್ತ ಸಿಂಚಿತ ಮುಖವನ್ನು ನೋಡಿದಳು. ಅವಳು ಎಸೆದ ಕಲ್ಲು ಅವಳ ಅಮ್ಮನ ಹಣೆಯಲ್ಲಿ ಒಂದು ದೊಡ್ಡ ತೂತು ಮಾಡಿತು.

''ಹಾಟುಗಳ್ಳರು, ಖದೀಮರು, ಪಿಶಾಚಿಗಳು, ಇದು ಸರಿಯಲ್ಲ'' ಬಾಳಿಯಮ್ಮನ ಧ್ವನಿ ನಿಶ್ಶಬ್ದದಲ್ಲಿ ಸಮಾಧಿಯಾಯ್ತು. ಯಾದವಪುರದ ಜನ ಅವಳನ್ನು ಸುತ್ತುವರಿದರು.

ಪ್ರೇರಣೆ : ಶರ್ಲಿ ಜ್ಯಾಕ್ಸನ್, ''ದಿ ಲಾಟರಿ''

ಪ್ರಕಟಣೆಗೆ ಹಸ್ತಪ್ರತಿ ಸಿದ್ಧಗೊಳಿಸಿದವರು : ಬಿ. ಮೈತ್ರಿ

ದಿನೇಶ್ ಹಾಸನ್

ನಂ. ೮೨೨, ಸ್ಟಬ್ಸ್ ಮಿಲ್ಸ್ ರೋಡ್, ಲೆಬಿನಾನ್, ಓಹಿಯೋ - ೪೫೦೩೬, ಯು.ಎಸ್.ಎ.



# ಐಷಾರಾಮದ ಖಾಸಗೀ ಆಸ್ಪತ್ರೆಗಳು



ಡಾ|| ಪ್ರಕಾಶ್ ಸಿ. ರಾವ್

**ಭಾ**ರತದಲ್ಲಿ ಪ್ರಾಥಮಿಕ ಆರೋಗ್ಯ ಪಾಲನೆಯಲ್ಲಿ ಸರಕಾರದ ಪ್ರಾಥಮಿಕ ಆರೋಗ್ಯ ಕೇಂದ್ರಗಳು, ಖಾಸಗೀ ಕುಟುಂಬ ವೈದ್ಯರು ಪ್ರಮುಖ ಪಾತ್ರ ವಹಿಸುತ್ತಾರೆ. ದ್ವಿತೀಯ ಹಾಗೂ ತೃತೀಯ ಆರೋಗ್ಯ ಪಾಲನೆಯಲ್ಲಿ ಸರಕಾರದ ಸಮುದಾಯ ಆರೋಗ್ಯ ಕೇಂದ್ರಗಳು, ಜಿಲ್ಲಾ ಆಸ್ಪತ್ರೆಗಳು, ವಿಶೇಷ ಸೌಲಭ್ಯವುಳ್ಳ ಸರಕಾರೀ ಆಸ್ಪತೆಗಳು (ವಿಕ್ಟೋರಿಯಾ, ಬೌರಿಂಗ್) ವಿಶೇಷ ರೋಗ ಚಿಕಿತ್ಸೆಯ ಆಸ್ಪತ್ರೆಗಳು (ಟಿ. ಬಿ. ಆಸ್ಪತ್ರೆ, ನಿಮ್ಹಾನ್ಸ್). ಇದಲ್ಲದೆ ಮೆಡಿಕಲ್ ಕಾಲೇಜುಗಳಿಗೆ ಹೊಂದಿಕೊಂಡ ಆಸ್ಪತ್ರೆಗಳು, ರಾಷ್ಟ್ರಮಟ್ಟದ ವಿಶೇಷ ಆಸ್ಪತ್ರೆಗಳು (ದೆಹಲಿಯ ಏಮ್ಸ್ ಇತ್ಯಾದಿ). ಇದಲ್ಲದೇ ಇತರೇ ಚಿಕಿತ್ಸಾ ಪದ್ಧತಿಯ ಚಿಕಿತ್ಸಕರೂ (ಆಯುರ್ವೇದ, ಸಿದ್ಧ, ಯುನಾನಿ, ಹೋಮಿಯೋಪತಿ) ಆರೋಗ್ಯ ಪಾಲನೆಯಲ್ಲಿ ತೊಡಗಿದ್ದಾರೆ. ಈ ಎಲ್ಲಾ ಸೌಲಭ್ಯಗಳಿದ್ದಾಗ್ಯೂ ಭಾರತದ ಆರೋಗ್ಯ ವ್ಯವಸ್ಥೆಯಲ್ಲಿ ಕೆಲವು ನ್ಯೂನತೆಗಳು ಕಂಡುಬರುತ್ತವೆ.

**ನ್ಯೂನತೆಗಳು**

- ಜನಾರೋಗ್ಯ ಸಾಧನೆಗೆ ಪ್ರಾಥಮಿಕ ಆರೋಗ್ಯ ಪಾಲನೆಯ ವ್ಯವಸ್ಥೆ ಅತ್ಯಗತ್ಯ. ಆದರೆ ಪ್ರಾಥಮಿಕ ಆರೋಗ್ಯ ಪಾಲನೆಯ ಸೌಲಭ್ಯಗಳು ಸಮರ್ಪಕವಾಗಿರದೇ ಇರುವುದು.
- ಶೇ. ೬೦-೮೨ ಆರೋಗ್ಯ ರಕ್ಷಣೆ ಖಾಸಗೀ ಕ್ಷೇತ್ರದಲ್ಲಿದ್ದು ಪ್ರತಿ ಕುಟುಂಬವೂ ಆದಾಯದ ಶೇ. ೪-೬ ಹಣವನ್ನು ಆರೋಗ್ಯಕ್ಕೆ ಖರ್ಚು ಮಾಡುತ್ತಿರುವುದು.
- ಆಸ್ಪತ್ರೆಗಳಲ್ಲಿ ಹಾಸಿಗೆಯ ಸಂಖ್ಯೆ ಕಡಿಮೆ ಇರುವುದು; ಭಾರತದಲ್ಲಿ ಹಾಸಿಗೆಗಳು ೯೯/೧೦೦೦೦೦ ಜನಸಂಖ್ಯೆಗೆ ವಿಶ್ವ ಆರೋಗ್ಯ ಸಂಸ್ಥೆಯ ಶಿಫಾರಸ್ಸು ೩೩೩ ಹಾಸಿಗೆ / ೧೦೦೦೦೦ ಜನಸಂಖ್ಯೆಗೆ.
- ಆಸ್ಪತ್ರೆಗಳು ನಗರಗಳಿಗೆ ಸೀಮಿತವಾಗಿರುವುದು.
- ಸರಕಾರ ಪ್ರಾಥಮಿಕ ಆರೋಗ್ಯ ಪಾಲನೆಯ ಬದಲು ದ್ವಿತೀಯ ಆರೋಗ್ಯ ಪಾಲನೆಗೆ ಹೆಚ್ಚು ವೆಚ್ಚ ಮಾಡುತ್ತಿರುವುದು (ಆರೋಗ್ಯದ ಒಟ್ಟು ಖರ್ಚಿನ ಶೇ. ೮೪).

**ಕಾರಣಗಳು**

ಈ ಎಲ್ಲಾ ನ್ಯೂನತೆಗಳಿಗೆ ಕೆಲವು ಕಾರಣಗಳನ್ನು ಗುರುತಿಸಬಹುದು.

- ಸರಕಾರ ಪ್ರಾಥಮಿಕ ಆರೋಗ್ಯ ಪಾಲನೆಗೆ ಪ್ರಾಮುಖ್ಯತೆ ಕೊಡದೇ ಇರುವುದು
- ಮುಂಗಡ ಪತ್ರದಲ್ಲಿ ಆರೋಗ್ಯಕ್ಕೆ ಕಡಿಮೆ ಹಣ ಮೀಸಲು ಇಟ್ಟಿರುವುದು
  ಭಾರತ ಆರೋಗ್ಯಕ್ಕೆ ಜೆ.ಡಿ.ಪಿ.ಯ ಶೇ. ೦.೭ ಹಣ ಮೀಸಲಿಟ್ಟಿದೆ
  ಇತರೇ ಬಡ ರಾಷ್ಟ್ರಗಳು ಜೆ.ಡಿ.ಪಿ.ಯ ಶೇ. ೦.೯ ಹಣ ಮೀಸಲಿಟ್ಟಿವೆ
  ಮುಂದುವರಿದ ರಾಷ್ಟ್ರಗಳು ಜೆ.ಡಿ.ಪಿ.ಯ ಶೇ. ೬.೦ ಹಣ ಮೀಸಲಿಟ್ಟಿವೆ
- ಅಗತ್ಯತೆ ಹಾಗೂ ಸರಕಾರೀ ಕ್ಷೇತ್ರದ ವಿಫಲತೆಯಿಂದ ಖಾಸಗೀ ಕ್ಷೇತ್ರದ ಬೆಳವಣಿಗೆ ಸಾಧ್ಯವಾಗಿದೆ. ಇದೊಂದೇ ಸನ್ನಿವೇಶದಲ್ಲಿ ಖಾಸಗೀ ಕ್ಷೇತ್ರ ಸರಕಾರಿ ಕ್ಷೇತ್ರದ ಮೇಲೆ ಅವಲಂಬಿಸಿದ್ದು ಸರಕಾರೀ ಕ್ಷೇತ್ರವನ್ನು ಸಂಪೂರ್ಣವಾಗಿ ಬಳಸಿಕೊಂಡಿದೆ.

| ರಾಷ್ಟ್ರ | ಒಟ್ಟು ಖರ್ಚು | ಸಾರ್ವಜನಿಕ ಕ್ಷೇತ್ರದ ಖರ್ಚು | ಖಾಸಗೀ ಕ್ಷೇತ್ರದ ಖರ್ಚು |
|---|---|---|---|
| ಭಾರತ | ೬% | ೧.೩% | ೪.೭% |
| ಬಂಗ್ಲಾದೇಶ | ೩.೨% | ೧.೪% | ೧.೮% |
| ಚೈನಾ | ೩.೫% | ೨.೧% | ೧.೪% |
| ಅಮೆರಿಕಾ | ೧೨.೫% | ೫.೬% | ೭.೦% |
| ಯು.ಕೆ | ೬.೧% | ೫.೨% | ೦.೯% |
| ವಿಶ್ವ ಸರಾಸರಿ | ೮.೧% | ೪.೯% | ೩.೨% |

ಇತರೇ ದೇಶಗಳಲ್ಲಿ (ಅಮೆರಿಕಾ ಹೊರತುಪಡಿಸಿ) ಆರೋಗ್ಯದ ಮೇಲೆ ಸಾರ್ವಜನಿಕ ಕ್ಷೇತ್ರದ ಖರ್ಚು ಹೆಚ್ಚಾಗಿರುತ್ತದೆ ಹಾಗೂ ಭಾರತ ಆರೋಗ್ಯ ಕ್ಷೇತ್ರದಲ್ಲಿ ಅತಿ ಹೆಚ್ಚು ಖಾಸಗೀಕರಣಗೊಂಡ ರಾಷ್ಟ್ರವೆಂದು ತಿಳಿದುಬರುತ್ತದೆ. ವಿಶ್ವ ವ್ಯಾಪಾರ ಸಂಸ್ಥೆ ಇದನ್ನು ಇನ್ನೂ ಹೆಚ್ಚಿಸಲು ಪ್ರಯತ್ನಿಸುತ್ತಿದೆ!

- ಸರಕಾರ ಆರೋಗ್ಯ ಕ್ಷೇತ್ರದ ವ್ಯವಸ್ಥಿತ ಬೆಳವಣಿಗೆಯತ್ತ ಗಮನಹರಿಸಿಲ್ಲದೆ ಇರುವುದು.
- ಸರಕಾರವೇ ವಿಶ್ವಬ್ಯಾಂಕ್ ಒತ್ತಡದಿಂದ ಖಾಸಗೀ ಕ್ಷೇತ್ರವನ್ನು ಪ್ರೋತ್ಸಾಹಿಸುತ್ತಿರುವುದು (೨೦೦೦ದ ಭಾರತದ ಆರೋಗ್ಯ ನೀತಿ).
- ಭಾರತದಲ್ಲಿ ಆರೋಗ್ಯ ಕ್ಷೇತ್ರದ ಸುಧಾರಣೆ ನಿಧಾನಗತಿಯಲ್ಲಿ ಸಾಗಿತ್ತು. ಆದರೆ ಇತ್ತೀಚಿಗಿನ ದಶಕಗಳಲ್ಲಿ ಸಾರ್ವಜನಿಕ ಕ್ಷೇತ್ರದ ಬಂಡವಾಳ ಕಡಿಮೆಯಾಗುತ್ತ ಖಾಸಗೀ ಕ್ಷೇತ್ರದ ಬಂಡವಾಳ ಜಾಸ್ತಿಯಾಗುತ್ತಿರುವುದು ಕಂಡುಬರುತ್ತದೆ. ಇದೇ ಸಮಯದಲ್ಲಿ ಸಂಭವಿಸಿದ ಸೂರತ್ ಪ್ಲೇಗ್‌ಗೆ ಕಾರಣ ಈ ಸಾರ್ವಜನಿಕ ಕ್ಷೇತ್ರದ ಜವಾಬ್ದಾರಿ ಕಡಿಮೆಯಾಗಿರುವುದರಿಂದ ಎಂದು ಕಂಡುಬರುತ್ತದೆ. ಖಾಸಗೀ ಕ್ಷೇತ್ರ ಸಾರ್ವಜನಿಕ ಕ್ಷೇತ್ರದ ಜವಾಬ್ದಾರಿಯನ್ನು ಹೊತ್ತುಕೊಳ್ಳುತ್ತದೆ ಎಂಬ ಭ್ರಮೆ ನಮಗೆ ಬೇಡ.

**ಖಾಸಗೀ ಕ್ಷೇತ್ರ – ಖಾಸಗೀಕರಣದೆಡೆಗೆ**

ಖಾಸಗೀಕರಣಕ್ಕೂ ಮೊದಲು ಅಂದರೆ ಸ್ವಾತಂತ್ರ್ಯ ಬಂದ ಸಮಯದಿಂದಲೂ ಆರೋಗ್ಯ ಕ್ಷೇತ್ರವನ್ನು ಕಬಳಿಸಲು ಖಾಸಗೀ ಕ್ಷೇತ್ರ ತಯಾರಾಗಿಯೇ ಇತ್ತು. ಆರೋಗ್ಯ ಕ್ಷೇತ್ರದಲ್ಲಿ ವ್ಯಾಪಾರೀಕರಣದ ಪ್ರಕ್ರಿಯೆ ೬೦ನೇ ದಶಕದಿಂದ ಪ್ರಾರಂಭವಾಗಿದೆ (ಸರ್ಕಾರೀ ಆಸ್ಪತ್ರೆಗಳಲ್ಲಿ ಪೇಯಿಂಗ್ ವಾರ್ಡ್ ಜಾರಿಗೆ ಬಂದುದು). ಇದೇ ಸಮಯದಿಂದ ಎಲ್ಲೆಡೆಗೂ ಖಾಸಗೀ ಆಸ್ಪತ್ರೆಗಳು, ನರ್ಸಿಂಗ್ ಹೋಂಗಳು, ಮೆಟರ್ನಿಟಿ ಆಸ್ಪತ್ರೆಗಳು ಪ್ರಾರಂಭವಾಗಿವೆ. ೯೦ನೇ ದಶಕದಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಅನೇಕ ಆರ್ಥಿಕ ಬದಲಾವಣೆಗಳಾಗಿ ಅವು ಭಾರತದ ಮೇಲೂ ಪರಿಣಾಮ ಬೀರಲು ಪ್ರಾರಂಭಿಸಿವೆ. ಇದೇ ಜಾಗತೀಕರಣ ನೀತಿ. ಈ ನೀತಿ ಖಾಸಗೀಕರಣವನ್ನು ಪ್ರೋತ್ಸಾಹಿಸುತ್ತದೆ. ಈ ನೀತಿ ಭಾರತ ತನ್ನ ಸರಕಾರದ ನೀತಿಗಳನ್ನು ಸಡಿಲಿಸಲು ಹಾಗೂ ಬಹುರಾಷ್ಟ್ರೀಯ ಕಂಪೆನಿಗಳನ್ನು ಬರಮಾಡಿಕೊಳ್ಳಲು ಒತ್ತಾಯ ತರುತ್ತದೆ. ವಿಶ್ವ ವ್ಯಾಪಾರ ಸಂಘಟಣೆ, ಜಾಗತೀಕರಣ ನೀತಿ, ಖಾಸಗೀಕರಣ ನೀತಿ ದಕ್ಷತೆಯವು ಎಂದು ಸಾರುತ್ತ ಜನರಲ್ಲಿ ಭ್ರಮೆ ಹುಟ್ಟಿಸಿವೆ. ಈ ಹಂತದಲ್ಲಿ ಭಾರತದಲ್ಲಿ ಆರೋಗ್ಯ ಕ್ಷೇತ್ರದಲ್ಲಿ ಸಾರ್ವಜನಿಕ ಕ್ಷೇತ್ರ ಕ್ಷೀಣಿಸುತ್ತಿರುವುದರಿಂದ ಅದರ ಸ್ಥಳವನ್ನು ಖಾಸಗೀ ಕ್ಷೇತ್ರ ಆಕ್ರಮಿಸುತ್ತಿದೆ. ಖಾಸಗೀ ಕ್ಷೇತ್ರ ಜನರ ಆರೋಗ್ಯ ಸುಧಾರಿಸುವ ಬದಲು ಲಾಭಕ್ಕೆ ಹೆಚ್ಚು ಮಹತ್ವ ಕೊಡುತ್ತಿದೆ ಎಂಬುದನ್ನು ಮರೆಯುವಂತಿಲ್ಲ. ಖಾಸಗೀ ಕ್ಷೇತ್ರದ ಆಗಮನವನ್ನು ಅನಿವಾರ್ಯ ಎಂದು ಹೇಳಲಾಗುತ್ತಿದೆ. ಭಾರತದಲ್ಲಿ ಖಾಸಗೀ ಕ್ಷೇತ್ರದ ಆರೋಗ್ಯದ ಮಾರುಕಟ್ಟೆ ೬೦,೦೦೦ ಕೋಟಿಯಿಂದ ೮೦,೦೦೦ ಕೋಟಿ ರೂಪಾಯಿಗಳಷ್ಟು.

ಈಗಿನ ದಿನಗಳಲ್ಲಿ ಖಾಸಗೀ ಕ್ಷೇತ್ರ ಒಂದು ಹೆಜ್ಜೆ ಮುಂದೆ ಹೋಗಿ ವ್ಯವಸ್ಥಿತ ಸಾಂಸ್ಥಿಕ ಆಸ್ಪತ್ರೆಗಳನ್ನು (Organised Corporate Sector) ಹಾಗೂ ಪ್ರಯೋಗಾಲಯಗಳನ್ನು (Laboratories) ಸ್ಥಾಪಿಸಿವೆ. ಈಗ ಈ ಸಾಂಸ್ಥಿಕ ಆಸ್ಪತ್ರೆ ವ್ಯವಸ್ಥೆ ಆರೋಗ್ಯ ಕ್ಷೇತ್ರದ ಕೆಲವು ತೀರ್ಮಾನಗಳನ್ನು ತೆಗೆದುಕೊಳ್ಳಲು ಪ್ರಾರಂಭಿಸಿವೆ. ಸರ್ಕಾರದ ಆರೋಗ್ಯ ಪಾಲಕರ ನಿರ್ಣಯಗಳು ಕಡೆಗಣಿಸಲ್ಪಟ್ಟಿವೆ.

**ಸಾಂಸ್ಥಿಕ ಆಸ್ಪತ್ರೆಗಳು** (Corporate Hospitals)

ಖಾಸಗೀಕರಣ ಪ್ರಕ್ರಿಯೆಯನ್ನು ಜಾರಿಗೆ ತರುವುದು ಸುಲಭವೇನೂ ಆಗಿರಲಿಲ್ಲ. ಪ್ರಾರಂಭದಲ್ಲಿ ವಿಶ್ವಬ್ಯಾಂಕ್ ಸರಕಾರೀ ಆಸ್ಪತ್ರೆಗಳನ್ನು ಜಾರಿ ಮಾಡಲು ಅಂದರೆ ಸರಕಾರಿ ಆಸ್ಪತ್ರೆ ಕಟ್ಟಡ, ಉಪಕರಣ ಔಷಧಿ ಪರಿಸ್ಥಿತಿಯನ್ನು ಸುಧಾರಿಸಲು ಸಾಲ

ಕೊಟ್ಟಿದೆ. ಈ ಸಾಲವನ್ನು ಪಂಜಾಬ್, ಕರ್ನಾಟಕ, ಆಂಧ್ರ, ಪಶ್ಚಿಮ ಬಂಗಾಲ, ಮಹಾರಾಷ್ಟ್ರ, ಒರಿಸ್ಸಾ ರಾಜ್ಯಗಳು ಪಡೆದಿವೆ. ಇನ್ನೂ ಅನೇಕ ರಾಜ್ಯಗಳು ಇದನ್ನು ಪಡೆಯಲು ಕಾದು ನಿಂತಿವೆ. ಈ ಸಾಲ ಕೊಡುತ್ತಾ ಆರೋಗ್ಯ ಸರಕಾರದ ಆರೋಗ್ಯ ನಿರ್ಣಯಗಳಲ್ಲಿ ಹಸ್ತಕ್ಷೇಪ ಮಾಡಲು ವಿಶ್ವಬ್ಯಾಂಕ್ ಪ್ರಯತ್ನ ನಡೆಸಿದೆ. ಆರೋಗ್ಯ ನೀತಿಯನ್ನು ಖಾಸಗೀಕರಣದತ್ತ ತಿರುಚಲು ಮಾಡಿದ ಪ್ರಯತ್ನವಿದು. ಈ ರೀತಿ ಕೊಟ್ಟ ಸಾಲ ಕ್ಷುಲ್ಲಕ ಪ್ರಮಾಣದ್ದಾದರೂ, ಅದರ ಉಪಯೋಗ ಸಮಂಜಸವಾಗಿರದಿದ್ದರೂ, ಅದರ ಒಟ್ಟು ಪರಿಣಾಮ ವಿಶ್ವಬ್ಯಾಂಕ್‌ಗೆ ಹೆಚ್ಚು ಪ್ರಯೋಜಕವಾಗಿದೆ. ಇದರಿಂದ ನಮಗೇನೂ ಲಾಭವಾಗಿಲ್ಲ ಹಾಗೂ ನಾವು ಆ ಹಣವನ್ನು ವಾಪಸ್ಸು ಮಾಡದೇ ಇರುವಂತಿಲ್ಲ. ಈ ಸಾಲ ಅಗತ್ಯವೇ ಇರಲಿಲ್ಲವೆಂಬುದು ಸ್ಪಷ್ಟ. ಮುಂದಿನ ಹೆಜ್ಜೆ ಖಾಸಗೀ ಸಾಂಸ್ಥಿಕ ಆಸ್ಪತ್ರೆಗಳ ನೀಲೀ ನಕ್ಷೆ ವಿದೇಶದಲ್ಲಿ ತಯಾರಾಗಿ ನಮ್ಮ ದೇಶದಲ್ಲಿ ಜಾರಿಗೊಳ್ಳುತ್ತಿದೆ. ಈ ತರಹದ ಖಾಸಗೀ ಆಸ್ಪತ್ರೆಗಳನ್ನು ಬಾಂಗ್ಲಾದೇಶ ಹಾಗೂ ಪಾಕಿಸ್ತಾನದಲ್ಲೂ ಕಾಣಬಹುದು. ಈ ಆಸ್ಪತ್ರೆಗಳನ್ನು ಪ್ರಾರಂಭಿಸುವ ಪ್ರಯೋಗ ನಿಧಾನಗತಿಯಲ್ಲಿ ಸಾಗಿದೆ ಹಾಗೂ ಈ ಪ್ರಯೋಗವನ್ನು ಎಲ್ಲೆಡೆಯೂ ವಿಸ್ತರಿಸುವ ಮುಂದಾಲೋಚನೆ ಇದೆ.

ಈ ಆಸ್ಪತ್ರೆಗಳನ್ನು ಸ್ಥಳೀಯ ವೈದ್ಯರು, ಅನಿವಾಸಿ ಭಾರತೀಯರೊಂದಿಗೆ ಸೇರಿ ಪ್ರಾರಂಭಿಸುತ್ತಾರೆ. ಇಲ್ಲಿ ವಿದೇಶೀಯರು ಇರುವುದೇ ಇಲ್ಲ. ವಿದೇಶೀಯ ನೇರ ಬಂಡವಾಳ ಇರುವುದಿಲ್ಲ. ಇಲ್ಲಿ ಮಾಲಿಕತ್ವ ಭಾರತೀಯನದೇ ಆದರೂ ಆ ಆಸ್ಪತ್ರೆಗಳಲ್ಲಿ ಉಪಯೋಗಿಸುವ ಉಪಕರಣ ಇತ್ಯಾದಿ ಬಹುರಾಷ್ಟ್ರೀಯ ಕಂಪೆನಿಗಳದ್ದು. ಬಹುರಾಷ್ಟ್ರೀಯ ಕಂಪೆನಿಗಳು ಭಾರತಕ್ಕೆ ಬರಲು ಇದೊಂದು ಹೊಸ ತಂತ್ರ. ಈ ಆಸ್ಪತ್ರೆಗಳಲ್ಲಿ ನೂರಾರು ಕೋಟಿ ರೂಪಾಯಿಯ ಬಂಡವಾಳ ಇರುತ್ತದೆ. ಅಲ್ಲಿಯ ಉಪಕರಣಕ್ಕೇ ಅರ್ಧಕ್ಕಿಂತ ಹೆಚ್ಚು ಖರ್ಚುಮಾಡಬೇಕಾಗುತ್ತದೆ. ಈ ಉಪಕರಣಗಳನ್ನು ವಿದೇಶೀಯ ಕಂಪೆನಿಗಳಾದ ಸೀಮೆನ್ಸ್, ಫಿಲಿಪ್ಸ್, ಜಿ. ಇ., ಹಿಟಾಚಿ ಮುಂತಾದವು ತಯಾರಿಸುತ್ತಿವೆ. ಭಾರತೀಯ ಕಂಪೆನಿಗಳೂ ಗುಣಮಟ್ಟ ಉಪಕರಣಗಳನ್ನು ತಯಾರಿಸಿದರೂ ಅವು ಅಗ್ಗ ಬೆಲೆಯದ್ದಾದರೂ ಅವನ್ನು ಅಳವಡಿಸಲಾಗುತ್ತಿಲ್ಲ.

ಈ ವ್ಯಾಪಾರಕ್ಕೆ ಸುಲಭವಾಗುವಂತೆ ಭಾರತದ ಸರಕಾರದ ಮೇಲೆ ಒತ್ತಡ ಬಂದಿದ್ದರಿಂದ, ಆಮದು ಕರ ಕಡಿಮೆಯಾಗಿದೆ (೧೨೦% → ೩೦%). ಈ ಆಸ್ಪತ್ರೆಗಳಿಗೆ ಸರಕಾರವೇ ಕಡಿಮೆ ಬೆಲೆಯಲ್ಲಿ ಭೂಮಿ ಕೊಡುತ್ತದೆ. ಈ ಆಸ್ಪತ್ರೆಯ ವ್ಯವಹಾರದಲ್ಲಿ ಕರ ರಿಯಾಯಿತಿಯನ್ನು ನೀಡಲಾಗಿದೆ. ಇಲ್ಲಿಯ ಚಿಕಿತ್ಸೆಗಳು ದುಬಾರಿ. ಎಲ್ಲರಿಗೂ ಭರಿಸಲು ಸಾಧ್ಯವಿಲ್ಲ. ವಿಮಾ ಕಂಪೆನಿಗಳು ಚಿಕಿತ್ಸೆ ವೆಚ್ಚವನ್ನು ಭರಿಸುತ್ತವೆ. ಈ ನೆಪದಲ್ಲಿ ಭಾರತಕ್ಕೆ ಹಲವಾರು ವಿಮಾ ಕಂಪೆನಿಗಳೂ ಬಂದಿವೆ.

ಈ ಆಸ್ಪತ್ರೆಗಳನ್ನು ವ್ಯಕ್ತಿಯ ಬದಲು ಸಂಸ್ಥೆಯ ಹೆಸರಿನಲ್ಲಿ ಮುಂದುವರೆಸಿಕೊಂಡು ಹೋಗಲಾಗುತ್ತಿದೆ. ಆದ್ದರಿಂದ ಈ ಆಸ್ಪತ್ರೆಗಳಿಗೆ ಸಾಂಸ್ಥಿಕ ಆಸ್ಪತ್ರೆಗಳೆಂದು ಕರೆಯಲಾಗಿದೆ. ಭಾರತದ ಕೆಲವು ಮುಖ್ಯ ಸಾಂಸ್ಥಿಕ ಆಸ್ಪತ್ರೆಗಳು – ಅಪಾಲೋ, ಎಸ್ಕಾರ್ಟ್ಸ್, ಫೋರ್ಟಿಸ್ ಹೆಲ್ತ್ ಕೇರ್, ಮ್ಯಾಕ್ಸ ಇಂಡಿಯಾ – ಈ ಆಸ್ಪತ್ರೆಗಳು ಈಗ ದಕ್ಷಿಣ ಭಾರತದಲ್ಲಿ ಹೆಚ್ಚು ಸಂಖ್ಯೆಯಲ್ಲಿ ಕಂಡುಬರುತ್ತಿವೆ.

ಈ ಆಸ್ಪತ್ರೆಗಳು ಸಾಮಾನ್ಯವಾಗಿ ದೊಡ್ಡ ಪಟ್ಟಣಗಳಲ್ಲಿರುತ್ತವೆ. ಈ ಆಸ್ಪತ್ರೆಗಳಲ್ಲಿ ವಿಶೇಷ ಪರೀಕ್ಷಾ ಸೌಲಭ್ಯಗಳು ಇರುತ್ತವೆ, ವಾರ್ಡ್‌ಗಳು ಸ್ವಚ್ಛವಾಗಿದ್ದು, ಸಿಬ್ಬಂದಿಗಳು ರೋಗಿಗಳ ಬಗ್ಗೆ ಗಮನ ಹರಿಸುತ್ತಾರೆ. ಕೊಠಡಿಗಳು ಹವಾನಿಯಂತ್ರಿತವಾಗಿದ್ದು, ಫೋನ್, ಟಿಲಿವಿಷನ್ ಮುಂತಾದ ಸೌಲಭ್ಯಗಳಿರುತ್ತವೆ. ಇವುಗಳಿಂದಲೇ ಈ ಆಸ್ಪತ್ರೆಗೆ ಐಷಾರಾಮದ ಆಸ್ಪತ್ರೆಗಳು ಎಂದು ಕರೆಯಬಹುದು. ಇವುಗಳು ಜನಸಾಮಾನ್ಯರ ಆಸ್ಪತ್ರೆಗಳಾಗಲು ಸಾಧ್ಯವಿಲ್ಲ. ಇತರೇ ಆಸ್ಪತ್ರೆಗಳು ಇವುಗಳನ್ನು ಅನುಕರಣೆ ಮಾಡುತ್ತಿವೆ ಹಾಗೂ ಚಿಕಿತ್ಸೆ ದುಬಾರಿಯಾಗುತ್ತದೆ.

**ಖಾಸಗೀಕರಣಕ್ಕೂ ಮೊದಲು ಅಂದರೆ ಸ್ವಾತಂತ್ರ್ಯ ಬಂದ ಸಮಯದಿಂದಲೂ ಆರೋಗ್ಯ ಕ್ಷೇತ್ರವನ್ನು ಕಬಳಿಸಲು ಖಾಸಗೀ ಕ್ಷೇತ್ರ ತಯಾರಾಗಿಯೇ ಇತ್ತು. ಆರೋಗ್ಯ ಕ್ಷೇತ್ರದಲ್ಲಿ ವ್ಯಾಪಾರೀಕರಣದ ಪ್ರಕ್ರಿಯೆ 60ನೇ ದಶಕದಿಂದ ಪ್ರಾರಂಭವಾಗಿದೆ (ಸರ್ಕಾರೀ ಆಸ್ಪತ್ರೆಗಳಲ್ಲಿ ಪೇಯಿಂಗ್ ವಾರ್ಡ್ ಜಾರಿಗೆ ಬಂದುದು). ಇದೇ ಸಮಯದಿಂದ ಎಲ್ಲೆಡೆಗೂ ಖಾಸಗೀ ಆಸ್ಪತ್ರೆಗಳು, ನರ್ಸಿಂಗ್ ಹೋಂಗಳು, ಮೆಟರ್ನಿಟಿ ಆಸ್ಪತ್ರೆಗಳು ಪ್ರಾರಂಭವಾಗಿವೆ. 90ನೇ ದಶಕದಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಅನೇಕ ಆರ್ಥಿಕ ಬದಲಾವಣೆಗಳಾಗಿ ಅವು ಭಾರತದ ಮೇಲೂ ಪರಿಣಾಮ ಬೀರಲು ಪ್ರಾರಂಭಿಸಿವೆ.**

ಈ ಆಸ್ಪತ್ರೆಗಳಲ್ಲಿ ಹಲವಾರು ವೈದ್ಯಕೀಯ ವಿಭಾಗಗಳಿರುತ್ತವೆ. ಈ ಆಸ್ಪತ್ರೆಗಳಲ್ಲಿ ಸಾಮಾನ್ಯವಾಗಿ ಎಲ್ಲಾ ಅತ್ಯಾಧುನಿಕ ಪ್ರಯೋಗಗಳು, ಚಿಕಿತ್ಸೆಗಳು ದೊರಕುತ್ತವೆ. ಇದರರ್ಥ ಇಲ್ಲಿ ಬೇರೆಡೆಗೆ ಕಂಡುಹಿಡಿಯಲಾಗದ ರೋಗಗಳನ್ನು ಕಂಡುಹಿಡಿದು ಚಿಕಿತ್ಸೆ ನೀಡಲಾಗುವುದು ಎಂದಲ್ಲ. ಇತರೆಡೆಗೆ ಸುಮಾರು ಎಲ್ಲ ರೋಗಗಳನ್ನೂ ಕಂಡುಹಿಡಿಯಲಾಗುವುದಲ್ಲದೇ ಚಿಕಿತ್ಸೆಗಳನ್ನು ಮಾಡಲಾಗುವುದು. ಇಲ್ಲಿಯ ವಿಧಾನವೆಂದರೆ ಎಲ್ಲ ರೋಗಿಗಳನ್ನೂ ದಾಖಲು ಮಾಡುವುದು (ಉಚಿತವಲ್ಲ) ಎಲ್ಲ ಪರೀಕ್ಷೆಗಳನ್ನೂ ಮಾಡಿಸುವುದು, ನಂತರ ಚಿಕಿತ್ಸೆ ಮಾಡುವುದು. ಈ ಎಲ್ಲ ಪ್ರಯೋಗ ಹಾಗೂ ಚಿಕಿತ್ಸೆಗಳು ಇತರೇ ಖಾಸಗೀ ಆಸ್ಪತ್ರೆಗಳಿಗಿಂತ ಅತ್ಯಂತ ದುಬಾರಿ. ಸರಕಾರದಿಂದ ವಿಶೇಷ ಸವಲತ್ತುಗಳನ್ನು ಪಡೆದ ಈ ಆಸ್ಪತ್ರೆಗಳು ಕನಿಷ್ಠ ಸಂಖ್ಯೆಯ ಬಡ ವ್ಯಕ್ತಿಗಳಿಗೆ ಉಚಿತ ಚಿಕಿತ್ಸೆ ನೀಡುತ್ತೇವೆಂದು ಮೊದಲೇ ಒಪ್ಪಿಕೊಂಡಿರುತ್ತವೆ. ಆದರೆ ದಾಖಲೆಗಳಿಂದ ಕಂಡುಬಂದುದೇನೆಂದರೆ, ಈ ಆಸ್ಪತ್ರೆಗಳು ಉಚಿತ ಚಿಕಿತ್ಸೆಯನ್ನೇ ನೀಡದಿರುವುದು. ಈ ಆಸ್ಪತ್ರೆಯಲ್ಲಿ ನುರಿತ ವೈದ್ಯರೇನೂ ಕಡಿಮೆ ಇಲ್ಲ. ಸರಕಾರಿ ಕೆಲಸವನ್ನು ಮಾಡುತ್ತಲೇ ಇಲ್ಲೂ ಕೆಲಸ ಮಾಡಲು ತಯಾರಾಗಿರುತ್ತಾರೆ. ಈ ಆಸ್ಪತ್ರೆಗಳಲ್ಲಿ ಕೆಲಸ ಮಾಡುವ ವೈದ್ಯರ ಮನೋಭಾವನೆಯೂ ಬದಲಾಗಿಬಿಡುತ್ತದೆ. ಅವರಲ್ಲಿ ಕೆಲವರು 'ಹಿಪೋಕ್ರೆಟಿಕ್ ಓತ್' ಮರೆತುಬಿಡುತ್ತಾರೆ. ಅನಗತ್ಯ ಪರೀಕ್ಷೆ, ಚಿಕಿತ್ಸೆಗಳನ್ನು ಮಾಡಿಸಿಯೇ ಬಿಡಲು ತಯಾರಾಗುತ್ತಾರೆ. ಇಂತಹ ವಿಷಯಗಳನ್ನು ಚಿಕಿತ್ಸೆಗಳ ಆಡಿಟ್ (Audit) ಮಾಡಿದಾಗಲೇ ಹೊರಬರುತ್ತವೆ. ಆದರೆ ಈ ಆಸ್ಪತ್ರೆಗಳು ಸಂಪೂರ್ಣವಾಗಿ ಅನಿಯಂತ್ರಿತವಾಗಿರುವುದರಿಂದ, ಚಿಕಿತ್ಸಾ ಆಡಿಟ್‌ಗಳು ಆಗುವುದೇ ಇಲ್ಲ. ಈ ಆಸ್ಪತ್ರೆಗಳಲ್ಲಿ ಸಾಮಾನ್ಯವಾಗಿ Curative Treatment ಗಳಿಗೆ ಗಮನ ಹರಿಸಲಾಗುತ್ತಿದೆ. ಯಾವುದೇ ತೊಂದರೆಯಿದ್ದರೂ ತಮ್ಮ ಕುಟುಂಬ ವೈದ್ಯನ ಬದಲು ಈ ಕೇಂದ್ರಗಳಿಗೆ ಹೋಗಿ ಎಲ್ಲ ಚಿಕಿತ್ಸೆಯನ್ನು ಒಂದೇ ಸ್ಥಳದಲ್ಲಿ ಪಡೆಯಬಹುದು ಎಂಬ ಮನೋಭಾವನೆ ಅನೇಕರಿಗೆ ಬಂದಿದೆ. ಆದರೆ ಈ ಚಿಕಿತ್ಸೆಗಳು ದುಬಾರಿಯಾಗಿರುವುದರಿಂದ ಅಗತ್ಯವಿಲ್ಲದ್ದರಿಂದ, ಈ ಕೇಂದ್ರಗಳಲ್ಲಿ Preventive Treament ಬಗ್ಗೆ ಗಮನಹರಿಸದೇ ಇರುವುದರಿಂದ, ಕ್ರಮೇಣ ಕುಟುಂಬ ವೈದ್ಯನ ಚಿಕಿತ್ಸೆಗೆ ಬರುವ ಅಗತ್ಯತೆ ಉಂಟಾಗುತ್ತದೆ.

ಈಗಿನ ದಿನಗಳಲ್ಲಿ ಸುಮಾರು ಎಲ್ಲ ಚಿಕಿತ್ಸೆಯೂ ಈ ಸಾಂಸ್ಥಿಕ ಆಸ್ಪತ್ರೆಗಳಲ್ಲಿ ದೊರಕುವುದರಿಂದ, ಮಧ್ಯಪ್ರಾಚ್ಯದಿಂದ ಹಲವಾರು ಜನರು ಈ ಕೇಂದ್ರಗಳಿಗೆ ಚಿಕಿತ್ಸೆ ಪಡೆಯಲು ಬರುತ್ತಾರೆ. ಇದು ಸ್ವಾಗತಾರ್ಹ. ಆದರೆ ನಮ್ಮ ಜನರ ಆರೋಗ್ಯ ಸುಧಾರಿಸುವ ಅಗತ್ಯತೆ ಇದ್ದರೂ ಇತರರ ಆರೋಗ್ಯ ಸುಧಾರಿಸಿ ಹಣಗಳಿಕೆಯಲ್ಲಿ ತೊಡಗಿರುವ ಆಸ್ಪತ್ರೆಗಳು ನಮಗೆ ಎಷ್ಟು ಅಗತ್ಯ ಎಂಬುದನ್ನು ನಮ್ಮ ಸರಕಾರ ಕಡೆಗಣಿಸಿದೆ ಎಂದು ಹೇಳಬಹುದು.

ಯಾವುದೇ ವ್ಯವಸ್ಥೆ ಪರಿಣಾಮಕಾರಿಯಾಗಬೇಕಾದರೆ, ಅದು ಹೇಗೆ ಕೆಲಸ ಮಾಡುತ್ತಿದೆ ಎಂದು ತಿಳಿಯಬೇಕಾದರೆ, ಅಲ್ಲಿಯ ಗುಣಮಟ್ಟದ ಅಧ್ಯಯನ, ಚಿಕಿತ್ಸಾ ವೆಚ್ಚದ ಹೋಲಿಕೆಯ ಅಧ್ಯಯನ, ಚಿಕಿತ್ಸೆಯ ಅಗತ್ಯತೆ ಅನಗತ್ಯತೆಯ ಅಧ್ಯಯನದಿಂದಲೇ ಅದು ಸಾಧ್ಯ. ಆದರೆ ಈ ಖಾಸಗೀ ಸಾಂಸ್ಥಿಕ ಆಸ್ಪತ್ರೆಗಳು ಸಂಪೂರ್ಣ ಅನಿಯಂತ್ರಿತ. ಈ ಆಸ್ಪತ್ರೆಗಳಲ್ಲಿ ಅತ್ಯಾಧುನಿಕ ಪ್ರಯೋಗಾಲಯ, ಚಿಕಿತ್ಸಾ ಸೌಲಭ್ಯಗಳು ಇದೆಯೆಂದಾಕ್ಷಣ ಅದರ ಕಾರ್ಯವೈಖರಿ ಸರಿಯಾಗಿಯೇ ಇರುತ್ತದೆ ಎಂದರ್ಥವಲ್ಲ. ಆದ್ದರಿಂದ ಎಲ್ಲ ಚಿಕಿತ್ಸಾ ಕೇಂದ್ರಗಳನ್ನು ಪರಿಣಾಮಕಾರಿಯಾಗಿ ಕೆಲಸ ಮಾಡುವಂತೆ ಮಾಡಲು ನೋಂದಣಿ, ಗುಣಮಟ್ಟ ನಿಯಂತ್ರಣ ಮುಂತಾದವುಗಳ ಬಗ್ಗೆ ಗಮನಹರಿಸಬೇಕು. ಆದರೆ ಇದೇ ಭ್ರಷ್ಟಾಚಾರಕ್ಕೆ ಸಹಾಯ ಮಾಡದಂತೆ ಗಮನವಹಿಸಬೇಕು. ಎಲ್ಲೆಡೆಯೂ ಆರೋಗ್ಯ ಸೇವೆಗಳು ದೊರಕದೇ ಇದ್ದ ಕಾರಣ, ಸರಕಾರಿ ಆಸ್ಪತ್ರೆಗಳ ಬಗ್ಗೆ ವ್ಯವಸ್ಥಿತ

ಅಪಪ್ರಚಾರ ಹಾಗೂ ಸರಕಾರಿ ಆಸ್ಪತ್ರೆಗಳು ಭ್ರಷ್ಟಾಚಾರದಿಂದ ಮುಳುಗಿದ್ದ ಕಾರಣ, ಈ ತರಹದ ಸಾಂಸ್ಥಿಕ ಆಸ್ಪತ್ರೆಗಳಿಗೆ ಬೇಡಿಕೆ ಬಂದಿದೆ. ಈ ಆಸ್ಪತ್ರೆಗಳು ತಂತ್ರಜ್ಞಾನ ಆಧಾರಿತ ದುಬಾರಿ ಆಸ್ಪತ್ರೆಗಳು.

ಈ ಆಸ್ಪತ್ರೆಗಳಲ್ಲಿ ಚಿಕಿತ್ಸೆಯನ್ನು ಜನರ ಮೇಲೆ ಹೇರಲಾಗುತ್ತಿದೆ ಹಾಗೂ ಕ್ಷುಲ್ಲಕ ಕಾರಣಗಳಿಂದ ಅನೇಕ ಬಾರಿ ಚಿಕಿತ್ಸೆಯನ್ನು ತಿರಸ್ಕರಿಸಲಾಗುತ್ತದೆ. ಈ ಆಸ್ಪತ್ರೆಗಳು ನಾಗರಿಕ ಮಾದರಿ ಸನ್ನದನ್ನು ಅನುಸರಿಸಲು ಒತ್ತಾಯ ತರಬೇಕು. ಈ ಆಸ್ಪತ್ರೆಗಳು ಸರಕಾರಕ್ಕೆ ಬದ್ಧವಾಗಿರದಿದ್ದರೂ ಜನಸಾಮಾನ್ಯರಿಗೆ ಬದ್ಧವಾಗಿರುವುದು ಅತ್ಯಗತ್ಯ.

**ಸಾಂಸ್ಥಿಕ ಆಸ್ಪತ್ರೆಗಳಿಗೆ ನಾಗರಿಕ ಸನ್ನದು**

- ವೈದ್ಯನ ತೀರ್ಮಾನದ ಹಾಗೂ ರೋಗಿಯ ಒಪ್ಪಿಗೆಯ ನಂತರವೇ ಸಮಗ್ರ ಚಿಕಿತ್ಸೆಯನ್ನು ಪ್ರಾರಂಭಿಸುವುದು.
- ಚಿಕಿತ್ಸೆ ಉಪಯೋಗಿಸುವವರಿಗೆ ರೋಗದ ಬಗ್ಗೆ ಮಾಹಿತಿ, ಚಿಕಿತ್ಸೆಯ ಪ್ರಗತಿ, ಚಿಕಿತ್ಸೆಯ ಅವಧಿ ಹಾಗೂ ಆರೋಗ್ಯದ ಮೇಲೆ ಚಿಕಿತ್ಸೆಯ ಪರಿಣಾಮ ಮುಂತಾದವುಗಳನ್ನು ವಿವರಿಸಬೇಕಾಗುವುದು.
- ಚಿಕಿತ್ಸೆ ಬಗ್ಗೆ ಯಾವುದೇ ಅಸಮಾಧಾನವಿದ್ದಲ್ಲಿ ಚಿಕಿತ್ಸೆಯನ್ನು ಸರಿಪಡಿಸಬೇಕು.
- ಚಿಕಿತ್ಸೆ ಉಪಯೋಗಿಸುವವರಿಗೆ ದೊರಕುವ ಸೌಲಭ್ಯಗಳು, ಚಿಕಿತ್ಸೆಗೆ ಖರ್ಚು, ಚಿಕಿತ್ಸೆಗೆ ರೋಗಿಯಿಂದ ಏನು ಅಪೇಕ್ಷಿಸಲಾಗುವುದು ಮುಂತಾದವುಗಳನ್ನು ರೋಗಿಗೆ, ಅವನ ಭಾಷೆಯಲ್ಲಿ ಸ್ಪಷ್ಟ ಹಾಗೂ ಸರಳವಾಗಿ ಹೇಳಬೇಕು.
- ಚಿಕಿತ್ಸೆ ಪಡೆಯುವವರು ಚಿಕಿತ್ಸೆ ಬಗ್ಗೆ ಸ್ಪಷ್ಟೀಕರಣ ಪಡೆಯಬಹುದು.
- ಭೇದಭಾವವಿಲ್ಲದೆ ಸೌಲಭ್ಯಗಳನ್ನು ಎಲ್ಲರಿಗೂ ದೊರಕುವಂತೆ ಮಾಡಬೇಕು.
- ಅಗತ್ಯವಿಲ್ಲದೆ ಇದ್ದರೆ ರೋಗಿಯನ್ನು ತುರ್ತು ವಾರ್ಡಿನಲ್ಲಿ (Intensive Care Unit) ಇಡದೇ ಇರುವುದು. ರೋಗಿಯನ್ನು ದಾಖಲಿಸಲು ಹಾಸಿಗೆ ಇಲ್ಲದಿದ್ದಲ್ಲಿ ರೋಗಿಗೆ ಅಗತ್ಯ ಚಿಕಿತ್ಸೆ ನೀಡಿ ನಂತರ ಇನ್ನಾವುದಾದರೂ ಆಸ್ಪತ್ರೆಗೆ ಸ್ಥಳಾಂತರಿಸಲು ವ್ಯವಸ್ಥೆ ಮಾಡಬೇಕು.
- ರೋಗಿಯನ್ನು ದಾಖಲಿಸುವಾಗ ಎಷ್ಟು ಖರ್ಚಾಗುತ್ತದೆ ಎಂದು ಮೊದಲೇ ತಿಳಿಸಬೇಕು.
- ರೋಗಿಗಳಿಗೆ ಅನುಮಾನವಿದ್ದಲ್ಲಿ ದೂರುಗಳನ್ನು ಸ್ವೀಕರಿಸಬೇಕು ಹಾಗೂ ಅಗತ್ಯವಿದ್ದರೆ ಅಲ್ಲೇ ಎರಡನೆಯ ಅಭಿಪ್ರಾಯ ದೊರಕಿಸಿಕೊಡಬೇಕು.
- ಎಲ್ಲ ಸಾಂಸ್ಥಿಕ ಆಸ್ಪತ್ರೆಗಳು ಆಸ್ಪತ್ರೆಯವರಲ್ಲದೆ ಕೆಲವು ಪ್ರಮುಖ ನಾಗರಿಕರನ್ನೊಳಗೊಂಡು ಸಮಿತಿ ರಚಿಸಿ, ಆ ಸಮಿತಿಯ ತೀರ್ಮಾನಕ್ಕೆ ಬದ್ಧರಾಗಿರಬೇಕು.
- ನಾಗರಿಕ ಸನ್ನದು ದೊರಕುತ್ತಿದೆ ಎಂಬ ವಿಷಯವನ್ನು ಆಸ್ಪತ್ರೆಯ ಸೌಲಭ್ಯ ಉಪಯೋಗಿಸುವವರೆಲ್ಲರಿಗೂ ತಿಳಿಸಬೇಕು.
- ಸಮಿತಿಯನ್ನು ಎರಡು ವರ್ಷಕ್ಕೊಮ್ಮೆ ಪುನರ್ಘಟಿಸಬೇಕು.
- ಗುಣಮಟ್ಟ ಹೆಚ್ಚಿಸುವುದು, ಸಾಮರ್ಥ್ಯವನ್ನು ಹೆಚ್ಚಿಸುವ ಬಗ್ಗೆ ಗಮನಕೊಡಬೇಕು.
- ಸಾಂಸ್ಥಿಕ ಆಸ್ಪತ್ರೆಗಳು ನಾಗರಿಕ ಸನ್ನದನ್ನು ಒಪ್ಪಿಕೊಂಡಿರಲಿಕ್ಕಿಲ್ಲ. ಈಗಲಾದರೂ ಅವು ಒಪ್ಪಿಕೊಳ್ಳುವಂತೆ ಸರಕಾರ ಅದರ ಮೇಲೆ ಒತ್ತಡ ಹೇರಬೇಕು ಎಂಬುದು ಜನಾರೋಗ್ಯ ಸಂಘಟನೆಗಳ ಆಶಯ.

ಸಾಂಸ್ಥಿಕ ಆಸ್ಪತ್ರೆಗಳು ಪ್ರಾರಂಭವಾಗಿರುವುದು ಸರಕಾರದ ವೈಫಲ್ಯದ ಚಿಹ್ನೆ. ಸಾಂಸ್ಥಿಕ ಆಸ್ಪತ್ರೆಗಳು ದುಬಾರಿ ಹಾಗೂ ಎಲ್ಲರಿಗೂ ಎಟುಕದಂತಿವೆ. ಈಗಲೂ ಎಚ್ಚೆತ್ತುಕೊಂಡು ಅಗತ್ಯವಿದ್ದಲ್ಲಿ ಸರಕಾರಿ ಆಸ್ಪತ್ರೆಗಳನ್ನು ತೆರೆಯಬೇಕು ಹಾಗೂ ಇರುವ ಆಸ್ಪತ್ರೆಗಳಲ್ಲಿ ಹೆಚ್ಚಿನ ವ್ಯವಸ್ಥೆಯನ್ನು ಒದಗಿಸಬೇಕು. ಜನಾರೋಗ್ಯ ಸುಧಾರಿಸಲು ಇದೊಂದೇ ಪರಿಹಾರ, ಸಾಂಸ್ಥಿಕ ಆಸ್ಪತ್ರೆಗಳಲ್ಲ.

**ಡಾ॥ ಪ್ರಕಾಶ್ ಸಿ. ರಾವ್**
ನಂ. ೭೩/೨, ಮೊದಲನೇ ಆರ್ ಬಡಾವಣೆ, ರಾಜಾಜಿನಗರ
ಬೆಂಗಳೂರು - ೫೬೦ ೦೧೦

# ಆಪರೇಷನ್ ಪೇಷಂಟ್ಸ್!

• ಎಚ್. ಎಲ್. ಕೇಶವಮೂರ್ತಿ

ಇತ್ತೀಚೆಗೆ ವೈದ್ಯರ ಬಳಿಗೆ ಹೋಗಲೇ ದಿಗಿಲಾಗುತ್ತದೆ. ಯಾವುದೇ ಸಣ್ಣ ರೋಗವನ್ನೂ ನಿರ್ಲಕ್ಷಿಸಬಾರದು, ಅದೇ ಹೆಮ್ಮರವಾಗಿ ಬೆಳೆದು ಜೀವಕ್ಕೆ ಗಂಡಾಂತರ ತರಬಹುದು ಎನ್ನುವ ಹಿರಿಯರ ಮಾತಿಗೆ ಮನ್ನಣೆ ನೀಡಿ ವೈದ್ಯರ ಬಳಿಗೆ ಹೋದರೆ ಏನಾಗುತ್ತೆ ಅಂತೀರಿ. ಹಿಂದೆಲ್ಲ ರೋಗಿಯನ್ನು ತಪಾಸಣೆ ಮಾಡಿ, ಬಹಳಷ್ಟು ಸಲ ಆತ ಹೇಳಿದ ವಿವರಗಳ ಆಧಾರದ ಮೇಲೇ ಔಷಧ ನೀಡಿ ಸಾಗಹಾಕುತ್ತಿದ್ದರು. ವೈದ್ಯಕೀಯ ಶಾಸ್ತ್ರ ಪ್ರಗತಿ ಹೊಂದಿದಂತೆಲ್ಲ ರೋಗದ ಮೂಲವನ್ನು ಕಂಡುಹಿಡಿಯುವ ಉದ್ದೇಶದಿಂದ ಹತ್ತಾರು ಪರೀಕ್ಷೆಗಳಿಗೆ ರೋಗಿಯನ್ನು ಗುರಿ ಮಾಡಿ, ಅದನ್ನು ಪತ್ತೆ ಹಚ್ಚಿ ಸೂಕ್ತ ಚಿಕಿತ್ಸೆ ನೀಡಲಾಗುತ್ತದೆ. ಎಷ್ಟೋ ಪರೀಕ್ಷೆಗಳು ಅನವಶ್ಯಕವಾಗಿತ್ತು ಅನ್ನಿಸಬಹುದು, ಹಣ ನೀರಿನಂತೆ ಹರಿದುಹೋಗಬಹುದು ಅದು ಅಪಾಯದ ಮಾತು. ಈ ಎಲ್ಲ ಪರೀಕ್ಷೆಗಳ ಪರಿಣಾಮವಾಗಿ ನಿಮಗೆ ಬಡಿದಿರುವುದು ಯಾವುದೋ ಸಣ್ಣ ರೋಗ ಅಲ್ಲ, ಆದರೆ ನಿಮ್ಮ ದೇಹ ಭಯಂಕರ ರೋಗದ ಆವಾಸಸ್ಥಾನ ಅನ್ನುವುದು ಅರಿವಿಗೆ ಬರುತ್ತದೆ. ಯಾಕೋ ಕಣ್ಣು ಮಂಜು ಎಂದು ಆಧುನಿಕ ವೈದ್ಯರ ಬಳಿಗೆ ಹೋದರೆ, ನಿಮ್ಮ ಮಂಜಿಗೆ ಕಾರಣ ಕಣ್ಣಲ್ಲ ಕ್ಯಾನ್ಸರ್ ಭೂತ ಎಂದು ಮನದಟ್ಟು ಮಾಡಿಕೊಡುತ್ತಾರೆ; ಮಂಡಿನೋವಿನ ಮೂಲ ಕ್ಷಯದಲ್ಲಿದೆ ಎಂದು ಸಾಬೀತುಪಡಿಸುತ್ತಾರೆ; ಉಪೇಕ್ಷಿಸಬಹುದಾದಂತಹ ರೋಗಗಳೆಲ್ಲವೂ ಭಯಂಕರ ಕಾಯಿಲೆಯ ಲಕ್ಷಣಗಳೆಂದು ಪರೀಕ್ಷೆಗಳ ಮೂಲಕ ಖಚಿತಪಡಿಸುತ್ತಾರೆ. ಇಂತಹ ಅನುಭವದಿಂದ ನಾನು ಈ ಪ್ರಪಂಚದಲ್ಲಿ ಆರೋಗ್ಯವಂತ ಮನುಷ್ಯರೇ ಇಲ್ಲ, ಎಲ್ಲರ ದೇಹವೂ ಒಂದಲ್ಲ ಒಂದು ಭಯಂಕರ ರೋಗದ ಆವಾಸಸ್ಥಾನವಾಗಿದೆ ಎನ್ನುವ ತೀರ್ಮಾನಕ್ಕೆ ಬಂದಿದ್ದೇನೆ.

ನಿಮ್ಮ ಸದೃಢ ದೇಹ ರೋಗ ಮುಕ್ತವಾಗಿದೆ ಎಂಬ ಮಾನಸಿಕ ನೆಮ್ಮದಿ ದೊರಕ ಬೇಕಿದ್ದರೆ ವೈದ್ಯರ ಬಳಿಗೆ ಹೋಗದಿರುವುದೇ ಮದ್ದು. ಖಾಸಗಿ ವೈದ್ಯರ ಬಳಿ ಹೋದರೆ ಇಂತಹ ಸಮಸ್ಯೆಗಳು ಉದ್ಭವಿಸುತ್ತವೆ, ಸರ್ಕಾರಿ ವೈದ್ಯರ ಬಳಿ ಹೋದರೆ ಇಂತಹ ಪರೀಕ್ಷೆಗಳಿಗೆ ಒಳಪಡುವ ಪ್ರಮೇಯ ಒದಗಿ ಬರುವುದಿಲ್ಲ ಎಂದು ಕೆಲವರು ಆಕ್ಷೇಪಿಸಬಹುದು. ಇದಕ್ಕೆ ಅವರ ಅಜ್ಞಾನವೇ ಕಾರಣ ಎಂದು ವಿಷಾದಿಸಬೇಕಾಗಿದೆ. ಸರ್ಕಾರಿ ಆಸ್ಪತ್ರೆ ಇರುವುದು ಅಲ್ಲಿಗೆ ಹೋದರೂ ಸಾಯುತ್ತೇವೆ, ಹೋಗದಿದ್ದರೂ ಸಾಯುತ್ತೇವೆ ಎಂಬ ತತ್ವಜ್ಞಾನಿಗಳಾದ ನಿರ್ಗತಿಕರಿಗೆ ಮಾತ್ರ. ಕೈಯಲ್ಲಿ ಅಲ್ಪಸ್ವಲ್ಪ ಹಣ ಇದ್ದವರು ಹಾಗಿರಲಿ ಯಾವುದಾದರೂ ಮೂಲದಿಂದ ಸಾಲ ಎತ್ತುವ ಶಕ್ತಿ ಉಳ್ಳವರೂ ಅಲ್ಲಿಗೆ ತಮ್ಮ ಪಾದ ಸ್ಪರ್ಶ ಮಾಡುವುದು ಅಪಾಯಕಾರಿಯೂ ಅನಾಹುತಕಾರಿಯೂ ಆದುದು. ಒಂದು ವೇಳೆ ಇಂತಹ ದುಸ್ಸಾಹಸಕ್ಕೆ ಇಳಿದಿದ್ದೇ ಆದರೆ, ಹಂತ ಹಂತದಲ್ಲೂ ಅವರವರ ಯೋಗ್ಯತೆಯ ಅನುಸಾರ ಕೈಬಿಸಿ ಮಾಡಿದರೂ ತಮ್ಮ ಅಲ್ಲಿನ ಇರುವಿಕೆಯೇ ಮಹದುಪಕಾರ ಮಾಡಿದಂತೆ ಎಂಬ ಭಾವನೆಯ ಸಿಬ್ಬಂದಿಯ ತಿರಸ್ಕಾರ ನೋಟ ನಿಮಗೆ ಸಿಗುವ ಬಳುವಳಿ. ಅಲ್ಲದೆ ಸರ್ಕಾರಿ ಆಸ್ಪತ್ರೆಯಲ್ಲಿ ತಪಾಸಣೆ ನಡೆಸಿದ ವೈದ್ಯ ಮಹಾಶಯರು ಸಂಪೂರ್ಣ ಗುಣಮುಖರಾಗಲು ಖಾಸಗಿಯಾಗಿ ಭೇಟಿ ಮಾಡಬೇಕೆಂದು ರೋಗಿಗೆ ಸೂಚಿಸುವುದೂ ಉಂಟು. ಅಂದರೆ ಏನಾದ ಹಾಗಾಯಿತು. ಪುನರಪಿ ಅಲ್ಲಿಗೇ ತಲುಪುತ್ತೀರಿ!

ಬೇರೆಯವರ ವಿಷಯ ನನಗೆ ಗೊತ್ತಿಲ್ಲ, ನಾನಂತೂ ವೈದ್ಯರ ಬಳಿಗೆ ಹೋಗಬಾರದೆಂದು ಶಪಥ ಮಾಡಿದ್ದೇನೆ. ಕೆಲವರು ನೋವಿನ ಉಪಶಮನಕ್ಕಾಗಿ ತಾವೇ ಗುಳಿಗೆಗಳನ್ನು ಕೊಂಡು ನುಂಗುವುದು ಉಂಟು. ನಾನು ಈ ರೀತಿಯ ಸ್ವಯಂ ವೈದ್ಯನೂ ಅಲ್ಲ– ಮನೆವೈದ್ಯ. ದೇಹಬಾಧೆ ಕಾಣಿಸಿಕೊಂಡಾಗ ಅಜ್ಜಿಗೋ ತಾಯಿಗೋ ತಿಳಿಸಿ ಅವರು ಮಾಡಿಕೊಟ್ಟ ಕಷಾಯವನ್ನೋ ಲೇಹ್ಯವನ್ನೋ ಮೆದ್ದು ನೆಮ್ಮದಿಯಾಗಿರುತ್ತೇನೆ.

ಅವತ್ತು ಏನಾಯಿತು ಅಂದರೆ ಸ್ಕೂಟರಿನಲ್ಲಿ ಬರುತ್ತಿರುವಾಗ ಎಡಗೈ ಚಳಕ್ ಅಂದ ಹಾಗಾಯಿತು. ಇಂತಹ ಕುದುಕಲು ರಸ್ತೆಗಳನ್ನು ಉಳಿಸಿಕೊಂಡಿರಬೇಕಾದರೆ ನಗರಸಭೆ ಸಿಬ್ಬಂದಿಗೂ ವೈದ್ಯರುಗಳಿಗೂ ಯಾವುದೋ ರಹಸ್ಯ ಒಡಂಬಡಿಕೆ ಆಗಿರಬೇಕು ಎಂದು ಅವರಿಗೆ ಹಿಡಿಶಾಪ ಹಾಕುತ್ತಾ ಮನೆ ತಲುಪಿದೆ. ನೋವು ಯಾಕೋ ಹೆಚ್ಚಾಗಿ ಎಡಗೈ ಸೆಳೆತ ಜೋರಾಯಿತು. ಬಾಧೆ ವಿಪರೀತವಾಗಿ ಇನ್ನು ತಡೆದುಕೊಳ್ಳಲು ಅಸಾಧ್ಯ ಅನ್ನಿಸಿದಾಗ ಅನಿವಾರ್ಯವಾಗಿ ವೈದ್ಯರ ಬಳಿಗೆ ಹೋದೆ. ಅವರು ಪರಿಚಯಸ್ಥರು, ಜಮಾನಾ ಕಾಲದವರು. ಈಗಿನ ಕಾಲದ ಪಡ್ಡೆ ವೈದ್ಯರು ರೋಗಿ ನೋಡಬೇಕಾದರೂ ನೂರು ಮಡಗು ಅನ್ನುತ್ತಾರೆ. ರಸ್ತೇಲಿ ಓಡಾಡುವವರನ್ನು ನೋಡಿದ್ದಕ್ಕೆ ಎಷ್ಟು ಚಾರ್ಜು ಮಾಡಬಹುದು ಈ ಹುಡುಗ ಮುಂಡೇವು ಅಂತ ಅನುಮಾನ ಬರುತ್ತೆ. ಅವರು ಅಂತಹವರಲ್ಲ. ಕೂಲಂಕಷವಾಗಿ ತಪಾಸಣೆ ಮಾಡಿ ಏನೂ ಆಗಿಲ್ಲ ಅನ್ನುವ ಭರವಸೆ ನೀಡಿ ಈ ಗುಳಿಗೆ ನುಂಗಿ ಎಂದು ಚೀಟೀಲಿ ಬರೆದುಕೊಟ್ಟರು. ಐದು ರೂಪಾಯಿ ಕೊಡಿ ಸಾಕು ಅಂತಾನೂ ಅಂದರು. ಈ 'ಐದು ರೂಪಾಯಿ ಡಾಕ್ಟರು' ಏನು ಗುಣ ಮಾಡಿಯಾನು ಅಂತಾನೋ ಏನೋ ಜನರ ಸುಳಿವೇ ಇರಲಿಲ್ಲ. ನನಗೂ ಈ ಅನುಮಾನ



ತಲೆದೋರದರೂ ಸದ್ಯ ಇಷ್ಟರಲ್ಲೇ ಮುಗಿಯಿತಲ್ಲ ಅಂತ ಸಮಾಧಾನ ಮಾಡಿಕೊಂಡೆ. ಐದು ರೂಪಾಯಿ ಡಾಕ್ಟರ ಆರು ಕಾಸು ಮೂರು ಕಾಸಿನ ಗುಳಿಗೆ ನುಂಗಿದರೂ ಗುಣ ಕಾಣದಾದಾಗ ಮತ್ತೆ ಅವರ ಬಳಿಗೆ ಹೋದೆ. ಪರೀಕ್ಷಿಸಿದ ಡಾಕ್ಟರು 'ಗಾಬರಿಯಾಗುವಂತಹದ್ದೇನೂ ಇಲ್ಲ, ಯಾವುದಕ್ಕೂ ಒಂದು ಇಸಿಜಿ ಮಾಡಿಸಿಬಿಡಿ' ಅಂದರು. 'ಎಲ್ಲಿ ಬೇಕಾದರೂ ಮಾಡಿಸಿ. ಅವಸರ ಏನೂ ಇಲ್ಲ, ನಾಳೇನೋ ನಾಡಿದ್ದೋ ಬಿಡುವಾದಾಗ ಮಾಡಿಸಿ' ಅಂತ ಹೇಳಿ ಅದೇನನ್ನೋ ಚೀಟೀಲಿ ಬರೆದುಕೊಟ್ಟರು.

ಈ ಇಸಿಜಿ ಅನ್ನೋ ಪರೀಕ್ಷೆಗೆ ಅದೆಷ್ಟು ಆಗುತ್ತೋ ಏನೋ ಇವತ್ತು ವಿಚಾರಿಸಿ ನಾಳೇನೋ ನಾಡಿದ್ದೋ ಮಾಡಿಸಿದರಾಯಿತು ಅಂತ ನಗರದಲ್ಲಿ ಪ್ರಸಿದ್ಧ Heart Foundationಗೆ ಸ್ಕೂಟರ್‌ನಲ್ಲಿ ಹೋಗಿ ವೈದ್ಯರು ನೀಡಿದ್ದ ಚೀಟಿ ಕೊಟ್ಟೆ. ಅಲ್ಲಿನ ಸಿಬ್ಬಂದೀದು ಏನು ಮುತುವರ್ಜಿ ಅಂತೀರಿ, ಚೀಟಿ ಓದಿದ ತಕ್ಷಣ ನಿಂತಲ್ಲಿಗೇ ಕ್ಷಣ ಮಾತ್ರದಲ್ಲಿ ಸ್ಟ್ರಚರ್ ಬಂತು. ಮಲಗಿ ಮಲಗಿ ಅಂತ ಅವಸರಪಡಿಸಿದರು. ಸ್ಕೂಟರ್ ನೆರಳಿಗೆ ನಿಲ್ಲಿಸಿ ಬರ್ತೀನಿ ಅಂದರೂ ಬಿಡಲಿಲ್ಲ. 'ಕಾಲಾಡಬಾರದು, ಅಲುಗಾಡಲೂ ಬಾರದು' ಅಂತ ಒಬ್ಬ ನರ್ಸಮ್ಮ ಬಾಯಿ ಮೇಲೆ ಬೆರಳಿಟ್ಟು ಎಚ್ಚರಿಸಿದಳು. ಹೃದಯ ಅಪಾಯದ ಹಂತದಲ್ಲಿದೆ ಅನ್ನುವ ಮನವರಿಕೆ ಮಾಡಿದಳು. ಯಾವುದೋ ವಾರ್ಡ್‌ಗೆ ಸೇರಿಸಿದರು. ಸಿನಿಮಾದಲ್ಲಿ ದೇವರು ಠಕಾರ್ ಅಂತ ಪ್ರತ್ಯಕ್ಷ ಆಗೋಲ್ಲವೆ ಥೇಟ್ ಅದೇ ರೀತಿ ವೈದ್ಯರು ತಕ್ಷಣ ಪ್ರತ್ಯಕ್ಷ ಆದರು. ತಪಾಸಣೆ ನಡೆಸಿದರು. ನಾನು ಮೇಲೆ ಏಳಲು ಪ್ರಯತ್ನಿಸಿದಾಗ 'ಶ್ ! ಅಲುಗಾಡಬಾರದು' ಅಂತ ಬೆದರಿಸಿದರು. ಅಲ್ಲಿಂದ ಇಲ್ಲಿಗೆ, ಇಲ್ಲಿಂದ ಅಲ್ಲಿಗೆ ಬಿರಬಿರನೆ ಓಡಾಡುತ್ತಿರುವ ವೈದ್ಯರು ನರ್ಸ್‌ಗಳ ಚಲನವಲನ ವಿಪರೀತ ಗಾಬರಿ ತಂದಿತು. ಮನೆಗೆ ಒಂದು ಫೋನಾದರೂ ಮಾಡಿಬರುತ್ತೀನಿ ಎಂದು ಹೇಳಲು ಬಾಯಿ ತೆರೆದೆ. ಮಾತನಾಡಿದರೆ ಅಪಾಯ ಅಂತ ಬಾಯಿ ಮುಚ್ಚಿಸಿದರು. ಪ್ರಾಣಪಕ್ಷಿ ಯಾವಾಗ ಹಾರಿ ಹೋಗುತ್ತದೆಯೋ ಏನು ಕತೆಯೋ ಹೆಂಡತಿ ಮಕ್ಕಳ ಮುಖವನ್ನಾದರೂ ಒಂದು ಸಲ ನೋಡಬಾರದಿತ್ತೆ ಅಂತ ಮನಸ್ಸಿನಲ್ಲೇ ಒದ್ದಾಡಿದೆ. ಯಾರಿಗೂ ಹೇಳದೆ ಬಂದ ನನ್ನ ಮೂರ್ಖತನಾನ ಶಪಿಸಿಕೊಂಡೆ. ಅಷ್ಟರಲ್ಲಿ ನನ್ನನ್ನು ಇಸಿಜಿ ರೂಮಿಗೆ ತಂದು ಆಗಿತ್ತು.



ಇಸಿಜಿಯಲ್ಲಿ ಯಾವ ತೊಂದರೇನೂ ಕಾಣಿಸದಿರಲಿ ಅಂತ ಪಾರ್ಥಿಸ ಹಾಸಿಗೆಯಿಂದಲೇ ಗೊತ್ತಿದ್ದ ದೇವರಿಗೆಲ್ಲ ಹರಕೆ ಹೊತ್ತೆ. ವೈದ್ಯರು ಬಂದು ಮಾತನಾಡಲು ಅವಕಾಶವನ್ನೇ ನೀಡದೆ 'ವಾಲ್ವ್ ಎಲ್ಲ ಬ್ಲಾಕ್ ಆಗಿವೆ, ಇನ್ನು ಇಪ್ಪತ್ತು ನಾಲ್ಕು ಘಂಟೆಯ ಒಳಗೆ ಆಪರೇಷನ್ ಆಗದಿದ್ದರೆ ಪ್ರಾಣಕ್ಕೆ ಅಪಾಯ' ಎಂಬ ಬಾಂಬ್ ಒಗೆದರು !

ಕಣ್ಣಿಗೆ ಕತ್ತಲು ಆವರಿಸಿತು.

ಖಾಸಗಿ ಆಸ್ಪತ್ರೆ ನೋಡಿ, ನನ್ನ ಪ್ರಾಣದ ಮೇಲೆ ನನಗಿಂತಲೂ ಹೆಚ್ಚು ಆಸಕ್ತಿ ವಹಿಸಿ, ನನ್ನ ಜೇಬುಗಳನ್ನೆಲ್ಲ ತಡಕಿ ಸಿಕ್ಕಿದ ವಿಸಿಟಿಂಗ್ ಕಾರ್ಡ್ ಸಹಾಯದಿಂದ ಮನೆಯವರಿಗೆ ವಿಷಯ ತಿಳಿಸಿದರಂತೆ. ಮಕ್ಕಳುಮರಿಯೆಲ್ಲ ಗಾಬರಿಯಾಗಿ ಓಡಿಬಂದರೂ ನೋಡಲು ಅವಕಾಶ ನೀಡಲಿಲ್ಲವಂತೆ, ಒಂದು ಜೀವದ ಪ್ರಶ್ನೆ ಇತ್ತು ನೋಡಿ. ಅಲ್ಲಿನ ಸಿಸ್ಟಂ ಸೊಗಸಾಗಿದೆಯಂತೆ. ಆರ್ಡಿನರಿ ಪ್ಲಾನ್‌ನಲ್ಲಿ ಆಪರೇಷನ್ ಮಾಡಿಸಿಕೊಂಡರೆ ಒಂದು ಲಕ್ಷ ರೂಪಾಯಿಯಂತೆ. ಅದೇ ಎಸಿ ಪ್ಲಾನ್‌ನಲ್ಲಿ ಆದರೆ ಎರಡು ಲಕ್ಷ ರೂಪಾಯಿ ಅಂತೆ (ಸತ್ತರೆ ಹೆಣ ಬಿಡುಗಡೆ ಮಾಡಲು ರೇಟು ಒಂದೇ ಇರುತ್ತಾ ಅಥವಾ ಅದೂ ಬೇರೆ ಬೇರೆ ಇರುತ್ತಾ ಅಂತ ಕೇಳಲಿಲ್ಲ ಅನ್ನಿ). ಊಟ ತಿಂಡಿ ಎಲ್ಲವನ್ನೂ ಆಸ್ಪತ್ರೆಯವರೇ ಒದಗಿಸುತ್ತಾರಂತೆ. ಮನೆಯಿಂದ ಹಾಳುಮೂಳು ತಂದು ತಿಂದು infection ಆಗದಿರಲಿ ಅಂತ ಈ ಎಚ್ಚರಿಕೆಯಂತೆ. ಪ್ರಾಣ ಹೋಗುವುದೇ ಆದರೆ ಆರ್ಡಿನರಿನೋ ಏಸಿನೋ ಯಾವುದರಲ್ಲಿ ಹೋದರೆ ಏನು ಅಂತ ನನ್ನ ಮಗರಾಯ ಆರ್ಡಿನರಿ ಪ್ಲಾನಿಗೆ ಸಹಿ ಹಾಕಿದನಂತೆ. ನನ್ನ ಹೆಂಡತಿ ಮಾಂಗಲ್ಯ ಉಳಿದರೆ ಸಾಕು ಅನ್ನುವ ಕಾತುರದಲ್ಲಿ ಇದ್ದಬದ್ದ ಬಂಗಾರದ ಒಡವೆಗಳೊಂದಿಗೆ ಮಾಂಗಲ್ಯವನ್ನೂ ಮಾರಿ ಹಣ ತುಂಬಿಸಿದಳಂತೆ. ಇಷ್ಟೆಲ್ಲ ಅಂತೆಕಂತೆಗಳು ಯಾಕೆ ಎಂದರೆ ಇದೆಲ್ಲ ನನಗೆ ನಂತರ ತಿಳಿದ ಸಂಗತಿ.

ಹಾರ್ಟ್ ಆಪರೇಷನ್ ಆಗಿರುವ ಸುದ್ದಿ ತಿಳಿದು ಅಮೆರಿಕದಲ್ಲಿ ಹೃದಯ ತಜ್ಞನಾಗಿದ್ದ ಗೆಳೆಯ ಬಂದ. ಭಾರತದಲ್ಲಿ ಬಂದು ನಾಲ್ಕು ದಿವಸ ಆರಾಮವಾಗಿ ಇದ್ದು ಬರೋಣ ಎಂದು ಬಂದಿದ್ದವನಿಗೆ ಯಾರೋ ಸುದ್ದಿ ಮುಟ್ಟಿಸಿದ್ದರಂತೆ. ಕೇಸ್ ಹಿಸ್ಟರಿ ಶೀಟ್ ಪರಿಶೀಲಿಸಿದ. ರೌಂಡ್ಸ್ ಬಂದ ಡಾಕ್ಟರುಗಳನ್ನು ಪರಿಚಯಿಸಿಕೊಂಡವನೇ 'ಈ ಆಪರೇಷನ್ ಅವಶ್ಯಕತೆ ಇತ್ತ ಡಾಕ್ಟರ್' ಎಂದು ಕೇಳಿದ. ಬಾಂಬ್ ಎಸೆದಂತೆ ಆಯಿತು. ಆಪರೇಷನ್ ಮಾಡಿದ್ದ ಹುಡುಗ ಡಾಕ್ಟರು ಕೆಂಡಾಮಂಡಲ ಆದರು. ದಿನಾ ನಾನು ನಾಲ್ಕೈದು ಇಂತಹ ಆಪರೇಷನ್ ಮಾಡ್ತೀನಿ, ನನ್ನ ಸರ್ವೀಸಿನಲ್ಲಿ ಇಂತಹ ನೂರಾರು ಕೇಸು ಹ್ಯಾಂಡಲ್ ಮಾಡಿದ್ದೀನಿ, ನಮ್ಮ ಹತ್ತಿರ ಅಂತಹ ಎಕ್ವಿಪ್‌ಮೆಂಟ್ ಇದೆ, ಇಂತಹ ಇನ್‌ಸ್ಟ್ರುಮೆಂಟ್ ಇದೆ ಅಂತ, ಟೀವಿ ಸಂದರ್ಶನದಲ್ಲಿ ಜಾಹೀರಾತು ನೀಡುವ ರೀತಿ ವೈದ್ಯರುಗಳು ಮಾತಾಡುತ್ತಾರಲ್ಲ, ಥೇಟ್ ಅದೇ ರೀತಿ ಬಡಬಡಿಸಿದರು.

''Cool down doctor cool down. ಅಮೆರಿಕದಲ್ಲಿ ಇಂತಹ ಆಪರೇಷನ್ ಮಾಡಬೇಕಾದರೆ second opinion ತೆಗೊಳ್ತೀವಿ'' ಮಧ್ಯೆ ಬಾಯಿ ಹಾಕಿದ ಗೆಳೆಯ.

''ನನಗೆ ಅದರ ಅವಶ್ಯಕತೆ ಇಲ್ಲ'' ಅಂದರು ನಮ್ಮ ಡಾಕ್ಟರು.

ಕೋಪದ ಭರದಲ್ಲಿ ಮಾನಸಿಕ ಸ್ಥಿಮಿತವನ್ನು ಕಳೆದುಕೊಂಡಿದ್ದ ಎಳೆಯ ಡಾಕ್ಟರನ್ನು ಹೊರಕ್ಕೆ ಉಪಾಯವಾಗಿ ಸಾಗಹಾಕಿದ ನುರಿತ ವೈದ್ಯರು ''you are correct doctor, second opinion ತೆಗೆದುಕೊಳ್ಳಬೇಕು. ನಾವೂ ಹಿಂದೆಲ್ಲ ತೆಗೆದುಕೊಳ್ಳುತ್ತಾ ಇದ್ದೆವು. ಈಗ ನಿಲ್ಲಿಸಿದ್ದೀವಿ'' ಎಂದರು.

''ಯಾಕೆ ಡಾಕ್ಟರ್ ?''

''ಇಲ್ಲಿನ ವ್ಯವಸ್ಥೆ ಹಾಗಿದೆ.''

''ಅಂದರೆ ?''

''ನಾವು second opinionಗೆ ಅಂತ ಪೇಷಂಟ್ಸ್‌ನ ಬೇರೆ ತಜ್ಞರ ಬಳಿಗೆ ಕಳುಹಿಸುತ್ತಿದ್ದೆವು. ಆಮೇಲೆ ಏನಾಗುತ್ತಿತ್ತು ಅಂತೀರಿ, ಪೇಷಂಟ್ಸೇ ಹಿಂತಿರುಗಿ ಬರುತ್ತಿರಲಿಲ್ಲ.''

''Treatment ಅವಶ್ಯಕತೆ ಇರುತ್ತಿರಲಿಲ್ಲವೇನೋ.''

''ಹಾಗಲ್ಲ, ನಾವು second opinionಗೆ ಅಂತ ತಜ್ಞರ ಹತ್ತಿರ ಕಳುಹಿಸಿದ ಪೇಷಂಟ್ಸ್‌ನ ಅವರೇ ಅಡ್ಮಿಟ್ ಮಾಡಿಕೊಂಡುಬಿಡುತ್ತಿದ್ದರು !''


**ಎಚ್. ಎಲ್. ಕೇಶವಮೂರ್ತಿ**

ಪ್ರಾಧ್ಯಾಪಕ(ನಿ), ೨೦೪೪, ೧೨ನೇ ಅಡ್ಡರಸ್ತೆ, ಕಲ್ಲಹಳ್ಳಿ ಬಡಾವಣೆ

ಮಂಡ್ಯ - ೫೭೧ ೪೦೧



# ಅಭಿನೇತ್ರಿಗೊಂದು ಮನಸುಂಟು; ಸ್ವಗತವುಂಟು

## ಶ್ರೀಮತಿ ಬಿ. ಜಯಶ್ರೀ ಅವರೊಂದಿಗೆ ಸಂದರ್ಶನ

ಕನ್ನಡ ರಂಗಭೂಮಿಯ ವಿಶಿಷ್ಟ ಪ್ರತಿಭೆ ಬಿ. ಜಯಶ್ರೀ. ವಿಶ್ವರಂಗಕ್ಕೆ ಕರ್ನಾಟಕದ ಅಮೂಲ್ಯ ಕೊಡುಗೆ ಎಂದರೂ ಸರಿಯಾದೀತು. ೧೯೫೦ರಲ್ಲಿ ಖ್ಯಾತ ಗುಬ್ಬಿ ಕಂಪನಿಯ ಕಲಾವಿದ ಕುಟುಂಬದಲ್ಲಿ ಜನಿಸಿದರು. ತಾಯಿ ಕಲಾವಿದೆ ಮಾಲತಮ್ಮ. ಹಿರಿಯ ಗುಬ್ಬಿ ವೀರಣ್ಣನವರ ಮೊಮ್ಮಗಳು ಜಯಶ್ರೀ ತನ್ನ ನಾಲ್ಕನೆಯ ವಯಸ್ಸಿನಿಂದಲೇ ಬಣ್ಣ ಹಾಕಿ ರಂಗವೇರಿದರು. ರಾಷ್ಟ್ರೀಯ ರಂಗಶಾಲೆಯ ಪದವಿಯನ್ನು (೧೯೭೩) ಪಡೆದು ವೃತ್ತಿ-ಹವ್ಯಾಸಿ ಇತ್ಯಾದಿ ವೈವಿಧ್ಯಗಳನ್ನು ಒಂದು ಚೌಕಟ್ಟಿನಲ್ಲಿ ಬೆಸೆಯುತ್ತ ಹೊಸ ರಂಗಭೂಮಿಯನ್ನೇ ಕಟ್ಟಿದರು. ೧೯೭೬ರಿಂದ 'ಸ್ಪಂದನ' ನಾಟಕ ತಂಡದಲ್ಲಿ ಸಕ್ರಿಯವಾಗಿ ತೊಡಗಿಕೊಂಡರು. ನಿರ್ದೇಶಕಿಯಾಗಿ, ಅಭಿನೇತ್ರಿಯಾಗಿ, ಗಾಯಕಿಯಾಗಿ ನೃತ್ಯ ಸಂಯೋಜನೆ (ಕೋರಿಯಾಗ್ರಫಿ) ಯಲ್ಲಿ ಅವರದೇ ಆದ ಛಾಪು ಮೂಡಿಸುತ್ತಾ ಬಂದರು. ಭಾರತದ ಎಲ್ಲ ರಾಜ್ಯಗಳಲ್ಲಿ ಮತ್ತು ಸ್ವೀಡನ್, ಕೈರೊ, ತಾಷ್ಕೆಂಟ್, ಎಡಿನ್‌ಬರೊ, ಸ್ಕಾಟ್‌ಲೆಂಡ್ ಹೀಗೆ ಎಲ್ಲೆಡೆ ರಂಗಪ್ರತಿಭೆಯನ್ನು ಮೆರೆದು ರಾಜ್ಯಕ್ಕೆ ಕೀರ್ತಿ ತಂದರು. ಬಿ. ಜಯಶ್ರೀ ಚಲನಚಿತ್ರರಂಗದಲ್ಲೂ ಗಾಯನ, ಅಭಿನಯಗಳಲ್ಲಿ ಸಾಟಿಯಿಲ್ಲದ ಪ್ರತಿಭೆಯಾಗಿದ್ದಾರೆ ಮತ್ತು ಆ ವಿಭಾಗದ ಹಲವು ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. ಉತ್ತರಪ್ರದೇಶದ ಸಂಗೀತ ನಾಟಕ ಅಕಾಡೆಮಿಯ ಸಫ್ದರ್ ಹಷ್ಮಿ ಪ್ರಶಸ್ತಿ, ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ (೧೯೯೬), ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿಗಳಾದಿಯಾಗಿ ಹತ್ತಾರು ಗೌರವಗಳು ಸಂದಿವೆ. ಕೇಂದ್ರ-ರಾಜ್ಯದ ಹಲವು ಸಮಿತಿಗಳಲ್ಲಿ ಗೌರವಾನ್ವಿತ ಸದಸ್ಯೆಯೂ ಆಗಿದ್ದಾರೆ. ಪ್ರಸ್ತುತ ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಸದಸ್ಯತ್ವದ ಜವಾಬ್ದಾರಿಯೂ ಸೇರಿಕೊಂಡಿದೆ.

ಬಿ. ಜಯಶ್ರೀ ಅವರೊಂದಿಗೆ ಮಾತುಕತೆಯೇ ಒಂದು ಹೊಸ ಲೋಕದ ಬಾಗಿಲು ತೆರೆದಂತೆ. ಇದೊಂದು ಅನುಭವ ಶ್ರೀಮಂತಿಕೆ, ಸ್ವಚ್ಛಂದ ವಿಚಾರಗಳ ಮುಕ್ತ-ಮುಗ್ಧ ಅಭಿವ್ಯಕ್ತಿ. ಎಲ್ಲವನ್ನೂ ದಾಖಲಿಸಲು ಪುಟಗಳು ಸಾಲವು. ಸಂದರ್ಶಕರು ಪ್ರಶ್ನೆಗಳನ್ನು ತುಂಬಿ ವಿಚಾರಗಳ ಓಘಕ್ಕೆ ತಡೆಯೊಡ್ಡದೇ ಆಕೆಯ ಸ್ಮೃತಿ ಲಹರಿಯನ್ನು ತದ್ವತ್ತಾಗಿ ಹರಿಯಲು ಬಿಟ್ಟಿದ್ದಾರೆ. ಓದುಗರ ಅಭಿಪ್ರಾಯಗಳಿಗೆ ಸ್ವಾಗತವಿದೆ.

-ಸಂದರ್ಶಕರು

ಸಂದರ್ಶನ : ಡಾ|| ವಿಜಯಾ

ನಾವು ಎಷ್ಟೋ ಸಂಗತಿಗಳನ್ನು ನಿರೀಕ್ಷಿಸಿರುವುದಿಲ್ಲ. ಅವು ಹೇಗೆ ಹೇಗೋ ಸಂಭವಿಸಿಬಿಡುತ್ತವೆ. ನನ್ನ ಬದುಕಿನ ಅನೇಕ ಘಟನೆಗಳು ಹಾಗೆ ನಡೆದುಹೋದವು, ಅಷ್ಟೇ. ನಿಜ ಹೇಳಬೇಕೆಂದರೆ ನಾನು ಹೀಗೆ ಒಬ್ಬ ಅಭಿನೇತ್ರಿಯಾಗಬಲ್ಲೆನೆಂಬ ನಂಬಿಕೆಯೇ ನನಗೆ ಇರಲಿಲ್ಲ.

ಎನ್.ಎಸ್.ಡಿ.ಗೆ ಹೋದಾಗ ನಾನೊಬ್ಬ ತಂತ್ರಜ್ಞಳಾಗಿ ರೂಪುಗೊಳ್ಳುವುದು ಮಾತ್ರ ಸಾಧ್ಯವೇನೋ ಅಂದುಕೊಂಡಿದ್ದೆ. ಆ ಬಗ್ಗೆ ನನಗೆ ಯಾವ ವಿಷಾದವೂ ಇರಲಿಲ್ಲ. ನಾನು ಎಂದೂ ಮಹತ್ವಾಕಾಂಕ್ಷಿಯಾಗಿರಲಿಲ್ಲ. ಇಷ್ಟಕ್ಕೂ ನನ್ನ ಬದುಕಿನಲ್ಲಿ ಮಹತ್ವವಾದುದರತ್ತ ಎಡತಾಕುವ ಆಲೋಚನೆ ಆಕಸ್ಮಿಕವಾಗಿಯೂ ಬರುವಂತಿರಲಿಲ್ಲ. ಇದ್ದುದರಲ್ಲಿ ಇದ್ದುದನ್ನೇ ಸರಿ ಹೊಂದಿಸಿಕೊಳ್ಳುವ ಅಹನ್ಯಹನಿ, ಅಷ್ಟೇ.

ಎನ್.ಎಸ್.ಡಿ.ಯಲ್ಲಿ ಪ್ರಾರಂಭದಲ್ಲೇ 'ನಿನ್ನನ್ನು ನೀನು ಹೇಗೆ ಅರ್ಥೈಸಿಕೊಂಡಿದ್ದೀ, ನಿನ್ನ ಸಾಮರ್ಥ್ಯವೇನು' ಎಂಬ ಥರದ ಒಂದು ಸ್ವವಿಮರ್ಶೆಯುಳ್ಳ ಪ್ರಬಂಧ ಸಿದ್ಧಪಡಿಸಬೇಕು. ಆಗ ನಾನು ಬರೆದುಕೊಂಡಿದ್ದೇನು ಗೊತ್ತಾ? ನಾನು ಕಲಾವಿದೆಯಾಗಲಾರೆ ಅನ್ನಿಸುತ್ತೆ, ಕಲಾವಿದೆಗೆ ಇರಬೇಕಾದ ಚೆಲುವು ನನ್ನಲ್ಲಿಲ್ಲ. ನನ್ನ ಮುಖದ ಮೇಲೆ ಮೊಡವೆಗಳು ಮಾಡಿದ ಹಳ್ಳಗಳಿವೆ. ಮಿಗಿಲಾಗಿ ನನ್ನದು ಒಂದು ರೀತಿಯ ಒರಟು-ಒಡ್ಡತನ. ಹೀಗಾಗಿ ನನ್ನಲ್ಲಿ ಅನೇಕ ಮಿತಿಗಳಿವೆ... ಇತ್ಯಾದಿ. ಅಧ್ಯಾಪಕಿ ಶೀಲಾ ಭಾಟಿಯಾ ಅವರು 'ನಿನ್ನ ಆಲೋಚನೆ ತಪ್ಪು' ಅಂದರು. ''ನಿನಗೆ ಎಲ್ಲವೂ ಸಾಧ್ಯ. ನಿನ್ನ ಶಕ್ತಿ-ಸಾಮರ್ಥ್ಯವನ್ನೇ ನೀನು ಸರಿಯಾಗಿ ಗ್ರಹಿಸಿಲ್ಲ. ಮೊದಲು ಆ ಭಾವನೆಗಳನ್ನು ತೊಡೆದುಹಾಕು. ಅಭಿನೇತ್ರಿಗೆ ಬೇಕಾದ್ದು ನೀನು ತಿಳಿದುಕೊಂಡಿರುವ ಬಾಹ್ಯ ವಿವರಗಳಲ್ಲ, ಚೆಲುವಿನ ಬಗ್ಗೆ ನಿನ್ನ ಅರ್ಥೈಕೆಯೂ ಸರಿಯಲ್ಲ. ಎಲ್ಲವನ್ನೂ ನಿನಗೆ ಈ ಶಿಕ್ಷಣ ಅರ್ಥ ಮಾಡಿಸುತ್ತದೆ'' ಎಂದಿದ್ದರು.



* * *

ನಾನು ಓದಿಲ್ಲ. ನನಗೆ ಹಾಗೆ ಓದು-ಶಿಸ್ತು

ಇದ್ದವರ ಸ್ನೇಹವೂ ಇರಲಿಲ್ಲ. ನನಗೆ ಇಂಗ್ಲಿಷ್ ಬರೋಲ್ಲ. ಆದರೆ ನನ್ನದೇ ಆದ ರೀತಿಯಲ್ಲಿ ಯಾವ ಭಾಷೆಯವರನ್ನಾದರೂ ಮಾತನಾಡಿಸಬಲ್ಲೆ. ಭಾವನೆಗಳನ್ನು ಅರ್ಥಮಾಡಿಸಬಲ್ಲೆ ಎಂಬ ಧೈರ್ಯ ಇದೆ. ನನಗೆ ಅಕೆಡೆಮಿಕ್ ವಿದ್ಯೆ ಇಲ್ಲ ಎಂಬ ಕೀಳರಿಮೆಯೂ ಇಲ್ಲ. ಎಷ್ಟೋ ಸಾರಿ ಅಂದುಕೊಳ್ಳುತ್ತೇನೆ ಆ ಬಗೆಯ ವಿದ್ಯೆ ಇಲ್ಲದ್ದರಿಂದಲೇ ಈ ಜಯಶ್ರೀಗೆ ಅವಳದೇ ಆದ ಪ್ರತ್ಯೇಕ ಅಸ್ತಿತ್ವ ಇದೆ ಅಂತ. ಅಂಥ ಶಿಕ್ಷಣದ ಶಿಸ್ತು ಇದ್ದಿದ್ದರೆ ಈಗಿನ ಸ್ವಚ್ಛ, ನೇರ ನಡೆ-ನುಡಿ ಬದಲು 'ಸೋಗು' ಹಾಕುತ್ತಿದ್ದೇನೇನೊ. ನನಗೆ ಎಷ್ಟೋ ಬಾರಿ ಇತರರ ನಡವಳಿಕೆಯಲ್ಲಿ 'ನಿಜ' ಕಂಡಿಲ್ಲ. ವಿನಾಕಾರಣದ 'ಸೋಗು' ಕಾಣಿಸ್ತಿರುತ್ತೆ. ಆ ಮಟ್ಟಿಗೆ ನನ್ನ ನಿರಕ್ಷರತೆಯೇ ನನಗೆ ಬಹಳಷ್ಟನ್ನು ಕೊಟ್ಟಿದೆ; ಮುಚ್ಚಿಡದೆ ತೆರೆದುಕೊಳ್ಳುತ್ತದೆ ಅನ್ನಿಸುತ್ತೆ.

ಬಾಲ್ಯದ ದಿನಗಳಲ್ಲಿ ಕಂಪನಿ ಮನೇಲಿ ವಾಸ. ಬೆಳಗಿನ ಹೊತ್ತು ಕಾಡಿನಲ್ಲಿ ದನಗಳ ಜೊತೆ ತಿರುಗೋದು, ಸ್ನೇಹಿತರು ಆ ದನಗಾಹಿಗಳೇ. ಸಂಜೆಗೆ ನಾಟಕ. ನನಗೆ ಬೇರೆ ಸ್ನೇಹಿತರು ಅಂತ ಇರಲೇ ಇಲ್ಲ. ನಾಟಕದವರನ್ನು ಸಾಮಾಜಿಕರು ಪ್ರೀತಿಯಿಂದ ಒಳಗೊಳ್ಳುತ್ತಲೂ ಇರಲಿಲ್ಲ. ಅಲ್ಲಿ ಬೆರಗಿನ ನೋಟವಿತ್ತು; ಆಪ್ತತೆಯಲ್ಲ. ಅವತ್ತು ಹುಟ್ಟಿಕೊಂಡ ನಾಚಿಕೆ-ಸಂಕೋಚಗಳು ಇವತ್ತೂ ಅಂಟಿಕೊಂಡು ಬಂದಿವೆ. ಶ್ರೀರಂಗರು 'ಈಕೆನ್ನ ದೆಹಲಿಗೆ ಕಳಿಸ್ರೀ' ಅಂದದ್ದು, ಒತ್ತಾಯ ಮಾಡಿ ಕಳಿಸಿದ್ದು ನನ್ನ ಬದುಕಿನ ಬಹು ದೊಡ್ಡ ತಿರುವು ಅನ್ನಿಸುತ್ತೆ.

ಕಂಪನಿ ಬಿಟ್ರೆ ಶಿವಾನಂದ ಮಾಮನ 'ಕಲಾ ಕುಂಜ' ತಂಡದ ನಾಟಕಗಳಲ್ಲಿ ನಟಿಸ್ತಿದ್ದೆ. 'ಕುರುಡು ಕಾಂಚಾಣ'ದಲ್ಲಿ ನನ್ನ ಅಭಿನಯ ನೋಡಿಯೇ ಶ್ರೀರಂಗರು NSDಗೆ ಹೋಗಲಿ ಅಂದರು. ಅದು ಇವತ್ತಿಗೆ ನನ್ನನ್ನು ಈ ಹಂತಕ್ಕೆ ತಂದು ನಿಲ್ಲಿಸಿದೆ. NSD ಇಂದ ಬಂದ ಮೇಲೆ ಮೊದಲು 'ಜಸ್ಮಾ ಓಡನ್' ನಿರ್ದೇಶಿಸಿದೆ. ಅದು ದೆಹಲಿಯ ಪ್ರಯೋಗಗಳ ಹಾಗೇ ಇತ್ತು. ಅದು ನನ್ನನ್ನು ನಾನು ಪರೀಕ್ಷಿಸಿಕೊಳ್ಳಲು ಮಾಡಿದ್ದು. ಮುಂದೆ ಎಂದೂ ನನ್ನ ಯಾವ ನಾಟಕದಲ್ಲೂ ದೆಹಲಿಯ ಪ್ರಯೋಗಗಳ ಪ್ರತಿಕೃತಿ ಅನ್ನುವಂಥ ಛಾಯೆಗೂ ಅವಕಾಶ ಕೊಡಲಿಲ್ಲ. ಆದರೆ ಹಾಗೆ ಬ್ರ್ಯಾಂಡ್ ಮಾಡುವ ಟೀಕಾಕಾರರಿಗೇನೂ ಕಡಿಮೆ ಇಲ್ಲ.

'ಘಾಶೀರಾಂ ಕೊತ್ವಾಲ್' ಮೊದಲಾದ ನಾಟಕಗಳನ್ನು ಸ್ಪಂದನ ತಂಡಕ್ಕೇ ಮಾಡಿಸಿದೆ. ಅಲ್ಲಿಂದಾಚೆಗೆ ನನ್ನ ಪ್ರತಿಯೊಂದು ಪ್ರಯೋಗವೂ ಒಂದಿಲ್ಲೊಂದು ಕಾರಣಕ್ಕೆ ಒಂದಕ್ಕಿಂತ ಇನ್ನೊಂದು ವಿಭಿನ್ನವಾಗೇ ಮೂಡಿಬಂದಿವೆ.

* * *

ನನ್ನೊಳಗೇ ಇರುವ ನೋವು, ನಾನು ಅನುಭವಿಸಿದ ಕಷ್ಟಗಳು, ನಾನು ನನ್ನ ಪರಿಸರದಲ್ಲಿ ಕಂಡ ಸತ್ಯಗಳು, ನಾನು ಬದುಕನ್ನು ವ್ಯಕ್ತಿಗಳನ್ನು ನೋಡುತ್ತ-ಅಭ್ಯಾಸ ಮಾಡುತ್ತಾ ಬಂದ ರೀತಿ ನನ್ನ ಎಲ್ಲ ಸೃಜನಶೀಲಕ್ರಿಯೆಯಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಅಭಿವ್ಯಕ್ತವಾಗುತ್ತಲೇ ಬಂದಿದೆ. ನಾನೇ ಅಭಿನಯಿಸುವಾಗಲಂತೂ ಅವು ಪಾತ್ರದಲ್ಲಿ, ಆಂಗಿಕಾಭಿನಯದಲ್ಲಿ, ಮಾತಿನ ಏರಿಳಿತಗಳಲ್ಲಿ ಬೆರೆತು ಹೋಗಿರುತ್ತವೆ. ನಾನು ಅಭಿನಯಿಸುವಾಗ ಅವು ಕಣ್ಣ ಮುಂದೆ ಬರುತ್ತವೆಯೋ, ಅವು ನನ್ನ ಒಳಲೋಕದಲ್ಲಿ ಎಲ್ಲೋ ಅಡಗಿದ್ದು ಆಯಕಟ್ಟಾದ ಹೊತ್ತಿನಲ್ಲಿ ಪ್ರಕಟವಾಗುತ್ತವೋ ಹೇಳಲಾರೆ. ಅಂತೂ ಎಲ್ಲರೂ ಎಲ್ಲವೂ ಇಲ್ಲಿ ಜೀವಂತವಾಗಿವೆ ಎನ್ನುವುದಂತೂ ಸತ್ಯ.

'ತಾಯಿ' ನಾಟಕ ಮಾಡಿದ ದಿನಗಳನ್ನು ನೆನೆದರೆ ಈಗಲೂ ಅಲ್ಲಿ ಅಭಿನಯವಾಗಿ ಮೂಡಿಬಂದದ್ದು ನನ್ನ ಬದುಕಿನ ಅನೇಕ ವಾಸ್ತವಗಳು ಎಂದು ಹೇಳಬೇಕೆನ್ನಿಸುತ್ತೆ. ಅವು ಖಾಸಗಿ ಬದುಕಿನಲ್ಲಿ ಬಹಳ ಕಷ್ಟದ ದಿನಗಳು. ಏನೇನೂ ಸಂಪಾದನೆ ಇಲ್ಲದ ದಿನಗಳು. ಎಳೆಮಗುವಿಗೆ ಹಾಲು ತರಲೂ ದುಡ್ಡಿಲ್ಲ. ನನ್ನ ಅಮ್ಮ ವೈರ್‌ಬ್ಯಾಗ್ ಹಾಕಿಕೊಡುತ್ತಿದ್ದರು. ಅವನ್ನು ಒಯ್ದು ಮಾರುತ್ತಿದ್ದೆ. ಆ ದುಡ್ಡಿನಲ್ಲಿ ಕೈ ಕೂಸಿಗೆ ಹಾಲು ತರುತ್ತಿದ್ದೆ. ನಮಗೆ ಎಲ್ಲ ಇತ್ತು; ಆದರೆ ಏನೂ ಇರಲಿಲ್ಲ! ಹತ್ತು ರೂಪಾಯಿ ಸಹ ಹುಟ್ಟುತ್ತಿರಲಿಲ್ಲ. ಆಕಾಶವಾಣಿಯಲ್ಲಿ ಅನೌನ್ಸರ್ ಆಗಿ ಹೋಗಲು ಪ್ರಯತ್ನಿಸಿದೆ. ವಸಂತ ಕವಲಿ ಅವರಿದ್ದರು. ಬೆಳಗಿನ ೪-೫ ಗಂಟೆಗೆ ಬಾ ರಿಹರ್ಸಲ್ ಮಾಡಬೇಕು ಅನ್ನೋರು. ಅಮ್ಮ ಆಟೋಗೇಂತ ಎಂಟಾಣೆ ಕೊಡೋರು. ಆಗ ಅಷ್ಟು ಸಾಕಿತ್ತು. ಆದರೆ ಅಷ್ಟು ವರಮಾನ ಇರಲಿಲ್ಲವಲ್ಲ.



ಕವಲಿ ಅವರು ನನಗೆ ಓಡಾಡಿಸಿದರಾಗಲೀ, ಅವಕಾಶ ಕೊಡಲಿಲ್ಲ. ಒಂದು ದಿನವೂ ನನ್ನ ಸ್ವರ ಏರ್ (AIR) ಮೇಲೆ ಹೋಗಲಿಲ್ಲ! 'ತಾಯಿ' ನಾಟಕಕ್ಕೆ ಕರೆದಾಗ ಆಟೋಗೂ ಅಮ್ಮನ್ನ ಕೇಳಿ ತಗೋಬೇಕಲ್ಲ ಅಂತ ಐವತ್ತು ರೂಪಾಯಿ ಕೊಡಿ ಅಂದೆ. ಅದೇ ದೊಡ್ಡ 'ಗಾಸಿಪ್' ಆಗಿಬಿಡ್ತು. ಜಯಶ್ರೀ ಏನು ಮಾಡಿದರೂ ಆಡಿಕೊಳ್ಳುವುದೇ ಅಭ್ಯಾಸ.



'ತಾಯಿ' ಪಾತ್ರದಲ್ಲಿ ಇಂಥ ಅನೇಕ ನೋವುಗಳನ್ನು ಮಗುವಿಗೆ ಹಾಲಿಗೂ ದುಡ್ಡಿಲ್ಲದ್ದು, ಬದುಕಿನ ಎಲ್ಲ ಸಂಕಟಗಳನ್ನೂ ತಂದಿದೀನಿ. ಅಂಥ ಸನ್ನಿವೇಶವಿದ್ದಾಗ ನಾನೇ ನನ್ನೊಳಗೆ ಬೇರೆಯಾಗಿ ಬಿಟ್ಟಿದೀನಿ... ಬೆಂದ ಒಡಲು ಹಾಗೆ ಅಭಿನೀತಗೊಳ್ಳುತ್ತ ಬಂದಿದೆ.

* * *

ವಿಮಲಾ ರಂಗಾಚಾರ್ ಬಾಲಭವನ ಪ್ರಾರಂಭಿಸಿದರು. ನನಗೆ ಕರೆದು ಕೆಲಸ ಕೊಟ್ಟರು. ಅದು ನನ್ನ ಸಮಾಧಾನದ ದಿನಗಳು. ಮಕ್ಕಳ ಜೊತೆ ಆಡಿದ್ದು ಒಂದು ಕಲಿಕೆಯೇ. ಆಗ 'ತೆನಾಲಿ', 'ಪಂಚತಂತ್ರ', 'ಮಿತ್ರಭೇದ' ಮೊದಲಾದ ನಾಟಕಗಳನ್ನಾಡಿಸಿದ್ದೆವು. ಮೈಸೂರಿನಲ್ಲಿ ಮೊದಲು ವರ್ಕ್‌ಶಾಪ್ ನಡೆಯಿತು – ಮೊದಲಬಾರಿಗೆ ಕೈಗೆ ಸಂಬಳ ಅಂತ ಬರುತ್ತಿದ್ದ ದಿನಗಳವು. ಮಕ್ಕಳೊಂದಿಗಿನ ಒಡನಾಟ, ಕಥೆ ಹೇಳುವ - ಹೇಳಿಸುವ ಕಲೆ ಇಲ್ಲಿ ಸಾಧ್ಯವಾಯಿತು.

* * *

ನನ್ನ ತಾತ ಗುಬ್ಬಿ ವೀರಣ್ಣನವರು, ನನ್ನ ಅಮ್ಮ ಮಾಲತಮ್ಮ ಇಬ್ಬರೂ ಚೆನ್ನಾಗಿ ಹಾಡೋರು. ಮೈಕಿಲ್ಲದೆ ಹಾಡಬೇಕಾದ್ದರಿಂದ ಏರುಸ್ವರ ಇರ್ತಿತ್ತು. ಇವತ್ತಿಗೂ ಅದು ನನ್ನ ಹಾಡಿಕೆಯಲ್ಲಿ ಸೇರಿಹೋಗಿದೆ. ಅದು ಮುಕ್ತವಾದ ಧ್ವನಿ. ಮೈಕ್ ಮುಂದೆ ಹಾಡುವಾಗ ನಿಜವಾದ ಧ್ವನಿ ಇರೋಲ್ಲ, ಅಲ್ಲಿರೋದು ಕಳ್ಳ ಶಾರೀರ ಅನ್ನಿಸುತ್ತೆ. ಇವತ್ತಿಗೂ ನನ್ನ ಹಾಡಿಕೆಯಲ್ಲಿ ಆ ಮುಕ್ತತೆ-ಸ್ವಚ್ಛಂದ ಇರುತ್ತೆ.

ನನ್ನ ಅಮ್ಮನಿಗೆ ಸಂಬಂಧದೊಳಗೆ ಮದುವೆ ಮಾಡಿದ್ದರು. ತೀರಾ ದೊಡ್ಡಪ್ಪನ ವಾವೆಯವರು ಗಂಡನಾದರೆ! ಅಮ್ಮ ವಿಪರೀತ ಕಷ್ಟಪಟ್ಟರು. ಕುಟುಂಬದಲ್ಲಿ, ರಂಗಭೂಮಿಯಲ್ಲೂ... ನಮ್ಮ ಮನೆಯಲ್ಲೇ ಅನೇಕ ತರತಮಗಳಿದ್ದವು. ಅದರ ಬಿಸಿ ನನಗೆ ನೇರವಾಗಿ ತಟ್ಟಿತು. ಜಯಮ್ಮಕ್ಕ ಸಹ ನಂಗೆ-ಲತಕ್ಕಂಗೆ ನಡುವೆ ಭೇದ ತರೋರು. ನಮ್ಮ ಊಟ, ಉಡುಪು, ಅಲಂಕಾರ ಎಲ್ಲದರಲ್ಲೂ ವಿಪರೀತ ಭೇದವಿತ್ತು. ಲತಕ್ಕನ ಜೊತೆ ಹಾಡಲು, ನರ್ತಿಸಲು ಸಹ ಬಿಡುತ್ತಿರಲಿಲ್ಲ. ತಾತ ನನ್ನನ್ನು ತುಂಬ ಮುದ್ದು ಮಾಡೋರು. ಆಗೆಲ್ಲ ಏನಾದರೂ ಮಾಡಿ ಜಯಮ್ಮಕ್ಕ ತಾತನಿಂದ ದೂರ ಮಾಡೋರು. ಅವರ ಮನಸ್ಸಿನಲ್ಲಿ ಏನಿತ್ತೋ – ಆದರೆ ನನಗೆ ಪ್ರತಿಕ್ಷಣ ಪ್ರೀತಿ-ವಾತ್ಸಲ್ಯ ಹತ್ತಿರ ಹತ್ತಿರ ಬಂದು ದೂರ ಹೋಗಿ ಬಿಡೋದು. ಲತಕ್ಕ ಒಬ್ಬಳು ವಿಶ್ವಾಸವಾಗಿದ್ದಳು. ಆದರೂ ಎಲ್ಲ ಮಕ್ಕಳ ಹಾಗೆ ಇದ್ದ ಉಡುತೊಡುವ, ಕಲಿಯುವ ಆಸೆ ಕಮರಿ ಹೋಗುತ್ತಿತ್ತು. ಅಮ್ಮನ ದುಃಖವೊಂದೇ ಸ್ಥಾಯಿಯಾಗಿ ಉಳಿದುಬಿಟ್ಟಿತು.

ನನ್ನ ಸುತ್ತ ಇರುವ ಎಲ್ಲವೂ – ಎಲ್ಲರೂ ನನ್ನ ವಿರುದ್ಧ ಷಡ್ಯಂತ್ರ ರೂಪಿಸ್ತಿದ್ದಾರೆ, ನನ್ನನ್ನು ಇರಗೊಡುತ್ತಿಲ್ಲ. ಸಂಕಟ, ನೋವೇ ಹಗಲು-ರಾತ್ರಿ ಎಂಬುದು ಮನಸ್ಸಿನಲ್ಲಿ ಉಳಿದು ಹೋಯಿತು. ಶಿವಾನಂದ ಮಾವನೂ ನಮಗೆ ಒಳ್ಳೆಯದು ಮಾಡಲಿಲ್ಲ. ಅದೇ ಒಂದು ದೊಡ್ಡ ಕಥೆ. ಲೋಕದ ತುಂಬ ಬರೀ ಸಂಕಟವೇ ಇದೆ ಅನ್ನೋ ತೀರ್ಮಾನಕ್ಕೆ ಬಂದುಬಿಟ್ಟಿದ್ದೆ.

ನನಗೆ ಇದಕ್ಕೆಲ್ಲ ಒಂದು ಹೊರದಾರಿ ಅಂದರೆ ನನ್ನ ಪಾತ್ರಗಳು – ನನ್ನ ಅಭಿನಯ.

ನ್ನ ನಿರ್ದೇಶನ ಮಾತ್ರ.

'ಉರಿಯ ಉಯ್ಯಾಲೆ'ಯ ದ್ರೌಪದಿಯ ಪಾತ್ರವೊಂದರಲ್ಲೇ ನಾನು ಅದೆಷ್ಟೋ ವೈಯಕ್ತಿಕ ಅನುಭವಗಳನ್ನು ಆವಾಹಿಸಿಕೊಂಡು ಬಿಟ್ಟಿದ್ದೀನಿ. ನನ್ನ ತಾಯಿಯ ಮಾತುಗಳು, ವೃತ್ತಿರಂಗಭೂಮಿಯಲ್ಲಿಯೂ ಆಕೆಯ ಸಂಕಟಗಳು, ವೃತ್ತಿರಂಗಭೂಮಿಯಲ್ಲಿ ನಮ್ಮ ಬಡುವಿನ ಸಂಬಂಧಗಳು ಆ ಪಾತ್ರ ಮಾಡೋವಾಗ ನನ್ನೊಳಗನ್ನು ಪ್ರವೇಶಿಸಿ ವಿಜೃಂಭಿಸಿಬಿಡ್ತವೆ.... ದ್ರೌಪದಿಯು ಹೇಳುವ ಅವಳ ಬದುಕಿನ ಸಂಗತಿಗಳು, ಅವಳ ಸಿಟ್ಟು, ಅವಳ ಅಳು ನನ್ನದೂ ಹೌದು. ನನ್ನ ಅಭಿನಯದಲ್ಲಿ ತಾತ, ಅಮ್ಮ, ಕಂಬಾರ್, ಸಿಂಹ, ಕಾರಂತ, ಅಲ್‌ಕಾಜಿ ಹೀಗೆ ಅನೇಕರು ಒಂದಿಲ್ಲ ಒಂದು ರೀತಿಯಲ್ಲಿ ಮೈದುಂಬಿಕೊಂಡಿರ್ತಾರೆ. ಸಿ. ಆರ್. ಸಿಂಹ 'ತುಘಲಕ್' ನಾಟಕದಲ್ಲಿ ಬರನಿಯ ಪತ್ರ ಮಾತಾಡೋ ಸನ್ನಿವೇಶದ ಕೆಲವು ಗೆಶ್ಚರ್ಸ್‌ನ ನಾನು ನನ್ನ 'ತಾಯಿ' ನಾಟಕದಲ್ಲಿ ಪಾಂಪ್ಲೆಟ್ಸ್ ಎಸೆಯೋ ಸನ್ನಿವೇಶದಲ್ಲಿ ತಂದುಕೊಂಡಿದ್ದೆ. 'ಉರಿಯ ಉಯ್ಯಾಲೆ'ಯಲ್ಲಿ ಹಿಡಿಂಬೆಯ ವಿಷಯ ಪ್ರಸ್ತಾಪಿಸುವಾಗ ಕೆಲವು ಗೆಶ್ಚರ್ಸ್‌ಗೆ ಕಂಬಾರರನ್ನು ಆವಾಹಿಸಿಕೊಂಡಿದ್ದೆ. 'ನಾಗಮಂಡಲ'ದ ಕುರುಡವ್ವನ ಪಾತ್ರಕ್ಕೆ ನನ್ನನ್ನು ಆವರಿಸಿದೋರು ಯಾರು ಗೊತ್ತಾ? ನಮ್ಮ ಛಾಯಾಗ್ರಾಹಕ ಭಾಸ್ಕರ್ ಇದಾರಲ್ಲ ಅವರ ತಾಯಿ. ಆಕೆ ಕೊಂಚ ಕುಳ್ಳಗಿದ್ದಾರೆ. ತುಸು ತಲೆ ಎತ್ತಿ ಮಾತಾಡ್ತಾರೆ – ಎಲ್ಲವೂ ಕುತೂಹಲದಿಂದ ನಿರೀಕ್ಷಿಸುವ ಭಂಗಿ, ತೆರೆದ ಬಾಯಿ, ಹಾ... ಹಾ ಎನ್ನುತ್ತ ಆಡುವ ತಲೆ... ಅದೇ ನನಗೆ ಸ್ಫೂರ್ತಿ ಆಯಿತು.

ಒಬ್ಬ ಕಲಾವಿದೆ ಇದ್ದರು. ಆಕೆ ಗೋವನ್. ಮಾತಾಡೋವಾಗ ಕೂಡ ತುಂಬ ಕುಲುಕೋದು ಅಭ್ಯಾಸ.... ಇದೂ ನನ್ನನ್ನು ಸೆಳೆದಿದೆ. ನನ್ನ ಪಾತ್ರಗಳಲ್ಲಿ ಹೇಗೋ ಅವೆಲ್ಲ ನುಗ್ಗಿ ಬಂದಿರುತ್ತವೆ. ನನಗೇ ತಿಳಿಯದ ಹಾಗೆ ನನ್ನೊಳಗೆ ಕೂತುಬಿಟ್ಟಿರುವ ಕೆಲವು ಗೆಶ್ಚರ್ಸ್- ಮುಖಗಳು ಯಾಕೆ ಹೀಗೆ ಹೊರಬರ್ತವೆ... ಅವು ಹೇಗೆ ಸರಿಯಾಗಿ ಆ ಪಾತ್ರ-ಅಭಿನಯಗಳಲ್ಲಿ ಹೊಂದಿಕೊಂಡುಬಿಡ್ತವೆ ಇವತ್ತಿಗೂ ನನಗೇ ಒಂದು ದೊಡ್ಡ ಪ್ರಶ್ನೆ. ಅವೇನು ನನ್ನ ಮುಂದೆ ನಿಂತು ನರ್ತಿಸೋಲ್ಲ.... ಪದೇ ಪದೇ ಬಂದು ಕಾಡೋಲ್ಲ. ಎದೆಲ್ಲೋ ಆಳದಲ್ಲಿ ಅವುಗಳ ಇರುವಿಕೆ.... ಅದೇ 'ಆತ್ಮ' ನಾ ? ಗೊತ್ತಿಲ್ಲ.... ಆದರವು ಸೂಕ್ತ ಕಾಲದಲ್ಲಿ ನನ್ನ ನೆರವಿಗೆ ಬರ್ತವೆ.... ದೊಡ್ಡ ದೊಡ್ಡ ಶಬ್ದ-ಸಿದ್ಧಾಂತಗಳಲ್ಲಿ ಇವನ್ನೆಲ್ಲ ವಿವರಿಸೋದಕ್ಕೆ ನನಗೆ ತಿಳೀದು. ಹೀಗೆ ನನ್ನ ಬದುಕಿನಲ್ಲಿ - ನನ್ನ ಪರಿಸರದಲ್ಲಿ ಸುತ್ತುವರಿದ ಪ್ರಸಂಗಗಳು, ವ್ಯಕ್ತಿಗಳು, ಸ್ವಭಾವ ಇವೆಲ್ಲಕ್ಕೂ ನಾನು ಕೃತಜ್ಞಳಾಗಿದ್ದೇನೆ ಅಂತಷ್ಟೇ ಹೇಳಬಹುದು.

* * *

ನನ್ನ ರಂಗ ಗುರು ಅಲ್ಕಾಜಿ ಯಾವಾಗಲೂ ಒಂದು ಮಾತು ಹೇಳೋರು 'ಹೋಲ್ಡ್ ದಿ ಗೆಶ್ಚರ್' ಅಂತ. ಯಾವುದೇ ಒಂದು ನಿರ್ದಿಷ್ಟವಾದ ಸೌಂಜ್ಞೆಯನ್ನು ಹಾಗೆ ಹಾಗೇ ಬಿಟ್ಟು ಬಿಡದೆ ಕ್ಷಣ ಹಿಡಿದು ನಿಲ್ಲಿಸೋದು. ಆಗಲೇ ಒಂದು ಅರ್ಥ ಸಿಗುತ್ತೆ, ಮನಸ್ಸನ್ನು ತಟ್ಟುತ್ತೆ ಅಂತ. ಅಲ್ಕಾಜಿ ಅವರು ಎಂದೂ ಯಾರನ್ನೂ ತುಂಬ ತಿದ್ದಿದೋರಲ್ಲ. ಯಾರಾದರೂ ತಪ್ಪು ಮಾಡ್ತಿದ್ದರೆ ಅಥವಾ ಅವರಿಗೆ ಬೇಕಾದ್ದು ಸಿಗದಿದ್ದರೆ ಆ ಕಲಾವಿದ ಏನು ಮಾಡಿದನೋ ಹಾಗೆ ತಾವೇ ಮಾಡಿಬಿಡೋರು. ಅದು ಅವರು ಹೇಳದೆಯೇ ನಮಗೆ ನಮ್ಮ ದೋಷವನ್ನು ತೋರಿಸಿಬಿಡೋದು. ಇವೆಲ್ಲ ನನ್ನ ನಿರ್ದೇಶನ ಕಾರ್ಯದಲ್ಲಿ ತುಂಬ ನೆರವಾಗಿದೆ.

* * *

ಬಹಳಷ್ಟು ನಾಟಕಗಳನ್ನು ಗಂಡಸರು ಬರೀತಾರೆ. ಹೆಂಗಸರು ಬರೆದ ವಿಭಿನ್ನವಾದ ವಸ್ತುವಿನ ನಾಟಕಗಳು ಕಡಿಮೆ. ಇದ್ದರೂ ಅವಕ್ಕೆ ಪ್ರಚಾರ, ಮಾನ್ಯತೆ ಇಲ್ಲ. ಆಕೆ ಬರೆದು ಆಕೇನೇ ಆಡಿಸಬೇಕು ಅಷ್ಟೆ.

'ಸೂರ್ಯಾಸ್ತದಿಂದ ಸೂರ್ಯೋದಯದವರೆಗೆ' ಅಂತ ಒಂದು ನಾಟಕ. ನಾವೇ ಅದನ್ನು ಪ್ರಯೋಗಿಸಿದ್ದೆವು. ಅದು ನಿಯೋಗ ಪದ್ಧತಿಯನ್ನು ಕುರಿತ ಕಥಾವಸ್ತು. ರಾಜ-ರಾಣಿ ಕತೆ. ಬಡ ಹುಡುಗಿ ತಂದು ರಾಜನಿಗೆ ಕಟ್ಟಿದರು. ಅವನೋ ನಪುಂಸಕ. ಅವಳು ತಾನು ಪ್ರೀತಿಸಿದ ಹುಡುಗನನ್ನು ಬಿಟ್ಟು ರಾಜನ ರಾಣಿ ಆಗಿದ್ದಾಳೆ. ರಾಣಿ ಜಯಮಾಲೆ ಹಿಡಿದು ನೆರೆದವರಲ್ಲಿ ತಾನು ಆಯ್ದ ಯುವಕನಿಗೆ ಮಾಲೆ ಹಾಕಬೇಕು. ಮೂರು ರಾತ್ರಿ ಅವನೊಂದಿಗೆ ಕಳೆಯಬೇಕು, ಸಂತಾನಪ್ರಾಪ್ತಿಗಾಗಿ. ಅದೂ ಸೂರ್ಯಾಸ್ತದಿಂದ ಸೂರ್ಯೋದಯದವರೆಗೆ ಮಾತ್ರ ಅವಳಿಗೆ ಪರಸಂಗ, ಆಮೇಲೆ ರಾಜನಿಗೇ ನಿಷ್ಠೆ ಅಂತ. ಒಂದು ರಾತ್ರಿ ಕಳೆದು ಬಂದಮೇಲೆ ರಾಜ-ರಾಣಿಯರ ಸಂಭಾಷಣೆ ಬರುತ್ತೆ. ರಾಜನ ಚುಚ್ಚುಮಾತು, ಆಗ ರಾಣಿ ಆಡುವ ಮಾತುಗಳಿವೆ. ಅವೆಷ್ಟು ನೇರ, ದಿಟ್ಟ ನುಡಿಗಳು ಅಂದರೆ ನನಗೆ ಆ ಪಾತ್ರ ಮಾಡೋವಾಗ ನನ್ನ ಬದುಕೇ ಎದುರಿಗಿತ್ತು. ಹೌದು ನನ್ನದೂ ಅಂಥ ಬದುಕೇ. NSDಯಲ್ಲಿದ್ದಾಗ ಸಹಪಾಠಿ ಕಲಾವಿದನೊಬ್ಬ ಪ್ರೀತಿಸಿದ. ಮದುವೆ ಆಗಬೇಕೆಂದಿದ್ದೆವು. ಆತ ನಮ್ಮ ಮನೆಗೂ ಬಂದ. ನನ್ನ ತಾತ ನನ್ನ ಜೊತೆ ಸಲಿಗೆಯಿಂದಿರುವುದನ್ನೇ ಸಂಶಯಿಸಿದ. ಆತನಿಗೆ ವೃತ್ತಿ ನಾಟಕದವರ ಕುಟುಂಬಗಳು, ಸಂಬಂಧಗಳ ಬಗ್ಗೆಯೇ ಅನುಮಾನ. ಇಂಥವರ ಜೊತೆ ಬಾಳಲಾದೀತೇ ಅಂತ ಅವನನ್ನು 'ಒಲ್ಲೆ' ಅಂದೆ.

ಮುಂದೆ ಒಬ್ಬರನ್ನು (ರಾಜಣ್ಣ) ನಾನೇ ಒಲಿದು, ಮದುವೆಯಾದೆ. ಆತನಿಗೆ ವೃತ್ತಿರಂಗಭೂಮಿ ಹೊಸದಲ್ಲ ಅಂದುಕೊಂಡೆ. ಸುಷ್ಮಾನೂ ಹುಟ್ಟಿದಳು. ಆದರೆ ಅವನ ಜೊತೆಯ ಬದುಕು ನರಕವಾಯ್ತು. ನನ್ನೆದುರೇ ಏನೇನೋ ನಡೆಯುತ್ತಿತ್ತು. ಮನೆಯೊಳಗಿಟ್ಟು ಬೀಗ ಹಾಕಿಕೊಂಡು ಹೋಗುವುದೇ, ನನ್ನೆದುರೇ ಇತರರೊಡನೆ ಸರಸವೇ, ದೈಹಿಕ ಹಿಂಸೆಯೇ ಎಷ್ಟನ್ನು ಹೇಳಿಕೊಳ್ಳಲಿ ? ನನ್ನ ಗಂಡ ನನಗೆ ಕೊಟ್ಟ ಹಿಂಸೆ, ಅವನಾಡುತ್ತಿದ್ದ ನೋವು ತರುವ ಮಾತು, ಆಗ ನನ್ನೊಳಗೆ ಏಳುತ್ತಿದ್ದ ಸಿಟ್ಟಿನ ಜ್ವಾಲೆ ಇವೆಲ್ಲ ನುಗ್ಗಿ ಬರುತ್ತಿದ್ದವು, ಈ ರಾಣಿ ಪಾತ್ರ ಮಾಡೋವಾಗ. ನಾನು ಪಾತ್ರದಲ್ಲಿ ತನ್ಮಯಳಾಗಿಬಿಟ್ಟಿರುತ್ತಿದ್ದೆ. ರಾಜನಾಗಿ ಸತ್ಯಸಂಧ. ಇನ್ನೂ ಅವನಿಗೆ ಮದುವೆ ಆಗಿರಲಿಲ್ಲ ಅನ್ಸುತ್ತೆ. ನಾನು ಆಗಷ್ಟೇ ವಿಚ್ಛೇದನ ಪಡೆದವಳು. ಸತ್ಯಸಂಧ ನನ್ನ ಬಿರುಸಾದ ಮಾತಿಗೆ ಬೆರಗಾಗಿ, ಬೆಚ್ಚಿ ನೋಡುತ್ತಿದ್ದ. ಇಬ್ಬರೂ ಇಂಥ ಬೇರೆ ಬೇರೆ ಕಾರಣಕ್ಕೆ ಪಾತ್ರಗಳಿಗೆ ಹೊಂದಿಕೊಂಡು ಬಿಟ್ಟಿದ್ದೆವು.

ಆ ನಾಟಕ ನೋಡಿದ ವಿಮರ್ಶಕರು ರಂಗದ ಮೇಲೆ ವಿಪರೀತ ಅಶ್ಲೀಲ, ನಾಟಕವನ್ನೇ ಬ್ಯಾನ್ ಮಾಡಬೇಕು ಅಂತೆಲ್ಲ ತುಂಬ ಕಠಿಣವಾಗಿ ಬರೆದಿದ್ರು. ನಾಟಕದೊಳಗೆ ಇದ್ದ ವಾಸ್ತವ ಸಂಗತಿಯನ್ನು ಒಪ್ಪಿತ ಮೌಲ್ಯಗಳಿಗೆ ಬದ್ಧರಾದೋರು ಹ್ಯಾಗೆ ಒಪ್ತಾರೆ ಹೇಳಿ ? ಅದೂ ಒಂದು ಹೆಣ್ಣು ಹಾಗೆ 'ಸುಖ'ದ ಬಗ್ಗೆ, ಸ್ಪರ್ಶದ ಬಗ್ಗೆ ಮಾತಾಡಿದರೆ !

ಪ್ರೇಮಾಭಟ್ ಅವರು ಬರೆದ ಒಂದು ಕಥೆ ಇದೆ. ದಂಪತಿಗಳಿದಾರೆ, ಮಗ- ಮಗಳಿಗೆ ಮದುವೆಯೂ ಆಗಿದೆ. ಬಹಳ ಕಾಲದ ಮೇಲೆ ಆಕೆ ಬಸಿರಿ ! ಅಕಸ್ಮಾತ್ತಾಗಿ ವೈದ್ಯರ ಬಳಿ ಹೋದಾಗ ವಿಷಯ ಗೊತ್ತಾಗಿ ನಾಚಿಕೆ-ಭಯ ಎಲ್ಲ. ಪಿಂಡ ಬಲಿತಿದೆ, ತೆಗೆಯಕ್ಕಾಗಲ್ಲ, ಹೆರಲೇಬೇಕು. ಆಗ ಗಂಡನೂ ಸೇರಿದಂತೆ ಮನೆಯವರ ಭರ್ತ್ಸನೆ, ಅವಮಾನಗಳು. ಆಕೆಯ ಸ್ಥಿತಿ ಏನಾಗಿರಬೇಡ.... ಹೆರುತ್ತಾಳೆ, ಮಗುವನ್ನು ಮಗಳು ಸಾಕಿಕೊಳ್ತಾಳೆ ಇತ್ಯಾದಿ ವಿವರಗಳಿವೆ. ಇಂಥವು ನಾಟಕಗಳಾದರೆ ವಾಸ್ತವವಾಗಿರೋಲ್ಲವೇ ? ಅದೇ ಅಲ್ಲವಾ ಸಮಾಜ ? ಆದರೆ ಇದನ್ನ ರಂಗದ ಮೇಲೆ ತಂದರೆ ಹೇಗೆ ಸ್ವೀಕರಿಸಬಹುದು ? ಹೊಟ್ಟೆಯ ಸಂಕಟ ಹಸಿಹಸಿಯಾಗಿ ಬಂದರೆ ಒಪ್ತಾರಾ ?

ಎನ್.ಎಸ್.ಡಿ.ಯಲ್ಲಿ 'ತ್ರೀ ಪೆನ್ನಿ ಅಪೇರಾ' ಮಾಡಿದ್ದೆವು. ಆಗ ನಮ್ಮನ್ನೆಲ್ಲ ರೆಡ್‌ಲೈಟ್ ಏರಿಯಾಗೆ ಕರೆದೊಯ್ದಿದ್ದರು.



ಎಡದಿಂದ ಬಲಕ್ಕೆ ಶ್ರೀಮತಿ ಬಿ. ಜಯಶ್ರೀ, ಡಾ|| ವಿಜಯಾ ಮತ್ತು ಶ್ರೀ ಆನಂದರಾಜು

ತುಂಬ ಟಿಕೆಟ್ ಎನ್ನದ ನೋಡಿ ಒಪ್ಪಿ ಬಂದಿದ್ದು. ಆ ನಾಟಕದಲ್ಲಿ ವೇಶ್ಯಾಗೃಹದ ಮಾಲಿಕ ಜಸ್ಸಿಯದು ಒಂದು ಅದ್ಭುತವಾದ ಪಾತ್ರ. ಅಂಥ ಒಬ್ಬ ಹೆಂಗಸು ಇದ್ದಿದ್ದರಿಂದಲೇ ಮಕ್ಕಳೂ ವೇಶ್ಯೆಯರಾಗದೇ ಉಳಿಯೋಕೆ ಸಾಧ್ಯ ಅನ್ನಿಸಿಬಿಡುತ್ತೆ. ನಾವು ಅರ್ಥಮಾಡಿಕೊಳ್ಳುವ ರೀತಿಯೇ ಬೇರೆ ಆಗಬೇಕು. ಅದೇ ನಾಟಕ ಬೆಂಗಳೂರಿನಲ್ಲಿ 'ರಂಗಸಂಪದ'ದೋರು ಆಡಿದಾಗ ನನಗೆ ಅದೇ ಪಾತ್ರಾನೇ ಸಿಕ್ಕಿತ್ತು. ತುಂಬ ಖುಷಿಯಿಂದ ಅಭಿನಯಿಸಿದ್ದೆ.

ಸರಿಯಾಗಿ ಯೋಚಿಸಿದರೆ 'ಜೋಕುಮಾರಸ್ವಾಮಿ'ಯ ಶಾರಿಯ ಪಾತ್ರ ಬೇರೆ ರೀತೀಲೂ ಇರಬಹುದು, ನಾನು ಆ ಪಾತ್ರ ನಿರ್ವಹಿಸಿದಾಗ ಹಾಗೇ ಅನ್ನಿಸಿತ್ತು.

ಈ 'ಪತಿವ್ರತೆ' ಇತ್ಯಾದಿ ಹೇಳ್ತಾರಲ್ಲ, ಇದೆಲ್ಲ ಸುಳ್ಳು ಅನ್ಸುತ್ತೆ. ಯಾರೂ ಹಾಗೆ ಇರೋಕಾಗಲ್ಲ. ಯಾರನ್ನಾದರೂ ನೋಡಿದಾಗ ಚೆನ್ನಾಗಿದಾನೆ ಅನ್ನಿಸಬಾರದಾ ? ಅನ್ಸುತ್ತೆ. ಅದು ತಪ್ಪೂ ಅಲ್ಲ. ತಪ್ಪು ಅನ್ನೋ ಸಮಾಜದೆದುರಿಗೆ ಸುಳ್ಳು ಹೇಳ್ತಿರ್ತೀವಿ ಅನ್ಸುತ್ತೆ. ರೇಣುಕೆಯ ಸ್ಥಿತಿ ಇವರಿಗೂ ಬರಬಾರದಲ್ಲ! ಅಷ್ಟು ಕಾಲ ಎದುರಿಗಿದ್ದ ರಾವಣನ ಬಗ್ಗೆ ಸೀತೆಗೆ ಏನೂ ಅನ್ನಿಸಲ್ವಾ ? ಶೂರ್ಪನಖಿ ರಾಮನಿಗೆ ಆಕರ್ಷಣೀಯವಾಗಿದ್ದಿರಲಾರಳೆ ? ಹೀಗೆ ಎಲ್ಲದರ ಹಿಂದೆ ಇರುವ ಸತ್ಯವೇ ಬೇರೆ, ನಾವು ಪ್ರೊಜೆಕ್ಟ್ ಮಾಡೋದೇ ಬೇರೆ ಅನ್ಸುತ್ತೆ. 'ನಿಜ'ಗಳನ್ನು ಮುಚ್ಚಿಟ್ಟು ಸುಳ್ಳನ್ನು ಮೌಲ್ಯ ಅನ್ನೋದೇ ವಿದ್ಯಾವಂತರ ಸೋಗಲಾಡಿತನ ಬಿಡಿ.

• • •

ನಾನು ನನ್ನದೇ ಒಂದು ಲೋಕ – ಕೋಟೆ ಕಟ್ಟಿಕೊಳ್ಳದೇ ಹೋಗಿದ್ದರೆ, ಅಲ್ಲಿ ಅಷ್ಟೋ ಇಷ್ಟೋ ಯಶಸ್ವಿಯೂ ಆಗದೇ ಇದ್ದಿದ್ದರೆ, ಈ ಸಮಾಜದಲ್ಲಿ ಇದೇ ಗೌರವ ಇರುತ್ತಿತ್ತೇ ಅಂದರೆ ನನಗೆ ಖಚಿತವಾದ ಉತ್ತರ ಇಲ್ಲ. ಇವತ್ತಿಗೂ ಅನೇಕ ಹಂತಗಳಲ್ಲಿ ನನಗೆ ನಾನೊಂದು ಹೆಣ್ಣು ಅಂತಲೇ ಇಂಥ ಹಿಂತಳ್ಳುವಿಕೆಯೇ ಎಂಬ ಸಂದೇಹ ಬರುವಂಥ ಪ್ರಸಂಗಗಳು ಇದ್ದೇ ಇವೆ. ಅನೇಕ ಅಪಮಾನ ಅನ್ನಿಸುವಂಥ, ನನ್ನೊಳಗೆ ನಾನೇ ಕುಗ್ಗಿ ಹೋಗುವಂಥ ಸಂದರ್ಭಗಳು ಇವತ್ತಿಗೂ ಎದುರಾಗುತ್ತಲೇ ಇರುತ್ತವೆ. ಅವನ್ನೆಲ್ಲ ಹಿಂದಕ್ಕೆ ಹಾಕಿ ಮುನ್ನುಗ್ತಿತೀನಿ, ಅಷ್ಟೇ.

ಇಷ್ಟಾದರೂ ನನ್ನನ್ನು ಹೆಚ್ಚಾಗಿ ಅಭಿನಯಿಸು ಅಂತ ಯಾರೂ ಕರೆದಿಲ್ಲ. 'ಓ ಜಯಶ್ರೀನಾ ಬೇಡ ಬಿಡಿ' ಅನ್ನೋರೇ ಹೆಚ್ಚು. ಯಾರ ಮಾತಿಗೂ ಕಿವಿಗೊಡದೆ ಧೈರ್ಯಮಾಡಿದೋರು 'ಮಾಲ್ಗುಡಿ'ಗೆ ಕರೆದ ಶಂಕರ್‌ನಾಗ್, 'ಚೆಲ್ವಿ'ಗೆ ಕರೆದ ಕಾರ್ನಾಡರೇ. ಅನಂತರ ಶಂಕರ್ 'ನಾಗಮಂಡಲ'ಕ್ಕೂ ಕರೆದರು. ನಾಗಾಭರಣ ಸಿನಿಮಾ ಮಾಡಿದಾಗ ಕರೆದರು. ಅದಕ್ಕೂ ಎಷ್ಟು ಆತಂಕ-ಅಡೆತಡೆಗಳಾದವು ಗೊತ್ತೆ? ಬಣ್ಣ ಹಾಕೋವರೆಗೆ ಖಚಿತವಿರಲಿಲ್ಲ. ನಾಗಾಭರಣನೇ ಬಯಸಿದರೂ ನನ್ನ ಕೈಲಿ ಹಾಡಿಸಲಿಲ್ಲ!

ನಾನು ನಾಟಕಗಳನ್ನು ಮಾಡಿದಾಗ ಸ್ತ್ರೀ ದೃಷ್ಟಿಕೋನದಿಂದ ನೋಡಲು ಪ್ರಯತ್ನಿಸಿದಾಗಲೂ ಗುರುತಿಸಿದ್ದು ಕಡಿಮೆ. 'ಅಗ್ನಿಪಥ', ನಾನು ಹೊಸ ದೃಷ್ಟಿಕೋನದಿಂದ ನೋಡಿದ 'ನಾಗಮಂಡಲ', 'ಚಿತ್ರಪಟ ರಾಮಾಯಣ' ಇವುಗಳಲ್ಲೆಲ್ಲ ವಿಶೇಷವಾದ ಒಳನೋಟಗಳಿವೆ ಎಂತ ಗುರುತಿಸಿದವರೆಷ್ಟು ಮಂದಿ ? 'ನಾಗಮಂಡಲ' ನಾಟಕದ ನನ್ನ ರಂಗ ಪ್ರಯೋಗದಲ್ಲಿ ನಾಟಕಕಾರರ ಸಾಲುಗಳಲ್ಲೇ ಇರುವ ಇನ್ನೊಂದು ಅರ್ಥವನ್ನು ಮೇಲೆ ತಂದಿದ್ದೇನೆ. ಗಂಡಸರು ಬಯಸುವ ಪಾತಿವ್ರತ್ಯ, ಏಕನಿಷ್ಠೆಗಿಂತ ಭಿನ್ನವಾದ ಅರ್ಥ ನನಗೆ ಆ ನಾಟಕದ ಸಾಲುಗಳ ನಡುವೆ ಕಂಡಿದೆ. ಎಷ್ಟು ಜನ ಇದನ್ನು ಗುರುತಿಸಿದರು ಹೇಳಿ ?

ನಾನು – ಪ್ರತಿಭಾ 'ಕರಿಮಾಯಿ' ಕಾದಂಬರಿಯನ್ನು ನಾಟಕ ರೂಪಕ್ಕೆ ಅಳವಡಿಸಿದೆವು. ಆದರೆ ಕಂಬಾರರು ಹೇಳುತ್ತಾರೆ – ''ಅದು ನನ್ನ ಕಾದಂಬರಿ ಆಧಾರಿತ ಆದ್ದರಿಂದ ಅದು ನನ್ನ ನಾಟಕ. ನಿಮ್ಮದು ಹೇಗಾಗುತ್ತೆ'' ಅನ್ನುತ್ತಾರೆ. ಎಂಥಾ ವಿಪರ್ಯಾಸ ನೋಡಿ.

ನಾನು 'ಲಕ್ಷಾಪತಿ' ಮಾಡಿದಾಗ, ಬೇರೆ ಬೇರೆ ನಾಟಕಗಳನ್ನು ಮಾಡಿದಾಗ ಜನ ಒಪ್ಪಿತು. ಹೊರಗಿನವರೂ, ಹೊರದೇಶದವರೂ ಮೆಚ್ಚಿದರು. ಆದರೆ ಜಯಶ್ರೀ ಬರೀ ಜನಪದ ಕಲೆ ಬಳಸಿ ಕುಣಿಸ್ತಾಳೆ. ನಾಟಕವೇ ಇರೋಲ್ಲ ಅಂದವರಿಲ್ಲವೇ ?

ಸಿನಿಮಾರಂಗದಲ್ಲಂತೂ ಕರೆಯುವವರು ಅಪರೂಪ. ಹಾಡುವುದೂ ಕಡಿಮೆ ಆಗಿದೆ. ಹಿಂದೆಲ್ಲ ಬರೀ ಕಂಠದಾನ ಮಾಡುತ್ತಿದ್ದೆ. ನನ್ನ ಸ್ವಭಾವವೇ ಬೇರೆ. ಎಲ್ಲರೂ ನಿರೀಕ್ಷಿಸುವ ಹಾಗೆ ಇತರರ ಜೊತೆ ಬೆರೆಯುವುದಿಲ್ಲ. ನನ್ನ ಪಾಡಾಯಿತು ನಾನಾಯಿತು. ಇದೂ ನನ್ನನ್ನು ದೂರ

ಇಡಲು ಕಾರಣ ಇರಬಹುದು. ಆದರೆ ನನ್ನ ಹಾಡುಗಳನ್ನು ಹಾಡುತ್ತಾರೆ, ಆಕಾಶವಾಣಿ, ಎಫ್.ಎಂ. ಮತ್ತು ಟಿ.ವಿ.ಗಳಲ್ಲಿ ಹಾಕುತ್ತಾರೆ. ಗಮನಿಸಿದ್ದೀರಾ ಬಹಳಷ್ಟು ಸಲ ನನ್ನ ಹೆಸರೇ ಹೇಳುವುದಿಲ್ಲ! ಅದೇಕೆ ನಾನೇ ಮರೆತುಹೋಗುತ್ತೇನೋ! ಇರುವಾಗಲೇ ಜನಪದ ವಾಗಿಸಿಬಿಡುವ ಬಗೆಯೊ!

ಬಿ. ಸುರೇಶ್ ಅಂದರೆ ನನಗೆ ಇಷ್ಟ. ಒಳ್ಳೆಯ ಬರಹಗಾರ, ಅವರಿಗೂ ನನ್ನ ಕಂಡರೆ ಗೌರವ ಇದೆ. ಹಿಂದೊಮ್ಮೆ ಅವರನ್ನು ಯಾನಗುಂದಿಗೆ ಕರೆದೊಯ್ದೆ. ಯಾನಗುಂದಿ ಮಾಣಿಕ್ಯಮ್ಮನ ಬಗ್ಗೆ ನಾಟಕ ಬರೆದುಕೊಡಿ ಅಂದೆ. ಬರೆದರು. ಮಧ್ಯೆ ಏನೋ ಭಿನ್ನಾಭಿಪ್ರಾಯ ಬಂತು. ನಾಟಕಕಾರ - ನಿರ್ದೇಶಕರ ಇಗೋ ಪ್ರಾಬ್ಲಂ ಇರಬಹುದು. ಆ ನಾಟಕ ಪ್ರಯೋಗಗಳು ಆಗಲೇ ಇಲ್ಲ. ಸುರೇಶ್ ಆ ನಾಟಕ ಅಚ್ಚು ಮಾಡಿಕೊಂಡರು. ನನಗೆ ಹೇಳಲೇ ಇಲ್ಲ. ಆ ನಾಟಕಕ್ಕೆ ಸಾಹಿತ್ಯ ಅಕಾಡಮಿ ಪ್ರಶಸ್ತಿಯೂ ಅವರಿಗೆ ಬಂತು. ಈಚೆಗೆ ಅವರ ಟಿ.ವಿ. ಧಾರಾವಾಹಿ 'ನಾಕು ತಂತಿ'ಗೆ ಶೀರ್ಷಿಕೆ ಗೀತೆ ಹಾಡಿದೆ. ಮೊದಲೇ ಗೊತ್ತಾದದ್ದಲ್ಲ, ಹಂಸಲೇಖಾ ಹಾಡಿಸಿದರು. ಸುರೇಶ್‌ಗೆ ಇಷ್ಟ ಆಗಲಿಲ್ಲ ಅನ್ನಿಸುತ್ತೆ. ಬೇರೆಯೋರು ಹಾಡಿದರು. ನನ್ನದೂ ಒಂದು ಸಾಲು ಉಳಿಸಿಕೊಂಡಿದಾರೆ! ಇಂಥವೇ ಒಂದು ಸಾವಿರ ಕತೆ ಹೇಳಬಹುದು. ಇದೆಲ್ಲಕ್ಕೂ ಅವರಿಗೆಲ್ಲ ಅವರದೇ ಆದ ಕಾರಣಗಳೂ ಇರಬಹುದು. ಬಹಳಷ್ಟು ಸಂದರ್ಭದಲ್ಲಿ ನನಗೆ ಇವೆಲ್ಲ ಹೆಣ್ಣು ಎಂಬ ಕಾರಣಕ್ಕೆ ಆಗುತ್ತಿರುವ ಶೋಷಣೆ ಅನ್ನಿಸಿದೆ. ಹೆಣ್ಣು, ಜಾತಿ ಕೆಲಸ ಮಾಡಿರುವುದು ಹಲವು ಕಡೆಗಾದರೆ, ಈರ್ಷ್ಯೆಯಂತೂ ತಾಂಡವವಾಡುತ್ತಿದೆ.

ಆದರೆ ನಾನು ಕದಳೀ ವನಕ್ಕೆ ನುಗ್ಗಿದ ಆನೆಯ ಹಾಗೆ ನುಗ್ಗಿ ಬಿಡುತ್ತೇನೆ, ಹದಿ-ಬದಿಯನ್ನು ಗಮನಿಸುವುದೇ ಇಲ್ಲ. ಅದು ಸರಿಯೋ ತಪ್ಪೋ, ಆದರೆ ಅದೇ ನನ್ನ ಜಾಯಮಾನ.

ನನ್ನನ್ನು ನೋಡಿದ ತಕ್ಷಣ ಜನ ಗುರುತಿಸುತ್ತಾರೆ. ಕಂಡ ಕೂಡಲೇ ಅವರ ಮುಖದಲ್ಲಿ ಮೂಡುವ ಆಶ್ಚರ್ಯ ಸಂತೋಷ-ಒಂದು ಝಲುಕ್ಕು... ಇದು ಸಾಕು ನನಗೆ. ನನಗೆ ಅದೇ ದೊಡ್ಡ ಬಳುವಳಿ. ಈ ವ್ಯವಸ್ಥೆಗಳು, ವ್ಯಕ್ತಿಗಳು ತುಳಿದರೂ ನಾನು ಅಂಜುವವಳಲ್ಲ, ಹಿಂದೆ ಸರಿವವಳಲ್ಲ.

* * *

ನನ್ನನ್ನು ಟೀಕಿಸುತ್ತಾ, ಜಗಳ ಮಾಡುತ್ತಲೇ ಇರುವ ಪ್ರಸನ್ನ ಹೇಳಿದ ಒಂದು ಮಾತು ನನ್ನನ್ನು ಇವತ್ತಿಗೂ ಕಾಡುತ್ತೆ. ಆ ದಿಕ್ಕಿನಲ್ಲಿ ಯೋಚಿಸು ಅನ್ನುತ್ತೆ. ''ನೀನು ಎಲ್ಲಿಯವರೆಗೆ ಸಾಮಾಜಿಕ ನಾಟಕಗಳನ್ನು ಮಾಡೋದಿಲ್ಲವೋ ಅಲ್ಲಿಯವರೆಗೆ ನಿನ್ನ ಭಾವಾಭಿನಯ ಪ್ರತಿಭೆಗೆ ಸಾಕಷ್ಟು ಅವಕಾಶ ಸಿಗೋಲ್ಲ. ಅದೇ ನಿನ್ನ ಉದ್ದೇಶ ಆಗಬೇಕು'' ಅಂದಿದ್ದರು ಪ್ರಸನ್ನ. ನಿಜ, ನಮ್ಮ ಜನಪದ ನಾಟಕಗಳ ಶ್ರೀಮಂತಿಕೆಯ ಮಧ್ಯೆ ಭಾವಾಭಿನಯ ಕಳೆದುಹೋಗುತ್ತೆ ಅನ್ನೋದು ನಿಜ. ನಾನು ಆಗಲೇ ಹೇಳಿದ ಎಷ್ಟೋ ವಿವರಗಳು ಬಾಹ್ಯ ವಿವರಗಳಾದವು. ಭಾವಾಭಿನಯ ನನ್ನದೇ ಆಗಿರುತ್ತಲ್ವೇ? ನಾನು ಅತ್ತ ಗಮನ ಕೊಡಬೇಕು ಅನ್ನಿಸಿದೆ. ಆ ದೃಷ್ಟಿಯಿಂದ ಪೂರ್ಣ ಪ್ರಮಾಣದಲ್ಲಿ ಅಲ್ಲದಿದ್ದರೂ ಈಚೆಗೆ ಮೂಕಜ್ಜಿ ಪಾತ್ರ ಸಮಾಧಾನ ತಂದಿದೆ.

* * *

ಸದ್ಯ ನಾನೊಂದು ದೊಡ್ಡ ಪ್ರಾಜೆಕ್ಟ್‌ಗೆ ವರ್ಕ್ ಮಾಡ್ತಿದೀನಿ. ಅದು 'ದಶಾವತಾರ' ನಾಟಕ. ಹಿಂದೆ ಗುಬ್ಬಿ ಕಂಪನಿಯ ಮಹಾ ವೈಭವದ ನಾಟಕ ಅದು. ಕಾಳಿಂಗರಾಯರ ವಿಶಿಷ್ಟ ರಂಗ ಸಂಗೀತ ಇತ್ತು. ಆ ಕಾಲಕ್ಕೆ ವಿಶೇಷ ಟ್ರಿಕ್ಸ್ ಇದ್ದವು.

ಈಗಲೂ ದೊಡ್ಡ ಜಾಗ ಗುತ್ತಿಗೆಗೆ ಪಡೆದು, ಆ ದಿನಗಳಲ್ಲಿಯ ಹಾಗೇ ರಂಗಮಂದಿರ, ಸಂಗೀತದ ಪಿಟ್ ಎಲ್ಲ ಕಟ್ಟಿ ಪುನರ್‌ಸೃಷ್ಟಿಸಬೇಕು. ನಾಟಕವನ್ನು ನಿರಂತರವಾಗಿ ಕನಿಷ್ಠ ೬ ತಿಂಗಳು, ೩-೪ ಗಂಟೆ ಅವಧಿಯದು ಪ್ರದರ್ಶಿಸಬೇಕು. ನಾಟಕದ ವಸ್ತು ಇವತ್ತಿನ ಪ್ರಶ್ನೆಗಳಿಗೆ ಉತ್ತರಿಸುವಂತಿರಬೇಕು, ಕ್ರಿಯೆಗೆ ಹೊಸ ಅರ್ಥ-ತರ್ಕ ಸಿಗಬೇಕು ಎಂತ ತಜ್ಞರ ಜೊತೆ ಸಮಾಲೋಚಿಸುತ್ತಿದ್ದೇನೆ. ಪುರಾಣದ ಕಥೆಗಳು ಹಲವು ಪ್ರಶ್ನೆಗಳನ್ನು ಎತ್ತುತ್ತವೆ? ವೇದಗಳ ಅರ್ಥವೇನು? ಅವತಾರಗಳನ್ನು ಇವತ್ತಿಗೆ ಹೇಗೆ ವ್ಯಾಖ್ಯಾನಿಸಬೇಕು? ಅದು ಕೇವಲ ವಿಷ್ಣುಪುರಾಣ, ವೈಭವ ಆಗಬಾರದು ಅನ್ನಿಸಿದೆ. ಅವತ್ತಿನ ಪುರಾಣಗಳನ್ನು ಸೂಕ್ಷ್ಮವಾಗಿ ನೋಡಿದಾಗ ಎಲ್ಲಕ್ಕೂ ಕೇವಲ ಕೇಡಿನ ಪರಿಕಲ್ಪನೆಯನ್ನೇ ವ್ಯಾಖ್ಯಾನಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ನನಗೆ ವರ್ಣಭೇದವೂ ದೊಡ್ಡದಾಗಿ ಕಾಣುತ್ತಿದೆ. 'ರಾಕ್ಷಸರು' ಎಂದು ಕೆಲವರನ್ನು ನಿರಂತರವಾಗಿ ಒಂದು ವರ್ಗ ವಂಚಿಸಿದೆಯಲ್ಲವೆ? ಅಮೃತದ ಹಂಚುವಿಕೆಯಿಂದ ಆರಂಭಿಸಿ ಬಲಿಯಂಥ ನಿಷ್ಪಾಪಿಯನ್ನು ತುಳಿದು ಹಾಕುವವರೆಗೆ ಒಂದು ವರ್ಗ ಮಾಡಿದ ಕುತಂತ್ರಗಳೇ ಇವೆಯಲ್ಲ? ತಾಯಿಯನ್ನೇ ಕತ್ತರಿಸಿ ಹಾಕು ಎಂದು ಮಗನಿಗೆ ಹೇಳುವ ಜಮದಗ್ನಿಯ ಪಾತಿವ್ರತ್ಯದ ಅರ್ಥವಾದರೂ ಏನು? ಇಂಥ ಅನೇಕ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುತ್ತಿದ್ದೇನೆ. ಹೊಸ ರೀತಿಯಲ್ಲಿ ಪ್ರಯೋಗಿಸುತ್ತೇನೆ. ಇವತ್ತಿನ ಎಲ್ಲ ಆಧುನಿಕ ತಂತ್ರಜ್ಞಾನವನ್ನು ಬಳಸಲು ಆನಂದರಾಜುರಂಥ ತಂತ್ರಜ್ಞರಿದ್ದಾರೆ.

ಈ ನಾಟಕದಲ್ಲಿ ಸೃಷ್ಟಿಯ ವಿವರಗಳು (ಕಾಸ್‌ಮಾಸ್) ಇರುತ್ತವೆ. ಬುದ್ಧ, ಬಸವ, ರಾಮಕೃಷ್ಣ, ಕುವೆಂಪು, ಬಿ.ಎಂ.ಶ್ರೀ., ಪುತಿನ, ಅಂಬೇಡ್ಕರ್ ಮೊದಲಾದವರ ಚಿಂತನೆಗಳನ್ನು ಹೊಂದಿಸುವುದು ಉದ್ದೇಶ. ಇದನ್ನೆಲ್ಲ ಜಿ.ಎಸ್.ಎಸ್. ನೇತೃತ್ವದ ಒಂದು ತಜ್ಞರ ಸಮಿತಿ ಅಂತಿಮಗೊಳಿಸುತ್ತದೆ. ತುಂಬ ಹಿರಿಯಾಸೆ ಇಟ್ಟುಕೊಂಡು ಈ ನಾಟಕದ ಸಿದ್ಧತೆಯಲ್ಲಿ ತೊಡಗಿದ್ದೇನೆ. ನನ್ನ ನೆರವಿಗೆ ಪಣಿಕ್ಕರ್, ಬನ್ನಿ ಮೊದಲಾದ ಎಲ್ಲ ರಂಗಶ್ರೇಷ್ಠರೂ ಇರುತ್ತಾರೆ. ಪ್ರಸಿದ್ಧ ನೃತ್ಯ-ಸಂಗೀತ ಪರಿಣತರೂ ಇದ್ದು ವಿನೂತನ ರೀತಿಯಲ್ಲಿ ಕೋರಿಯಾಗ್ರಫಿ ಮಾಡಲಿದ್ದಾರೆ. ಇದು ನನ್ನ ಭವ್ಯ ಕನಸು. ಇದರ ಯಶಸ್ಸೇ ನನಗೆ ದೊಡ್ಡ ಪ್ರಶಸ್ತಿ.

* * *

ನಾನು ರಂಗಭೂಮಿ ಬಿಟ್ಟರೆ ಅಥವಾ ಅಲ್ಲಿ ಸಲ್ಲದೇ ಹೋಗಿದ್ದರೆ ಏನಾಗುತ್ತಿದ್ದೆ ಅನ್ನುವುದು ಗಂಭೀರವಾದ ವಿಚಾರವೇ. ನನಗೆ ಮೊದಲಿಂದ ಸಂಗೀತದಲ್ಲಿ ಒಲವು. ಅದೂ ಹಿಂದುಸ್ತಾನಿ ಸಂಗೀತ ತುಂಬ ಇಷ್ಟ. ಏನೂ ಇಲ್ಲದಿದ್ದರೆ ಏಕತಾರಿ ಹಿಡಿದುಕೊಂಡು ಹಾಡಿಕೊಳ್ತಾ ಹೊರಟು ಬಿಡುತ್ತಿದ್ದೇನೊ. ನನಗೆ ಇವತ್ತಿಗೂ ಅದು ಪ್ರಿಯವೇ.

ಆದರೆ 'ಸ್ಪಂದನ' ತಂಡ ನನ್ನ ಅಭಿವ್ಯಕ್ತಿಗೆ ವೇದಿಕೆಯಾಗಿ ಸಿಕ್ಕಿದೆ. ನನಗೆ ಅಲ್ಲಿ ಆಸರೆ ಇದೆ. ತಂಡಕ್ಕೆ ನಾನು, ನನಗೆ ತಂಡ ಪರಸ್ಪರಾವಲಂಬನೆಯೇ ಸರಿ. ಹಾಗಾಗಿ ನಾನು ಏಕತಾರಿ ಹಿಡಿದು ಹೊರಡಲಿಲ್ಲ, ರಂಗಕರ್ಮಿಯಾದೆ. ಇಲ್ಲಿ ಆನಂದರಾಜು ಸಿಕ್ಕಿದ್ದೂ ಒಂದು ಆಕಸ್ಮಿಕ. ಬಹುದಿನದ ಗೆಳೆತನ. ವಿವಾಹದಂಥ ಕಟ್ಟಿಗೆ ಸಿಲುಕಿದ್ದು ಇತ್ತೀಚೆಗೆ. ಆದರೆ ನಾವು ಗಂಡ-ಹೆಂಡಿರಾ? ಹೌದಾದರೆ ಹೌದು, ಇಲ್ಲವಾದರೆ ಇಲ್ಲ. ನಾನೇನೂ ಅಂಥ ಸಂಪ್ರದಾಯಬದ್ಧ ಗಂಡಸು ಬಯಸುವ ಲಕ್ಷಣಗಳುಳ್ಳ ಹೆಂಡತಿಯಲ್ಲ. ಹಾಗೆ ಆಗಲೂ ಆರೆ. ಆನಂದ್‌ಗೆ ನನ್ನಿಂದ ಏನೂ ಸಿಗದೆಯೂ ಇರಬಹುದು. ಆನಂದ್ ಇಂದಲೂ ನಾನು ಅಂಥ ಏನನ್ನೂ ನಿರೀಕ್ಷಿಸಿಲ್ಲ. ಆನಂದ್‌ಗೂ ವೈಯಕ್ತಿಕ ಸಮಸ್ಯೆಗಳಿವೆ; ನನಗೂ ಇದೆ. ಸರಸ ಸಂಸಾರದ ಮನೋಧರ್ಮ, ವಯಸ್ಸೂ ಇದಲ್ಲ. ಆನಂದ್ ಒಳ್ಳೆ ಹೃದಯವಂತ – ನನ್ನ ಭಾವನೆಗಳನ್ನು ಅರ್ಥಮಾಡಿಕೊಳ್ಳುವಾತ. ನನ್ನನ್ನು ಒಂದು ವಿಗ್ರಹ ಮಾಡಿದ ವ್ಯಕ್ತಿ ಎಂದೇ ಹೇಳಬೇಕು. ಒಂದು ರೀತಿ ನನ್ನನ್ನ ನೆರಳಿನಂತೆ ಕಾಯುತ್ತಿದ್ದಾರೆ. ಆನಂದ್ ಒಳ್ಳೆಯ ತಂತ್ರಜ್ಞ. ರಂಗಾಸಕ್ತ. ಆತ ಬುದ್ಧಿವಂತರು. ಸಮಸ್ಯೆಗಳ ಗಂಟುಗಳನ್ನು ಸುಲಭವಾಗಿ ಬಿಡಿಸಬಲ್ಲರು. ನನಗೆ ಮುಖ್ಯವಾದ ಸಂಗತಿ ಎಂದರೆ ನನ್ನ ಅಮ್ಮ, ಅವಳು ಇರುವಷ್ಟು ಕಾಲ ನೆಮ್ಮದಿಯಾಗಿರಬೇಕು. ನಾನು ಸಾಕಿಕೊಂಡಿರೋ ಮಗಳು ರುದ್ರಾಣಿ, ಅವಳು ನನ್ನ ನಂತರವೂ ಸುಖವಾಗಿ ಬದುಕೋ ಹಾಗಾಗಬೇಕು. ಅವಳನ್ನ ತುಂಬ ಓದಿಸಿ, ಜಾಣೆಯಾಗಿ ಮಾಡಬೇಕು. ಇಂಥ ಕೆಲವು ಸಂಗತಿಗಳು ಮುಖ್ಯ. ಇದು ವಿನಾ ಮತ್ತೇನಾದರೂ ಸಮಸ್ಯೆ ಬಂದರೂ ನಾನು ಹಚ್ಚಿಕೊಳ್ಳುವುದಿಲ್ಲ. ನನಗೆ ಈ ಕೌಟುಂಬಿಕ ಸಂಗತಿಗಳನ್ನು ರಂಗಭೂಮಿಯ ಕಾರಣಕ್ಕಾಗಿ ದೂರ ಇಡುವುದು ಸಾಧ್ಯ. ನಾಟಕ, ಪಾತ್ರಗಳು, ನನ್ನ ಅಭಿನಯ, ಗಾಯನ ನನ್ನನ್ನು ಜೀವಂತ ಇಡಬಲ್ಲವು. ಅದರ ಮುಂದೆ ಈ ಎಲ್ಲ ಸಂಬಂಧಗಳು ಒಂದು ಬಂಧನವಾಗಿ ನಿಲ್ಲಲಾರವು. ನಾನು ಇಲ್ಲಿ ಇದ್ದೇನೆಂದರೆ ಇದ್ದೇನೆ; ಇಲ್ಲವೆಂದರೆ ಇಲ್ಲ. ಆ ಮಟ್ಟಿಗೆ ನಾನು ನಾನೇ. ನನ್ನ ಲೋಕ ನನ್ನದು. ಅದೇ ನನ್ನ ದೌರ್ಬಲ್ಯ; ಅದೇ ನನ್ನ ಪ್ರಚಂಡ ಶಕ್ತಿ.



ಚಿತ್ರಗಳು : ಆನಂದರಾಜು

ಡಾ|| ವಿಜಯಾ
ನಂ. ೩೬, ರಾಘವೇಂದ್ರ ನಗರ, ಮುನೇಶ್ವರ ಬ್ಲಾಕ್
ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು - ೫೬೦ ೦೨೬



# ಪಿಂಡಾಯಣ

ಶಾಂತಾ ನಾಗರಾಜ್

ಹರಿಕಥೆ ದಾಸರು ಹೇಳುತ್ತಿದ್ದರು : ''ಮಹಾಭಾರತದಲ್ಲಿ ಯುದ್ಧ ಮುಗಿದ ಮೇಲೆ ಕೌರವನ ಹದಿನೆಂಟು ಅಕ್ಷೋಹಿಣಿ ಸೈನ್ಯ ಪ್ರಾಣ ತೆತ್ತಂಥಾ ಸಂದರ್ಭ, ಆ ಸೈನಿಕರ ಬಂಧುಗಳು ಶ್ರೀಕೃಷ್ಣ ಪರಮಾತ್ಮನನ್ನು ಕೇಳ್ತಾರೆ, ಅಪ್ಪಾ ಭಗವಂತ ನಮ್ಮವರೆಲ್ಲಾ ಯುದ್ಧದಲ್ಲಿ ಸತ್ತು ಹೋಗಿದಾರೆ. ಹಾಗೆ ಸತ್ತರೆ ವೀರಸ್ವರ್ಗ ಅಂತಾರೆ. ಆದ್ರೆ ಇವರೆಲ್ಲ ಕೌರವನ ಅನ್ಯಾಯದ ಕಡೆ ಯುದ್ಧ ಮಾಡಿದರು. ಇವರಿಗೆ ಸ್ವರ್ಗ ಸಿಗತ್ತೇಂತ ಏನು ಗ್ಯಾರಂಟಿ ? (ನಮ್ಮ ದಾಸರು ಹಾಗೇ ಮಾತಿನ ಮಧ್ಯೆ ಇಂಗ್ಲಿಷ್ ಪದವನ್ನು ಕನ್ನಡದ ಸ್ವಂತದ್ದೇ ಅನ್ನೋಹಾಗೆ ಬಳಸಿಬಿಡ್ತಾರೆ.) ಈಗ ಈ ಸತ್ತಾತ್ಮಗಳಿಗೆ ಶ್ರಾದ್ಧ ಮಾಡಬೇಕು. ಈ ಕುರುಕ್ಷೇತ್ರದಲ್ಲೋ ಹನಿ ನೀರಿಗೆ, ಹಿಡಿ ಅನ್ನಕ್ಕೆ ಪರದಾಟವಾಗಿದೆ. ಏನು ಮಾಡೋದು ? ಅಂತ. ಆಗ ಪರಮಾತ್ಮ ಹೇಳ್ತಾನೆ, ಅಪ್ಪಾ ಬಂಧುಗಳಾ ನಾನು ಕೈಯಲ್ಲಿ ಎಳ್ಳು ಹಿಡಿದು ನಿಂತಲ್ಲೇ ಪ್ರದಕ್ಷಿಣೆ ಮಾಡ್ತಾ ಎರಚುತ್ತೇನೆ. ಆ ಎಳ್ಳು ಎಲ್ಲೆಲ್ಲಿ ಬೀಳತ್ತೋ ಅದು ಕರ್ಮಕ್ಷೇತ್ರವಾಗುತ್ತೆ. ಈ ಭರತಭೂಮಿ ಇರುವವರೆಗೆ ಯಾರು ಎಲ್ಲಿ ಸತ್ತರೂ ಈ ಕರ್ಮಕ್ಷೇತ್ರಗಳಲ್ಲಿ ಶ್ರಾದ್ಧ ಮಾಡಿದರೆ ಆ ಆತ್ಮಗಳಿಗೆ ಮುಕ್ತಿ ಸಿಗತ್ತೆ. ಅವರಿಗೆ ಪುನರ್ಜನ್ಮ ಇಲ್ಲಾ ಅಂತ.'' ಈ ಕಥೆಯ ಮೂಲ ನಮ್ಮ ದಾಸರಿಗೆ ಎಲ್ಲಿಂದ ಲಭ್ಯವಾಗಿತ್ತೋ ಗೊತ್ತಿಲ್ಲ. ಆದರೆ ಮೊನ್ನೆ ಉತ್ತರಭಾರತದ ಯಾತ್ರೆಗೆ ಹೋಗಿದ್ದಾಗ ಗಯಾ, ಕಾಶಿ, ಬದರಿಗಳಲ್ಲಿ ಜನ ತಂಡೋಪತಂಡವಾಗಿ ಪಿಂಡಪ್ರದಾನ ಮಾಡುತ್ತಿದ್ದ ದೃಶ್ಯ ಕಂಡಾಗ ದಾಸರ ಕಥೆ ಸತ್ಯವಿರಬಹುದೇ ಎನ್ನುವ ಗುಮಾನಿ ಹುಟ್ಟಿತು.

ಶ್ರದ್ಧೆಯಿಂದ ಮಾಡುವುದನ್ನು ಶ್ರಾದ್ಧವೆನ್ನುತ್ತಾರೆ. ಆದರೆ ಐನೂರು ಜನ ಒಟ್ಟಾಗಿ ಕುಳಿತು ಶ್ರಾದ್ಧ ಮಾಡುವಾಗ ಈ ಶ್ರದ್ಧೆ ಎನ್ನುವುದು ಹೇಗೆ ಕಳಚಿಹೋಗುತ್ತದೆ ಎನ್ನುವುದನ್ನು ಕಣ್ಣಾರೆ ಕಂಡ ಉದಾಹರಣೆ ಇಲ್ಲಿದೆ. ಗಯಾದಲ್ಲಿ ವಿಷ್ಣುಪಾದ ಮತ್ತು ಗದಾಧರನ ಗುಡಿಗಳ ನಡುವೆ ಅಂಗಳದಾಚೆ 'ಎಲ್' ಅಕ್ಷರದ ಮಾದರಿಯ ಬಹುಕಂಬಗಳುಳ್ಳ ಒಂದು ಹಜಾರವಿದೆ. ಮುನ್ನೂರು ಜನ ಕುಳಿತುಕೊಳ್ಳ ಬಹುದಾದ ಆ ಜಾಗದಲ್ಲಿ ಐನೂರು ಜನ ಕುಳಿತು ಶ್ರಾದ್ಧ ಮಾಡಬೇಕು. ಅಷ್ಟೂ ಜನಕ್ಕೂ ಒಬ್ಬ ಪುರೋಹಿತ ಮೈಕ್ ಹಿಡಿದು ಮಂತ್ರ ಹೇಳುತ್ತಾನೆ. ಇಬ್ಬರು ಅವನ ಚೇಲಾಗಳು ತಿಥಿ ಮಾಡುವ ಕರ್ತೃ ಗಳಿಗೆ ಬೇಕಾದ ದರ್ಭೆ, ಪಿಂಡ ಕಟ್ಟಲು ಅನ್ನ ಇತ್ಯಾದಿ ಗಳನ್ನು ಒದಗಿಸುತ್ತಾರೆ. 'ಇಲ್ಲಿ ಸಾಲಾಗಿ ಕುಳಿತುಕೊಳ್ಳಿ' ಎಂದು ಪುರೋಹಿತರ ಆಜ್ಞೆ ಆದಾಗ ಈ ಕರ್ತೃ ಮಹಾಶಯರು ಹಳ್ಳಿ ಶಾಲೆಯಲ್ಲಿ ಮಕ್ಕಳು ಕುಳಿತು ಕೊಳ್ಳುವಂತೆ ತಮ್ಮ ಮುಂದೆ ಗೇಣುದ್ದ ಜಾಗ ಬಿಟ್ಟುಕೊಂಡು ಕುಳಿತಿದ್ದರು. ಮೊದಲಿಗೆ ಬಟ್ಟಲಡಿಕೆ ದರ್ಭೆಗಳನ್ನು ಕೊಟ್ಟಾಗ ಅದನ್ನು ಶ್ರದ್ಧಾಭಕ್ತಿಯಿಂದ ಅಡ್ಡಕ್ಕೆ ಉದ್ದಕ್ಕೆ ಜೋಡಿಸಿ ಕೈ ಮುಗಿದಾಗ ಸಮಸ್ಯೆ ಯಾಗಲಿಲ್ಲ. ನಂತರ ಪಿಂಡ ಕಟ್ಟಲು ಚೇಲಾಗಳು ಅನ್ನ ವಿತರಿಸಿದಾಗ ಬಂತು ತಾಪತ್ರಯ. ''ರೀ ಮುಂದೆ ಸರ್‍ಕೊಳ್ರೀ ಇಲ್ಲಿ ಜಾಗ ಇಲ್ಲ'' ಎಂದು ಹಿಂದಿನವ ನೆಂದರೆ, ಮುಂದಿನವ ''ನೀವೇ ಹಿಂದೆ ಸರ್‍ಕೊಳ್ರಿ ಇಲ್ಲೂ ಜಾಗ ಇಲ್ಲ'' ಎಂದ. ಹೀಗೆ ಮುಂದೆ ಹಿಂದೆಯ ವಾಗ್ವಾದ ಸ್ವಲ್ಪಹೊತ್ತು ಅಲ್ಲಲ್ಲಿ ಸುತ್ತುತ್ತಿತ್ತು. ಧ್ವನಿವರ್ಧಕದಲ್ಲಿ ಪುರೋಹಿತನ ಮಂತ್ರ ಮುಂದೆ ಹೋಗುತ್ತಿದ್ದುದನ್ನು ಗಮನಿಸಿ ವಾದ ನಿಲ್ಲಿಸಿ ಗೊಣಗಿಕೊಂಡೇ ಪಿಂಡ ಕಟ್ಟುವ ಕ್ರಿಯೆ ಆರಂಭ ವಾಯಿತು. ಇವರಲ್ಲಿ ಕೆಲವರು ಬಹಳ ವರ್ಷಗಳಿಂದ ತಿಥಿ ಮಾಡಿ ಅನುಭವವುಳ್ಳವರು. ಪುರೋಹಿತ ಸೂಚನೆ ಕೊಡುವ ಮೊದಲೇ ತಮ್ಮ ಮುಂದೆ ಬಂದ ಅನ್ನವನ್ನೆಲ್ಲಾ ಬಳಸಿಕೊಂಡು ಕ್ರಿಕೆಟ್ ಬಾಲಿಗೂ ದಪ್ಪನಾದ ಮೂರು ಪಿಂಡ ಕಟ್ಟಿ, ತಾನು ಎಲ್ಲರಿಗಿಂತ ಎಷ್ಟು ಜಾಣ ಎನ್ನುವಂತೆ ಬೀಗುತ್ತಾ ಕುಳಿತರು. ಪುರೋಹಿತ ತಲೆ ತಲೆಚಚ್ಚಿಕೊಂಡ. ''ರೀ ಯಾರ್‍ರೀ ಹೇಳಿದ್ದೂ ಇಷ್ಟು ದಪ್ಪ ಪಿಂಡ ಕಟ್ಟೇಂತ ? ಇದು ನಿಮ್ಮನೇಲಿ ವರ್ಷದ ತಿಥಿ ಮಾಡಿದ ಹಾಗಲ್ಲ. ಇಲ್ಲಿ ಕ್ಷೇತ್ರ ನಿಯಮ ಬೇರೆ ಇದೇಪ್ಪಾ. ಮೂವತ್ತೆಂಟು ಪಿಂಡ ಇಡಬೇಕು. ಬರೀ ಹೆಬ್ಬೆಟ್ಟು ಗಾತ್ರದ್ದು. ಹೋಗ್ಲಿ ಕಟ್ಟಿರೋ ಪಿಂಡ ಒಡೀಬಾರ್ದು. ಅದನ್ನು ಹಾಗೇ ಬಿಡಿ. (ಚೇಲಾಗೆ) ಇವರಿಗೆ ಇನ್ನೂ ಸ್ವಲ್ಪ ಅನ್ನ ಕೊಡಪ್ಪ. ನೋಡ್ರೀ ನಾನು ಮುತ್ತಾತ, ತಾತ, ಅಪ್ಪ ಅಂತ ಹೇಳ್ತೀನಿ ನೀವು ಅವರ ಹೆಸರು ಹೇಳಿಕೊಂಡು ಚಿಕ್ಕ ಚಿಕ್ಕ ಪಿಂಡ ಕಟ್ಟಿಡಿ.'' ಜಾಣರೆಂದು ಬೀಗುತ್ತಿ ದ್ದವರು ಇಂಗು ತಿಂದ ಮಂಗನಂತಾದರು. ಮುಂದೆ ಅವರು ಕಟ್ಟಿಟ್ಟ ಪಿಂಡಗಳು ದೊಡ್ಡ ಮೂರು ಬಾತುಕೋಳಿಯ ಹಿಂದೆ ಸಣ್ಣ ಸಣ್ಣ ಮರಿಗಳು ಹೋಗುತ್ತಿರುವಂತೆ ತೋರುತ್ತಿತ್ತು.

ಈ ಮಧ್ಯೆ ಪ್ರಥಮ ಬಾರಿಗೆ ಗಯಾದಲ್ಲಿ ಬಂದು ಶ್ರಾದ್ಧ ಮಾಡುತ್ತಿರುವ ಗಂಡಂದಿರ ಹೆಂಡತಿಯರಿಗೆ ಉತ್ಸಾಹವೋ ಉತ್ಸಾಹ. ಕೆಲವರು ಕ್ಯಾಮರಾ ತೆಗೆದು ತಮ್ಮ ಗಂಡ ತಿಥಿ ಮಾಡುತ್ತಿರುವ ಚೆಂದವನ್ನು ಫೋಟೋದಲ್ಲಿ ಹಿಡಿದಿಡಲಾರಂಭಿಸಿದರು. ಗಂಡಂದಿರ ಗಮನ ಕ್ಯಾಮರಾ ಕಡೆಗೆ. ಈ ವಿಷಯದಲ್ಲಿ ತಮ್ಮ ಹೆಂಡತಿಯರು ತಮಗಿಂತ ಪೆದ್ದಿಯರು, ಅನನುಭವಿಗಳು ಎಂದೇ ಭಾವಿಸಿದ್ದ ಗಂಡಂದಿರು

ಬಲಗೈಯಿಂದ ಪಿಂಡ ಕಟ್ಟಿಡುತ್ತಲೇ ಎಡಗೈಯಿಂದ "ಅಲ್ಲಿ ಬೇಡ ಇಲ್ಲಿ ನಿಂತ್ಕೋ ಹೀಗೆ ಫೋಕಸ್ ಮಾಡು'' ಎಂದೆಲ್ಲಾ ಸಲಹೆ ಸೂಚನೆಗಳನ್ನು ಕೊಡಲಾರಂಭಿಸಿದರು. ಆ ಫೋಟೋಗ್ರಾಫಿಣಿಯರು ತಮ್ಮ ಗಂಡಂದಿರ ಆಜ್ಞಾನುಸಾರ ನಿಲ್ಲಲು ಮುಂದಿನ ಸಾಲುಗಳಲ್ಲಿಟ್ಟ ಪಿಂಡಗಳನ್ನು ತುಳಿಯದಂತೆ ಹಾರುತ್ತಾ ಎಗರುತ್ತಾ ಸರ್ಕಸ್ ಮಾಡಲಾರಂಭಿಸಿದರು. ಮುಂದಿನ ಸಾಲುಗಳ ಕರ್ತೃಗಳು ಬೊಬ್ಬೆ ಹಾಕಿದರು. "ರೀ ಮಡೀಲಿದೀವಿ ನಾವು, ಇಲ್ಯಾಕ್ರೀ ಬಂದ್ರಿ? ಇದೇನು ಹುಟ್ಟಿದ ಹಬ್ಬಾನಾ ಫೋಟೋ ತೆಗೆಯಕ್ಕೆ'' ಅಂತ. ಈ ಮಹಿಳಾಮಣಿಗಳೂ ಏನೂ ಕಮ್ಮಿ ಇರಲಿಲ್ಲ. "ನಮ್ಮಿಷ್ಟಾರೀ ನಾವು ಲೈಫಲ್ಲಿ ಇಲ್ಲಿಗೆ ಬಂದಿರೋದೇ ಫಸ್ಟ್‌ಟೈಮ್, ಫೋಟೋ ತೆಕ್ಕೋಬೇಡ್ವಾ'' ಅಂತ ದಬಾಯಿಸಿದರು. ಅಂತೂ ಒಂದಿಷ್ಟು ಹೊತ್ತು ಕೋಲಾಹಲವಾಯಿತು.

ಪುರೋಹಿತರು ನಿರಾತಂಕವಾಗಿ ನಿರರ್ಗಳವಾಗಿ ಮಂತ್ರ ಹೇಳುತ್ತಿದ್ದರು. ಆದರೆ ಅವರ ತಲೆ ಎಡಕ್ಕೂ ಬಲಕ್ಕೂ ಅಡ್ಡಾಡುತ್ತಿದುದರಿಂದಲೂ, ಅವರು ಮಡಿಯಲ್ಲಿ ಇದ್ದುದರಿಂದ ಮೈಕನ್ನು ಮುಟ್ಟುವಂತಿರಲಿಲ್ಲವಾಗಿ ಅದನ್ನು ಸ್ಟ್ಯಾಂಡಿಗೆ ಸಿಕ್ಕಿಸಿದ್ದುದರಿಂದಲೂ ಎಡಗಡೆ ಕುಳಿತವರಿಗೆ ಅರ್ಧ ಮಂತ್ರ, ಬಲಗಡೆ ಕುಳಿತವರಿಗೆ ಅರ್ಧ ಮಂತ್ರ ಕೇಳುತ್ತಿತ್ತು. ಅವರು ಹೇಳಿದರು: "ನಿಮ್ಮ ತಂದೆಗೆ ಉಪಪತ್ನಿಯರಿದ್ದರೆ ಅವರಿಗೂ ಪಿಂಡ ಇಡೀ.'' ಹಾಗೆ ಹೇಳಿದ ತಕ್ಷಣ ಒಬ್ಬ ಸಾಲಾಗಿ ಮೂರು ಪಿಂಡ ಇಟ್ಟುಬಿಟ್ಟ. ಅದನ್ನು ಕಿರುಗಣ್ಣಿನಲ್ಲಿ ನೋಡಿದ ಪಕ್ಕದವನು ಕಿಸಕ್ಕನೆ ನಕ್ಕ. ಇವನು "ಯಾಕ್ರೀ ನಗ್ತೀರಿ?'' ಅಂತ ಗುರಾಯಿಸಿದ. "ಅಲ್ಲಾ, ನಿಮ್ಮ ತಂದೆಗೆ ಮೂರ್‌ಜನ ಹೆಂಡ್ತೀರಾ?'' ಕೇಳಿದ. "ಅಯ್ಯೋ ಇಲ್ಲಪ್ಪ. ಅಗೋ ನೋಡಿ ಅಲ್ಲಿ ಕೂತಿದ್ದಾರಲ್ಲ ಅವರೇ ನಮ್ಮಮ್ಮ. ನಾನಿನ್ನೂ ಅವರ ಹೊಟ್ಟೇಲಿ ಮೂರು ತಿಂಗಳ ಕೂಸಾಗಿದ್ದಾಗ್ಲೇ ನಮ್ಮಪ್ಪ ಸತ್ತೇ ಹೋದ್ರು ಮೂರ್‌ಜನ ತಂಗೀರ್ ಜೊತೆ ಬಸ್ ಆಕ್ಸಿಡೆಂಟ್‌ನಲ್ಲಿ. ಆಗಿನ್ನೂ ಅವರಿಗೆ ಇಪ್ಪತ್ತಾರೇ ವರ್ಷಾಂತೆ. ಮದ್ವೆಯಾಗಿ ಆರೇ ತಿಂಗ್ಳಾಗಿತ್ತಂತೆ'' ಇವನು ಬಿಕ್ಕಿದ. ನಗುತ್ತಿದ್ದವನಿಗೀಗ ಅನುಕಂಪ. "ಮತ್ಯಾಕ್ರೀ ಇಟ್ರೀ ಈ ಮೂರು ಪಿಂಡಾನಾ?''

## ಗಿಳಿಪಾಠ



ಗೊತ್ತು ಇಬ್ಬರಿಗೂ
ಗಿಳಿಪಾಠಕ್ಕೆ ಪರ್ಯವಿಲ್ಲ

**ಪಾಠ**
ಮೊದಲಿಗೆ ಹೇಳುತ್ತಾನೆ
ಬೇಕಾದ್ದು ಪಡೆದುಕೋ
ಕೇಳಿಯೋ ಕೇಳದೆಯೋ
ತಿಳಿದೋ ತಿಳಿಯದೆಯೋ
ನಿನ್ನ ಸಾಮರ್ಥ್ಯದ ಪ್ರಶ್ನೆ ಅದು.

ನಂತರ ತೊಡಲುತ್ತಾನೆ
ಇದು ನಿನ್ನ ಗಡಿ.
ಮೀರುವಂತಿಲ್ಲ, ಹಣಕುವಂತಿಲ್ಲ
ತೂರುವಂತಿಲ್ಲ, ಬಾಗಿಲೂ ತಟ್ಟುವಂತಿಲ್ಲ
ಒಳಗಿನ ವೈಭೋಗ
ನಿನ್ನ ಊಹೆಗೇ ಸೀಮಿತ ಅದು.

ಈಗ ಅಭ್ಯಾಸ ಮಾಡು
ಮತ್ತೆ ಮತ್ತೆ ಪುನರಾವರ್ತನೆ
ಕಂಠಪಾಠ ಸ್ಮರಣೆ
ಪ್ರಶ್ನೆ ಉತ್ತರ ಅರ್ಥ ವ್ಯಾಖ್ಯಾನ
ಬಿಟ್ಟ ಸ್ಥಳ ಭರ್ತಿ ಟಿಪ್ಪಣಿ ಪ್ರಬಂಧ
ಹೊಂದಿಸಿ ಬರೆ.

ಆಮೇಲೆ ಪರೀಕ್ಷೆ
ತಪ್ಪಿಸುವಂತಿಲ್ಲ
ನಕಲು ಹೊಡೆಯುವಂತಿಲ್ಲ
ಅಂಕ ಅರವತ್ತು ಮೀರಬೇಕು
ಮುನ್ನಡೆಗೆ ರ್‍ಯಾಂಕು
ಪಡೆಯಲೇಬೇಕು.

**ಗಿಳಿ**
ಪಟಪಟನೆ ಹಾರಿ
ಸಟಸಟನೆ ಒದ್ದೆಯಲಿ ಹೊರಳಿ
ಮರ ಮರ ಮರಳಿನ ಲೇಪನ

ಹಾರಬೇಕಾದರೆ ಬಿಚ್ಚಲೇಬೇಕು ರೆಕ್ಕೆ
ಅದರ ಗರಿಯಲ್ಲಿ ಎಷ್ಟು ವಿಧ
ಬೆಚ್ಚಗಿಡಲು ಅಂದ ತೋರಲು
ವರ್ಣವಿನ್ಯಾಸದ ಗತ್ತು
ಅವನಿಗೇ ಗೊತ್ತು.

ಹಣ್ಣು ಮೆಲುವುದು
ಪಿಕ್ಕೆ ಇಡುವುದು
ಕಾಮಕೇಳಿಯಲ್ಲಿ
ಉಲಿ ಉಲಿದು ಕುಲುಕಿ
ಒಂದೆರಡು ಗರಿ ಉದುರಿಸಿ
ಗಬ್ಬಕ್ಕೆ ಬಂದು ಮೊಟ್ಟೆಯಿಡುವುದು
ಗೂಡು ಕಟ್ಟಿ ತಲ್ಪ ತುಪ್ಪಳ ಕಾವು ಕೊಡುವುದು
ಮರಿಗಳ ಚೀಂವ್ ಚೀಂವ್ ಗುಟುಕುವುದು.

ಹಠಾತ್ತಾಗಿ ಒಂದಿನ
ಪಾಠ
ಕಲಿಸುತ್ತಾನೆ
ಆಮೇಲೆ ಪರೀಕ್ಷೆ
ಗೊತ್ತು ಇಬ್ಬರಿಗೂ
ಗಿಳಿ ಪಾಠ
ಕಲಿಯುವುದಿ(ದ)ಲ್ಲ

**ಪ್ರತಿಭಾ ನಂದಕುಮಾರ್**
೧೧೯, ಫ್ಲಾಟ್ ೪೦೪, ಶ್ರವಂತಿ ಪ್ಯೆಡ್ ೧, ೧೨ನೇ 'ಎ' ಕ್ರಾಸ್
ಜೆ.ಪಿ. ನಗರ ೩ನೇ ಹಂತ, ಬೆಂಗಳೂರು - ೫೬೦ ೦೭೮

''ನಾನು ನಮ್ಮಪ್ಪನ ತಂಗೀರ್ಗ ಇಡಬೇಕೂ ಅಂತ ತಿಳ್ಕೊಂಡೆ'' ಅಂದ ಈ ಜಾಣ. ಆ ಹೊತ್ತಿಗೆ ಪುರೋಹಿತರು ಯಾರನ್ನೋ ನೋಡಿ ಗದಿರದರು. ''ರೀ ಇಟ್ಟ ಪಿಂಡ ಒಡೀಬಾರ್ದು, ಅದನ್ನೇ ಬೇರೆಯವರಿಗೆ ಇಡಬಾರ್ದು. ಏನ್ ಶ್ರಾದ್ಧ ಮಾಡೋದು ಅಂದ್ರೆ ಆಟಾ ಅಂದ್ಕೊಂಡ್ರಾ? ಸರಿ ಮುಂದಕ್ಕೆ ಹೋಗೋಣ. ನಿಮ್ಮ ತಂದೆ ಉಪಪತ್ನಿಯ ಹೆಸರು ಗೊತ್ತಿಲ್ಲದಿದ್ದರೆ ಯಜ್ಞಮ್ಮ ಅಂತ ಹೇಳ್ಕೊಳ್ಳಿ'' ಮಂತ್ರ ಮುಂದುವರೆಯಿತು. ಮೂರು ಪಿಂಡವನ್ನಿಟ್ಟ ಮಹಾಶಯ ಕಕ್ಕಾಬಿಕ್ಕಿಯಾದ. ಅದನ್ನು ಒಡೆಯುವಂತಿಲ್ಲ ಬೇರೆಯವರಿಗೆ ಇಡುವಂತಿಲ್ಲ 'ಇಟ್ಟಾಗಿದೆ ಹಾಳಾಗಲಿ' ಎಂದುಕೊಂಡು ಯಜ್ಞಮ್ಮ ಒಂದು, ಯಜ್ಞಮ್ಮ ಎರಡು, ಯಜ್ಞಮ್ಮ ಮೂರು ಎಂದು ಹೇಳಿಕೊಂಡು ತರ್ಪಣ ಬಿಟ್ಟ. ಪಾಪ ಮದುವೆಯಾದ ಹೆಂಡತಿಯೊಂದಿಗೆ ಸರಿಯಾಗಿ ಸುಖಿಸದೇ ದಾಂಪತ್ಯ ಜೀವನಕ್ಕೆ ಆರೇ ತಿಂಗಳಿಗೆ ತರ್ಪಣವಿತ್ತು ಈ ನೆಲದ ಋಣವನ್ನು ಕಳೆದುಕೊಂಡ ಜೀವಕ್ಕೆ ಮೂರು ಮೂರು ಜನ ಉಪಪತ್ನಿಯರನ್ನು ಕರುಣಿಸಿಬಿಟ್ಟಿದ್ದ ಈ ಮಗರಾಯ! ಆ ಆತ್ಮ ಸ್ವರ್ಗದಲ್ಲೋ ನರಕದಲ್ಲೋ ಎಲ್ಲಿದೆಯೋ ಅಲ್ಲಿ ನಕ್ಕಿತೋ ಅತ್ತಿತೋ ಬಲ್ಲವರ್ಯ್ಯಾರು ?

ಪಿಂಡಗಳ ಸಂಖ್ಯೆ ಹೆಚ್ಚುತ್ತಾ ಹೋದಂತೆ ಎಲ್ಲರಿಗೂ ತಮ್ಮ ಮುಂದಿರುವ ಸ್ಥಳ ಇಕ್ಕಟ್ಟಾಗುತ್ತಾ ಬಂತು. ಮುಂದಿನ ಸಾಲಿನ ಮಹಾಶಯನೊಬ್ಬ ಪಿಂಡಗಳನ್ನು ಸವರಿಸುತ್ತಾ ತಾನು ಕುಳಿತ ಭಂಗಿಯನ್ನು ಬದಲಿಸಿ ತನ್ನ ಹಿಂಭಾಗವನ್ನು ಅರ್ಧ ಮೇಲಕ್ಕೆತ್ತಿ ಅಂಬೆಗಾಲಿನಂತೆ ಕುಳಿತು, ಬಲಗೈ ಚಾಚಿಕೊಂಡು ಎಲ್ಲೆಲ್ಲಿ ಸ್ಥಳವಿತ್ತೋ ಅಲ್ಲೆಲ್ಲಾ ಪಿಂಡಗಳನ್ನಿಡಲು ಪ್ರಾರಂಭಿಸಿದ. ಹಾಗೆ ಅವನು ಅರ್ಧ ಮೇಲೆ ಎದ್ದಾಗ ಅವನು ಕುಳಿತಿದ್ದ ಸ್ಥಳ ತೆರವಾಯಿತು. ಹಾಗೆ ತೆರವಾದ ಸ್ಥಳದಲ್ಲಿ ಹಿಂದಿನ ಸಾಲಿನಲ್ಲಿದ್ದವ ನಾಲ್ಕು ಪಿಂಡಗಳನ್ನಿಟ್ಟುಬಿಟ್ಟ. ಮುಂದಿನ ಸಾಲಿನ ಮಹಾಶಯ ತನ್ನ ಅಂಬೆಗಾಲಿನ ಸ್ಥಿತಿ ಬದಲಿಸಿ ನೆಲದ ಮೇಲೆ ಕುಳಿತಾಗ, ಹಿಂದಿನ ಸಾಲಿನವನಿಟ್ಟ ನಾಲ್ಕೂ ಪಿಂಡಗಳು ಅವನ ಪಂಚೆಯೊಳಗೆ ಸೇರಿಹೋದವು. ಇದನ್ನು ಹಿಂದಿನ ಸಾಲಿನ ಭೂಪ ಗಮನಿಸಲೇ ಇಲ್ಲ. ಸ್ವಲ್ಪಹೊತ್ತಿಗೆ ಅವನಿಗೆ ಯಾಕೋ ತಾನಿಟ್ಟ ಪಿಂಡಗಳ ಸಂಖ್ಯೆ ಕಮ್ಮಿಯಿದೆ ಎನ್ನಿಸಿತು. ಎಣಿಸಿದ. ನಿಜಕ್ಕೂ ನಾಲ್ಕು ಕಮ್ಮಿಯಿದೆ! ಅವನಿಗೆ ತನ್ನ ಬಲಪಕ್ಕದವನ ಮೇಲೆ ಅನುಮಾನ. ಯಾಕೆಂದರೆ ಅವನು ಇವನಿಟ್ಟ ಪಿಂಡಗಳ ಹತ್ತಿರವೇ ತಾನೂ ಇಡುತ್ತಿದ್ದ. ''ರೀ ನೀವು ನನ್ನ ಪಿಂಡಾನೂ ಸೇರಿಸಿಕೊಂಡಿದೀರ ನೋಡ್ರೀ ಇಲ್ಲಿ ನಾಲ್ಕು ಕಮ್ಮಿ ಇವೆ'' ಎಂದ. ಅವನಿಗೆ ಕೋಪ ನೆತ್ತಿಗೇರಿತು. ''ಇವೆಲ್ಲಾ ನನ್ನ ಪಿಂಡಾರೀ ನೀವೇ ಎಲ್ಲೋ ಲೆಕ್ಕ ತಪ್ಪಿದೀರ'' ಎಂದು ಗದರಿದ. ಆ ಕ್ಷಣಕ್ಕೆ ಅವರಿಗೆ 'ನನ್ನ ಪಿಂಡ' ಎಂದರೆ ಇನ್ನೂ ಏನೇನೋ ಅರ್ಥ ಬರುವುದೆಂಬ ವಿವೇಕವೂ ಮರೆಯಾಗಿತ್ತು. ಈ 'ನನ್ನ ಪಿಂಡ'ದ ವಾಗ್ವಾದ ಜೋರಾಯಿತು. ಪುರೋಹಿತ ಜೀ[illegible] ಬಗೆಹರಿಸಲು ಅಟ್ಟಿದ. [illegible]ಗೆ ಇವರ ವಾದವಿವಾದ ಕೇಳಲು ಸಮಯವಿಲ್ಲ. ಪಿಂಡಗಳನ್ನು ಕಳೆದುಕೊಂಡವನಿಗೆ ಮತ್ತೊಂದಿಷ್ಟು ಅನ್ನ ಕೊಟ್ಟು ಜಗಳ ನಿಲ್ಲಿಸಿದ. ಕಳಕೊಂಡ ಆಸಾಮಿ ಗುರು ಗುರು ಅನ್ನುತ್ತಲೇ ಇದ್ದ. ಪಿತೃಕಾರ್ಯ ಮುಗಿದು ಪಿಂಡಗಳ ವಿಸರ್ಜನೆಗೆಂದು ಎಲ್ಲರೂ ಎದ್ದಾಗ ಮುಂದಿದ್ದವನ ಪಂಚೆಯ ಕಚ್ಚೆಯೊಳಗಿಂದ ನಾಲ್ಕು ಪಿಂಡಗಳು ಪುಷ್ಪವೃಷ್ಟಿಯಂತೆ ಧರೆಗುದಿರಿದಾಗ ಪಿಂಡ ಕಳಕೊಂಡವನು ಪೆಕರನಂತೆ ನಿಂತ. ಪಕ್ಕದವನು ''ನೋಡಿದ್ರಾ ನೀವಿಟ್ಟ ಪಿಂಡದ ಮೇಲೇ ಅವರು ಕೂತಿದ್ರು. ನೀವು ನನ್ನ ಬೈದ್ರಿ'' ಎಂದು ಮೂತಿ ತಿವಿದ.

ಈ ಪಿಂಡಗಳ ರಾದ್ಧಾಂತ ಮುಗಿಯುವುದು 'ವಿಷ್ಣುಪಾದ' ಎನ್ನುವ ಸ್ಥಳದಲ್ಲಿ. ಆ ವಿಷ್ಣುಪಾದದ ಗರ್ಭಗುಡಿಯ ವರ್ಣನೆ ಮಾಡದಿದ್ದರೆ ಮುಂದಿನ ಚಿತ್ರಣ ಕಲ್ಪಿಸಿಕೊಳ್ಳುವುದೂ ಕಷ್ಟವಾಗುತ್ತದೆ. ಅದೊಂದು ಚಿಕ್ಕ ಚೌಕಾಕಾರದ ನಾಲ್ಕು ಕಡೆಯೂ ಬಾಗಿಲುಳ್ಳ ಕೋಣೆ. ಮಧ್ಯದಲ್ಲಿ ನೆಲದ ಮೇಲೆ ಎರಡಡಿಯಷ್ಟು ದೊಡ್ಡ ವಿಷ್ಣುಪಾದ ಕಲ್ಲಿನಲ್ಲಿ ಮೂಡಿದೆ. ಅದರ ಸುತ್ತ ಒಂದಡಿ ಎತ್ತರದ ಬೆಳ್ಳಿಯ ತಗಡು ಹೊದಿಸಿರುವ ಕಟ್ಟು ನಿರ್ಮಿಸಿದ್ದಾರೆ. ಆ ಕಟ್ಟಿನ ಮೇಲೆ ನಾಲ್ಕಾರು ಪಂಡಾಗಳು (ಅಲ್ಲಿಯ ಪುರೋಹಿತರು) ಕುಳಿತಿರುತ್ತಾರೆ. ಅವರು ಯಾರನ್ನೂ ಹೆಚ್ಚು ಹೊತ್ತು ಅಲ್ಲಿ ನಿಲ್ಲದಂತೆ ಅಟ್ಟುತ್ತಿರುತ್ತಾರೆ. ನಾಲ್ಕೂ ದಿಕ್ಕಿನಿಂದ ಜನ ನುಗ್ಗಿಕೊಂಡು ಬಂದು ತಾವು ತಂದ ದೊನ್ನೆಯ ಒಳಗಿರುವ ಪಿಂಡವನ್ನು ಪಾದದ ಮೇಲೆ ಹಾಕಿ, ತಮ್ಮ ತಲೆಯನ್ನು ಪಾದಕ್ಕೆ ತಗುಲಿಸಿ ನಮಸ್ಕರಿಸಿ ಹೋಗುತ್ತಾರೆ. ಇದು ಅಲ್ಲಿಯ ಕ್ರಮ. ಆದರೆ ದಿನವೂ ಅಲ್ಲಿ ಸಾವಿರಾರು ಜನ ಶ್ರಾದ್ಧ ಮಾಡುತ್ತಾರೆ. ಅಲ್ಲಿರುವುದೋ ಒಂದೇ ವಿಷ್ಣುಪಾದ. ಅದರ ಮೇಲೇ ಸಮಸ್ತ ಪಿಂಡಗಳೂ ಬಂದು ಬೀಳಬೇಕು. ಹತ್ತು ಜನ ಪಾದಕ್ಕೆ ತಲೆ ತಗುಲಿಸುತ್ತಿರುವಾಗ ಹಿಂದಿನಿಂದ ನೂರು ಜನ ಪಿಂಡ ಎಸೆಯುತ್ತಾರೆ. ತಗ್ಗಿದ ತಲೆ ಮೇಲೇಳುವ ಹೊತ್ತಿಗೆ ಅದರ ತುಂಬಾ ಪಿಂಡಾರ್ಚನೆ! ಅಲ್ಲಿಂದ ಹೊರಬರುವವರನ್ನು ನೋಡಬೇಕು. ತಲೆ ಕಿವಿ ಭುಜದ ಮೇಲೆಲ್ಲಾ ಪಿಂಡದ ಅಗುಳುಗಳು ರಾರಾಜಿಸುತ್ತಿರುತ್ತವೆ. ಅಲ್ಲಿರುವ ಪಂಡಾಗಳು ಹತ್ತು ನಿಮಿಷಗಳಿಗೊಮ್ಮೆ ಬಿದ್ದ ಪಿಂಡಗಳನ್ನು ಕಟ್ಟಿನಿಂದಾಚೆಗೆ ಹಾಕಿ ಪಾದವನ್ನು ಕಾಣುವ ಹಾಗೆ ಮಾಡುತ್ತಾರೆ. ಇದರಿಂದ ಅವರಿಗೆ ಲಾಭವಿದೆ. ಪಿಂಡದ ಜೊತೆಯಲ್ಲಿ ವಿಸರ್ಜಿಸಿದ ದಕ್ಷಿಣೆಗಳು (ಒಂದು, ಎರಡು ಮತ್ತು ಐದು ರೂಪಾಯಿ ನಾಣ್ಯಗಳು) ಅವರಿಗೆ ದಕ್ಕುತ್ತದೆ. ಅದು ಸಿಕ್ಕಿದವರಿಗೆ ಸೀರುಂಡೆ. ಹಾಗಾಗಿ ಅವರಲ್ಲೇ ಸಣ್ಣ ಸ್ಪರ್ಧೆ ಇರುತ್ತದೆ. ಅದರ ರಭಸದಲ್ಲಿ ಪಿಂಡದ ಅನ್ನ ಕಟ್ಟಿನ ನಾಲ್ಕೂ ಕಡೆಯಲ್ಲಿ ಚೆಲ್ಲಾಡುತ್ತದೆ. ಶ್ರಾದ್ಧ ಮಾಡದ ನಮ್ಮಂತಹವರು ಬರೀ ವಿಷ್ಣುಪಾದವನ್ನು ನೋಡೋಣವೆಂದು ಹೋದರೆ ನಮ್ಮ ಕಾಲುಗಳನ್ನು ಸ್ವತಃ ವಿಷ್ಣುವಿಗೂ ರಕ್ಷಿಸಲು ಆಗುವುದಿಲ್ಲ. ನೆಲದ ಮೇಲೆಲ್ಲಾ ದಪ್ಪಗೆ ಹರಡಿಕೊಂಡ ಅನ್ನ, ಅದನ್ನು ತುಳಿಯುತ್ತಲೇ ಬಂದು ಹೋಗುವ ಜನ, ಅದರಿಂದ ಹೊರಡುವ ವಿಚಿತ್ರ ವಾಸನೆ. ಯಾರ್‍ಯಾರ ಪಿಂಡಗಳನ್ನು ಯಾರ್‍ಯಾರು ತುಳಿಯುತ್ತಾರೋ! ಕೆಲವೇ ಕ್ಷಣಗಳಿಗೆ ಭಯಭಕ್ತಿಗಳಿಂದ (!?) ಪೂಜಿಸಿಕೊಂಡ ಈ ಪಿಂಡವೆನ್ನುವ ಅನ್ನದುಂಡೆ ಕೆಲವೇ ಸಮಯದ ನಂತರ ಕಾಲಕಸವಾಗಿ ಹೋಗುತ್ತದೆ.

ಹೀಗೆ ಗಯಾ, ಕಾಶಿಗಳಂಥ ಕ್ಷೇತ್ರಗಳಲ್ಲಿ ಸಾಮೂಹಿಕವಾಗಿ ಮಾಡುವ ಶ್ರಾದ್ಧಕ್ಕೆ ಅರ್ಥವೆಲ್ಲಿದೆ ? ದೇವಾಲಯಗಳಲ್ಲಿ ಶುಚಿಯಿಲ್ಲ. ನದಿಯ ನೀರಂತೂ ವಿಪರೀತ ಮಲಿನ. ಶ್ರಾದ್ಧ ಮಾಡಿಸುವ ಅಲ್ಲಿನ ಪುರೋಹಿತರಿಗೆ (ಅಲ್ಲಿ ಕನ್ನಡದ ಪುರೋಹಿತರೂ ಸಿಗುತ್ತಾರೆ) ಇವೆಲ್ಲಾ ನಿತ್ಯೋತ್ಸವ! ಅವರಲ್ಲಿ ಯಾಂತ್ರಿಕತೆ ತಾಂಡವವಾಡುತ್ತಿರುತ್ತದೆ. ಇನ್ನು ಅಲ್ಲಿಯ ಪಂಡಾಗಳೋ ದೇವರಿಗೇ ಪ್ರೀತಿ. ಬಾಯಿ ತುಂಬಾ ಎಲೆಯಡಿಕೆ, ಹೊಗೆಸೊಪ್ಪು ತುಂಬಿಕೊಂಡು ಅದರ ರಸ ಸೋರಿ ಹೋಗದ ಹಾಗೆ ತುಟಿಯನ್ನು ಪಾತ್ರೆ ಮೇಲಿನ ತಟ್ಟೆಯಂತೆ ಬಿಗಿಹಿಡಿದು, ಮಾತನಾಡಲು ಸಮಯವೇ ಇಲ್ಲದ ಹಾಗೆ ನಿಮ್ಮ ಕೈಲಿರುವ ದುಡ್ಡನ್ನೆಲ್ಲಾ ಸರಕ್ಕನೆ ಕಸಿದುಕೊಂಡೇಬಿಡುತ್ತಾರೆ. ಅವರ ಮಲಿನ ವಸ್ತ್ರಗಳನ್ನೂ ಹಣಕ್ಕಾಗಿ ಕಚ್ಚಾಡುವ ಅವರ ಹಪಾಹಪಿಯನ್ನೂ ನೋಡಿದರೆ ಯಾಕಾದರೂ ಇಲ್ಲಿಗೆ ಬಂದೆವೋ ಎನಿಸಿಬಿಡುತ್ತದೆ. ಬದರಿಯಲ್ಲಂತೂ ಎರಡೆರಡು ಸ್ವೆಟರ್, ಟೋಪಿ, ಕಾಲುಚೀಲ, ಕ್ಯಾನ್ವಾಸ್ ಶೂ ಎಲ್ಲದರಿಂದ ಅಲಂಕೃತನಾದ ಪಂಡಾ, ಆ ಚಳಿಯಲ್ಲೂ ಒದ್ದೆ ಪಂಚೆಯುಟ್ಟು ಶ್ರಾದ್ಧ ಮಾಡಿದ ಕರ್ತೃವಿನ ಬೆನ್ನ ಮೇಲೆ ದರ್ಭೆ ಕಟ್ಟನ್ನು ಮುಟ್ಟಿಸುತ್ತಾ ''ತೇರಾ ಮಾತಾಪಿತಾ ಸ್ವರ್ಗಕೋ ಚಲಾಗಯಾ'' ಎಂದಪ್ಪಣೆ ಕೊಡಿಸಿದಾಗ ಎಲ್ಲಿಯ ಸ್ವರ್ಗ ? ಎಲ್ಲಿಯ ನರಕ ? ಎನ್ನುವ ಗಲಿಬಿಲಿಯುಂಟಾಗುತ್ತದೆ.

ಭಾರತದಂತಹ ಬಡದೇಶದ ಈ ಎರಡು ಅತಿರೇಕಗಳಿಗೆ ಏನೆನ್ನೋಣ ? ಒಂದು ಕಡೆ, ಅತಿ ಬಡತನದ ರೇಖೆಯ ಕೆಳಗಿರುವವರು ಹಸಿವಿನಿಂದ ಸಾಯುತ್ತಿದ್ದಾರೆ. ಮತ್ತೊಂದೆಡೆ, ಇಂಥ ತೀರ್ಥಕ್ಷೇತ್ರಗಳಲ್ಲಿ ಕ್ವಿಂಟಾಲ್ ಗಟ್ಟಲೆ ಅಕ್ಕಿ ಅನ್ನವಾಗಿ, ಪಿಂಡವಾಗಿ ಜನರ ಕಾಲ್ತುಳಿತಕ್ಕೆ ಸಿಕ್ಕು ನಾಶವಾಗುತ್ತಿದೆ. ಪ್ರತಿ ಕರ್ತೃವೂ ಇಡುವ ಪಿಂಡದ ಅನ್ನದಿಂದ ಮೂರು ಮಕ್ಕಳ ತುತ್ತಿನ ಚೀಲವನ್ನು ತುಂಬಿಸಬಹುದು. ಒಂದೊಂದು ಕ್ಷೇತ್ರದಲ್ಲೂ ಸಾವಿರಾರು ಮಕ್ಕಳ ಊಟ ನಾಶವಾಗುತ್ತಿದೆ. ಈ ದಿನಗಳಲ್ಲಿ ಅನೇಕ ಮಠದ ಸ್ವಾಮಿಗಳು ವೈಚಾರಿಕತೆಯ ಕಡೆಗೆ ಮುಖ ಮಾಡುತ್ತಿದ್ದಾರೆ. ಜಾತಿವಾದವನ್ನು ಬಿಡಬೇಕೆನ್ನುವ ವಿಚಾರವನ್ನು, ಹಳೆಯ ಕಂದಾಚಾರಗಳನ್ನು ಬದಲಿಸಬೇಕೆನ್ನುವ ವಾದವನ್ನು, ವಿಧವಾ ವಿವಾಹ ಮುಂತಾದ ಮುಂದುವರೆದ ಆಚರಣೆಗಳನ್ನು ಬೆಂಬಲಿಸುವಂತಹ ಮನಸ್ಸುಳ್ಳವರಾಗಿದ್ದಾರೆ, ತುಂಬಿದ ಸಭೆಯಲ್ಲೂ ಈ ಬಗ್ಗೆ ಮುಕ್ತ ಮನಸ್ಸಿನಿಂದ ಮಾತನಾಡುತ್ತಾರೆ. ಇಂಥ ಮುಂಚೂಣಿಯಲ್ಲಿರುವವರು ಈ ಪಿಂಡದ ಹೆಸರಿನಲ್ಲಿ ರೈತನ ಶ್ರಮದ ಫಲವನ್ನು ನೆಲಕ್ಕೆಸೆದು ನಾಶಮಾಡುವ ಕ್ರಮವನ್ನು ಕುರಿತು ಮರುಚಿಂತನೆ ಮಾಡಬೇಕು.

**ಶಾಂತಾ ನಾಗರಾಜ್**
ನಂ. ೬೦, ಜಿ೧ ಮೀರಾ ಮ್ಯಾನ್ ಷನ್, ೧೭ನೇ ಅಡ್ಡರಸ್ತೆ
ಮಲ್ಲೇಶ್ವರ ಬೆಂಗಳೂರು - ೫೬೦ ೦೫೫

ಚಲನಚಿತ್ರ, ವೀಡಿಯೋ, ಇಂಟರ್‌ನೆಟ್, ಕಾಮಿಕ್ ಬುಕ್ಸ್, ಕಾರ್ಟೂನ್ ಮುಂತಾದವುಗಳ ಪ್ರಭಾವ ದಿನೇದಿನೇ ಬೆಳೆಯುತ್ತಿದೆ. ಅನೈತಿಕತೆಗೆ, ಹೀನ ಅಪರಾಧಗಳಿಗೆ ಪ್ರೋತ್ಸಾಹ ನೀಡುವ ಈ ದೃಶ್ಯಮಾಧ್ಯಮಗಳು ಮಕ್ಕಳು ಯುವಕರಲ್ಲಿ ಅಪರಾಧಗಳ ಆಸಕ್ತ ಬಯಕೆಗಳನ್ನು ಕೆರಳಿಸುತ್ತಿವೆ. ಅಷ್ಟೇ ಅಲ್ಲ, ಇಂತಹ ಅಪರಾಧಗಳನ್ನು ಹೇಗೆ ಮಾಡಬೇಕೆಂಬುದನ್ನೂ ಕಲಿಸಿಕೊಟ್ಟು, ಅಂತಹ ಕುಕೃತ್ಯಗಳನ್ನು ಮಾಡುವ ತಂತ್ರವನ್ನೂ ತಿಳಿಸಿಕೊಡುತ್ತವೆ. ಇಂತಹವುಗಳಿಂದ ಮಕ್ಕಳು ಯುವಕರು ಪ್ರಚೋದಿತರಾಗಿ ಅಂತಹ ಸಾಹಸಗಳಿಗೆ ಇಳಿದ ಅನೇಕ ಉದಾಹರಣೆಗಳು ನಮ್ಮ ಮುಂದೆ ಇವೆ. ನಮ್ಮ ದೇಶದ ಚಿತ್ರ ಇದಕ್ಕಿಂತ ಭಿನ್ನವಾಗಿಲ್ಲ.



# ಅಪರಾಧಗಳಿಗೆ ಏಣಿಯಾಗುತ್ತಿರುವ ಮಾಧ್ಯಮ

ಜಿ. ಎಸ್. ಶಿರಹಟ್ಟಿ

ಹಲವಾರು ದಶಕಗಳ ಹಿಂದೆ ಮಾರ್ಶಲ್ ಮ್ಯಾಕ್‌ಲುಹಾನ್ ಎಂಬ ಮಾಧ್ಯಮ ಪುರೋಹಿತ ಮಾಧ್ಯಮವನ್ನು 'ಸಂದೇಶ' ವೆಂದು ವ್ಯಾಖ್ಯಾನಿಸಿದ್ದ. ಮಾಧ್ಯಮದ ಸ್ವರೂಪ ತೀವ್ರ ಬದಲಾವಣೆಗೆ ಒಳಗಾಗಿ ಅದರ ಬಳಕೆ ನಿತ್ಯದ ಅನಿವಾರ್ಯತೆ ಆದಾಗ ಮಾಧ್ಯಮವೆಂದರೆ 'ಮಾನಸಿಕ ಮರ್ದನ'ವೆಂದು ವ್ಯಾಖ್ಯಾನಿಸಿ, ಅದು ಮನುಷ್ಯನ ಮಾನಸಿಕ ಸ್ಥಿತಿಯನ್ನು ಚಿವುಟಿ ಆತನನ್ನು ಕ್ರಿಯಾಶೀಲನನ್ನಾಗಿ ಮಾಡಬೇಕೆಂದು ವಿವರಣೆ ನೀಡಲಾಯಿತು. ಅಂತೆಯೇ ಮಾಧ್ಯಮ ಭಾವನಾತ್ಮಕ ಮನರಂಜನೆಗೆ ಹೆಚ್ಚು ಒತ್ತುಕೊಟ್ಟಿತು. ಅದರ ವಿಪರೀತ ಬಳಕೆಯಿಂದ ಬೇಸತ್ತ ಮಾಧ್ಯಮ ಪಂಡಿತರು ಅದನ್ನು ಅಭಿವೃದ್ಧಿಶೀಲ ಸಮಾಜಕ್ಕಾಗಿ ಉಪಯೋಗಿಸಲು ಶೈಕ್ಷಣಿಕ ಮನರಂಜನೆಯ ರೂಪಕೊಟ್ಟರು. ಮಾಧ್ಯಮ ಅಭಿವೃದ್ಧಿಶೀಲತೆಯ ಹಾದಿಯಲ್ಲಿ ದಾಪುಗಾಲು ಹಾಕಲು ಅನೇಕ ತಾಂತ್ರಿಕ ಆವಿಷ್ಕಾರಗಳೂ ಸಹಾಯಕಾರಿಯಾದವು. ಮಾಧ್ಯಮ ವಿವಿಧ ರೂಪುಗಳಲ್ಲಿ ಮೈಚಾಚತೊಡಗಿ ಅದರ ಪ್ರತಿಯೊಂದು ರೂಪದ ಬಳಕೆಗೆ ವೆಚ್ಚ ಅನಿವಾರ್ಯವಾಯಿತು. ಅನಿವಾರ್ಯವಾಗಿ ಮಾಧ್ಯಮ ವ್ಯಾಪಾರೀ ವೃತ್ತಿಗೆ ತೊಡಗಿ ವಾಣಿಜ್ಯ ಮನರಂಜನೆಯಲ್ಲಿ ಮಗ್ನವಾಯಿತು. ಮಾಧ್ಯಮ ಇಡಿಯಾಗಿ ಇಂದು ವಿರಾಟ ಸ್ವರೂಪವನ್ನ ತಾಳಿ ಅವ್ಯವಸ್ಥೆಯ ಗೂಡಾಗಿದೆ. ವ್ಯಕ್ತಿಯನ್ನು ಕ್ರಿಯಾಶೀಲನನ್ನಾಗಿ ಮಾಡಬೇಕೆಂಬ ಮಾಧ್ಯಮ ಪಂಡಿತರ ವ್ಯಾಖ್ಯಾನಗಳೆಲ್ಲ ಗಾಳಿಗೆ ತೂರಲ್ಪಟ್ಟು ಅದು ಇಂದು ಸಾಮಾಜಿಕ ಹೊಣೆಗಾರಿಕೆಯಿಂದ ಬಹುದೂರವಾಗಿದೆ. ದುರಂತವೆಂದರೆ ವಿವಿಧ ಮಾಧ್ಯಮಗಳು ನಮ್ಮ ಬದುಕಿನ ಅನಿವಾರ್ಯ ಸಾಧನಗಳಾಗಿ ಬೆಳೆದಿವೆ. ಪಾಶ್ಚಾತ್ಯ ಸಂಸ್ಕೃತಿಯ ದಾಳಿಯಿಂದಾಗಿ ಮಾಧ್ಯಮಗಳ ಪರಿಣಾಮಗಳು ಇಂದು ಚರ್ಚೆಗೆ ಗ್ರಾಸವಾಗಿವೆ. ಈ ದುಷ್ಪರಿಣಾಮಗಳನ್ನು ವಿಶ್ಲೇಷಿಸಿದಾಗ ಅಪರಾಧಗಳ ಬೃಹತ್ ಸೃಷ್ಟಿಯೇ ಗೋಚರಿಸುತ್ತದೆ.

> ವ್ಯಕ್ತಿಯ ಮಾನಸಿಕ ಸ್ಥಿತಿಯನ್ನು ಚಿವುಟಿ ಆತನನ್ನು ಕ್ರಿಯಾಶೀಲನನ್ನಾಗಿ ಮಾಡುವ ಬದಲು ಮಾಧ್ಯಮ ಆತನನ್ನು ಅಪರಾಧದ ಜಗತ್ತಿನಲ್ಲಿ ಸೆಳೆಯುವ ಆಯಸ್ಕಾಂತದ ಪೆಟ್ಟಿಗೆಯಾಗುತ್ತಿರುವುದು ಈ ಶತಮಾನದ ದುರಂತ.

**ಯುದ್ಧರಹಿತ ಶಸ್ತ್ರಾಸ್ತ್ರ**

ರಶಿಯಾ ದೇಶದ ರಾಜಕೀಯ ಸಾಮಾಜಿಕ ಜೀವನದಲ್ಲಿ ಹಸ್ತಕ್ಷೇಪ ಮಾಡಿ ಅಲ್ಲಿ ಅಲ್ಲೋಲ ಕಲ್ಲೋಲ ಮಾಡಲು ಏನು ಮಾಡಬೇಕು ಎಂದು ಪಾಶ್ಚಾತ್ಯ ರಾಷ್ಟ್ರಗಳು ಯೋಚಿಸುತ್ತಿರುವಾಗ ಒಬ್ಬರು ಸಲಹೆ ನೀಡುತ್ತ 'ಅಲ್ಲಿ ನಮ್ಮದು ಕಳಿಸಿಬಿಡಿ' ಎಂದರಂತೆ. ಹಾಗೆಯೇ ಆಯಿತು. ರಶಿಯಾದಲ್ಲಿ ಆದ ಇತ್ತೀಚಿನ ರಾಜಕೀಯ ಬದಲಾವಣೆಗೆ ಪಾಶ್ಚಾತ್ಯರ ಕಿರುತೆರೆಯೇ ಮುಖ್ಯಕಾರಣ ಎಂದೂ ಹೇಳಲಾಗುತ್ತಿದೆ. ಅದು ಸಾಧ್ಯವೂ ಇರಬಹುದು. ಏಕೆಂದರೆ 'ಕಿರುತೆರೆ' ಒಂದು ಯುದ್ಧವಲ್ಲದ ಶಸ್ತ್ರಾಸ್ತ್ರ. ಮಾಧ್ಯಮಗಳ ವ್ಯಾಪ್ತಿ, ಸ್ವರೂಪ,

ಪರಿಣಾಮಗಳಲ್ಲಿ ಕಿರುತೆರೆಯದೇ ಸಿಂಹಪಾಲು. ಅದು ನಮ್ಮ ಕ್ರಿಯಾಶೀಲತೆಯನ್ನು ಚಿವುಟುವುದಕ್ಕಿಂತ ಅಪರಾಧ ಮನೋವೃತ್ತಿಯನ್ನೇ ಹೆಚ್ಚು ಬಿಂಬಿಸಿದೆ. ಅದು ಅಪರಾಧಗಳಿಗೆ ಒಂದು ಹೊಸ ರೂಪವನ್ನೇ ಕೊಟ್ಟಿದೆ. ಅಂತರರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ಕಿರುತೆರೆಯು ಹಿಂಸಾತ್ಮಕ, ಆಕ್ರಮಣಕಾರಿ ಕಾರ್ಯಕ್ರಮಗಳನ್ನು ಡಿಜಿಟಲ್ ಟಿ.ವಿ., ಕೇಬಲ್ ಟಿ.ವಿ., ಇಂಟರ್‌ನೆಟ್, ವೀಡಿಯೋ ಮುಂತಾದ ಸಾಧನಗಳಿಂದ ಪ್ರಸಾರ ಮಾಡುತ್ತಿರುವುದಲ್ಲದೆ ಅವು ಸುಲಭವಾಗಿ ದೊರೆಯುವಂತೆಯೂ ವ್ಯವಸ್ಥೆ ಮಾಡಿದೆ. ಈ ಸ್ಥಿತಿ ಕೇವಲ ಒಂದು ರಾಷ್ಟ್ರದಲ್ಲಿ ಇರದೇ ಇಡೀ ಪ್ರಪಂಚವನ್ನು ಆವರಿಸಿದೆ. ಕಿರುತೆರೆಗೆ ಬಲಾತ್ಕಾರ, ಆಕ್ರಮಣ, ಕೊಲೆ ಸುಲಿಗೆ, ಮಾನಸಿಕ ಆಘಾತ ಮುಂತಾದ ದೃಶ್ಯಗಳು ಒಂದು ರೀತಿಯ ನೀತಿಯೇ ಆಗಿವೆ. ಇಂತಹ ಘಟನೆಗಳು ಪ್ರಪಂಚದ ಯಾವುದೇ ಮೂಲೆಯಲ್ಲಿ ಆದರೂ ಕಿರುತೆರೆಯ ಮುಖಾಂತರ ನಾವು ವೀಕ್ಷಿಸಬಹುದು. ವೀಕ್ಷಕರಲ್ಲಿ ಮಕ್ಕಳು ಯುವಕರೇ ಹೆಚ್ಚು, ಅವರಿಗೆ ಹೀನ ಅಪರಾಧಗಳು ಹೆಚ್ಚು ಆಕರ್ಷಣೀಯವಾಗುತ್ತಿವೆ.

ಬಾಲಾಪರಾಧದಂತಹ ಸಾಮಾಜಿಕ ಸಮಸ್ಯೆಗೆ ಹಲವಾರು ಕಾರಣಗಳಿದ್ದರೂ ಅವುಗಳಲ್ಲಿ ಮುಖ್ಯವಾಗಿ ರುವುದು ದೃಶ್ಯಮಾಧ್ಯಮ. ಇಂತಹ ವಿಘಟನಕಾರಿ ಸಂಸ್ಕೃತಿಯಲ್ಲಿ ಬೆಳೆಯುತ್ತಿರುವ ನಮ್ಮ ಮಕ್ಕಳು ಯುವಕರು ಅಪರಾಧಿ ಮನೋವೃತ್ತಿಯನ್ನು ಬೆಳೆಯಿಸಿ ಕೊಳ್ಳುವುದನ್ನು ಸಮಾಜಶಾಸ್ತ್ರಜ್ಞರು, ವಿಜ್ಞಾನಿಗಳು, ಮನಃಶಾಸ್ತ್ರಜ್ಞರು, ಮಾಧ್ಯಮತಜ್ಞರು ಚಿಂತಿತರಾಗಿ ಸಾಕಷ್ಟು ಚರ್ಚೆ ನಡೆಸಿದ್ದಾರೆ. ಈವರೆಗೆ ಯಾವ ಪರಿಹಾರವನ್ನೂ ಕಂಡುಕೊಂಡಿಲ್ಲ, ಅದು ಸಾಧ್ಯವೂ ಆಗಲಾರದು. ಡಬ್ಲ್ಯು.ಈ.ಎಸ್. ಡೋಬೆಯಿಸ್ ಎಂಬ ಲೇಖಕರು ಹೇಳುವಂತೆ – ''ಯಾವುದೇ ಸಮಾಜದಲ್ಲಿ ಅಪರಾಧಿಗಳಿಗೆ ಶಿಕ್ಷೆ ನೀಡಬೇಕೆಂಬುದು ಮುಖ್ಯವಲ್ಲ; ಮಕ್ಕಳನ್ನು ಯುವಕರನ್ನು ಅಪರಾಧಗಳಿಂದ ಹೇಗೆ ದೂರವಿಡಬೇಕೆಂಬ ಚಿಂತನೆಯು ಮುಖ್ಯ.'' ಈ ಚಿಂತನೆ ಎಷ್ಟರಮಟ್ಟಿಗೆ ನಡೆದಿದೆ...? ಕಾರ್ಲ್ ಪಾಪರ್ ಎಂಬ ಬ್ರಿಟಿಷ್ ಸಮಾಜಶಾಸ್ತ್ರಜ್ಞರ ಈ ಮಾತನ್ನೂ ಗಮನಿಸಬಹುದು : ''ಕಿರುತೆರೆ ಪ್ರಜಾಪ್ರಭುತ್ವಕ್ಕೆ ಗಂಡಾಂತರಕಾರಿಯಾಗಿ ಬೆಳೆಯುತ್ತಿದೆ. ಇಂದು ಅದು ಒಂದು ಶಕ್ತಿಶಾಲಿ ವಿಘಟನಾ ಸಂಸ್ಥೆಯಾಗಿ ವೈಮನಸ್ಸು, ರಕ್ತಪಾತ ಮುಂತಾದವುಗಳ ಪ್ರದರ್ಶನದಿಂದಾಗಿ ನಾವು ಅವುಗಳನ್ನು ವಿರೋಧಿಸುವ ಶಕ್ತಿಯನ್ನೇ ಕಳೆದು ಕೊಂಡಿದ್ದೇವೆ. ನಮ್ಮ ವಿಚಾರಶಕ್ತಿಯನ್ನು ಅದು ಕುಂಠಿತ ಗೊಳಿಸಿದೆ. ಇದನ್ನು ತಡೆಗಟ್ಟಬೇಕಾದರೆ ಕಿರುತೆರೆಯನ್ನು ನಿಯಂತ್ರಿಸಲೇಬೇಕು...'' ಕಾರ್ಲ್ ಪಾಪರ್ ಅವರ ಈ ಎಚ್ಚರಿಕೆ ಈ ಕೂಡಲೇ ಯಾವ ಹಾನಿಯನ್ನುಂಟು ಮಾಡದಿದ್ದರೂ ಕ್ರಮೇಣ ಬರಲಿರುವ ವರ್ಷಗಳಲ್ಲಿ ಅದು ದೊಡ್ಡ ಸಮಸ್ಯೆಯಾಗುವುದು ಖಂಡಿತ.

**ಅಪರಾಧಗಳ ಬಯೋಸ್ಕೋಪ್**

ನಿರುದ್ಯೋಗ, ಮಾದಕದ್ರವ್ಯಗಳ ಸೇವನೆ, ಪಾಲಕರ ನಿಷ್ಕಾಳಜಿ, ನಮ್ಮ ಮೌಲ್ಯಗಳ ಶಿಥಿಲತೆ ಮುಂತಾದವುಗಳು ಅಪರಾಧಗಳ ಹೆಚ್ಚಳಕ್ಕೆ ಮುಖ್ಯ ಕಾರಣ. ಇವು ಕಿರುತೆರೆಯ ಧಾರಾಳವಾದ ಸರಕುಗಳೇ ಆಗಿವೆ. ಪ್ರಪಂಚದ ಯಾವುದೇ ಭಾಗದಲ್ಲಿ ನಡೆದ ನೈಜ ಅಪರಾಧಗಳನ್ನು ಮಕ್ಕಳು ಯುವಕರು ನೋಡಿದಾಗ ಅವರು ತಮ್ಮದೇ ಆದ ಕಾಲ್ಪನಿಕ ಸ್ಥಿತಿಯಲ್ಲಿ ದ್ವಿಗುಣಗೊಳಿಸುವ ಪ್ರಯತ್ನ ಮಾಡುತ್ತಾರೆ. ಕಿರುತೆರೆ ಈ ಅಪರಾಧಗಳನ್ನು ವೈಭವೀಕರಿಸುವ ಕಾಯಕದಲ್ಲಿ ತೊಡಗಿದೆ. ಮೂರ್ಖರ ಪೆಟ್ಟಿಗೆ ಎಂದೇ ಕರೆಯಲ್ಪಡುತ್ತಿದ್ದ ಕಿರುತೆರೆ ಇಂದು ನಾನಾ ಬಗೆಯ ಅಪರಾಧಗಳ ಬಯೋಸ್ಕೋಪಾಗಿ ಅಫೀಮಿನಂತೆ ಮಕ್ಕಳನ್ನು, ಯುವಕರನ್ನು ಆಕ್ರಮಿಸಿದೆ. ಒಂದು ಕಾಲದಲ್ಲಿ ಅಪರಾಧಗಳೆಂದು ಕರೆಯಲ್ಪಡುತ್ತಿದ್ದ ಕುಕೃತ್ಯಗಳು ಮಾಯವಾಗಿ ಹಗರಣಗಳಂತ ಹೆಸರಿನಲ್ಲಿ ಪ್ರಚಾರ ಪಡೆಯುತ್ತಿವೆ. ತೀರಾ ಅಪರಿಚಿತವಾಗಿದ್ದ ಬಾಲಾಪರಾಧಗಳು ಇಂದು ನಿತ್ಯದ ಸುದ್ದಿಯಾಗಿವೆ. ಕಿರುತೆರೆ ನಮ್ಮ ಆಹಾರ ನಿದ್ರೆಗಳಷ್ಟೇ ಪ್ರಾಮುಖ್ಯತೆ ಯನ್ನು ಪಡೆದಿದ್ದು ಅದನ್ನು ನಾವು ಉದ್ದೇಶಪೂರ್ವಕ ವಾಗಿ ಬಳಸದೆ ಅಭ್ಯಾಸವಾಗಿ ಉಪಯೋಗಿಸು ತ್ತಿದ್ದೇವೆ. ನಮ್ಮ ಮನೆಗಳಲ್ಲಿ ಬೆಳಕು ಇರದಿದ್ದರೂ ಕಿರು ತೆರೆಯ ಬೆಳಕಿನ ಸಂತೆ ಮಾತ್ರ ಥಳಥಳಿಸುತ್ತಿರುತ್ತದೆ.

ಚಲನಚಿತ್ರ, ವೀಡಿಯೋ, ಇಂಟರ್‌ನೆಟ್, ಕಾಮಿಕ್ ಬುಕ್ಸ್, ಕಾರ್ಟೂನ್ ಮುಂತಾದವುಗಳ ಪ್ರಭಾವ ದಿನೇದಿನೇ ಬೆಳೆಯುತ್ತಿದೆ. ಅನೈತಿಕತೆಗೆ, ಹೀನ ಅಪರಾಧಗಳಿಗೆ ಪ್ರೋತ್ಸಾಹ ನೀಡುವ ಈ ದೃಶ್ಯಮಾಧ್ಯಮಗಳು ಮಕ್ಕಳು ಯುವಕರಲ್ಲಿ ಅಪರಾಧಗಳ ಆಸಕ್ತ ಬಯಕೆಗಳನ್ನು ಕೆರಳಿಸುತ್ತಿವೆ. ಅಷ್ಟೇ ಅಲ್ಲ, ಇಂತಹ ಅಪರಾಧಗಳನ್ನು ಹೇಗೆ ಮಾಡಬೇಕೆಂಬುದನ್ನೂ ಕಲಿಸಿಕೊಟ್ಟು, ಅಂತಹ ಕುಕೃತ್ಯಗಳನ್ನು ಮಾಡುವ ತಂತ್ರವನ್ನೂ ತಿಳಿಸಿ ಕೊಡುತ್ತವೆ. ಇಂತಹವುಗಳಿಂದ ಮಕ್ಕಳು ಯುವಕರು ಪ್ರಚೋದಿತರಾಗಿ ಅಂತಹ ಸಾಹಸಗಳಿಗೆ ಇಳಿದ ಅನೇಕ ಉದಾಹರಣೆಗಳು ನಮ್ಮ ಮುಂದೆ ಇವೆ. ನಮ್ಮ ದೇಶದ ಚಿತ್ರ ಇದಕ್ಕಿಂತ ಭಿನ್ನವಾಗಿಲ್ಲ.

> **ಹಿಂಸಾ ಪರಮೋ ಧರ್ಮಃ ...?**
>
> **ಅಹಿಂಸೆಯ ಸಂಸ್ಕೃತಿಯಲ್ಲಿ ಬೆಳೆದ ನಮ್ಮ ದೇಶದಲ್ಲಿ ಕೊಲೆ–ಸುಲಿಗೆ, ಅತ್ಯಾಚಾರ, ದರೋಡೆ, ದೌರ್ಜನ್ಯಗಳು ದೈನಂದಿನ ಸುದ್ದಿ ಗಳಾಗಿವೆ. ಇತ್ತೀಚಿನ ಸಮೀಕ್ಷೆಯೊಂದರಲ್ಲಿ ಅಪರಾಧಗಳ ನೋಟ ನೋಡಿದಾಗ ಭಯವಾಗುತ್ತದೆ. ಈ ಸಮೀಕ್ಷೆಯ ಪ್ರಕಾರ ನಮ್ಮ ದೇಶದಲ್ಲಿ ಪ್ರತಿ ಆರು ನಿಮಿಷಕ್ಕೊಮ್ಮೆ ಮಹಿಳೆಯರ ಮೇಲೆ ದೌರ್ಜನ್ಯ, ಒಂದು ದರೋಡೆ, ಪ್ರತಿ ೭ ನಿಮಿಷಕ್ಕೊಮ್ಮೆ ಕೊಲೆ, ಪ್ರತಿ ೫ ನಿಮಿಷಕ್ಕೊಮ್ಮೆ ದೊಂಬಿ, ಲೂಟಿ, ಜೊತೆಗೆ ಪ್ರತಿನಿತ್ಯ ೧೭ ವರದಕ್ಷಿಣಾ ಸಾವುಗಳು ನಡೆಯುತ್ತಿವೆ. ದೇಶದ ಜನ ಜೀವನ ಅಸುರಕ್ಷತೆಯಲ್ಲಿ ಬಾಳುತ್ತಿದೆ. ಅಹಿಂಸಾ ಪರಮೋ ಧರ್ಮಃ ಎಂದು ನಂಬಿರುವ ಈ ದೇಶದಲ್ಲಿ ಅಪರಾಧಗಳ ಹೆಚ್ಚಳದಿಂದಾಗಿ ಹಿಂಸಾ ಪರಮೋ ಧರ್ಮಃ ಎನ್ನುವ ಕಾಲ ಬಂದೀತೆ....?**

**ವ್ಯಕ್ತಿಯ ಮೇಲಿನ ನಿಯಂತ್ರಣ**

ಕೈಗಾರಿಕಾ ಕ್ರಾಂತಿಯಿಂದಾಗಿ ಭಾರತೀಯ ಜೀವನಶೈಲಿಯಲ್ಲಿ ಅನೇಕ ಬದಲಾವಣೆಗಳು ಆಗಿವೆ. ನಗರೀಕರಣ, ಕೈಗಾರಿಕೀಕರಣದಿಂದಾಗಿ ಕುಟುಂಬ ಜೀವನವೂ ಪರಿವರ್ತನೆಗೊಂಡಿದೆ. ಇಂದು ಕುಟುಂಬ ಹಾಗೂ ಸಮಾಜ ವ್ಯಕ್ತಿಯ ಮೇಲಿನ ನಿಯಂತ್ರಣವನ್ನು ಕಳೆದುಕೊಂಡಿವೆ. ಕುಟುಂಬದಲ್ಲಿ ಬೆಳೆಯುವ ಮಗುವಿನ ಮೇಲಿನ ನಿಯಂತ್ರಣ ಕುಸಿದು ಅದು ಸ್ವೇಚ್ಛಾಚಾರದತ್ತ ಸಾಗಲು ಯಥೇಚ್ಛವಾಗಿ ಸುಲಭವಾಗಿ ದೊರೆಯುವ ವಿನಾಶಕಾರಿ ವಿಘಟನಕಾರಿ ದೃಶ್ಯಮಾಧ್ಯಮಗಳೇ ಕಾರಣ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಕಿರುತೆರೆಯ ಈ ಸ್ವೇಚ್ಛಾಚಾರಿ ವರ್ತನೆಯನ್ನು ಕಾನೂನಿನ ಕ್ರಮದಿಂದಾಗಲಿ ಅಥವಾ ಯಾವುದೇ ಸರಕಾರಿ ಆಜ್ಞೆಯಿಂದಾಗಲಿ ಕಡಿವಾಣ ಹಾಕಲು ಸಾಧ್ಯವಿಲ್ಲ. ನಮ್ಮ ಮಕ್ಕಳು ಯುವಕರು ಈ ವ್ಯವಸ್ಥೆಯಿಂದ ದೂರ ಇರಲು ಚಿಂತಿಸಬೇಕಾದುದು ಅತ್ಯವಶ್ಯ. ಅದು ಸಾಧ್ಯವೂ ಆಗಬಹುದು.

ರಚನಾತ್ಮಕ ದೃಷ್ಟಿಯನ್ನು ಮೂಡಿಸುವ ವಿಧಾಯಕ ಸ್ವರೂಪದ ಮನರಂಜನೆಯನ್ನು ಶಿಕ್ಷಣದ ಭಾಗವನ್ನಾಗಿ ಮಾಡುವುದು ಅವಶ್ಯ. ಇದರಿಂದ ಮಕ್ಕಳ, ಯುವಕರ ಮಾನಸಿಕ ಸಮತೋಲನವನ್ನು ಕಾಯ್ದುಕೊಳ್ಳುವುದು ಸಾಧ್ಯ.

ಸಮೂಹ ಮಾಧ್ಯಮಗಳು ವಿನಾಶಕಾರಿ ವಿಘಟನಕಾರಿ ವೃತ್ತಿಯಲ್ಲಿ ತೊಡಗಿದಾಗ ಅವುಗಳನ್ನು ಖಂಡಿಸುವುದಾಗಲಿ, ದಂಡಿಸುವುದಾಗಲಿ ಹಿರಿಯರು, ಸಮಾಜಶಾಸ್ತ್ರಿಗಳು, ಸರಕಾರ, ಶಿಕ್ಷಣ ಸಂಸ್ಥೆಗಳು ಚಳವಳಿ ನಡೆಸಿ ಇವು ಅಪರಾಧಗಳಷ್ಟೇ ಕೆಟ್ಟವು ಎಂಬುದನ್ನು ಮಕ್ಕಳಿಗೆ ಯುವಕರಿಗೆ ಮನದಟ್ಟು ಮಾಡಿಕೊಡಬೇಕು. ಯುವತಿಯರಿಗಾಗಿಯೇ ವಿಶೇಷ ಸಿಗರೇಟಿನ ಜಾಹೀರಾತು ಬಂದಾಗ ಇಡೀ ಸ್ತ್ರೀ ಸಮುದಾಯ ಅದನ್ನು ವಿರೋಧಿಸಿ ಅದರ ಉತ್ಪಾದನೆಯನ್ನೇ ನಿಲ್ಲಿಸಿದ ಉದಾಹರಣೆ ಇದೆ.

ಹೀನ ಅಪರಾಧಗಳ ವಿಷಯಗಳನ್ನು ಆರಿಸಿ ಕಾರ್ಯಕ್ರಮಗಳನ್ನು ನಿರ್ಮಿಸುವ ನಿರ್ಮಾಪಕರನ್ನು ಹಾಗೂ ಅವುಗಳನ್ನು ಪ್ರಾಯೋಜಿಸುವ ಜಾಹೀರಾತು ಸಂಸ್ಥೆಗಳನ್ನು ಬಹಿಷ್ಕರಿಸಬೇಕು.

ನೈತಿಕತೆಯನ್ನು ಹಾಳುಮಾಡುವ ಸಂಸ್ಥೆಗಳಾದ ವಿಡಿಯೋ ಪಾರ್ಲರ್, ನಗ್ನ ಜಾಹೀರಾತುಗಳು,

## ಗಂಡಾಂತರಕಾರಿ ಇಂಟರ್‌ನೆಟ್

ಮಕ್ಕಳು ಹಾಗೂ ಯುವಕರಲ್ಲಿ ಅಪರಾಧ ಮನೋಭಾವ ಬರಲು ಕಿರುತೆರೆಗಿಂತ ಇಂಟರ್‌ನೆಟ್ ಎನ್ನುವ ರಾಕ್ಷಸನೇ ಹೆಚ್ಚು ಕಾರಣವೆಂಬುದು ಈಗ ಅನೇಕ ಸಮೀಕ್ಷೆಗಳಿಂದ ಗೊತ್ತಾಗಿದೆ.

ಮಾಧ್ಯಮಗಳು ದೇಶದ ಜನಜೀವನದ ಮೇಲೆ ಅದರಲ್ಲೂ ಮಕ್ಕಳ ಹಾಗೂ ಯುವಕರ ಮೇಲೆ ಪ್ರಭಾವ ಬೀರಲು ಹಲವು ವರ್ಷಗಳೇ ಬೇಕಾದವು. ರೇಡಿಯೋ ಪ್ರಭಾವ ಬೀರಲು ೩೮ವರ್ಷ ಬೇಕಾಯಿತು. ಪರ್ಸನಲ್ ಕಂಪ್ಯೂಟರ್‌ಗೆ ೧೬ ವರ್ಷ, ಕಿರುತೆರೆಗೆ ೧೩ವರ್ಷ ಬೇಕಾದರೆ ಇಂಟರ್‌ನೆಟ್ ಮಕ್ಕಳಿಗೆ ಯುವಕರಿಗೆ ಪ್ರಿಯವಾಗಲು ಕೇವಲ ನಾಲ್ಕೇ ವರ್ಷ ಬೇಕಾದವು.

ಇಂಟರ್‌ನೆಟ್ ಮುಖಾಂತರ ನಮ್ಮ ಮಕ್ಕಳಿಗೆ ಯುವಕರಿಗೆ ಸುಲಭವಾಗಿ ಏನುಬೇಕಾದರೂ ನೋಡಲು ಸಾಧ್ಯವಾಗಿದೆ. ಇವುಗಳಲ್ಲಿ ಹಿಂಸೆ, ಲೈಂಗಿಕ ಅತ್ಯಾಚಾರ, ಕೊಲೆ-ಸುಲಿಗೆಗಳ ದೃಶ್ಯಗಳೇ ಹೆಚ್ಚು. ಇಂಟರ್‌ನೆಟ್ ಅನ್ನುವ ಈ ರಕ್ಕಸ ಎಷ್ಟು ಬೆಳೆದಿದ್ದಾನೆಂದರೆ ಆತನನ್ನು ನಿಯಂತ್ರಿಸುವುದು ಅಸಾಧ್ಯವಾಗುತ್ತಿದೆ.

ವೇಶ್ಯಾವಾಟಿಕೆಗಳು, ಕೀಳುಕಾಮನೆಗಳನ್ನು ಪ್ರಚೋದಿಸುವ ಕಾರ್ಯಕ್ರಮಗಳು ಇವೆಲ್ಲವುಗಳನ್ನು ಆಯಾ ಸಮಾಜದಲ್ಲಿ ಕಂಡುಬಂದಾಗಲೆಲ್ಲ ನಾಗರಿಕರು ಪ್ರತಿಭಟಿಸಬೇಕು.

ಮಕ್ಕಳಿಗಾಗಿ, ಯುವಕರಿಗಾಗಿ ಕಾರ್ಯಕ್ರಮಗಳನ್ನು ರಾತ್ರಿಪ್ರಸಾರದಲ್ಲಿ ಆದಷ್ಟು ಬೇಗನೇ ಮುಗಿಸಬೇಕು. ಹಿಂಸಾತ್ಮಕ ಕಾರ್ಯಕ್ರಮಗಳನ್ನು ರಾತ್ರಿ ಪ್ರದರ್ಶಿಸಲೇಬಾರದು.

ಕಿರುತೆರೆಯ ಕಾರ್ಯಕ್ರಮಗಳನ್ನು ನಿರ್ಮಿಸುವ ನಿರ್ಮಾಪಕರಿಗೆ, ವಾಹಿನಿಯ ಚಾಲಕರಿಗೆ ಅವರ ಹೊಣೆಗಾರಿಕೆಯ ಅರಿವನ್ನು ಮಾಡಿಕೊಡಬೇಕು.

ವೀಡಿಯೋ ಪಾರ್ಲರ್, ವೀಡಿಯೋ ಅಂಗಡಿಗಳಲ್ಲಿ ಮಕ್ಕಳ ಹಾಗೂ ಯುವಕರ ಕೈಗೆ ಅಲ್ಲಿಯ ಸಾಮಗ್ರಿಗಳು ಸುಲಭವಾಗಿ ದೊರೆಯದಂತೆ ವ್ಯವಸ್ಥೆ ಆಗಬೇಕು, ಅವುಗಳನ್ನು ಪಡೆಯುವವರ ಮೇಲೆ ವಯಸ್ಸಿನ ನಿರ್ಬಂಧವನ್ನು ಹೇರಬೇಕು.

ಬಾಲಾಪರಾಧಗಳನ್ನು ಬಿಂಬಿಸುವ ಯಾವುದೇ ಕಾರ್ಯಕ್ರಮ ಪ್ರಸಾರವಾಗದಂತೆ ಕಟ್ಟುನಿಟ್ಟಿನ ಕ್ರಮ ಕೈಗೊಳ್ಳಬೇಕು. ದುಷ್ಟಶಕ್ತಿಗಳನ್ನು ವೈಭವೀಕರಿಸದೆ ಅವುಗಳನ್ನು ದಂಡಿಸುವ ಕಥೆಗಳುಳ್ಳ ಕಾರ್ಯಕ್ರಮಗಳು ಹೆಚ್ಚಾಗಬೇಕು.

ಹಿಂಸೆಯನ್ನು ಪಸರಿಸುವ ಅತ್ಯಾಧುನಿಕ ಶಸ್ತ್ರಗಳ ಮಾಹಿತಿಯಾಗಲಿ ಅಥವಾ ಅವುಗಳ ಉಪಯೋಗವಾಗಲಿ ನಿಯಮಿತ ರೀತಿಯಲ್ಲಿ ಪ್ರದರ್ಶಿಸಬೇಕು. ಓಂಗೆಯಿಂದಲೇ ದುಷ್ಟಶಕ್ತಿಯನ್ನು ನಿಗ್ರಹಿಸುವ ವ್ಯಕ್ತಿಗಳನ್ನು ಅತಿವಿರಳವಾಗಿ ಪ್ರಯೋಗಿಸಬೇಕು.

ಹೊಡೆದಾಡುವ, ಕೊಲೆ ಸುಲಿಗೆಗಳಲ್ಲಿ ತೊಡಗಿರುವ, ದೃಶ್ಯಗಳು ದೀರ್ಘವಾಗಿರಬಾರದು. ಬೆಚ್ಚಿ ಬೀಳುವ, ಆಘಾತಕಾರಿ ಸಂಗೀತದ ಸೆಳಕುಗಳಿಂದ ಹಿಂಸೆಯ ದೃಶ್ಯಗಳನ್ನು ವೈಭವೀಕರಿಸಬಾರದು.

ಮಹಿಳೆಯರ ಮೇಲಿನ ದೌರ್ಜನ್ಯ ಬಲಾತ್ಕಾರ ಅತ್ಯಾಚಾರಗಳನ್ನು ವೈಭವೀಕರಿಸುವ ಹಾಗೆ ಚಿತ್ರಿಸಿರುವ ದೃಶ್ಯಗಳನ್ನು ಮೊಟಕುಗೊಳಿಸಬೇಕು.

ವೀಕ್ಷಕರ ಮನಸ್ಸನ್ನು ಘಾಸಿಗೊಳಿಸುವ ಯಾವುದೇ ದೃಶ್ಯವನ್ನು, ಸನ್ನಿವೇಶವನ್ನು ತೋರಿಸದೆ ಅಪರೋಕ್ಷವಾಗಿ ಅದು ತಿಳಿಯುವಂತಹ ಜಾಣ್ಮೆಯನ್ನು ನಿರ್ದೇಶಕರು ಪ್ರದರ್ಶಿಸಬೇಕು.

ಕಿರುತೆರೆ ಜಗತ್ತಿನ ಕಿಟಕಿಯಾಗಿ ಅಲ್ಲಿ ನಡೆಯುವುದೆಲ್ಲವೂ ಹಿಂಸೆ ಎಂಬುದನ್ನು ಪ್ರದರ್ಶಿಸಬಾರದು, ವೀಕ್ಷಕರು ಕಾರ್ಯಕ್ರಮಗಳನ್ನು ನೋಡಿ ಅವರು ಕ್ರಿಯಾಶೀಲರಾಗಬೇಕು. ಏಣಿ ಹಿಡಿದವನೂ ಕಳ್ಳನಷ್ಟೇ ಕೆಟ್ಟವನು ಎಂಬಂತೆ ಹೆಚ್ಚುತ್ತಿರುವ ಅಪರಾಧಗಳಿಗೆ ಮಾಧ್ಯಮಗಳು ಏಣಿ ಆಗಬಾರದು.

ಜಿ. ಎಂ. ಶಿರಹಟ್ಟಿ
'ಸಲೀಮಾ', ೨೦೪೧, ಬಿ. ಸೆಕ್ಟರ್, ಎಸ್.ಬಿ.ಆಯ್. ಹತ್ತಿರ
ಯಲಹಂಕ ಉಪನಗರ, ಬೆಂಗಳೂರು - ೫೬೦ ೦೬೪

# ಪುಸ್ತಕ ಪರಿಚಯ

# ಸಿರಿವಂತಿಕೆ : ಸರ್ವನಾಶಕ ಅಂಟುರೋಗ

**ಡಾ|| ಬದರಿನಾಥ ರಾವ್**

**ಭಾ**ರತದ ನಗರವಾಸಿಗಳ ಕಲ್ಪನೆಯಲ್ಲಿ 'ಅಮೆರಿಕನ್ ಕನಸು' ಎಂಬ ಮಿಥ್ಯೆಯೊಂದು ಬೇರೂರಿಬಿಟ್ಟಿದೆ. ಅತಿಹೆಚ್ಚಿನ ಪ್ರಮಾಣದ ಬಳಕೆ, ಒತ್ತಡದೊಂದಿಗೆ ಸಂಗ್ರಹಣೆ, ತಕ್ಷಣದ ಸಂತೃಪ್ತಿ, ಇವು ಈ ಕಲ್ಪನೆಯ ಮುಖ್ಯಾಂಶಗಳು. ಇವನ್ನು ಮಾಹಿತಿ ತಂತ್ರಜ್ಞಾನ ಹಾಗೂ ಜೈವಿಕ ತಂತ್ರಜ್ಞಾನ ಆಧರಿಸಿದ ಆರ್ಥಿಕತೆಯ ಮೂಲಕ ಸಾಧಿಸಬೇಕು, ಕೈತುಂಬ ಸಂಬಳ, ಮನರಂಜನೆಪೂರಿತ ಜೀವನಕ್ರಮ – ಇವು ಈ ಭೋಗಜೀವನದ ನಿರ್ವಾಣ ಸ್ಥಿತಿಯ ಆದರ್ಶಸೂತ್ರಗಳು. ಇಂತಹ ಭ್ರಾಂತಿಗಳೇ ಬಾಳಿನ ತಿರುಳು ಎಂಬುದನ್ನು ಒಪ್ಪಬಹುದಾದರೂ ಎಷ್ಟೇ ಬೆಲೆ ತೆತ್ತಾದರೂ ವಸ್ತು ಸಂಗ್ರಹಣೆ ಮಾಡುವುದೇ ಜೀವನದ ಸರ್ವಸ್ವ ಎಂಬ ತಪ್ಪು ಕಲ್ಪನೆಯನ್ನು ಮನಸ್ಸಿನಿಂದ ಕಿತ್ತೊಗೆಯುವುದೂ ಅತ್ಯವಶ್ಯವಲ್ಲವೇ ?

ನಾವು ಯಾವ ಅಮೆರಿಕವನ್ನು ಅವಿಮರ್ಶಾತ್ಮಕವಾಗಿ ವೈಭವೀಕರಿಸುತ್ತೇವೆಯೋ ಅಲ್ಲಿಂದಲೇ ಬರುವ ತಲ್ಲಣಗೊಳಿಸುವಂಥ ಅನೇಕ ಸಾಕ್ಷ್ಯಾಧಾರಗಳು ಇದರ ಅಗತ್ಯತೆಯನ್ನು ಒತ್ತಿ ಹೇಳುತ್ತವೆ. ಪಾಶ್ಚಿಮಾತ್ಯ ಮಾಧ್ಯಮಗಳು ಮಾಡುತ್ತಿರುವ ಪ್ರಚಾರವು ಅಮೆರಿಕವನ್ನು ಎಷ್ಟೇ ಆದರ್ಶಯುತ ಆಧುನಿಕ ರಾಷ್ಟ್ರವನ್ನಾಗಿ ಬಿಂಬಿಸಿದರೂ, ಅಲ್ಲಿಂದಲೇ ಪ್ರಕಟವಾಗಿರುವ ಜಾನ್ ದ ಗ್ರಾಫ್ ಮತ್ತೆ ಕೆಲವು ಲೇಖಕರು ಕೂಡಿ ರಚಿಸಿರುವ 'ಸಿರಿವಂತಿಕೆ : ಸರ್ವನಾಶಕ ಅಂಟುರೋಗ' ಎಂಬ ಗ್ರಂಥ ಅಮೆರಿಕನ್ ಕನಸಿನ ಮಿಥ್ಯೆಯನ್ನು ಛಿದ್ರಛಿದ್ರಗೊಳಿಸುತ್ತದೆ. 'ಸ್ವಾತಂತ್ರ್ಯ', 'ಅಪಾರ ಅವಕಾಶಗಳ ಆಕರ', 'ಮುಕ್ತ ವ್ಯಾಪಾರ', 'ಪ್ರಜಾಪ್ರಭುತ್ವ' ಇತ್ಯಾದಿ ಘೋಷಣೆಗಳೊಂದಿಗೆ ಸಾಮಾನ್ಯ






ಜಾನ್ ದ ಗ್ರಾಫ್; ಡೇವಿಡ್ ವಾನ್ ಹಾಗೂ ಥಾಮಸ್ ಎಚ್. ನೇಲರ್
ಬೆರೆಟ್ ಕೋಲರ್ ಪ್ರಕಾಶನ ಸಂಸ್ಥೆ, ಸ್ಯಾನ್ ಫ್ರಾನ್ಸಿಸ್ಕೋ
ಕ್ಯಾಲಿಫೋರ್ನಿಯ, ೨೦೦೩, ಪು. xvi + ೨೬೮

ಜನರ ಮನಸೂರೆಗೊಳ್ಳುವ ಬಂಡವಾಳವಾದವು ಹೇಗೆ ಅದೇ ಅಮೆರಿಕದಲ್ಲಿ ಮಿಲಿಯಾಂತರ ಜನರನ್ನು ನಿರ್ಗತಿಗೊಳಿಸಿದೆ ಎಂಬುದನ್ನು ಎತ್ತಿ ತೋರಿಸುವುದರ ಜೊತೆಗೇ ಈ ಗ್ರಂಥವು ಅದೇ ಜನರು ಹೇಗೆ 'ಸಿರಿವಂತಿಕೆ'ಯ ಅಂಟುರೋಗಕ್ಕೆ ತುತ್ತಾಗಿದ್ದಾರೆಂಬುದನ್ನು ವಿವರಿಸಿ ತಿಳಿಸುತ್ತದೆ.

ಈ ಲೇಖಕರು ತಿಳಿಸಿರುವಂತೆ, ಸಿರಿವಂತಿಕೆ ಎಂಬುದು ಒಂದು ರೀತಿಯ ನೋವಿನ ಸಾಮಾಜಿಕ ಅಂಟುರೋಗ. ಅತಿಯಾದ ಹೊರೆ, ಸಾಲ, ತಳಮಳ ಹಾಗೂ ವ್ಯರ್ಥಗಳು ಅತಿ ಸಂಗ್ರಹಣೆಯ ಹುಚ್ಚಿನ ಫಲಗಳು (ಪು. ೨). ಅವಶ್ಯವೋ ಅಲ್ಲವೋ ಹೆಚ್ಚು ಹೆಚ್ಚು ವಸ್ತುಗಳನ್ನು ಸಂಗ್ರಹಿಸಿಕೊಳ್ಳಬೇಕು ಎಂಬ ಅಮೆರಿಕನ್ನರ ಅತೃಪ್ತ ಒತ್ತಾಸೆಯು ಅಂಟುರೋಗದ ಪ್ರಮಾಣಕ್ಕೇರಿ ಅನೇಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಸ್ವಸ್ಥತೆಗಳನ್ನು ಉಂಟುಮಾಡಿ ಅಮೆರಿಕನ್ ಸಮಾಜದ ಮೂಲ ಮೌಲ್ಯಗಳನ್ನೇ ಏರುಪೇರು ಮಾಡಿದೆ.

೧೯೯೦ರ ದಶಕದ ಕೊನೆಯಲ್ಲಿ ಅಮೆರಿಕದ PBS ದೂರದರ್ಶನ ಬಿತ್ತರಿಸಿದ 'ಸಿರಿವಂತಿಕೆ' ಹಾಗೂ 'ಸಿರಿವಂತಿಕೆಯಿಂದ ವಿಮೋಚನೆ' ಎಂಬ ಕಾರ್ಯಕ್ರಮಗಳನ್ನಾಧರಿಸಿ ಗ್ರಾಫ್‌ರವರು, ಅರ್ಥಶಾಸ್ತ್ರಜ್ಞ ಥಾಮಸ್ ನೇಲರ್‌ರವರು, ಪರಿಸರ ವಿಜ್ಞಾನಿ ಡೇವಿಡ್ ವಾನ್‌ರವರೂ ಮೂರು ವರ್ಷ ಕಾಲ ಸಂಶೋಧನೆ ನಡೆಸಿ, ಪೂರಕ ಮಾಹಿತಿಗಳನ್ನು ಸಂಗ್ರಹಿಸಿ, ಈ ಗ್ರಂಥ ರಚಿಸಿದ್ದಾರೆ. ಲಂಗುಲಗಾಮಿಲ್ಲದ ಬಳಕೆಗಾರ ಹೊಟ್ಟೆಬಾಕತನ ಉಂಟುಮಾಡಿರುವ ವಿನಾಶದ ಬಗೆಗೆ ಅಂಕಿಅಂಶಗಳೊಂದಿಗೆ ಮನವೊಪ್ಪುವ ವಿವರಗಳನ್ನೊದಗಿಸಿ ಈ ಗ್ರಂಥ ಅದರ ಕಾರಣ ಹಾಗೂ ಪರಿಣಾಮಗಳ ವ್ಯವಸ್ಥಿತ ವಿಶ್ಲೇಷಣೆಯನ್ನೂ ನೀಡಿದೆ.

ಜನರ ನಡುವೆ ಸತತವಾಗಿ ವಸ್ತುಗಳ ಬೇಡಿಕೆಯನ್ನು ಉಂಟುಮಾಡುವುದು ಬಂಡವಾಳ ವಾದದ ಏಳಿಗೆಯ ವಿಧಾನಗಳಲ್ಲೊಂದು. ಕೆಲವು ಬೇಡಿಕೆಗಳು ನ್ಯಾಯಬದ್ಧವಾಗಿರಬಹುದು. ಆದರೆ ಉಳಿದವು ಅಲ್ಲ. '''ಈಗಲೇ ಕೊಳ್ಳಬೇಕು' ಎಂಬ ನಮ್ಮ ಸಂಸ್ಕೃತಿಯ ಅವಿಚ್ಛಿನ್ನ ಕೇಳಿಕೆಗಳನ್ನು ನಾವು ತಳ್ಳಿಹಾಕಲು ಪ್ರಾರಂಭಿಸದಿದ್ದಲ್ಲಿ, ಮುಂದೆ ನಾವು ಕಲ್ಪಿಸಿಕೊಳ್ಳಲೂ ಸಾಧ್ಯವಿರದಂಥ ರೀತಿಗಳಲ್ಲಿ ದಂಡ ತೆರಬೇಕಾಗುತ್ತದೆ'' (ಪು. ೩) ಎಂಬುದು ಈ ಗ್ರಂಥದ ಪ್ರಧಾನ ಪ್ರತಿಪಾದನೆಯಾಗಿದೆ. ಕೊಳ್ಳುವುದನ್ನು ನಿಲ್ಲಿಸಿ ಎಂದೇನೂ ಈ ಗ್ರಂಥ ಹೇಳುವುದಿಲ್ಲ. ಆದರೆ ''ಕೊಳ್ಳುವಾಗ ಜಾಗರೂಕತೆಯಿಂದ ಇರಬೇಕು, ಲಭಿಸುವ ನಿಜವಾದ ಲಾಭಗಳ ಕಡೆಗೆ ಹಾಗೂ ನಿಮ್ಮ ಕೊಳ್ಳಿಕೆಯ ಖರ್ಚುಗಳ ಕಡೆಗೆ ಪೂರ್ಣ ಗಮನ ಇರಬೇಕು. ವಸ್ತುಗಳೇ ಜೀವನದ ಶ್ರೇಷ್ಠ ಅಂಶಗಳೇನೂ ಅಲ್ಲ ಎಂಬುದನ್ನು ಯಾವತ್ತೂ ನೆನಪಿನಲ್ಲಿಟ್ಟಿರಬೇಕು.'' (ಪು. ೮)

ಗ್ರಂಥದ ಈ ಪ್ರತಿಪಾದನೆ ತುಂಬ ಸರಳ ಎಂದು ತೋರಬಹುದಾದರೂ ಮೂರು ಕಾರಣಗಳಿಗಾಗಿ ಅದನ್ನು ಅಲ್ಲಗಳೆಯಲಾಗದು. ಮೊದಲನೆಯದು, ಮಿತಿಮೀರಿದ ಖರ್ಚು, ಮಿತಿಮೀರಿದ ಬಳಕೆಯು, ಸಾಮಾಜಿಕ ವಿಘಟನೆ, ಅತಿಹೆಚ್ಚಿನ ಅಹಮಿಕೆ, ಸಮಯ ಕ್ಷಾಮ, ಬೇರೂರಿದ ಚಿತ್ತಕ್ಷೋಭೆಗಳಂಥ ಸಾಮಾಜಿಕ ಸಾಮರಸ್ಯಕ್ಕೆ ಗಂಭೀರ ಹಾನಿ ಉಂಟುಮಾಡುವಂಥ ಸಮಸ್ಯೆಗಳನ್ನು ಉಂಟುಮಾಡುತ್ತವೆ, ಎಂಬುದು. ಎರಡನೆಯದು, ಅಮೆರಿಕದಲ್ಲಿನ ಮಿತಿಮೀರಿದ ಬಳಕೆ ಜಗತ್ತಿನ ಇತರ ಭಾಗಗಳ ಮೇಲೆ ಗುರುತರವಾದ ದುಷ್ಪರಿಣಾಮ ಬೀರುತ್ತಿದೆ ಎಂಬುದು. ಉದಾಹರಣೆಗೆ, ಅಮೆರಿಕನ್ನರು ಜಗತ್ತಿನ ಜನಸಂಖ್ಯೆಯ ಶೇ. ೪.೭ರಷ್ಟಿದ್ದರೂ ಶೇ. ೨೫ರಷ್ಟು ಜಾಗತಿಕ ತಾಪ ಏರಿಕೆ ಹಾಗೂ ಹಸಿರುಮನೆ ಅನಿಲ ಉತ್ಸರ್ಜನೆಗೆ ಅವರೇ ಕಾರಣರಾಗಿದ್ದಾರೆ (ಪು. ೪). ಅಷ್ಟೇ ಅಲ್ಲ, ಅವರು ಮಾಡುತ್ತಿರುವ ಖರ್ಚು ಜಗತ್ತಿನ ಉಳಿದ ಭಾಗಗಳ ಅಗತ್ಯಗಳನ್ನು ಎಷ್ಟು ಮಾತ್ರವೂ ಲೆಕ್ಕಕ್ಕೆ ತಂದುಕೊಳ್ಳದಿರುವುದು ಪ್ರಪಂಚದ ಪ್ರಶಸ್ತ ಸಂಪನ್ಮೂಲಗಳ ಕುಗ್ಗಿಕೆಗೆ ಕಾರಣವಾಗಿದೆ. ''ವಿಶ್ವಸಂಸ್ಥೆಯ ಪರಿಸರ ಕಾರ್ಯಕ್ರಮ ತಿಳಿಸುವಂತೆ, ಜಗತ್ತಿನ ೨೧೦ ದೇಶಗಳಲ್ಲಿ ೯೦ ದೇಶಗಳು ತಮ್ಮ ಅಗತ್ಯಗಳಿಗೆಲ್ಲಕ್ಕೂ ಮಾಡುತ್ತಿರುವ ಖರ್ಚಿಗಿಂತ ಹೆಚ್ಚಿನ ಪ್ರಮಾಣದ ಖರ್ಚನ್ನು ಅಮೆರಿಕನ್ನರು ವ್ಯರ್ಥ ಪದಾರ್ಥಗಳನ್ನು ತುಂಬುವ ಚೀಲಗಳಿಗಾಗಿಯೇ ಮಾಡುತ್ತಿದ್ದಾರೆ!'' (ಪು. ೮೫) ಮೂರನೆಯದು, ಅಮೆರಿಕದಲ್ಲಿನ ಬಳಕೆ ವಿಧಾನ ನಂಬಲಾಗದಷ್ಟು ಮಾಲಿನ್ಯ ಉಂಟುಮಾಡುತ್ತಿದೆ ಎಂಬುದು. ಪ್ರತಿ ಬಾರಿ ಅಮೆರಿಕನ್ನರು ಕೆಂಪು ಮಾಂಸ ತಿಂದಾಗಲೂ, ಜೆಟ್‌ಸ್ಕೀಯಿಂಗ್ ಹೋದಾಗಲೂ, ವಿಹಾರ ನೌಕೆಯಲ್ಲಿ ಯಾನ ಹೊರಟಾಗಲೂ ಅಥವಾ ಕ್ರೀಡಾ ಬಳಕೆ ವಾಹನಚಾಲನೆ ಮಾಡಿದಾಗಲೂ ಭೂಪರಿಸರ ವ್ಯವಸ್ಥೆಗೆ ತುಂಬಲಾಗದಂಥ ಹಾನಿ ಉಂಟುಮಾಡುತ್ತಿದ್ದಾರೆ. ವಿಕಾಸ ಹಾಗೂ ಪ್ರಗತಿ ಎಂದರೆ ಅಮೆರಿಕ ಎಂದು ಭಾವಿಸುವಂಥ ಜನ ಅಮೆರಿಕನ್ನರ ಬಳಕೆಯ ಈ ಉನ್ನತಮಟ್ಟ ಉಳಿಸಲು ನಾವೆಲ್ಲ ಎಷ್ಟು ಭಾರಿ ಪ್ರಮಾಣದ ದಂಡ ತೆರುತ್ತಿದ್ದೇವೆ, ಎಂಬುದನ್ನು ಗಮನಕ್ಕೇ ತಂದುಕೊಂಡಿಲ್ಲ.

ಅಮೆರಿಕನ್ನರು ವರ್ಷಕ್ಕೆ ೬ ಟ್ರಿಲಿಯನ್ (ಮಿಲಿಯನ್ ಮಿಲಿಯನ್) ಡಾಲರುಗಳಷ್ಟು ಹಣವನ್ನು ಭೋಗವಸ್ತುಗಳಿಗಾಗಿ ಖರ್ಚು ಮಾಡುತ್ತಿದ್ದಾರೆ. ಇದು ಪ್ರತಿ ವ್ಯಕ್ತಿಯ ಲೆಕ್ಕದಲ್ಲಿ ೨೧,೦೦೦ ಡಾಲರ್‌ಗೂ ಹೆಚ್ಚಾಗಿದೆ. ಅಮೆರಿಕನ್ ಆರ್ಥಿಕತೆಯ ಈಚೆಗಿನ ಬೆಳವಣಿಗೆಯ ಒಟ್ಟು ಪ್ರಮಾಣದಲ್ಲಿ ಇದು ಮೂರನೇ ಎರಡು ಪಾಲಿನಷ್ಟಾಗಿದೆ, ಎಂದು ಗ್ರಾಫ್ ಮತ್ತವರ ಸಹ-ಕರ್ತೃಗಳು ಎತ್ತಿ ತೋರಿಸುತ್ತಾರೆ. ಅಮೆರಿಕನ್ನರು ಉನ್ನತ ಶಿಕ್ಷಣಕ್ಕಾಗಿ ೬೫ ಬಿಲಿಯನ್ ಡಾಲರ್ ಖರ್ಚು ಮಾಡುತ್ತಿದ್ದರೆ, ಪಾದರಕ್ಷೆ,

ಆಭರಣ ಹಾಗೂ ಗಡಿಯಾರಗಳನ್ನು ಕೊಳ್ಳಲೇ ೮೦ ಬಿಲಿಯನ್ ಡಾಲರ್ ಖರ್ಚುಮಾಡುತ್ತಿದ್ದಾರೆ! (ಪು. ೧೩)

ಅಂಗಡಿಗಳಿಗೆ ಹೋಗಿ ಸಾಮಾನು ಕೊಳ್ಳುವುದು ಅಮೆರಿಕನ್ನರ ಅತ್ಯಂತ ಆದ್ಯ ಚಟುವಟಿಕೆ. ಪ್ರತಿವಾರವೂ ಮಾಲ್ (ವ್ಯಾಪಾರ ಪ್ರಕಾರ)ಗಳಿಗೆ ಹೋಗುವುದು ನೂರಕ್ಕೆ ೭೦ ಜನ ಅಮೆರಿಕನ್ನರ ಅಚ್ಚುಮೆಚ್ಚಿನ ಹವ್ಯಾಸ (ಪು. ೧೩). ಅಮೆರಿಕನ್ನರು ಈಗ ವಾರಕ್ಕೆ ೬ ಗಂಟೆ ಅಂಗಡಿಗಳಿಗೆ ವ್ಯಾಪಾರಕ್ಕೆ ಹೋಗುವುದಾದರೆ ತಮ್ಮ ಮಕ್ಕಳೊಂದಿಗೆ ಆಟವಾಡುವುದು ಕೇವಲ ೪೦ ನಿಮಿಷ! (ಪು. ೧೪) ಈಚೆಗಿನ ಮತಸಂಗ್ರಹಣೆಯೊಂದರ ಪ್ರಕಾರ, ಅಂಗಡಿಗಳಿಗೆ ಕೊಳ್ಳಲು ಹೋಗುವುದೇ ಹದಿಹರೆಯದ ಅಮೆರಿಕನ್ ಹೆಣ್ಣುಮಕ್ಕಳಲ್ಲಿ ನೂರಕ್ಕೆ ೯೩ ಮಂದಿಯ ಮೆಚ್ಚಿನ ಚಟುವಟಿಕೆ! (ಪು. ೧೫).

ಸ್ವಾರಸ್ಯಕರವೆಂದರೆ, ಕೊಳ್ಳಲು ಹೋಗುವವರಲ್ಲಿ ಕಾಲುಭಾಗವಷ್ಟೆ ಯಾವುದೇ ವಿಶಿಷ್ಟ ಸಾಮಾನು ಕೊಳ್ಳುವುದನ್ನು ತಮ್ಮ ಮನಸ್ಸಿನಲ್ಲಿ ಇಟ್ಟುಕೊಂಡಿರುತ್ತಾರೆ. ಉಳಿದವರು ಸುಮ್ಮನೆ ಏನೆಂದರೆ ಅದನ್ನು ಕೊಳ್ಳಲು ಹೋಗುತ್ತಾರೆ (ಪು. ೧೫). ಹಠಾತ್ ಕೊಳ್ಳುವಿಕೆ, ಮನರಂಜನೆಗಾಗಿ ಕೊಳ್ಳುವಿಕೆ, ಅಂತರ್ಜಾಲದ ಮೂಲಕ ಕೊಳ್ಳುವಿಕೆ, ಚಿಕಿತ್ಸಾ ರೂಪವಾಗಿ ಕೊಳ್ಳುವಿಕೆ... ಇವು ಬಹುಪಾಲು ಅಮೆರಿಕನ್ನರ ಸಾಂಸ್ಕೃತಿಕ ಮೌಲ್ಯದ ತಿರುಳು. ಹಾಗಾಗಿ ಈಗ ಅಮೆರಿಕದಲ್ಲಿ ಪ್ರೌಢಶಾಲೆಗಳಿಗಿಂತ ಎರಡುಪಟ್ಟು ಹೆಚ್ಚು ವ್ಯಾಪಾರ ಕೇಂದ್ರಗಳಿರುವುದರಲ್ಲಿ ಆಶ್ಚರ್ಯವೇನಿಲ್ಲ (ಪು. ೧೪).

ಮತ್ತೆ ಈ ಕೊಳ್ಳುವಿಕೆಯನ್ನು ಸ್ವಂತ ಹಣದಲ್ಲಲ್ಲ, ಆದರೆ ಸಾಲದ ಹಣದಲ್ಲಿ ಮಾಡುತ್ತಾರೆಂಬುದೂ ಅಷ್ಟೇ ಮಹತ್ವವಾದುದು! ಹೆಚ್ಚಿನ ಅಮೆರಿಕನ್ನರಲ್ಲಿ ಈಗ ಐದು ಅಥವಾ ಹೆಚ್ಚುಕ್ರೆಡಿಟ್ ಕಾರ್ಡು (ಸಾಲದ ಚೀಟಿ)ಗಳಿವೆ. ಇಡೀ ದೇಶದಲ್ಲಿ ಒಟ್ಟು ಒಂದು ಬಿಲಿಯನ್‌ಗೂ ಹೆಚ್ಚು ಕ್ರೆಡಿಟ್ ಕಾರ್ಡುಗಳು ಚಲಾವಣೆಯಲ್ಲಿವೆ (ಪು. ೧೯). ೨೦೦೦ನೇ ವರ್ಷದಲ್ಲಿ ಸರಾಸರಿ ಅಮೆರಿಕನ್ ಕುಟುಂಬವೊಂದು ೭,೫೬೪ ಡಾಲರುಗಳಷ್ಟು ಹಣದ ವ್ಯವಹಾರವನ್ನು ಕ್ರೆಡಿಟ್ ಕಾರ್ಡುಗಳ ಮೂಲಕ ಮಾಡಿತು (ಪು. ೧೯). ೧೯೯೦ರ ದಶಕದಲ್ಲಿ ಕ್ರೆಡಿಟ್ ಕಾರ್ಡ್‌ಗಳ ಮೂಲಕ ಮಾಡಿದ ಸಾಲ ಮುಪ್ಪಟ್ಟು ಹೆಚ್ಚಿ ವೈಯಕ್ತಿಕ ದಿವಾಳಿತನ ಅತಿಯಾಗಿ ಏರಿತು (ಪು. ೧೯). ೧೯೮೦ರಲ್ಲಿ ೩,೧೩,೦೦೦ ಜನ ದಿವಾಳಿ ಎದ್ದರು. ಈಗ ಪ್ರತಿ ವರ್ಷವೂ ಒಂದು ಮಿಲಿಯನ್‌ಗೂ ಹೆಚ್ಚು ಜನ ದಿವಾಳಿ ಏಳುತ್ತಿದ್ದಾರೆ. ಇದು ಪ್ರತಿವರ್ಷವೂ ಕಾಲೇಜಿನಿಂದ ಪದವೀಧರರಾಗಿ ಹೊರಬರುತ್ತಿರುವ ಜನರ ಸಂಖ್ಯೆಗಿಂತ ಹೆಚ್ಚು! (ಪು. ೨೦)

ದಿವಾಳಿ ಏಳುವುದನ್ನು ಹೇಗೋ ತಪ್ಪಿಸಿಕೊಳ್ಳುತ್ತಿರುವ ಜನರ ಪರಿಸ್ಥಿತಿಯೂ ಏನೂ ಚೆನ್ನಾಗಿಲ್ಲ. ಇನ್ನೂ ಆರು ಮಿಲಿಯನ್ ಅಮೆರಿಕನ್ನರು ದಿವಾಳಿ ಏಳುವ ಅಂಚಿನಲ್ಲಿದ್ದಾರೆ (ಪು. ೨೦). ಶೇ. ೬೦ರಷ್ಟು ಕುಟುಂಬಗಳ ಉಳಿತಾಯ ಎಷ್ಟು ಕಡಿಮೆ ಎಂದರೆ ಅವರು ಅಕಸ್ಮಾತ್ ಕೆಲಸ ಕಳೆದುಕೊಂಡರೆ ತಮ್ಮ ಉಳಿತಾಯದಿಂದ ಒಂದು ತಿಂಗಳೂ ಸಂಸಾರ ನಡೆಸಲಾರರು (ಪು. ೨೨). ಸ್ವಲ್ಪ ಶ್ರೀಮಂತರೆನಿಸಿಕೊಂಡವರೂ ಕೇವಲ ಮೂರೂವರೆ ತಿಂಗಳಷ್ಟೇ ಏಗಬಲ್ಲರು (ಪು. ೨೨). ಹಾಗಾಗಿ ಅಮೆರಿಕದಲ್ಲಿ ಬಂಡವಾಳವಾದಿ ಬೆಳವಣಿಗೆಯ ಏಕೈಕ ಸಾಧನೆಯೆಂದರೆ ಮಿತವ್ಯಯ ಕಲ್ಪನೆಯನ್ನು ನಿರ್ನಾಮಗೊಳಿಸಿರುವುದು. ಪ್ರಸ್ತುತ ಅಮೆರಿಕದಲ್ಲಿ ರಾಷ್ಟ್ರೀಯ ಉಳಿತಾಯದ ದರ ಶೂನ್ಯವಾಗಿದೆ. ಕೆಲವು ತಿಂಗಳುಗಳಲ್ಲಿ ಇದು ಈ ಮಟ್ಟಕ್ಕೂ ಕೆಳಗಿದೆ. (ಪು. ೨೧). ಇದಕ್ಕೆ ವೈದೃಶ್ಯವಾಗಿ ಚೀಣ, ಭಾರತ ಹಾಗೂ ಪಾಕಿಸ್ತಾನಗಳಲ್ಲಿ ಕಾರ್ಮಿಕರು ತಮ್ಮ ಆದಾಯದಲ್ಲಿ ಕಾಲು ಭಾಗದಷ್ಟು ಉಳಿತಾಯ ಮಾಡುತ್ತಿದ್ದಾರೆ (ಪು. ೨೨).

ಹೋಗಲಿ, ಇಷ್ಟೆಲ್ಲ ಖರ್ಚು ಮಾಡಿಯೂ ಅಮೆರಿಕನ್ನರು ಪಡೆಯುತ್ತಿರುವುದೇನು? ವಸ್ತುಗಳು, ಇನ್ನಷ್ಟು ವಸ್ತುಗಳು, ಮತ್ತಷ್ಟು ವಸ್ತುಗಳು. ಗ್ರಾಫ್ ಮತ್ತವರ ಸಹಕರ್ತೃಗಳ ಪ್ರಕಾರ, ಹೆಚ್ಚಿನ ಅಮೆರಿಕನ್ನರು 'ಮಿತಿಮೀರಿದ ಹೊರೆ'ಯಿಂದ ಸರಳುತ್ತಿದ್ದಾರೆ, ಅತ್ಯಪಾರ ವಸ್ತುಗಳನ್ನು ನಿರ್ವಹಿಸುವ ಸಮಸ್ಯೆ ಎದುರಿಸುತ್ತಿದ್ದಾರೆ (ಪು. ೩೯). ಇಂದು ಸಾಮಾನ್ಯ ಸೂಪರ್ ಮಾರ್ಕೆಟ್ ಸಹ ೩೦,೦೦೦ ಮಾದರಿ ವಸ್ತುಗಳನ್ನು ಬಿಕರಿಗಿರಿಸಿದೆ – ೨೦ ವರ್ಷಗಳ ಹಿಂದೆ ಹೊಂದಿದ್ದುದಕ್ಕಿಂತ ಎರಡೂವರೆ ಪಟ್ಟು ಹೆಚ್ಚು (ಪು. ೪೧). ಬಹುಮಟ್ಟಿಗೆ ನಿರುಪಯುಕ್ತವಾದ ಈ ಅಪಾರ ಪ್ರಮಾಣದ ವಸ್ತುಗಳನ್ನು ಇರಿಸಿಕೊಳ್ಳಲು ಮನೆಗಳು ೧೯೫೦ರಲ್ಲಿದ್ದುದಕ್ಕಿಂತ ಎರಡುಪಟ್ಟು ಹೆಚ್ಚು ದೊಡ್ಡದಾಗಿವೆ – ಕುಟುಂಬದ ಗಾತ್ರ ಕುಗ್ಗಿದ್ದರೂ! ಸಾಮಾನ್ಯವಾಗಿ ಅಮೆರಿಕನ್ ಮನೆಯೊಂದು ೨,೩೦೦ ಚ.ಅ. ವಿಶಾಲವಾಗಿದ್ದು ಮೂರು ಗ್ಯಾರೇಜುಗಳಿಂದ ಕೂಡಿರುತ್ತದೆ (ಪು. ೨೪). ಈಗ ಇದೂ ಸಾಲದಾಗುತ್ತಿದೆ. ಅಮೆರಿಕದಲ್ಲಿಂದು ೩೦,೦೦೦ ದಾಸ್ತಾನು ಮಳಿಗೆಗಳಿದ್ದು ಒಂದು ಬಿಲಿಯನ್ ಚ.ಅ.ಗೂ ಹೆಚ್ಚು ದಾಸ್ತಾನು ಸ್ಥಳ ಪಡೆದಿವೆ (ಪು. ೩೨). ಈ ದಾಸ್ತಾನು-ಸ್ಥಳ ನಿರ್ಮಾಣ ಕೈಗಾರಿಕೆಯು ೧೯೬೦ರಿಂದೀಚೆಗೆ ೪೦ಪಟ್ಟು ಬೃಹತ್ತಾಗಿ ಬೆಳೆದು, ವಾರ್ಷಿಕ ೧೨ ಬಿಲಿಯನ್ ಡಾಲರುಗಳ ವಹಿವಾಟಿನೊಂದಿಗೆ ಸಂಗೀತ ಕೈಗಾರಿಕೆಗಿಂತ ಹಿರಿದಾಗಿದೆ (ಪು. ೩೨).

ಆ ದೇಶದಲ್ಲಿ ಭೋಗವಸ್ತುಗಳೆನಿಸಿಕೊಂಡಿದ್ದವೀಗ ಅತ್ಯಗತ್ಯ ವಸ್ತುಗಳಾಗಿಬಿಟ್ಟಿವೆ. ಕಾರುಗಳನ್ನೇ ಉದಾಹರಣೆಯನ್ನಾಗಿ ತೆಗೆದುಕೊಳ್ಳಿ. ಅಮೆರಿಕದಲ್ಲೀಗ ನೋಂದಾಯಿತ ಚಾಲಕರಿಗಿಂತ ಹೆಚ್ಚು ಸಂಖ್ಯೆ (೨೦೩ ಮಿಲಿಯ) ಕಾರುಗಳಿವೆ (ಪು. ೩೩). ಸಂಚಾರ ದಟ್ಟಣೆಯಿಂದಾಗಿ ಕಾಲವ್ಯಯ ಹಾಗೂ ವರ್ಷಕ್ಕೆ ೬೦ ಬಿಲಿಯನ್ ಡಾಲರುಗಳಷ್ಟು ಇಂಧನ ವ್ಯಯವಾಗುತ್ತಿದ್ದರೂ ಅಮೆರಿಕನ್ನರಲ್ಲಿ ಕಾರಿನ ವ್ಯಾಮೋಹ ತಗ್ಗಿಲ್ಲ. ಇನ್ನೂ ಕೆಡುಕೆಂದರೆ ಪೂರ್ಣಪ್ರಮಾಣದ ಸಾರ್ವಜನಿಕ ಸಾರಿಗೆ ವ್ಯವಸ್ಥೆ ನಿರ್ಮಿಸುವ ವಿಚಾರವಂತೂ ಇಲ್ಲವೇ ಇಲ್ಲ.

**ನಾವು ಯಾವ ಅಮೆರಿಕವನ್ನು ಅವಿಮರ್ಶಾತ್ಮಕವಾಗಿ ವೈಭವೀಕರಿಸುತ್ತೇವೆಯೋ ಅಲ್ಲಿಂದಲೇ ಬರುವ ತಲ್ಲಣಗೊಳಿಸುವಂಥ ಅನೇಕ ಸಾಕ್ಷ್ಯಾಧಾರಗಳು ಇದರ ಕೊಳ್ಳುಬಾಕತನ ಅನರ್ಥಕವೆಂದು ಒತ್ತಿ ಹೇಳುತ್ತವೆ. ಪಾಶ್ಚಿಮಾತ್ಯ ಮಾಧ್ಯಮಗಳು ಮಾಡುತ್ತಿರುವ ಪ್ರಚಾರವು ಅಮೆರಿಕವನ್ನು ಎಷ್ಟೇ ಆದರ್ಶಯುತ ಆಧುನಿಕ ರಾಷ್ಟ್ರವನ್ನಾಗಿ ಬಿಂಬಿಸಿದರೂ, ಅಲ್ಲಿಂದಲೇ ಪ್ರಕಟವಾಗಿರುವ ಜಾನ್ ದ ಗ್ರಾಫ್ ಮತ್ತೆ ಕೆಲವು ಲೇಖಕರು ಕೂಡಿ ರಚಿಸಿರುವ "ಸಿರಿವಂತಿಕೆ: ಸರ್ವನಾಶಕ ಅಂಟುರೋಗ" ಎಂಬ ಗ್ರಂಥ ಅಮೆರಿಕನ್ ಕನಸಿನ ಮಿಥ್ಯೆಯನ್ನು ಛಿದ್ರಛಿದ್ರಗೊಳಿಸುತ್ತದೆ. "ಸ್ವಾತಂತ್ರ್ಯ", "ಅಪಾರ ಅವಕಾಶಗಳ ಆಕರ", "ಮುಕ್ತ ವ್ಯಾಪಾರ", "ಪ್ರಜಾಪ್ರಭುತ್ವ" ಇತ್ಯಾದಿ ಘೋಷಣೆಗಳೊಂದಿಗೆ ಸಾಮಾನ್ಯ ಜನರ ಮನಸೂರೆಗೊಳ್ಳುವ ಬಂಡವಾಳವಾದವು ಹೇಗೆ ಅದೇ ಅಮೆರಿಕದಲ್ಲಿ ಮಿಲಿಯಾಂತರ ಜನರನ್ನು ನಿರ್ಗತಿಗೊಳಿಸಿದೆ ಎಂಬುದನ್ನು ಎತ್ತಿ ತೋರಿಸುವುದರ ಜೊತೆಗೇ ಈ ಗ್ರಂಥವು ಅದೇ ಜನರು ಹೇಗೆ 'ಸಿರಿವಂತಿಕೆ'ಯ ಅಂಟುರೋಗಕ್ಕೆ ತುತ್ತಾಗಿದ್ದಾರೆಂಬುದನ್ನು ವಿವರಿಸಿ ತಿಳಿಸುತ್ತದೆ.**

ಈ ಬಳಕೆಗಾರ ಹೊಟ್ಟೆಬಾಕತನದ ಹುಚ್ಚಿನಿಂದ ಮಕ್ಕಳೂ ಮುಕ್ತರಾಗಿಲ್ಲ. ಮಕ್ಕಳ ಮನಸ್ಸನ್ನು ಸೆರೆ ಹಿಡಿದರೆ ತಮಗೆ ದೀರ್ಘಕಾಲದ ಬಳಕೆಗಾರ ಸಿಕ್ಕಿದಂತೆ ಎಂಬುದನ್ನು ವ್ಯಾಪಾರಿಗಳೂ, ಮಾರುಕಟ್ಟೆಗಾರರೂ ಜಾಹೀರಾತುದಾರರೂ ಮನಗಂಡಿದ್ದಾರೆ. ಈ ಗ್ರಂಥ ತಿಳಿಸುವಂತೆ, ೧೨ಕ್ಕೂ ಕಡಿಮೆ ವಯಸ್ಸಿನ ಮಕ್ಕಳು ವಸ್ತುಗಳನ್ನು ಕೊಳ್ಳುವ ಪ್ರಮಾಣ ವರ್ಷಕ್ಕೆ ಶೇ. ೨೦ರಷ್ಟು ಹೆಚ್ಚುತ್ತ ಹೋಗುತ್ತಿದೆ ಮತ್ತು ಮುಂದಿನ ಒಂದು ದಶಕದಲ್ಲಿ ವರ್ಷಕ್ಕೆ ೧ ಟ್ರಿಲಿಯನ್ ಡಾಲರುಗಳ ಪ್ರಮಾಣ ತಲುಪುವ ನಿರೀಕ್ಷೆ ಇದೆ (ಪು. ೫೨). ಮಕ್ಕಳನ್ನು ಉದ್ದೇಶಿಸಿದ ಜಾಹೀರಾತು ಪ್ರಮಾಣ ವರ್ಷಕ್ಕೆ ೧೦೦ ಮಿಲಿಯ ಡಾಲರುಗಳಿಂದ ೧.೫ ಬಿಲಿಯನ್ ಡಾಲರುಗಳಿಗೆ ಏರಿದೆ. ಅಮೆರಿಕನ್ ಮಕ್ಕಳು ಪ್ರತಿದಿನ ೨೦೦ ಟಿವಿ ವ್ಯಾಪಾರಿ ಜಾಹೀರಾತುಗಳನ್ನು ವೀಕ್ಷಿಸುತ್ತಾರೆ. ೧೨ ವರ್ಷದ ಬಾಲಕನೊಬ್ಬ ತಾಯಿತಂದೆಯರೊಂದಿಗೆ ವಾರಕ್ಕೆ ೯೦ ನಿಮಿಷ ಮಾತುಕತೆಗಳಲ್ಲಿ ತೊಡಗಿದರೆ ೪೮ ಗಂಟೆ ಟಿವಿ ಜಾಹೀರಾತು ನೋಡುವುದರಲ್ಲಿ ಕಳೆಯುತ್ತಾನೆ! ಈ ಪ್ರವೃತ್ತಿ ಎಂತಹ ವಿಷಾದದಮಟ್ಟ ಮುಟ್ಟಿದೆಯೆಂದರೆ "ಶೇ. ೯೦ರಷ್ಟು ಅಮೆರಿಕನ್ ವಯಸ್ಕರು ಮಕ್ಕಳ ಈ ಗ್ರಾಹಕ ಪೈತ್ಯದಿಂದ ಪೇಚಿಗೊಳಗಾಗಿದ್ದಾರೆ" (ಪು. ೫೨).

ಅಮೆರಿಕನ್ನರು ಹೀಗೆ ಎಷ್ಟೇ ವಸ್ತುಸಂಗ್ರಹ ಪಡೆದಿದ್ದರೂ ನಿಜಜೀವನದಲ್ಲಿ ಸುಖಸಂತೋಷಗಳಿಂದ ವಂಚಿತರಾಗಿರುವುದೊಂದು ದೊಡ್ಡ ವಿಪರ್ಯಾಸ. ಈ ಗ್ರಂಥಕರ್ತೃಗಳು ವಿವರಿಸುವಂತೆ, ದ್ವಿತೀಯ ಜಾಗತಿಕ ಯುದ್ಧಾನಂತರ ಅಮೆರಿಕದಲ್ಲಿ

ಉತ್ಪಾದಕತೆ ಇಮ್ಮಡಿಗೊಂಡಿರುವಂತೆ ಬಳಕೆಯೂ ಇಮ್ಮಡಿಗೊಂಡಿದೆಯೆಂಬುದು ನಿಜ. ಆದರೆ ಈ ಸಮೃದ್ಧತೆಯೊಂದಿಗೆ ಮಾನಸಿಕ ಒತ್ತಡವೂ ಹೆಚ್ಚಿದೆ ಎಂಬುದೂ ಅಷ್ಟೇ ನಿಜ. ಈ ಮಾನಸಿಕ ಒತ್ತಡವು ಉನ್ನತ ಜೀವನಮಟ್ಟ ಸಾಧನೆ ಎಂಬ 'ಉದಾತ್ತ' ಬಯಕೆಯ ಸೋಗಿನೊಂದಿಗೆ ಬರುತ್ತದೆ. ಹಾರ್ವರ್ಡ್ ಅರ್ಥಶಾಸ್ತ್ರಜ್ಞ ಜೂಲಿಯೆಟ್ ಸ್ಕೋರ್ ತಿಳಿಸುವಂತೆ, ಅಮೆರಿಕನ್ ಪೂರ್ಣ ಪ್ರಮಾಣದ ಕಾರ್ಮಿಕನೊಬ್ಬ ೧೯೬೯ರಲ್ಲಿ ಎಷ್ಟು ಕೆಲಸ ಮಾಡುತ್ತಿದ್ದನೋ ಅದಕ್ಕಿಂತ ೧೬೦ ಗಂಟೆ.... ಒಂದು ತಿಂಗಳು... ಹೆಚ್ಚು ಕೆಲಸ ಈಗ ಮಾಡುತ್ತಿದ್ದಾನೆ (ಪು. ೪೨). ಮತ್ತೊಂದು ಅಧ್ಯಯನದ ಪ್ರಕಾರ, ಅಮೆರಿಕನ್ ದಂಪತಿಗಳೀಗ ದಿನದಲ್ಲಿ ೧೨ ನಿಮಿಷಗಳಷ್ಟೇ ಪರಸ್ಪರ ಸಂಭಾಷಣೆಯಲ್ಲಿ ತೊಡಗಲು ಸಮಯ ಕಂಡುಕೊಳ್ಳುತ್ತಾರೆ (ಪು. ೪೫). ಹಾಗಾಗಿ ಸಮೃದ್ಧತೆಯು ಮಾನಸಿಕ ಸುಖಶಾಂತಿಗೆ ದಾರಿ ಮಾಡಿಕೊಡುತ್ತದೆ ಎಂಬ ಕಲ್ಪನೆ ಮಣ್ಣು ಪಾಲಾಗಿದೆ. ಆರ್ಥಿಕ ಬೆಳವಣಿಗೆ ಅನಿವಾರ್ಯವಾಗಿಯೇ ಸಮಯಾಭಾವಕ್ಕೆ ಎಡೆಮಾಡಿಕೊಡುತ್ತದೆ.

ಅಮೆರಿಕನ್ನರಲ್ಲಿ ಸಮಯಾಭಾವವಿದೆ, ಏಕೆಂದರೆ, ಅವರು ಹೆಚ್ಚು ಕೆಲಸ ಮಾಡುತ್ತಾರೆ. ಅವರು ಹೆಚ್ಚು ಕೆಲಸ ಮಾಡುತ್ತಾರೆ, ಏಕೆಂದರೆ, ಅವರಿಗೆ ಹೆಚ್ಚು ಹೆಚ್ಚು ಬೇಕು. ಈ ಗ್ರಂಥಕರ್ತೃಗಳು ತಿಳಿಸುವಂತೆ, ''ಒಂದು ಸಂಸ್ಕಾರವಾಗಿ... ನಾವು ಸಮಯಕ್ಕೂ ಹೆಚ್ಚಾಗಿ ಹಣವನ್ನು ಆಯ್ಕೆ ಮಾಡಿಕೊಂಡಿದ್ದೇವೆ'' (ಪು. ೪೮). ಈ ಸಂಸ್ಕಾರ ಸಮಯಾಭಾವಕ್ಕೆ ದಾರಿ ಮಾಡಿಕೊಟ್ಟಿದೆ. ಇದು ಒಂದು ರೀತಿಯ ಅನಾಥ ಭಾವನೆ ಸೃಷ್ಟಿಸಿದೆ. ''ಜನ ಒಂದೇ ಮನೆಯಲ್ಲಿ ವಾಸಿಸುತ್ತಿದ್ದರೂ ಅವರ ನಡುವೆ ಪರಸ್ಪರ ಸಂಬಂಧವೇ ಇಲ್ಲ, ಒಡನಾಟವೇ ಇಲ್ಲ'' (ಪು. ೪೮).

ಈ ಬಳಕೆಗಾರ ಹೊಟ್ಟೆಬಾಕ ಸಂಸ್ಕೃತಿಯಿಂದ ಅತ್ಯಂತ ಹೆಚ್ಚಿನ ಹೊಡೆತಕ್ಕೊಳಗಾಗಿರುವುದೆಂದರೆ ಮಾನವ ಸಂಬಂಧಗಳು. ''ವಸ್ತುಗಳ ವಿಷಯದಲ್ಲಿ ಬೆಳೆದ 'ಬಳಸಿ ಬಿಸಾಡುವ ಮನೋಭಾವ' ಈಗ ಮಾನವಸಂಬಂಧಗಳಿಗೂ ವರ್ಗಾಯಿತವಾಗಿದೆ'' (ಪು. ೪೮). ಇದರಿಂದ ಜೀವನದಲ್ಲಿ ಅಹಂಭಾವ, ಸ್ವಾರ್ಥಸಾಧಕತೆ ಹೆಚ್ಚಿದೆ. 'ಕಮ್ಯೂನಿಸ್ಟ್ ಪ್ರಣಾಳಿಕೆ' ತಿಳಿಸುವಂತೆ 'ಸ್ವಾರ್ಥಪರತೆಯ ಲೆಕ್ಕಾಚಾರದ ಶೀತಲ ನೀರಿನಲ್ಲಿ' ಉನ್ನತ ಧ್ಯೇಯಗಳು ತಿರಸ್ಕೃತವಾಗುತ್ತವೆ. ಅಮೆರಿಕದಲ್ಲೀಗ ವಿವಾಹ ವಿಚ್ಛೇದ ಜಗತ್ತಿನಲ್ಲೇ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಾಗುತ್ತಿದೆ. ಕುಟುಂಬ ಸಲಹೆಗಾರರ ಪ್ರಕಾರ ''ಶೇ. ೯೦ರಷ್ಟು ವಿವಾಹ ವಿಚ್ಛೇದ ಪ್ರಸಂಗಗಳಲ್ಲಿ ಹಣ ಕುರಿತ ವಾಗ್ವಾದಗಳೇ ಒತ್ತಡಕಾರಿ ಅಂಶಗಳಾಗಿವೆ'' (ಪು. ೪೫).

ಹೊಟ್ಟೆಬಾಕ ಸಂಸ್ಕೃತಿ ಸೃಜಿಸುವ ಮತ್ತೊಂದು ವೈಕಲ್ಯವೆಂದರೆ ಸ್ವಾರ್ಥಪರತೆಯ ಅಂಟುಜಾಡ್ಯ (ಪು. ೨೦೨). ಹೆಚ್ಚು ಹೆಚ್ಚು ವಸ್ತು ಸಂಗ್ರಹಣೆಯ ವಿಕಲ್ಪಕ್ಕೊಳಗಾದವರಿಗೆ ಇತರರ ಬಗೆಗೆ ಚಿಂತಿಸಲು ಪುರುಸೊತ್ತು ತಾಳ್ಮೆ ಎಲ್ಲಿರುತ್ತದೆ? ಹಾಗಾಗಿಯೇ ಹೆಚ್ಚಿನ ಅಮೆರಿಕನ್ನರಿಗೆ ತಮ್ಮ ಸಮಾಜ ಒಳಗಾಗಿರುವ ಕುತ್ತು ಸಂಕಟಗಳ ಪರಿವೆಯೇ ಇಲ್ಲ. ಉದಾಹರಣೆಗೆ, 'ಯಾವುದೇ ಒಂದು ರಾತ್ರಿ ಕೊನೆಯಪಕ್ಷ ೭,೫೦,೦೦೦ ಅಮೆರಿಕನ್ನರು ಆಸರೆರಹಿತರಾಗಿರುತ್ತಾರೆ, ಒಂದು ವರ್ಷದ ಅವಧಿಯಲ್ಲಿ ಸುಮಾರು ಎರಡು ಮಿಲಿಯನ್ ಅಮೆರಿಕನ್ನರು ನಿರ್ವಸತಿಯ ಅನುಭವಕ್ಕೆ ತುತ್ತಾಗಿರುತ್ತಾರೆ' (ಪು. ೭೯) ಎಂಬುದನ್ನು ಎಷ್ಟು ಮಂದಿ ಅಮೆರಿಕನ್ನರು ತಿಳಿದಿರುತ್ತಾರೆ? ಪ್ರತಿವರ್ಷವೂ ಸುಮಾರು ಮೂರು ಮಿಲಿಯನ್‌ಗೂ ಹೆಚ್ಚು ಮಕ್ಕಳು ದುರಾಚಾರಕ್ಕೊಳಗಾಗುತ್ತಿದ್ದಾರೆ (ಪು. ೬೬). ಅಮೆರಿಕವು ಎರಡು ಮಿಲಿಯನ್‌ಗೂ ಹೆಚ್ಚು ಪ್ರಜೆಗಳನ್ನು ಬಂಧನದಲ್ಲಿರಿಸಿದೆ. ಇದು ಜಗತ್ತಿನ ಯಾವುದೇ ದೇಶಕ್ಕೆ ಹೋಲಿಸಿದರೂ ಅತ್ಯಂತ ಹೆಚ್ಚಿನ ಶೇಕಡಾವಾರು ಸಂಖ್ಯೆಯಾಗಿದೆ (ಪು. ೮೨). ಇಷ್ಟೊಂದು ವಿಸ್ಮಯಕಾರಿ ಅಂಕಿಅಂಶಗಳಿದ್ದರೂ ಬಹುಸಂಖ್ಯಾತ ಅಮೆರಿಕನ್ನರು ಇದರ ಬಗೆಗೆ ತಲೆಕೆಡಿಸಿಕೊಳ್ಳುತ್ತಿಲ್ಲವಷ್ಟೆ ಅಲ್ಲ ಸಾಮಾಜಿಕ ಜೀವನದಿಂದ ಹೊರನಡೆಯುತ್ತಿದ್ದಾರೆ. ಹಾರ್ವರ್ಡ್ ರಾಜಕೀಯಶಾಸ್ತ್ರಜ್ಞ ರಾಬರ್ಟ್ ಪುಟ್ನಾಮ್‌ರ ಪ್ರಕಾರ, ರೆಡ್‌ಕ್ರಾಸ್ ಸಂಸ್ಥೆಗೆ ಸ್ವಯಂ ಸೇವಕರಾಗಿ ಸೇರಿಸಿಕೊಳ್ಳುವಂತಹ ಸಾಮುದಾಯಿಕ ಚಟುವಟಿಕೆಯಲ್ಲಿ ಭಾಗವಹಿಸುತ್ತಿರುವವರ ಸಂಖ್ಯೆಯು ಸತತವಾಗಿ ಇಳಿಮುಖವಾಗುತ್ತಿದೆ (ಪು. ೬೧).

ಅಮೆರಿಕದ ಈ ಭೋಗ ಜೀವನದ ಉತ್ಕರ್ಷದಿಂದ ಹೆಚ್ಚಿನ ಲಾಭ ಗಳಿಸುತ್ತಿರುವವರೆಂದರೆ – ಭಾರಿ ವ್ಯಾಪಾರ ಸಂಸ್ಥೆಗಳು, ಹಣಕಾಸು ಉದ್ಯಮಗಳು ಹಾಗೂ ಬಹುರಾಷ್ಟ್ರೀಯ ಕಂಪನಿಗಳು. ಇವು ಗೃಹೋಪಯೋಗಿ ವಸ್ತುಗಳು, ಪುಸ್ತಕಗಳು, ಹೋಟೆಲ್‌ಗಳು, ಶವಸಂಸ್ಕಾರ ಗೃಹಗಳು, ಸಿನಿಮಾಗಳು, ಇತ್ಯಾದಿ ಸಂಸ್ಥೆಗಳು.... ತಮ್ಮ ಉತ್ಪನ್ನಗಳನ್ನು ಕೊಳ್ಳುವಂತೆ ಜನರನ್ನು ಮರಳುಗೊಳಿಸುವ ಮೂಲಕ ಭಾರಿ ಲಾಭ ಗಳಿಸುತ್ತಿವೆ. ೬೦ ವಿಭಿನ್ನ ಕೈಗಾರಿಕೆಗಳ ಅರ್ಧ ಮಿಲಿಯನ್‌ಗೂ ಹೆಚ್ಚು ಅಧಿಕೃತ ವ್ಯಾಪಾರೋದ್ಯಮಗಳು ಶೇ. ೩೫ರಷ್ಟು ಚಿಲ್ಲರೆ ಮಾರುಕಟ್ಟೆಯನ್ನು ನಿಯಂತ್ರಿಸುತ್ತಿವೆ (ಪು. ೬೧). ಇವು ಕಾರ್ಟೆಲ್‌ಗಳನ್ನು ರೂಪಿಸಿಕೊಂಡು, ಸಾಮಾನುಗಳ ಬೆಲೆ ನಿರ್ಧಾರ, ಸಣ್ಣಪುಟ್ಟ ವ್ಯಾಪಾರೀ ಸಂಸ್ಥೆಗಳನ್ನು ನಿರ್ನಾಮಗೊಳಿಸಲು ಅನುಕೂಲಿಸುವಂಥ ಶಾಸನ ಅನುಮೋದನೆ ಇತ್ಯಾದಿಗಳ ಮೂಲಕ ಮಾರುಕಟ್ಟೆಯ ಮೇಲೆ ತಮ್ಮ ಬಿಗಿ ಹಿಡಿತವನ್ನು ದೃಢಗೊಳಿಸಿಕೊಳ್ಳುತ್ತವೆ.

ಈ ಭೋಗಜೀವನದ ಮತ್ತೊಂದು ನೇರ ದುಷ್ಪರಿಣಾಮವೆಂದರೆ – ಬಡವ-ಬಲ್ಲಿದರ ನಡುವೆ ಧ್ರುವೀಕರಣ ಹೆಚ್ಚುತ್ತಿರುವುದು. ತಳ ವರ್ಗಗಳು ಹೆಚ್ಚು ಹೆಚ್ಚು ಬಡತನದ ದಾರಿ ಹಿಡಿಯುತ್ತಿವೆ. ಇವರ ಈ ತಪ್ಪಿನ ಲಾಭ ಪಡೆದು ಶ್ರೀಮಂತ ವರ್ಗಗಳು ಕೊಬ್ಬುತ್ತಿವೆ. ೧೯೯೯ರವರೆಗೆ ಶೇ. ೨೦ರಷ್ಟು ಅಮೆರಿಕನ್ ಮೇಲುವರ್ಗದ ಕುಟುಂಬಗಳು ದೇಶದ ಎಲ್ಲ ಹಣಕಾಸು ಸಂಪತ್ತಿನ (ಸ್ಟಾಕ್ಸ್, ಬಾಂಡ್ಸ್, ವಾಣಿಜ್ಯ ಎಸ್ಟೇಟುಗಳ) ಮೇಲೆ ಒಡೆತನ ಪಡೆದಿದ್ದವು. ಇವುಗಳಲ್ಲಿ ಶೇ. ೧೦ರಷ್ಟು ಕುಟುಂಬಗಳು ಶೇ. ೮೫ರಷ್ಟು ಸ್ಟಾಕ್‌ಗಳ ಮೇಲೆ ಒಡೆತನ ಸಾಧಿಸಿದ್ದವು (ಪು. ೭೯). ಇದಕ್ಕೆ ವೈದೃಶ್ಯವಾಗಿ 'ಶೇ. ೪೦ರಷ್ಟು ಅಮೆರಿಕನ್ನರು ಯಾವ ರೀತಿಯ ಆಸ್ತಿಯನ್ನೂ ಪಡೆದಿಲ್ಲ' (ಪು. ೭೯). ಈ ಪ್ರವೃತ್ತಿಗನುಗುಣವಾಗಿ ಅಮೆರಿಕದಲ್ಲೀಗ ಒಂದು ಹೊಸ ಸೇವಕವರ್ಗ ಉದಯಿಸಿದೆ. ಮೇಲು ಮಧ್ಯಮವರ್ಗದ ಜನರೀಗ ಭಾರಿ ಪ್ರಮಾಣದಲ್ಲಿ ಗೃಹಸೇವಕರನ್ನು ನೌಕರಿಗೆ ಇರಿಸಿಕೊಳ್ಳುತ್ತಿದ್ದಾರೆ. ಇದನ್ನು 'ಅಮೆರಿಕನ್ ಆರ್ಥಿಕತೆಯ ಬ್ರೆಜಿಲೀಕರಣ' ಎಂದು ಕೆಲ ಅರ್ಥಶಾಸ್ತ್ರಜ್ಞರು ವ್ಯಾಖ್ಯಾನಿಸುತ್ತಾರೆ (ಪು. ೮೧).

ಈ ಗ್ರಂಥದ ಕರ್ತೃಗಳು ಭೋಗಬಳಕೆ ಸಂಸ್ಕೃತಿಯ ಬಗೆಗೆ ಮಾಡಿರುವ ನಿಷ್ಠುರ ವಿಶ್ಲೇಷಣೆಯು ದೃಢವಾದ ನಿರ್ವಿವಾದದ ವಾಸ್ತವಾಂಶಗಳನ್ನು ಆಧರಿಸಿದೆ. ಆದರೆ ಇದಕ್ಕೆ ಬೆಂಬಲವಾಗಿ ಸೈದ್ಧಾಂತಿಕ ವಿಚಾರಗಳನ್ನೂ ಅದು ಒಳಗೊಂಡಿದ್ದರೆ ಇನ್ನೂ ಹೆಚ್ಚು ಉಪಯುಕ್ತವಾಗುತ್ತಿದ್ದಿತು. ದುರಾಸೆ, ಖಾಲಿ ಭಾವನೆ, ಹೆಚ್ಚಿನ ಮನ್ನಣೆಗೆ ಹಂಬಲ, ಇವೇ ಈ ಹೊಟ್ಟೆಬಾಕತನದ ಬಾಳಿಗೆ ಮೂಲಪ್ರೇರಣೆ ಎಂದೇನೇ ಈ ಗ್ರಂಥಕರ್ತರುಗಳು ತಿಳಿಸುತ್ತಾರೆ. ''ಕಾರ್ಯವನ್ನೂ ಬಳಕೆಯನ್ನೂ ನಿರ್‌ವೈಯುಕ್ತಗೊಳಿಸುವ ಮೂಲಕವಷ್ಟೆ ಸಾಮೂಹಿಕ ಉತ್ಪಾದನೆಯ ಫಲಾಸ್ವಾದನೆ ಸಾಧ್ಯ'' ಎಂದು ಅವರು ಸಂಪ್ರದಾಯಶರಣ ತತ್ತ್ವಶಾಸ್ತ್ರಜ್ಞ ಅರ್ನೆಸ್ಟ್ ವಾನ್‌ಡೆನ್‌ಹಾಗ್‌ರ ಸಿದ್ಧಾಂತವನ್ನು ಉದ್ಧರಿಸುತ್ತಾರೆ. ಜನ ಏಕೆ 'ಕಾಲ್ಪನಿಕ ತೃಷೆ' ಬೆಳೆಸಿಕೊಳ್ಳುತ್ತಾರೆಂಬುದಕ್ಕೆ ಅವರು ಕಾರ್ಲ್ ಮಾರ್ಕ್ಸರ '೧೮೪೪ರ ಆರ್ಥಿಕ ಹಾಗೂ ತತ್ತ್ವಶಾಸ್ತ್ರೀಯ ಹಸ್ತಪ್ರತಿಗಳು' ಮತ್ತು

**ಸುದ್ದಿಚಿತ್ರ**



ರಾಯಚೂರಿನಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಯಶಸ್ವಿಯಾಗಿ ನಡೆಯಿತು. ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಕ. ಮ. ಪುರದ ಅವರು ಪ್ರದರ್ಶನವನ್ನು ಉದ್ಘಾಟಿಸಿದರು.

'ಕಮ್ಯೂನಿಸ್ಟ್ ಪ್ರಣಾಳಿಕೆ'ಗಳಲ್ಲಿ ಬರುವ ವಿಶ್ಲೇಷಣೆಗಳನ್ನು ಉದ್ಧರಿಸಿದ್ದರೂ ಪರಭಾರಿಕೆಯ ಕುರಿತ ಮಾರ್ಕ್ಸ್‌ರವರ ಸಿದ್ಧಾಂತವನ್ನು ನಮೂದಿಸದೆ ಇರುವುದು ಒಂದು ಲೋಪವೇ ಸರಿ. ಹಾಗೆಯೇ ಸಿರಿವಂತಿಕೆಯನ್ನು ಸೃಷ್ಟಿಸುವುದರಲ್ಲಿ ಹಾಗೂ ಉಳಿಸಿಕೊಂಡು ಬರುವಲ್ಲಿ ಭಾರಿ ಬಂಡವಾಳದ ಪಾತ್ರವನ್ನು ಸ್ಥೂಲವಾಗಷ್ಟೆ ನಮೂದಿಸಿದ್ದಾರೆ. ಭೋಗಸಂಸ್ಕೃತಿಯ ನಿರ್ಮಾಣದಲ್ಲಿ ಜಾಹೀರಾತಿನ ಪ್ರಭಾವವನ್ನು ಚರ್ಚಿಸಿದ್ದರೂ ಇದರಲ್ಲಿ ಇತರ ಭಾರಿ ಕಾರ್ಪೊರೇಷನ್‌ಗಳ ಪಾತ್ರವೂ ಇದೆ ಎಂಬುದನ್ನು ಒತ್ತಿಹೇಳಿಲ್ಲ. ಅದೇ ರೀತಿ ಅಸ್ತಿತ್ವದಲ್ಲಿರುವ ರಾಜಕೀಯ ವ್ಯವಸ್ಥೆಯು ತನ್ನ ಚಟುವಟಿಕೆಗಳಿಗಾಗಿ ಭಾರಿ ಬಂಡವಾಳವನ್ನೇ ಅವಲಂಬಿಸಿರುವಾಗ ಅದನ್ನು ಪಳಗಿಸುವುದು ಸಾಧ್ಯವಿಲ್ಲ ಎಂಬ ಅಂಶವನ್ನ ಈ ಗ್ರಂಥಕರ್ತೃಗಳು ನಮೂದಿಸಿದ್ದಾರೆ. ಆದರೆ ಅದನ್ನು ಸಾಧಿಸಲು ಚಳವಳಿಯ ಹಣಕಾಸು ಸುಧಾರಣೆಯನ್ನಷ್ಟೆ ಪರಿಹಾರವನ್ನಾಗಿ ಸೂಚಿಸುತ್ತಾರೆ. ಇಂಥ ಸುಧಾರಣೆಯನ್ನಷ್ಟೆ ಪರಿಹಾರವನ್ನಾಗಿ ಸೂಚಿಸುತ್ತಾರೆ. ಇಂಥ ಸುಧಾರಣೆಗಳನ್ನು ಜಾರಿಗೆ ತರಲು ಯತ್ನಿಸಿದ್ದರೂ ಅವು ಲೋಪದೋಷಗಳಿಂದ ತುಂಬಿವೆ ಮತ್ತು ಕಾರ್ಪೊರೇಟ್ ವಶೀಲಿಗಾರರು ಅವನ್ನು ನಿಷ್ಫಲಗೊಳಿಸಲು ನಿರಂತರವಾಗಿ ಶ್ರಮಿಸಿವೆ ಎಂಬುದನ್ನು ಗಮನಿಸಬೇಕು. ಅದೇ ರೀತಿ ಈ ಗ್ರಂಥಕರ್ತೃಗಳು ಜಿಎನ್‌ಪಿ ಮತ್ತು ಜಿಡಿಪಿ ಆರ್ಥಿಕ ಸೂಚ್ಯಾಂಕಗಳ ಬದಲಿಗೆ ಜಿಪಿಐ.... ನೈಜ ಪ್ರಗತಿ ಸೂಚ್ಯಾಂಕ....ಗಳನ್ನು ಪರಿಗಣಿಸಬೇಕೆಂದು ಮಾಡಿರುವ ಸಲಹೆಯನ್ನು ಒಪ್ಪಿದರೂ, ಇಂದು ಅಸ್ತಿತ್ವದಲ್ಲಿರುವ ಪದ್ಧತಿಯನ್ನು ನಡೆಸುತ್ತಿರುವವರು ಹಾಗೂ ಅದರಿಂದ ಪ್ರಯೋಜನ ಪಡೆಯುತ್ತಿರುವವರು ತಮ್ಮ ಹಿತಕ್ಕೆ ವಿರುದ್ಧವಾದ ಈ ಸಲಹೆಯನ್ನು ಒಪ್ಪುವರೇ ಎಂಬ ಪ್ರಶ್ನೆ ಪ್ರಧಾನವಾಗಿ ಉಳಿದೇ ಉಳಿಯುತ್ತದೆ. ಒಟ್ಟಿನಲ್ಲಿ, ವ್ಯಕ್ತಿಗಳ ವೈಯಕ್ತಿಕ ಹಾಗೂ ಮಾನಸಿಕ ಕೊರತೆಗಳೇ ಸಿರಿವಂತಿಕೆಯ ಅಂಟುಜಾಡ್ಯಕ್ಕೆ ಮೂಲಕಾರಣಗಳೆಂದು ಈ ಗ್ರಂಥಕರ್ತೃಗಳು ಒತ್ತಿ ಹೇಳುತ್ತಾರೆ. ಜನರು ತಾವೇತಾವಾಗಿ ಮಿತವ್ಯಯ ಪಾಲಿಸಬೇಕು, ತಮ್ಮ ಬಯಕೆಗಳನ್ನು ಮಿತಿಗೊಳಿಸಿಕೊಳ್ಳಬೇಕು, ಸಾಮಾನುಗಳನ್ನು ಬೇಕಾಬಿಟ್ಟಿ ಕೊಳ್ಳಬಾರದು, ಕೆಲಸದ ವೇಳೆಯನ್ನು ಕಡಿಮೆಗೊಳಿಸಿಕೊಳ್ಳಬೇಕು, ಎಂದು ಅವರು ಸಲಹೆ ಮಾಡುವಾಗಲೇ ವ್ಯರ್ಥ ಬಳಕೆಯನ್ನು ತಡೆಯುವಲ್ಲಿ ಕಾರ್ಪೊರೇಟ್‌ಗಳು ಸಹಾಯ ಮಾಡಬಲ್ಲವು ಎಂದು ಈ ಗ್ರಂಥಕರ್ತೃಗಳು ನಂಬಿಕೆ ವ್ಯಕ್ತಪಡಿಸುತ್ತಾರೆ.

ಬಳಕೆಗೆ ಸಂಬಂಧಿಸಿ ಜನರು ತಮ್ಮ ಮನೋಧರ್ಮ ಬದಲಿಸಿಕೊಳ್ಳಬೇಕು ಎಂಬ ಅವರ ಸಲಹೆಯಲ್ಲೂ ಬಹಳಷ್ಟು ಅರ್ಥವಿದೆಯೆಂಬುದರಲ್ಲಿ ಸಂದೇಹವಿಲ್ಲ. ಆದರೆ ವೈಯಕ್ತಿಕ ನೆಲೆಯಲ್ಲಿ ಇಂತಹ ಬದಲಾವಣೆಗಳು ಈ ಸಿರಿವಂತಿಕೆಯ ಅಂಟುಜಾಡ್ಯವನ್ನು ತೊಲಗಿಸಲು ಸಾಕಾಗುತ್ತವೆಯೆ? ವಿವೇಕಯುತವಾದ ಬಳಕೆಯ ಅಭ್ಯಾಸಗಳನ್ನು ಅನುಷ್ಠಾನಕ್ಕೆ ತರಬೇಕು ನಿಜ. ಆದರೆ ಅದಕ್ಕಿಂತ ಹೆಚ್ಚಾಗಿ, ಅನವಶ್ಯಕ ಬಳಕೆ ವೆಚ್ಚಗಳನ್ನು ತೊಡೆದುಹಾಕುವಂಥ ಆಮೂಲಾಗ್ರ ಸಾಮಾಜಿಕ ಪರಿವರ್ತನೆಯನ್ನು ಉಂಟುಮಾಡುವುದೇ ಹೆಚ್ಚು ಫಲಪ್ರದವಾದ ತಂತ್ರವಲ್ಲವೇ? ಸಮಾನತೆ ಹಾಗೂ ಸಾಮಾಜಿಕ ನ್ಯಾಯಗಳನ್ನು ಆಧರಿಸಿದ ಹೊಸ ಸಾಮಾಜಿಕ ಪದ್ಧತಿಯೊಂದನ್ನು ಜಾರಿಗೆ ತಂದಲ್ಲಿ ಅದು ಸಿರಿವಂತಿಕೆಯ ಅಂಟುಜಾಡ್ಯದ ಮೂಲ ಕಾರಣಗಳಲ್ಲೊಂದಾದ ಪರಕೀಯತೆಯನ್ನು ಸಂಪೂರ್ಣವಾಗಿ ತೊಡೆದು ಹಾಕದಿದ್ದರೂ ಕನಿಷ್ಠಗೊಳಿಸುತ್ತದೆ ಎಂಬುದಂತೂ ನಿಜ. ಈ ಗ್ರಂಥವು ಈ ವಿಶ್ಲೇಷಣಾತ್ಮಕ ಚೌಕಟ್ಟಿನಲ್ಲಿ ತನ್ನ ವಿಚಾರಮಂಥನ ನಡೆಸದಿರುವುದು ಇದರ ಕೊರತೆ ಎನ್ನಬಹುದು. ಆದರೂ ಸಿರಿವಂತಿಕೆ ಅಂಟುಜಾಡ್ಯ ಕುರಿತ ಈ ಗ್ರಂಥ ಎಲ್ಲರಿಗೂ ಅರ್ಥವಾಗುವಂಥ ಆಕರ್ಷಕ ಶೈಲಿಯಲ್ಲಿ ರಚಿತವಾಗಿರುವ ಒಂದು ಶ್ರೇಷ್ಠ ಗ್ರಂಥವಾಗಿದೆ. ಇದು ಅನೇಕ ಮನೋಜ್ಞ ರೇಖಾಚಿತ್ರಗಳು, ಅಂಕಿಅಂಶ ಪಟ್ಟಿಗಳು, ನಕ್ಷೆಗಳು ಮತ್ತೆ ಒಂದು ಉಪಯುಕ್ತ ಸಿರಿವಂತಿಕೆ ರೋಗ ನಿದಾನ ಪರೀಕ್ಷೆ ಇವುಗಳನ್ನೆಲ್ಲ ಒಳಗೊಂಡಿದೆ.

ಮೂಲ : **ಡಾ|| ಬದರಿನಾಥ ರಾವ್**
ಸೋಶ್ಯಾಲಜಿ ಅಂಡ್ ಏಶಿಯನ್ ಸ್ಟಡೀಸ್
ಡಿಪಾರ್ಟ್‌ಮೆಂಟ್ ಆಫ್ ಲಿಬರಲ್ ಸ್ಟಡೀಸ್
ಕೆಟರಿಂಗ್ ಯೂನಿವರ್ಸಿಟಿ, ೧೭೦೦, ವೆಸ್ಟ್ ತರ್ಡ್ ಅವಿನ್ಯೂ
ಫ್ಲಿಂಟ್, ಎಮ್.ಐ.
೪೮೫೦೪-೪೮೯೮ - ಯು.ಎಸ್.ಎ.

ಅನುವಾದ : **ಕೆ. ಎಲ್. ಗೋಪಾಲಕೃಷ್ಣರಾವ್**

# ಪರಿಸರದ ಸೊಗಸು

ಚುಆಂಗ್ ಜು* ಒಂದು ದಿನ ಮುಂಜಾನೆ
ನದಿಯ ಬದಿಯಲಿ ಕುಳಿತು
ಮೀನುಗಳ ಹಿಡಿಹಿಡಿದು, ಅಕ್ಕರೆಯಿಂದ
ಮುದ್ದಿಕ್ಕಿ
ಮತ್ತೆ ನದಿಗೇ ಬಿಡುತಲಿದ್ದ;
ಅವನನರಸುತ ಅಲ್ಲಿ ರಾಜದೂತನು ಬಂದು
ವಿನಯದಲಿ ತಲೆಬಾಗಿ ನಿವೇದಿಸಿದ:
''ನಮ್ಮ ದೊರೆ ನಿಮ್ಮನ್ನು
ನಮ್ಮ ರಾಜ್ಯದ ಪ್ರಧಾನಿಯ ಪದಕೆ
ಆಯ್ಕೆ ಮಾಡಿದ್ದಾರೆ
ನೀವೀಗ ಅರಮನೆಗೆ ಬಿಜಯಂಗೈಯಬೇಕು''
ಚುಆಂಗ್ ಜು ನಗುನಗುತ ನುಡಿದ:
''ಕೇಳಿರುವೆ
ನಿಮ್ಮ ದೊರೆಯ ಸಂಗ್ರಹಾಲಯದಲ್ಲಿ
ಸಾಲು ಸಾಲಾಗಿ ನಿರ್ಜೀವ ಆಮೆಗಳ
ಪ್ರದರ್ಶನಕಿಟ್ಟಿರುವರಂತೆ!



ಈಗ ನೀನೇ ಹೇಳು:
ಅವು ಜೀವಂತವಿದ್ದುದಾದರೆ
ಅರಸನ ಅರಮನೆಯ ಶೋಭೆ ಹೆಚ್ಚಿಸಲು
ಹಾತೊರೆಯುತಿದ್ದವೋ, ಇಲ್ಲ
ತಮ್ಮ ಮೂಲ ಪರಿಸರಕೆ ಮರಳಿ
ಹಾಯಾಗಿರಬಯಸುತ್ತಿದ್ದವೋ?''
ಥಟ್ಟನೇ ಮಾರ್ನುಡಿದ ರಾಜದೂತ:
''ಅವು ಮರಳುತಿದ್ದವು ತಮ್ಮ ಮೂಲ
ಪರಿಸರಕೆ''
''ನನ್ನಾಸೆಯೂ ಅಷ್ಟೆ,
ಅನಾಯಾಸ ದೊರೆತ ಪದವಿಗೇರಿದ ಮನುಜ
ಕಳೆದುಕೊಳ್ಳುತ್ತಾನೆ ತನ್ನ ಮನದ ಶಾಂತಿ
ಮೇಲಿನಂತಸ್ತಕ್ಕೆ ಹೊಂದಿಕೊಳ್ಳದೆ ಸಹಜ;
ಹೋಗಪ್ಪ ನಿನ್ನ ಸಾಮ್ರಾಟರಿಗೆ ಇಷ್ಟೆ ತಿಳಿಸು
ನನಗಿಷ್ಟ ಈ ನನ್ನ ಪರಿಸರದ ಸೊಗಸು!''

**ಬಿ. ಎ. ಸನದಿ**
ಮಿಲನ್, ಸಾ ಮಿಲ್ ಎದುರು, ಹೆರ್ವಟ್ಟ, ಕುಮಟಾ-೫೮೧೩೪೩

*ಚುಆಂಗ್‌ಜು : ಚೀಣ ದೇಶದ ಒಬ್ಬ ಖ್ಯಾತ ದಾರ್ಶನಿಕ

ವಸುಮತಿ ಉಡುಪ





# ಇಷ್ಟಂತೆ ಹಾವು

**ಕಾ**ನಳ್ಳಿಯ ತಿರುಕಾಸಿನ ಬಳಿ ಬಸ್ಸಿಳಿದ ಜಗದೀಶ ಅದುವರೆಗೆ ಮೈತುಂಬಿದ್ದ ಆವೇಶವೆಲ್ಲಾ ಜರ್‍ರನೆ ಸೋರಿಹೋದಂತೆ ಕಂಗಾಲುಗೊಂಡಿದ್ದ. ಇಲ್ಲೇ ಕಾದಿದ್ದು ಇನ್ನೊಂದು ಬಸ್ಸು ಬಂದೊಡನೆ ಹೊರಟುಬಿಡಲೇ ಎನ್ನುವ ವಿಚಾರ ತಲೆಯೊಳಗೆ ಹೊಕ್ಕು ಕೊರೆಯಲು ಶುರು ಮಾಡಿತ್ತು. ಶಕ್ತಿ ಕಳೆದುಕೊಂಡಂತೆ ಕಾಲುಗಳು ಬಳುಕುತ್ತಿದ್ದವು. ಇಡೀರಾತ್ರಿ ನಿದ್ದೆಗೆಟ್ಟು, ಊಟ ಬಿಟ್ಟು, ಪ್ರಯಾಣಮಾಡಿ ಬಂದುದರ ಪರಿಣಾಮವೆಂಬಂತೆ ತಲೆಯ ಇಕ್ಕೆಲದ ನರಗಳು ಪಟಗುಟ್ಟುತ್ತಿದ್ದವು. ಅಂದಾಜು ಹತ್ತೂ ಚಿಲ್ಲರೆ ವರ್ಷಗಳ ತರುವಾಯ ಈ ಜಾಗಕ್ಕೆ ಮರಳಿ ಕಾಲಿಟ್ಟಿದ್ದರೂ ಹೆಚ್ಚಿನ ವ್ಯತ್ಯಾಸ ಏನೂ ಕಾಣದೆ ರಸ್ತೆಯ ಅಕ್ಕಪಕ್ಕ ಅವೇ ಕುಗುರುತ್ತಿರುವ ಹುಲ್ಲುಮಾಡಿದ ಮನೆಗಳು, ಬಸ್ಸುಗಳ ನಿಲುದಾಣವೆಂಬ ಹಣೆಪಟ್ಟಿಯ ಎದುರುಬದುರು ಎರಡು ಸಿಮೆಂಟಿನ ಕಟ್ಟೆಗಳಿರುವ ತೆರೆದ ಜಗುಲಿ, ಮೇಲೆ ಜಿಂಕ್ ಶೀಟಿನ ಹೊದಿಕೆ. ಬದಿಯ ಗೂಡಂಗಡಿಯ ಹಲಗೆ ಜೋಡಣೆಯ ಮುಚ್ಚಿದ ಬಾಗಿಲ ಕಡೆ ದೃಷ್ಟಿ ಹೊರಳುತ್ತಿದ್ದಂತೆ ಜಗದೀಶ ಉಗುಳುನುಂಗಿದ. ಬೆಳಗಿನ ಜಾವದ ಚಳಿಚಳಿಯಲ್ಲೂ ಮೈಬೆವರಿದಂತಾಯ್ತು. ಎದೆಬಡಿತ ಏರಿತು. ಅಲ್ಲಿಂದ ಬಲವಂತವಾಗಿ ದೃಷ್ಟಿ ಕಿತ್ತು ಹೆಬ್ಬಾವಿನಂತೆ ಉದ್ದಕ್ಕೆ ಬಿದ್ದುಕೊಂಡಿದ್ದ ರಸ್ತೆಯ ಮೇಲೆ ಕಣ್ಣೋಡಿಸಿದ. ನರಪ್ರಾಣಿಯ ಸುಳಿವಿಲ್ಲ. ಎಡಗೈಯ ವಾಚನ್ನು ಕಣ್ಣಹತ್ತಿರಕ್ಕೆ ತಂದು ಕಿರೀ ನೋಡಿದರೆ ಘಂಟೆ ನಾಲ್ಕೂಕಾಲು. ಬೀಸು ಬೀಸು ನಡೆದುಕೊಂಡು ಹೋದರೆ ಮನೆ ತಲುಪಲು ಅರ್ಧ ಘಂಟೆ ಸಾಕೇಸಾಕು. ಆದರೆ ಹೆಜ್ಜೆ ಕಿತ್ತಿಡಲಾಗದ ಹಿಂಜರಿಕೆ, ದಣಿವು, ಎದೆಗುದಿ. ಪರಸ್ಪರ ತಳುಕು ಹಾಕಿಕೊಂಡಿರುವ ವಿಭಿನ್ನ ಭಾವಗಳು. ಹೆಗಲ ಮೇಲಿಂದ ನೇತು ಬಿದ್ದಿರುವ ಚೀಲದಲ್ಲಿ ದಿನಬಳಕೆಯ ಎರಡು ಜೊತೆ ಬಟ್ಟೆಗಳು ಮಾತ್ರವಿದ್ದರೂ ಮಣಭಾರವೆನ್ನಿಸಿ ಭುಜ ಜಗ್ಗುತ್ತಿರುವ ಅನಿಸಿಕೆ. ಜಗದೀಶ ಬದಿಯ ನಿಲುದಾಣದ ಒಳಹೊಕ್ಕು ಧೂಳು ಮುಸುಕಿದ, ತಣ್ಣಗೆ ಕೊರೆಯುವ, ಸಿಮೆಂಟು ಬೆಂಚಿನ ಮೇಲೆ ಕುತ್ತಿಗೆಯ ಚೀಲ ತೆಗೆದಿಟ್ಟು ಕುಸಿದುಕೂತ. ಮತ್ತೆ ಕಾಡತೊಡಗಿತು ದ್ವಂದ್ವ. ಮನೆಯ ದಾರಿ ಹಿಡಿಯುವುದೋ, ಮರಳಿ ಬಸ್ಸು ಹತ್ತುವುದೋ? ಮನೆಯಲ್ಲಿ ನೆಂಟರಿಷ್ಟರು ತುಂಬಿ ತುಳುಕುತ್ತಿರುತ್ತಾರೆ. ಮೂರುಜನ ಅಕ್ಕಂದಿರು, ಭಾವಂದಿರು, ಅವರೆಲ್ಲರ ಮಕ್ಕಳು, ತಮ್ಮ ಮದುವೆಯಾಗಿದ್ದಾನೆ. ಅವನ ಕಡೆಯ ಬಳಗವೂ ಹಾಜರಿ ಹಾಕಿರುತ್ತದೆ. ಎಲ್ಲಾ ತನ್ನನ್ನು ಕುಹಕದ, ಹೀನಾಯದ ದೃಷ್ಟಿಯಿಂದ ನೋಡಬಹುದು. ತನ್ನದೇ ಮನೆ. ಆದರೆ ತಾನಲ್ಲಿಗೆ ಪರಕೀಯ. ಇದಕ್ಕಿಂತಾ ದುರಂತ ಬೇರೆ ಉಂಟೇ ? ಸಂಬಂಧ ಅನ್ನುವುದು ಇಷ್ಟು ಸೂಕ್ಷ್ಮವೇ ? ಒಂದು ಸಣ್ಣ ತಪ್ಪಿಗೆ ಶಾಶ್ವತವಾಗಿ ಕಡಿದುಕೊಂಡು ಬಿಡುತ್ತದೆಯೇ ? ಇಷ್ಟಕ್ಕೂ ಸರಿ, ತಪ್ಪುಗಳ ನಿರ್ಣಯದ ಮಾನದಂಡ ಯಾವುದು ? ಒಬ್ಬರಿಗೆ ತಪ್ಪಾಗಿ ಕಾಣುವುದು ಮತ್ತೊಬ್ಬರಿಗೆ ಸರಿ ಅನಿಸಬಾರದೇ ? ಪ್ರೀತಿ, ವಿಶ್ವಾಸ ಎನ್ನುವುದೆಲ್ಲಾ ಬರಿಯ ಭ್ರಮೆಯೇ ? ದೊಡ್ಡಕ್ಕ ತಲೆಯ ಮೇಲೆ ಹೊತ್ತುಕೊಂಡು ಮೆರೆಸುತ್ತಿದ್ದಳು. 'ಜಗ್ಗಾ...' ಎಂದು ಕರೆಯುವಾಗ ದನಿಯಲ್ಲಿ ಪ್ರೀತಿ ಜಿನುಗುತ್ತಿತ್ತು. ವರ್ಷಕ್ಕೆ ನಾಲ್ಕುಸಲವಾದರೂ ಅವಳ ಮನೆಗೆ ಹೋಗದಿದ್ದರೆ ಅವಳಿಗೂ ಸಮಾಧಾನವಿಲ್ಲ, ತನಗೂ ಇರುತ್ತಿರಲಿಲ್ಲ. ಔತಣ, ಉಪಚಾರ, ಉಡುಗೊರೆ, ಭಾವನ ಹಳೆಯ ಶರ್ಟುಗಳಿಗೆ ತಾನೊಬ್ಬ ಖಾಯಂ ಗಿರಾಕಿ. ಅವರು ಒಂಥರಾ ಶೋಕಿಜನ. ಊರುದ್ದಕ್ಕೂ ಜಮೀನು. ದೊಡ್ಡಸ್ತಿಕೆ. ದುಡ್ಡುಕಾಸಿನ ದರ್ಪ. 'ಸುಮ್ನೆ ಕಂಡಕಂಡೋರಿಗೆ ದಾನ ಮಾಡ್ತಾರೆ. ನೀನಾರೂ ಹಾಕ್ಕೊಳ್ಳೋ...' ಅಕ್ಕ ಮಡಿಸಿ ಮಡಿಸಿ ಕೈಚೀಲಕ್ಕೆ ಶರ್ಟುಗಳನ್ನು ತುಂಬಿಸುತ್ತಿದ್ದಳು. ಒಂದಿಷ್ಟು ದೊಗಲಾಬಗಲಾ ಅನಿಸಿದರೂ ಚಂದವಾಗಿರುತ್ತಿದ್ದ ಅಂಗಿಗಳು. ತಾನು ಮಜಾ ಮಾಡಿದ್ದೇ ಮಾಡಿದ್ದು. ಉಳಿದ ಇಬ್ಬರು ಅಕ್ಕಂದಿರೂ ಪ್ರೀತಿ ತೋರಿಸುವುದರಲ್ಲಿ ಚೌಕಾಶಿ ಮಾಡಿದವರಲ್ಲ. ಎಲ್ಲರ ಪ್ರೀತಿಯ ರುಚಿ ಜಗದೀಶನ ಹಲ್ಲಿಗೆ ಹತ್ತಿತ್ತು. ಈಗ ? ಎಲ್ಲಾ ಇದ್ದೂ ಯಾರೂ ಇಲ್ಲ. ಅಸಮಾಧಾನದ ಬಿಸಿ ಒಂದಲ್ಲಾ ಒಂದು ದಿನ ತಣ್ಣಗಾಗುತ್ತದೆ ಎಂದು ಇವನು ಕಣ್ಣಿಗೆ ಎಣ್ಣೆ ಬಿಟ್ಟುಕೊಂಡು ಕಾದಿದ್ದೇ ಬಂತು. 'ಕಣ್ಣಿಂದ ದೂರವಾದವರು ಮನಸ್ಸಿಂದಲೂ ದೂರ' ಅನ್ನುವ ಹೇಳಿಕೆ ಮಾತಿನಂತೆ ಜಗದೀಶ ಎಲ್ಲರ ಪಾಲಿಗೆ ಶಾಶ್ವತವೆನಿಸುವಂತೆ ದೂರವಾಗಿ ಬಿಟ್ಟಿದ್ದ. ಒಂದು ಕಾಗದ ಇಲ್ಲ, ಒಂದು ಫೋನ್ ಇಲ್ಲ, ಅಂದಮೇಲೆ ಭೇಟಿ ಅನ್ನುವುದು ಇಲ್ಲವೇ ಇಲ್ಲ. ಅಕ್ಕಂದಿರ ಸಣ್ಣ ಮಕ್ಕಳನ್ನು ಹೆಗಲಮೇಲೆ ಹೊತ್ತು ಕುಣಿದು, ಮಂಗಾಟ ಆಡಿ ನಗಿಸಿ, 'ಮಾವ' ಅಂದರೆ ಎಲ್ಲಾ ಚಿಳ್ಳೆಪಿಳ್ಳೆಗಳಿಗೂ ಪಂಚಪ್ರಾಣ. ಊರಿಗೆ ಬಂದರೆ ಅವನ ಪಕ್ಕದ ಜಾಗ ಹಿಡಿದು ಮಲಗಲು ಪೈಪೋಟಿ. ಲಡಾಯಿ. ಅವನಿಂದ ಕತೆ ಕೇಳಲು ಮೈಯೆಲ್ಲಾ ಕಿವಿ. ಎಲ್ಲಾ ಈಗ ದೊಡ್ಡವರಾಗಿ ತನ್ನನ್ನು ಸಂಪೂರ್ಣ ಮರೆತು

ಬಿಟ್ಟಿರಬಹುದು ಎಂದುಕೊಳ್ಳುವಾಗ ಜಗದೀಶನಿಗೆ ಕಣ್ಣು ಹಸಿಯಾಯ್ತು. ಸಂಪರ್ಕ ಅನ್ನುವುದನ್ನು ಚೂರಾದರೂ ಉಳಿಸಿಕೊಂಡಿದ್ದರೆ ಅದು ತಮ್ಮ ಜನಾರ್ದನ. ಜಗದೀಶ ಮನೆ ಬಿಡುವಾಗ ಬಿ.ಎ. ಕೊನೆಯ ವರ್ಷದಲ್ಲಿ ಓದುತ್ತಿದ್ದ. ಎಸ್ಸೆಲ್ಸಿಯಲ್ಲಿ ಎರಡು ವರ್ಷ, ಪಿ.ಯು.ಸಿ.ಯಲ್ಲಿ ಮತ್ತೆರಡು ವರ್ಷ ಪಲ್ಟಿ ಹೊಡೆದಿದ್ದ. ಅಪ್ಪನ ಒತ್ತಾಯಕ್ಕೆ ಓದುತ್ತಿದ್ದವನಿಗೆ ತಾನು ಮನೆ ಬಿಟ್ಟಿದ್ದು ಕಾಲೇಜಿಗೆ ನಮಸ್ಕಾರ ಹೊಡೆಯಲು ಒಂದು ಹೆಳೆ ಆಗಿರಬೇಕು. ತಾನು ಕ್ಷಮೆ ಕೇಳಿ ಬರೆದ ಮೊದಲಪತ್ರಕ್ಕೆ ಉತ್ತರ ಬರೆದಿದ್ದು ಇದೇ ಜನಾರ್ದನ. 'ನಿನ್ನ ಹೆಸರು ಹೇಳಿದರೆ ಮನೆಗೆ ಮನೆ ಹೊತ್ತಿ ಉರಿಯುತ್ತೆ. ಅಕ್ಕಂದಿರು ತಮ್ಮ ಮರ್ಯಾದೆ ಮೂರುಕಾಸಿಗೆ ಹರಾಜಾಯ್ತು ಎಂದು ಕೊರಗುತ್ತಿದ್ದಾರೆ. ಜಗ್ಗಣ್ಣಾ, ಯಾರಿಗೂ ಕಾಗದ ಗೀಗದ ಬರೆಯೋಕೆ ಹೋಗ್ಬೇಡ. ಅವರವರ ಸಂಸಾರದಲ್ಲಿ ಅವರವರು ಚೆಂದಾಗಿರ್ಲಿ. ನಿನ್ನ ಜೊತೆ ಸಂಬಂಧ ಇಟ್ಟುಕೊಂಡಿದ್ದು ಗೊತ್ತಾದರೆ ಭಾವಂದಿರು ಹುರಿದು ಮುಕ್ಕಿಯಾರು. ಇನ್ನು ಅಪ್ಪ, ಅಮ್ಮನ ವಿಷಯ ಹೇಳದೆ ಇರೋದೇ ಒಳ್ಳೇದು. ನನಗೇನೋ ನೀನು ಮಾಡಿದ್ದು ತಪ್ಪು ಅನ್ನಿಸೋಲ್ಲ. ಆತ್ಮಸಾಕ್ಷಿ ಅನ್ನೋದು ಪ್ರತಿಯೊಬ್ಬರಿಗೂ ಇದ್ದೇ ಇರುತ್ತಲ್ಲ, ಆದರೆ ಇದನ್ನೆಲ್ಲಾ ಅರ್ಥ ಮಾಡಿಕೊಳ್ಳೋವಷ್ಟು ನಮ್ಮ ಜನ ಹೃದಯವಂತಿಕೆ ಬೆಳೆಸಿಕೊಂಡಿಲ್ಲ. ಅವಸರ ಖಂಡಿತಾ ಮಾಡ್ಬೇಡ. ಸ್ವಲ್ಪದಿನ ತಡಿ. ಎಲ್ಲಾ ತಣ್ಣಗಾದ ಮೇಲೆ ನಾನೇ ನಿನಗೆ ತಿಳಿಸ್ತೀನಿ...' ಈ ಧಾಟಿಯಲ್ಲಿ ಸಾಗಿತ್ತು ಜನಾರ್ದನನ ದೀರ್ಘಪತ್ರ. ಜಗದೀಶ ಅದೆಷ್ಟೋ ದಿನ ಮಂಕಾಗಿದ್ದ. ಬೆಪ್ಪುಕಟ್ಟಿ ಹೋಗಿದ್ದ. ಆದರೆ ತಲೆಯ ಮೇಲೆ ಕೈಹೊತ್ತು ಕೂರಲು ಬದುಕು ಬಿಡಲಿಲ್ಲ. ಜವಾಬ್ದಾರಿ ಕೇಳಲಿಲ್ಲ. ಹೊಟ್ಟೆ ಒಪ್ಪಲಿಲ್ಲ. ಅಗ್ನಿಪರ್ವತದಂತೆ ಎಲ್ಲವನ್ನೂ ಒಡಲೊಳಗಿರಿಸಿಕೊಂಡು ಬೇಯುತ್ತಾ, ಮೇಲ್ನೋಟಕ್ಕೆ ಶಾಂತನಂತೆ ತೋರಿಸಿಕೊಳ್ಳುತ್ತಾ, ಎಲ್ಲಾ ತಣ್ಣಗಾಗುವ ಸುದಿನಕ್ಕೆ ಕಾಯುತ್ತಾ, ದಿನಗಳುರುಳಿ ತಿಂಗಳಾಗಿ, ತಿಂಗಳುಗಳು ವರ್ಷವಾಗಿ, ದಿನಚರಿಯ ಅವಿಶ್ರಾಂತ ದುಡಿಮೆಯಲ್ಲಿ ಹಳೆಯ ನೆನಪುಗಳು ಮಸುಕು ಮಸುಕಾಗ ತೊಡಗಿ, ವರ್ತಮಾನವೊಂದೇ ಪ್ರಧಾನವಾಗಿ, ಹೀಗಿದ್ದೂ ಒಮ್ಮೊಮ್ಮೆ ಜ್ವಾಲಾಮುಖಿಯಂತೆ ಭುಗಿಲೇಳುತ್ತಿತ್ತು ಅಮ್ಮನ ನೆನಪು. ಅಪ್ಪನ ನೆನಪು. ಬಿಟ್ಟುಬಂದ ಮನೆಯ ನೆನಪು. ಹುಟ್ಟೂರಿನ ನೆನಪು. ಜಗದೀಶ ವಿಚಲಿತನಾಗಿ ಬಿಡುತ್ತಿದ್ದ. ಬುದ್ಧಿ ಭ್ರಮಿಸಿದಂತಾಗುತ್ತಿತ್ತು. ಆ ಕ್ಷಣ ತಮ್ಮನಿಗೊಂದು ಪತ್ರ. ಪರಿಸ್ಥಿತಿಯ ಕುರಿತು ವಿಚಾರಣೆ. ತಾನು ಕೆಲಸ ಮಾಡುವಲ್ಲಿನ ಫೋನ್ ನಂಬರನ್ನೂ ಕೊಟ್ಟು, ಇಷ್ಟುಹೊತ್ತಿಗೆ ಊರಿಗೆ ಕಾಗದ ತಲುಪಿರಬಹುದು ಎನ್ನುವ ಅಂದಾಜಿನಿಂದ ಫೋನು ಟ್ರಿಣ್ ಗುಟ್ಟಿದರೆ ತನಗೇ ಇರಬಹುದೆಂದು ಎದೆ ಹೊಡೆದುಕೊಳ್ಳುತ್ತಿತ್ತು. ಆ ಹಳ್ಳಿಕೊಂಪೆಗೆ ಪೋಸ್ಟ್ ತಲುಪುವುದು ನಿಧಾನ. ಸುತ್ತ ಹತ್ತು ಹಳ್ಳಿಗಳಿಗೆ ಪೋಸ್ಟ್ ಹಂಚುವ ಜವಾಬ್ದಾರಿಯ ಪೋಸ್ಟ್‌ಮ್ಯಾನ್ ಒಂದು ಮನೆಗೆ ಒಂದು ಕಾಗದ ಕೊಡಲು ಮೈಲಿಗಟ್ಟಲೆ ನಡೆಯುವ ಶ್ರಮಕ್ಕೆ ಕಳ್ಳತಪ್ಪಿಸಿಕೊಳ್ಳುತ್ತಿದ್ದ. ಪೋಸ್ಟ್ ಕೂಡಾ ಪೇಪರಿನ ಜೊತೆ ಗೂಡಂಗಡಿಯಲ್ಲಿ ಕಾದುಕೊಂಡಿರುತ್ತಿತ್ತು. ಈಗ ಇವಕ್ಕೆಲ್ಲಾ ಬೇರೆ ವ್ಯವಸ್ಥೆ ಮಾಡಿರಬಹುದು ಜನಾರ್ದನ. ಏನೇನೋ ಯೋಚನೆಗಳು. ಏನೇನೋ ಸಮಾಧಾನಗಳು. ನಿರಾಶೆಯ ಪೆಟ್ಟು ತಿಂದು ತಿಂದು ಜಡ್ಡುಗಟ್ಟಿದ ಮನಸ್ಸು ವಾಸ್ತವಕ್ಕೆ ಅನಿವಾರ್ಯವಾಗಿ ಹೊಂದಿಕೊಂಡು, ಕ್ರಮೇಣ ತನ್ನ ಸಂಸಾರವೂ ಬೆಳೆದು, ತನ್ನ ನಾಲ್ಕಾರು ಕಾಗದಗಳಿಗೆ ಉತ್ತರವೆಂಬಂತೆ ಅಪರೂಪಕ್ಕೆ ಬರುವ ಜನಾರ್ದನನ ಚುಟುಕು ಕಾಗದಗಳು ಹುಟ್ಟೂರಿನ ನೆನಪಿನ ಸವಕಲು ಕೊಂಡಿಗಳಾಗಿ ಉಳಿದುಕೊಂಡಿದ್ದುವು. ಹಳೆಯ ಜನ್ಮದ ನೆನಪುಗಳೆಂಬಂತೆ ಮಬ್ಬುಗಟ್ಟಿದ್ದವು. ಈ ಅವಧಿಯಲ್ಲಿ ಜನಾರ್ದನನಿಗೆ ಮದುವೆಯಾಗಿತ್ತು, ಮಕ್ಕಳು ಹುಟ್ಟಿದ್ದರು. ಎಲ್ಲಾ ತಿಳಿದಿತ್ತು ಜಗದೀಶನಿಗೆ, ಜನಾರ್ದನನ ಮೂಲಕ.

* * *

ಎಲ್ಲೋ ಕಾಗೆಯೊಂದು 'ಕ್ರಾ...' ಗುಟ್ಟಿತು. ಜಗದೀಶ ಬೆಚ್ಚಿಬಿದ್ದ. ಆಗಲೇ ಬೆಳಕು ಕಣ್ಣುಬಿಡತೊಡಗಿದೆ. ಯಾವುದೋ ಮನೆಯಲ್ಲಿ ಎಳೆಮಗುವೊಂದು ಅಳುತ್ತಿದೆ. ಬಹುಶಃ ಅಮ್ಮ ಮಗ್ಗುಲುಬಿಟ್ಟು ಎದ್ದುಹೋಗಿರಬೇಕು. ಇನ್ಯಾರೋ ಕೆಮ್ಮುತ್ತಿದ್ದಾರೆ, ಕ್ಯಾಕರಿಸುತ್ತಿದ್ದಾರೆ. ಬಲಬದಿಯ ಹೋಟೆಲುಮನೆಯಲ್ಲಿ ಬೆಳಗಿನ ಚಟ್ನಿಗೆ ಕಾಯಿ ತುರಿಯುವ ಕರಪರ ಸದ್ದು. ಬೆಳಗಾಗುತ್ತಿದೆ. ಜನ ಸಂಚಾರ ಆರಂಭವಾಗಿಬಿಡುತ್ತದೆ. ಜಗದೀಶ ಕೂತಲ್ಲಿಂದ ದಡಬಡಿಸಿ ಎದ್ದು ಚೀಲವನ್ನು ಹೆಗಲಿಗೆ ನೇಲಿಸಿಕೊಂಡ. ಬೆಳಕಿನ ಕಿರಣಗಳೊಡನೆ ಮೆಲ್ಲಮೆಲ್ಲನೆ ಆತ್ಮವಿಶ್ವಾಸವೂ ಎದೆತುಂಬಾ ಹರಡಿಕೊಂಡಿತು. ಯಾರೂ ಮಾಡದ ಅಪರಾಧ ತಾನು ಮಾಡಿಲ್ಲ. ಯಾರೂ ಮಾಡದ ಅಪರಾಧ ಜಗತ್ತಿನಲ್ಲಿರಲು ಸಾಧ್ಯವೂ ಇಲ್ಲ. ಇನ್ನೇನಾದೀತು? ಅವಮಾನ. ಅಷ್ಟೇ ತಾನೇ? ಆಗಲಿ, ಅಮ್ಮನಿಂದ ನಾನು ಕ್ಷಮಿಸಿಕೊಳ್ಳಲಾರೆ. ಶಾಶ್ವತ ಬೀಳ್ಕೊಡುಗೆ, ಜಗದೀಶನ ಗಂಟಲಸೆರೆ ಉಬ್ಬಿತು. ಅಮ್ಮನ ನೆನಪು ಅವಳ ಕುರಿತಾದ ಮೃದುಭಾವನೆಗಳನ್ನು ಜಾಗೃತಗೊಳಿಸಿ ತನ್ನನ್ನು ಚುಚ್ಚಿಚುಚ್ಚಿ ಕೊಲ್ಲುತ್ತದೆಯೆನ್ನುವ ಕಾರಣದಿಂದಲೇ ತಾನು ಅವಳ ಬಗ್ಗೆ ಯೋಚಿಸುವುದನ್ನು ಪ್ರಜ್ಞಾಪೂರ್ವಕವಾಗಿ ತಪ್ಪಿಸಿಕೊಳ್ಳುತ್ತಿದ್ದೆನೆಯೇ? ಯಾಕೆ ಇಷ್ಟು ಬೇಗ ಸಾಯಬೇಕಿತ್ತು ಅಮ್ಮ? ಸಾಯುವಂತಾದ್ದು ಏನಾಗಿತ್ತು? ಕೊನೆಯವರೆಗೂ ನನ್ನನ್ನು ಕ್ಷಮಿಸಬೇಕೆಂದು ಅನಿಸಲೇ ಇಲ್ಲವೇ? ಹೆತ್ತಮ್ಮನ ಹೃದಯ ಕೂಡಾ ಇಷ್ಟು ಕಠೋರವಾಗಬಲ್ಲುದೇ? ಅಮ್ಮನೇ ಹೀಗಾದರೆ ತನ್ನವರು ಎಂದು ಹಾರ್ದಿಕವಾಗಿ ಎದೆಗಪ್ಪಿಕೊಳ್ಳಬಲ್ಲವರು ಈ ಲೋಕದಲ್ಲಿ ಇನ್ಯಾರಿರಲು ಸಾಧ್ಯ? ತನ್ನ ದುರದೃಷ್ಟಕ್ಕೆ ತಾನೇ ಮರುಕಪಡುತ್ತಿರುವವನಂತೆ ಜಗದೀಶನ ಕಣ್ಣುಗಳಿಂದ ಕಂಬನಿಯ ಹನಿಗಳು ಉರುಳುರುಳಿ ಕೆನ್ನೆ ತೋಯಿಸುತ್ತಿದ್ದುವು. ಎಲ್ಲಾ ಕಳೆದುಕೊಂಡ ಒಂದು ಅನಾಥ ಭಾವ ಮನದೊಳಗೆ ಹೊಕ್ಕು ಮನಸ್ಸನ್ನು ಶೂನ್ಯವಾಗಿಸಿತು. ಹಿರಿಮಗನಾಗಿ ತಾನು ಮಾಡಬೇಕಾಗಿದ್ದ ಕರ್ಮಾಂತರಗಳ ಹೊಣೆಯನ್ನು ಜನಾರ್ದನ ಹೊತ್ತುಕೊಂಡಿದ್ದಾನೆ. ತಾನು ಇದ್ದೂ ಇಲ್ಲದ ಲೆಕ್ಕ. ಯಾರಿಗೂ ಬೇಡದವನು. ಎಲ್ಲರ ದೃಷ್ಟಿಯಲ್ಲಿ ಸತ್ತುಹೋಗಿರುವವನು. ಯಾರ ಅಸ್ತಿತ್ವಕ್ಕೆ ಬೆಲೆ ಇಲ್ಲವೋ ಅವರ ಬದುಕಿಗೂ, ಸಾವಿಗೂ, ವ್ಯತ್ಯಾಸ ಏನುಂಟು? ಈಗಲೂ ತಾನು ಬರಬೇಕಾದ್ದೇನಿರಲಿಲ್ಲ. ತನ್ನ ನಿರೀಕ್ಷೆ ಯಾರಿಗೂ ಇರುವುದಿಲ್ಲ. ಫೋನ್ ಮಾಡಿದ ಜನಾರ್ದನ ನೇರವಾಗಿ ಹೇಳಿದ್ದೂ ಅದನ್ನೇ, 'ಅಮ್ಮ ಹೋಗಿಬಿಟ್ಟಳು ಜಗ್ಗಣ್ಣ, ಮೈಸೂರಿನಿಂದ ಸಣ್ಣಕ್ಕ ಬಂದಮೇಲೆ ಬಾಡಿ ತೆಗೀತೀವಿ. ಮತ್ತೆಲ್ಲಾ ಹತ್ತಿರದಲ್ಲೇ ಇದಾರಲ್ಲ...'

'ಬರ್ಲಾ ನಾನು?' ಕೇಳುವಾಗ ಜಗ್ಗನ ಗಂಟಲು ಬಿಗಿಯುತ್ತಿತ್ತು.

'ಥೋಥೋ, ನೂರಾರು ಜನ ಬಳಗದೋರು ಸೇರ್ಕಂತಾರೆ, ಗೊತ್ತುಂಟಲ್ಲ? ಎಲ್ರಿಗೂ ಹೇಳಿ ನಿಂಗೆ ಹೇಳ್ದೆ ಬಿಡೋಕೆ ಮನಸ್ಸು ಒಪ್ಲಿಲ್ಲ...' ಫೋನ್ ಸಂಪರ್ಕ ಕಡಿದಿತ್ತು. ಸುದ್ದಿ ತಿಳಿಸುವುದೊಂದು ತನ್ನ ಕರ್ತವ್ಯ ಎನ್ನುವಂತೆ ಗಡಿಬಿಡಿಯಲ್ಲಿ ವಿಷಯ ಹೇಳಿದ್ದ ತಮ್ಮ. ಶಾಸ್ತ್ರೋಕ್ತವಾಗಿ ಕರ್ಮಾಂತರಗಳು ನಡೆಯುವಲ್ಲಿ ತನ್ನ ಇರಸರಿಕೆ ಮುಜುಗರಕ್ಕೆ ಕಾರಣವಾಗಬಹುದು. ಆತಂಕವನ್ನೂ ಸೃಷ್ಟಿಸಬಹುದು. ಹೇಗೆ ಕರೆಯುತ್ತಾನೆ ತಮ್ಮ? ಆದರೂ ಸುದ್ದಿ ಗೊತ್ತಾದ ಮೇಲೆ ಹೊರಡದೆ ಇರಲಾಗದೆ ಚಡಪಡಿಕೆ ಶುರುವಾಗಿತ್ತು. ಯಾವುದೋ ಅವ್ಯಕ್ತಶಕ್ತಿ ತನ್ನನ್ನು ಕಟ್ಟಿ ಎಳೆತಂದಿದೆಯೆನ್ನುವಂತೆ ಇಲ್ಲಿಯವರೆಗೆ ಬಂದುಬಿಟ್ಟಿದ್ದಾನೆ ಜಗದೀಶ. ಋಣ ಅಂದರೆ ಇದೇ ಇರಬಹುದೇ?

* * *

ಮೂರು ಹೆಣ್ಣುಮಕ್ಕಳ ನಂತರ ಹುಟ್ಟಿದ ಅಪರೂಪದ ಮಗ ಜಗದೀಶ ಅಂದರೆ ಅಮ್ಮನ ಆರನೇ ಪ್ರಾಣ. ಅಮ್ಮನ ಅತಿ ಅತೀ ಅಕ್ಕರೆಯಲ್ಲಿ ಗುಜ್ಜುಗುಜ್ಜಾಗಿ ಮೈತುಂಬಿಕೊಂಡು ಬೆಳೆದವನಿಗೆ ಕೊಂಚ ಅಟ್ಟೆಗಾಲು. ಚಡ್ಡಿ ಹಾಕುತ್ತಿದ್ದ ಜಮಾನಾದಲ್ಲಿ ಈ ಊನಕಣ್ಣಿಗೆ ಎದ್ದು ಕಾಣುತ್ತಿತ್ತು. ಮೊಣಗಂಟಿನ ಕೆಳಗೆ ಸರೂತ ಇರದೆ ಬಿಲ್ಲಿನ ಆಕಾರಕ್ಕೆ ಬಗ್ಗಿಕೊಂಡ ಕಾಲುಗಳು ಉಳಿದವರಿಗೆ ಚಾಷ್ಟೆಯ ವಸ್ತುವಾಗಿತ್ತು. ಜಗ್ಗ ಅಂದರೆ ಫಕ್ಕನೆ ಗೊತ್ತಾಗದಿದ್ದವರಿಗೆ ಅಟ್ಟೆಗಾಲು ಜಗ್ಗ ಅಂದರೆ ಟ್ಯೂಬು ಹತ್ತಿಕೊಂಡು ಬಿಡುತ್ತಿತ್ತು. ಇದಕ್ಕೆ ಅಮ್ಮ ಒಂದು ಸಕಾರಣ ಕೊಡುತ್ತಿದ್ದಳು. ಜಗ್ಗ ಹುಟ್ಟಿದ ಕಾಲಕ್ಕೆ ಅವರ ಮನೆಯಲ್ಲಿ ಸಣ್ಣಪುಟ್ಟ ತ್ಯಾಪೆ ಕೆಲಸ ನಡೆಯುತ್ತಿತ್ತು. ವರಲೆ ಹಿಡಿದು ಲಡ್ಡಾದ ಮನೆಯ ಕಿಟಕಿ, ಕಂಬ, ಬಾಗಿಲುಗಳ ರಿಪೇರಿಗೆ ಬಂದಿದ್ದ ಲಕ್ಷ್ಮಣಾಚಾರಿ ಆಗಿನ್ನೂ ಅಂಬೆಗಾಲಿಡುತ್ತಿದ್ದ ಜಗ್ಗನಿಗೆ ಮರದಚಕ್ರ ಜೋಡಿಸಿದ ತಳ್ಳುವ ಒಂದು ಕೈಗಾಡಿ ಮಾಡಿಕೊಟ್ಟಿದ್ದ. ಜಗ್ಗನನ್ನು ಎತ್ತಿ ನಿಲ್ಲಿಸಿ, ಗಾಡಿಯನ್ನು ಅವನ ಪುಟ್ಟ ಮುಷ್ಟಿಗಳಲ್ಲಿ ಹಿಡಿಸಿ, ಮೇಲೆ ತಮ್ಮ ಕೈಯಾಸರೆ ಕೊಟ್ಟು, ಗಾಡಿಯನ್ನು ತಳ್ಳುತ್ತಾ ತಮ್ಮನನ್ನು ನಡೆಸಿಕೊಂಡು ಹೋಗುವುದೆಂದರೆ ಅಕ್ಕಂದಿರಿಗೆ ಮೋಜು. ಜಗ್ಗನಿಗೆ ಖುಷಿ. ಹೀಗೆ ಊರಿಗೆ ಮುಂಚೆ ಹತ್ತು ತಿಂಗಳು ತುಂಬುವುದರಲ್ಲಿ ನಡೆದಾಡಲು ಕಲಿತ ಜಗ್ಗ ಕೂರುವುದು ಬರದಿದ್ದರೂ ನಡೆಯುವುದರಲ್ಲಿ ಪ್ರವೀಣನಾಗಿಬಿಟ್ಟ. ನಿದ್ದೆಯಿಂದ ಎದ್ದ ಅಂದರೆ ಇಡೀ ದಿನ ಓಡಾಡಿಕೊಂಡಿರಬೇಕು, ಇಲ್ಲಾ ಯಾರಾದರೂ ಎತ್ತಿಕೊಂಡು ಅವನ ಪುಟ್ಟಕಾಲುಗಳಿಗೆ ವಿಶ್ರಾಂತಿ ಕೊಡಬೇಕು. 'ಆಗೆಲ್ಲಾ ತಮಾಷಿ ಅನ್ನಿಸ್ತಿತ್ತು. ಆಮೇಲೆ ಬುದ್ಧಿ ಬಂತು. ಬೆಳೆಯೋಕೆ ಮುಂಚೆ ಕಾಲಿನ ಎಳೇಮೂಳೆಗಳ ಮೇಲೆ ದೇಹದ ಭಾರ ಬಿದ್ರೆ ಅಟ್ಟೆಗಾಲು ಆಗ್ದೆ ಮತ್ತೇನಾಗುತ್ತೆ?' ಎನ್ನುತ್ತಾ ವಹಿಸಿಕೊಳ್ಳುತ್ತಿದ್ದಳು ಅಮ್ಮ. ಇರಬಹುದೇನೋ, ಜಗ್ಗನಿಗೆ ಗೊತ್ತಿಲ್ಲ.

ಜಗ್ಗನಿಗೆ ಐದು ತುಂಬುವ ಹೊತ್ತಿಗೆ ಮನೆಯಲ್ಲೊಬ್ಬ ದಾಯಾದಿ ಹುಟ್ಟಿಕೊಂಡ. 'ದೇವರು ಫಲ ಕೊಟ್ಟಿದ್ದು ಮುಗೀತು' ಎಂದು ಅಮ್ಮ ಅಂದುಕೊಂಡಿದ್ದಳಂತೆ. ಎಲ್ಲಾ

ಕ್ಕಳಿಗೂ ಎರಡೆರಡು ವರ್ಷಗಳ ಅಂತರ. ಜಗ್ಗ ುಟ್ಟಿದ ಮೇಲೆ ಈ ನಿಯಮ ತಪ್ಪಿತ್ತು. 'ಖೈದಾಯ್ತು' ುದುಕೊಳ್ಳುವಾಗ ಮತ್ತೆ ಬಸಿರು ಬಂತು. ಗಂಡು ಮಗು ುಟ್ಟಿತು. ಅದುವರೆಗೆ ಎಲ್ಲರ ಹತ್ತಿರ ಮುದ್ದು ಾಡಿಸಿಕೊಂಡು ಮನೆಯ ಮಹಾರಾಜನಂತಿದ್ದ ಜಗ್ಗನಿಗೆ ೊಟ್ಟೆಯೊಳಗೆ ಜೀರಿಗೆಮೆಣಸು ನುರಿದ ಹಾಗಾಗಿರಬೇಕು. ಾಯಾದಿ ಥರ ಅದೆಷ್ಟು ಕಾಡ್ತಿದ್ದೆ ಅಂತ? ನಿನ್ನ ಯಿಂದ ಅವನನ್ನ ಕಾಪಾಡೋದ್ರಲ್ಲಿ ಕಣ್ಣೀರು ಕಪಾಳಕ್ಕೆ ರಿತ್ತು. ಒಂದು ವರ್ಷ ಜಾಸ್ತಿ ಮಾಡಿ ಇಸ್ಕೂಲಿಗೆ ೂಡಿದ್ದು ಮತ್ತೆಂತಕ್ಕೆ ಅಂತ ತಿಳಿದಿದ್ದಿ?' ಅಮ್ಮ ಹಳೆಯ ನಪುಗಳನ್ನು ಕೆದಕುತ್ತಾ, ನೆಗಾಡುತ್ತಾ, ಆಗೀಗ ೇಳುತ್ತಿದ್ದ ಮಾತುಗಳು ಇವತ್ತಿಗೂ ಜಗ್ಗನಿಗೆ ಮರೆತಿಲ್ಲ.

ಮನೆಯಲ್ಲಿ ದಿನಾ ಬೆಳಿಗ್ಗೆ ಗಂಜಿ ಊಟ. ಉಪ್ಪು, ುಪ್ಪ ಸೇರಿಸಿ ಕಲೆಸಿದ ಬಿಸಿಗಂಜಿಯನ್ನು ತೋರುಬೆರಳಲ್ಲಿ ುಡಿಉಪ್ಪಿನಕಾಯಿರಸ ನೆಕ್ಕುತ್ತಾ, ಸೊನೆಮಿಡಿಯನ್ನು ಟ್ಟನೆ ಕುಡಿಯುತ್ತಾ, ಸುರಿದು ಸುರಿದು ಉಣ್ಣುವಾಗ ಮ್ಮ, 'ಇನ್ನೊಂಚೂರು, ಮತ್ತೊಂಚೂರು' ಎಂದು ತ್ತಾಯಿಸಿ ಬಾಳೆಎಲೆಗೆ ಬಡಿಸುತ್ತಿದ್ದಳು. 'ಜಗ್ಗನಿಗೆ ತುಪ್ಪ ಾಸ್ತಿ ಹಾಕ್ತೆ' ಎನ್ನುವುದು ಸಣ್ಣಕ್ಕನ ರಗಳೆ. 'ಹೌದು ಣೇ, ನೀನು ನನ್ನ ಸವತಿ ಮಗಳು ನೋಡು, ಭೇದ ೂಡ್ದೆ ಇರ್ತೀನಾ?' ಅಮ್ಮ ಸಿಟ್ಟು ಮಾಡುತ್ತಿದ್ದಳು. ಧ್ಯಾಹ್ನದ ಬಿಡುವಿನಲ್ಲಿ ಇಸ್ಕೂಲಿನಲ್ಲಿ ಉಣ್ಣಲು ಗಂಜಿ ೂರ್ತಿ ಬೆಂದು ಕರಗುವ ಮುಂಚೆ ಸೌಟಿನಿಂದ ತಿಳಿ ಸಿದು ಬಸಿದು ತೆಗೆದ ಅನ್ನ. ಅಲ್ಯುಮಿನಿಯಂ ್ಯರಿಯರ್‌ನ ಮೊಸರನ್ನ ಮಳೆಗಾಲ, ಚಳಿಗಾಲಗಳಲ್ಲಿ ಿಸಿನಂತೆ ಕೊರೆಯುತ್ತಾ, ಬೇಸಿಗೆಯಲ್ಲಿ ಹಳಸುತ್ತಾ, ುವ್ವೇ...' ಅನ್ನಿಸುತ್ತಿತ್ತು. ವಿಧಿ ಇಲ್ಲ. ಮನೆಯಿಂದ ್ಕೂಲಿಗೆ ಮೂರುಮೈಲಿ ದೂರ. ಜಗ್ಗನ ಅಕ್ಕಂದಿರು ಮ್ಮತಮ್ಮ ಶೋಕಿಗೆ ತಕ್ಕಂತೆ ಒಂದೋ, ಎರಡೋ ಜಡೆ ೆಣೆಸಿಕೊಂಡು, ಬಾಳೆನಾರಿನಲ್ಲಿ ಸುರಿದ ರಂಜದ ಹೂವಿನ ೂಲೆಯನ್ನೋ, ನೇಯ್ದ ಮಲ್ಲಿಗೆಯ ದಂಡೆಯನ್ನೋ, ುಡಿದು ಘಮಘಮಿಸುತ್ತಾ ಇಸ್ಕೂಲಿಗೆ ಹೊರಡುತ್ತಿದ್ದ ಂಭ್ರಮವೇ ಸಂಭ್ರಮ. ಜಗ್ಗ ಕಡಿಮೆ ಇರಲಿಲ್ಲ. ಹಣೆಗೆ ಳಿಯುವಂತೆ ಕೊಬ್ಬರಿಎಣ್ಣೆ ಮೆತ್ತಿಕೊಂಡು, ನುಣ್ಣಗೆ ಲೆಬಾಚಿಕೊಂಡು, ಹುಬ್ಬಿನ ಮಧ್ಯೆ ಅಕ್ಷತೆಯ ಬೊಟ್ಟು ಟ್ಟುಕೊಳ್ಳುತ್ತಿದ್ದ. ಜಗ್ಗನಿಗೆ ಯಾವತ್ತೂ ಅಕ್ಕಂದಿರೊಡನೆ ನೋ ಮುನಿಸು. 'ಒಟ್ಟಿಗೆ ಹೋಗಿ ಒಟ್ಟಿಗೆ ಬನ್ನಿ. ಕಾಲಡಿ ೋಡ್ಕಂತಾ ಹೋಗಿ...' ಎನ್ನುವ ಅಮ್ಮನ ಉಪದೇಶ ುಣುಗೋಲು ದಾಟುವುದರಲ್ಲಿ ಗಾಳಿಯಲ್ಲಿ ಹಾರಿ ೋಗಿರುತ್ತಿತ್ತು. ಕಿವಿಯಲ್ಲಿ ಗಾಳಿ ಹೊಕ್ಕ ಕರುವಿನ ಹಾಗೆ ುಂದೆ ಮುಂದೆ ಓಡುತ್ತಿದ್ದ. ತಿರಿಯಲು ಬರುವ ಾಲಕ್ಕಿಯೋ, ಗೋಸಾಯಿಯೋ, ದಾರಿಯಲ್ಲಿ ದುರಾದರೆ ಮಾತ್ರ ಜಗ್ಗನಿಗೆ ಮೈ ಬೆವರುತ್ತಿತ್ತು. ಹಿಂದೆ ಡಿ ಬಂದು ಅಕ್ಕಂದಿರನ್ನು ಸೇರಿಕೊಳ್ಳುತ್ತಿದ್ದ.

ಸಂಜೆ ಮನೆಗೆ ಬರುವಾಗ ಎಷ್ಟು ಹುರುಪು, ಏನು ುಮೇದು. ಓಡೋಡುತ್ತಾ ಮನೆ ಸೇರಿಕೊಳ್ಳುವ ತವಕ. ೂಳು ಮೆತ್ತಿದ ಕಾಲುಗಳು, ಬೆವರಿ ಅಂಟಂಟಾದ ಮುಖ, ೈ. ಬಚ್ಚಲ ಹಂಡೆಯ ಬಿಸಿನೀರಿನಲ್ಲಿ ಆಚೆಕಾಲಿಗೊಂದು ಂಬಿಗೆ ಈಚೆಗಾಲಿಗೊಂದು ತಂಬಿಗೆ ನೀರು ಸುರಿದು ೊಂಡು ಒಳಗೆ ಬಂದರೆ ಅಮ್ಮನ ವಿಚಾರಣೆ, 'ಸಮಾ ಕೈಕಾಲು ತೊಳ್ಕಂಡಿದ್ದೇನೋ? ಹಿಮ್ಮಡಿ ನೆಂದಿತ್ತಾ? ಇಲ್ದಿದ್ರೆ ಶನಿ ಹಿಡ್ಕಂತಾನೆ, ಗೊತ್ತುಂಟಲ್ಲ?'

'ಓಹೋ..' ತಲೆ ಜೋರಾಗಿ ವಲೆದಾಡುತ್ತಿತ್ತು. ಹೌದೋ, ಸುಳ್ಳೋ ಪರೀಕ್ಷೆ ಮಾಡಲು ಅಮ್ಮನಿಗೆ ಪುರುಸೊತ್ತಿರುತ್ತಿರಲಿಲ್ಲ. ಕೊಟ್ಟಿಗೆ ಕೆಲಸ, ಮನೆ ಕೆಲಸ, ಮಕ್ಕಳ ಕೆಲಸ, ಎನ್ನುತ್ತಾ ಬುಗುರಿಯಂತೆ ಸುತ್ತುತ್ತಿರುತ್ತಿದ್ದಳು ಅಮ್ಮ. ಆದರೂ ಹಸಿದ ಮಕ್ಕಳು ಮನೆಗೆ ಬರುವ ಹೊತ್ತಿಗೆ ಬಿಸಿಬಿಸಿ ಊಟ ಸಿದ್ಧ. ಮೂರುಸಂಜೆಗೆ ರಾತ್ರಿಯ ಊಟ ಮುಗಿದೇಹೋಗಿ, ಓದುವವರು ಲಾಟೀನು ದೀಪದ ಬೆಳಕಲ್ಲಿ ಸುತ್ತ ಕೂತು ಮಣಮಣ ಓದಿಕೊಳ್ಳುತ್ತಾ, ಬರೆಯುವವರು ಸ್ಲೇಟಿನ ಮೇಲೆ ಕರಪರ ಬರೆದುಕೊಳ್ಳುತ್ತಾ, ಎಂಟು ಘಂಟೆ ಅನ್ನುವ ಹೊತ್ತಿಗೆ ಕುಗುರಿ ಬೀಳುವ ಹಾಗಾಗಿರುತ್ತಿತ್ತು. ಹಾಸಿಗೆ ಕರೆಯುತ್ತಿತ್ತು.



ಆದರೆ ಯಾವತ್ತಾದರೂ ಮಲಗಿದ ತಕ್ಷಣ ನಿದ್ದೆ ಮಾಡಿದ್ದುಂಟಾ? ಕತೆ ಅಂದ ಕೂಡಲೆ ಕಿವಿ ನೆಟ್ಟಗಾಗುತ್ತಿತ್ತು. ದೊಡ್ಡಕ್ಕ ಯಾವುದೋ ಕತೆ ಶುರು ಮಾಡುತ್ತಿದ್ದಳು. ಇಸ್ಕೂಲಿನಲ್ಲಿ ಯಾರೋ ಹೇಳಿದ ಕತೆ, ಭಾನುವಾರದ ಪೇಪರಿನಲ್ಲಿ ಓದಿದ ಮಕ್ಕಳ ಕತೆ, ಅಥವಾ ನಾಗರಾಜ ಮೇಷ್ಟ್ರು ವಾರಕ್ಕೊಮ್ಮೆ ಲೈಬ್ರರಿಯಿಂದ ಕೊಡುತ್ತಿದ್ದ ಕತೆ ಪುಸ್ತಕದ ಕತೆ. ಕತೆ ಕೇಳುತ್ತಾ, ಕೇಳುತ್ತಾ, 'ಬಾಯಿ ಮುಚ್ಕೊಂಡು ಬಿದ್ಗಂತೀರೋ, ಇಲ್ರೋ? ನಡುರಾತ್ರಿ ಆಗುತ್ತೆ ಈಗ...' ಆಚೆಕೋಣೆಯಲ್ಲಿ ಮಲಗಿರುವ ಅಮ್ಮನ ಗದರಿಕೆ. ಅಮ್ಮ ಉಟ್ಟು ಹರಿದ ಮೆತ್ತನೆಯ ಹತ್ತಿ ಸೀರೆ ಹಾಸಿದ ಹಳೆಯ ಲೇಪು, ತಲೆಯ ಎಣ್ಣೆ ಕುಡಿದು ಮಣಕುಗಟ್ಟಿದ್ದ ದಿಂಬು, ಅಲ್ಲಲ್ಲಿ ಒತ್ತುತ್ತಿದ್ದ ಲೇಪಿನೊಳಗಿನ ಹತ್ತಿಯ ಗಂಟುಗಳು, ಹೊದೆದ ಕಂಬಳಿ ಚುಚ್ಚದಂತೆ ಅದರ ಒಳಮೈಗೆ ಹಳೆಯ ಬೆಡ್‌ಶೀಟನ್ನು ಸರಿಯಾಗಿ ಜೋಡಿಸಿ ಕೊಡುತ್ತಿದ್ದ ಸಣ್ಣಕ್ಕ, ಗೋಡೆಯ ಮೂಲೆಯಲ್ಲಿ ಮೊಳೆಗೆ ಸಿಕ್ಕಿಸಿರುತ್ತಿದ್ದ, ನಂದಾದೀಪದಂತೆ ಗಾಜಿನ ಪುಟ್ಟ ಬುರುಡೆಯೊಳಗೆ ಅಲುಗದೆ ಉರಿಯುತ್ತಿದ್ದ ಲ್ಯಾಂಪು, ಉಸಿರಾಟದ ಸದ್ದು ನಿಧನಿಧಾನವಾಗಿ ದೀರ್ಘವಾಗುತ್ತಾ ನಿದ್ದೆ ಮೆಲ್ಲಮೆಲ್ಲಗೆ ತೆಕ್ಕೆಯೊಳಗೆ ಸೆಳೆದುಕೊಳ್ಳುತ್ತಿದ್ದ ಸುಖವೇ ಸುಖ. ಯಾವುದೇ ಅಭದ್ರತೆ, ಆತಂಕ, ಗೊಂದಲಗಳಿಲ್ಲದ ಪರಮಸುಖ.

* * *

ಜಗದೀಶನಿಗೆ ಓದು ತಲೆಗೆ ಹತ್ತಲಿಲ್ಲ ಅಂದರೆ ಅರ್ಥಂಬರ್ಥ ಹೇಳಿದ ಹಾಗೆ. ಅವರ ಮನೆಯಲ್ಲಿ ಯಾರಿಗೂ ಸರಸ್ವತಿ ಒಲಿಯಲಿಲ್ಲ ಅಂದರೆ ಪೂರ್ತಿ ಹೇಳಿದ ಹಾಗೆ. ಇದರ ಬಗ್ಗೆ ಅಪ್ಪ, ಅಮ್ಮನಿಗೆ ತಕರಾರಿಲ್ಲ. ಅದೊಂದು ದೊಡ್ಡವಿಷಯ ಅನಿಸಲೂ ಇಲ್ಲ. ಎಸ್ಸೆಲ್ಸಿ ದಾಟಿ ಜನಾರ್ದನ ಒಬ್ಬನನ್ನು ಬಿಟ್ಟರೆ ಮತ್ತೆ ಯಾರೂ ಮುಂದಕ್ಕೆ ಹೋಗಲಿಲ್ಲ. ಅವನೂ ಎಡವದೆ ಹೋದವನೇನಲ್ಲ.

ವರ್ಷಕ್ಕೊಂದು ಎನ್ನುವ ಹಾಗೆ ಇಬ್ಬರು ಅಕ್ಕಂದಿರಿಗೆ ಮದುವೆ ಆಯ್ತು. ಇಬ್ಬರಿಗೂ ಹಳ್ಳಿ ಮನೆ. ಸಣ್ಣವಳಿಗೆ ಪೇಟೆ ಅಂದರೆ ಏನೋ ಮೋಹ. ಗಂಡನ ಜೊತೆ ದಿನಾ ವಾಕಿಂಗು, ಹೋಟೆಲು, ಸಿನಿಮಾ, ಪೇಟೆಯ ಜೀವನ ಅಂದರೆ ಸ್ವರ್ಗ ಎನ್ನುವ ಭ್ರಮೆ. 'ಹಳ್ಳಿಮನೆಗೆ ಜಾತಕ ಕೊಡೋದು ಬೇಡ' ಎಂದು ಹಟ ಮಾಡಿದಳು. ಹೀಗಾಗಿ ಅವಳ ಮದುವೆ ಸ್ವಲ್ಪ ಮುಂದೆ ಹೋಯ್ತು. 'ಆಗ್ಲೇ ಇಪ್ಪತ್ಮೂರಾಗಿ ಹೋಯ್ತು...' ಎಂದು ಅಮ್ಮ ಕೊರಗು ಹಚ್ಚಿಕೊಂಡಿದ್ದಳು. ಈ ಅಕ್ಕನ ಬೆನ್ನಿಗೆ ನಿಂತವನು ಜಗದೀಶ. ಅವಳ ಆಸೆಗೆ ತಕ್ಕಂತವನೊಬ್ಬನನ್ನು ಹುಡುಕುವ ಉಮೇದಿನಲ್ಲಿ 'ಹೀಗೊಬ್ಬ ಹುಡುಗ ಇದ್ದಾನೆ...' ಎಂದು ಸುದ್ದಿ ಬಂದಲ್ಲಿಗೆ ತಾನೇ ಜಾತಕ ಕೊಟ್ಟು, ಕೊನೆಗೂ ಬ್ಯಾಂಕ್ ನೌಕರಿಯಲ್ಲಿದ್ದವನೊಬ್ಬನನ್ನು ತಲಾಷು ಮಾಡಿದ್ದ. ವರದಕ್ಷಿಣೆಗೆಂದು ಒಂದಿಷ್ಟು ಹಣ ಕೈಬಿಟ್ಟಿತ್ತು. ಅಡಿಕೆಮಂಡಿಯಲ್ಲಿ ಸಾಲ ಆಗಿತ್ತು. ಆದರೇನಂತೆ? ಅವಳ ಕಣ್ಣಮಿನುಗಿನ ಎದುರು ಅದು ಯಾವ ಮಹಾ ಲೆಕ್ಕ? ಬ್ಯಾಂಕಿನಲ್ಲಿ ಗುಮಾಸ್ತ ಆಗಿದ್ದವನು ಅಲ್ಲಿನ ಪರೀಕ್ಷೆಗಳನ್ನು ಪಾಸು ಮಾಡಿಕೊಂಡು ಅಧಿಕಾರಿ ಹುದ್ದೆಗೇರಿ, ಮೂರ್ಮೂ ಮೂರು ವರ್ಷಕ್ಕೆ ಊರು ಬದಲಾಯಿಸುತ್ತಾ, 'ಸುಮಾರು ಊರು ನೋಡ್ಬೋದು ಕಣೋ. ಇದ್ದಲ್ಲೇ ಗೂಟ ಬಡಿದುಕೊಂಡಂತೆ ಇರಬೇಕಾಗಿಲ್ಲ' ಎಂದು ಸಣ್ಣಕ್ಕನಿಗೆ ಖುಷಿ. 'ಮಜಾ ಮಾಡು' ಎನ್ನುವಾಗ ಜಗದೀಶನಿಗೂ ಉಬ್ಬು.

ಹೆಣ್ಣುಮಕ್ಕಳು ಮದುವೆಯಾಗಿ ಪುರ್ರನೆ ಹಾರಿಹೋದರು. ತಮ್ಮರಾಯ ಮುಂದಿನ ಓದಿಗೆಂದು ಪೇಟೆಯ ಹಾಸ್ಟೆಲು ಸೇರಿಕೊಂಡ. ಮನೆಯಲ್ಲಿ ಅಪ್ಪ, ಅಮ್ಮ, ಜಗ್ಗ, ಮೂರೇ ಜನ. ಅಪ್ಪ ಯಜಮಾನಿಕೆಯ ಪಟ್ಟವನ್ನು ಹಿರಿಮಗನಿಗೆ ಕಟ್ಟಿದರು. ಜಗ್ಗ ತನ್ನ ರಾಜ್ಯಭಾರವನ್ನು ಹುರುಪಿನಿಂದ ಆರಂಭಿಸಿದ. ತೋಟ, ಗದ್ದೆ ಎಂದರೆ ಅವನಿಗೆ ಅಯಸ್ಕಾಂತದ ಸೆಳೆತ. ಮೈಮುರಿದು ದುಡಿಯಲು ಅಗತ್ಯವಾದ ದೇಹದಾರ್ಢ್ಯವೂ ಇದೆ. ಜನಾರ್ದನ ಹಾಗಲ್ಲ. ಇವನಿಗೆ ಹೋಲಿಸಿದರೆ ನಿತ್ರಾಣಿ. ಜೊತೆಗೆ ಸಣ್ಣಕ್ಕನ ಗಾಳಿ ಇವನಿಗೂ ಬೀಸಿದೆಯೆನ್ನುವಂತೆ ಪೇಟೆಯ ಚಪಲ. 'ಇಬ್ಬಿಬ್ರು ಮನೇಲಿ ಹೊಕ್ಕೊಂಡು ಕಡಿಯೋಕೇನುಂಟು? ಓದ್ತೀಯಾದ್ರೆ ಓದು. ಒಂದು ಕೆಲಸ ಹುಡುಕ್ಕೊಂಡ್ರೆ ನಾಳೆಂದಿನ ನಿನಗೇ ಸುಖ' ಎನ್ನುವ ಅಪ್ಪನ ಬೆಂಬಲ. ಇರುವ ಜಮೀನು

ಒಂದು ಸಂಸಾರಕ್ಕೆ ಬೇಕಾದಷ್ಟು ಸಾಕು ಎನಿಸಿದರೂ ಎರಡು ಪಾಲಾದರೆ ಸಾಕೂಸಾಲದಾಗುತ್ತದೆ ಎನ್ನುವ ಸತ್ಯ ಜಗ್ಗನಿಗೆ ಗೊತ್ತು. ತಾನಂತೂ ಓದಲಿಲ್ಲ, ತಮ್ಮ ಓದಲಿ ಎಂದು ಜಗ್ಗ ಅವನನ್ನು ಪ್ರೋತ್ಸಾಹಿಸಿ ಕಳಿಸಿಕೊಟ್ಟಿದ್ದ. ಕುಂಟುತ್ತಾ, ಎಡವುತ್ತಾ, ಸಾಗುತ್ತಿತ್ತು ಓದು. ಈ ನಡುವೆ ಅವನ ಉಡುಗೆ, ತೊಡುಗೆಯ ಜರ್ಬು, ಠೀವಿ, ಕೊಂಚ ಅತಿಯಾಯ್ತು ಅನಿಸಿದರೂ ಜಗ್ಗ ವಿರೋಧದ ಮಾತಾಡಿರಲಿಲ್ಲ. ಪೇಟೆಯಲ್ಲಿ ಓದುತ್ತಿದ್ದಾನೆ ಅಂದಮೇಲೆ ಜೊತೆಯಲ್ಲಿರುವ ಇತರರಂತೆ ಇರಬೇಕಾಗುತ್ತದೆ. ಹಳ್ಳಿ ಮೂಲೆಯಲ್ಲಿರುವ ತನಗೆ ಇದೆಲ್ಲಾ ಅರ್ಥವಾಗುವುದಿಲ್ಲ ಎನ್ನುವ ಉದಾರತೆಯನ್ನು ಮೆರೆದು ನಿಜವಾದ ಅರ್ಥದಲ್ಲಿ ದೊಡ್ಡಣ್ಣ ಅನಿಸಿಕೊಂಡಿದ್ದ. 'ಇಲ್ಲೇನು ದುಡ್ಡಿನ ಗಿಡ ನೆಟ್ಟಿದೀವಾ ? ಖರ್ಚಿಗೂ ಒಂದು ಮಿತಿ ಇರ್ಬೇಕು' ಎಂದು ಅಪ್ಪನೇ ಸಿಟ್ಟು ಮಾಡಬೇಕೇ ವಿನಾ ಜಗ್ಗ ಬೈದವನಲ್ಲ. 'ತಲೆಮೇಲೆ ಏರಿಸ್ಕೊಂಡು ಮೆರೆಸ್ಬೇಡ. ಅವಾಗವಾಗ ಕಿವಿ ತಿರುಪಿ ಬುದ್ಧಿ ಹೇಳ್ತಿರ್ಬೇಕು' ಅಂತ ಅಮ್ಮ ಕೂಡಾ ಹೇಳುತ್ತಿದ್ದುದಿತ್ತು.

ಆ ಮನೆಯ ಉಳಿಕೆ ಮಕ್ಕಳಿಗೆ ಹೋಲಿಸಿದರೆ ಚಂದದಲ್ಲಿ ಜಗ್ಗನಿಗೆ ಕಡಿಮೆ ಮಾರ್ಕು. ಬಣ್ಣ ಸುಮಾರು. ಎತ್ತರಕ್ಕೆ ದಪ್ಪ ಹೆಚ್ಚೆಚ್ಚು. 'ನೀನೇ ಕೊಬ್ಬಿಸಿಟ್ಟಿದ್ದು. ಹಾಲು, ಮೊಸರು, ತುಪ್ಪದಲ್ಲಿ ಅದ್ದಿ ಇಟ್ರೆ ಬೊಜ್ಜು ಬರ್ದೆ ಸಾಯುತ್ತಾ?' ಮದುವೆಗೆ ಮುಂಚೆ ಸಣ್ಣಕ್ಕ ಜಗ್ಗನ ಮೇಲೆ ಸಿಟ್ಟು ಬಂದಾಗಲೆಲ್ಲಾ ಇಂತಾ ಮಾತು ಉದುರಿಸಿ ಅಮ್ಮನ ಮೇಲೆ ಗೂಬೆ ಕೂರಿಸುತ್ತಿದ್ದಳು. ಇಸ್ಕೂಲು ಕೈದಾಗಿದ್ದೇ ಆಗಿದ್ದು, ಬೊಜ್ಜು ಕರಗುತ್ತಾ ಬಂತು. ಕರಗದೆ ಮತ್ತೆಂತಾಗುತ್ತೆ? ಮನೆಯ ಮೂರು ಜನ ಖಾಯಂ ಕೆಲಸದಾಳುಗಳ ಜೊತೆ ಜಗ್ಗ ಅವರ ಸಮಕ್ಕೂ ಕತ್ತೆಯಂತೆ ಗೆಯ್ಯುತ್ತಿದ್ದ. ಊಟವೂ ಅದೇ ಪ್ರಮಾಣ. ಮನೆಗೆ ಬಂದ ಹೊಸಬರೆದುರು ಅವನಿಗೆ ಬಡಿಸಲು ಅಮ್ಮ ಕಣ್ಣೆಸರಾಗುತ್ತದೆಯೆಂದು ಹಿಂದೆಮುಂದೆ ನೋಡುತ್ತಿದ್ದಳು. ಕುಡಿಬಾಳೆಯೆಲೆಯ ಭರ್ತಿ ಹಬೆಯಾಡುವ ಅನ್ನ. ದೊಡ್ಡ ಸೌಟಿನಲ್ಲಿ ತುಂಬಿ ತುಂಬಿ ಬಡಿಸುವ ಮೇಲೋಗರ. ತಾನಲ್ಲದೆ ಮತ್ತೆ ಯಾರು ಬಡಿಸಿದರೂ ಜಗ್ಗನಿಗೆ ಹೊಟ್ಟೆ ತುಂಬುವುದಿಲ್ಲವೆಂದು ಅವನ ಅಮ್ಮನ ನಂಬಿಕೆ. ಮಕ್ಕಳೆಲ್ಲಾ ದೊಡ್ಡವರಾದ ಮೇಲೆ ಮನೆಯಲ್ಲಿ ಗಂಜಿ ... ಕಾರ್ಯಕ್ರಮ ನಿಂತುಹೋಗಿತ್ತು. ದಿನಾ ಬೆಳಿಗ್ಗೆ ... ಕಾವಲಿಯಿಂದ ಸೀದಾ ಬಾಳೆಲೆ ಸಿಗುಳಿಗೆ ಜ... ದೋಸೆ, ರೊಟ್ಟಿಗಳ ಲೆಕ್ಕ ಅಮ್ಮನೂ ಇಡುತ್ತಿರಲಿಲ್ಲ ... ಜಗ್ಗನೂ ಇಡುತ್ತಿರಲಿಲ್ಲ. ಜೋನಿಬೆಲ್ಲ, ಹೆರೆತುಪ್ಪ... ಜೊತೆ ಪೂಜೆ ಯಥಾಸಾಂಗವಾಗಿ, ಸಾವಕಾಶ... ನಡೆಯುತ್ತಿತ್ತು. 'ಇನ್ನೂ ಮುಗೀಲಿಲ್ಲೇನೋ ಸಿಂದು... ಮುಂದಿನ ಸರದಿಗೆ ಕಾದಿದ್ದ ಅಪ್ಪ ಬಾಯಿತಪ್ಪಿ ... ಮಾತಾಡಿದರೆ ಅಮ್ಮನಿಗೆ ಕೆಂಡದಂತಾ ಕೋಪ.

'ತಡೀರಿ ಮಾರಾಯ್ರಾ, ಹೊಟ್ಟೆ ತುಂಬಾ ತಿನ್ನೋ... ಬಿಡೋಲ್ಲಾಂತೀರಲ್ಲ, ಯಮಧರ್ಮರಾಯನ್ಸೈತಾ ಊಟಕ್ಕೆ ಕೂತೋರನ್ನ ಮಧ್ಯ ಎಬ್ಬಿಸಿ ಕರ್‍ಕೊಂಡು ಹೋಗಲ್ಲಂತೆ...' ಎನ್ನುತ್ತಾ ಹರಿಹಾಯುತ್ತಿದ್ದಳು. ಈ ಮಗ ಅಂದರೆ ಅಮ್ಮನಿಗೆ ಅದೇನು ಮುಚ್ಚಟೆಯೋ? 'ಜಗ್ಗನಿಗೆ ಅದೆಂದರೆ ಆಯ್ತು, ಜಗ್ಗನಿಗೆ ಇದೆಂದರೆ ಆಯ್ತು...' ದಿನಾ ಏನೋ ಒಂದು ವಿಶೇಷ. ಏನೋ ಒಂದು ಸಡಗರ. ಸಣ್ಣವನ ಬಗ್ಗೆ ಪ್ರೀತಿ ಇಲ್ಲ ಅಂತಲ್ಲ, ಆದರೆ

## ಸೂರ್ಯನ ಸಹಜಯಾನಿಕೆ

ಈಚೀಚೆಗೆ ತಡವಾಗಿಯೇ
ಮರಳುವುದ ಏಳುವುದ
ರೂಢಿಸಿಕೊಂಡಿದ್ದ ಸೂರ್ಯ
ದಿನಕಾದು ಕೇಳಿಯೇಬಿಟ್ಟೆ
ಹೊಡೆಸಿದ ಬೋರನೆಲ್ಲ ಆಗಲಿಸಿ
ಕೆರೆತೋಡಿ ಹೈಬ್ರಿಡ್ ಮೀನು ಬಿಡುವ
ಪ್ರಿಂಟ್‌ಔಟ್ ತೆಗೆಯುವುದರಲ್ಲೇ ತಲ್ಲೀನ
ಬಪ್ಪರೆ! ಬಲೆ... ಬಲೆ... ಚಿಪ್ಸ್-ಡಿಸ್ಕ್
ದಂದೆಗಿಳಿದಿದ್ದ ಸೂರ್ಯ
ಕೊಚ್ಚೆ ತುಂಬಿದ ರಸ್ತೆಗಿಳಿದು ಟೆಂಡರ್ ಕರೆವ
ಕಾಂಕ್ರೀಟ್ ಹಾಕುವ ಟಿಂಬರ್ ಹೊಡೆಸುವ
ಬಡಾವಣೆ-ಕಾಂಪ್ಲೆಕ್ಸ್-ಶೋರೂಮ್ ಕಟ್ಟುವ
ಹೆಕ್ಟೆರ್‌ಗಟ್ಟಲೆ ಜಾಗ ಕೇಳುವ
ಎಂದೆಲ್ಲ ತೊಡಗಿ ಇನ್‌ಫೋಸಿಸ್
ಬಗ್ಗೆ ಕೊರೆದೇ ಕೊರೆದ

ಇದ್ದದ್ದೇ ಬಿಡು ಸೂರ್ಯ
ಮನೆಯೊಳಗೆ ಮಕ್ಕಳನು ಮೀಯಿಸುವ
ಶಾಲೆಗೆ ಬಿಡುವ ತರಕಾರಿ ತರುವ
ಅಡುಗೆ ಮಾಡುವ ಅಮ್ಮಣ್ಣಿ ಅರೆ... ಅರೆ....
ಸರಕಾರಿ ಕೆಲಸಕ್ಕೆ ಹೋಗುವ
ಹೀಗೆ ಯಾರಿಗೆ ಹೇಳಬೇಕು
ಒಳ್ಳೆ ಗಾಳಿಗೂ ದುಡ್ಡುಕೊಡಬೇಕು
ಅವನಿಗೂ ಮನೆ ಇದೆಯೆಂದು
ನೆನಪಾದವನಂತೆ ಕಿಸೆ ಕೊಡವಿ
ಎನಿಟೈಮ್ ಮನಿ
ಕ್ರೆಡಿಟ್ ಕಾರ್ಡ್ ಎಲ್ಲ ಉದುರಿಸಿದ
ಪಕ್ಕ ನುಸಿರೋಗಕ್ಕೆ ತುತ್ತಾದ
ತೆಂಗಿನಮರದಂತೆ ಕಂಡ

ನೋಡಿಯೇ ನೋಡಿದ ಮೂಡ್ ಹೊತ್ತಿಸಿ
ಕೇಳಿಯೇ ಕೇಳಿದ ಹೇಗಿದ್ದೀಯೇ ಪೃಥ್ವಿ
ಬಾಂಬಿನದೆ ಸುದ್ದಿ ಹೆಣವಾದರು ಮಂದಿ
ಉರುವಲಿಗೆ ಯಾವ ರೂಪಕೋ...
ಉರಿ ಬದಲಾಗುತ್ತದೆಯೇ
ಹಳೆಯದಾದರೇನು ಪ್ರಶ್ನೆ
ಮಿಲೇನಿಯಂ ನಡಿಗೆಯ ಸದಾ ...
ಒಂಟಿ ಕಾಲ ಕುಣಿಸಿ ಗಿಟಾರ್ ಗೀ...
ಜಗತ್ತೇ ಹಳ್ಳಿಯಾಗುತ್ತಿರುವಾಗ
ಹೊತ್ತು-ಉರಿಯ ಹಂಗೇಕೆ
ಪೂರ್ವ ಪಶ್ಚಿಮ ಬಿಟ್ಟು ಉಳಿದಂ...
ಎಲ್ಲ... ಎಲ್ಲಾ ನಿನ್ನ ದಿಕ್ಕೆ
ರೈಮ್ಸ್ ಹಾಡಿ ಹತ್ತಿರ ಸೆಳೆದು
ಪಿಸುಗುಟ್ಟಿದ

ಚುನಾವಣೆ ಗೆದ್ದು ಅವಧಿಗೆ ಮಧ್ಯೆ
ಬರಲಾರೆ ಬರಲಾರೆನೆಂದು ಒಡ...
ವರುಣ ಸೂರ್ಯನಿಗೆ ಮಾತುಕೊ...
ಹೇಳಿಯೇ ಹೇಳಿದ
ಅಕ್ಕಿಯನು ತಗಡು ಡಬ್ಬದೊಳಗಿ...
ಹೊರಗಿಟ್ಟರೆ ಸಾಕು ಅನ್ನವಾಗುವ
ಮಾಯಾಜಾಲದ ಗುಟ್ಟಿನಲಿ...
ಮೋಹದ ಬದುಕು ಮರೆತ ಬಳಿ...
ತಾಣದ ಹಂಗು ಇನ್ಯಾಕೋ
ತಾಮ್ರದ ತಲೆಯಾಡಿಸಿ
ಹುಬ್ಬು ಕುಣಿಸಿ ಭುಜ ಏರಿಸಿ
ಸೂರ್ಯ ಹೊರಟೇಬಿಟ್ಟ



ಕವಿತಾ ರೈ ಬಿ. ಆರ್., 'ಜಯಶ್ರೀ ನಿಲಯ', ಶಾರದಾನಗರ, ಮದುರ ಅಂಚೆ, ಕೋಟೆಕರ ರಸ್ತೆ, ಮಂಗಳೂರು - [illegible]

ವನು ಜಗ್ಗನ ಥರ ಅಮ್ಮನ ಕಷ್ಟಕ್ಕೆ ಮರುಗುವ ಜೀವ ಲ್ಲ. ಸ್ವಾರ್ಥ ಜಾಸ್ತಿ. ಅಮ್ಮ ಇರುವುದೇ, ಇರಬೇಕಾದ್ದೇ ಗೆ ಎನ್ನುವ ಧೋರಣೆಯವನು. ಹಬ್ಬಹುಣ್ಣಿಮೆಯ ನವೋ, ಹೆಣ್ಣು ಮಕ್ಕಳ ಬಳಗ ಬಂದಾಗಲೋ, ಅಮ್ಮ ಉಗಿಗೆ ಕವಡೆ ಕಟ್ಟಿಕೊಂಡಂತೆ ದುಡಿಯುವಾಗ ಜಗ್ಗ ನ ಕೈಲಾದ ಕೆಲಸ ಮನೆಯಲ್ಲಿ ಮಾಡಿಕೊಡುತ್ತಿದ್ದ. ರುಗಟ್ಟಲೆ ಚಕ್ಕುಲಿಹಿಟ್ಟನ್ನು ಮಿದ್ದುಮಿದ್ದು ಹದವಾಗಿ ಬಿಸಿಕೊಡುವುದು, ಚಕ್ಕುಲಿ ಒತ್ತಿಕೊಡುವುದು, ಹಲಸಿನ ಪ್ಪಳ ಮಾಡುವಾಗ ಬೆಂದ ತೊಳೆಗಳನ್ನು ವರಳಲ್ಲಿ ಟ್ಟಿಕೊಡುವುದು, ಚಪ್ಪರ ಹತ್ತಿ ಒಣಗಿದ ಹಪ್ಪಳ, ಡಿಗೆ ಇಳಿಸಿಕೊಡುವುದು, ಹೀಗೇ ಎಂದು ಬೊಟ್ಟು ಮಾಡುವಂತಿಲ್ಲ. ಅಮ್ಮನ ಸೀರೆ ಒಗೆದುಕೊಡುವುದಕ್ಕೂ ಗ್ಗ ತಯಾರು. ಮನೆಗೆ ಅಪರೂಪಕ್ಕೆ ಬಂದ ಹೆಣ್ಣು ಕ್ಕಳಿಗೆ ಕೆಲಸ ಹಚ್ಚಲು ಹಿಂದೆಗೆಯುವ ಅಮ್ಮನಿಗೆ ಜಗ್ಗ ಂದರೆ ಸಲೀಸು. 'ಕಟ್ಟಿಕೊಳ್ಳೋಳು ಪುಣ್ಯ ಮಾಡಿದಾಳೆ ಮಾರಾಯಾ. ನಮ್ಮನೇಲೂ ಇದಾರೆ, ಕಾಲ ಮೇಲೆ ಕಾಲು ಕ್ಕೊಂಡು ಡೌಲು ಮಾಡ್ತಾರೆ' ಎಂದು ಅಕ್ಕಂದಿರು ಗ್ಗನನ್ನು ತಾರೀಫು ಮಾಡುತ್ತಿದ್ದರು. ಗೌರಿಹಬ್ಬದ ಾಗಿನ ಕೊಡುವುದಕ್ಕೋ, ಮತ್ತೆಂತಾದರೂ ವಿಶೇಷ ಟ್ಟಿಗೋ, ಜಗ್ಗ ಅಕ್ಕಂದಿರ ಮನೆಗೆ ಹೋದರೆ ಅಮ್ಮನಿಗೆ ಂಕು ಮುಚ್ಚಿದ ಹಾಗಾಗುತ್ತಿತ್ತು. ಜಗ್ಗ ಇದ್ದರೆ ಮನೆಯಲ್ಲಿ ಲಕ್ಷಣವಾಗಿ ಊಟ, ತಿಂಡಿ, ನಗು, ಮಾತು. ವನಿಲ್ಲದಿದ್ದರೆ ಎಲ್ಲಾ ಬೇಕಾಬಿಟ್ಟಿ. ಜಗದೀಶ ಎನ್ನುವ ಟ್ಟಿಗಾಲು ಜಗ್ಗ ಹೀಗೆ ಮನೆಯೊಳಗೆ, ಮನೆಯ ಹೊರಗೆ, ನಿವಾರ್ಯ, ಅವಿಭಾಜ್ಯ ಅಂಗವಾಗಿ ಪಾದರಸದ ಂಡಿನ ಹಾಗೆ ಚುರುಕಾಗಿ ಓಡಾಡಿ ಕೊಂಡಿರುತ್ತಾ ವನಿಗೆ ಇಪ್ಪತ್ನಾಲ್ಕು ತುಂಬಿ ಇಪ್ಪತ್ತೈದಕ್ಕೆ ಬಿತ್ತು. ಅವನಿಗೆ ಂದುವೆ ಮಾಡಿ ಚಂದ ನೋಡುವ ಕನಸನ್ನು ಹೆತ್ತವರು ಂತಲ್ಲಿ, ನಿಂತಲ್ಲಿ, ನಿದ್ದೆಯಲ್ಲಿ, ಎಚ್ಚರದಲ್ಲಿ ಕಾಣ ೊಡಗಿದರು. ಹೆಣ್ಣುಮಕ್ಕಳಿಗೆ ಹೇಳಿಟ್ಟರು, ಬಂಧುಬಳಗಕ್ಕೆ ೇಳಿಟ್ಟರು, ಪರಿಚಿತರು, ಸ್ನೇಹಿತರಿಗೆ ಹೇಳಿಟ್ಟರು. 'ನಮ್ಮ ಗ್ಗನಿಗೆ ಹೊಂದಿಕೆಯಾಗುವಂತಾ ಹುಡುಗಿ ಇದ್ದರೆ ೇಳಿ. ನೋಡಲು ಲಕ್ಷಣವಾಗಿದ್ದರೆ ಸಾಕು, ಹಳ್ಳಿಮನೆಗೆ ೊಂದಿಕೊಳ್ಳುವಂತಿದ್ದರೆ ಸಾಕು, ಒಳ್ಳೇ ಮನೆತನದ ುಣ ಹುಡುಗಿಯಾಗಿದ್ದರೆ ಸಾಕೇಸಾಕು...' ಹೆತ್ತವರು, ದರಲ್ಲೂ ಅಮ್ಮ, ಅಡಿಕೆ ಕೊಯ್ಲಿನ ಹೊತ್ತಿಗೆ ಭಾವನೆಗೆ ಬರುವ ಘಟ್ಟದ ತಗ್ಗಿನ ಸಂಭಾವನೆ ಟ್ಟರಾದಿಯಾಗಿ ಪರಿಚಯದ ಪ್ರತಿಯೊಬ್ಬರಿಗೂ ಹೀಗೆ ೇಳಿಹೇಳಿ ಮನದಟ್ಟು ಮಾಡಿಕೊಟ್ಟರು. ಜಗ್ಗನಿಗೆ ಇಂತಾ ಾತುಗಳು ಹಿತವಾಗಿದ್ದರೂ ಕೇಳಿಯೂ ಕೇಳದವನಂತೆ ನ್ನಷ್ಟಕ್ಕೆ ತಾನು ಕೊನೆ ಕುತ್ರಿ ಹಾಕುತ್ತಾ, ಅಡಿಕೆ ುಲಿಯುವವರ ಜೊತೆ ತಾನೂ ನಡುರಾತ್ರಿಯವರೆಗೆ ರಟುತ್ತಾ ಕೂತು ಅಡಿಕೆ ಸುಲಿಯುತ್ತಾ, ಕೊಳಗದಲ್ಲಿ ಲಿಬೇಳೆ ಅಳೆಯುವವರ ಲೆಕ್ಕವನ್ನು ಕೈ ಪುಸ್ತಕದಲ್ಲಿ ಪ್ಪಿಲ್ಲದೆ ಬರೆದುಕೊಳ್ಳುತ್ತಾ, ಬೆಳಗಾಮುಂಚೆ ಲುಬೇಗ ಎದ್ದು ಅಡಿಕೆ ಒಲೆಗೆ ಬೆಂಕಿ ಒಟ್ಟಿ ಚಿಟಚಿಟ ತಿ ಹಾರಿಸುತ್ತಾ ಉರಿಯುವ ಕುಂಟೆಗಳ ಬೆಂಕಿಯಲ್ಲಿ ಚಳಿ ಯಿಸಿಕೊಳ್ಳುತ್ತಾ, ಅಮ್ಮ ತಂದುಕೊಡುವ ಬಿಸಿಬಿಸಿಯ ಲ್ಲದ ಕಾಫಿ ಚಪ್ಪರಿಸಿ ಕುಡಿಯುತ್ತಾ, ಅಪ್ಪ ವಣಕದಿಂದ ೀಡಿ ಬುಟ್ಟಿಗೆ ತುಂಬಿಸುವ ಹದಾ ಚೊಗರಿನ ಕಂಪು ಸೂಸುವ ಬೆಂದ ಅಡಿಕೆಹೋಳುಗಳನ್ನು ಗೋಣಿಕೊಪ್ಪೆ ಧರಿಸಿದ ತಲೆಯಮೇಲೆ ಹೊತ್ತು ಚಪ್ಪರದ ತಟ್ಟಿಯ ಮೇಲೆ ಹರಗುತ್ತಾ, ಹೀಗೆ ಹೊಟ್ಟೆ ಕರುಳು ನಡುಗಿಸುವ ಚಳಿಗಾಲ ಎಂಬುದು ಯಾವ ಮಾಯೆಯಲ್ಲೋ ಕಳೆದುಹೋಗಿಬಿಟ್ಟರುತ್ತಿತ್ತು. ಅಡಿಕೆ ಕೊಯ್ಲು, ಗದ್ದೆ ಕೊಯ್ಲು, ಮಳೆಗಾಲದ ದಿನಸಿ ಖರೀದಿ, ಮಿಲ್ಲಿಗೆ ಭತ್ತ ಹೊಡೆದು ಅಕ್ಕಿ ಮಾಡಿಸು, ಇಂತಾ ವರ್ಷಂಪ್ರತಿಯ ಚಾಕರಿಯ ಏಕತಾನತೆಗಳ ನಡುವೆ ರಾತ್ರಿ ಹೊತ್ತು ಬೇಗ ನಿದ್ದೆ ಹತ್ತಗೊಡದೆ ಮಗ್ಗುಲಲ್ಲಿ ಮಲಗಲು ಬರಬಹುದಾದ ಒಬ್ಬಳ ಕುರಿತಾದ ಕನವರಿಕೆಗಳು ಜಗ್ಗನಿಗೆ ಕಚಗುಳಿ ಕೊಡುತ್ತಿದ್ದವು. ಎಲ್ಲೆಲ್ಲಿಂದಲೊ ಜಾತಕದ ಪ್ರತಿಗಳು ಅಕ್ಕಂದಿರ ಮೂಲಕ ಬಂದು ತಲುಪುತ್ತಿದ್ದುವು. ಜಾತಕಗಳ ಮೇಳಾಮೇಳಿ ನೋಡುವುದರಲ್ಲಿ, ಶುಭಕಾರ್ಯಕ್ಕೆ ಮುಹೂರ್ತ ಇಟ್ಟುಕೊಡುವುದರಲ್ಲಿ, ಅಪ್ಪನಿಗೆ ಪರಿಣತಿ ಇತ್ತು. ಮನೆಮಟ್ಟಿಗೆ ಈ ಕೆಲಸ ಅವನೇ ಮಾಡಿಕೊಳ್ಳುತ್ತಿದ್ದ. ಅಕ್ಕಪಕ್ಕ ಹೆಣ್ಣುಗಂಡಿನ ಜಾತಕ ಇಟ್ಟುಕೊಂಡು ಎಷ್ಟು ಗುಣ ಕೂಡಿಬರುತ್ತೆ ಎಂದು ಲೆಕ್ಕ ಹಾಕುವುದೆಂದರೆ ಅವನಿಗೆ ವಿಪರೀತದ ಹುಮ್ಮಸ್ಸು. ಮನೆಮಗನಿಗೆ ಹುಡುಗಿಯರ ಜಾತಕದ ಪ್ರತಿಗಳು ತಲುಪತೊಡಗಿದ್ದೇ ಅಪ್ಪನಿಗೆ ಅದೊಂದು ಖಾಯಂ ಉದ್ಯೋಗ ಆಯ್ತು. ತನ್ನ ಕೋಣೆ ಗೋಡೆಯ ಮೊಳೆಗೆ ಹುರಿಹಗ್ಗದ ಕೊಂಡಿ ಹಾಕಿ ನೇಲಿಸಿರುತ್ತಿದ್ದ ಪಂಚಾಂಗ ಹಿಡಿದು ಕೂತುಬಿಡುತ್ತಿದ್ದ. 'ಈ ಮನೆಯ ಹೆಣ್ಣು ಆದೀತು...' ಎಂದು ಮಂಡಿಗೆ ಮೆದ್ದು ಜಾತಕ ಕೂಡಿ ಬರದಿದ್ದರೆ ಅಪ್ಪ, ಅಮ್ಮ ಇಬ್ಬರಿಗೂ ಮುಖ ಚಪ್ಪೆ. 'ಬಿಡಿ ಅತ್ಲಾಗಿ, ಋಣಾನುಬಂಧ ಇಲ್ಲಾಂತಾಯ್ತಲ್ಲ' ಪರಸ್ಪರರಿಗೆ ಸಮಾಧಾನ. 'ಹೀಗೆ ಜಾತಕ, ಜಾತಕ ಅಂತ ಇವ್ರಿಬ್ರೂ ಕುಣೀತಿದ್ರೆ ಲಾಯ್ಪಾಗಿರೋ ಹುಡುಗಿ ಸಿಕ್ಕಿದ ಹಂಗೆ...' ಎಂದು ಜಗ್ಗನಿಗೆ ಅಸಮಾಧಾನ. ಕೊನೆಗೂ ಪ್ರಶಸ್ತ ಅನಿಸಿದ ನಾಲ್ಕು ಜಾತಕಗಳನ್ನು ಅಪ್ಪ ಆರಿಸಿಟ್ಟಿದ್ದ. ಒಂದೊಂದಾಗಿ ಹೆಣ್ಣು ನೋಡುವ, ಕಣ್ಣಿಗೆ ರಂಗಾದವಳನ್ನು ಒಪ್ಪಿಕೊಳ್ಳುವ ದಿನಗಳು ಹತ್ತಿರ ಬಂದಾಗ ಜಗ್ಗನಿಗೆ ಇಂತ ಥರ ಅಂತಿಲ್ಲ. ಕೋಣೆ ಬಾಗಿಲು ಮುಚ್ಚಿ, ಕನ್ನಡಿ ಮುಂದೆ ನಿಂತು, ವಿವಿಧ ಕೋನಗಳಿಂದ ಮುಖ ನೋಡಿಕೊಂಡಿದ್ದೇ ನೋಡಿಕೊಂಡಿದ್ದು. ಮೊಡವೆ ಗುಳ್ಳೆ ಚೂಟಿ ಬೀಜ ತೆಗೆದು ಹಸನು ಮಾಡಿಕೊಂಡಿದ್ದೇ ಮಾಡಿಕೊಂಡದ್ದು. 'ಇನ್ನೊಂಚೂರು ತಿಳಿಬಣ್ಣ ಇರ್ಬಾರ್ದಿತ್ತಾ?' ಎನ್ನುತ್ತಾ ಮರುಗಿದ್ದೇ ಮರುಗಿದ್ದು. ಅಮ್ಮ ಹಪ್ಪಳ, ಸಂಡಿಗೆಯ ಮಾತಾಡುತ್ತಿದ್ದಳು. ಮದುವೆಮನೆ ಎದ್ದರೆ ಗಂಡಿನ ಮನೆಯಲ್ಲಿ ಗಡದ್ದಾಗಿ ಒಂದು ಗಣಪತಿ ಹೋಮ ಮಾಡಿ ಬೀಗರೂಟ ಹಾಕದೆ ಇರುವುದಕ್ಕಾಗುತ್ತಾ? ಸೀಮೆಅಕ್ಕಿ ಸಂಡಿಗೆ ಅಂದರೆ ಬಾಯಲ್ಲಿಟ್ಟರೆ ಕರಗಬೇಕು. ನಮನಮೂನಿ ಬಣ್ಣ ಹಾಕಿ ಹೂಹೂವಿನ ಥರ ಮಾಡ್ತಾರಂತಪ್ಪಾ, ಅಮ್ಮನ ಬಾಯಲ್ಲಿ ಹಿಂಗಿದ್ದೇ ಮಾತು. ಜಗ್ಗನಿಗೆ ಮೈತುಂಬಾ ನವಿಲುಗರಿ ಆಡಿಸಿದಂತೆ ಜುಮು ಜುಮು, ನವಿರು. ಈಗ ಕಾಲವೇ ಬದಲಾಗಿದೆಯೋ ಅಥವಾ ಜಗ್ಗನ ಮುಖಲಕ್ಷಣ ಹಾಗಿತ್ತೋ? ಎರಡರಲ್ಲೂ ಸತ್ಯಾಂಶ ಇರಬೇಕು. ನೋಡಿದ ಹುಡುಗಿಯರನ್ನು ಜಗ್ಗ ಒಪ್ಪಿ ಆಯ್ಕೆ ಮಾಡುವ ಮಾತು ಹಾಗಿರಲಿ, ಯಾವ ಹುಡುಗಿಯೂ ಜಗ್ಗನನ್ನು ಮೆಚ್ಚಿಕೊಳ್ಳಲಿಲ್ಲ. ಮುಂಚಿನ ಕಾಲದ ಥರ ಮನೆತುಂಬಾ ಹೆಣ್ಣುಮಕ್ಕಳು ತುಂಬಿದ್ದು ಹೇಗೋ ಸಾಗಹಾಕಿ ಕೈ ತೊಳೆದುಕೊಂಡರೆ ಆಯ್ತು ಅನ್ನುವ ಕಾಲ ಅಲ್ಲ. ದೊಡ್ಡವರು ತೋರಿಸಿದವರ ಕೈಲಿ ಕಣ್ಣುಮುಚ್ಚಿ ತಾಳಿ ಬಿಗಿಸಿಕೊಳ್ಳುವ ಹುಡುಗಿಯರೂ ಇಲ್ಲ. ಪುರುಸೊತ್ತಿದ್ದರೆ ಹೀಗೆ ಏನೇನೋ ಕಾರಣ ಹುಡುಕುತ್ತಾ ಕೂರಬಹುದಾದರೂ ಅದರಿಂದ ಪ್ರಯೋಜನ ಏನಿಲ್ಲ. ಮೊದಲೇ ಸ್ವಲ್ಪ ಮಖೇಡಿಯಾಗಿದ್ದ ಜಗ್ಗ ಹೀಗೆಲ್ಲಾ ಮುಖಭಂಗ ಆಗತೊಡಗಿದ ಮೇಲೆ ಹುಡುಗಿ ನೋಡಲು ಹೋಗುವುದೆಂದರೆ ಹಿಂದೇಟು ಹಾಕಹತ್ತಿದ. 'ಗಂಡಿಗೊಂದು ಹೆಣ್ಣು ಬ್ರಹ್ಮಸೃಷ್ಟೀಲಿ ಇಲ್ದೇ ಇರಲ್ಲ, ಹುಡುಕ್ಬೇಕು ಅಷ್ಟೇ...' ಹೇಳಿಕೆ ಮಾತನ್ನು ಚೂರು ಹಿಂದುಮುಂದಾಗಿಸಿ ಅಮ್ಮ ಗಾಯಕ್ಕೆ ಮುಲಾಮು ಸವರುತ್ತಿದ್ದಳು. ಯಾರು ಏನೆಂದರೂ ಅಷ್ಟೇ, ಜಗ್ಗನಿಗೆ ಕೀಳರಿಮೆ ಶುರುವಾಗಿಬಿಟ್ಟಿತ್ತು. ಏಳೆಂಟು ಕಡೆಗಳಲ್ಲಾದ ಕಹಿ ಅನುಭವದ ನಂತರ, 'ನಂಗೆ ಮದುವೇನೇ ಬೇಕಾಗಿಲ್ಲ, ಬೇಕಾರೆ ನೀನೇ ಇನ್ನೊಂದು ಮಾಡ್ಕಾ...' ಎಂದು ಅಪ್ಪನಿಗೆ ದುರುಗುಟ್ಟುವವರೆಗೆ ಜಗ್ಗ ಬದಲಾದ. ಅಮ್ಮನ ಮೇಲೂ ವಿನಾಕಾರಣ ಸಿಟ್ಟು. ಯಾಕೆ ಅಂತ ಗೊತ್ತಿಲ್ಲದ ಸಿಟ್ಟು. ಒಂದುಸಲ ಮಜ್ಜಿಗೆಹುಳಿಗೆ ಬೂದುಗುಂಬಳ ಕತ್ತರಿಸಿ ಕೊಡಲು ಅಮ್ಮ ಕರೆದಿದ್ದಳು. ಬೂದುಗುಂಬಳ ಅಂದರೆ ಈಶ್ವರಲಿಂಗದ ಆಕಾರ. ಹೆಣ್ಣುಹೆಂಗಸರು ಅದನ್ನು ಹೆಚ್ಚಿ ಇಬ್ಭಾಗ ಮಾಡಬಾರದು ಎನ್ನುವುದು ಪದ್ಧತಿ. ಗಂಡಸರು ಯಾರಾದರೂ ಎರಡು ಹೋಳು ಮಾಡಿಕೊಟ್ಟ ಮೇಲೆ ಹೆಂಗಸರು ಹೆಚ್ಚಲು ಅಡ್ಡಿ ಇಲ್ಲ. ಅಪ್ಪ ಅವತ್ತು ಊರಲ್ಲಿರಲಿಲ್ಲ. ಹಿರಿಮಗಳ ಮನೆಗೆ ಹೋಗಿದ್ದ. ಜಗ್ಗ ಅಮ್ಮನ ಮಾತಿಗೆ ಕ್ಯಾರೇ ಅನ್ನದೆ ಕತ್ತಿ ಹಿಡಿದುಕೊಂಡು ತೋಟ ಇಳಿದು ಹೊರಟುಹೋಗಿದ್ದ. 'ಕಿವಿಕೆಪ್ಪನೋ ? ಹೇಳಿದ್ದು ಕೇಳಿಸ್ಲಿಲ್ವಾ ?' ಎಂದು ಅಮ್ಮ ಕರೆಯುತ್ತಿದ್ದುದ್ದು ಕೇಳಿದರೂ ಕೇಳದಂತೆ ಹೋಗಿದ್ದ. ಆ ಸಣ್ಣಸಂಗತಿ ನಡುಮಧ್ಯ ಇಪ್ಪುವರ್ಷ ಕಳೆದರೂ ಜಗ್ಗನಿಗೆ ಮರೆತುಹೋಗಿಲ್ಲ. ಕುಂಬಳಕಾಯಿ ನೋಡಿದಾಗಲೆಲ್ಲಾ ಥಕ್ಕನೆ ಅಮ್ಮನ ನೆನಪಾಗುವುದು ತಪ್ಪಿಲ್ಲ. ಈ ನೆನಪುಗಳು ಅನ್ನುವಂಥವು ಯಾವಯಾವುದರೊಡನೆ ತಳುಕು ಹಾಕಿ ಕೊಂಡಿರುತ್ತವೆ ಅನ್ನುವುದೇ ಒಂದು ಪರಮಾಶ್ಚರ್ಯ.

* * *

ಪೋಸ್ಟು ನೋಡಲು, ಪೇಪರು ತರಲು, ದಿನ ಹೆದ್ದಾರಿ ಬುಡಕ್ಕೆ ಹೋಗುತ್ತಿತ್ತು ಜಗ್ಗನ ಸವಾರಿ. ಕಾಗದ ಇದ್ದರೆ ಪೋಸ್ಟ್‌ಮೇಷ್ಟರ ಮನೆಯಿಂದ ಇಸಿದುಕೊಂಡು, ಬದಿಯ ಗೂಡಂಗಡಿಯಲ್ಲಿ ಏಜೆಂಟರು ಕೊಟ್ಟಿರುತ್ತಿದ್ದ ಅವತ್ತವತ್ತಿನ ಪೇಪರು ತೆಗೆದುಕೊಂಡು ಮೂರು ಸಂಜೆಯ ಹೊತ್ತಿನಲ್ಲಿ ಒಂದು ವಾಯುವಿಹಾರ ಅಭ್ಯಾಸ ಮಾಡಿಕೊಂಡಿದ್ದ ಜಗ್ಗ. ಶೇಷನಾಯ್ಕನ ಮಗಳು ದೇವಕಿ ಅವನಿಗೆ ಹೊಸಬಳೂ ಅಲ್ಲ. ಅಪ್ಪ ಇಲ್ಲದಿದ್ದಾಗ ಕೆಲವು ಸಲ ಅವಳೇ ಅಂಗಡಿಯಲ್ಲಿ ಕೂತಿರುತ್ತಿದ್ದಳು. ಪೇಪರು ಕೊಡುತ್ತಿದ್ದಳು. ತೀರಾ ಸುಮಾರಿಗಿದ್ದ ಹುಡುಗಿ. ಅದು ಹೇಗೋ ಇಬ್ಬರ ಹೃದಯಕ್ಕೂ ಏಕಕಾಲಕ್ಕೆ ಮದನ ಹೂಬಾಣ ಹೊಡೆದ. ಅಥವಾ ಯಾವ ಹೆಣ್ಣಿನ ಕಣ್ಣಲ್ಲೂ ತಾನು ಚೆಲುವಾಗಿ ಕಾಣುವುದಿಲ್ಲವೆಂಬ ಹೊಟ್ಟೆಬೇನೆ ಹಚ್ಚಿಕೊಂಡಿದ್ದ ಜಗ್ಗ

ಎದುರು ಸಿಕ್ಕ ಹುಡುಗಿಯರೆಲ್ಲರ ಕಣ್ಣುಗಳಲ್ಲಿ ಅದರ ಪರೀಕ್ಷೆ ಮಾಡುತ್ತಾ ಹೊರಟಿದ್ದರೂ ಇದ್ದಿರಬಹುದು. ದೇವಕಿ ಕಣ್ಣಿಗೆ ಕಣ್ಣು ಜೋಡಿಸಿದಳು. ಮುಸಿಮುಸಿ ನಕ್ಕಳು. ಶುರುವಾಯ್ತು ಒಂದು ಪ್ರೇಮ ಪ್ರಕರಣ. ಕದ್ದುಮುಚ್ಚಿ ಭೇಟಿ. ಬೆಕ್ಕು ಕಣ್ಣುಮುಚ್ಚಿಕೊಂಡು ಹಾಲು ಕುಡಿದರೆ ಲೋಕಕ್ಕೆ ಗೊತ್ತಾಗುವುದಿಲ್ಲವೇ? ಯಾರೋ ಚುಚ್ಚಿಕೊಟ್ಟರು. ಮನೆಯಲ್ಲಿ ದೊಡ್ಡ ಗಲಾಟೆ. ಅಕ್ಕಂದಿರು ಬಂದರು. ಗಂಡಂದಿರಿಗೆ ಸುಳ್ಳು ಸೂಕ್ಷ್ಮ ಬಿಟ್ಟುಕೊಡದೆ ಎಲ್ಲಾ ಅಲ್ಲಿಂದಲ್ಲಿಗೆ ಕೊನೆಗಾಣಿಸಲು ಅವರಿಗೆ ಅವಸರ. ಬುದ್ಧಿ ಹೇಳಿದ್ದೇ ಹೇಳಿದ್ದು, ಆಣೆ, ಭಾಷೆ ಹಾಕಲು ಅಂಗೈ ಒಡ್ಡಿದ್ದೇ ಒಡ್ಡಿದ್ದು. ಜಗ್ಗ ಇಷ್ಟು ಹೊತ್ತಿಗೆ ಹಿಂದಿರುಗಲಾರದಷ್ಟು ಮುಂದೆ ನಡೆದುಬಿಟ್ಟಿದ್ದ. ಒಂದು ಹುಡುಗಿಗೆ ಅನ್ಯಾಯ ಮಾಡಲು ಅವನ ಒಳ್ಳೆಯತನ ಸುತರಾಂ ಒಪ್ಪದೆ ಪಟ್ಟುಹಿಡಿದು ಕೂತುಬಿಟ್ಟಿದ್ದ. ಅಮ್ಮ ಕೈಯಾರೆ ಜೀವತೆಗೆದುಕೊಳ್ಳುವ ಮಾತಾಡಿದ್ದಳು. ಅಪ್ಪ ಬೆಪ್ಪುಬಡಿದಂತಾಗಿದ್ದ. ಮನೆ ಅನ್ನುವುದು ನಿಗಿನಿಗಿ ಕೆಂಡದಂತೆ ಸುಡುತ್ತಿರುವ ಈ ಹೊತ್ತಲ್ಲಿ ಮಾಟ, ಮಂತ್ರ, ತಂತ್ರ ಎಲ್ಲಾ ನಡೆದಿತ್ತು. ಲೇಪಿನ ಅಡಿ ಮಂತ್ರಿಸಿಟ್ಟಿದ್ದ ವಿಭೂತಿ ಪೊಟ್ಟಣವನ್ನು ಜಗ್ಗ ಗೊಬ್ಬರದ ಗುಂಡಿಗೆ ಬಿಸಾಕಿದ್ದ. ಅತ್ತ ದೇವಕಿಯ ಮನೆಯಲ್ಲೂ ಗಲಾಟೆ. 'ಭಟ್ರು ಬಗೆಯೋರ' ಸೊಕ್ಕಿನ ಕುರಿತು ಆಕ್ರೋಶ. ಒಂದುರಾತ್ರಿ ಹೇಳದೆ ಕೇಳದೆ ಇಬ್ಬರೂ ಮನೆಬಿಟ್ಟು ಪರಾರಿಯಾದರು. ಬೆಂಗಳೂರು, ಮೈಸೂರು ಅಂದರೆ ಪರಿಚಯದವರು ಸಿಗಬಹುದಾದ ಜಾಗ ಎಂದು ದಾವಣಗೆರೆಯ ದಿಕ್ಕನ್ನು ಜಗ್ಗ ಆರಿಸಿಕೊಂಡಿದ್ದ. ರಿಜಿಸ್ಟ್ರಿ ಮದುವೆ. ಹೋಟೆಲಿನಲ್ಲಿ ಲೋಟ ತೊಳೆದು ಬದುಕು ಮಾಡುತ್ತಾ, ಕ್ರಮೇಣ ಅವನ ನಿಯತ್ತಿನಿಂದ ಗಲ್ಲಾದ ಮೇಲೆ ಕೂರುವವರೆಗೆ ಬಡ್ತಿ ಸಿಕ್ಕಿ, ಈಗ ಆ ಹೋಟೆಲಿನವರದೇ ಒಂದು ಸ್ವೀಟ್‌ಸ್ಟಾಲಿನಲ್ಲಿ ಮೇಲ್ವಿಚಾರಕನಾಗಿದ್ದಾನೆ ಜಗ್ಗ. ದೇವಕಿ ಆಚೀಚಿನವರಿಗೆ ಕುಪ್ಪಸ, ಲಂಗ ಹೊಲಿದುಕೊಡುತ್ತಾಳೆ. ಹರಿದ ಬಟ್ಟೆ ರಿಪೇರಿ ಮಾಡುತ್ತಾಳೆ. ಹೇಗೋ ನಡೆಯುತ್ತಿದೆ ಪಥ. ಜಗ್ಗನಿಗೆ ಒಬ್ಬಳೇ ಮಗಳು. ಅಲ್ಲಿಗೆ ಸಾಕು ಮಾಡಿಕೊಂಡಿದ್ದಾರೆ. ಇಷ್ಟೆಲ್ಲಾ ಕತೆ ನಡೆದುಹೋಗಿ ಇದೀಗ ಜಗ್ಗ ಹುಟ್ಟೂರಿಗೆ ಬರುತ್ತಿರುವವರೆಗಿನ ದೀರ್ಘಾವಧಿಯಲ್ಲಿ ಅವನಲ್ಲಿ ನಡೆದ ಅಂತರ್ಯುದ್ಧ ಎನ್ನುವುದು ಮೇಲಿನ ಕತೆ ಹೇಳಿದಷ್ಟು ಸಲೀಸಲ್ಲ. ಒಮ್ಮೊಮ್ಮೆ ಇದ್ದಕ್ಕಿದ್ದಂತೆ ಕಾಡುವ ಖಿನ್ನತೆ, ಯಾರೂ ಬೇಡ, ಏನೂ ಬೇಡ ಎನಿಸುವ ವಿಮುಖತೆ, ಮಗದೊಮ್ಮೆ ಏನೇ ಆಗಲಿ, ಊರಿಗೆ ಹೋಗಿ ಅಪ್ಪ, ಅಮ್ಮನ ಕಾಲು ಹಿಡಿದು, ಕಪಾಳಕ್ಕೆ ಹೊಡೆದರೆ ಹೊಡೆಸಿಕೊಂಡು, ಉಗಿದರೆ ಉಗಿಸಿಕೊಂಡು, ಈ ಅಶಾಂತ ಬದುಕನ್ನು ಒಂದು ಹಂತಕ್ಕೆ ತಂದುಕೊಳ್ಳಬೇಕೆಂಬ ಹೆಬ್ಬಯಕೆ, ತನ್ನೊಡನೆ ಒಡನಾಡಿದ ಯಾವೊಬ್ಬ ಅಕ್ಕನಾಗಲಿ ಒಂದು ಸಾಲು ಬರೆಯಲಾಗದಷ್ಟು ಕಠಿಣವಾದದ್ದು ಹೇಗೆ ಎನ್ನುವ ಶಂಕೆ. ಜಗ್ಗ ಬಹಳ ಬಹಳ ಕಳೆದುಕೊಂಡಿದ್ದೇನೆಂದು ಹಳಹಳಿಸಿದ್ದು ಅಮ್ಮನ ಪ್ರೀತಿಯನ್ನು. ಅಮ್ಮನನ್ನು ನೆನೆದು ಸದಾ ಹಲುಬುತ್ತಿದ್ದವನಿಗೆ ಆ ಹಳ್ಳಿಮೂಲೆಯಲ್ಲಿದ್ದವರಿಗೆ ಹೊರಜಗತ್ತು ಹೇಗೆ ಬದಲಾಗುತ್ತಿದೆ ಎನ್ನುವುದರ ಕುರಿತು ತಿಳುವಳಿಕೆ ಹೇಗಿರಲು ಸಾಧ್ಯ ಎನ್ನುವ ಸಮಾಧಾನವೂ ಹೊಳೆದು ಜಗ್ಗ ನಿರಾಶನಾಗುತ್ತಿದ್ದ. ರಾತ್ರಿ ನಿದ್ದೆಯಲ್ಲಿ ಒಮ್ಮೊಮ್ಮೆ 'ಅಮ್ಮಾ...' ಎಂದು ಕೂಗುತ್ತಾ ಎದ್ದು ಕೂರುತ್ತಿದ್ದವನಿಗೆ ಬುದ್ಧಿ ತಿಳಿಯಾಗುತ್ತಿದ್ದಂತೆ ನಿಡಿಯುಸಿರು ಹೊರಹೊಮ್ಮುತ್ತಿತ್ತು. ದೇವಕಿಯೂ ಎಲ್ಲರನ್ನೂ ಬಿಟ್ಟು ಬಂದವಳು. ಅವಳ ಅಂತರ್ಯದಲ್ಲು ನೋವು ಇದ್ದೇ ಇತ್ತು. ಪರಸ್ಪರರಿಗೆ ಆಸರೆಯಾಗಿ, ಒಬ್ಬರನ್ನೊಬ್ಬರು ಅರಿತು, ಒಬ್ಬರಿಗೊಬ್ಬರು ಸಂತೈಕೆಯ ಮಾತಾಡಿ ಕೊಳ್ಳುತ್ತಾ ಕಾಲ ಕಳೆದುಹೋಗಿತ್ತು. ಬದುಕು ಇರುವುದೇ ಹೀಗೆ ಎನ್ನುವ ಹಂತಕ್ಕೆ ಬಂದಿತ್ತು. ಆದರೂ ಒಳಮನಸ್ಸಿನಲ್ಲಿ ಒಂದು ನಿರೀಕ್ಷೆ, ಒಂದು ಹಂಬಲ, ಒಂದು ತುಡಿತ. ಯಾವತ್ತೋ ಒಂದುದಿನ ಜನಾರ್ದನನಿಂದ ಹಸಿರುನಿಶಾನೆಯ ಪತ್ರ ಬಂದು ತಲುಪುತ್ತದೆ ಎನ್ನುವ ಆಶಾವಾದ. ದೇವಕಿ ಓದಿದ್ದು ಬರೀ ಪ್ರೈಮರಿ ಸ್ಕೂಲು. ಊರಿಗೆ ಕಾಗದ ಬರೆಯುವ ಗೀಳು ಅವಳನ್ನು ಹೊಕ್ಕಿರಲಿಲ್ಲ. ಹೊಕ್ಕಿದ್ದರೂ ಬರೆಯಲು ಬರುತ್ತಿರಲಿಲ್ಲ. ಜಗ್ಗನಿಂದ ಬರೆಸುವ ಮನಸ್ಸು ಅವಳು ಮಾಡಿರಲಿಲ್ಲ. 'ಬರೀಬೇಕಾ?' ಎಂದು ಜಗ್ಗ ಕೇಳಿದ್ದಕ್ಕೆ, 'ಬ್ಯಾಡ, ಮೊದ್ಲು ನಿಮ್ಮನೇಂದ ಕಾಗದ ಬರ್ಲಿ' ಎಂದುಬಿಟ್ಟಿದ್ದಳು ದೇವಕಿ. ಅವಳೇ ಅಷ್ಟು ಗಟ್ಟಿಯಾಗಿರಬೇಕಾದರೆ ತಾನೇಕೆ ಹೀಗೆ? ಜಗ್ಗನನ್ನು ಕಾಡುತ್ತಿತ್ತು ಪ್ರಶ್ನೆ. ಕೊನೆಗೂ ಅವನು ನಿರೀಕ್ಷಿಸಿದ ಆ ಕಾಲ ಕೂಡಿ ಬರಲಿಲ್ಲ. ಅಮ್ಮನ ಕಾಲಿಗೆರಗಿ ಕ್ಷಮೆ ಕೇಳುವ ಹಿರಿಯಾಸೆ ಫಲಿಸಲಿಲ್ಲ. ಹೋಗಿಬಿಟ್ಟಳು ಅಮ್ಮ, ಎಂದೆಂದಿಗೂ ಮತ್ತೆ ಬರದಂತೆ. ಜಗ್ಗನ ಗಂಟಲ ಸೆರೆ ಉಬ್ಬುತ್ತಿತ್ತು. ಅಳು ಒತ್ತೊತ್ತಿಕೊಂಡು ಬರುತ್ತಿತ್ತು. ಈ ಅಳಲಿನಲ್ಲಿಯೇ ದಾರಿ ಸಾಗಿ ಬಂದೇ ಬಿಟ್ಟಿತು ಮನೆ. ಒಂದಾನೊಂದು ಕಾಲದಲ್ಲಿ ಜಗ್ಗನದಾಗಿದ್ದ ಮನೆ.



* * *

ಅಂಗಳ, ಮುಂಚೇಕಡೆ, ಎಲ್ಲೆಡೆ ತುಂಬಿಕೊಂಡಿದ್ದ ಯಾರನ್ನೂ ಕಣ್ಣೆತ್ತಿ ನೋಡಲಿಲ್ಲ ಜಗ್ಗ. ಮುಂಜಗುಲಿಯಲ್ಲಿ ಅಮ್ಮನನ್ನು ಮಲಗಿಸಿದ್ದರು. ಕೆನ್ನೆತುಂಬಾ ಅರಿಶಿನ. ಹಣೆ ತುಂಬಾ ಕುಂಕುಮ. ಗುರುತೇ ಸಿಗದ ಅಪರಿಚಿತ ಮುಖ ಕಂಡಂತಾಗಿ ಜಗ್ಗ ತತ್ತರಿಸಿದ. ಸೀದಾ ಹೋಗಿ ಅಮ್ಮನ ಕಾಲ ಬಳಿ ಕುಳಿತು ನಿಧಾನಕ್ಕೆ ಬಗ್ಗಿ ಕಾಲುಗಳ ಮೇಲೆ ತಲೆ ಇಟ್ಟ. ಕಟ್ಟಿಗೆಯ ತುಂಡಿನಂತೆ ಮರಗಟ್ಟಿದ್ದ ಕಾಲುಗಳು. ತಣ್ಣಗೆ ಕೊರೆಯುತ್ತಿದ್ದ ಬೆಳ್ಳಿ ಕಾಲುಂಗುರ. ಜಗ್ಗ ಇಹದ ಪ್ರಜ್ಞೆ ಕಳೆದುಕೊಂಡವನಂತೆ ಅದೆಷ್ಟು ಹೊತ್ತು ಹಾಗೇ ಕುಳಿತು ತನ್ನ ಅಶ್ರುಜಲದಿಂದ ಅಮ್ಮನ ಪಾದ ತೊಳೆದನೋ ಅವನ ಅರಿವಿಗೆ ನಿಲುಕುವುದಿಲ್ಲ. ಯಾವುದೋ ಕೈಗಳು ಭುಜ ಮೇಲೆತ್ತಿದುವು. ಮಂಜು ಪರದೆಯ ಕಣ್ಣದೃಷ್ಟಿಗೆ ಬಿದ್ದಿದ್ದು ಹಣ್ಣುಹಣ್ಣಾಗಿದ್ದ ಅಪ್ಪ.

'ಎಲ್ಲಿದೀನೀಂತ ಒಂದು ಮಾತು ತಿಳಿಸ್ಬಾರ್ದಿತ್ತೇನೋ? ನಿಂಗೋಸ್ಕರ ಹೊಟ್ಟೆಬೇನೆ ಹಚ್ಕೊಂಡು ನಬೆದು ಹೋಗ್ಬಿಟ್ಲು ನಿನ್ನಮ್ಮ. ಈಗ ಬರ್ತಿದೀಯಲ್ಲ, ಯಾರು ಸುದ್ದಿ ಕೊಟ್ರೋ?'

ಅಲ್ಲೇ ಗೋಡೆಗೊರಗಿ ನಿಂತಿದ್ದ ತಮ್ಮರಾಯರು ಅಡ್ಡಬಾಯಿ ಹಾಕಿ ವಿಷಯಾಂತರ ಮಾಡಿದರು, 'ಸಣ್ಣಕ್ಕ ಬರೋ ಹೊತ್ತಾಯ್ತು ಅಪ್ಪಾ. ಮುಂದಿನ ಕೆಲಸ ಶುರು ಮಾಡ್ಬಿಡೋಣ. ಪುರೋಹಿತರು ಕಾಯ್ತಿದಾರೆ...'

ಒಳವಿಷಯ ಹೀಗಿದ್ದೂ ವಸಗೆ ಮುಟ್ಟಿಸಿದ್ದು ಯಾಕೋ? ಸುಭಗ ಅನ್ನಿಸಿಕೊಳ್ಳುವುದಕ್ಕೋ ಅಥವಾ ಹೇಗೂ ಬರುವುದಿಲ್ಲ ಎನ್ನುವ ಭಂಡಧೈರ್ಯದಿಂದಲೋ? ದೂರ ಇಡುವುದಕ್ಕೆಂದೇ ಸಂಪರ್ಕ ಉಳಿಸಿಕೊಂಡಿರಬಹುದಾದ ಮಹಾನುಭಾವನ ಹೊಟ್ಟೆಯೊಳಗಿನ ವಿಷ ಸುಸ್ಪಷ್ಟವಾಗುತ್ತಿದ್ದಂತೆ ಅದರ ಹಿಂದಿದ್ದ ಹೆಬ್ಬಯಕೆಯ ಅರಿವಾಗಿ ಜಗದೀಶ ದಿಗ್ಭ್ರಮೆಗೊಂಡ.


**ವಸುಮತಿ ಉಡುಪ**
ನಂ. ೦೦೮, ಕಾಸಾ ಆ್ಯನ್ಸಲ್ ಅಪಾರ್ಟ್‌ಮೆಂಟ್ಸ್
ನಂ. ೧೮ ಬನ್ನೇರುಘಟ್ಟ ರಸ್ತೆ, ಜೆ.ಪಿ.ನಗರ ೩ನೇ ಹಂತ, ಬೆಂಗಳೂರು - ೫೬೦ ೦೭೮

# ಖಾಲಿ ಸೈಟುಗಳು, ದೀಪದ ಹುಳುಗಳು

▪ ಎಲ್. ವಿ. ಶಾಂತಕುಮಾರಿ

ನೀವೆಂದಾದರೂ ಖಾಲಿ ಸೈಟಿನ ಪಕ್ಕದಲ್ಲಿರುವ ಮನೆಯಲ್ಲಿ ವಾಸವಿದ್ದಿರಾ? ಇರದಿದ್ದರೆ ಖಾಲಿ ಸೈಟಿನ ಪಕ್ಕದ ಮನೆಗಳಿಗೇ ವಿಶಿಷ್ಟವಾಗಿರುವ ಅನುಕೂಲ, ಅನಾನುಕೂಲಗಳ ಪರಿಚಯ ನಿಮಗಿರುವುದಿಲ್ಲ ಬಿಡಿ. ಖಾಲಿ ಸೈಟಿನ ಪಕ್ಕದ ಮನೆಯ ವಾಸದ ಅನುಭವ ಸರ್ವಜ್ಞನಿಗೇನಾದರೂ ಇದ್ದಿದ್ದರೆ "ನಟ್ಟಡವಿಯ ಮನೆಯು। ಕುಷ್ಠ ಕ್ಷಯ ಬಡತನವು। ದುಷ್ಟರ ನೆರೆಯು, ಇವು ಆಯ್ದು ಜಗದೊಳಗೆ ನಷ್ಟ ಕಾಣಯ್ಯ ಸರ್ವಜ್ಞ" ಎಂಬುದರ ಜೊತೆಗೆ, "ಖಾಲಿ ಸೈಟಿನ ಪಕ್ಕದಾ ಮನೆಯ ವಾಸ ನೆರೆ ಕಷ್ಟ ಕಾಣಯ್ಯಾ" ಎಂದೂ ಸೇರಿಸಿರುತ್ತಿದ್ದ. ಆದರೆ, ಪಾಪ ಆ ಪುಣ್ಯಾತ್ಮ ಮನೆಯ ವಾಸವೇ ಇರದಂತೆ ಅಲೆಯುತ್ತಿದ್ದನಲ್ಲವೇ? ಈ ಖಾಲಿ ಸೈಟಿನ ಪಕ್ಕದ ಮನೆಯವರಿಗೆ ಒಂದೆರಡು ಅನುಕೂಲಗಳಿವೆ. ಪಕ್ಕದ ಮನೆಯ ಪೀಪಿಂಗ್ ಟಾಮ್‌ಗಳು, ನಿಮ್ಮ ಮನೆಯ ಕಿಟಕಿ ಪರದೆ ಓರೆಯಾದಾಗ ತಮ್ಮ ಕುತೂಹಲದ ದೃಷ್ಟಿಯನ್ನು ತೂರದಿರಬಹುದು. ನಿಮ್ಮ ಮನೆಯ ಜಗಳ, ಕದನ, ಸರಸ ಸಲ್ಲಾಪಗಳ ಶಬ್ದ ತರಂಗಗಳು ಪಕ್ಕದ ಮನೆಗಳವರಿಗೆ ಹಾಗೆಯೇ ಅವರ ಮನೆಯ ಶಬ್ದತರಂಗಗಳು ನಿಮ್ಮ ಮನೆಗೆ ರವಾನೆಯಾಗುವ ಸಾಧ್ಯತೆಯಿಲ್ಲದಿರುವುದು, ಪಕ್ಕದ ಮನೆಯಾಕೆ ನಿಮಗೆ ಬೇಕಿರಲಿ ಬೇಡದಿರಲಿ, ತಮ್ಮ ಮನೆಯ ಕಿಟಕಿಯ ಮೂಲಕ ನಿಮ್ಮನ್ನು ಮಾತಿಗೆಳೆಯಲು ಸಾಧ್ಯವಾಗದಿರುವುದು, ಇತ್ಯಾದಿ. ಇವುಗಳಿಂದ ಶಾಂತ ವಾತಾವರಣವೇನೋ ನಿರ್ಮಾಣವಾಗುತ್ತದೆನ್ನಿ. ನಿಮ್ಮ ಮನೆಯಲ್ಲಿ ಹುಟ್ಟು ಹಬ್ಬ, ನಾಮಕರಣ ಮುಂತಾದ ಸಣ್ಣ ಸಮಾರಂಭಗಳಾದರೆ ಪಕ್ಕದ ಖಾಲಿ ಸೈಟನ್ನು ಸ್ವಚ್ಛಗೊಳಿಸಿ ಷಾಮಿಯಾನ ಹಾಕಿಸಿಕೊಂಡು ಭರ್ಜರಿಯಾಗಿ ಕಾರ್ಯಕ್ರಮ ನಡೆಸಬಹುದು. ಯಾವುದೋ ದೂರದ ಊರಿನಲ್ಲಿಯೋ, ದೂರದೇಶದಲ್ಲಿಯೋ ಇರುವ ಮಾಲಿಕರ ಒಪ್ಪಿಗೆ ಪಡೆಯುವ ಅವಶ್ಯಕತೆಯಂತೂ ಖಂಡಿತ ಇರುವುದಿಲ್ಲವಲ್ಲ! ಆದರೆ ಹುಟ್ಟು ಸಾವು ಮುಂತಾದ ಸಂದರ್ಭಗಳ ಎಲ್ಲ ರೀತಿಯ 'ಪಾರ್ಟಿ'ಗಳಿಗೂ ಮೈನೋಯಿಸಿಕೊಳ್ಳದಂತಹ ಬೇರೆಯೇ ವ್ಯವಸ್ಥೆಗಳಿರುವ ಐಷಾರಾಮದ ಈ ಕಾಲದಲ್ಲಿ, ಯಾರು ಷಾಮಿಯಾನ ಅಡಿಗೆ ಎಂದು ಕೂರುತ್ತಾರೆ? ನಿಮ್ಮ ಮನೆಯ ಪಕ್ಕದ ಜಾಗದಲ್ಲಿ ಬೇರೆಯವರೂ ಕೂಡ ಷಾಮಿಯಾನ ಹಾಕಿಕೊಳ್ಳಬಹುದು. ನಿಮ್ಮ ಕಾಂಪೌಂಡಿನ ಮೇಲೆ ನೀವು ಹಾಕಿಕೊಂಡಿರುವ ಗ್ರಿಲ್‌ಗೆ ಷಾಮಿಯಾನದ ಹಗ್ಗಗಳನ್ನು ಬಿಗಿಯಲು ನಿಮ್ಮ ಅನುಮತಿಯನ್ನು ಬೇಡಬಹುದು. ನೀವು ಅನುಮತಿ ನೀಡಿದರೆ "ನಮ್ಮ ಮನೆಯ ಸಮಾರಂಭಕ್ಕೆ ದಯಮಾಡಿ ಭೋಜನ ಸ್ವೀಕರಿಸಿ" ಎಂದು ಆದರದಿಂದ ಆಹ್ವಾನಿಸಲೂಬಹುದು. ದುರದೃಷ್ಟವಶಾತ್ ಜೋರುಗಾಳಿ ಬಂದು ಷಾಮಿಯಾನದ ಬೊಂಬು ಹಗ್ಗಗಳು ಜಗ್ಗಾಡಿ ನಿಮ್ಮ ಗ್ರಿಲ್ ಡೊಂಕಾಗಲೂಬಹುದು. ಇದಕ್ಕೆ ನೀವು ಒಪ್ಪದಿದ್ದರೆ ನೀವು ಸುಗ್ರಾಸ ಭೋಜನದಿಂದ ವಂಚಿತರಾಗುವಿರಿ ಎಂಬುದಂತೂ ಖಂಡಿತ.

ಖಾಲಿ ಸೈಟಿನ ಪಕ್ಕದ ಮನೆಯ ಪ್ರಥಮ ಶತ್ರು, ಪರಮಾತ್ಮರೂಪಿ ಪಾರ್ಥೇನಿಯಂ. ಈ ಪರಮಾತ್ಮರೂಪಿ ಸರ್ವತ್ರ ಹರಡಿರುವುದಲ್ಲದೆ, "ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪವಕಃ" ಎಂಬಂತಹ ಅವಿನಾಶಿ. ಸುಟ್ಟು ಬೂದಿಯಾದರೂ, ಆ ಬೂದಿಯಿಂದಲೇ ಮತ್ತೆ ಹುಟ್ಟಿಬರುವ ಫೀನಿಕ್ಸ್ ಪಕ್ಷಿಯಂತೆ, ಬೂದಿಯಿಂದಲೇ ಮತ್ತೆ ಮೊಳೆಯುವ ಅದ್ಭುತ ಸಾಮರ್ಥ್ಯದ ಅಮರ ಸಸ್ಯ ಈ ಪಾರ್ಥೇನಿಯಂ. ಇದರ ಮಹಿಮೆ ಗೂರಲು, ಕೆಮ್ಮುಗಳಿಂದ, ಅಲರ್ಜಿಯಿಂದ ನರಳುವವರಿಗೆ ಚೆನ್ನಾಗಿಯೇ ಅನುಭವವಾಗುತ್ತದೆ. ಅಂಥವರಿಗೆ ಧಾರಾಳವಾಗಿ ವರಗಳನ್ನಿತ್ತು ಕರುಣಿಸುತ್ತಾನೆ ಈ ಅಮರನಾಥ. ಸ್ವಲ್ಪ ಎತ್ತರಕ್ಕೆ ಬೆಳೆಯುತ್ತಿದ್ದಂತೆಯೇ, ದಾರಿಹೋಕರಿಗೆ, ಅಲ್ಲಲ್ಲಿಯೇ ಮನೆಕಟ್ಟುತ್ತಿರುವಲ್ಲಿ ಕೆಲಸಮಾಡುತ್ತಿರುವ ಹೆಣ್ಣು ಗಂಡು ಕೂಲಿಯಾಳುಗಳಿಗೆ, ಸಣ್ಣ ಹುಡುಗರಿಗೆ ತಮ್ಮ ದೇಹಬಾಧೆಗಳನ್ನು ತೀರಿಸಿಕೊಳ್ಳಲು ಮರೆಯನ್ನೊದಗಿಸಿ ಖಾಲಿ ಸೈಟು ಸಾರ್ವಜನಿಕ ಶೌಚಾಲಯವಾಗಲು ನೆರವಾಗುತ್ತದೆ ಈ ಸಸ್ಯ. ನಿಮ್ಮ ಮನೆಯ ಕೋಣೆಯ ಅಥವಾ ಪಡಸಾಲೆಯ ಕಿಟಕಿ ಇಂಥ ಸೈಟಿನ ಪಕ್ಕದಲ್ಲಿದ್ದರೆ, ಕಿಟಕಿಯಾಚೆಗೆ ದೃಷ್ಟಿ ಹರಿದಾಗೆಲ್ಲಾ ಈ 'ದಿವ್ಯದೃಶ್ಯ'ಗಳನ್ನು ನೋಡುತ್ತಿರಬಹುದು. ಎಷ್ಟೋ ಬಾರಿ ನಿಮ್ಮ ಮನೆಯ ಕಾಂಪೌಂಡ್ ಪಕ್ಕಕ್ಕೇ ಬಂದು ...ವಿಸರ್ಜನ ಕಾರ್ಯಕ್ಕೆ ಸಿದ್ಧವಾಗುತ್ತಿರುವವರನ್ನು "ಹೋಗ್ರೀ, ಬೇರೆ ಎಲ್ಲಾದರೂ, ವಾಸನೆಯಾಗುತ್ತೆ" ಎಂದು ಗದರಲೂಬಹುದು. ಹೋಗುತ್ತಾರಾದರೂ ಎಲ್ಲಿಗೆ? ನಡುರಸ್ತೆಗೇ ಹೋಗಲಾದೀತೇ? ನೀವು ಬಯ್ಗಳವನ್ನು ಆರಂಭಿಸುವಲ್ಲಿ ಪಾಪ ಅವರ ಕಾರ್ಯಾರಂಭವೂ ಆಗಿದ್ದು, ಪೂರ್ತಿ ಮುಗಿಸಿಯೇ ಹೋಗುವವರು ಅವರು ಎನ್ನುವುದು ಬೇರೆ ವಿಷಯ. ಬಯ್ದಿದ್ದಷ್ಟೇ ನಿಮಗೆ ಸಮಾಧಾನ. ಎಷ್ಟೋ ಬಾರಿ, ಟ್ರಿಮ್ ಆಗಿ ಡ್ರೆಸ್‌ಮಾಡಿಕೊಂಡು, V.I.P ಬ್ರೀಫ್‌ಕೇಸುಗಳನ್ನು ಹಿಡಿದು ಹೊರಟ ಪುರುಷರು (ಕೆಲವರು ಮಾತ್ರ) ಇಂತಹ ರಸ್ತೆ ಬದಿಯ ಖಾಲಿ ಸೈಟು ಕಂಡೊಡನೆ ನಿಂತು ತಮ್ಮ 'ಅವಸರ'ದ ಕೆಲಸ ಮುಗಿಸಿಯೇ, ಮುಂದೆ ಸಾಗುವುದನ್ನು ಗಮನಿಸಿದಾಗ ಆಶ್ಚರ್ಯಗೊಂಡಿದ್ದೇನೆ. ನಾನು ಕಂಡಂತೆ ಒಬ್ಬ ಮಹನೀಯರು (ನಮ್ಮ ಮನೆಯಿಂದ ಅವರು ಮನೆಬಿಟ್ಟು ಹೊರಡುವುದು ಕಾಣಿಸುತ್ತಿತ್ತು) ತಮ್ಮ ಮನೆಯಿಂದ ಹೊರಟವರು ಒಂದು ನಿಮಿಷದಲ್ಲಿಯೇ, ತಿರುವಿನಲ್ಲಿ ಸಿಗುವ ಖಾಲಿ ಸೈಟಿನ ಹತ್ತಿರ ನಿಂತುಬಿಡುತ್ತಿದ್ದರು. ತಮ್ಮ ಕೆಲಸ ಮುಗಿಸಿಯೇ, ಅಲ್ಲಿಗೆ ಬರುವ ಬಸ್ಸನ್ನು ಹತ್ತುತ್ತಿದ್ದರು. ಹೀಗೇಕೆ? ಮನೆಯಿಂದ ಹೊರಡುವಾಗ ತಮ್ಮ ಈ ಕೆಲಸ ಮುಗಿಸಲಾಗಲ್ಲವೇ? ಸಾರ್ವಜನಿಕ ಶೌಚಾಲಯ ಸಿಗುವ ತನಕ ವ್ಯವಧಾನವಿರುವುದಿಲ್ಲವೇ? ಅವರವರ ಅರ್ಜೆನ್ಸಿ ಹೇಗಿರುತ್ತದೋ ನಮಗೆ ತಿಳಿಯುವುದಿಲ್ಲವಾದರೂ, ಅನೇಕ ಮಂದಿ ಹೀಗೆ ನಡೆದುಕೊಳ್ಳುವಾಗ ರಸ್ತೆಗಳಲ್ಲಿ ವಾಸನೆ ಹರಡಿಕೊಳ್ಳುವುದಿಲ್ಲವೇ! ಪೌರಪ್ರಜ್ಞೆ, ಸಾರ್ವಜನಿಕ ಆರೋಗ್ಯದ ಪ್ರಜ್ಞೆ ಯಾವುದೂ ಬೇಡವೇ? ಆಫೀಸಿಗೆ ಹೊರಟ ಮಹಿಳೆಯೇನಾದರೂ ಹೀಗೆ ನಡೆದುಕೊಂಡರೆ ಸುದ್ದಿ ಎಲ್ಲರ ದವಡೆಗಳಿಗೆ ಆಹಾರವಾಗುತ್ತದೆ.



ಖಾಲಿ ಸೈಟುಗಳು ಸಾರ್ವತ್ರಿಕ ಶೌಚಾಲಯಗಳಾಗುವಂತೆಯೇ, ದೊಡ್ಡ ತೆರೆದ ಕಸದ ತೊಟ್ಟಿಗಳೂ ಆಗುತ್ತವೆ. ಕಸ ತೆಗೆದುಕೊಂಡು ಹೋಗಲು ನಿಯುಕ್ತರಾಗಿರುವ ಮಹಾನಗರಪಾಲಿಕೆಯ ಕಾರ್ಮಿಕರು ಇದ್ದಕಿದ್ದಂತೆ ಎರಡು ಮೂರುದಿನಗಳು ಬರದೇ ಮಾಯವಾಗುವುದು ಬೆಂಗಳೂರಿನ ನಾಗರಿಕರಿಗೆ ಚಿರಪರಿಚಿತ ಸಂಗತಿ. ಅಂತಹ ಸಮಯದಲ್ಲಿ ಕಸವಿಸರ್ಜನೆ ಹೇಗೆ? ಖಾಲಿ ಸೈಟಿನ ಪಕ್ಕದ ಮನೆಯವರು ಏಳುವ ಮುಂಚೆ ಅಥವಾ ಕತ್ತಲಾದ ಮೇಲೆ ಪ್ಲಾಸ್ಟಿಕ್ ಚೀಲಗಳಲ್ಲಿ (ಹಳಸಿದ ಸಾರು, ಹುಳಿ, ಅನ್ನ ಈಚೆ ಸೋರದಂತಹ ಅದ್ಭುತ ಆವಿಷ್ಕಾರ!) ಮಿಕ್ಕಿದ್ದ ಅನ್ನ ಸಾರು, ಹುಳಿ, ತಿಂಡಿ, ಕೊಳೆತ ತರಕಾರಿಗಳು, ತರಕಾರಿ ಸಿಪ್ಪೆ ಎಲ್ಲವನ್ನೂ ತುಂಬಿ ಬಾಯಿಕಟ್ಟಿ, ರೊಯ್ ರೊಯ್

ಎಂದು ಇಂತಹ ಖಾಲಿ ಸೈಟುಗಳಿಗೆ ಎಸೆಯುತ್ತಾರೆ. ಎಷ್ಟೋ ಬಾರಿ ಈ ರಾಕೆಟ್ಟುಗಳು ಗುರಿತಪ್ಪಿ, ಇಂತಹ ಸೈಟಿನ ಪಕ್ಕದಲ್ಲಿ ವಾಸಿಸಲೇಬೇಕಾಗಿರುವ ನಮ್ಮಂತಹ ನಿರ್ಭಾಗ್ಯರ ಮನೆಯ ಗೇಟಿನ ಮುಂದಿನ ಹಾಸುಗಲ್ಲಿನ ಮೇಲೆ ಬಿದ್ದು ಫಟ್ಟನೇ ಹೊಟ್ಟೆಯೊಡೆದುಕೊಂಡು ಚೆಲ್ಲಿಕೊಂಡ ಹಳಸಲನ್ನು ಬಕೆಟ್‌ಗಟ್ಟಳೆ ನೀರು ಹೊಯ್ದು ತೊಳೆಯಬೇಕಾಗುತ್ತದೆ. ಇಷ್ಟಕ್ಕೆ ಮುಗಿಯಿತೆಂದುಕೊಳ್ಳಬೇಡಿ. ಈ ಚೀಲಗಳಲ್ಲಡಗಿರುವ ಅದೃಶ್ಯ ನಿಧಿಯನ್ನು ಲೂಟಿ ಮಾಡಲೆಂಬಂತೆ ಬೀದಿನಾಯಿಗಳ ತಂಡ ಜಮಾಯಿಸುತ್ತದೆ. ಆ ತಂಡ ಈ ಚೀಲಗಳನ್ನು ಕಚ್ಚಿ, ಹರಿದು ಅದರೊಳಗಿನದೆಲ್ಲಾ ಈಚೆ ಬಿದ್ದಾಗ, ಪಕ್ಕದಲ್ಲಿರುವ ನಮಗೆ ಅರೋಮಾಥೆರಪಿಯು ಆರಂಭವಾಗುತ್ತದೆ. ಜೊತೆಗೆ ಈ ನಾಯಿಗಳ ಜಗಳ, ಸಾಲು ಸಾಲಾಗಿ ಬಂದು ಅವು ನಮ್ಮ ಮನೆಯ ಗೇಟಿನ ಮುಂದೆ ಹಾಯಾಗಿ ಮಲಗುವುದು, ಆಗಿನ್ನೂ ತೊಳೆದಿದ್ದ ಗೇಟಿಗೆ, ಗೇಟಿನ ಮುಂಭಾಗದಲ್ಲಿ ಮೂತ್ರ ವಿಸರ್ಜಿಸಿ, ಮಲದ ಕುಪ್ಪೆಗಳನ್ನಿಡುವುದು, ಅಕಸ್ಮಾತ್ ನೋಡದೆಯೇ ತುಳಿದು ಬಂದಾಗ, ಮೆತ್ತಿಕೊಂಡ ಚಪ್ಪಲಿಯಿಂದಾಗಿ ಅರೋಮಾಥೆರಪಿ ಮನೆಯೊಳಗೂ ಪ್ರವೇಶಿಸುವುದು, ಇವೆಲ್ಲ ಬಲು ಸಾಮಾನ್ಯ ವಿಷಯಗಳು ಬಿಡಿ. ಬೇರೊಬ್ಬರ ಮನೆಯ ಮುಂದೆಯೇ ನಿಲ್ಲಿಸಿ ಹೊಲಸು ಮಾಡಿಸುವ ಸಾಕುನಾಯಿಗಳ ಮಾಲಿಕರಿಗಂತೂ ಇಂತಹ ಖಾಲಿ ಸೈಟುಗಳು, ತಮ್ಮ ನಾಯಿಗಳಿಂದ ಹೊಲಸು ಮಾಡಿಸಲೆಂದೇ ಬಿಟ್ಟುಕೊಟ್ಟಿರುವ ಜಹಗೀರಿಗಳಿದ್ದ ಹಾಗೆ. ಅವರಿಗದು ಹಕ್ಕಿನ ಜಾಗದಂತೆ. ಇನ್ನು ಈ ಚಿಂದಿ ಆಯುವ ಮಕ್ಕಳು ಇಂಥ ಜಾಗದಲ್ಲಿ ತಮ್ಮ ಅಂದಿನ ಸಂಪಾದನೆಯ ರಾಶಿಯನ್ನು ಹರಡಿ ಬೇಕಾದ್ದನ್ನು ಮಾತ್ರ ಚೀಲಕ್ಕೆ ತುಂಬಿಕೊಂಡು ಮಿಕ್ಕ ಕಸವನ್ನೆಲ್ಲಾ ಅಲ್ಲೇ ಬಿಟ್ಟು ಹೊರಡುತ್ತಾರೆ. ಸಣ್ಣ ಪುಟ್ಟ, ದೊಡ್ಡ, ಕರಿಯ, ಬಿಳಿಯ, ಬಣ್ಣಬಣ್ಣದ ಪ್ಲಾಸ್ಟಿಕ್ ಚೀಲಗಳು ಭೂತ ಪ್ರೇತ ಪಿಶಾಚಿಗಳ, ಯಕ್ಷ, ಯಕ್ಷಿಣಿಯರ ಕತ್ತರಿಸಿದ ರೆಕ್ಕೆಗಳಂತೆ, ಅನಾಥವಾಗಿ, ಆದರೆ ಅತ್ಯಾಕರ್ಷಕವಾಗಿ ಹಾರಾಡುತ್ತಿರುತ್ತವೆ. ಬೀಡಾಡಿ ಹಸುಗಳು, ಈ ಪಾರ್ಥೇನಿಯಂ ಮಧ್ಯೆಯೂ ಬೆಳೆದಿರುವ ಯಾವುದಾದರೂ ಸಸ್ಯವನ್ನು ಮೇದುಕೊಂಡು, ಅಲ್ಲಿಯೇ ಆರಾಮವಾಗಿ ಮಲಗಿ, ಸೆಗಣಿ ಗಂಜಲಗಳನ್ನೂ ವಿಸರ್ಜಿಸಿ, ನೊಣಗಳ ಸಂಸಾರ ವೃದ್ಧಿಗೆ ಸಹಾಯ ಮಾಡುತ್ತಿರುತ್ತವೆ. ಮನುಷ್ಯರ, ಪ್ರಾಣಿಗಳ, ಹಳಸು ತಂಗಳುಗಳ ಎಲ್ಲ ವಾಸನೆಗಳ ಜೊತೆಗೆ ಮಳೆಯೂ ಬಂದರೆ ಉಂಟಾಗುವ ಆ ವಿಶಿಷ್ಟ ದಿವ್ಯಗಂಧ ನಾಗರಿಕ ನಾಸಿಕಗಳಿಗೆ ಸವಾಲಾಗುತ್ತದೆ. ಕೆಲವೊಮ್ಮೆ ಇಂತಹ ಸ್ಥಳಗಳಲ್ಲಿ ಪ್ರದರ್ಶನದ ಮೇನಿಯಾ ಇರುವ ವಿಕೃತಕಾಮಿಗಳೂ ಕಾಣಿಸಿಕೊಳ್ಳುತ್ತಾರೆಂದರೆ ಆಶ್ಚರ್ಯವಾಗಬಹುದು. ಆದರೆ ನಿಜ. ಇಂತಹವರಿಂದಾಗಿ ಸೈಟುಗಳ ನಡುವಿನ ಕಾಲುಹಾದಿಯಲ್ಲಿ, ಸಂಜೆವೇಳೆ ಹೆಣ್ಣುಮಕ್ಕಳು ಓಡಾಡಲೂ ಹೆದರುತ್ತಾರೆ ಹಾಗೂ ಅಸಹ್ಯಪಡುತ್ತಾರೆ. ಇದನ್ನೆಲ್ಲಾ ನೋಡುವಾಗ ಎಷ್ಟೋ ವರ್ಷಗಳು ಕಳೆದರೂ ಮನೆಗಳ ನಡುವೆ ಹೀಗೆ ಖಾಲಿ ಸೈಟುಗಳನ್ನು ಬಿಟ್ಟುಕೊಂಡಿರಲು ಕಲ್ಯಾಣನಗರಿಯ ಮಹಾನಗರಪಾಲಿಕೆ ಏಕೆ ಸಹಕರಿಸುತ್ತದೆ ಎಂಬುದು ಆಶ್ಚರ್ಯ. ಇದರಿಂದ ಯಾರ ಕಲ್ಯಾಣ ಸಾಧನೆಯಾಗುವುದಿದೆ? ಒಮ್ಮೆ ಸಮತಟ್ಟಾಗಿದ್ದ ಸೈಟುಗಳು ಕ್ರಮೇಣ ಬೀದಿಯವರೆಲ್ಲ ತಂದು ಸುರಿವ ಕಸದಿಂದಾಗಿ, ಕಾರ್ಪೊರೇಷನ್‌ನವರು ಈ ಸೈಟುಗಳಲ್ಲಿ ಸುಡುವ ಕಸದ ರಾಶಿಯಿಂದಾಗಿ ಸಣ್ಣ ಗುಡ್ಡವಾಗಿ ಬೆಳೆಯತೊಡಗುತ್ತವೆ.

ಬೇರೆಲ್ಲ ಕೆಲಸಗಳೂ ಬೇಸರವೆನಿಸಿದಾಗ, ಘ್ರಾಣೇಂದ್ರಿಯವನ್ನು ತಟಸ್ಥಗೊಳಿಸಿಕೊಂಡು ಇಂಥ ಖಾಲಿ ಸೈಟನ್ನು ನೋಡುತ್ತಾ ನಿಂತರೆ ಕಲ್ಪನೆಗೆ ಅದೆಂಥ ಪ್ರಚೋದನೆ ಸಿಗುತ್ತದೆಯೆನ್ನುವುದನ್ನು ಅನುಭವಿಸಿಯೇ ತಿಳಿಯಬೇಕು. ಇಲ್ಲಿ ಹಾರಾಡುವ ವೈವಿಧ್ಯಮಯ ಕೀಟ ಸಮೂಹಗಳನ್ನು ಕಂಡಾಗ ಕೀಟಗಳ ಬಗೆಗೆ ಸಂಶೋಧನೆ ಮಾಡುವವರು ಖಂಡಿತವಾಗಿಯೂ ಖಾಲಿಸೈಟುಗಳ ಪಕ್ಕದ ಮನೆಯಲ್ಲಿಯೇ ವಾಸಿಸಿದರೆ ಅನುಕೂಲವೆನಿಸುವುದು. ತೀರಾ ಅನಾಕರ್ಷಕವೆನಿಸುವ ಪಾರ್ಥೇನಿಯಂ ಪೊದೆಗಳ ಮೇಲೆ, ಇನ್ನೂ ಮೇಲೆ, ಹಾಗೆಯೇ ಕೆಲವೊಮ್ಮೆ ಮೋಡಗಳನ್ನು ಮುಟ್ಟುವಂತೆ ಒಂದನ್ನೊಂದು ಹಿಂಬಾಲಿಸುತ್ತಾ ಚಕ್ರಾಕಾರವಾಗಿ ಜೂಟಾಟವಾಡುತ್ತಿರುವಂತೆ ಕಾಣಿಸುವ ಏರೋಪ್ಲೇನ್ ಹುಳಗಳ ದಂಡನ್ನು ನೀವೂ ನೋಡಿರಬೇಕು. ಚಿಟ್ಟೆಯ ವರ್ಣವೈವಿಧ್ಯವಿರದಿದ್ದರೂ, ಆ ಪಾರದರ್ಶಕ ರೆಕ್ಕೆಗಳು ಹಾಗೂ ಹಾರುವ ಶಕ್ತಿಯಿಂದಾಗಿ ಈ ಹುಳಗಳೂ ಬೆರಗು ಮೂಡಿಸುತ್ತವೆ. ಇಂತಹ ಅನಾಕರ್ಷಕ ಕೀಟಕ್ಕೆ ಈ ಅದ್ಭುತ ಎನಿಸುವ ಹಾರುವ ಶಕ್ತಿಯೇ? ಎಲ್ಲಿಂದ ಬರುತ್ತವೆ ಇವು? ಅದೂ ಇಷ್ಟೊಂದು ಸಂಖ್ಯೆಯಲ್ಲಿ? ತೆಳು ಎಂದರೆ ತೆಳುವಾಗಿರುವ ಆ ಪಾರದರ್ಶಕ ರೆಕ್ಕೆಗಳನ್ನು ಪುಸ್ತಕದ ಹಾಳೆಗಳ ನಡುವೆಯಿಟ್ಟು, ಆ ರೆಕ್ಕೆಯ ಮೂಲಕ ಪುಸ್ತಕದ ಪದಗಳ ನ್ನೋದುತ್ತಿದ್ದುದು, ಪುಸ್ತಕದಲ್ಲಿ ಜತನ ಮಾಡಿಕೊಂಡಿದ್ದ ನವಿಲುಗರಿಗಳ ಮೇಲೆ ಈ ತೆಳುರೆಕ್ಕೆ

ಯನ್ನಿಟ್ಟು ನವಿಲುಗರಿಯ ಕಾಮನಬಿಲ್ಲಿನಂತಹ ರಂಗು ಬದಲಾಯಿಸುತ್ತದೆಯೇ ಎಂದು ನೋಡುತ್ತಿದ್ದ ಬಾಲ್ಯದ ಆಟಗಳು ನೆನಪಾಗುತ್ತವೆ. ಎಷ್ಟೋ ಸಮಯ ಕಳೆಯುವವರೆಗೂ ಅವುಗಳ ಹಾರಾಟವನ್ನೇ ನೋಡುತ್ತಾ ನಿಂತುಬಿಡುವಂತಾಗಿ, ಇವು ಯಾರದಾದರೂ ಶಾಪದಿಂದಾಗಿ ಏರೋಪ್ಲೇನ್ ಕೀಟಗಳಾಗಿವೆಯೇ ಎಂಬ ಆಲೋಚನೆಯೊಡನೆಯೇ ಗ್ರೀಕ್ ಪುರಾಣದ ಥಿಥೋನಸ್ ನೆನಪಾಗುತ್ತಾನೆ. ನೆನೆದವರು ತಕ್ಷಣ ಪ್ರತ್ಯಕ್ಷರಾಗುವಂತೆ, ಹಸಿರು ಹಸಿರಾಗಿ, ಕಡ್ಡಿಕಾಲುಗಳ ವಿಚಿತ್ರರೂಪಿನ ಸೂರ್ಯನ ಕುದುರೆಯೊಂದು ಹಾರಿಬಂದು ಕಾಂಪೌಂಡಿನೊಳಗಣ ಗುಲಾಬಿ ಎಲೆಗಳ ಮೇಲೆ ಕುಳಿತಿತು. ಈ ಸೂರ್ಯನ ಕುದುರೆಯನ್ನು ನೋಡುತ್ತಿದ್ದಂತೆಯೇ ಗ್ರೀಕ್ ಪುರಾಣದ ದೇವತೆ ಅರೋರಾ (ನಮ್ಮಲ್ಲಿ ಉಷಸ್ ಇದ್ದಂತೆ) ಹಾಗೂ ಥಿಥೋನಸ್ ನಡುವಿನ ಪ್ರೇಮಕಥೆ ನೆನಪಾಯಿತು. ಈ ಮರ್ತ್ಯ ಅಮರ್ತ್ಯರ ನಡುವೆ ಅದೇನು ಆಕರ್ಷಣೆಯೋ, ಊರ್ವಶಿ - ಪುರೂರವರ ಕಥೆಯಿಲ್ಲವೆ ನಮ್ಮಲ್ಲಿ? ಹಾಗೆಯೇ ಗ್ರೀಕ್ ಪುರಾಣದ ಅರೋರಾ ಅಮರ ದೇವತೆ. ಥಿಥೋನಸ್ ಮರಣಾಧೀನ ಮಾನವ. ಅರೋರಾ ಪ್ರತಿದಿನ ಜಗತ್ತನ್ನೆಲ್ಲಾ ಸುತ್ತಿಬರುವಾಗ ಥಿಥೋನಸ್‌ನನ್ನು ಕಂಡಳು, ಪರಸ್ಪರ ಮರುಳಾಗಿ ಮೋಹಗೊಂಡು ಮದುವೆಯಾಗುವ ಹಂತಕ್ಕೆ ಬಂದರು. ಸಾಯುವ ಮನುಜನಿಗೂ, ಎಂದೆಂದೂ ಸಾಯದ ಅಮರರಿಗೂ ಮದುವೆಯೇ? ಥಿಥೋನಸ್ ಅರೋರಾಳಿಗೆ ದುಂಬಾಲು ಬಿದ್ದು ತನ್ನನ್ನೂ ಅಮರನನ್ನಾಗಿ ಮಾಡುವಂತೆ ಬೇಡಿಕೊಂಡ. ಅರೋರಾ ತನ್ನ ಪ್ರಭಾವವನ್ನುಪಯೋಗಿಸಿಯೋ, ಕಣ್ಣೀರಿಟ್ಟು ದೈವದ ಮನಕರಗಿಸಿಯೋ ಥಿಥೋನಸ್‌ನನ್ನು ಅಮರನನ್ನಾಗಿಸಿದಳು. ಅರೋರಾಳನ್ನು ಮದುವೆಯಾಗಿ ಬಹುಕಾಲ ದೇವಲೋಕದಲ್ಲಿ ಸ್ವರ್ಗಸುಖವನ್ನನುಭವಿಸಿಕೊಂಡಿದ್ದ. ಆದರೆ ದಿನಕಳೆದಂತೆ ವೃದ್ಧಾಪ್ಯ ಕಾಲಿಡತೊಡಗಿ ಕಂಗಾಲಾದ. ದಿನವೆಲ್ಲ ಪ್ರಪಂಚವನ್ನು ಸುತ್ತಿ ಬರುತ್ತಿದ್ದ ಅರೋರ ಆಗಿನ್ನೂ ಅರಳಿದ ಹೊಸ ಗುಲಾಬಿಯಂತೆ ಕಂಗೊಳಿಸುತ್ತಿದ್ದರೆ, ಥಿಥೋನಸ್‌ನ ಮೈಗಳಲ್ಲಿ ಸುಕ್ಕುಗಳು ಕಂಡುಬಂದು, ಮುದಿತನದಿಂದಾಗಿ ಕೈ, ಮೈಗಳು ನಡುಗುತ್ತಿದ್ದವು. ವೃದ್ಧಾಪ್ಯದ ನಿಶ್ಶಕ್ತಿ, ನಿರಾಶೆಗಳು ಥಿಥೋನಸ್‌ಗೆ ದುರ್ಭರವೆನಿಸತೊಡಗಿದವು. ಈಗ ಅರೋರಳನ್ನು ಬೇಡಿಕೊಂಡ ''ಹೇಗಾದರೂ ಮಾಡಿ ನನಗೆ ಸಾವನ್ನು ಕರುಣಿಸು''. ಟೆನಿಸನ್ ಕವಿ 'ಥಿಥೋನಸ್' ಎಂಬ ತನ್ನ ಕವನದಲ್ಲಿ ಥಿಥೋನಸ್‌ನ ಮೂಲಕ ಸಾವಿನ ಮಹತ್ವವನ್ನು ಮನಗಾಣಿಸುತ್ತಾನೆ. ಮುದುಕನಾಗಿ, ಸಾವಿನ ಒಂದು ನೆಮ್ಮದಿ, ಸುಖಗಳಿಂದ ವಂಚಿತನಾಗಿರುವ ಥಿಥೋನಸ್ ಪ್ರಪಂಚದ ಎಲ್ಲ ವಸ್ತುಗಳೂ ಸಾಯುತ್ತವೆ, ನಾನು ಮಾತ್ರ ಸಾಯುವಂತಿಲ್ಲವಲ್ಲ ಎಂದು ದುಃಖಿಸುತ್ತಾನೆ. ಒಮ್ಮೆ ತಾವು ಕರುಣಿಸಿದ ವರವನ್ನು ದೇವತೆಗಳು ಹಿಂತಿರುಗಿ ತೆಗೆದುಕೊಳ್ಳುವಂತಿಲ್ಲ, ಹಗಲಿರುಳು ಯೋಚಿಸಿ ಯೋಚಿಸಿ ಅರೋರಾ ಥಿಥೋನಸ್‌ನನ್ನು ಸೂರ್ಯನ ಕುದುರೆಯನ್ನಾಗಿ ಮಾಡಿ ಭೂಮಿಗೆ ಕಳಿಸಿದಳಂತೆ. ತಮ್ಮ ಅಧಿಕಾರಕ್ಕೆ ಅಳವಿಗೆ ಮೀರಿದ ವರಗಳನ್ನು ಕೇಳುವ ಮಾನವರಿಗೆ, ದೇವತೆಗಳು ಹೀಗೆ ಬುದ್ಧಿಗೆ ಮಂಕು ಕವಿಸುತ್ತಾರಂತೆ. ಈ ಮೂರ್ಖ ಥಿಥೋನಸ್ ಅರೋರಳನ್ನು ಮದುವೆಯಾಗುವ ಸಂಭ್ರಮದಲ್ಲಿ ಅಮರತ್ವ ಬೇಡಿದನೇ ಹೊರತು ಚಿರಯೌವನವನ್ನು ಬೇಡಲಿಲ್ಲ. ವೃದ್ಧನಾಗಿ ಅಮರನಾಗಿರುವ ಬದುಕು ಯಾರಿಗೆ ಬೇಕಾಗುತ್ತದೆ? ಈಗ ಸಾವು ಒಂದು ವರವೆಂಬುದು ಥಿಥೋನಸ್‌ಗೆ ಅರ್ಥವಾಗಿತ್ತು. ಆದರೆ ಅವನು ಮನುಷ್ಯನಾಗಿ ಕೂಡ ಉಳಿಯಲಾರದೆ ಸೂರ್ಯನ ಕುದುರೆಯಾಗಿಬಿಟ್ಟ. ಹೊಸದಾಗಿ ಅರಳಿದ್ದ ಗುಲಾಬಿಯ ಪಕ್ಕದಲ್ಲಿ ಕುಳಿತಿದ್ದ ಆ ಸೂರ್ಯನ ಕುದುರೆ ಥಿಥೋನಸ್ ಇರಬೇಕೇನೋ ಎನ್ನಿಸಿ, ಅಲ್ಲಿಗೆ ಹೋಗುವುದರಲ್ಲಿ ಅದು ಹಾರಿಹೋಗಿತ್ತು. ಎಷ್ಟೋ ಬಾರಿ ಈ ಸೂರ್ಯನ ಕುದುರೆಗಳು ಮನೆಯೊಳಗೂ ಬರುತ್ತವೆ. ಪಾಪ, ಅರೋರಾಳನ್ನು ಹುಡುಕುತ್ತಿರಬಹುದು. ಈ ಏರೋಪ್ಲೇನ್ ಕೀಟ, ಸೂರ್ಯನ ಕುದುರೆಗಳ ಜೊತೆಗೆ ರಂಗುರಂಗಿನ, ಚಿತ್ರ ವಿಚಿತ್ರ ವಿನ್ಯಾಸಗಳ ರೆಕ್ಕೆಗಳ ಸಣ್ಣ, ದೊಡ್ಡ ಚಿಟ್ಟೆಗಳೂ ಅಪರೂಪಕ್ಕೊಮ್ಮೆ ಹಾರಾಡುತ್ತಿರುತ್ತವೆ.

ಮಳೆ ಬಂದಾಗಲಂತೂ, ನಮಗೆ ಹೆಸರೇ ತಿಳಿಯದಿರುವಂತಹ, ನಾವು ನೋಡಿಯೇ ಇರದಂತಹ ಅದೆಷ್ಟು ರೀತಿಯ ಹಾರುವ ಕೀಟಗಳು, ಹರಿಯುವ ಹುಳಗಳನ್ನು ನೋಡಬಹುದು ಇಲ್ಲಿ. ಹಾರುವ ಗೊದ್ದಗಳ ಜಾತಿಗೆ ಸೇರಿದ ಕೀಟಗಳು ಹೇಗೆ – ಅದೂ ಅಷ್ಟು ಹೆಚ್ಚು ಸಂಖ್ಯೆಯಲ್ಲಿ – ಹೇಗೆ 'ಉತ್ಪತ್ತಿ'ಯಾಗುತ್ತವೆಯೋ, ಅದ್ಯಾವ ಮಾಯದಲ್ಲಿ ಮನೆಯೊಳಗೆ ಬಂದು ಸೇರಿಕೊಳ್ಳುತ್ತವೆಯೋ ಆ ಸೃಷ್ಟಿಕರ್ತನಿಗೇ ತಿಳಿದಿರಬೇಕಷ್ಟೆ. ಹರಿಯುವ ಹುಳಗಳಲ್ಲಿ ಕಂಬಳಿಹುಳಗಳಿಂದ ಹಿಡಿದು ಬಸವನಹುಳು, ಸಾವಿರಕಾಲು ಝರಿ, ಹಾವುರಾಣಿ, ಚೇಳು... ಅದೇನು ವೈವಿಧ್ಯವೋ. ಇರುವೆಗಳಲ್ಲಂತೂ, ಕೆಂಪಿರುವೆ, ಕೆಂಪಿರುವೆಯಲ್ಲಿ ಮಾಮೂಲಿ ಸೈಜಿನದು, ಗೊದ್ದಗಳ ಸೈಜಿನ ಕೆಂಜಗ (ಕಟ್ಟಿರುವೆ), ತೀರಾ ಸಣ್ಣದಾದ ಕೆಂಪಿರುವೆ, ಇದು ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದೆನ್ನುವ ಜಾತಿಯದು, ಕಡಿದರೆ ಉರಿ ನವೆ ತಡೆಯಲಾರದಷ್ಟು. ಕರಿ ಇರುವೆ ಮೊಟ್ಟೆ ಕಚ್ಚಿಕೊಂಡು, ಮಳೆಯ ಮುನ್ಸೂಚನೆ ಕೊಡುವ ಇವು ನಿರಪಾಯಕಾರಿಗಳು. ಕಡಿಯುವ ಕರಿ ಇರುವೆಗಳು, ಮತ್ತೊಂದು ಜಾತಿ, ಕಪ್ಪುಗೊದ್ದಗಳು, ರೆಕ್ಕೆ ಗೊದ್ದಗಳು... ತಲೆ ಧಿಮ್ಮೆನ್ನುತ್ತದೆ. ಈ ಕಪ್ಪುಗೊದ್ದಗಳು ಕಡಿದರಂತೂ, ಗೊದ್ದವನ್ನು ಕಿತ್ತು ತೆಗೆದರೂ ಅವುಗಳ ಕೊಂಡಿಗಳು ಮಾತ್ರ ಚರ್ಮದೊಳಗೇ ಹೊಕ್ಕಿರುತ್ತವೆ. ಇಂಥ ಸೈಟುಗಳಲ್ಲಿ ಗೆದ್ದಲುಗಳು ಕಟ್ಟಿರುವ ಹುತ್ತವೇನಾದರೂ ಇದ್ದರೆ, ಆ ಹುತ್ತದಲ್ಲಿ ನಾಗರಾಜ ಇರುವನೋ ಇಲ್ಲವೋ, ನಾಗಪ್ಪನ ಪೂಜೆಯಂತೂ ಗ್ಯಾರಂಟಿ. ನೂರಾರು ಮಕ್ಕಳು, ಜನಗಳು ಓಡಾಡುವ ಪಾರ್ಕುಗಳಲ್ಲಿಯೇ ಹುತ್ತ ಬೆಳೆದರೆ, ಅದನ್ನು ಪೋಷಿಸಿ ಪೂಜೆ ಮಾಡುವವರು, ಖಾಲಿ ಸೈಟಿನಲ್ಲಿ ಬಿಡುತ್ತಾರೆಯೇ? ನಾಗಪ್ಪನಿಗೆ ತನಿ ಎರೆಯುವ ದಿನ ಬಂದಿತೆಂದರೆ, ಹುತ್ತದ ಸುತ್ತಮುತ್ತಲ ಪೊದೆ ಕಡಿದು ಸ್ವಚ್ಛಗೊಳಿಸುತ್ತಾರೆ. ಇದುವರೆಗೂ ಕಂಡಿರದಿದ್ದ ಹುತ್ತದ ಆಕಾರ ಪುಟ್ಟ ದಿಬ್ಬದಂತೆ ಕಾಣತೊಡಗುತ್ತದೆ. ಆ ಹುತ್ತದ ಸುತ್ತಲೂ ದಾರ ಕಟ್ಟಿ, ಪೂಜೆಮಾಡಿ, ಎಡೆಯಿಟ್ಟು, ಘಮಘಮಿಸುವ ಗಂಧದ ಕಡ್ಡಿಗಳನ್ನು ಹಚ್ಚಿ ಹೋಗುತ್ತಾರೆ. ಅಷ್ಟು ದಿನವೂ ವಿಚಿತ್ರ ದುರ್ಗಂಧ ಅಭ್ಯಾಸವಾಗಿದ್ದ ನಾಸಿಕಕ್ಕೆ ವಿಚಿತ್ರ ಅನುಭವವಾಗುತ್ತದೆ. ಬರೀ ಪಾರ್ಥೇನಿಯಂ ಸಾಮ್ರಾಜ್ಯವೇ ಕಾಣಿಸುತ್ತಿದ್ದ ಕಡೆ, ಹೀಗೆ ಎಂದೋ ಪೂಜೆ ಮಾಡಿದ್ದ ಚೆಂಡು ಹೂಗಳು ಒಣಗಿ ಬೀಜ ಸಿಡಿದು ಹುಟ್ಟಿದ ಗಿಡದಲ್ಲಿ, ಅಲ್ಲಲ್ಲಿ ಕಿತ್ತಲೆ ಬಣ್ಣದ ಚೆಂಡು ಹೂಗಳು, ಮೂರ್ಖರ ಸಾಮ್ರಾಜ್ಯದಲ್ಲಿ ಬುದ್ಧಿವಂತರಂತೆ, ತಮ್ಮ ಪಾಡಿಗೆ ತಾವು ಯಾರ ಗಮನಸೆಳೆಯಲು ಆಸೆಪಡದೆ, ಪಾರ್ಥೇನಿಯಂ ಕಳೆಗೊಂದು ಕಳೆಕೊಡುತ್ತಿರುತ್ತವೆ.

ಇವುಗಳೊಂದಿಗೆ ಮಳೆ ಬಂದಾಗ ಎಲ್ಲ ಕಡೆಗಿಂತಲೂ ಹೆಚ್ಚಾಗಿ ಮಳೆಹುಳಗಳು ಏಳುತ್ತವೆ. ಈ ರೆಕ್ಕೆ ಹುಳಗಳು ಬೆಳಕನ್ನು ನುಂಗಲು ಬರುವ ಸೈನ್ಯದಂತೆ ಧಾವಿಸಿ ದೀಪಕ್ಕೇ ಮುತ್ತಿಗೆ ಹಾಕುತ್ತವೆ. ದೀಪದ ಸುತ್ತಲೂ ಹಾರಿ ಹಾರಿ, ಕುಣಿದು ಕುಪ್ಪಳಿಸಿ, ಕಡೆಗೆ ರೆಕ್ಕೆಗಳು ಉದುರಿಬಿದ್ದು, ನೆಲದ ಮೇಲೆ ಹೊಟ್ಟೆ ಹೊಸೆಯುತ್ತಾ ತೆವಳುವ ಇವುಗಳನ್ನು ನೋಡುವುದು ಒಂದು ರೀತಿಯ ಜಿಗುಪ್ಸೆಯಾದರೆ, ಕೆಳಕ್ಕೆ ಬಿದ್ದ ಇವುಗಳನ್ನು ಗಕ್ಕನೆ ಹಿಡಿದು ನುಂಗುವ ಹಲ್ಲಿಗಳ ಚುರುಕು ಚಾಕಚಕ್ಯತೆ ಮತ್ತೊಂದೆಡೆ. ಈ ಎಲ್ಲ ಆಟ, ಕಾಟಗಳೂ ನಿಜಕ್ಕೂ ಆ ದೇವನೊಬ್ಬನಿಗೇ ಪ್ರೀತಿ. ಹಾಲಿನ ಕೊಳವೆಗೆ ಪ್ರಕಾಶ ಮೂಡಿರುವಂತಹ ಕೊಳವೆ ದೀಪಗಳ ಸುತ್ತ ಹಾರಾಡುವ ಅಕ್ಕಿಕಾಳಿನಷ್ಟು ಚಿಕ್ಕದಿದ್ದು, ನಸು ಹಸಿರು, ಬಿಳಿ ಬಣ್ಣದ ಕೀಟಗಳನ್ನು ನೋಡಿದ್ದೇವೆ. ಒಂದು ದಿನ ರೂಮಿನಿಂದ ಎದ್ದು ಪಡಸಾಲೆಗೆ ಹೋಗಿ ಕತ್ತೆತ್ತಿ ನೋಡಿದಾಗ, ಗೋಡೆಯ ಮೇಲೊಂದು ಅದ್ಭುತ ದೃಶ್ಯ! ಕೊಳವೆ ದೀಪದ ಬಳಿಯ ಬಿಳಿಯ ಗೋಡೆಯ ತುಂಬ ಕಪ್ಪುಚುಕ್ಕಿಯ ಚಿತ್ತಾರ ಮೂಡಿತ್ತು. ಇದು ಏನೆಂದು ಅರ್ಥವಾಗಲಿಲ್ಲ. ಸಂಜೆಯಾಗುತ್ತಲೇ ದಂಡಿನಂತೆ ಬರುವ ಸೊಳ್ಳೆಗಳಿಂದ ರಕ್ಷಿಸಿಕೊಳ್ಳಲು ಕಿಟಕಿಗಳನ್ನೆಲ್ಲಾ ಮುಚ್ಚಿಯಾಗಿತ್ತು. ಈ ಅಸಂಖ್ಯ ಹುಳಗಳು - ಅಷ್ಟು ಹೊತ್ತಿಗೆ ಅವು ಒಂದು ಬಗೆಯ ಹಾರುವ ಕೀಟಗಳೆಂದು ಅರಿವಾಗಿತ್ತು - ಬಂದುದಾದರೂ ಹೇಗೆ? ಉದ್ದಿನಕಾಳಿನ ಗಾತ್ರದ, ಅದೇ ಕರಿಯ ಬಣ್ಣದ ಕೀಟಗಳು ಗೋಡೆ ತುಂಬ ವಿಲವಿಲ ಒದ್ದಾಡುತ್ತಾ, ಓಡಾಡುತ್ತಾ, ಕೆಲವು ಹಾರಾಡುತ್ತಾ - ಆ ಸುಂದರ ದೃಶ್ಯ ನೋಡಿಯೇ ಅನುಭವಿಸುವಂತಹುದು. ರಾತ್ರಿ ಆಕಾಶದಲ್ಲಿ ವಜ್ರದ ಚೂರುಗಳಂತೆ ಥಳಥಳಿಸುವ ನಕ್ಷತ್ರಗಳ ಸೊಬಗು ನೋಡಿದ್ದೀರಿ. ಬಿಳಿ ಆಕಾಶದಂತಹ ಗೋಡೆಯ ಮೇಲೆ ರಾರಾಜಿಸುತ್ತಾ ಪಕರಗುಟ್ಟುವ ಈ ಕಪ್ಪುನಕ್ಷತ್ರ ಸಮೂಹವನ್ನು ಯಾರು ನೋಡಿರುತ್ತಾರೆ? ಎಂದೂ ನೋಡಿರದಿದ್ದ ಈ ಕೀಟವನ್ನು ನೋಡಿದಾಗ ಈ ಬ್ರಹ್ಮಾಂಡದಲ್ಲಿ ಎಂಬತ್ತು ಲಕ್ಷ ಯೋನಿಗಳಿಗೂ ಹೆಚ್ಚಾಗಿಯೇ ಇರಬಹುದು ಜೀವರಾಶಿಗಳ ಸಂಖ್ಯೆ ಎನಿಸಿತು. ರೂಮಿನೊಳಗೂ ಬರುವುವೆಂಬ ಅಂಜಿಕೆಯಿಂದ, ರೂಮಿನ ಬಾಗಿಲುಹಾಕಿ ಕುಳಿತೆ. ವೆಂಟಿಲೇಟರಿನಿಂದ ಒಳಗೆ ಬಂದ ಈ ಸೈನ್ಯಕ್ಕೆ ಹೊರಹೋಗುವ ದಾರಿ ತಿಳಿದಿರಲಿಲ್ಲ. ಬೇರೆ ರೆಕ್ಕೆ ಹುಳಗಳಂತೆ ಶಬ್ದವನ್ನೂ ಮಾಡುತ್ತಿರಲಿಲ್ಲ, ಕಡಿಯುವ ಕೀಟವೂ ಅಲ್ಲ, ಇವು ಬಂದಿದ್ದಾದರೂ ಯಾವ ಲೋಕದಿಂದ? ಯಾವ ಕಾರ್ಯಸಾಧನೆಗೆ? ಬೆಳಕಿನೆಡೆಗೇಕೆ ಇದಕ್ಕೆ ಆಕರ್ಷಣೆ? ಒಂದನ್ನೊಂದು ತಿಂದು ಬದುಕುವ ಈ ಜಗತ್ತಿನಲ್ಲಿ ಇಷ್ಟು ಸಣ್ಣ ಕೀಟ ತಿನ್ನುವುದಾದರೂ ಏನನ್ನು? ಬೆಳಕನ್ನು ಗುರುತಿಸುವ ಇದರ ಅಂಗವಾದರೂ ಯಾವುದು? ಹೀಗೆ ಯೋಚಿಸುತ್ತಾ ಕುಳಿತಾಗ, ಪಡಸಾಲೆಯ ಕತ್ತಲನ್ನು ಬಿಟ್ಟು, ಬಾಗಿಲ ಕೆಳಗಿನಿಂದ ಒಂದೊಂದೇ ಹರಿದುಬಂದು ನೋಡನೋಡುತ್ತಿದ್ದಂತೆ ರೂಮಿನ ದೀಪದ ಹತ್ತಿರದ ಗೋಡೆಯನ್ನಾವರಿಸಿಕೊಂಡುಬಿಟ್ಟವು. ಇಂಥ ಪುಟ್ಟ ಕೀಟಗಳಿಗೂ ಬೆಳಕಿನ ಆಕರ್ಷಣೆಯೇ? ಸಾಮೂಹಿಕವಾಗಿ, ಬೆಳಕಿನ ಬಳಿ ಬರಲು ಇವು ನಡೆಸುವ ಸಾಹಸ ಆಶ್ಚರ್ಯ ಉಂಟುಮಾಡುತ್ತದೆ. ಬೆಳಕನ್ನರಸುವುದೇ ಇವುಗಳ ಹುಟ್ಟುಗುಣವೆನಿಸುತ್ತದೆ. ಅರೆಗಳಿಗೆ ಬಾಳಿದರೂ, ಬೆಳಕನ್ನರಸಿ, ಬೆಳಕಿನ ಸುತ್ತ ಗಿರಕಿ ಹೊಡೆಯುತ್ತಾ ಮುಗಿಯುವ ಇವುಗಳ ಬದುಕು ಧನ್ಯವೆನಿಸುತ್ತದೆ. ಈ ದೀಪದ ಹುಳಗಳಂತೆ ನಾವೂ ಸಾಮೂಹಿಕವಾಗಿ ಬೆಳಕನ್ನರಸಿ, ಬೆಳಕಿನ ಸುತ್ತ ಸುತ್ತುತ್ತಾ ಬೆಳಕನ್ನು ಅರ್ಥಮಾಡಿಕೊಂಡಾಗ ಅರ್ಥಮಾಡಿಕೊಂಡಾಗ...

ಎಲ್. ವಿ. ಶಾಂತಕುಮಾರಿ
೧೫೮, ೪ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ಪೂರ್ಣಪ್ರಜ್ಞ ಲೇಔಟ್, ಬೆಂಗಳೂರು - ೫೬೦ ೦೮೫



# ಜನಪದ ಪ್ರಕಾಶನ

ನಂ. 57, ಮೊದಲನೆಯ ಮುಖ್ಯರಸ್ತೆ, ಯಶವಂತಪುರ, ಬೆಂಗಳೂರು - 560 022

| ಶೀರ್ಷಿಕೆ | ಬೆಲೆ |
|---|---|
| **★ ಆರೋಗ್ಯ** | |
| ಹಿತ್ತಲ ಗಿಡ ಮದ್ದಲ್ಲ | 20.00 |
| ಊಟ ಬಲ್ಲವನಿಗೆ ರೋಗವಿಲ್ಲ | 40.00 |
| ಮಾಡಿನೋಡು ಮದ್ದಿನ ಗುಣ | 25.00 |
| ಔಷಧಿರಹಿತ ಪ್ರಕೃತಿ ಚಿಕಿತ್ಸೆ | 25.00 |
| ಪೂಜಾರ್ಹ ಔಷಧೀಯ ಸಸ್ಯಗಳು | 15.00 |
| ಆರೋಗ್ಯ ಭಾಗ್ಯ ನಿಮಗೆಂತು ಸಾಧ್ಯ ? | 35.00 |
| ಜನಪದ ವೈದ್ಯ | 15.00 |
| ಗ್ರಾಮೀಣ ವೈದ್ಯ | 20.00 |
| ಮಧುಮೇಹಕ್ಕೂ ಮದ್ದುಂಟು ! | 15.00 |
| ಸಿಗರೇಟ್ ತ್ಯಜಿಸಿ ಆರೋಗ್ಯ ರಕ್ಷಿಸಿ | 10.00 |
| ಹೋಮಿಯೋಪಥಿ ಚಿಕಿತ್ಸಾದರ್ಪಣ | 45.00 |
| ಸಾಮಾನ್ಯ ರೋಗಗಳು ಮತ್ತು ಹೋಮಿಯೋಪಥಿ ಚಿಕಿತ್ಸೆ | 15.00 |
| ಉಪವಾಸ (On Fasting) | 12.00 |
| ಮಕ್ಕಳ ಆರೋಗ್ಯ ರಕ್ಷಣೆ | 12.00 |
| ನಿಮ್ಮ ಮಗುವಿನ ಬೆಳವಣಿಗೆ ಹೇಗೆ? | 18.00 |
| ಪೌಷ್ಟಿಕ ಬಾಲಾಹಾರ | 15.00 |
| ಏಯ್ಡ್ಸ್ (Aids) | 10.00 |
| ಭ್ರಮಾಜನಕ ಮಾದಕ ವಸ್ತುಗಳು | 10.00 |
| ಕಣ್ಣುಗಳ ರಕ್ಷಣೆ | 18.00 |
| **★ ಅಡುಗೆ** | |
| ರಸದೂಟ (ಸಸ್ಯಾಹಾರಿ) | 35.00 |
| ರುಚಿ-1: ಪಲ್ಯ, ಗೊಜ್ಜು, ಚಟ್ನಿ | 20.00 |
| ರುಚಿ-2: ತರಹೆವಾರಿ ಉಪ್ಪಿನಕಾಯಿ | 12.00 |
| ರುಚಿಕರ ಪಕ್ವಾನ್ನಗಳು | 15.00 |
| ದೋಸೆ ಕ್ಯಾಂಪ್ | 15.00 |
| ರುಚಿಕರ ಪಾಯಸಗಳು | 12.00 |
| ಸ್ವಯಂ ಪಾಕ (ಮಸಾಲೆ ಪುಡಿಗಳು, ಸೂಪ್) | 12.00 |
| ಮನೆಯಂಗಳದ ಕೈ ತೋಟ | 20.00 |
| **★ ಯೋಗ** | |
| ಜನಪ್ರಿಯ ಯೋಗಾಸನಗಳು | 20.00 |
| ರೋಗ ನಿವಾರಕ ಯೋಗ | 20.00 |
| **★ ವಿನೋದ ಗಣಿತ** | |
| ಗಾಂಪರ ಗಣಿತ | 30.00 |
| ಇಂದ್ರಜಾಲ ಗಣಿತ | 25.00 |
| ಗಣಿತ ಶಾಸ್ತ್ರದ ಚರಿತ್ರೆ | 10.00 |
| ಸಂಖ್ಯಾ ವಿನೋದ | 24.00 |
| ಐಂದ್ರಜಾಲಿಕ ಮಾಯಾಚೌಕಗಳು | 20.00 |
| **★ ಮಕ್ಕಳ ಸಾಹಿತ್ಯ** | |
| ಬಾಲವಾಡಿ ಗೀತೆಗಳು | 15.00 |
| ಶಿಶು ಗೀತೆಗಳು | 15.00 |
| ಮಕ್ಕಳ ಹಾಡುಗಳು | 15.00 |
| ದೊಡ್ಡಮ್ಮ ಹೇಳಿದ ಕಥೆಗಳು | 15.00 |

| ಶೀರ್ಷಿಕೆ | ಬೆಲೆ |
|---|---|
| ಮಿಸ್ಸಮ್ಮ ಹೇಳಿದ ಕಥೆಗಳು | 15.00 |
| ದಶಾವತಾರ | 15.00 |
| ಮಹಾಭಾರತ ಕಥಾ | 12.00 |
| ಪುರಾಣ ಪುಣ್ಯ ಕಥೆಗಳು | 12.00 |
| ಜನಪ್ರಿಯ ಮಗ್ಗಿ ಪುಸ್ತಕ | 2.00 |
| ಸರಳ ಮಗ್ಗಿ ಪುಸ್ತಕ | 12.00 |
| ಜನಪ್ರಿಯ ಕನ್ನಡ ಕಾಪಿ ಪುಸ್ತಕ : ನಂ. - 0 | 25.00 |
| ಜನಪ್ರಿಯ ಕನ್ನಡ ಕಾಪಿ ಪುಸ್ತಕ : ನಂ. 1,2,3,4,5 | 20.00 |
| ಕನ್ನಡ ಕವಿಲೋಕ | 35.00 |
| ಕನ್ನಡ ಬಾಲ ವ್ಯಾಕರಣ | 25.00 |
| ಕನ್ನಡ ಗಾದೆಗಳ ಭಂಡಾರ | 20.00 |
| ಜನಪದ ಗಾದೆಗಳ ಸಂಗ್ರಹ | 12.00 |
| ಆಯ್ದ ಒಗಟುಗಳು | 12.00 |
| ಕನ್ನಡ ಪ್ರಬಂಧ ರಚನೆ | 20.00 |
| ಮಕ್ಕಳ ಮನೋವಿಕಾಸ ಮಾರ್ಗ | 12.00 |
| ನುಡಿಮುತ್ತು (Words of Wisdom) | 20.00 |
| ನುಡಿಮುತ್ತು (ಬೆಳಕಿನಂಗಳ) | 15.00 |
| **★ ವಿಚಾರ ಸಾಹಿತ್ಯ / ಇತರೇ** | |
| ವೈದಿಕ ಸಂಸ್ಕಾರಗಳು | 20.00 |
| ಧರ್ಮ ಸಂಗಮ | 20.00 |
| ದೇವರು ಮತ್ತು ಧರ್ಮ | 10.00 |
| ಯಾಜ್ಞವಲ್ಕ್ಯ ಸ್ಮೃತಿಃ | 15.00 |
| ಮೂಢನಂಬಿಕೆಗಳನ್ನು ಕೈ ಬಿಡಬೇಡಿ ! | 35.00 |
| ಜೀವದ ಉತ್ಪತ್ತಿ ಮತ್ತು ದೇವರು | 14.00 |
| ಹೆಣ್ಣು - ಸರ್ವಜ್ಞನ ದೃಷ್ಟಿಯಲ್ಲಿ | 10.00 |
| ಸ್ವತಂತ್ರ ಭಾರತದ ರಾಷ್ಟ್ರಪತಿಗಳು | 15.00 |
| ವಿಶ್ವ-ಜೀವ ವಿಕಾಸ ತಾಣ (ವಿಜ್ಞಾನ) | 20.00 |
| ಸಂಮೋಹನ ವಿದ್ಯೆ (Hypnotism) | 12.00 |
| ನಾಮಕರಣ ಮಾಡೋಣ ಬನ್ನಿ | 15.00 |
| ಗೃಹಿಣಿಯ ಸಂಗಾತಿ | 20.00 |
| ಸೆಕ್ಸ್ ಮತ್ತು ಮಾನವ ಸಮಾಜ | 15.00 |
| ಲೈಂಗಿಕ ಜೀವನ ದರ್ಶನ | 20.00 |
| ಕರ್ನಾಟಕ ಪರಿಚಯ (Quiz Book) | 35.00 |
| ಒಂದು ಬೇಕು ಎರಡು ಸಾಕು (On Family Planning) | 6.00 |
| ಸಿರಿಗಂಧ (ಜನಪದ ಗೀತೆಗಳು) | 8.00 |
| ಅಟಲ್ ಬಿಹಾರಿ ವಾಜಪೇಯಿ | 12.00 |
| **★ ಜ್ಯೋತಿಷ್ಯ / ಧಾರ್ಮಿಕ** | |
| ಅದೃಷ್ಟ ದರ್ಶಿನಿ | 15.00 |
| ಭವಿಷ್ಯ ನುಡಿಯುವ ಸಂಖ್ಯೆಗಳು | 12.00 |
| ವಾಸ್ತುಶಾಸ್ತ್ರ ಪರಿಚಯ | 15.00 |
| ಮಚ್ಚೆಗಳ ಮಹತ್ವ | 15.00 |
| ಜಾತಕದಲ್ಲಿ ಧನಯೋಗ | 12.00 |

| ಶೀರ್ಷಿಕೆ | ಬೆಲೆ |
|---|---|
| ಕನ್ಯಾವರ ಜಾತಕ ದರ್ಶನ | 15.00 |
| ಭಾರತೀಯ ಹಸ್ತ ಸಾಮುದ್ರಿಕಶಾಸ್ತ್ರ | 30.00 |
| ನವಾಂಶ (ಜ್ಯೋತಿಷ್ಯ ಗ್ರಂಥ) | 15.00 |
| ಶ್ರೀ ಗುರು ಚರಿತ್ರೆ | 30.00 |
| ಶ್ರೀ ಗಣೇಶ ಸ್ತೋತ್ರ ಲಹರಿ | 7.00 |
| ಶ್ರೀ ರಾಜರಾಜೇಶ್ವರೀ ಸ್ತೋತ್ರ ಸಂಗ್ರಹ | 9.00 |
| ಕಾರ್ತೀಕ ಮಾಸ ಮಹಾತ್ಮೆ | 20.00 |
| ಮಾಘ ಮಾಸ ಮಹಾತ್ಮೆ | 20.00 |
| ಹದಿನಾರು ಸೋಮವಾರ ವ್ರತ | 6.00 |
| ಪುರಂದರ ದಾಸವಾಣಿ | 15.00 |
| ಶ್ರೀ ತ್ಯಾಗರಾಜರ ಕೀರ್ತನೆಗಳು | 25.00 |
| ಸಂತ ಶಿಶುನಾಳ ಷರೀಫ್ ಸಾಹೇಬರು | 10.00 |
| ಜನಪ್ರಿಯ ಸ್ತೋತ್ರ ಮಂಜರಿ | 12.00 |
| ಸರ್ವಜ್ಞ ವಚನ ವಿಲಾಸ | 12.00 |
| ಸರ್ವಜ್ಞ ವಚನಾಮೃತ | 50.00 |
| ಸರ್ವಜ್ಞ ವಚನ ಸೌರಭ | 30.00 |
| ಸರ್ವಜ್ಞ ವಚನ ಸಂಪದ | 20.00 |
| ಸರಳ ಭಗವದ್ಗೀತೆ | 15.00 |
| ಶಿವ ಪೂಜಾ ವಿಧಾನ | 15.00 |
| ವಿರಾಟ ಪರ್ವ | 12.00 |
| ಬಸವೇಶ್ವರ ವೈಭವ | 20.00 |
| ಬಸವ ವಾಣಿ (ವಚನ ವೈಭವ) | 12.00 |
| ಬಸವ ದರ್ಶನ | 20.00 |
| ಶ್ರೀ ಹನುಮಾನ್ ಚಾಲೀಸಾ | 10.00 |
| ಭಗವದ್ಗೀತೆ (ಪಾರಾಯಣ ಗ್ರಂಥ) | 15.00 |
| ಭಗವದ್ಗೀತೆ (ಡೆಮ್ಮಿ) - ಪಾರಾಯಣ ಗ್ರಂಥ | 20.00 |
| **श्री हनुमान चालीसा** | 4.00 |
| ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರಂ | 10.00 |
| ಶ್ರೀ ಲಲಿತಾ ಸಹಸ್ರನಾಮ ಸ್ತೋತ್ರಂ | 10.00 |
| ಶ್ರೀ ವಿಷ್ಣು ಸಹಸ್ರನಾಮಾವಲಿಃ | 10.00 |
| ಶ್ರೀ ಲಲಿತಾ ಸಹಸ್ರನಾಮಾವಲಿಃ | 10.00 |
| ಶ್ರೀ ಆದಿತ್ಯ ಹೃದಯಂ | 10.00 |
| ದೇವತಾ ಅಷ್ಟೋತ್ತರ ಶತನಾಮಾವಲಿಃ | 10.00 |
| ಶ್ರೀ ಲಕ್ಷ್ಮೀ ನೃಸಿಂಹ ಸಹಸ್ರನಾಮಾವಲಿಃ | 8.00 |
| ಶಿವ ಸ್ತೋತ್ರಮಾಲಾ | 8.00 |
| ದೇವೀ ಸ್ತೋತ್ರರತ್ನಾಕರ | 8.00 |
| ಷೋಡಶ ದೇವತಾಷ್ಟಕ ಸಂಗ್ರಹ | 8.00 |
| ಅಷ್ಟೋತ್ತರ ಚಂದ್ರಿಕಾ | 8.00 |
| ದಿವ್ಯ ಸ್ತೋತ್ರ ಪುಷ್ಪಾಂಜಲಿ | 8.00 |
| ಸುಭಾಷಿತಗಳು (ಸಂಸ್ಕೃತ - ಕನ್ನಡ) | 25.00 |
| ಸಂಸ್ಕೃತ ಶಬ್ದ ರೂಪ ಮಾಲಿಕಾ | 40.00 |
| ಜನಪ್ರಿಯ ಕನ್ನಡ ಅಕ್ಷರ ಮಾಲೆ | 20.00 |

| ಶೀರ್ಷಿಕೆ | ಬೆಲೆ |
|---|---|
| ರಾಷ್ಟ್ರಕವಿ ಕುವೆಂಪು - ಜೀವನ ಮತ್ತು ಸಂದೇಶ | 15.00 |
| ಸಂಸ್ಕೃತ ವ್ಯಾಕರಣ | 40.00 |
| ನೊಬೆಲ್ ಪ್ರಶಸ್ತಿ ವಿಜೇತ ಸರ್ ಸಿ. ವಿ. ರಾಮನ್ | 15.00 |
| **★ BOOKS IN ENGLISH** | |
| Simple Home Remedies | 25.00 |
| Popular Home Remedies | 25.00 |
| Ancient Remedies | 15.00 |
| Pathways to Good Health | 15.00 |
| Guide to Nature Cure | 24.00 |
| Diabetes Mellitus | 15.00 |
| 501 Golden Thoughts | 25.00 |
| Everyday Proverbs | 5.00 |
| East West Nursery Rhymes | 8.00 |
| Gandhi Darshan | 5.00 |
| Numbers For Fun | 35.00 |
| Indian Folk Remedies | 20.00 |
| Asian Food Therapy | 45.00 |
| The Universe: Our Birth Place | 20.00 |
| How to read a Bhava ? | 20.00 |
| Fasting for Good Health | 10.00 |
| Elements of Hypnotism | 20.00 |
| The Gospel of Swamy Vivekananda | 10.00 |
| New Techniques of Prediction - Part 1 | 50.00 |
| New Techniques of Prediction - Part 2 | 55.00 |
| Mathemagic | 20.00 |
| My Family Doctor | 20.00 |
| Dosa Khazana | 20.00 |
| The Light of Truth (Quotable Quotes) | 10.00 |
| Primary Cursive Copy Writing - Book : Nos. 1,2,3 each | 20.00 |
| Kids English Copy Writing Book | 20.00 |
| Kindergarten Number Book | 20.00 |
| Kindergarten - ABC Pictorial Book | 15.00 |
| Kindergarten Tables Book | 10.00 |
| Tables Made Easy | 12.00 |
| English Copy Writing Book - CAPITAL LETTERS | 16.00 |
| English Copy Writing Book - small letters | 16.00 |
| Hindi Copy Writing Book - I | 25.00 |
| Hindi Copy Writing Book - II | 16.00 |
| Hindi Copy Writing Book - III | 20.00 |

# ಕಾರು ಕೊಂಡಿದ್ದೀಯ ?
# ಮಾರುತಿ !



ಶಶಿಕಲಾ ವೀರಯ್ಯಸ್ವಾಮಿ

**ನಾ**ನು ಬೆಂಗಳೂರಿನಲ್ಲಿ ಉಪನ್ಯಾಸಕಿಯಾಗಿದ್ದಾಗ, ಬೆಂಗಳೂರು ದೂರದರ್ಶನದ, ಚಲನಚಿತ್ರ ಮತ್ತು ಧಾರಾವಾಹಿಗಳ ಆಯ್ಕೆ ಸಮಿತಿಯ ಸದಸ್ಯೆಯೂ ಆಗಿದ್ದೆ. ಈ ಸದಸ್ಯತ್ವದ ೩ ವರ್ಷದ ಅವಧಿ ಮುಗಿದಾಗ ಗೌರವಧನವೆಂದು ಬಂದ ಹಣ ಕೂಡಿಟ್ಟಿದ್ದು ಒಮ್ಮೆಲೇ ಕೈಗೆ ಬಂತು. ಅದೇ ಸಮಯದಲ್ಲಿ ನನ್ನ ಸೇವಾ ಅವಧಿಯ ಕಾಲಮಿತಿ ಬಡತಿಯ ಹಣವೂ ಒಂಚೂರು ಬಂತು. ಸದಾ ಯಜಮಾನರನ್ನು ಲಿಫ್ಟ್ ಕೇಳಿ ಕೇಳಿ ಬೇಸತ್ತ ನನಗೆ ನನ್ನದೇ ಒಂದು ಕಾರು ಕೊಳ್ಳೋಣ ಅನಿಸಿತು. ಕಾಲೇಜಿಗೆ, ಅಕಾಡೆಮಿ ಮೀಟಿಂಗ್‌ಗೆ, ಕ.ಸಾ.ಪ. ಮತ್ತು ಕಲಾಕ್ಷೇತ್ರದ ಕಾರ್ಯಕ್ರಮಗಳಿಗೆ ಹೀಗೆ ಎಲ್ಲೆಲ್ಲೂ ಸುತ್ತಾಡುತ್ತ ಇರುವ ನನಗೆ ಸಮಯ ಮತ್ತು ಹಣ ಎರಡೂ ಉಳಿಸಲು ಕಾರು ಬೇಕೇ ಅನಿಸಿತು. 'ಸೆಕೆಂಡ್ ಹ್ಯಾಂಡ್' ಪದಕ್ಕೆ ನಾವು '೨ನೇ ಕೈ' ಎನ್ನುತ್ತಿದ್ದೆವು. ಈಗ ಸುಸಂಸ್ಕೃತ ಭಾಷೆಯಲ್ಲದನ್ನು 'ದ್ವಿತೀಯ ಕರದ ಕಾರು' ಎಂದು ಕರೆದು ಚೌಕಾಶಿ ಮಾಡಿ ಕೊನೆಗೂ ಬಿಳಿಯ ಬಣ್ಣದ ೮೦೦ ಮಾರುತಿಯನ್ನು ಕೊಂಡೇಬಿಟ್ಟೆವು.

ನನಗಂತೂ ಹೇಳತೀರದ ಸಂಭ್ರಮ. ದೇವರ ಪೂಜೆಯನ್ನು ಒಂದಿನವೂ ಮಾಡದಿದ್ದರೂ, ಕಾರಿಗೆ ವಿಭೂತಿ-ಕುಂಕುಮ ಥಾಳಾಗಿ ಬಳಿದು ಹೂವಿನ ಸರ ಹಾಕಿ ಅದರ ಕುತ್ತಿಗೆಗೆ ಒಣಮೆಣಶಿನಕಾಯಿ ಲಿಂಬೇಹಣ್ಣನ್ನು ಕರಿದಾರದಲ್ಲಿ ಪೋಣಿಸಿ ಕಟ್ಟಿ, ನಾಲ್ಕೂ ಚಕ್ರಗಳ ಕೆಳಗೆ ಲಿಂಬೆಹಣ್ಣಿಟ್ಟು ಅವನ್ನು ಗಾಲಿಗೆ ಸಿಗುವಂತೆ ಒಡೆದು, ಇವೆಲ್ಲಕ್ಕೂ ಇವರನ್ನು (ಇವರು ಯಾಕೆ ಅನ್ನಬೇಕೋ ? ಅವರು ಅಂದರಾಗುವುದಿಲ್ಲವೇ ?) ಕಾಡಿ ಅಂತೂ ಸಂಭ್ರಮಪಟ್ಟೆ. ಮನೆಯ ಮುಂದಿನ ಪೋರ್ಟಿಕೋದಲ್ಲಿ ನಿಲ್ಲಿಸಿ, ಉಂಡು ಮಲಗಿದ್ದಾಯಿತು. ನಿದ್ದೆ ಬರದು, ಏನೋ ಸಡಗರ, ಜತೆಗೇ ತಳಮಳ. ಹಗಲೆಲ್ಲ (ಅದು ರಾತ್ರಿಯಾಗಿದ್ದರೂ) ಏಳುವದು ಹೊರಗಿನ ಲೈಟು ಹಾಕುವದು, ಕಾರನ್ನು ನೋಡುವದು, ರೋಮಾಂಚಿತಳಾಗುವದು! ನವಜಾತ ಶಿಶುವನ್ನು ಇಡೀ ರಾತ್ರಿ ತೊಟ್ಟಿಲಲ್ಲಿ ಬಗ್ಗಿ ಬಗ್ಗಿ ನೋಡುವ ತಾಯಿಯಂತೆ. ನಿಜವಾಗಿಯೂ ನನ್ನ ಭವಿಷ್ಯ ನಿಜವಾಯಿತು. ಅಪ್ಪನಿಗೆ ಯಾರೋ ಜೋತಿಷಿಗಳು ಹೇಳಿದ್ದರಂತೆ, ''ನಿಮ್ಮ ಹಿರಿಮಗಳಿಗೆ ವಾಹನ ಯೋಗವಿದೆ'' ಎಂದು.

ಅಂತೂ ವಿದ್ಯಾಭ್ಯಾಸ ಮುಗಿಸಿ, ನೌಕರಿಗೆ ಸೇರಿ ಹತ್ತು ವರುಷಗಳಾದರೂ ಭವಿಷ್ಯ ನಿಜವಾಗುವ ಲಕ್ಷಣಗಳು ಕಾಣಲಿಲ್ಲ. ಒಂದು ಹಳೆಯ ಸೈಕಲ್ಲನ್ನೂ ಕೊಳ್ಳಲಿಲ್ಲ. ಆದರೆ ಆಗಾಗ ಭಾಷಣಗಳಿಗೆ, ದೂರದರ್ಶನ, ಆಕಾಶವಾಣಿ ಕಾರ್ಯಕ್ರಮಗಳಿಗೆ, ಸಮ್ಮೇಳನಗಳಿಗೆ ಅಣ್ಣ-ತಮ್ಮ-ತಂಗಿಯರೂ-ತವರೂರು-ವರ್ಗವಾದ ಊರು ಎಂದು ಹೀಗೆ ಸದಾ ತರತರದ ವಾಹನಗಳಲ್ಲೇ ಹೆಚ್ಚು ಆಯುಷ್ಯವನ್ನು ಕಳೆದಿದ್ದೆನಾದ್ದರಿಂದ ಜೋತಿಷಿಗಳು ಹೇಳಿದ್ದು ಇದೇ ಯೋಗವೇನೋ ಎಂದು ಸ್ವಲ್ಪ ಸಮಾಧಾನ ತಾಳಿದ್ದೆ. ಆದರೆ ಇದೀಗ ಕನಸು ನನಸಾಗಿದೆ! ಬೆಳಿಗ್ಗೆ ಎದ್ದ ತಕ್ಷಣ ದೇವರಪಟ ನೋಡಲು ಧಾವಿಸುವ ಭಕ್ತರಂತೆ ಹೊರಗೋಡಿ ಬಂದು ಕಾರು ನೋಡಿದೆ. ಎಳೆಬಿಸಿಲಲ್ಲಿ ನಸುನಗುತ್ತಾ ನನ್ನೆಡೆಗೊಂದು ವಯ್ಯಾರದ ನೋಟ ಬೀರಿತು! ನಕ್ಕು, ಅವಸರದಿಂದ ಕಾಲೇಜಿಗೆ ಸಿದ್ಧಳಾದೆ. ಇವರೂ ಸಿದ್ಧವಾಗಿ ಎಂದಿನಂತೆ ತಿಂಡಿ ಕೇಳಿದರು. ಎಲ್ಲಿದೆ ? ಕಾರನ್ನು ತೊಳೆದು ಒರೆಸುವುದರಲ್ಲಿ ಮರೆತೇಹೋಗಿತ್ತು! ''ಹಂಗಾದ್ರ, ನಾ ಹೊರಗಽ ನಾಷ್ಟಾ ಮಾಡ್ತೀನಿ'' ಎನ್ನುತ್ತ ಇನ್ನೊಂದು ಬದಿಗೆ ನಿಲ್ಲಿಸಿದ್ದ ತಮ್ಮ ಕಾರನ್ನು ಸ್ಟಾರ್ಟ್ ಮಾಡಿಕೊಂಡು ಹೊರಟೇ ಹೋದರು. ಬ್ಯಾಗು ತುಗುಲಿಸಿಕೊಂಡು ಅವಸರವಸರವಾಗಿ ಹೊರಬಂದೆ. ಕಾಲೇಜಿಗೆ ತಡವಾಗುತ್ತಿತ್ತು! ಈಗ ಹೊಳೆಯಿತು!! ಕಾರಿನ ಸಂಭ್ರಮದಲ್ಲಿ ನನಗೆ 'ಡ್ರೈವಿಂಗ್' ಬರುವುದಿಲ್ಲ ಎಂಬುದು ಮರೆತೇಹೋಗಿತ್ತು! ಓಡಿಹೋಗಿ ಆಟೋ ಹಿಡಿದು ಕಾಲೇಜಿಗೆ ಧಾವಿಸಿದೆ. ಬಿಡುವಾದಾಗ ಇವರಿಗೆ ಫೋನು ಮಾಡಿ, ಎಲ್ಲ ಹೇಳಿ ಬಯ್ದೆ, ''ನನ್ನನ್ಯಾಕೆ ಕರೆದುಕೊಂಡು ಕಾಲೇಜಿಗೆ ಬಿಡಲಿಲ್ಲಾ?'' ಅಳುವದೊಂದು ಬಾಕಿ ಇತ್ತು. ''ಅಲೇ ಇವ್ನ? ನೀ ನನ್ನ ಕಡಿಗಿ ನೋಡಾಕ ಸೈತ ತಯಾರಿಲ್ಲಾ? ಕಾರ ನಡಸಾಕ ಬರದಿದ್ರ ಒಂದ ಹಗ್ಗಾ ಕಟ್ಟಿ ಎಳಕೊಂಡು ಹೋಗಬೇಕಾಗಿತ್ತು, ನಿನ್ನ ಗೆಳತ್ಯಾರಿಗಿ ಕಾರು ತೋರಸೂದೊಂಧಽ ನಿನ್ನ ತಲ್ಯಾಗ ತುಂಬಿತ್ತಲ್ಲಾ? ಮದಲ ನಾಳಿನಿಂದ ಡ್ರೈವಿಂಗ್ ಕ್ಲಾಸಿಗಿ ಹೋಗು'' ಎಂದು ಗದರಿಸಿ ಫೋನು ಕುಕ್ಕಿದರು! ಬೆಳಗಿನ ತಿಂಡಿ ಬೇರೆ ಬಿದ್ದಿರಲಿಲ್ಲವಲ್ಲ ಪಾಪ!

ಸರಿ, ಮರುದಿನದಿಂದ ತರಬೇತಿ ಸುರುವಾಯಿತು. ನನ್ನ ಗುರು ಒಬ್ಬ ವಯಸ್ಸಾದ ಸಿಡುಕ. ನನಗೋ ಯಂತ್ರಗಳ ವಿಷಯದಲ್ಲಿ ಯಾವಾಗಲೂ ಅಪನಂಬಿಕೆ. ಅವು ನಮ್ಮ ಗಾಬರಿಯನ್ನು ಅರ್ಥಮಾಡಿಕೊಂಡು ಸಹಕರಿಸುವುದಿಲ್ಲವಲ್ಲ ಎಂಬ ಬೇಸರ. ನನ್ನ ಗುರುಶ್ರೀ ಬನಶಂಕರಿ-ಜಯನಗರಗಳ ರಸ್ತೆಗಳಲ್ಲಿ ನನ್ನನ್ನು ಆಟವಾಡಿಸತೊಡಗಿದ. ತಾನು ಸೂತ್ರಧಾರ ಕೃಷ್ಣಪರಮಾತ್ಮನಂತೆ ಇನ್ನೊಂದು ಸ್ಟೇರಿಂಗ್ ಹಿಡಿದು ವಿರಾಜಮಾನನಾದ. ಅವನು ಎಲ್ಲಿ ಸಿಡುಕಿ ಬೈಯ್ಯುತ್ತಾನೋ ಎಂಬ ಭಯದಿಂದ ಅಧೀರಳಾಗಿ, ಅವನು ಲೆಫ್ಟ್ ಅಂದರೆ ರೈಟಿಗೆ ಹೊರಳಿ ರೈಟ್ ಅಂದರೆ ಲೆಫ್ಟ್‌ಗೆ ಹೊರಳಿ, ಸಿಡುಕಿಗೆ ನೀರೆರೆದು ನಾನೇ ನೆನೆಯತೊಡಗಿದೆ. (ನನಗೆ ನಮ್ಮ ಕೂಡಲ ಸಂಗಮದೇವರ ನೆನೆವ ಚಿಂತೆ). ಅಂತೂ ಇಂತೂ ಹದಿನೆಂಟು ದಿನದ ಮಹಾಪರ್ವ ಮುಗಿಸಿ ಲೈಸೆನ್ಸ್ ತೆಗೆಸಿ ನಿಟ್ಟುಸಿರುಬಿಟ್ಟೆ.

ಮೊದಲನೆಯ ದಿನ! ನಾನೇ ಡ್ರೈವಿಂಗ್ ಮಾಡಿಕೊಂಡು ಕಾಲೇಜಿಗೆ ಹೊರಡುವ ಮಹಾಸುದಿನ! ಬನಶಂಕರಿಯಿಂದ ಬಸವನಗುಡಿಯ ಕಾಲೇಜಿಗೆ ನನ್ನ ದಿಗ್ವಿಜಯ ಹೊರಟಿತು. ಹೊರಡುವಾಗ ಇವರು ಶುಭ ಕೋರಿ ಕಳಿಸಿದರು. ಆದರೂ ಧೈರ್ಯ ಸಾಕಾಗಲಿಲ್ಲ. ಎದೆ ಡವಡವ, ಸ್ಟಿಯರಿಂಗ್ ಹಿಡಿದ ಕೈ ಲಘುವಾಗಿ ಕಂಪಿಸುತ್ತಿದೆ. ಮದುವೆಯ ದಿನ ಮೊದಲಸಲ ಗಂಡ ಕೈ ಹಿಡಿದ ನೆನಪಾಗುತ್ತಿದೆ. ಹಾಂ! ಹೊರಟಿತು ರಥ. ಈಗ ಕ್ಲಚ್, ಪೆಡಲು, ಈ ಗೇರು ಆ ಗೇರು, ಇಂಡಿಕೇಟರು ಇವುಗಳ ಚಕ್ರದಲ್ಲಿ ಸುತ್ತುತ್ತಾ ಇನ್ನೇನು ಕಾಲೇಜು ಹತ್ತಿರ ಬಂದೇ ಬಿಟ್ಟಿತೆಂಬ ಉತ್ಸಾಹದಲ್ಲಿದ್ದೆ. ದೇಹದ

ಸಮಸ್ತ ಕಣಗಳೂ ಕಾರು ಚಾಲನೆಯಲ್ಲಿ ಸಂಪೂರ್ಣ ಮೈಮರೆತಿದ್ದವು. ಧ್ಯಾನಸ್ಥ ಸ್ಥಿತಿ ಅದು. ಅರೆರೆರೆರೇ! ಕೋಳಿಯೊಂದು ಅಡ್ಡಲಾಗಿ ಓಡಿಬಂತು. ನಾನು ಬ್ರೇಕ್ ಹಾಕುವದರಲ್ಲಿ ಅದು ಓಡಿ ಬಂದಿದ್ದೇ ಮುಂದಿನ ಗಾಲಿಗೆ ಸಿಕ್ಕು ಆತ್ಮಾರ್ಪಣೆ ಮಾಡಿಕೊಂಡು ಜೀವನ್ಮುಕ್ತಿಯನ್ನು ಪಡೆದುಕೊಂಡುಬಿಟ್ಟಿತು. ಬೆಳಗಿನ ಜಾವವಾದುದರಿಂದ ಹೆಚ್ಚಿನ ಜನಸಂಚಾರವಿರಲಿಲ್ಲ. (ಅದು ಹತ್ತು ವರ್ಷಗಳ ಹಿಂದಿನ ಬೆಂಗಳೂರಿನ ಮುಂಜಾವು!) ಆದರೂ ಕೆಲವರು ಸಹಾಯಕ್ಕೂ ಕೆಲವರು ನನ್ನು ಬಯ್ಯುವುದಕ್ಕೂ ಓಡಿ ಓಡಿ ಬಂದರು. ಕೋಳಿಯ ಒಡತಿ ಅದೆಲ್ಲಿಂದಲೋ ಪ್ರತ್ಯಕ್ಷಳಾಗಿ ಸಹಸ್ರನಾಮ ಸುರುಮಾಡಿದಳು. ಉಳಿದವರು ಬಾಯಿ ಬಿಡುವ ಮೊದಲೇ ಪರ್ಸಿನಿಂದ ನೂರು ರೂಪಾಯಿ ತೆಗೆದುಕೊಟ್ಟು ಗಾಡಿಬಿಟ್ಟೆ! ಇವರಿಗೆ (ಅವರಿಗಲ್ಲ) ವರದಿ ಒಪ್ಪಿಸಿ ಬೈಸಿಕೊಂಡದ್ದೂ ಆಯಿತು. ''ಮಾರಾಯ್ತಿ, ನೀನು ಕಾರು ನಡುಸೂದು ಬ್ಯಾಡಾ. ಮದಲೇ ನೀವು ಕವಿಗಳು, ತಲ್ಯಾಗ ಸದಾ ನೂರಾ ಎಂಟು ಹುಳಾ ಹಾರ್‍ಯಾಡತಿರತಾವು. ಇವತ್ತ ಕೋಳಿ ಬಲಿ ಆತು. ನಾಳಿ ಕುರಿ, ನಾಡದು ಕ್ವಾಣಾ, ಆಮ್ಯಾಲೆ ಮನಶ್ಯಾ, ನರ ಬಲಿ! ನರಬಲಿ ತಗೋವರ್‍ನ್ನೂ ನೀ ಬಿಡಂಗ ಕಾಣಂಗಿಲ್ಲಾ. ಅಲ್ಲಾ, ಇದೆಲ್ಲಾ ಒಂದ ಕಡೀಗಿರ್ಲಿ, ಸ್ವತಾಃ ನೀನೂ ಒಂದಿನಾ ಕೈ-ಕಾಲು, ಮುರಕೊಂಡು ಮನ್ಯಾಗ ಮಲಗಿದ್ದರ ನಿನ್ನ ಸೇವಾ ಯಾರ ಮಾಡವರು? ನಾಳಿಯಿಂದ ಒಬ್ಬ ಡ್ರೈವರ್‍ನ ಗೊತ್ತು ಮಾಡೂನು. ನಿನಗ-ನಿನ್ನ ಕಾರಿಗಿ – ಬನಶಂಕರಿ ಮತ್ತ ಬಸವನಗುಡಿಯ ಸಮಸ್ತ ಜೀವರಾಶಿಗಳಿಗೂ ದೇವರು ಪೂರ್ಣಾಯುಸ್ಸು ಕೊಡಲಿ'' ಎಂದು ಬೈಗುಳದ ಮೂಲಕ ಹರಸಿದರು! ಕೋಳಿಯ ನೆನಪಾಗಿ ಪಾಪ ಅನಸ್ತಿತ್ತು.

ನಾ ಕಾರಿನ್ಯಾಗ ಕುಂತಾಗ ಈ ಸಕಲ ಜೀವಾತ್ಮರು ದಾರಿಬದಿಯ ಗಿಡ-ಮರಗಳು, ಯಾರೂ ಅಡ್ಡ ಬರಬಾರದು. ಅರ್ಜುನನಂತೆ (ಅವನು ಗುರಿ ಇಟ್ಟರೆ ಹಕ್ಕಿಯ ಕತ್ತು ಮಾತ್ರ ಕಾಣುತ್ತಿತ್ತಂತೆ. ಉಳಿದವರಿಗೆ ಕಾಣುವಂತೆ ಎಲೆ-ರೆಂಬೆ-ಕಾಂಡ-ಮರ-ಬಯಲು ಯಾವುದೂ ಕಾಣುತ್ತಿರಲಿಲ್ಲವಂತೆ) ನಾನೂ ಕೇವಲ ಬಾನೆಟ್ಟಿನ ತುದಿ ಮಾತ್ರ ನೋಡುತ್ತ ಡ್ರೈವಿಂಗ್ ಮಾಡುವದಿದ್ದರೆ ಎಷ್ಟು ಸೊಗಸಾಗಿರುತ್ತಿತ್ತು! ಅಂದು ಕಾರಿನ ಸ್ಟೇರಿಂಗ್‌ನ್ನು ಚಾಲಕನಿಗೆ ಒಪ್ಪಿಸುವಾಗ ಮಗಳನ್ನು ಗಂಡನ ಮನೆಗೆ ಕಳಿಸುವಷ್ಟು ಸಂಕಟವಾಯಿತು. ಕಾರೋ ರಕ್ಷತಿ ರಕ್ಷಿತಃ!

ಗೋವಿಂದ, ಮುಕುಂದ, ಗೋಪಾಲ, ಗೌಡ, ನಜೀರಸಾಬು, ಡೇವಿಡ್ ಹೀಗೆ ಎಷ್ಟು ಜನ ಚಾಲಕರು ಬಂದುಹೋದರು? 'ಸರ್ವಧರ್ಮ ಚಾಲಕ ಸಂಘ'ವನ್ನು ಸ್ಥಾಪಿಸಬಹುದಾಗಿತ್ತು! ಒಬ್ಬೊಬ್ಬರದೂ ಒಂದೊಂದು ವರಸೆ! ವಿಜಯನಗರಕ್ಕೆ ಮನೆಯನ್ನು ಸ್ಥಳಾಂತರಿಸಿದೆವು. ಗೌರೀಪಾಳ್ಯದ ಮೇಲೆ ಕಾಲೇಜಿಗೆ ಹೋಗಬೇಕಾಗಿತ್ತು. ಅಲ್ಲೊಂದು ಕಡೆ ರಸ್ತೆ ಬದಿಯಲ್ಲೊಂದು ತಿಪ್ಪೆಯ ರಾಶಿ! ನನ್ನ ಕಾರು ಅಲ್ಲಿ ಬಂದ ತಕ್ಷಣ ಮುನ್ಸೂಚನೆ ಕೊಡದೇ ಗಕ್ಕನೆ ನಿಂತುಬಿಡುತ್ತಿತ್ತು. ''ಯಾಕಪಾ, ಏನಾತು?'' ನಾನು ಮೂಗು ಮುಚ್ಚಿಕೊಂಡು ಚಾಲಕನನ್ನು ಕೇಳುವದು. ಅವನು ''ಪೆಟ್ರೋಲು ಆಯ್ತು ಮೇಡಂ'' ಎಂದು ನಿರ್ವಿಕಾರನಾಗಿ ಉತ್ತರಿಸುವದು. ''ನೀ, ಯಾಕ ಯಾವಾಗಲೂ ಮದಲೇ ಪೆಟ್ರೋಲ ಎಷ್ಟೈತೀ ಅಂತ ನೋಡೂದಿಲ್ಲಾ?'' ದುರ್ಗಂಧಕ್ಕೇ ಕಿವುಚಿದ ಮುಖಮಾಡಿ ನನ್ನ ಬೇಸರ. ''ನೋಡಿದ್ದೆ ಮೇಡಂ, ಆದರೂ ಖಾಲಿ ಆತು.'' ಇದು ಸದಾ ಅವನ ಶಾಂತ ಉತ್ತರ. ಈ ನಜೀರಸಾಬು ಹೋದ ಜನ್ಮದಲ್ಲಿ ಸೂಫೀ ಸಂತನೇನಾದರೂ ಆಗಿದ್ದಿರಬಹುದೇ? ಸರಿ, ನನ್ನನ್ನು ಅದೇ ತಿಪ್ಪೆಯ ಮೇಲೆ ಗಾಡಿಯಲ್ಲಿ ಕುಳ್ಳಿರಿಸಿ ಅವನು ಪೆಟ್ರೋಲು ತರಲು ಹೋಗುವದು. ನಾನು ದುರ್ವಾಸನೆಗೆ ಹೆದರಿ ಕಿಟಕಿಯ ನಾಲ್ಕೂ ಗ್ಲಾಸು ಏರಿಸಿ, ''ಇವಂದು ಯಾವಾಗಲೂ ಇದಽ ಆತು. ಎಂತಾವ ಗಂಟ ಬಿದ್ದ ನೋಡು, ಗಂಡನ್ನ ಹಿಡಕೊಂಡು, ನನಗ ಸಿಗೂವೆಲ್ಲಾ ಇಂತಾವೇ. ಅನಾನುಕೂಲಾನೇ ಹೆಚ್ಚು'' ಎಂದು ಬೈದುಕೊಳ್ಳುತ್ತ ಏನಾದರೂ ಓದೋಣ ಎಂದು ಕುಳಿತರೆ, ಗೌರೀಪಾಳ್ಯದ ಸಮಸ್ತ ಚಿಲಿಪಿಲಿಗಳೂ ಕಾರಿನ ಸುತ್ತ ನೆರೆಯುತ್ತಿದ್ದವು. ಕಿಟಕಿಯ ಗ್ಲಾಸಿನಲ್ಲಿ ತಮ್ಮ ಮುಖ ನೋಡಿಕೊಂಡು ಹಲ್ಲು ಕಿರಿಯುವದು, ಅಣಕಿಸುವದು, ಒಂಚೂರು ದೊಡ್ಡ ಚಿಲಿಪಿಲಿ ಇದ್ದರೆ ಸಟ್ಟನೆ ಜೇಬಿನಿಂದ ಬಾಚಣಿಗೆ ತೆಗೆದು ಸ್ಟೈಲಾಗಿ ತಲೆ ಬಾಚಿಕೊಳ್ಳುವದು ಎಲ್ಲವನ್ನೂ ಸಾಂಗವಾಗಿ ಡ್ರೈವರ ಬರುವವರೆಗೆ ಶ್ರದ್ಧೆಯಿಂದ ಮಾಡುತ್ತಿದ್ದವು. ನನಗೆ ನಗು ಬರುತ್ತಿತ್ತು, ಬೇಸರವೆಲ್ಲ ಹೋಗಿಬಿಡುತ್ತಿತ್ತು.

ಇನ್ನೊಬ್ಬನಿದ್ದ. ಗೌಡ ಅಂತ ಅವನ ಹೆಸರು. ಇವರನ್ನು (ಅವರನ್ನಲ್ಲ) ರೈಲ್ವೇ ಸ್ಟೇಶನ್ನಿಗೆ ಬಿಡಲು ಹೋದಾಗೊಮ್ಮೆ (ತಮ್ಮ ಕಾರನ್ನು ಯಾರಿಗೂ ಮುಟ್ಟಲೂ ಬಿಡುತ್ತಿರಲಿಲ್ಲ) ಮರಳಿ ಬರುವಾಗ ಯಾವುದೋ ಅಜ್ಞಾತಲೋಕದಿಂದ ಫೋನು ಮಾಡುತ್ತಿದ್ದ ''ಮೇಡಂ, ಪೆಟ್ರೋಲೂ ಆಗಿದೆ. ಟಯರೂ ಪಂಕ್ಚರ್ ಆಗಿದೆ. ಏನು ಮಾಡಲಿ?'' ಎಂದು ದೀನನಾಗಿ ಭಕ್ತನಂತೆ ಮೊರೆಯಿಡುತ್ತಿದ್ದ. ಏನು ಮಾಡಲಿ? ಇದು 'ಪುನರಪಿ ಪ್ರಸಂಗಂ ಪುನರಪಿ ದುಡ್ಡಿಗೆ ಮೂಲಂ' ಹೀಗೆ ಬೇರೆ ಬೇರೆ ಚಾಲಕರ ಕೈಗೆ ಸಿಕ್ಕು ನನ್ನ ಕಾರು ನಲುಗಿ ಹೋಯಿತು. ನಿಯಂತ್ರಣವನ್ನೇ ಕಳೆದುಕೊಳ್ಳ ತೊಡಗಿತು. ಸರ್ಕಲ್ ದಾಟುವಾಗ ಕೆಂಪು ಸಿಗ್ನಲ್ ಬಿದ್ದರೆ ಸರ್ಽಽನೇ ಓಡುತ್ತಿತ್ತು, ಪೊಲೀಸರಿಂದ ಬೈಸುತ್ತಿತ್ತು. ಸರ್ಕಲ್‌ನಲ್ಲಿ ನಿಲ್ಲಿಸಿದಾಗ ಹಸಿರು ಸಿಗ್ನಲ್ ಬಿದ್ದರೂ ಮುಂದೆ ಕದಲುತ್ತಿರಲಿಲ್ಲ. ಹಿಂದಿನ ಕಾರ್‌ಪತಿಗಳೆಲ್ಲ ಮುಗಿಲು ಹರಿದು ಬೀಳುವಂತೆ ಹಾರ್ನು ಮಾಡುತ್ತಿದ್ದರು.

ಒಮ್ಮೆ 'ಯವನಿಕಾ'ದ ಕಾರ್ಯಕ್ರಮಕ್ಕೆ ಹೋಗಬೇಕಾಗಿತ್ತು. ಕಾರು ಗೇಟಿನಲ್ಲಿ ಪ್ರವೇಶಿಸುವಾಗಲೇ ಮೆಟ್ಟಿಲು ಮೇಲೆ ನಿಂತ ಹಿರಿಯರೊಬ್ಬರು ಕಂಡರು. ಹಿಂದಿನ ದಿನ ಅವರನ್ನು ಕಾಣಬೇಕಿತ್ತು. ಮರೆತುಹೋಗಿ, ಎದೆ ಧಸಕ್ಕೆಂದಿತು. 'ತಕ್ಷಣ ಎದುರಿಗೆ ಸಿಕ್ಕರೆ ಬೈದಾರು, ಕಾರ್ಯಕ್ರಮ ಮುಗಿದ ಮೇಲೆ ಭೇಟಿಯಾಗಿ ಕ್ಷಮೆ ಕೇಳೋಣ' ಎಂದು, ಚಾಲಕನಿಗೆ ''ಅಲ್ಲಿ ಮೆಟ್ಟಿಲವರೆಗೆ ಹೋಗಬೇಡಪ್ಪಾ, ಸ್ವಲ್ಪ ಈ ಕಡೆಗೇ ನಿಲ್ಲಿಸು, ಇಲ್ಲೇ, ಇಲ್ಲೇಽ, ಇಲ್ಲೇಽಽ'' ಎಂದು ಹೇಳುತ್ತಲೇ ಇದ್ದೆ. ಕಾರು ಧಡಕ್ಕೆಂದು ಹೋಗಿ ಆ ಹಿರಿಯರ ಪಾದದ ಬಳಿ ಬಾನೆಟ್ ಚಾಚಿಕೊಂಡು ನಿಂತೇಬಿಟ್ಟಿತು. ನನಗಿಂತ ಮೊದಲೇ ಕ್ಷಮೆ ಕೇಳುವಂತೆ!

ಇನ್ನೊಬ್ಬ ಗೋವಿಂದ ಅಂತ ಇದ್ದ. ಇವನು ಯಾವಾಗಲೂ ನಾನು ಕಾದು ಕಾದು, ಕಾವೇರಿ, ಕಾಲೇಜಿಗೆ ಹೋದಮೇಲೆ, ಮನೆಗೆ ಬಂದು ಕೀಲಿ ಪಡೆದು, ವಾಪಸು ಕರೆದೊಯ್ಯಲು ಬರುತ್ತಿದ್ದ. ವನ್‌ವೇ ಗೋವಿಂದ. ಮೌಲ್ಯಮಾಪನ ಕೇಂದ್ರಕ್ಕೆ ಹೋದಾಗ, ಕೆಲಸ ಮುಗಿಸಿ ಕಾರಿನ ಬಳಿ ಬಂದರೆ ಇವನು ನಾಪತ್ತೆ! ಮಳೆಯಲ್ಲಿ ನೆನೆಯುತ್ತ ಇವನನ್ನು ಹುಡುಕಾಡಿ ಹಿಡಿದು ತರುವದರಲ್ಲಿ ಸಾಕಾಗಿ ಹೋಗುತ್ತಿತ್ತು. ಮನೆಗೆ ನಡೆದುಕೊಂಡೇ ಹೋಗಿದ್ದರೂ ಇಷ್ಟು ಸುಸ್ತಾಗುತ್ತಿರಲಿಲ್ಲ. ಇನ್ನೊಬ್ಬ ಎಲ್ಲೆಂದರಲ್ಲಿ ಯಾಕೆಂದು ಕೇಳದೇ ಕಾರು ನಿಲ್ಲಿಸಿ ಓಡಿ ಹೋಗುತ್ತಿದ್ದ. ಅವನಿಗೆ ಗುಟಕಾ ಚಟ! ಇನ್ನೊಬ್ಬ ಬೇಕಾಬಿಟ್ಟಿ ಕಾರು ಓಡಿಸುತ್ತಿದ್ದ! ನಾನು ಬೈದರೂ ಬಾಯಿತುಂಬಾ ನಗುತ್ತಾ, ಹಾಡು ಗುನುಗುನಿಸುತ್ತಾ ಡ್ರೈವಿಂಗ್ ಮುಂದುವರಿಸುತ್ತಿದ್ದ. ''ನನಗೆ ಚೆನ್ನಾಗಿ ಬೈಯ್ಯಲೂ ಬರುವದಿಲ್ಲ'' – ಎಂದು ನನ್ನನ್ನೇ ಬೈದುಕೊಳ್ಳುತ್ತಿದ್ದೆ. ಇನ್ನೊಬ್ಬ ವಾರದಲ್ಲಿ ೪ ದಿನ ರಜಾ ಹಾಕುತ್ತಿದ್ದ. ಅವರ ಕುಟುಂಬದಲ್ಲಿ ಸರಾಸರಿ ವಾರಕ್ಕೆ ನಾಲ್ಕು ಜನ ಸತ್ತು ಹೋಗುತ್ತಿದ್ದರು! ಒಮ್ಮೊಮ್ಮೆ ಕಾರೂ ನನ್ನನ್ನು ಕಾಡುತ್ತಿತ್ತು. ಅದರ ಮೂಡು ಕೆಟ್ಟರೆ ಮೊಂಡುತನ ಮಾಡುತ್ತಿತ್ತು. ನೆಂಟರು ಊರಿಂದ ಬಂದು ಮರಳುವಾಗ ಊರಿಗೆ ಕಳಿಸಿಬರಲು ಸ್ಟೇಶನ್ನಿಗೋ ಬಸ್‌ಸ್ಟ್ಯಾಂಡಿಗೋ ಹೋಗಬೇಕಾಗುತ್ತಿತ್ತು. ಮನೆಯಿಂದ ಅರ್ಧ ಕಿಲೋಮೀಟರು ಕೂಡ ಬಂದಿರುತ್ತಿರಲಿಲ್ಲ, ನಿಂತೇಬಿಡುತ್ತಿತ್ತು. ಏನು ಮಾಡಿದರೂ ಜಪ್ಪೆನ್ನುತ್ತಿರಲಿಲ್ಲ. ''ಅಯ್ಯಽಽ ಇದೇನ ಕಾರೂ ಅಂತ ಇಟ್ಟಗೊಂಡೀಯವಾ, ಮಾರಿಬಿಡು ಮದಲ. ಹೊಸಾದ ತಗೋ'' ಎಂದು ರಿಕ್ಷಾದಲ್ಲಿ ಕುಳಿತು ಶಾಪ ಹಾಕುತ್ತಿದ್ದರು. ನನ್ನ ಗರ್ವಭಂಗವಾಗಿ ''ನೀ ಹಿಂಗ ಮಾಡಿದರ ಮಾರಿಬಿಡ್ತಿನ್ನೋಡು?'' ಎಂದು ಕೈಮಾಡಿ ಬೆದರಿಸುತ್ತಿದ್ದಂತೆ ಚಾಲಕ ಸ್ಟಾರ್ಟ್ ಮಾಡಿದೊಡನೆ ಸ್ಟಾರ್ಟಾಗಿ ಮಂದಗಮನೆಯಂತೆ ಮನೆಗೆ ಮರಳುತ್ತಿತ್ತು. ಇವರಿಗೆ ಹೇಳಿದರೆ (ಅವರಿಗಲ್ಲ) ''ಗಂಡನ ಮನಿ ಕಡಿಯವ್ರು ಅಂದ್ರ ನಿನ್ನ ಕಾರಿಗೂ ಆಗೂದಿಲ್ಲ ತಗೋ'' ಎಂದು ಬಯ್ಯುವುದಕ್ಕೆ ಛಾನ್ಸು ಸಿಕ್ಕಿತೆಂದು ನಗುನಗುತ್ತ ಮಾತು ಮುಚ್ಚಿಸುತ್ತಿದ್ದರು. ಇಂಥವೆಷ್ಟೋ ಸವಿನೆನಪುಗಳಿಂದ ನನಗೆ ಈ ಕಾರು ಗೆಳತಿಯಂತಾಗಿತ್ತು. ಆದರೆ ಧಾರವಾಡಕ್ಕೆ ವರ್ಗವಾಗಿ ಬಂದಮೇಲೆ, ಬೆಂಗಳೂರಿನಷ್ಟು ಸುತ್ತಾಟವಿಲ್ಲದೇ, ನಡೆದುಹೋಗುವಷ್ಟು ಕಛೇರಿ ಹತ್ತಿರದಲ್ಲಿದ್ದುದರಿಂದ ಮನಸ್ಸಿಲ್ಲದೇ ಮಾರಬೇಕಾಯಿತು.

ಈಗ ಬೆಳಗಾವಿಗೆ ವರ್ಗವಾಗಿ ಬಂದಿದ್ದೇನೆ. ಹೊಸಕಾರಿನಲ್ಲಿ ದಿನವೂ ಕಾಲೇಜಿಗೆ ಹೋಗುತ್ತಿದ್ದೇನೆ. ಇದೀಗ ಈ ಗಾಡಿಗೆ ಹೊಸ ಚಾಲಕ ಸಿಕ್ಕಿದ್ದಾನೆ. ಅವನು ಬಲ ಎಂದರೆ ಎಡಕ್ಕೂ, ಎಡ ಎಂದರೆ ಬಲಕ್ಕೂ ಕಾರು ಓಡಿಸುವಾಗ ನನ್ನ ಚಾಲಕ ಗುರುವಿನ ಶಾಪವಿರಬಹುದೇ ಎನಿಸುತ್ತದೆ. ಈಗ ಕಾರಿನ ಕುಶನ್‌ಸೀಟಿನ ಮೇಲೆ ಕುಳಿತಿದ್ದರೂ ಏರಿದ ಪೆಟ್ರೋಲು ಬೆಲೆಯನ್ನು ನೆನೆಸಿಕೊಂಡು ಮುಳ್ಳಿನ ಆಸನದ ಮೇಲೆ ಕುಳಿತಂತೆ ಚಡಪಡಿಸುತ್ತಿರುತ್ತೇನೆ. ಆಗಾಗ ಗೆಳತಿಯರು ಛೇಡಿಸುತ್ತಿರುತ್ತಾರೆ, ''ಕಾರು ಕೊಂಡಿದ್ದೀಯ? ಮಾರುತಿ!'' ಎಂದು.

**ಶಶಿಕಲಾ ವೀರಯ್ಯಸ್ವಾಮಿ**
ಸರಸ್ವತಿ ಬಾಲಕಿಯರ ಸರಕಾರಿ ಪದವಿಪೂರ್ವ ಮಹಾವಿದ್ಯಾಲಯ, ಶಹಾಪೂರ, ಬೆಳಗಾವಿ - ೫೯೦ ೦೦೩

# ಕ್ಲಿಕ್... ಫ್ಲಾಷ್...!

**ಬಿ. ಎಸ್. ಚಂದ್ರಶೇಖರ್**

ನಮ್ಮದು ಹೊಸ ಬಡಾವಣೆ. ಇಲ್ಲಿ ಮೊದಲು ಎದ್ದ ಮನೆಗಳಲ್ಲಿ ಅಂಬುಜಮ್ಮನವರದೂ ಒಂದು. ಈ ಬಡಾವಣೆಯ ಚಟುವಟಿಕೆಗಳಲ್ಲಿ ಆಕೆಯದೇ ಪ್ರಧಾನ ಪಾತ್ರ. ಹಾಗಾದರೆ ಆಕೆಯೇನು ಕಲಾವಿದೆಯೇ? ಬಿಸಿನೆಸ್ ಉಮನ್ನೇ? ಹೋಗಲಿ. ಉದ್ಯೋಗಸ್ಥೆಯೇ? ಹಾಗೇನೂ ಇಲ್ಲ. ಅವರ ಯಜಮಾನರಾದ (?) ಗುರುಮೂರ್ತಿ ಬ್ಯಾಂಕೊಂದರಲ್ಲಿ ಉನ್ನತ ಅಧಿಕಾರಿಯಾಗಿದ್ದು ಪ್ರಭಾವಶಾಲಿಯಾಗಿದ್ದರೂ ನಿಗರ್ವಿ, ಸರಳಜೀವಿ. ಅಂಬುಜಮ್ಮ ಮೂರ್ತಿಯವರ ಬಲಗೈ ಇದ್ದಂತೆ... ಎನ್ನುವುದಕ್ಕಿಂತ ಮೂರ್ತಿಯವರೇ ಆಕೆಯ ಎಡಗೈ ಇದ್ದಂತೆ ಎನ್ನುವುದು ಸತ್ಯಕ್ಕೆ ಹತ್ತಿರ. ಒಬ್ಬ ಯಶಸ್ವಿ ಗಂಡಸಿನ ಹಿಂದೆ ಒಂದು ಹೆಣ್ಣು ಇರುತ್ತದೆ ಎಂಬ ಮಾತು ಕೂಡ ಇವರ ವಿಷಯದಲ್ಲಿ ಹಿಂದು ಮುಂದಾಗುತ್ತದೆ. ಗಂಡನ ಬ್ಯಾಂಕೇತರ ಕೆಲಸ ಕಾರ್ಯಗಳಲ್ಲಿ ಅಂಬುಜಮ್ಮ ಇರುತ್ತಿದ್ದುದು ಹಿಂದೆ ಅಲ್ಲ,... ಮುಂದೆ!

ಸ್ವಲ್ಪ ಬಾಯಿ ಜೋರಾದ ಅಂಬುಜಮ್ಮನವರಿಗೆ ಗಂಡನಿರಲಿ, ಯಾವ ಪ್ರಾಣಿಯೇ ಆದರೂ ಹೆದರಿ ನಡೆಯಬೇಕು! ಬಿಕೋ ಎನ್ನುವ ಹೊಸ ಬಡಾವಣೆಯಲ್ಲಿ ಮಧ್ಯಾಹ್ನ ಹೆಂಗಳೆಯರಿಗೆ ಬೋರೋ ಬೋರೆನಿಸಿದಾಗ ಮಹಿಳಾ ಸಮಾಜದ ಹುಟ್ಟಿಗೆ ನಾಂದಿ ಹಾಡಿದ್ದು: ನರ್ಸರಿ ಮಕ್ಕಳಿಗೆ 'ಡೀ ಬೇಸ್' ಕಲಿಸುವ ಶಾಲಾ ಯೋಜನೆಗೆ ಪೋಷಕರು ತಲಾ ಐನೂರು ರೂಪಾಯಿ ಕೊಡಬೇಕೆಂಬ ಸ್ಥಳೀಯ ಶಾಖೆಯ ವ್ಯವಸ್ಥಾಪಕ ವರ್ಗಕ್ಕೆ ಮುಖದ ನೀರಿಳಿಸಿ ಯೋಜನೆ ತಳಕೆಳಗಾಗಿಸಿದ್ದು ಶ್ರೀಮತಿಯವರ ಅದ್ಭುತ ಸಾಧನೆಗಳು ಎಂಬುದನ್ನು ಇಲ್ಲಿ ದಾಖಲಿಸಿದರೆ 'ಗಿವ್ ದ ಡೆವಿಲ್ ಇಟ್ಸ್ ಡ್ಯೂ' ಎಂಬ ಗಾದೆಗೆ ಮನ್ನಣೆ ನೀಡಿದಂತಾಗುತ್ತದೆ.

ಇದು ಹೇಗಾದರೂ ಇರಲಿ; ಅಂಬುಜಮ್ಮನವರು ಸ್ವಾಮಿಗಳಿಗೆ ಪಾದಪೂಜೆ ಮಾಡಿಸಿದ ಪ್ರಸಂಗ ಸ್ವಾರಸ್ಯಕರವಾಗಿದೆ.



ದೇಶೋವಿಶಾಲವಾಗಿದ್ದ ನಮ್ಮ ಹೊಸ ಬಡಾವಣೆಯಲ್ಲಿಯ ಪ್ರಶಾಂತತೆ ದೂರದ ಹಳ್ಳಿಯಲ್ಲಿ ಆಶ್ರಮ ಹೊಂದಿದ್ದ ಗುರು ಮಹಾರಾಜರೊಬ್ಬರನ್ನೂ, ತನ್ಮೂಲಕ ಅವರ ಶಿಷ್ಯರನ್ನೂ ಆಕರ್ಷಿಸಿದ್ದು ಸಹಜ. ಸಣ್ಣ ಗಣಪತಿ ಗುಡಿಯ ಪಕ್ಕದಲ್ಲಿ ತಾತ್ಕಾಲಿಕವಾದ ಕುಟೀರವೂ ಎದ್ದು ಗುರುಗಳು ಬೆಂಗಳೂರಿಗೆ ಬಂದಾಗ ನೆರಳೀಯುತ್ತಿತ್ತು. ಸ್ವಾಮೀಜಿಯವರನ್ನು ಅರಸಿ ಬಂದ ನಿವಾಸಿಗಳಿಗೆ 'ಬೆಳಕು ನೀಡುವ' ಕೆಲಸ ನಡೆಯುತ್ತಿತ್ತು.

ಒಂದು ಸಂಜೆ ಗಂಡನನ್ನು ವಾಕಿಂಗ್ ಕರೆದುಕೊಂಡು ಹೋಗುತ್ತಿದ್ದಾಗ ಆಶ್ರಮವೂ, ಗುಡಿಯೂ ಅಂಬುಜಮ್ಮನವರ ಕಣ್ಣಿಗೆ ಬಿದ್ದುಹೋಯಿತು. ಗಂಡನನ್ನೂ ಎಳೆದುಕೊಂಡು ಗುಡಿಗೆ ಒಂದು ಪ್ರದಕ್ಷಿಣೆ ಹಾಕಿ ಎದುರಿಗಿದ್ದ ಮೇಜಿನ ಬಳಿ ನಿಂತಾಗ ಮುದ್ರಾಧಾರಿಯೊಬ್ಬರು ಜೇಬಿನಲ್ಲಿದ್ದ ಕಟ್ಟಿನಿಂದ ಒಂದು ಫೋಟೋ ತೆಗೆದು ''ಹೆಸರು?'' ಎಂದರು. ಅಂಬುಜಮ್ಮನವರೇ ಬಾಯಿ ತೆಗೆದು ''ಎಸ್. ಗುರುಮೂರ್ತಿ, ಡೆಪ್ಯುಟಿ ಜನರಲ್ ಮ್ಯಾನೇಜರ್, ಕುಬೇರಾ ಬ್ಯಾಂಕ್, ವಿಶ್ವಾಮಿತ್ರ ಗೋತ್ರ, ಉತ್ತರಾ ನಕ್ಷತ್ರ'' ಎಂದು ಪ್ರವರ ಒಪ್ಪಿಸಿದಾಗ, ಮುದ್ರಾಧಾರಿ ಮುಗುಳ್ನಗುತ್ತಾ ''ತಾಯೀ, ರಾಶಿ ಬಿಟ್ಟುಬಿಟ್ರಲ್ಲಾ, ಸೇರಿಸಿಬಿಡಿ 'ಕನ್ಯಾ' ಅಂತ'' ಎಂದಾಗ ಅಂಬುಜಮ್ಮನವರು –

''ಅದ್ಯಾಕ್ರೀ ಹಾಗ್ಹೇಳ್ತೀರಾ? ನಮ್ಮೆಜಮಾನರು ಕನ್ಯಾರಾಶೀಲಿ ಹುಟ್ಟಿದೋರ ಥರಾ ಕಾಣ್ತಾರೆಯೇ ನಿಮ್ಮ ಕಣ್ಣಿಗೆ?... ಸಿಂಹ ರಾಶೀರೀ, ಸಿಂಹ!'' ಎಂದು ತಮ್ಮ ಸಹಜ ದನಿಯಲ್ಲಿ ಉತ್ತರಿಸಿದರೂ ಮುದ್ರಾಧಾರಿ ಗಾಬರಿಯಾಗಿ ತಲೆ ತಗ್ಗಿಸಿ 'ಸರಿಯಮ್ಮ' ಎಂದು ಹೇಳಿ, ಫೋಟೋ ಹಿಂಬದಿಯಲ್ಲಿ 'ಶ್ರೀ ಗುರುಮೂರ್ತಿ' ಎಂದು ಬರೆದು ಅಂದಿನ ತಾರೀಖನ್ನೂ, ಸಮಯವನ್ನೂ ಗುರುತುಹಾಕಿ ಮೂರ್ತಿಯವರ ಕೈಲಿಟ್ಟರು. ತಿರುಗಿಸಿ ನೋಡಿದರೆ ಅದು ಗುರುಮಹಾರಾಜರ ಫೋಟೋ. ಅದನ್ನು ಭಕ್ತಿಯಿಂದ ಕಣ್ಣಿಗೊತ್ತಿಕೊಂಡು ಮೂರ್ತಿ ಗೇಟಿನತ್ತ ಹೆಜ್ಜೆ ಹಾಕತೊಡಗಿದಾಗ – ''ಸ್ವಾಮೀ! ಎಲ್ಹೋಗ್ತಾ ಇದೀರಾ?'' ಎಂಬ ಕರೆ ಬಂತು. ಆಮೇಲೆ ತಿಳಿದ ವಿಷಯವೆಂದರೆ ಅದು ಮೂರ್ತಿಯವರಿಗೆ ಲಭ್ಯವಾದ ಗುರುಮಹಾರಾಜರ ಅಪಾಯಿಂಟ್‌ಮೆಂಟ್ ಕಾರ್ಡ್ ಎಂದೂ, ಅದೇ ದಿನ ಆಗಲೇ ಭೇಟಿಯೆಂದೂ ತಿಳಿಯಿತು.

ಅಂಬುಜಮ್ಮ ಗಂಡನನ್ನು ತಿವಿದು ''ಏನ್ರೀ! ನಿಮಗೆ ಅಷ್ಟೂ ಗೊತ್ತಾಗಲ್ವೇನ್ರೀ! ಡಿ.ಜಿ.ಎಂ. ಅಂತೆ ಡಿ.ಜಿ.ಎಮ್ಮು! ಒಂದು ಅಪಾಯಿಂಟ್‌ಮೆಂಟ್ ಕಾರ್ಡ್ ಗೊತ್ತಾಗಲ್ಲ! ಬಡುಕೊಂಡ್ರು ನಿಮ್ ಬುದ್ಧಿಗೆ!'' ಎಂದದ್ದೂ ಆಯಿತು. ಅಷ್ಟಕ್ಕೇ ಮುಗಿದಿದ್ದರೆ ಚೆನ್ನಾಗಿತ್ತು. ಆ ಬಡಪಾಯಿ ಗಂಡ 'ಅಲ್ಲವೇ, ಏನೇ ನಿನ್ನ ಆರ್ಭಟ ಈ ದೇವಸ್ಥಾನದ ಹತ್ರಾನೂ' ಎಂದುಬಿಡಬೇಕೇ?

ಅಂಬುಜಾ ಬಾಂಬ್ ಸ್ಫೋಟಿಸದೆ ಇದ್ದೀತೇ? ''ಅಲ್ರೀ, ನಿಮ್ಮ ಕೈಹಿಡಿದ ಹೆಂಡ್ತಿ – ನಾನೇನಾದ್ರೂ ಅಂದ್ರೆ ನಿಮ್ಮ ಸ್ವಾಭಿಮಾನ ಹೇಗೆ ಜಾಗೃತವಾಗಿಬಿಡುತ್ತೆ ನೋಡಿ! ಅವನು ನಿಮ್ಮನ್ನ 'ಕನ್ಯಾರಾಶೀ' ಅಂದಾಗ ಎಲ್ಲಿ ಹೋಗಿತ್ತುರೀ ನಿಮ್ಮ ಸ್ವಾಭಿಮಾನ? ನಿಮಗೆ ಅವನ ವ್ಯಂಗ್ಯ ಅರ್ಥವಾಗಿದ್ದರಲ್ವೇ?'' ಎಂದರು. ಗುರುಮೂರ್ತಿಗೆ ನಗು ತಡೆಯಲಾಗಲಿಲ್ಲ.

''ಅಲ್ಲವೇ, ಇದ್ರಲ್ಲಿ ವ್ಯಂಗ್ಯ ಏನು ಬಂತು? ನೀನು ನನ್ನ ನಕ್ಷತ್ರ ಉತ್ತರಾ ಅಂದೆ. ಉತ್ತರಾ ನಕ್ಷತ್ರದ ಒಂದು ಪಾದ ಮಾತ್ರ ಸಿಂಹರಾಶೀಲಿ ಇರುತ್ತೆ, ಮೂರು ಪಾದ ಕನ್ಯಾರಾಶೀಗೇ ಬರುತ್ತೆ, ಅದಕ್ಕೇ ಅವರು ಕನ್ಯಾ ಅಂದರು ಕಣೇ!'' ಗುರುಮೂರ್ತಿಗೆ ಜ್ಯೋತಿಷ್ಯದ ಪರಿಚಯ ಇದ್ದ ಮಾತ್ರಕ್ಕೆ ಅವರ ಈ ಮಾತನ್ನು ಅವರ ಹೆಂಡತಿ ಒಪ್ಪಬೇಕೆಂದು ಕಾನೂನುಂಟೇ? ಊ... ಹೂಂ... ಅಂಬುಜಮ್ಮ, ಮತ್ತು ಸೋಲು – ಛೇ ಛೇ!

''ಸಾಕು ನಡೀರಿ ಕಂಡಿದೀನಿ ನಿಮ್ಮ ಜ್ಯೋತಿಷ್ಯಾನ!'' ಎನ್ನುತ್ತಾ ಗಂಡನನ್ನೆಳೆದುಕೊಂಡು ನುಗ್ಗಿಯೇಬಿಟ್ಟರು... ಆಶ್ರಮದೊಳಕ್ಕೆ!

ಆಸೀನರಾಗಿದ್ದ ಗುರುಮಹಾರಾಜರು ನಗುತ್ತ ಸ್ವಾಗತಿಸಿ 'ಕುಳಿತುಕೊಳ್ಳಿ' ಎಂದು ಎದುರಿಗಿದ್ದ ಜಮಖಾನೆಯತ್ತ ಕೈ ಮಾಡಿದರು. ಅಂಬುಜಮ್ಮನವರಿಂದ ತಮ್ಮ ಗಂಡನ ಪ್ರವರವೂ ತಮ್ಮ ಹನ್ನೆರಡು ವರ್ಷದ ತುಂಟನೆನಿಸಿದ ಮಗನ ಪ್ರಸ್ತಾಪವೂ ಆಯಿತು. ಬಡಾವಣೆ ವಿಷಯ, ಶಾಲೆ, ಮಹಿಳಾ ಸಮಾಜ ಎಲ್ಲ ಮುಗಿಸಿ 'ಇನ್ನು ಬರ್ತೀವಿ ಸ್ವಾಮೀಜಿ' ಎಂದು ಅಂಬುಜಮ್ಮ ಸೆರಗು ಸರಿಪಡಿಸಿಕೊಳ್ಳುತ್ತಾ ಎದ್ದರು. ಮೂರ್ತಿಯವರ ಮೌನ ಮುಂದುವರೆದಿತ್ತು. ಗುರುಗಳ ಭೇಟಿ ಇಷ್ಟು ನೀರಸವೇ?! ಸಾಧ್ಯವೇ ಇಲ್ಲ!.... ಕೊನೆಯಲ್ಲಿ ಅವರ ಬಾಣ ನಾಟಬೇಕಾದಲ್ಲೇ ನಾಟಿತು.

''ಮೂರ್ತೀ, ಮಗನಿಗೆ ಬ್ರಹ್ಮೋಪದೇಶ ಇಟ್ಟುಕೊಳ್ಳಿ. ನಮ್ಮ ಆಶ್ರಮದಲ್ಲೇ ಆಗಲಿ'' ಎಂದರು.

ಈ ಆಶ್ರಮದಲ್ಲಿ ಮುಂಜಿಯೇ! ಅಂಬುಜಮ್ಮನವರಿಗೆ ಪಿಚ್ಚೆನಿಸಿತು. ಒಂದು ಛತ್ರವೇ, ಚಾಮರವೇ! ಕೊನೆಗೆ ಕರೆಂಟೂ ಇಲ್ಲವಲ್ಲಾ ಎಂದುಕೊಂಡ ಅವರ ಮುಖಭಾವವನ್ನು ನೋಡಿಯೇ ಗುರುಮಹಾರಾಜರು ''ನಮ್ಮ ಆಶ್ರಮ ಭವ್ಯವಾಗಿದೆ – ಮುಳ್ಳುಬಾಳಿನಲ್ಲಿ, ಇಲ್ಲಿಂದ ಎಂಬತ್ತು ಕಿಲೋಮೀಟರ್'' ಎಂದು ಹೇಳಿ ಆಶೀರ್ವದಿಸಿದರು.

ಮುಳ್ಳುಬಾಳಿಗೆ ಭೇಟಿ, ಮುಹೂರ್ತ ನಿಶ್ಚಯ, ಅದ್ದೂರಿಯಾದ ಆಹ್ವಾನ ಮುದ್ರಣ, ಮುಖ್ಯವಾಗಿ ಬಡಾವಣೆಯಲ್ಲೆಲ್ಲಾ ಅಂಬುಜಮ್ಮನವರ ಅಬ್ಬರದ ಪ್ರಚಾರ ಮತ್ತು ಈ ಎಲ್ಲಕ್ಕೂ ನಿಮಿತ್ತವಾದ ಆ ಯಃಕಶ್ಚಿತ್ ಕಾರ್ಯ – ಜನಿವಾರ ಧಾರಣ! – ಎರಡೇ ತಿಂಗಳಲ್ಲಿ ಹೂವಿನಸರ ಎತ್ತಿದಷ್ಟು ಸುಲಭವಾಗಿ.... ಅಲ್ಲಲ್ಲ.... ಹೂವಿನಸರಕ್ಕೆ ಮೊಳ ಹಾಕಿದಷ್ಟು ಚುರುಕಾಗಿ ನಡೆದೇಹೋದಾಗ

ಅಂಬುಜಮ್ಮನವರಿಗೆ ಗುರುಮಹಾರಾಜರ ಮಹಿಮೆ ಕುರಿತು ಯಾವ ಸಂದೇಹವೂ ಉಳಿದಿರಲಿಲ್ಲ.

ಹೀಗಿರುತ್ತಾ ಒಂದು ದಿನ ಅಂಬುಜಮ್ಮ ಯಜಮಾನರಿಗೆ ಫರ್ಮಾನು ಹೊರಡಿಸಿದರು. ''ಮುಂದಿನ ಗುರುವಾರ ಸಂಜೆ ಬ್ಯಾಂಕಿನಿಂದ ಬೇಗ ಬನ್ನಿ. ನಿಮ್ಮ ಮೀಟಿಂಗು, ವಿಸಿಟ್ಟು, ಆಡಿಟ್ಟು ಬದಿಗಿಟ್ಟು ನಾಲ್ಕು ಗಂಟೆಗೆ ಬನ್ನಿ. ಅವತ್ತು ಮಹಿಳಾ ಸಮಾಜದೋರನ್ನೆಲ್ಲಾ ಕರೀತೀನಿ. ಗುರುಮಹಾರಾಜರಿಗೆ ಪಾದಪೂಜೆ ಆಗಬೇಕು.''

ರಾಯರಿಗೆ ಕಸಿವಿಸಿಯಾದರೂ – ಪಾದಪೂಜೆ ಇರಲಿ, ಮಹಿಳಾ ಸಮಾಜವೂ ಇರಲಿ -- ತನ್ನ ಪಾತ್ರವೇನು ? ಎಂಬುದು ಕೆಲ ಕ್ಷಣ ಸ್ಪಷ್ಟವಾಗಲಿಲ್ಲ. ಆದರೆ ''ಬ್ಯಾಂಕಿನ ಅಭಿವೃದ್ಧಿಯಲ್ಲಿ ಸಿಬ್ಬಂದಿಯ ಪಾತ್ರ'' ಕುರಿತು ಮೇಲಿಂದ ಮೇಲೆ ಸಿಬ್ಬಂದಿಗೆಲ್ಲಾ ಬೋಧಿಸುವ ಚೇತನಕ್ಕೆ ಮನೆಯಲ್ಲಿ ತನ್ನ ಪಾತ್ರ ತಿಳಿಯದೆ ಇದ್ದೀತೇ? ಹಾಗೆ ನೋಡಿದರೆ ತಮ್ಮ ಪಾತ್ರ ತುಂಬ ಸ್ಪಷ್ಟವೇ; ಹೆಂಡತಿ ಹೇಳಿದಂತೆ ನಡೆದುಕೊಳ್ಳುವುದು. ಹಾಗೆಂದುಕೊಂಡು ಸುಮ್ಮನಿದ್ದರು.

''ಏನ್ರೀ, ಹಾಗೆ ಸುಮ್ಮನಾದಿರಿ? ಪಾದಪೂಜೆ ಮಾಡೋದು ನೀವೇ. ನಮ್ಮ ಮನೇಲೇ ಕಾರ್ಯಕ್ರಮ'' ಎಂದು ಪತ್ನಿ ವಿವರಣೆ ನೀಡಿದಾಗ ತತ್‌ಕ್ಷಣ ಹೇಗೆ ಪ್ರತಿಕ್ರಿಯಿಸಬೇಕೆಂದು ಮಾತ್ರ ಗುರುಮೂರ್ತಿಗಳಿಗೆ ಗೊತ್ತಾಗಲಿಲ್ಲ.

ಗುರುವಾರ ಸಂಜೆ ೩-೩೦. ಶಾಖೆಗಳ ವಿಸಿಟ್ಟಿಗೆ ಹೋಗಿದ್ದ ಡಿ.ಜಿ.ಎಂ. ಸಾಹೇಬರ ಕಾರು ಸವಾರಿ ಸಮೇತ ಅವರ ನಿವಾಸದ ಮುಂದೆ ಬಂದುನಿಂತಿತು. ಡ್ರೈವರ್ ಶ್ರೀನಿವಾಸ ಗಾಡಿ ಸ್ಟಾರ್ಟ್ ಮಾಡಿದಾಗ ಅಂಬುಜಮ್ಮ ಹೊರಬಂದು ''ಶ್ರೀನಿವಾಸ! ಇರಪ್ಪಾ, ಇವತ್ತು ಕಾರು ಬೇಕು. ಸ್ವಾಮಿಗಳು ಬರ್ತಾರೆ ಮನೇಗೆ'' ಎಂದು ಆದೇಶಿಸಿ, ಗಂಡನತ್ತ ಒಮ್ಮೆ ನೋಡಿ 'ಸರಿಯಾದ ಸಮಯಕ್ಕೇ ಬಂದಿದೀರೀ?!' ಎಂದು ಒಳಕ್ಕೆ ನಡೆದರು. ೭-೩೦ಕ್ಕೆ ಸ್ವಾಮೀಜೀ ಬರುವ ಕಾರ್ಯಕ್ರಮವಿದ್ದದ್ದು ಮೂರು ಕಡೆ ಪಾದಪೂಜೆ ಇರುವುದರಿಂದ 'ಈಗಲೇ ಬರುತ್ತಾರೆ' ಎಂಬ ಸುದ್ದಿ ನಾಲ್ಕೂ ವರೆಗೆ ಬಂದಾಗ ಗಡಿಬಿಡಿ ತಾರಕಕ್ಕೇರಿತ್ತು.

''ಎಲ್ರೀ, ಐದು ರೂಪಾಯಿನ ಕಾಯಿನ್ಸ್ ತಂದಿರಾ?'' ಪಾದಪೂಜೆಗೆ ಒಂದು ಯಜಮಾನಿತಿ ಹೇಳಿದಂತೆ ಹಿಂದಿನ ದಿನವೇ ತಂದಿದ್ದ ನಾಣ್ಯದ ಚೀಲವನ್ನು ತೆಗೆದಿತ್ತರು ರಾಯರು. ಹಣ್ಣು, ಹೂವು, ಬೆಳ್ಳಿ ಚೊಂಬು, ತಟ್ಟೆ, ಗಂಟೆ ಮುಂತಾದ ಸಾಮಗ್ರಿಯ ಜತೆ ಅಮ್ಮಾವ್ರು ಮಾಡಿಸಿದ್ದ ದೊಡ್ಡ ಬೆಳ್ಳಿಯ ಹೂವಿನ ಬುಟ್ಟಿ ಪ್ರದರ್ಶನಕ್ಕಾಗಿ ಹೊರಬಂತು. ಬೆತ್ತದ ಕುರ್ಚಿಗೆ ಮೊದಲೇ ಆಶ್ರಮದಿಂದ ತರಿಸಿದ್ದ ಕೃಷ್ಣಾಜಿನ ಹಾಕಿ ಪೀಠವೂ, ಮಣೆಗೆ ಎಂಬ್ರಾಯ್ಡರಿ ಮಾಡಿದ ಬಿಳಿವಸ್ತ್ರ ಹೊದಿಸಿದ ಪಾದಪೀಠವೂ ಸಿದ್ಧವಾಯಿತು. ದೀಪಗಳು, ಪ್ರಸಾದಕ್ಕೆ ಸಿದ್ಧತೆ ಮತ್ತು ಮುಖ್ಯವಾಗಿ ಅಂಬುಜಮ್ಮನವರ ಶೃಂಗಾರ ಮುಗಿಯುವ ಹೊತ್ತಿಗೆ ಆರು ಹೊಡೆದುಹೋಗಿತ್ತು. ಎಲ್ಲಾ ಕೆಲಸಗಳೂ ಮುಗಿದಿದ್ದರೂ ಚಡಪಡಿಕೆ! ಮಗ ಕುಮಾರನಿಗೆ ಸಂಧ್ಯಾವಂದನೆಗೆ ಅಣಿಮಾಡಿ ಬೇಗ ಮುಗಿಸೆಂದು ಹೇಳಿ ಮಗುಟ-ಶಲ್ಯ ಧರಿಸಿ ವಿಭೂತಿಧಾರಿಯಾಗಿ ವಿನಯ ಬೆರೆತ ಗಾಂಭೀರ್ಯದಿಂದ ಬಳಿಯಲ್ಲೇ ನಿಂತಿದ್ದ ಗಂಡನತ್ತ ಒಮ್ಮೆ ಕಣ್ಣುಹಾಯಿಸಿ 'ಏನ್ರಿ, ಮಗನಿಗೆ ಮುಂಜಿ ಆದ್ರೂ ನಿಮಗೆ ಒಂದು ಮಗುಟಾ ಸುತ್ತಿಕೊಳ್ಳಕ್ಕೆ ಬರೊಲ್ಲವಲ್ಲಾ' ಎಂದು ಒಂದು ರೌಂಡ್ ದಬಾಯಿಸಿ ಬಾಗಿಲ ಬಳಿ ಬಂದಾಗ ಫೋಟೋಗ್ರಾಫರ್ ನೆನಪಾದ! ಅಯ್ಯಯ್ಯೋ... ಏಳು ಗಂಟೆಗೆ ಬಾ ಎಂದಿದ್ದೆನಲ್ಲಾ! ಈಗ ಕಾರ್ಯಕ್ರಮ ಪ್ರೀಪೋನ್ ಆಗಿಹೋಗಿದೆ – ಏನು ಗತಿ?! ಎಂದು ಗಾಬರಿಯಾಗಿ, ಕಾಂಪೌಂಡ್ ಹತ್ತಿರ ಬೀಡಿ ಸೇದುತ್ತಾ ನಿಂತಿದ್ದ ಕಾರ್ ಡ್ರೈವರ್ ಶ್ರೀನಿವಾಸನನ್ನು 'ಏ! ಇದೇನೋ ಅನಿಷ್ಟಾ! ಸ್ವಾಮಿಗಳು ಬರೋ ಹೊತ್ತಿನಲ್ಲಿ ಹೊಗೆ ಊದಿಕೊಂಡು..., ನೋಡು – ಅಜಂತಾ ಸ್ಟೂಡಿಯೋದ ಫೋಟೋಗ್ರಾಫರನ್ನ ತಕ್ಷಣ ಬಾ ಅಂತ ಕರಿ, ಸ್ವಾಮಿಗಳು ಬಂದುಬಿಟ್ಟಿದ್ದಾರೆ ಅನ್ನು. ಕಾರಲ್ಲೇ ಕೂರಿಸ್ಕೊಂಡು ಬಾ' ಎಂದು ಅಟ್ಟಿದರು.

ಮಹಿಳಾ ಸಮಾಜದವರೆಲ್ಲರಿಗೂ ಬಾರಿ ಬಾರಿ ಹೇಳಿದ್ದಾಗಿತ್ತು. ಈಗ ಫೋನ್ ಮೂಲಕ ಕೊನೇ ಸುತ್ತಿನ ರಿಮೈಂಡರ್ ಕೂಡ ಆಯ್ತು. ಅಕ್ಕಪಕ್ಕದ ಮನೆಯವರೆಲ್ಲರಿಗೂ ಮೂರು ದಿನದಿಂದಲೂ ಅಂಬುಜಮ್ಮನವರ ಅಬ್ಬರ ನೋಡಿ 'ಸದ್ಯ, ಪಾದಪೂಜೆ ಮುಗಿದರೆ ಸಾಕು!' ಎನ್ನಿಸಿಬಿಟ್ಟಿತ್ತು. ಕೆಲವು ಮನೆಯ ಗಂಡಸರು

ಸ್ವಾಮೀಜಿಯ ದರ್ಶನಕ್ಕೆಂದೇ ಬೇಗ ಮನೆಗೆ ಬಂದಿದ್ದರು. ಪಕ್ಕದ ಮನೆಯ ಹುಡುಗ ಹುಡುಗಿಯರನ್ನು ಅಟ್ಟಿ ಎಲ್ಲರಿಗೂ ಸ್ವಾಮೀಜೀ ಬೇಗ ಬರುತ್ತಾರೆಂಬ ಹಾಟ್ ಮೆಸೇಜ್ ಮುಟ್ಟಿಸಿದ್ದಾಯ್ತು.

ಇತ್ತ ಅಡುಗೆ ಮನೆಯಲ್ಲಿ ಗೋಡಂಬಿ ಯೊಂದಿಗೆ ವಿವಿಧ ತರಕಾರಿಗಳು ಹಿತ ವಾಗಿ ಬೆಂದ ಖಾರಾಭಾತ್, ದ್ರಾಕ್ಷಿ ಗೋಡಂಬಿ ಏಲಕ್ಕಿಗಳು ಸಮೃದ್ಧವಾಗಿ ಬೆರೆತ ಕೇಸರೀಭಾತ್, ಘಮಘಮಿಸುವ ಗಸಗಸೆ ಪಾಯಸಗಳು 'ಪ್ರಸಾದ'ಕ್ಕೆ ಸಿದ್ಧವಾಗಿದ್ದು ಅಂತಿಮ ಹಂತದ ಪರೀಕ್ಷೆಯ ಘಟ್ಟ ತಲುಪಿತ್ತು. ಸ್ವಾಮೀಜಿಯವರ ಕಾರು ಹೊರಟಿದೆ ಎಂದು ಸುದ್ದಿ ಬಂತು. ಇನ್ನೂ ಫೋಟೋಗ್ರಾಫರ್ ಬರಲಿಲ್ಲ! ಒಟ್ಟಿನಲ್ಲಿ ಭಕ್ತರೊಬ್ಬರ ಕೆಂಪು ಕಾಂಟೆಸಾ ಕಾರಲ್ಲಿ ಗುರು ಮಹಾರಾಜರು ಬರುವುದಕ್ಕೂ, ಡ್ರೈವರ್ ಶ್ರೀನಿವಾಸ ಒಳಗೆ ಬಂದು 'ಅಮ್ಮಾವ್ರೇ, ಸ್ಟುಡಿಯೋದವನನ್ನು ಕರ್‍ಕೊಂಬಂದಿದೀನಿ' ಎನ್ನುವುದಕ್ಕೂ ಸರಿ ಹೋಯ್ತು. ಆದರೆ ಅಡುಗೆ ಮನೆಯಿಂದಲೇ ಅಂಬುಜಮ್ಮ 'ಬಂದನಾ ಅವನು ಹಾಳಾದೋನು?' ಅಂತ ಗಟ್ಟಿಯಾಗಿ ಅಂದುಕೊಳ್ಳುವುದೂ ಗುರುಮಹಾರಾಜರು ಕಾರಿನಿಂದ ಇಳಿಯುತ್ತಾ ಭೂಸ್ಪರ್ಶ ಮಾಡುವುದೂ ಏಕಕಾಲಕ್ಕೆ ನಡೆದದ್ದು ಮಾತ್ರ ಕೇವಲ ಆಕಸ್ಮಿಕ!

ಈವರೆಗೆ ಮೌನ ಧರಿಸಿದ್ದ ಮೂರ್ತಿಯವರು ಮೃದುವಾಗಿ 'ಅಂಬೂ, ಸ್ವಲ್ಪ ಮೆತ್ತಗೆ ಮಾತಾಡು' ಎಂದದ್ದಕ್ಕೆ ಪ್ರತಿಯಾಗಿ 'ನಿಮ್ಮ ಮ್ಯಾನೇಜರ್‌ಗಿರಿ ಬ್ಯಾಂಕನಲ್ಲಿ ಮಾಡಿ' ಎಂದು ಚುಟುಕಾದರೂ ಚುರುಕು ಮುಟ್ಟುವಂತೆಯೇ ಉತ್ತರಿಸಿ ಫೋಟೋಗ್ರಾಫರ್ ರವಿಯನ್ನೂ ಎಳಕೊಂಡು ಸ್ವಾಮೀಜಿಯವರನ್ನು ಎದುರುಗೊಳ್ಳಲು ಬೀದಿಗಿಳಿದರು.

ಕ್ಲಿಕ್... ಫ್ಲಾಷ್! ಕ್ಲಿಕ್... ಫ್ಲಾಷ್! ರವಿಗೆ ಸಡಗರವೋ ಸಡಗರ!

ಪೋರ್ಟಿಕೋದಲ್ಲಿ ಶಿಷ್ಯವೃಂದದಿಂದ ವೇದೋಕ್ತ ಮಂತ್ರಘೋಷ, ಪೂರ್ವ ಸಿದ್ಧತೆಯಂತೆ ಆಶ್ರಮದವರೇ ವ್ಯವಸ್ಥೆಗೊಳಿಸಿದ್ದ ಪೂರ್ಣಕುಂಭ ಸ್ವಾಗತ. ಅಂಬುಜಮ್ಮನವರ ನಿರೀಕ್ಷೆಗೂ ಮೀರಿದ ಭವ್ಯ ವ್ಯವಸ್ಥೆ... ಕ್ಲಿಕ್... ಫ್ಲಾಷ್! ಕ್ಲಿಕ್... ಫ್ಲಾಷ್!

ಆಸೀನರಾದ ಗುರುಮಹಾರಾಜರ ಪಾದಗಳನ್ನು ಬೆಳ್ಳಿ ಹರಿವಾಣದಲ್ಲಿಟ್ಟು ತೊಳೆದದ್ದು; ಅರಿಸಿನ, ಕುಂಕುಮ, ಗಂಧ ಲೇಪನ, ಪುಷ್ಪಾರ್ಚನೆ ಇವೆಲ್ಲ ಶಿಷ್ಯೋತ್ತಮರ ಅರ್ಚನೆ ಮಂತ್ರದ ಸೂತ್ರಕ್ಕೆ ಹೊಂದಿಕೊಂಡು ನಡೆದು ರಾಯರು ಪುಷ್ಪವನ್ನೂ, ಅಮ್ಮನವರು ಐದು ರೂಪಾಯಿನ ನಾಣ್ಯವನ್ನೂ ಗುರುಮಹಾರಾಜರ ಪಾದಗಳಿಗೆ ಸಮರ್ಪಿಸುತ್ತಾ ಬಂದು ಮಂತ್ರಗಳೆಲ್ಲಾ ಮುಗಿದರೂ ಉಳಿದಿದ್ದ ನಾಣ್ಯಗಳನ್ನು ಅಂಬುಜಮ್ಮ ನವರು ಬೆಳ್ಳಿತಟ್ಟೆಯಿಂದ ಗುರುಪಾದಗಳ ಮೇಲೆ ಸುರಿಯುತ್ತಿರುವಾಗ ಮಗ ಕುಮಾರ ಹೊಟ್ಟೆ ಉರಕೊಂಡ... "ಎಷ್ಟು ಐಸ್ ಕ್ರೀಂ, ಪಾನೀಪೂರಿ ಬರುತ್ತಿತ್ತೋ ಈ ದುಡ್ಡಿಗೆ!" ಝಣ... ಝಣ... ಝಣ... ಝಣ... ಕ್ಲಿಕ್... ಫ್ಲಾಷ್! ಕ್ಲಿಕ್... ಫ್ಲಾಷ್!

ದೊಡ್ಡ ತಟ್ಟೆಗಳಲ್ಲಿ ಫಲ ಸಮರ್ಪಣೆ, ಗುರು ಮಹಾರಾಜರಿಂದ ಕೇವಲ ಅದರ ಸ್ಪರ್ಶ. ....ಸಾಷ್ಟಾಂಗ ಪ್ರಣಾಮ ಪ್ರಕರಣ.... ನೆರೆಹೊರೆಯವರೂ ಅಡ್ಡಬಿದ್ದು ಏಳತೊಡಗಿದರು. ಹಸನ್ಮುಖದಿಂದ ಗುರುಗಳು ಒಂದೊಂದು ಸೇಬನ್ನು ನಮಿಸಿದ ಭಕ್ತರ ಕೈಗೆ ಎತ್ತಿ ಹಾಕುತ್ತಿದ್ದರೆ ಅಂಬುಜಮ್ಮನವರು ಗುರುಗಳ ಪಕ್ಕದಲ್ಲೇ ನಿಂತು ಹೆಮ್ಮೆಯಿಂದ ಬೀಗುತ್ತಿದ್ದರು. ಕ್ಲಿಕ್... ಫ್ಲಾಷ್! ಕ್ಲಿಕ್... ಫ್ಲಾಷ್!

ಅಡ್ಡಬಿದ್ದು ಕೈಮುಗಿದು ಎದ್ದ ಕುಮಾರನ ತಲೆ ಸವರುತ್ತಾ ಅಂಬುಜಮ್ಮನವರತ್ತ ತಿರುಗಿ ಗುರುಗಳು (ತಮ್ಮ ಪ್ರಥಮ ಭೇಟಿಯ ಸಂದರ್ಭದಲ್ಲಿ ಅವನ ತುಂಟಾಟದ ಬಗ್ಗೆ ಅಂಬುಜಮ್ಮನವರು ಹೇಳಿದ್ದನ್ನು ನೆನೆದು) "ಮುಂಜಿಯಾದ ಮೇಲೆ ಈಗ ಇವನು ವಿಧೇಯನಾಗಿದ್ದಾನೋ!" ಎಂದು ನಕ್ಕು ಕೇಳಿದರು. ಜೋಡಿಸಿದ್ದ ಅವನ ಕೈಲಿದ್ದ – ಮತ್ತು ಅಡ್ಡಬೀಳುವ ಮೊದಲು ಇಲ್ಲದಿದ್ದ(!) – ಕೆಲವು ಐದು ರೂಪಾಯಿ ನಾಣ್ಯಗಳನ್ನು ಅವರು ಸೂಕ್ಷ್ಮವಾಗಿ ಗಮನಿಸಿದ್ದರು!... ಗುರುದೃಷ್ಟಿ!

'ಜನಿವಾರ ಬಿದ್ದ ಮೇಲೆ ಹತೋಟಿಗೆ ಬಂದ' – ಅಂಬುಜಮ್ಮ ಉವಾಚ.

'ತಂದೆಯಂತೆಯೇ ಅಭ್ಯುದಯ ಹೊಂದು' ಎಂದು ಆಶೀರ್ವದಿಸಿ ಸ್ವಾಮಿಗಳು ಎದ್ದರು.

'ಮಹಾರಾಜ್! ಒಂದ್ನಿಮಿಷ... ರವಿ... ಇನ್ನೊಂದು ಫೋಟೋ ತೆಗಿಯಪ್ಪ ಚೆನ್ನಾಗಿ. ಎಲ್ಲಿ ಸ್ವಾಮೀಜಿ, ನೀವು ಕುರ್ಚಿ ಮೇಲೆ ಹಾಗೇ ಕೂತುಕೊಳ್ಳಿ! ರೀ, ನೀವು ಮುಂದೆ ಕೂತುಕೊಳ್ಳಿ! ಅವರ ಕಾಲಿಗೆ ಹೂವಾ ಹಾಕಿ. ಕುಮಾರಾ! ನೀನು ಒಂದು ಹಿಡಿ ಕಾಯಿನ್ಸ್ ಇಟ್ಟುಕೊಂಡು ಕ್ಯಾಮರಾ ಕಡೆ ನೋಡ್ತಾ ಇರು' ಎಂದು ಸ್ವಾಮೀಜಿ ಕುಳಿತ ಕುರ್ಚಿಯ ಕೈ ಹಿಡಿದು ಅಂಬುಜಮ್ಮ ಸ್ವಾಮಿಗಳ ಪಕ್ಕದಲ್ಲಿ ನಿಂತರು. ಆಕೆಯ ಬೀಗಿದ ಮುಖ ನೋಡಿ ರವಿ ಅಭ್ಯಾಸ ಬಲದಿಂದ 'ಸ್ಮೈಲ್ ಪ್ಲೀಸ್!" ಎಂದ.

"ಏ! ನೀನೊಬ್ಬ. ಸ್ವಾಮಿಗಳು ನಗ್ತಾರೇನೋ?! ನೀನು ಕ್ಲಿಕ್ ಮಾಡು... ಮಹಾರಾಜ್, ನೀವು ಗಂಭೀರವಾಗೇ ಇರಿ" ಎಂದು ಹೇಳಿದಾಗ ಆವರೆಗೂ ನಡೆದದ್ದೆಲ್ಲಾ ನೋಡಿದ ಸ್ವಾಮಿಗಳಿಗೆ ಸುಮ್ಮನಿರಲು ಸಾಧ್ಯವೇ ಆಗದೆ ತುಂಬು ಮನಸ್ಸಿನಿಂದ ದೊಡ್ಡದಾಗಿ ನಕ್ಕರು. ಅವರು ನಕ್ಕಿದ್ದು ನೋಡಿ, ಬಲವಂತವಾಗಿ ನಗು ತಡೆಹಿಡಿದುಕೊಂಡಿದ್ದ ಅಲ್ಲಿದ್ದ ಎಲ್ಲರೂ ನಕ್ಕರು. ಆವರೆಗೆ ಬೀಗುತ್ತಿದ್ದ ಅಂಬುಜಮ್ಮನವರಿಗೆ ಅವಮಾನವಾದಂತಾಯ್ತು ....'ವಾದಂತಾಯ್ತು' ಏನು? ಆಗಿಯೇ ಹೋಯಿತು. ಅವರ ಮುಖವಂತೂ ಆರಿದ ಕೆಂಡದಂತೆ ಕಳೆಗುಂದಿ ಕಪ್ಪಾಯಿತು. ಕ್ಲಿಕ್... ಫ್ಲಾಷ್! ಕ್ಲಿಕ್... ಫ್ಲಾಷ್!

ಬಾಯ್ತುಂಬ ನಗುತ್ತಿರುವ ಸ್ವಾಮಿಗಳೊಂದಿಗೆ ಕಳಾಹೀನವಾಗಿ ಕಪ್ಪಿಟ್ಟ ಅಂಬುಜಮ್ಮನವರ ವದನಾಂಬುಜ! ಫೋಟೋಗ್ರಾಫರ್ ರವಿಯ ಹತ್ತಿರ, ಅಂಬುಜಮ್ಮನವರಿಗೆ ತಿಳಿಯದಂತೆ ಗುಟ್ಟಾಗಿ ವ್ಯವಹರಿಸಿ, ಕೆಲವು ಸದಸ್ಯೆಯರು ಆ ಫೋಟೋದ ಪ್ರತಿಗಳನ್ನು ಪಡೆದರು.

ಆ ಫೋಟೋ ಈಗ ಬಡಾವಣೆಯ ಮಹಿಳಾ ಸಮಾಜದ ಸದಸ್ಯರ ಮನೆಗಳ ಷೋಕೇಸಿನಲ್ಲಿದೆ – ಗುರುಮಹಾರಾಜರ ಪಾದಪೂಜಾ ಪ್ರಸಂಗದಲ್ಲಿ ಅಂಬುಜಮ್ಮನವರ ಪಾತ್ರದ ದಾಖಲೆಯಾಗಿ! ಕ್ಲಿಕ್... ಫ್ಲಾಷ್!

ಬಿ. ಎಸ್. ಚಂದ್ರಶೇಖರ್
'ಬೆಳಗು', ನಂ.೫೯, ೬ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ
ಬನಶಂಕರಿ ೩ನೇ ಘಟ್ಟ, ಆವಲಹಳ್ಳಿ ಬಡಾವಣೆ
ಬೆಂಗಳೂರು - ೫೬೦ ೦೮೫

# ನಾದತನ್ಮಯಿ ಎಂ. ಎಸ್.



ಶಾಂತಾ ನಾಗರಾಜ್



ಎಂ. ಎಸ್. ಸುಬ್ಬುಲಕ್ಷ್ಮಿ (೧೯೧೬-೨೦೦೪)

**ಎಂ.ಎಸ್. ಅಂದರೆ ಕೇವಲ ಗಾನಮಾಧುರ್ಯಕ್ಕಷ್ಟೇ 'ಮಾದರಿ' ಅಲ್ಲ, ಆಕೆ ಸಂಗೀತಲೋಕದ ಅನೇಕ ವಿಚಾರಗಳಿಗೆ ಮೊದಲು ಪಂಜ್ತಿ ಹಾಕಿಕೊಟ್ಟವರು. ಸಂಗೀತ ಎಂದರೆ ಕೆಲವು 'ಕುಲ'ಗಳಿಗೆ ಮಾತ್ರ ಗಳಿಕೆಯ ಸಂಪತ್ತಾಗಿದ್ದ ಕಾಲದಲ್ಲಿ, ಒಬ್ಬ ಗೌರವಾನ್ವಿತ ಗೃಹಿಣಿ ಸಂಗೀತದ ಶ್ರುತಿ ಹಿಡಿದು ಈ ಎತ್ತರಕ್ಕೆ ಏರಿದ ಸಾಧನೆ ಸಾಧಾರಣವಲ್ಲ. ಅದು ಮುಂದಿನ ಪೀಳಿಗೆಯವರಿಗೂ 'ಮಾದರಿ' ಸಹ.**

೧೯೫೦/೬೦ರ ದಶಕ. ಚಾಮರಾಜಪೇಟೆಯ ಶ್ರೀರಾಮ ಸೇವಾ ಮಂಡಲಿಯ ರಾಮೋತ್ಸವದ ಸಂಗೀತ ಕಛೇರಿಗಳು ಸಿಟಿ ಇನ್ಸ್ಟಿಟ್ಯೂಟ್ ಆವರಣದಲ್ಲಿ ನಡೆಯುತ್ತಿತ್ತು. ಸಭಿಕರು ಡಾ|| ಎಂ. ಬಾಲಮುರಳಿಕೃಷ್ಣರನ್ನು ಅವರೇ ಚಿತ್ರಕ್ಕಾಗಿ ಹಾಡಿರುವ 'ನಟವರ ಗಂಗಾಧರ' ಹಾಡಲು ವಿನಂತಿಸಿದರು. ಬಾಲಮುರಳಿಯವರಿಗೆ ಕೋಪ ಬಂದು ಕನ್ನಡಿಗರ ಬಗ್ಗೆ ಸ್ವಲ್ಪ ಹೀನಾಯವಾಗಿ ಮಾತಾಡಿಬಿಟ್ಟರು. ಸಭೆಯಲ್ಲಿ ಅಲ್ಲೋಲ ಕಲ್ಲೋಲ. ಮಾತಿಗೆ ಮಾತು ಬೆಳೆದು ಕಡೆಗೆ ಕಲ್ಲು ತೂರಾಟವಾಗಿ ಏನೆಲ್ಲಾ ಅಧ್ವಾನವಾಗಿಹೋಯಿತು. ಆ ದಿನ ಅಲ್ಲಿದ್ದ ನಮಗೆ ಕ್ಷೇಮವಾಗಿ ಮನೆಗೆ ಹಿಂತಿರುಗುವುದೇ ಪ್ರಯಾಸವಾಗಿಹೋಯಿತು. ಅದೇ ಸರಣಿಯ ಕಾರ್ಯಕ್ರಮದಲ್ಲೇ ಶ್ರೀಮತಿ ಎಂ. ಎಸ್. ಸುಬ್ಬುಲಕ್ಷ್ಮಿಯವರ ಕಛೇರಿಯಿದ್ದ ದಿನವೂ ಅವರನ್ನು ಸಭಿಕರೊಬ್ಬರು ಚಿತ್ರಗೀತೆ ಹಾಡಬೇಕೆಂದು ವಿನಂತಿಸಿದರು. ಎಂ.ಎಸ್. ಅತಿ ವಿನಯದಿಂದ ಕೈಮುಗಿದು ತಮಿಳಿನಲ್ಲಿ ಹೇಳಿದರು, ''ಶ್ರೀರಾಮರ ಸೇವೆಗೆ ಕರೆದಿದ್ದೀರಿ. ನಾನೂ ಅದಕ್ಕಾಗಿಯೇ ಬಂದಿದ್ದೇನೆ. ಕನ್ನಡಿಗರೂ ರಾಮಭಕ್ತರೆನ್ನುವುದಕ್ಕೆ ಈ ಕಾರ್ಯಕ್ರಮಗಳೇ ಸಾಕ್ಷಿ. ನನಗೆ ದಯವಿಟ್ಟು ರಾಮಸೇವೆ ಮಾಡಲು ಅನುವು ಮಾಡಿಕೊಡಿ.'' ಈ ಮಾತಿಗೆ ಇಡೀ ಸಭೆ ಮಂತ್ರಮುಗ್ಧವಾಯಿತು. ಚಪ್ಪಾಳೆಯ ಸುರಿಮಳೆ! ಕಛೇರಿ ಎಂ.ಎಸ್. ಮಯವಾಯಿತು. ಅವರು ಹರಿಸಿದ ಗಾನ ಮತ್ತು ಭಕ್ತಿ ಸುಧೆ ಸಭಿಕ ರಸಿಕರ ಸ್ವತ್ತಾಯಿತು.

ಎಂ.ಎಸ್. ಅಂದರೆ ಕೇವಲ ಗಾನಮಾಧುರ್ಯಕ್ಕಷ್ಟೇ 'ಮಾದರಿ' ಅಲ್ಲ, ಆಕೆ ಸಂಗೀತಲೋಕದ ಅನೇಕ ವಿಚಾರಗಳಿಗೆ ಮೊದಲು ಪಂಜ್ತಿ ಹಾಕಿಕೊಟ್ಟವರು. ಸಂಗೀತ ಎಂದರೆ ಕೆಲವು 'ಕುಲ'ಗಳಿಗೆ ಮಾತ್ರ ಗಳಿಕೆಯ ಸಂಪತ್ತಾಗಿದ್ದ ಕಾಲದಲ್ಲಿ, ಒಬ್ಬ ಗೌರವಾನ್ವಿತ ಗೃಹಿಣಿ ಸಂಗೀತದ ಶ್ರುತಿ ಹಿಡಿದು ಈ ಎತ್ತರಕ್ಕೆ ಏರಿದ ಸಾಧನೆ ಸಾಧಾರಣವಲ್ಲ. ಅದು ಮುಂದಿನ ಪೀಳಿಗೆಯವರಿಗೂ 'ಮಾದರಿ' ಸಹ. ಆಕೆ ತನ್ನ ನಾಲ್ಕನೇ ವಯಸ್ಸಿನಲ್ಲೇ ತಾಯಿಯೊಂದಿಗೆ ವೀಣೆಗೆ ಧ್ವನಿ ಕೂಡಿಸಿ, ಹತ್ತನೇ ವಯಸ್ಸಿನಲ್ಲಿ ಸ್ವಂತವಾಗಿ ಕಛೇರಿ ನೀಡಿ, ತನ್ನ ಕಂಠಸಿರಿಯಿಂದಲೇ ಅದ್ಭುತ ಬದುಕನ್ನು ಗಳಿಸಿಕೊಂಡಾಕೆ. ಎಂ.ಎಸ್.ಗೆ ಎಂ.ಎಸ್.ರವರೇ ಸರಿಸಾಟಿ ಎನಿಸುವಂತೆ ಮಾಡಿದಾಕೆ.

'ಪ್ರತಿ ಯಶಸ್ವೀ ಪುರುಷನ ಹಿಂದೆ ಮಹಿಳೆಯೊಬ್ಬಳಿರುತ್ತಾಳೆ' ಎನ್ನುವುದು ಇಂಗ್ಲಿಷ್ ಭಾಷೆಯಲ್ಲಿನ ಜನಪ್ರಿಯ ಲೋಕೋಕ್ತಿ. ಇದನ್ನು ಸ್ವಲ್ಪ ತಿರುವು ಮುರುವುಗೊಳಿಸಿದರೆ ಆ ಮಾತು ಎಂ.ಎಸ್. ಅವರಿಗೆ ಖಚಿತವಾಗಿ ಅನ್ವಯವಾಗುತ್ತದೆ. ''ಒಂದು ಸಂಗೀತ ಮೂರ್ತಿಯನ್ನು ಈ ಪರಿಯಲ್ಲಿ ಕಟೆದುನಿಲ್ಲಿಸಲು ಅವರ ಪತಿ ಶ್ರೀ ಸದಾಶಿವಂ ಅವರ ಸತತ ಪರಿಶ್ರಮ ಮತ್ತು ದೂರದರ್ಶಿತ್ವವೂ ಕಾರಣ'' ಎಂದು ಸಂಗೀತ ಶಾಸ್ತ್ರಜ್ಞೆ ಡಾ|| ಟಿ. ಎಸ್. ಸತ್ಯವತಿಯವರು ಅಭಿಪ್ರಾಯ ಪಡುತ್ತಾರೆ. ಜನ್ಮದತ್ತವಾಗಿ ಎಂ.ಎಸ್. ಉನ್ನತಕುಲ ಮತ್ತು ಅಷ್ಟೇನೂ ಸಿರಿವಂತಿಕೆಯನ್ನು ಪಡೆದವರಲ್ಲ. ಅವೆರಡೂ ಅವರಿಗೆ ಲಭಿಸಿದ್ದು ಶ್ರೀ ಸದಾಶಿವಂ ಅವರನ್ನು ವರಿಸಿದ ನಂತರ. ಎಂ.ಎಸ್. ಅವರಿಗೆ ಹುಟ್ಟಿನಿಂದಲೇ ತಮ್ಮನ್ನು ಸಂಗೀತಕ್ಕೆ ತೆತ್ತುಕೊಳ್ಳುವ ಗುಣ ಬಂದಿತ್ತು. ನಿರಂತರ ಸಾಧನೆ, ರಾಗಭಾವವನ್ನು ಅನುಭವಿಸಿ ಹಾಡುವುದು, ಸಾಹಿತ್ಯ ಭಾವವನ್ನು ಸರಿಯಾಗಿ ಗ್ರಹಿಸುವುದು ಇವು ಅವರಿಗೆ ಕರತಲಾಮಲಕ. ಎಲ್ಲಕ್ಕಿಂತ ಹೆಚ್ಚಾಗಿ ನಮ್ರತೆ ಮತ್ತು ತಾದಾತ್ಮ್ಯತೆಗಳು ಅವರ ಸಂಗೀತಜೀವನದ ಮುಖ್ಯ ಸೆಲೆಗಳು.

ಶ್ರೀ ಸದಾಶಿವಂ ಅವರ ಪಾಲಿಗೆ ಒಂದು ಇಂಥ ಅಮೂಲ್ಯ ರತ್ನ ಸಿಕ್ಕಿದ್ದು ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಅಷ್ಟೇ ಅಮೂಲ್ಯವಾದ ಕೊಡುಗೆ ಎನ್ನಬೇಕು. ಉತ್ತಮ ಗುರುಗಳಿಂದ ಸಂಗೀತ ಪಾಠವಾಗಬೇಕು, ಉತ್ತಮ ಕೃತಿಗಳನ್ನು ಕಲಿಯಲೇಬೇಕು, ಉತ್ತಮ ವೇದಿಕೆಗಳು ದೊರಕಬೇಕು, ಅಷ್ಟೇಕೆ ಸಂಗೀತ ಜಗತ್ತಿನ ಎಲ್ಲ ಉತ್ತಮ ಅಂಶಗಳೂ ಎಂ.ಎಸ್.ರವರಿಗೆ ಲಭಿಸಲೇಬೇಕು – ಇದು ಸದಾಶಿವಂ ಅವರು ಅನುಸರಿಸಿದ ಸೂತ್ರ. ಒಮ್ಮೆ ಬೀದಿಯಲ್ಲಿ ದಾಸಯ್ಯನೊಬ್ಬ ಸುಶ್ರಾವ್ಯವಾಗಿ ಒಂದು ದೇವರ ನಾಮವನ್ನು ಹೇಳಿಕೊಂಡು ಹೋಗುತ್ತಿದ್ದನಂತೆ. ಅದು ಸದಾಶಿವಂ ಅವರ ಕಿವಿಗೆ ಬಿತ್ತು. ತಕ್ಷಣ ಆತನನ್ನು ಮನೆಯ ಒಳಗೆ ಕರೆಯಲಾಯಿತು. ಎಂ.ಎಸ್. ಅವರಿಂದ ಆತನಿಗೆ ಫಲತಾಂಬೂಲ ದಕ್ಷಿಣೆಗಳನ್ನು ಕೊಡಿಸಿ, ಸಾಷ್ಟಾಂಗ ಉದ್ದಂಡ ಹಾಕಿಸಿ, ಅದೇ ಹಾಡು ಹೇಳಿಕೊಡುವಂತೆ ವಿನಂತಿಸಿಕೊಂಡರಂತೆ. ಅದು, ಅಲ್ಲೇ ಆ ಕ್ಷಣದಲ್ಲೇ ಎಂ.ಎಸ್. ಆ ಹಾಡನ್ನು ಕಲಿಯುವ ಸಂದರ್ಭವಾಯಿತು. ಒಳ್ಳೆಯ ಕೃತಿ, ಅದು ಯಾರಲ್ಲೇ ಇರಲಿ ಎಲ್ಲೇ ಇರಲಿ, ಅದು ಎಂ.ಎಸ್.ಗೆ ಕರಗತವಾಗಿಬಿಡಬೇಕು. ಸದಾಶಿವಂ ಅವರ ತುಡಿತ ಸದಾ ಇಂಥದ್ದರ ಕಡೆಗೇ. ಪರಿಣಾಮ ಎಂ.ಎಸ್. ಅವರು ಸಂಗೀತ ಕೃತಿಗಳ 'ಗಣಿ'ಗಳಂತೆ ಶೋಭಿಸಿದರು.

ಎಂ.ಎಸ್.ರವರ ಕಛೇರಿಗಳಿಗೆ ಪಿಟೀಲು ನುಡಿಸಲು ವಿದ್ವಾನ್ ಟಿ. ಚೌಡಯ್ಯನವರು ಸದಾ ಕಾತುರರಾಗಿರುತ್ತಿದ್ದರು. ಅವರ ಈ ಹಂಬಲವನ್ನು ಗಮನಿಸಿದ ಪಂಡಿತ

ರೊಬ್ಬರು ಗೇಲಿ ಮಾಡಿದರಂತೆ ''ಅದೇನು ಆ ಹೆಂಗಸಿಗೆ ಪಕ್ಕವಾದ್ಯ ನುಡಿಸಲು ಅಷ್ಟೊಂದು ಆಸೆ ನಿಮಗೆ'' ಎಂದು. ''ಬೇಕಾದರೆ ನನ್ನ ಇಡೀ ಜೀವಮಾನವನ್ನೆಲ್ಲಾ ಆಕೆಗೆ ಪಕ್ಕವಾದ್ಯ ನುಡಿಸುತ್ತಾ ಕಳೆದುಬಿಡುತ್ತೇನೆ. ಆಕೆಗೆ ಸರಸ್ವತಿ ಒಲಿದಿದ್ದಾಳೆ. ಅವರಿಗೆ ಪಕ್ಕವಾದ್ಯ ನುಡಿಸಲೂ ಪುಣ್ಯ ಪಡೆದಿರಬೇಕು. ನೋಡುತ್ತಿರಿ, ಒಂದು ದಿನ ಆಕೆ ಎಂಥ ಎತ್ತರಕ್ಕೆ ಏರುತ್ತಾರೆ ಎಂದು'' ಎಂದರಂತೆ ಚೌಡಯ್ಯ. ಅವರ ಭವಿಷ್ಯ ನಿಜವಾಯಿತು. ಎಂ.ಎಸ್. ಅಂತಾರಾಷ್ಟ್ರೀಯ ಮಟ್ಟದ ಖ್ಯಾತಿ ಗಳಿಸಿದರು. 'ಭಾರತರತ್ನ' ಆದರು. ಆದರೆ ಅದನ್ನು ನೋಡಿ ಆನಂದಿಸಲು ಚೌಡಯ್ಯನವರು ಇರಲಿಲ್ಲ.

ಎಂ.ಎಸ್. ಅವರ ಕಛೇರಿಗಳ ವೈಶಿಷ್ಟ್ಯವೆಂದರೆ ಪಂಡಿತರಿಗೂ ಪಾಮರರಿಗೂ ಸಮಾನವಾಗಿ ರಸಾನುಭವವನ್ನು ಕೊಡುವುದು ಎನ್ನುತ್ತಾರೆ ಡಾ|| ಟಿ. ಎಸ್. ಸತ್ಯವತಿ. ''ಅವರ ಕಛೇರಿ ಪ್ಲಾನಿಂಗ್ ಎಲ್ಲರಿಗೂ ಮಾದರಿಯಂತೆ. ಮೊದಲರ್ಧ ಭಾಗ ರಾಗ, ತಾನ, ಪಲ್ಲವಿಗಳಿಂದ, ಕಲ್ಪನಾ ಸ್ವರಗಳಿಂದ ಶಾಸ್ತ್ರದ ತಲಸ್ಪರ್ಶಿ ಅನುಭವಕ್ಕೆ ಮೀಸಲಾದರೆ, ಉಳಿದರ್ಧಭಾಗ ಭಜನೆ, ದೇವರನಾಮ, ಉಗಾಭೋಗ ಇತ್ಯಾದಿಗಳಿಂದ ಸಾಮಾನ್ಯ ರಸಿಕರಿಗೆ ರಂಜನೆ ಲಭಿಸುತ್ತಿತ್ತು. ಈ ಕಾರಣದಿಂದಲೇ ಎಂ.ಎಸ್. ಕಛೇರಿಗಳೆಂದರೆ ಎಲ್ಲ ವರ್ಗದ ಜನಾಕರ್ಷಣೆಗೆ ಮಾರ್ಗವಾಗಿತ್ತು. ಅಲ್ಲಿ ಒಂದು ಬಗೆಯ ಮಂತ್ರಸ್ಪರ್ಶವಿರುತ್ತಿತ್ತು. ಜನ ಮಂತ್ರಮುಗ್ಧರಾಗುತ್ತಿದ್ದರು'' ಎನ್ನುತ್ತಾರೆ. ಮುಂದುವರೆದು, ''ಮೊದಲೆಲ್ಲ ಹೆಂಗಸರು ಹಾಡುವುದೆಂದರೆ ಮಧ್ಯಮ ಮತ್ತು ತಾರಕಸ್ಥಾಯಿ (ಅಗತ್ಯವಿದ್ದಾಗ) ಮಾತ್ರವಾಗಿರುತ್ತಿತ್ತು. ಎಂ.ಎಸ್. ಸಹ ಹಾಗೇ ಹಾಡುತ್ತಿದ್ದರು. ನಂತರ ಹೆಂಗಸರೂ ಮಂದ್ರದಲ್ಲಿ ರಾಗ ಚಲನೆಗಳನ್ನು ಯಶಸ್ವಿಯಾಗಿ ಪ್ರಯೋಗ ಮಾಡತೊಡಗಿದಾಗ ಎಂ.ಎಸ್. ಸಹ ಅದನ್ನು ರೂಢಿಸಿಕೊಂಡರು. ಇದೇ ಎಂ.ಎಸ್. ಅವರ ಹಿರಿಮೆ. 'ನಮ್ಮ ಕಾಲದಲ್ಲಿ ಹೀಗಿತ್ತು, ಅದೇ ಸರಿ' ಎಂದು ಹಠ ಹಿಡಿಯುವ ಸ್ವಭಾವ ಅವರದಾಗಿರಲಿಲ್ಲ. ಯಾವ ಕಾಲದಲ್ಲಾದರೂ ಸರಿ, ಯಾರಿಂದಲಾದರೂ ಸರಿ ಒಳ್ಳೆಯದು ಬಂದಾಗ ಸ್ವೀಕರಿಸುವ ದೊಡ್ಡಗುಣ ಎಂ.ಎಸ್. ಅವರಿಗಿತ್ತು'' ಎನ್ನುತ್ತಾರೆ ಡಾ|| ಸತ್ಯವತಿ. 'ಸಂಗೀತವನ್ನು ಬೆಳೆಸಬೇಕು, ಅದರೊಂದಿಗೆ ತಾವೂ ಬೆಳೆಯಬೇಕು' ಎನ್ನುವುದು ಎಂ.ಎಸ್. ಅವರ ಜೀವನ ಶ್ರುತಿ.

ಎಂ.ಎಸ್. ಕಛೇರಿ ನೀಡಲು ಪ್ರಾರಂಭಿಸಿದ ಕಾಲದಲ್ಲೇ ಮತ್ತೊಬ್ಬ ಖ್ಯಾತ ವಿದುಷಿ ವಸಂತ ಕೋಕಿಲಂ ಎಂ.ಎಸ್. ಅವರ ಹಾಗೇ ಹಾಡುತ್ತಿದ್ದರಂತೆ. ''ಅವರ ಹಾಡುಗಳ ಧ್ವನಿಮುದ್ರಿಕೆ ನನ್ನ ಬಳಿ ಇದೆ. ಅವರ ಕಂಠ ಕೇಳಿದರೆ ಥೇಟ್ ಎಂ.ಎಸ್. ಹಾಡುತ್ತಿರುವಂತೆ ಭಾಸವಾಗುತ್ತದೆ. ಆದರೆ ಆಕೆ ಚಿಕ್ಕ ವಯಸ್ಸಿನಲ್ಲೇ ಅಕಾಲ ಮರಣ ಹೊಂದಿದರು. ಇದು ಕರ್ನಾಟಕ ಸಂಗೀತಕ್ಕಾದ ನಷ್ಟ. ಇಂದು ಅವರು ಬದುಕಿದ್ದರೆ ಸಂಗೀತ ಕ್ಷೇತ್ರದಲ್ಲಿ ಇಬ್ಬರು ಸುಬ್ಬುಲಕ್ಷ್ಮಿ ಇರುತ್ತಿದ್ದರು'' ಎಂದು ಡಾ|| ಟಿ. ಎಸ್. ಸತ್ಯವತಿ ಅಭಿಪ್ರಾಯಪಡುತ್ತಾರೆ.

ಎಂ.ಎಸ್. 'ಗಂಡನ ಕೈಗೊಂಬೆ. ಇಂಥ ಉತ್ತಮ ಕಲಾವಿದೆ ಅಷ್ಟೇ ಉತ್ತಮ ಶಿಷ್ಯರನ್ನೂ ತಯಾರಿಸಬೇಕಿತ್ತು. ಹಾಗೆ ಆಗಲಿಲ್ಲ' ಎಂಬ ಅಪವಾದಗಳು ಎಂ.ಎಸ್. ಅವರನ್ನು ಸುತ್ತುವರೆದದ್ದು ನಿಜ. ಅದಕ್ಕೆ ಒಂದು ಸಂದರ್ಶನದಲ್ಲಿ ಆಕೆ ಸಮರ್ಥ ಉತ್ತರ ನೀಡಿ ಕುಹಕಿಗಳ ಬಾಯಿ ಮುಚ್ಚಿಸಿದ್ದಾರೆ : ''ಹೌದು ನಾನು ನನ್ನ ಗಂಡನನ್ನು ಕಾಯಾ ವಾಚಾ ಮನಸಾ ಅನುಸರಿಸುತ್ತೇನೆ. ಆತನೇ ನನಗೆ ಮಾರ್ಗದರ್ಶಿ. ಇವತ್ತು ನಾನು ಏನನ್ನು ಗಳಿಸಿದ್ದೇನೆಯೋ ಅದು ಅವರ ಕಾರಣದಿಂದ'' ಮತ್ತು ''ನಾನು ವೇದಿಕೆ ಸಂಗೀತಕ್ಕೇ ಹೆಚ್ಚು ಮಹತ್ವ ಕೊಟ್ಟೆ. ಶಿಷ್ಯರನ್ನು ತಯಾರು ಮಾಡುವುದು, ನಾನು ಸಾಧನೆ ಮಾಡಿಕೊಳ್ಳುವುದು ಮತ್ತು ವೇದಿಕೆಗೆ ತಯಾರಾಗುವುದು, ಇವು ಮೂರನ್ನೂ ನಿಭಾಯಿಸಲೇ ನನಗೆ ಸಮಯವಿಲ್ಲ. ಆದ್ದರಿಂದಲೇ ನನಗೆ ನನ್ನ ಸಾಧನೆ ಮತ್ತು ವೇದಿಕೆಗಳೇ ಮುಖ್ಯವಾದುವು.'' ಅವರ ಈ ಎರಡೂ ಖಚಿತ ಉತ್ತರಗಳು ಮತ್ತೆ ಆಕೆಯ ಬಗ್ಗೆ ಯಾರೂ ಸೊಲ್ಲೆತ್ತದಂತೆ ಮಾಡಿದವು. ಅವರ ಕಂಠ ಮಾಧುರ್ಯ, ತನ್ಮಯತೆಗೆ ಅವರು ಪೂರ್ಣಾವಧಿ ಕಲಾವಿದೆಯಾಗಿ ಉಳಿದಿದ್ದೇ ಅತ್ಯುನ್ನತ ಮಾರ್ಗವಾಗಿತ್ತು ಎಂಬುದು ನಿರ್ವಿವಾದ. ಆಕೆಗೆ ತನ್ನ ಗುರಿ, ಸಾಧನೆಗಳ ಕುರಿತು ಖಚಿತ ನಿಲುವು ತಳೆದಿದ್ದರು. ಆ ನಿಟ್ಟಿನಲ್ಲಿ ಅದ್ಭುತ ಯಶಸ್ಸು ಗಳಿಸಿದರು, ಕರ್ನಾಟಕ ಸಂಗೀತ ಕ್ಷೇತ್ರದಲ್ಲಿ ಅತ್ಯುನ್ನತ ಶಿಖರವನ್ನೇರಿದರು.

ಚಿತ್ರಕೃಪೆ : ಫ್ರಂಟ್‌ಲೈನ್

**ಶಾಂತಾ ನಾಗರಾಜ್**
೬೦, 'ಜ' ೧, ಮೀರಾ ಮ್ಯಾನ್‌ಶನ್, ೧೭ನೇ ಅಡ್ಡರಸ್ತೆ, ಮಲ್ಲೇಶ್ವರಂ
ಬೆಂಗಳೂರು - ೫೬೦ ೦೫೫

## ಮಾದಾರ ಚೆನ್ನಯ್ಯ

ಕಲ್ಯಾಣ ಪಟ್ಟಣದ ಸಾಲಲ್ಲಿ
ಕಾಯಕದ ಬುತ್ತಿ ಹೊತ್ತು
ಅನುಭವ ಮಂಟಪದಲ್ಲಿ ಹಂಚುಂಡ ಮಗನೇ.

ಬಸವ ಅಲ್ಲಮರ
ಮಾತಿನ ಹಾದಿಗೆ ಮುತ್ತಿನ ಹಾರವ
ಕಟ್ಟಿದ ಕಲ್ಯಾಣದ ಸಿರಿಯೇ.

ಅಪ್ಪನು ತಾನಾಗಿ
ಬಿಜ್ಜಳನ ಬಸವನಿಗೆ ಭಂಡಾರದ ಉಡಿಯ ತುಂಬಿ
ಕಳಚೂರಿಗಳ ರತ್ನ ಸಿಂಹಾಸನಕೆ ಎಳೆಮಾವು-
ಮಲ್ಲಿಗೆಗಳನ್ನಿತ್ತ ಕೂಡಲಸಂಗನ ಮಮತೆಯ
ಮಡಿಲೇ.

ಶರಣರಿಗೆ ಅನುಭಾವವ ಬೆರೆಸಿ
ನೆಲದ ಬಾಳಿಗೆ ಜೀವಕಾರುಣ್ಯವ ಕಲಿಸಿ
ಎಲ್ಲರೊಳಗೊಂದಾದ ಜೀವಚೈತನ್ಯದ ಮನಸ್ಸೇ.

ಅಂಬಲಿಯ ಬೀದಿಗೆ ಜನರೆಲ್ಲಾ ಒಡಲಾಗಿ
ದೊರೆ ಜಗದ ಪಾದಕೂ ಹಸಿದು ಮರುಳಾಗಿ
ನಿಂತ ರಾಜ ನೆಲವೆ ಕುಸಿದು ಹೋಗುವ ಕಾಲ
ಕರಿಕಾಲ ಮೇಲೆ ಕರುಣೆ ಇಟ್ಟ ಪಾದವೇ.

ಚಮ್ಮಾವಿಗೆಗಳ ಬೆಳೆಯ ಬೆಳೆದು
ಕಣರಾಶಿಯ ಮಾಡಿ ಕಣ್ಣದೀವಿಗೆ ಹಿಡಿದು
ಮನೆ ಮನೆಗಳಲ್ಲಿ ಜಂಗಮದ ಎಡೆ ಇತ್ತ
ಬಸವ ಧ್ಯಾನದ ಕನಸೇ.

ಸಾವಿರ ವರುಷಗಳ ದಣಿದ ದೇಹಕ್ಕೆ
ಅರಿವಿನ ಬೆಳಕು ಹರಿಸಿ
ಶ್ರಮದ ಹೂ ಅರಳಿಸಿದ ಈ ನೆಲದ
ಮಹಾಶಕ್ತಿಯೇ.

ಕಲ್ಯಾಣಕೆ ಪ್ರತಿಕಲ್ಯಾಣವ ಕಟ್ಟಿದ
ನಮ್ಮ ಕಾಲದ ಪ್ರಜ್ಞೆಯೇ.

**ಡಾ|| ನಿಂಗಪ್ಪ ಮುದೇನೂರು**
ಸಂಯೋಜನಾಧಿಕಾರಿ, ಕನಕ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩



# ಧರ್ಮ – ರಾಜಕೀಯ – ಸಾಹಿತ್ಯ

ಧರ್ಮ ಅನ್ನುವ ಮಾತನ್ನು ನಾವು ಬಳಸುವಷ್ಟು ಮತ್ತು ಅದನ್ನು ದುರುಪಯೋಗಪಡಿಸುವಷ್ಟು ಪ್ರಾಯಶಃ ಇನ್ನಾವ ಶಬ್ದವನ್ನೂ ಈ ದೇಶದಲ್ಲಿ ನಾವು ಬಳಸ್ತಾ ಇಲ್ಲ. ಆದರೆ, ಧರ್ಮ ಎರಡು ಬಗೆಯದು ಅಂತ ನಾನು ಅಂದುಕೊಂಡಿದ್ದೇನೆ. ಒಂದು ಯಾವುದನ್ನು ನಾವು ನಮ್ಮ ಮನಸ್ಸಿನ ಆಳದಲ್ಲಿ, ನಮ್ಮ ವ್ಯಕ್ತಿತ್ವದಲ್ಲಿ ರೂಪಿಸಿಕೊಂಡು, ದಿನನಿತ್ಯದಲ್ಲಿ ಅನುಸರಿಸುತ್ತೇವೆಯೋ, ನಮಗೆ ಮಾತ್ರ ಅರ್ಥವಾಗುತ್ತದೆಯೋ, ನಮಗೆ ಮಾತ್ರ ಸ್ಪಷ್ಟವಾಗುತ್ತದೆಯೋ ಅದು ಧರ್ಮ. ಇನ್ನೊಂದು ವ್ಯವಸ್ಥಿತ ಧರ್ಮ. ನಾವು ನೂರಕ್ಕೆ ೯೦ಸಲ ಧರ್ಮ ಅನ್ನುವಾಗ ಈ ವ್ಯವಸ್ಥಿತ ಧರ್ಮದ ಬಗ್ಗೆ ಮಾತನಾಡತಾ ಇರತೇವೆ. ನನ್ನ ಧಾರ್ಮಿಕ ದೃಷ್ಟಿ ಮತ್ತು ನಿಮ್ಮ ಧಾರ್ಮಿಕ ದೃಷ್ಟಿ ಮತ್ತು ನನ್ನ ಧಾರ್ಮಿಕ ರೀತಿಯ ಬದುಕು ಮತ್ತು ನಿಮ್ಮದು ಪ್ರಾಯಶಃ ಒಂದೇ ಆಗಲಿಕ್ಕೆ ಸಾಧ್ಯವಿಲ್ಲ. ಆದರೆ ನಮ್ಮೆಲ್ಲರ ಮಧ್ಯದಲ್ಲಿ ಒಂದು ಸಾಮಾನ್ಯ ಕಾಳಜಿ ಏನೆಂದರೆ ಬದುಕು. ಜೀವಪರವಾದ, ಭವಿಷ್ಯದ ನೆಲೆಯಲ್ಲಿ, ಭವಿಷ್ಯದ ಬುನಾದಿಯ ಮೇಲೆ ಕಟ್ಟಲ್ಪಟ್ಟ ನಮ್ಮ ಬದುಕಿನ ರೀತಿಗೆ ನಾವು ಆಚರಣೆಯಲ್ಲಿ ಇರುವ ಧರ್ಮ ಅಂತ. ಇನ್ನೊಂದು ವ್ಯವಸ್ಥಿತ ಧರ್ಮ. ಮಠ, ಮಠಾಧಿಪತಿಗಳು. ಅದು ಯಾವ ಜಾತಿ ಯಾವ ಧರ್ಮದ ಪಂಗಡಕ್ಕೆ ಸೇರಿದ್ದರೂ ಕೂಡ ಅವರೆಲ್ಲರೂ ನೂರಕ್ಕೆ ತೊಂಬತ್ತು ಮಂದಿ ಮಾಡತಾ ಇರೋದು ಒಂದು ಕೆಲಸ, ಜೀವ ವಿರೋಧಿ ಕೆಲಸ. ಆದ್ದರಿಂದ, ನಮ್ಮ ನಿಮ್ಮ ಮನಸ್ಸಿನಲ್ಲಿ ನಿಜವಾದ ರೀತಿಯ ಧಾರ್ಮಿಕ ಅನುಭವ ಮತ್ತು ವಿಚಾರದೃಷ್ಟಿ ಬೆಳೀಬೇಕಾದರೆ ಒಂದು ದೊಡ್ಡ ಯುದ್ಧ, ಸಂಘರ್ಷ ಏರ್ಪಡಬೇಕು. ಸಾವಿರಾರು ವರ್ಷದಿಂದ ನಮ್ಮ ಪ್ರಜ್ಞೆಯ ಆಳದಲ್ಲಿ ಬಿತ್ತಿದ ಭಯ, ಆತಂಕಗಳ ವಿರುದ್ಧ ಆಸೆಯ ಬೀಜಗಳನ್ನು ಬಿತ್ತೋದು ಸುಲಭದ ಕೆಲಸ ಅಲ್ಲ. ನಾಳಿನ ಬಗ್ಗೆ ನಂಬಿಕೆಗಳನ್ನು ಹುಟ್ಟಿಸಿಕೊಂಡು ನನ್ನ ವ್ಯಕ್ತಿತ್ವದಲ್ಲಿ ಮೂಡುವ ನನ್ನದೇ ಆದ ವಿಚಿತ್ರವಾದ, ಕುತೂಹಲಕಾರಿಯಾದ, ನಿಗೂಢವಾದ ಆಲೋಚನೆಗಳನ್ನು ಒಪ್ಪಿಕೊಳ್ಳುವ ಶಕ್ತಿ ಪಡೆದುಕೊಳ್ಳೋದಕ್ಕೆ ಈ ವ್ಯವಸ್ಥಿತ ಧರ್ಮದ ವಿರುದ್ಧ ಒಂದು ಹೋರಾಟ ಅತ್ಯವಶ್ಯಕವಾಗ್ತದೆ. ಸಾವಿನ ಭಯ ಮನುಷ್ಯನಿಗೆ ಇಲ್ಲದಿದ್ದರೆ ಧರ್ಮದ ಅವಶ್ಯಕತೆಯೇ ಇರಲಿಲ್ಲ. ಈ ಸಾವಿನ ಭಯವನ್ನು ದುರ್ಲಾಭ ಪಡೆದುಕೊಂಡೇ ಧರ್ಮಗಳು, ವ್ಯವಸ್ಥಿತ ಧರ್ಮಗಳು, ಮನುಷ್ಯನನ್ನು ಶೋಷಣೆಪಡಿಸುತ್ತವೆ. ಈ ಲೋಕದಲ್ಲಿ ನಡವಳಿಕೆಯ ಬಗ್ಗೆ ಪ್ರತಿ ಕ್ಷಣದಲ್ಲೂ ಕೂಡ ನಮಗೆ ಆತಂಕಗಳನ್ನು ಸೃಷ್ಟಿ ಮಾಡತಾ ಇರತದೆ. ಮನುಷ್ಯನ ದೇಹದ ಬಗ್ಗೆ ನೋಡಿ. ಪ್ರಕೃತಿ ಸೃಷ್ಟಿಸಿದ ಯಾವ ಇನ್ನೊಂದು ಪ್ರಾಣಿಗಾಗಲಿ, ಮರಕ್ಕಾಗಲೀ ಈ ತರಹದ, ತನ್ನ ದೇಹದ ವಿಭಜನೆ ಆಗೋದಿಲ್ಲ. ಒಂದು ಸಮಗ್ರ ಘಟಕ. ಮನುಷ್ಯ ಮಾತ್ರ ಪವಿತ್ರ, ಅಪವಿತ್ರ; ಮೇಲು, ಕೀಳು; ಆಡಬಹುದಾದ, ಆಡಬಾರದ; ಅವಮಾನಪಟ್ಟುಕೊಳ್ಳಬೇಕಾದ, [illegible]ಪಟ್ಟುಕೊಳ್ಳ

> ಭಾಷೆ ಶಾಶ್ವತ. ಬಳಸುವ ನಾವು ನಶ್ವರ. ಹೀಗೆ ಶಾಶ್ವತವಾದದ್ದಕ್ಕೆ ಮಾತ್ರ ಯಾವಾಗ ನಾವು ಬದ್ಧರಾಗತಾ ಹೋಗತೀವಿ ಅಲ್ಲೀವರೆಗೆ ನಮಗೆ ಜೀವದ ಬಗ್ಗೆ ಸಾವಿನ ಹೆದರಿಕೆ ಇಲ್ಲದೆ ಬದುಕಿನ ಪ್ರೀತಿ ಸಾಧ್ಯವಾಗ್ತದೆ. ಈ ಬದುಕಿನ ಪ್ರೀತಿ ಬೆಳಸುವ ಸಾಹಿತ್ಯ ಅದಕ್ಕಾಗಿ ನಮಗೆ ಅತ್ಯಂತ ಶ್ರೇಷ್ಠವಾದದ್ದು. ದೇವರಿಂದ ಆರಂಭವಾಗುವುದಲ್ಲ ಸಾಹಿತ್ಯ. ದೇವರಲ್ಲಿ ಮುಕ್ತಾಯವಾಗುವುದು.

ಬೇಕಾದ ಭಾಗಗಳೆಂದು ವಿಭಜಿಸಿಕೊಂಡಿದ್ದಾನೆ.

ವ್ಯವಸ್ಥಿತ ಧರ್ಮದ ಇನ್ನೊಂದು ಗುಟ್ಟು: ಅದಕ್ಕೆ ಹೆಣ್ಣಿನ ಬಗ್ಗೆ ಧರ್ಮಕ್ಕೆ ಯಾವ ರೀತಿಯಾದ ಸಹಾನುಭೂತಿ ಇಲ್ಲ. ಧರ್ಮ ಹೆಣ್ಣಿನ ಬಗ್ಗೆ ತೋರಿಸಿದಷ್ಟು ಹಿಂಸೆ, ಗಂಡಿನ ಬಗ್ಗೆ ಇಲ್ಲ. ಯಾಕೆಂದರೆ, ಇದು ಪುರುಷ ಪ್ರಧಾನ ವ್ಯವಸ್ಥೆ. ಈ ಇಡೀ ಸಿದ್ಧಾಂತ ಮತಧರ್ಮ ಮಾಡಿದ ಮನುಸ್ಮೃತಿಯನ್ನು ಮಾನ ಮರ್ಯಾದೆ ಇದ್ದ ಯಾವ ಹೆಣ್ಣಾಗಲಿ, ಗಂಡಾಗಲಿ ತಿರಸ್ಕರಿಸಬೇಕು. ಹೆಣ್ಣು ಅಂದರೆ ಒಂದು ಬಲೆ.... ಆ ಬಲೆಯೊಳಗೆ ಸಿಲುಕಬಾರದು. ಹಾಗೆ ಒಮ್ಮೆ ಸಿಲುಕಿದರೂ ನನ್ನ ತಿಥಿ ಮಾಡುವುದಕ್ಕೆ ಬೇಕಾದ ಮಗನನ್ನ ಕೊಡುವುದಕ್ಕಾಗಿ ಆ ಹೆಣ್ಣನ್ನು ಅನಿವಾರ್ಯವಾಗಿ ಬಳಸಿಕೊಂಡು ಆಮೇಲೆ ವ್ಯಾಮೋಹಕ್ಕೆ ಬೀಳಬಾರದು. ನಾವೇನು ಮಾಡಬೇಕು ಹಾಗಾದರೆ ? ನೋಡಿ, ಈ ಉಪನಿಷತ್ತಿದೆ. ಎಂಥಾ ಅದ್ಭುತವಾದ ಮನುಷ್ಯ ಕಲ್ಪನೆ ಈ ಉಪನಿಷತ್ತು! ಬ್ರಹ್ಮ ಅನ್ನುವ ಕಲ್ಪನೆ ಬಗ್ಗೆ: ತದೇಜತೇ, ತನ್ನೈಜತಿ; ತದ್ದೂರೇ, ತದಂತಿಕೇ; ತದಂತರಸ್ಯ ಸರ್ವಸ್ಯ, ತದು ಸರ್ವಸ್ಯಾಸ್ಯ ಬಾಹ್ಯತಃ ಈ ಬ್ರಹ್ಮ ಅನ್ನೋದು ವಿಶ್ವ. ಆಕಾಶ, ಭೂಮಿ, ನಕ್ಷತ್ರ, ಎಲ್ಲ ಗ್ರಹಗಳೂ; ಭೂಮಿಯಷ್ಟೇ ಅಲ್ಲ. ವಿಶ್ವ – ತದೇಜತಿ ತನ್ನೈಜತಿ. ಅದು ಚಲಿಸುತ್ತದೆ. ಚಲಿಸುವುದಿಲ್ಲ. ಅದು ಹತ್ತಿರ ಇದೆ, ದೂರ ಇದೆ. ಅದು ನನ್ನ ಕೈಗೆ ಸಿಗತ್ತೆ, ಸಿಗೋದಿಲ್ಲ. ಅದೆಲ್ಲದರ ಒಳಗೂ ಇದೆ. ಅದೆಲ್ಲದರ ಹೊರಗೂ ಇದೆ. ನನಗೆ ಕೈಗೆ ಸಿಕ್ತು ಅಂದಕೂಡಲೇ ಅದು ಕೈಯಿಂದ ತಪ್ಪಿಸಿಕೊಂಡು ಹೋಗ್ತದೆ. ನನಗೆ ಈ ವಿಶ್ವದ ನಿಗೂಢಗಳು ಕಲ್ಪನೆಗೆ ಬಂತು ಅಂತ ಅಂದಕೂಡಲೇ ಅದು ಜಾರಿಕೊಂಡು ಹೋಗುತಿರತದೆ.

**ಜಿ. ಕೆ. ಗೋವಿಂದರಾವ್**

ನನಗೆ ಈ ಇಡೀ ವಿಶ್ವದ ಹಿಂದಿನ ಆ ಸೃಷ್ಟಿ ಕಾರ್ಯದ, ಆ ನಾಟಕ, ಆ ಕಾವ್ಯ, ಒಂದೇ ಒಂದು ಕ್ಷಣ ಮಾತ್ರ ಅನುಭವವಾಯಿತು ಅಂದಕೂಡಲೆ ಅದು ಜಾರಿಕೊಂಡು ಹೋಗತ್ತೆ. ಋಷಿಗಳು ತಮ್ಮೆದುರಿಗೆ ಶಿಷ್ಯನನ್ನು ಕೂರಿಸಿಕೊಂಡು ಪಾಠ ಹೇಳುವುದು, ಪಾಠ ಕಲಿಯುವುದು ಅಲ್ಲ. ಗುರು-ಶಿಷ್ಯ ಎದುರುಬದುರು ಕೂತು ಒಟ್ಟಿಗೇ ಕಲಿಯುತ್ತಲೂ, ಅನುಭವ ಪಡೆಯುತ್ತಲೂ ಇದ್ದಾರೆ. ಇಂಥ ಕಲ್ಪನೆಯನ್ನ ಸಾಧ್ಯ ಮಾಡಿಕೊಂಡ ಋಷಿಗಳೇ ಜೊತೆಜೊತೆಗೆ ಇನ್ನೊಂದು ಕೆಲಸ ಮಾಡತಾ ಇದ್ರು. ಇದು ನಮ್ಮ ಧರ್ಮದ ಹಿಂದಿರುವ, ನಾವು ಯಾವುದನ್ನು ಭಾರತೀಯ ಸಂಸ್ಕೃತಿ ಅಂತ ಕರೀತೇವೋ, ಯಾವುದನ್ನು ಭಾರತೀಯ ಧರ್ಮ, ಹಿಂದೂ ಸಂಸ್ಕೃತಿ ಅಂತ ಕರೀತೇವೋ ಅದರ ಹಿಂದಿರುವ ಒಂದು ಅತ್ಯಂತ ವಿಚಿತ್ರವಾದ ದ್ವಂದ್ವ. ಅದು ಏನೆಂದರೆ, ಈ ತರಹದ ಅದ್ಭುತ ಕಲ್ಪನೆಗಳಲ್ಲಿ ತೊಡಗಿದ್ದ ಋಷಿಗಳೇನೇ ಜೊತೆಜೊತೆಗೇನೆ ಬ್ರಾಹ್ಮಣಗಳು ಎಂಬ ಕೃತಿಗಳನ್ನೂ ರಚಿಸಿದರು. ಅದೂ ವೇದಗಳಿದ್ದ ಹಾಗೆ. ಯಾರು ಯಾರಿಗೆ ಏನೇನು ಮಾಡುವ ಕರ್ಮದ ಯೋಗ್ಯತೆ ಇದೆ ಅಥವಾ ಅಯೋಗ್ಯತೆ ಇದೆ ಅಂತ ನಿಷ್ಕರ್ಷಿಸ್ತಾ ಇದ್ರು. ಯಾರಿಗೆ ಯಾಗ ಮಾಡುವ ಹಕ್ಕಿದೆ, ಯಾರಿಗೆ ಯಾಗ ಮಾಡುವ ಹಕ್ಕಿಲ್ಲ, ಈ ಯಾಗವನ್ನ ಮಾಡೋದಕ್ಕೆ ನಿಯಮಗಳೇನು ? ಇದನ್ನೆಲ್ಲಾ ನಿಷ್ಕರ್ಷಿಸ್ತಾ ಇದ್ರು. ನಾನು ಯಾಕೆ ಇದನ್ನ ಹೇಳತಾ ಇದೀನಿ ಅಂದರೆ ಮನಸ್ಸಿಗೆ ಸಂಪೂರ್ಣ ಸ್ವಾತಂತ್ರ್ಯವನ್ನ ನೀಡಿ ಅದು ಯಾವ ಯಾವ ಮಿತಿಗಳನ್ನ, ಯಾವ ಯಾವ ಎತ್ತರಗಳನ್ನ, ಆಳಗಳನ್ನ ಮುಟ್ಟೋದಕ್ಕೆ ಸಾಧ್ಯವೋ ಅದನ್ನು ಮುಟ್ಟಲಿ ಅಂತ ಪ್ರಯತ್ನ ಮಾಡತಿದ್ದ ಮನುಷ್ಯನೇ ಮನುಷ್ಯನನ್ನು ನಿಯಂತ್ರಿಸುವ ಯೋಚನೆಯನ್ನೂ ಏಕಕಾಲದಲ್ಲಿ ಮಾಡತಿದ್ದನಲ್ಲ ಅದು ನಮ್ಮ ಭಾರತೀಯ ಸಂಸ್ಕೃತಿಯ ದ್ವಂದ್ವ. ಇದು ಬಹಳ ದುರದೃಷ್ಟಕರ ಸಂಗತಿ. ಹೀಗೆ ಧರ್ಮ ಅತ್ಯದ್ಭುತವಾದದ್ದನ್ನೂ, ಅತಿ ನೀಚವಾದದ್ದನ್ನೂ ಒಟ್ಟೊಟ್ಟಿಗೆ ಯೋಚನೆ ಮಾಡತಾ ಇದೆ. ಇದನ್ನ ನಮ್ಮ ಮಠಗಳು ಪ್ರಸಾರ ಮಾಡ್ತವೆ. ನಮ್ಮ ಮಠಾಧಿಪತಿಗಳು ಅದನ್ನ ತಮ್ಮ ಜೀವನದ ಪರಮ ಪವಿತ್ರ ಕಾರ್ಯ ಅಂತ ತಿಳಿದಿದ್ದಾರೆ. ಮನುಷ್ಯರನ್ನ ಒಡೆಯೋದು, ಮನುಷ್ಯ ಕುಲವನ್ನ ಒಡಿ, ಗಂಡು ಹೆಣ್ಣನ್ನು ಒಡಿ, ಸಾವು ಬದುಕನ್ನ ಒಡಿ, ಹಗಲು ರಾತ್ರಿಯನ್ನು ಒಡಿ.

ನಾನು ಹೇಳಿದೆ – ಇಡೀ ಬದುಕು ನನಗೆ ಕೊಡಲ್ಪಟ್ಟ, ದಾನವಾಗಿ ನೀಡಲ್ಪಟ್ಟ ಈ ಮೃತ್ಯುವಿನ ವಿರುದ್ಧದ ನಮ್ಮ ಹೋರಾಟ ಎಂದು. ಈ ಬದುಕು ಸಾವಿನ ಏಕಕಾಲದ ನನ್ನ ಒಳಗಿನ ವ್ಯಕ್ತಿತ್ವದಲ್ಲಿ ಬದುಕಿಗೆ ಯಾವತ್ತೂ ಒತ್ತು ಕೊಡತಾ ಹೋಗಬೇಕಾದ್ದು ನನ್ನ ಕರ್ತವ್ಯ. ಆದರೆ ವ್ಯವಸ್ಥಿತ ಧರ್ಮ ಏನು ಮಾಡತ್ತೆ, ನಮ್ಮನ್ನು ಮೃತ್ಯುಮುಖಿಗಳನ್ನಾಗಿ ಮಾಡುತ್ತೆ. ಸತ್ತಮೇಲೆ

ನರಕದ ಬಗ್ಗೆ, ಸ್ವರ್ಗದ ಬಗ್ಗೆ, ಪಾಪದ ಬಗ್ಗೆ, ಪುಣ್ಯದ ಬಗ್ಗೆ, ಶಿಕ್ಷೆಗಳ ಬಗ್ಗೆ ಈ ಭಯಂಕರ ಆತಂಕವನ್ನು ಹುಟ್ಟಿಸಿ, ಪ್ರತಿಯೊಂದು ಕ್ಷಣದಲ್ಲೂ ಆತಂಕದಿಂದಲೇ ಬದುಕೋಹಾಗೆ ಮಾಡುವುದು ಧರ್ಮದ ಒಂದು ಬಹಳ ಸುಂದರ ಮುಖದ ವ್ಯಾಘ್ರಸತ್ಯ; ಬಹಳ ಸುಂದರವಾದ ಮುಖ ಇದೆ. ಪ್ರಶ್ನೆಗಳನ್ನು ಕೇಳುವ, ಪ್ರಶ್ನೆಗಳನ್ನು ಹುಡುಕ ಹೊರಡುವ ಧೈರ್ಯವನ್ನು ನಾಶಮಾಡುವ ಧರ್ಮ, ಧರ್ಮ ಆಗಲಿಕ್ಕಿಲ್ಲ. ಅದಕ್ಕೇ ನಾನು ಹೇಳಿದ್ದು: ಧರ್ಮ ಅನ್ನೋದು ನಾವಿಲ್ಲಿ ಎಷ್ಟು ಜನರಿದ್ದೀವಿ ಅಷ್ಟು ತರಹದ ಧರ್ಮ ಸಾಧ್ಯ. ನಾವು ಜೀವನದ ಮಧ್ಯದಲ್ಲಿ ಧರ್ಮವನ್ನು ಕಲಿಯೋರು. ಅದಕ್ಕೆ ಜೀವ ವಿರೋಧಿ ವ್ಯಕ್ತಿಗಳ ಬಗ್ಗೆ ನಾವು ಮಾತಾಡಿ ಉಪಯೋಗವೂ ಇಲ್ಲ, ನಮಗೆ ಅವು ಅರ್ಥವೂ ಆಗೋದಿಲ್ಲ. ಎಲ್ಲ ಸತ್ಯವನ್ನೂ ನಮ್ಮ ಋಷಿಗಳು ಹೇಳ್ಬಿಟ್ಟಿದ್ದಾರೆ, ನಿನ್ನ ಕರ್ತವ್ಯ ಅದನ್ನು ಅನುಸರಿಸುವುದು ಮಾತ್ರ ಅಂತ ಯಾರು ಹೇಳ್ತಾರೋ ಅವರು ನನ್ನ ವಿರೋಧಿಗಳು. ಈ ಸಂಭ್ರಮಕ್ಕೆ ಪ್ರಕೃತಿ ನನ್ನನ್ನು ಸೃಷ್ಟಿಸ್ತಾನೇ ಇರಲಿಲ್ಲ, ನಾವು ಯಾವುದನ್ನೂ ಸೃಷ್ಟಿಸ್ತಾನೇ ಇರಲಿಲ್ಲ. ಹುಲ್ಲು ಗರಿಕೆಯಿಂದ ಹಿಡಿದು ಮನುಷ್ಯಜೀವಿಯವರೆಗೆ ಪ್ರಕೃತಿಗೆ ಸಮಾನವಾದ ಶ್ರದ್ಧೆ, ಸಮಾನವಾದ ಶಿಸ್ತು, ಸಮಾನವಾದ ನಂಬಿಕೆ ಇರಬೇಕು. ನಿಮ್ಮ ನಮ್ಮಲ್ಲಿ ಕೂಡ ಆ ಉಪನಿಷತ್ ಕಾಲದ ಋಷಿಗಳಲ್ಲಿದ್ದ ಅದೇ ಮನಸ್ಸನ್ನು ನಮ್ಮಲ್ಲಿಟ್ಟಿದ್ದಾನೆ, ಆದರೆ ಅದು ನಮಗೆ ಬೇಡ. ನಮಗೆ ಅದು ಬಹಳ ಕಷ್ಟದ ಒಂದು ಭಾರದ ಒಂದು ದೊಡ್ಡ ವಜೆ. ಅದನ್ನ ನಾನು ಧರ್ಮಗುರುಗಳ ಕಾಲಿನ ಹತ್ತಿರ ಹಾಕಿಬಿಡ್ತೇನೆ.

ನಾವುಗಳು ಈ ದೇಶದಲ್ಲಿ ಅಸ್ಪೃಶ್ಯತೆಯನ್ನ ನಿವಾರಿಸೋದಕ್ಕೆ ಪ್ರಯತ್ನಪಡತಾ ಇದೇವೆ. ಆದರೆ, ನಮ್ಮ ಧರ್ಮ ಮತ್ತು ರಾಜಕೀಯ ಮತ್ತೆ ನಮ್ಮ ಬದುಕಿನ ರೀತಿ ಹೇಗೆ ಆಗಿದೆ ಅಂದರೆ, ಹೊಸ ಅಸ್ಪೃಶ್ಯರ ಒಂದು ಜಾತಿಯನ್ನ ಸೃಷ್ಟಿ ಮಾಡಿದೆ. ಯಾರು ಅಂದರೆ, ಈ ಸ್ವಾಮಿಗಳು. ದೊಡ್ಡ ದೊಡ್ಡ ಹೆಸರು ಬಂದಿರೋ ಅವರನ್ನೆಲ್ಲ ಮುಟ್ಟೋಹಾಗೇ ಇಲ್ಲ, ಮಾತಾಡಬಾರದು ಅವರ ವಿಷಯ! ಸಂವಿಧಾನದಲ್ಲಿ




ಅಸ್ಪೃಶ್ಯತೆ ಅಪರಾಧ. ಉಪನಿಷತ್ತು ಗಾಳಿಯಲ್ಲಿ ತೇಲಿಬಿಟ್ಟ ಆಲೋಚನೆಗಳಿಗೆ ಏನಾಯಿತು? ವಿಜ್ಞಾನಿಗಳ ಮಠ ಇದೆಯಾ? ಯಾವನಾದರೂ ಜಗದ್ಗುರು ಇದಾನಾ? ಗೆಲಿಲಿಯೋ ಜಗದ್ಗುರೂನಾ? ನ್ಯೂಟನ್ ಜಗದ್ಗುರೂನಾ? ಐನ್‌ಸ್ಟೈನ್ ಜಗದ್ಗುರೂನಾ? ವಿಜ್ಞಾನಕ್ಕೆ ಇಲ್ಲದ ಈ ಮಠವೆಂಬ ಪ್ರಕ್ರಿಯೆ ಯಾಕೆ ಧರ್ಮಕ್ಕೆ ಬಂದಿದೆ ಅಂದರೆ ಧರ್ಮ ಸಾವನ್ನ, ಸಾವಿನ ನಂತರದ ವಿಷಯವನ್ನ, ಈ ಬದುಕಿನಲ್ಲಿ ನಮಗೆ ಅರ್ಥವಾಗದ ವಿಷಯಗಳಿಗೆ ವಿವರಣೆ ಹೇಳಿಬಿಡತದೆ. ಹಾಗಿದ್ದರೆ ನನ್ನ ದೃಷ್ಟಿಯಲ್ಲಿ ಧರ್ಮ, ನಿಜವಾದ ಧರ್ಮ ಯಾವುದು? ಧಾರ್ಮಿಕ ಮನೋಭಾವ ಅಂದರೆ ಮನುಷ್ಯನ ಬಗ್ಗೆ ಹುಟ್ಟುವ ಪ್ರೀತಿ, ಧರ್ಮ. ನಾನು ಇನ್ನೊಬ್ಬನ ಜೊತೆಗೆ ಸಮಾನನಾಗಿ ಬದುಕಬೇಕು ಅನ್ನಿಸುವ ಭಾವನೆ ಧರ್ಮ. ನಾನು ಯಾರಿಗೂ ಮೇಲಲ್ಲ, ನನಗಿಂತ ಕಿರಿಯರಿಲ್ಲ ಎಂಬ ಬಸವಣ್ಣನ ಮಾತು ಅತ್ಯುತ್ತಮ ಮಾತು ಅಂತ ಒಪ್ಪಿಕೊಳ್ಳೋದು ಧರ್ಮ. ಇದು ಅನುಭವದಲ್ಲಿ ಬಂದಾಗ ಅದು ಧರ್ಮ. ಕಿವಿಯಲ್ಲಿ ಬಿದ್ದು ಅದು ನೆನಪಿನಲ್ಲಿ ಉಳಿದಾಗ ಅದು ಮಠ. ನೆನಪಿನಲ್ಲಿ ಉಳಿಯುವ, ಮಿದುಳಿನಲ್ಲಿ ಉಳಿಯುವ ಯಾವುದೂ ಕೂಡ ಅನುಭವವಾಗಲಿಕ್ಕೆ

ಸಾಧ್ಯವಾಗೋದಿಲ್ಲ. ಅನುಭವವಾಗಬೇಕಾದರೆ ಅದ್ಭುತ ಚೈತನ್ಯ ಇರಬೇಕು. ಆ ಧೈರ್ಯ ಇರಬೇಕು. ಜ್ಞಾನವಷ್ಟೇ ಸಾಲದು. ಪ್ರಜ್ಞೆಯ ಆಳದಲ್ಲಿ ಹುಟ್ಟಬೇಕು ಈ ಅರಿವು, ಈ ತಿಳಿವು. ಆಗ ಪ್ರತಿ ಕ್ಷಣವೂ ಪ್ರಶಸ್ತವಾಗ್ತದೆ. ಯಾಕೆಂದರೆ ಪ್ರತಿಕ್ಷಣವೂ ನಾನು ಹೋಗ್ತಿದ್ದೇನೆ. ಪ್ರಕೃತಿಯ ಜೊತೆಗೆ ಅಪ್ಪಗೊಳಿಸುತ್ತ ಇರುವ ಸಂಬಂಧಗಳೆಲ್ಲವೂ ಧಾರ್ಮಿಕ ಕ್ರಿಯೆ. ಈ ಪ್ರಕೃತಿಯ ಜೊತೆಗೆ ನಾನು ಈ ಪ್ರಕೃತಿಯಿಂದ ಬೇರ್ಪಟ್ಟು ಬದುಕುವ ರೀತಿ ಇದೆಯಲ್ಲ ಅದು ಅಧಾರ್ಮಿಕ. ಬುದ್ಧ, ದೇವರ ಬಗ್ಗೆ ಒಂದು ಶಬ್ದವನ್ನು ಆಡದೆ ಮನುಷ್ಯನಲ್ಲಿ ಮನುಷ್ಯ ಪ್ರೀತಿಯನ್ನ ಬೆಳೆಸಿದ ಮಹಾನುಭಾವ. ಈ ಬದುಕಿನ ಮೇಲೆ ಒತ್ತುಕೊಟ್ಟು, ಈ ಬದುಕಿನ ನಂತರ ಏನು ಅನ್ನೋದನ್ನ ತಲೆ ಕೆಡಿಸಿಕೋಬೇಡಿ, ಅಂದ. ಈಗ ಬದುಕಿದೀರಲ್ಲ, ಚೆನ್ನಾಗಿ ಬದುಕಿ ಅಂತ ಹೇಳಿದ ಬುದ್ಧ. ಸತ್ತಮೇಲಿನ ಆತಂಕವನ್ನ ಕಿತ್ತುಹಾಕಿಬಿಟ್ಟ ಬುದ್ಧ. ಸತ್ತ ಮೇಲಿನ ಆತಂಕವಿಲ್ಲದಿದ್ದರೆ ಮಠಗಳು ಉಳಿಯೋದಿಲ್ಲ. ಪ್ರಕೃತಿಯ ಜೊತೆಗೆ ನಮ್ಮ ಸಂಬಂಧಗಳನ್ನ ಕಲ್ಪಿಸಿ ಕೊಟ್ಟವರು ಇಂಥವರು. ಅದಕ್ಕಾಗಿ ನಮಗೆ ಅವರು ಅತ್ಯಂತ ಶ್ರೇಷ್ಠ ಧರ್ಮಿಷ್ಠರು. ಆದರೇನಾಯಿತು? ಅವರ ಶಿಷ್ಯರು ಮಠ ಕಟ್ಟಿದರು. ನಾಶ ಮಾಡಿದರು. ಬುದ್ಧ, ಕ್ರೈಸ್ಟ್ ಇವರೆಲ್ಲ ಉತ್ತರಗಳನ್ನಲ್ಲ ಕೊಟ್ಟಿದ್ದು, ಪ್ರಶ್ನೆಗಳನ್ನ ಕೇಳುವ ಧೈರ್ಯವನ್ನ. ಅದು ನಿಜವಾದ ಧರ್ಮ. ಅದು ನಿಜವಾದ ಶಿಕ್ಷಣ. ಯಾವತ್ತೂ ಕೂಡ ವ್ಯವಸ್ಥಿತ ಧರ್ಮವೂ, ರಾಜಕೀಯವೂ ಎರಡೂ ಮನುಷ್ಯನನ್ನ ಶೋಷಿಸಿ ಮಾತ್ರ ಬದುಕಬೇಕು. ಹೀಗೆ ಉಳೀಬೇಕಾದದ್ದರಿಂದ ಎರಡೂ ಕೈಕೈ ಜೋಡಿಸುತ್ತವೆ. ಧರ್ಮದಲ್ಲಿ ಹೇಗೆ ಸಾವಿನ ಬಗ್ಗೆ, ಸಾವಿನ ನಂತರದ ಬಗ್ಗೆ ಭಯವನ್ನು ಹುಟ್ಟಿಸಬೇಕೋ ಹಾಗೆ ರಾಜಕೀಯ ನೀವು ಬದುಕಿರುವಾಗಲೇನೇ ಒಂದು ಆತಂಕದ ಸ್ಥಿತಿಯನ್ನ ಸೃಷ್ಟಿಸ್ತದೆ.

ಇಷ್ಟನ್ನೂ ನಾನು ಪ್ರಜಾಪ್ರಭುತ್ವವನ್ನ ಮನಸ್ಸಿನಲ್ಲಿ ಇಟ್ಟುಕೊಂಡು ಹೇಳತಾ ಇದೇನೆ. ಸರ್ವಾಧಿಕಾರಿ ವ್ಯವಸ್ಥೆಯ ಬಗ್ಗೆ ಮಾತನಾಡಿ ಪ್ರಯೋಜನವಿಲ್ಲ. ಎಲ್ಲಿ ಯೋಚನೆ ಮಾಡೋದಕ್ಕೆ ಸಾಧ್ಯವೋ ಸ್ವಾತಂತ್ರ್ಯ ವಿದೆಯೋ ಆ ಸಂದರ್ಭವನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳತಾ ಇದೀನಿ. ಆದರೆ ರಾಜಕಾರಣದಲ್ಲಿ ಏನ್ಮಾಡ್ತಾರೆ? ರಾಜಕಾರಣವು ಯಾವತ್ತೂ ಕೂಡ ತನ್ನ ವ್ಯವಸ್ಥೆಯನ್ನ ಉಳಿಸಿಕೊಂಡು ಹೋಗಬೇಕಾಗತ್ತೆ. ಅತ್ಯುತ್ತಮ ರಾಜಕಾರಣವು ಕೂಡ ವ್ಯವಸ್ಥೆಯನ್ನ ಉಳಿಸಿಕೊಂಡು ಹೋಗಬೇಕಾದ ಅವಶ್ಯಕತೆ ಇದೆ. ಇದೆಲ್ಲದರ ಪರಿಣಾಮ ಏನಪ್ಪಾ ಅಂದರೆ ನೀವು ಒಂಥರಾ ಅನಾಥರು. ಈ ಮಧ್ಯದಲ್ಲಿ ತಂತ್ರಜ್ಞಾನ, ಕಂಪ್ಯೂಟರ್ ಎಲ್ಲ ಸೇರಿಕೊಂಡು ರಾಜಕೀಯ ಮತ್ತು ಧರ್ಮಕ್ಕೆ ಮತ್ತಷ್ಟು ಒತ್ತಾಸೆಯಾಗಿ ನಿಂತು ಅವರಿಗೆ ಇನ್ನಷ್ಟು ಬಲ ನೀಡಿ ನಮ್ಮನ್ನ ನಿಮ್ಮನ್ನ ಸಂಪೂರ್ಣ ಅರ್ಥಹೀನರನ್ನಾಗಿ ಮಾಡುತ್ತಿವೆ. ಹಾಗಾದರೆ ಆಸೆ ಏನು, ನಾಳಿನ ಭವಿಷ್ಯದ ಬಗ್ಗೆ? ಏನು ಮಾಡಬೇಕು ನಾವು? ಸಾಹಿತ್ಯದಲ್ಲಿ ನಾವು ಓದಿದಾಗ ಅವನು ಧರ್ಮರಾಯ ಇರಬಹುದು; ಮ್ಯಾಕ್‌ಬೆತ್

ಸುದ್ದಿಚಿತ್ರ



ಶಿವಮೊಗ್ಗ ಕರ್ನಾಟಕ ಸಂಘದ ಆಶ್ರಯದಲ್ಲಿ ಕನ್ನಡ ರಾಜ್ಯೋತ್ಸವದ ಅಂಗವಾಗಿ ನವೆಂಬರ್ 16ರಿಂದ 26ರವರೆಗೆ ಪುಸ್ತಕ ಪ್ರದರ್ಶನ ನಡೆಯಿತು. ಚಿತ್ರದಲ್ಲಿ ಜಿಲ್ಲಾ ಹೆಚ್ಚುವರಿ ರಕ್ಷಣಾಧಿಕಾರಿ ಡಾ॥ ಡಿ. ಸಿ. ರಾಜಪ್ಪ, ಈ ಕರ್ನಾಟಕ ಸಂಘದ ಅಧ್ಯಕ್ಷ ಪ್ರೊ॥ ಪಾಂಡುರಂಗ ಉಡುಪ ಹಾಗೂ ಪ್ರಧಾನ ಕಾರ್ಯದರ್ಶಿ ಜಯದೇವಪ್ಪ ಜೈನಕೇರಿ.

ಇರಬಹುದು, ಆಧುನಿಕ ಸಾಹಿತ್ಯದ ನಾಯಕ ಇರಬಹುದು: ಒದುಗನಿಗೆ ಹೌದಯ್ಯ, ಒಂದು ಆತ್ಮವಿಶ್ವಾಸ ಬೆಳೀತದೆ. ಒಂದು ರೀತಿ ಆತ್ಮಗೌರವವನ್ನ ನೀಡತದೆ. ನಾವೆಲ್ಲ ಹುಡುಕತಾ ಇದೀವಿ. ಹುಡುಕಾಟದಲ್ಲಿದ್ದೀವಿ. ಯಾವುದೂ ಅಂತಿಮ ಉತ್ತರಗಳಿಲ್ಲ. ಪ್ರೀತಿಯ ಬಗ್ಗೆ, ದ್ವೇಷದ ಬಗ್ಗೆ, ಅನುರಾಗದ ಬಗ್ಗೆ, ಸಂಬಂಧಗಳ ಬಗ್ಗೆ ಯಾವುದರ ಬಗ್ಗೆನೂ ಕೊನೆ ಮಾತಿಲ್ಲ. ನಾವೆಲ್ಲ ಹುಡುಕ್ತಾ ಇದೀವಿ. ವ್ಯಾಸನ ಕಾಲದಿಂದಲೂ ಇವತ್ತಿನವರೆಗೂ ಹುಡುಕ್ತಾ ಇದೇವೆ. ಈ ಹುಡುಕಾಟದಲ್ಲಿ ತೊಡಗಿಸುವ ಪ್ರಕ್ರಿಯೆಯಲ್ಲಿ ಸಾಹಿತ್ಯ ನಮ್ಮನ್ನು ತೊಡಗಿಸಿರೋದರಿಂದ ಸಾಹಿತ್ಯವೇ ನಮ್ಮ ಆಧುನಿಕ ಉಪನಿಷತ್. ಅನ್ವೇಷಣೆ, ನಿರಂತರ ಹುಡುಕಾಟ. ಈ ತರಹದ ಹುಡುಕಾಟದಲ್ಲಿ ಮನುಷ್ಯ ಸಂಬಂಧ ಅನುಭವಗಳ ಮೂಲಕ, ನಮ್ಮ ಅನುಭವಗಳನ್ನು ಒಪ್ಪಿಕೊಳ್ಳುವ ಧೈರ್ಯವನ್ನು ನೀಡ್ತದೆ ಸಾಹಿತ್ಯ; ನಾಚಿಕೆ ಪಟ್ಟುಕೋಬೇಡ, ಅನುಭವಗಳನ್ನು ಒಪ್ಪಿಕೊ, ಕಸಿವಿಸಿಪಟ್ಟುಕೊಳ್ಳಬೇಡ, ಹೆದರಬೇಡ. ಇಡೀ ಇತಿಹಾಸದಲ್ಲಿ ಕರ್ನಾಟಕಕ್ಕೆ ಮತ್ತು ಭಾರತಕ್ಕೆ ಬಸವಣ್ಣ ಮತ್ತು ಗಾಂಧೀಜಿ ಇಬ್ಬರೇನೇ ರಾಜಕೀಯ ಮತ್ತು ಧರ್ಮ, ರಾಜಕೀಯದಲ್ಲಿ ಧರ್ಮ, ಧರ್ಮದಲ್ಲಿ ರಾಜಕೀಯ ಅನ್ನುವುದನ್ನ ಸಂಪೂರ್ಣವಾಗಿ ಅರ್ಥ ಮಾಡಿಕೊಂಡು ಬದುಕಿದೋರು, ನನಗೆ ಗೊತ್ತಿದ್ದ ಮಟ್ಟಿಗೆ. ಅಂದರೆ ಗಾಂಧೀಜೀ ಹೇಳಿದ್ದು ಯಾವುದನ್ನ ನಾನು ಜೀವನದಲ್ಲಿ ಅತ್ಯುತ್ತಮ ಅಂತ ತಿಳಕೊಂಡಿದೀನಿ ಅದನ್ನ ನಾನು ರಾಜಕೀಯದಲ್ಲೂ ಮಾಡೋಕೆ ಪ್ರಯತ್ನಪಡತೀನಿ, ಅಂತ. ಆದ್ದರಿಂದ ರಾಜಕೀಯವೂ, ಧರ್ಮವೂ ಸೇರ್ಬೇಕು ಆಗಲೇಬೇಕು. ಬಸವಣ್ಣ ಹೇಳಿದ್ದೂ ಅದೇ. ಬಸವಣ್ಣನ ಮೇಲೆ ಒಂದು ಆರೋಪ ಬಂತು. ಕ್ರೈಸ್ತನಿಗಾಗಲಿ, ಬುದ್ಧನಿಗಾಗಲಿ, ಗಾಂಧೀಜಿಗಾಗಲಿ, ಬಸವಣ್ಣನಿಗಾಗಲಿ, ಕಬೀರನಿಗಾಗಲಿ, ತುಕಾರಾಂಗಾಗಲಿ, ಎಲ್ಲರಿಗೂ ಕೂಡ ಜೀವನದಲ್ಲಿ ಕೊನೇಗೆ ಒಂದು ಕ್ರಿಯಾಶೀಲವಾದ ವಿಷಾದ ಆವರಿಸುತ್ತದೆ. ನಿಜವಾದ ಸಾಹಿತ್ಯ ನಾಳಿನ ನಂಬಿಕೆಯನ್ನು ಹುಟ್ಟಿಸ್ತದೆ. ನಾನಿಲ್ಲದಿರುವ ನಾಳೆ ಇದೆ. ಆದ್ದರಿಂದ ನಾನು ನಾಳೆಗೂ ಬದ್ಧ. ನನ್ನ ಮಕ್ಕಳ ಜೀವನದಲ್ಲಿ ನಾಳೆ ನಾನು ಇಲ್ಲದಿದ್ದಾಗ ಅವರ ಬದುಕಿಗೆ ನಾನು ಬದ್ಧ.

ನಮ್ಮ ಹೋಲಿಕೆಗಳು ಅನಂತದೊಡನೆ, ಅಮರವಾದದ್ದರೊಡನೆ ಇರಬೇಕು. ಒಳಗಿನ ಆತ್ಮಶಾಂತಿ ಅನ್ನೋದು ಪ್ರಕೃತಿಧರ್ಮದ ರೀತಿ ಇರಬೇಕು. ಸಾಹಿತ್ಯ ಅದನ್ನ ಅರಸ್ತಾ ಹೋಗ್ತದೆ. ಒಬ್ಬ ಸಾಹಿತಿ, ವ್ಯಾಸ, ಕೊನೆ ಮಾತು ಹೇಳಿಬಿಟ್ಟಿದ್ದರೆ ಕುಮಾರವ್ಯಾಸ ಬರೀಬೇಕಾದ ಅವಶ್ಯಕತೆ ಇರಲಿಲ್ಲ; ಕುಮಾರವ್ಯಾಸ ಬರೀ ಭಾರತದ ಕತೆ ಅಲ್ಲ ಹೇಳಿರೋದು. ಭಾಷೆಯನ್ನ ಬೆಳಸಿದಾನೆ. ಭಾಷೆಗೆ ಆಯಾಮಗಳನ್ನ ಕೊಟ್ಟಿದಾನೆ. ಅಂದರೆ ಸಾಹಿತ್ಯ ಇನ್ನೊಂದು ದೊಡ್ಡ ಕೆಲಸ ಏನ್ಮಾಡ್ತದೆ ಅಂದರೆ, ನಾವು ಬಳಸುವ ಭಾಷೆಗೆ ಮತ್ತೆ ಜೀವವನ್ನ ಕೊಡತದೆ. ಕೇಳುವ ನಿಮಗೆ ಆ ಭಾಷೆಯಲ್ಲಿ ಆಕರ್ಷಣೆ ಇದ್ದಾಗ ನಮಗೆ ನಾಳಿನ ಬಗ್ಗೆ ನಂಬಿಕೆ ಬರತದೆ.

ಭಾಷೆ ಶಾಶ್ವತ. ಬಳಸುವ ನಾವು ನಶ್ವರ. ಹೀಗೆ ಶಾಶ್ವತವಾದದ್ದಕ್ಕೆ ಮಾತ್ರ ಯಾವಾಗ ನಾವು ಬದ್ಧರಾಗತಾ ಹೋಗತೀವಿ ಅಲ್ಲೀವರೆಗೆ ನಮಗೆ ಜೀವದ ಬಗ್ಗೆ ಸಾವಿನ ಹೆದರಿಕೆ ಇಲ್ಲದೆ ಬದುಕಿನ ಪ್ರೀತಿ ಸಾಧ್ಯವಾಗ್ತದೆ. ಈ ಬದುಕಿನ ಪ್ರೀತಿ ಬೆಳಸುವ ಸಾಹಿತ್ಯ ಅದಕ್ಕಾಗಿ ನಮಗೆ ಅತ್ಯಂತ ಶ್ರೇಷ್ಠವಾದದ್ದು. ದೇವರಿಂದ ಆರಂಭವಾಗುವುದಲ್ಲ ಸಾಹಿತ್ಯ. ದೇವರಲ್ಲಿ ಮುಕ್ತಾಯವಾಗುವುದು. ನಿಮ್ಮ ಅನುಭವಗಳೆಲ್ಲ ಈ ದೇವರು ಅನ್ನುವ ಕಲ್ಪನೆ. ಪ್ರತೀತಿ ಅನ್ನುವ ಕಲ್ಪನೆ. ವಿಶ್ವಸೃಷ್ಟಿ ಅನ್ನುವ ಕಲ್ಪನೆ. ನಿತ್ಯ ನಾಟಕದ ಕಲ್ಪನೆ. ಅದು ಪ್ರಾಯಶಃ ನಿಮ್ಮ ಸಾಹಿತ್ಯದ ಪ್ರಕ್ರಿಯೆಯಲ್ಲಿ, ನಿಮಗೆ ಅರ್ಥವಾಗಬೇಕು, ಅನುಭವವಾಗಬೇಕು. ನಾನು ದೇವರ ಮಹಿಮೆಯನ್ನೇ ಕುರಿತು ಕೊಂಡಾಡತೇನೆ ಅಂತ ಆರಂಭ ಮಾಡಿದರೆ ಯಾರಿಗೇನೂ ಕುತೂಹಲ ಬರಲ್ಲ. ಕುಮಾರವ್ಯಾಸ ಏನು ಹೇಳತಾನೆ? ಕೃಷ್ಣನ ಮಹಿಮೆಯನ್ನ ಕುರಿತು ನಾನು ಹಾಡತಾ ಇದೀನಿ ಅಂತಾನೆ. ಕೃಷ್ಣನ ಮಹಿಮೆಯನ್ನು ಕುರಿತು ಹಾಡತೀನಿ ಅನ್ನೋದು ನಿಜವಾದರೂ ಅವನು ಮಾಡ್ತಾ ಇರೋ ಕೆಲಸ ಇನ್ನೂ ಅದ್ಭುತವಾದದ್ದು. ಅದಕ್ಕೇ ಅದು ನಿರಂತರವಾಗಿ, ಅಮರವಾಗಿ ಉಳಿದಿರೋದು. ದೊಡ್ಡ ಕವಿಗಳು, ದೊಡ್ಡ ಸಾಹಿತ್ಯ ಉಳಿಯೋದು ಹಾಗೆ. ಆದ್ದರಿಂದ ಸಾಹಿತ್ಯ ಅನ್ನೋದು ನಮ್ಮ ಪ್ರಜಾಪ್ರಭುತ್ವ ಯುಗದ ಹೊಸ ಧರ್ಮದ ಧರ್ಮಗ್ರಂಥಗಳು.

*(ಭದ್ರಾವತಿಯಲ್ಲಿ ನೀಡಿದ ಒಂದು ಉಪನ್ಯಾಸದ ಸಂಕ್ಷಿಪ್ತ ರೂಪ)*

**ಜಿ. ಕೆ. ಗೋವಿಂದರಾವ್**
ನಂ. ೧೬೧, ೧ನೇ ಮಹಡಿ, ೩೬ನೇ 'ಎ' ಕ್ರಾಸ್, ೭ನೇ ಬ್ಲಾಕ್ ಜಯನಗರ, ಬೆಂಗಳೂರು - ೫೬೦ ೦೮೨

# ಶೂನ್ಯ ಸಂಪನ್ನರು

ಗಮ್ಮನಾಡುತ ಗುಮ್ಮುವ ಗಾಳಿ
ಸರಸರ ಭರಭರ ಭೋರೆನ್ನುತ
ಮಳ್ಳಗಾಳಿ ತಿಳ್ಳಿಯಾಡಿ
ಗುಡ್ಡ ಕಣಿವೆ ಕಾಡು ನಾಡಿನ ಹಾಡು
ತರಂಗ ತಂತ್ರಜ್ಞಾನ ಜೀವೋತ್ಕರ್ಷ
ಯಮುನೆಯ ಯುಗಳಗೀತೆಯ ಪ್ರಸರ
ಬೆಟ್ಟದ ಮೇಲಿಂದ ಸುವಾರ್ತೆಯನ್ನು
ಜಗಕೆ ಸಾರಿದವನು

ಸೆರಗು ಹಾರಿಸಿ ಬೆರಗು ತೋರುವ ತುಂಟ
ನಾಭಿಮೂಲದ ಶಬ್ದ ನಿಶ್ಶಬ್ದ ವಾಹಕ
ಜೀವ ಸಖನು ಅಪಾನ ಮುಖನು
ಆಮ್ಲಜನಕ ಸಾರಜನಕ ಸಂಯೋಜಿತ ಜೀವಾತ್ಮನು

ಗಿರಣಿಯ ಕಲುಷಿತ ಉಸಿರು
ಇಂಧನದ ಕಸುರು ಬೆರೆತು
ಉಸಿರು ಕಟ್ಟಿಸದಿರಲು ಕಂಡೀಶನ್ಡ್ ಕೋಣೆ
ಸಾಮಾನ್ಯರಿಗೆ ಪಾವನ ಪವನ
ಮಲಯ ಮಾರುತ ಜಲನಿಧಿಯ ಸಂಜಾತ
ದಾವಾನಲ ಬಡಬಾಗ್ನಿಗೆ ಜಂಝಾವಾತವಾದ ಸಖನೇ

ಕಳ್ಳ ನೆಡಿಗೆಯ ಖಳನು
ಕತ್ತಲೆಯ ಕಿರುಕೋಣೆಯಲ್ಲಿ
ಬೆತ್ತಲೆಯ ಬಾಹು ಬಂಧನದಲ್ಲಿ ಜಲ್ಪಿಸುವೆ
ಹಾಯಿಪಟ ದೋಣಿಯನ್ನು ದಿಕ್ಕು ತಪ್ಪಿಸುವೆ
ಉಸಿರಾಗಿ ಒಡಹುಟ್ಟಿ ಒಡನಾಡಿ
ಜಂಜಾಟವಾಡಿಸಿ ಒಮ್ಮೆಗೆ ನಿಂತು ನಮ್ಮಾಟ ಮುಗಿಸುವೆ

ಲಂಕೆಗೆ ಹಾರಿ ಹನುಮನಾಗಿ ಭೀಮ ಬಲನಾಗಿ
ತ್ರೇತ ದ್ವಾಪರದ ಸಂಧಿಯಲ್ಲಿ
ಸೌಗಂಧಿಕದ ಗಂಧವನ್ನು ಗಡಿದಾಟಿಸಿದವನು
ಯಕ್ಷನ ವಿರಹ ಸಂದೇಶವನ್ನು ಅಲಕಾವತಿಗೊಯ್ದ ಸಖನೇ

ಜಳ್ಳನ್ನು ತೂರಿಬಿಡುವೆ
ನೀನು ಬೀಸುವ ದಿಕ್ಕಿನಲ್ಲಿ ತೂರಿಕೊಳ್ಳುವ
ಸಮಯ ಸಾಧಕರಿಗೆ ಶುಕ್ರ ದೆಶೆ
ಬದುಕಿನ ವರಸೆ
ಕೆಲವರು ಎದುರಾಗುವರು
ಶೂನ್ಯ ಸಂಪನ್ನರು



**ಸತ್ಯನಾರಾಯಣರಾವ್ ಅಣತಿ**
'ರಚನ', ೨ನೇ ತಿರುವು, ಹೊಸಮನೆ ಚರ್ಚ್ ಪಕ್ಕ
ಶರಾವತಿನಗರ, ಶಿವಮೊಗ್ಗ - ೫೭೭ ೨೦೧






**ಅರೆಖಾಸಗಿ** (ಅಂಕಣ ಸಾಹಿತ್ಯ)

*ವಿಷ್ಣು ನಾಯ್ಕ*

**ಪುಟ : ೨೧೬** **ಬೆಲೆ : ರೂ. ೧೦೦**

**ಶ್ರೀ ರಾಘವೇಂದ್ರ ಪ್ರಕಾಶನ,** ಅಂಬಾರಕೊಡ್ಲ - ಅಂಕೋಲಾ - ೫೮೧ ೩೧೪

'ಸ್ನೇಹಪರ ನಿಲುವು ಮತ್ತು ಕ್ರಿಯಾಶೀಲ ವ್ಯಕ್ತಿತ್ವ'ದಿಂದ ಹಿರಿಯ-ಕಿರಿಯ ಮಿತ್ರವೃಂದವನ್ನು ಸಂಪಾದಿಸಿದ ಅಂಬಾರ ಕೊಡ್ಲದ ಶ್ರೀ ವಿಷ್ಣು ನಾಯ್ಕರ ಅಂಕಣ ಬರಹಗಳು. ಸ್ವಂತ ಬದುಕಲ್ಲಿ ಸಹಜವಾಗಿ ನಡೆದುಹೋದ ಘಟನೆಗಳಿಂದ ಹೆಕ್ಕಿ ತೆಗೆದಿರುವ ಅಸಂಖ್ಯಾತ ನೆನಪುಗಳ ಗೊಂಚಲುಗಳು. ತಾವೆಷ್ಟೇ ಮೇಲಕ್ಕೇರಿದರೂ ತಲುಪಿದ ಎತ್ತರದ ತಳಹದಿಯಾದ ಮೊದಲ ಮೆಟ್ಟಲನ್ನು ಹಿಂತಿರುಗಿ ನೋಡುವುದು ಕೃತಜ್ಞತೆ ಮತ್ತು ಸಜ್ಜನಿಕೆಯ ಲಕ್ಷಣ. ಬಾಳಿನ ವಿಲಕ್ಷಣ ಘಟನೆಗಳನ್ನು ಮೆಲುಕು ಹಾಕುವುದೂ ಒಂದು ರೋಚಕ ಅನುಭವ. ಇದು ಒಬ್ಬ ವ್ಯಕ್ತಿ ತನ್ನ ಬಗ್ಗೆ ಮಾತ್ರ ಹೇಳಿಕೊಳ್ಳುವಂತೆ ಮೇಲ್ನೋಟಕ್ಕೆ ಕಂಡರೂ ಈ ಅನುಭವಗಳು ಅವರಿಗಾಗಿದ್ದು ಸಾರ್ವಜನಿಕ ಸಾಮಾಜಿಕ ವ್ಯವಸ್ಥೆಗಳಿಂದಲೇ ಎಂಬುದನ್ನು ಗಮನಿಸಬೇಕು. 'ಸಕಾಲಿಕ' ಸಾಪ್ತಾಹಿಕದಲ್ಲಿ ಬಂದ ಬರಹಗಳ ಪುಸ್ತಕ ರೂಪದ ಸಂಗ್ರಹವಿದು.



**ಮ್ಯಾಸ ಮಂಡಲ** (ಸಂಶೋಧನ ಲೇಖನಗಳು)

*ಡಾ|| ಮೀರಾಸಾಬಿಹಳ್ಳಿ ಶಿವಣ್ಣ*

**ಪುಟ : ೧೫೨** **ಬೆಲೆ : ರೂ. ೮೦**

**ಕನ್ನಡ ಪುಸ್ತಕ ಪ್ರಾಧಿಕಾರ,** ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಒಂದು ಬುಡಕಟ್ಟು ಜನಾಂಗದ ಸಂಸ್ಕೃತಿಯನ್ನು ತಿಳಿಸುವ ಸಂಶೋಧನ ಲೇಖನಗಳು. ಮೂಲದಲ್ಲಿ ಮ್ಯಾಸಬೇಡರು ಬೇಟೆ ಸಂಸ್ಕೃತಿಯವರಾದರೂ ಅವರ ಆಚರಣೆಗಳು ಮತ್ತು ಜೀವನಕ್ಕೆ ಸಂಬಂಧಿಸಿದ ದಾಖಲೆಗಳು ಕಾಡುಗೊಲ್ಲರ ಸಂಸ್ಕೃತಿಗೆ ತುಂಬ ಹತ್ತಿರವಿದ್ದುವು. ಕ್ಷೇತ್ರ ಕಾರ್ಯಗಳ ಮೂಲಕ ಸಾಕಷ್ಟು ಮಾಹಿತಿಯನ್ನು ಕಲೆಹಾಕಿದ ಲೇಖಕರು ಮ್ಯಾಸಬೇಡರನ್ನು ಪಶುಪಾಲನಾ ವೃತ್ತಿಯಲ್ಲಿ ಪಳಗಿದವರೆಂದು ಗುರುತಿಸಿದ್ದಾರೆ. ಪ್ರಾಚೀನ ಬುಡಕಟ್ಟು ಜನಾಂಗಗಳು ಕ್ರಮೇಣ ವೃತ್ತಿ ಉಪವೃತ್ತಿಗಳೊಂದಿಗೆ ಇತರ ಪಂಗಡಗಳ ಜೊತೆ ಬೆರೆಯುತ್ತಾ ಹೊಸ ಹೊಸ ಸಂಸ್ಕೃತಿಗಳನ್ನು ನಿರ್ಮಾಣ ಮಾಡುತ್ತಾ ಸಾಗುತ್ತವೆ. ಹಾಗೆ ನೋಡಿದರೆ ಬೇಟೆಯೆಂಬುದು ಒಂದು ಮೂಲ ಮಾನವನ ಹೊಟ್ಟೆಪಾಡಿನ ವೃತ್ತಿಯೇ ಆಗಿತ್ತು. ನಮ್ಮ ನೆಲದ ಪದರು ಪದರುಗಳಲ್ಲೂ ಇಳಿದ ಜನಪದೀಯ ಬೇರುಗಳನ್ನು ಪರಿಚಯಿಸುತ್ತಿರುವ ಲೇಖಕರು ಅಭಿನಂದನಾರ್ಹರು.

**ಎಲ್ಲಿ ನವಿಲು ಹೇಳಿರೇ** (ಕವಿತೆಗಳು)

*ಚಂದ್ರಶೇಖರ ತಾಳ್ಯ*

**ಪುಟ : ೧೦೮** **ಬೆಲೆ : ರೂ. ೬೦**

**ಆನಂದಕಂದ ಗ್ರಂಥಮಾಲೆ,** 'ಬಲರಾಮ', ಟೀಚರ್ಸ್ ಕಾಲನಿ, ಮಲ್ಲಾಡಿಹಳ್ಳಿ - ೫೭೭ ೫೩೧



ಕಾವ್ಯಾಸಕ್ತರಿಗೂ ಸಹೃದಯರಿಗೂ ಮೆಚ್ಚಿಗೆಯಾಗಬಲ್ಲ ತಾಳ್ಯರ ಕವಿತೆಗಳು ಪ್ರಾರಂಭವಾಗುವುದು ಪಿಸುಮಾತು ಗಳಲ್ಲಿ. ಆದರೆ ಕಿವಿಯಿದ್ದೂ ಕೇಳಿಸದ, ಕಣ್ಣಿದ್ದೂ ಕಾಣಿಸದ ಕೆಲಜನರಿಗಾಗಿ ಅವು ದನಿಯೆತ್ತರಿಸಿ ಕೂಗಿಕೊಂಡಿದ್ದೂ ಇದೆ. ಮನುಷ್ಯ ತನಗೆ ಅವಶ್ಯವಾದ ಏನನ್ನೋ ಕಳೆದುಕೊಂಡು ಮತ್ತೆ ಹುಡುಕಾಡುತ್ತ ತನಗೆ ತಾನೇ ಅಪರಿಚಿತನಾಗುವ ಇಂದಿನ ಸಂದರ್ಭಕ್ಕೆ ತಕ್ಕಂತೆ ಕವಿತೆಗಳು ರೂಪುಗೊಂಡಿವೆ. ಸಂಕಲನದ ಎಲ್ಲ ಕವಿತೆಗಳೂ ವಿವಿಧ ನೆಲೆಗಳಿಂದ ಹೊರಟಂತೆ ಕಂಡರೂ ಕೊನೆಗೆ ಒಂದೇ ಆಶಯದ ನೆರಳಿನಡಿಯಲ್ಲಿ ಎಲ್ಲವೂ ಕೂಡಿಕೊಳ್ಳುತ್ತವೆ. ಇಲ್ಲಿನ ಕೆಲವು ಕವಿತೆಗಳು ಪ್ರಸಿದ್ಧ ಎಂ.ಎಸ್.ಐ.ಎಲ್. ಸಂಸ್ಥೆಯಿಂದ ಕ್ಯಾಸೆಟ್‌ಗೆ ಅಳವಡಿಸಲಾಗಿವೆ. ಪ್ರಸಿದ್ಧ ಗಾಯಕರು ಹಾಡಿದ್ದು ಆಕಾಶವಾಣಿ - ದೂರದರ್ಶನಗಳು ಸಹ ಪ್ರಸಾರ ಮಾಡಿವೆ. ನಾಡಿನ ಪ್ರಸಿದ್ಧ ಪತ್ರಿಕೆಗಳಲ್ಲೂ ಬೆಳಕು ಕಂಡಿವೆ.

**ಕಪ್ಪು ಹಕ್ಕಿಯ ಬೆಳಕಿನ ಹಾಡು** (ಆತ್ಮ ಕಥನಗಳು)

*ಎಂ. ಆರ್. ಕಮಲ*

**ಪುಟ : ೯೨** **ಬೆಲೆ : ರೂ. ೭೫**

**ಕಥನ ಪ್ರಕಾಶನ,** ನಂ. ೪೦೫, 'ಉಮಾಶಂಕರ', ಮೊದಲನೇ 'ಎನ್' ಬ್ಲಾಕ್, ೯ನೇ 'ಜ' ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು - ೫೬೦ ೦೧೦

ಆಫ್ರಿಕಾದ ಸುಂದರಿಗೆ ವಿಶ್ವಸುಂದರಿಯ ಕಿರೀಟ ತೊಡಿಸಿದ್ದು ತೀರ ಇತ್ತೀಚಿನ ಮಾತು! ಇಂಥ ಸೌಂದರ್ಯದ ಹಿಂದೆ ಈ ಜನಾಂಗ ಅನುಭವಿಸಿ ಎದುರಿಸಿದ ಗುಲಾಮಿ ಪದ್ಧತಿಯ ನರಕ ಸದೃಶ ಬಾಳಿನ ಕುರೂಪವೊಂದು ಚರಿತ್ರೆಯ ಪುಟಗಳಲ್ಲಿ ದಾಖಲಾಗಿದೆ. ತೀರ ಹಿಂದೆಯೇನೂ ಅಲ್ಲ; ೧೭-೧೮ನೇ ಶತಮಾನದಲ್ಲಿ ಐರೋಪ್ಯ ವರ್ತಕರು ಬಹಿರಂಗ ಹರಾಜಿನಲ್ಲಿ ಗುಲಾಮರನ್ನು ಖರೀದಿಸುತ್ತಿದ್ದರು. ಕತ್ತು ಕುಣಿಕೆ ಹಾಕಿ ಬಂಧಿಸಿ ಕಂಪೆನಿಯ ಮುದ್ರೆಯೊತ್ತಿ ಹೆಚ್ಚಿನ ಬೆಲೆಗೆ ಮಾರಾಟಮಾಡುತ್ತಿದ್ದರು. ಅಮೆರಿಕದಲ್ಲಿದು ಬೃಹತ್ ಸಾಮಾಜಿಕ ಸಮಸ್ಯೆಯಾಗಿ ಮಾರ್ಪಟ್ಟು ಕಾನೂನಿನ ಮೂಲಕ ರದ್ದುಪಡಿಸಲಾಯಿತು. ಇದೋ ಇಲ್ಲಿವೆ, ಗುಲಾಮಗಿರಿಯ ವಿರುದ್ಧ ಸೆಣೆಸಿ ವಿದಾಯ ಹೇಳಿದ, ಹಕ್ಕಿಗಳಂತೆ ಸ್ವಚ್ಛಂದವಾಗಿ ಹಾರಿಬಂದ ಆಫ್ರೋ - ಅಮೆರಿಕನ್ ಮಹಿಳೆಯರ ನೋವು ತುಂಬಿದ ಸಾಹಸಮಯ ಆತ್ಮ ಕಥಾನಕಗಳು...



**ತಲೆಮಾರು** (ಕಾದಂಬರಿ)

*ಆರ್. ವಿ. ಭಂಡಾರಿ*

**ಪುಟ : ೧೭೬** **ಬೆಲೆ : ರೂ. ೮೦**

**ಸಾಹಿತ್ಯ ನಂದನ,** ನಂ. ೯, ನಾಲ್ಕನೇ 'ಇ' ವಿಭಾಗ, ೧೦ನೇ 'ಎ' ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು - ೧೦

ಪ್ರಗತಿ ಮತ್ತು ಅವನತಿ ಮಧ್ಯೆ ಇರುವ ಸೂಕ್ಷ್ಮ ರೇಖೆಯೊಂದನ್ನು ಗುರುತಿಸಬಹುದಾದ ಒಂದು ತಲೆಮಾರಿನ ಜನಜೀವನದೊಂದಿಗೆ ಹೆಣೆದುಕೊಂಡ ಪ್ರಾದೇಶಿಕ ಕಾದಂಬರಿ. ಸುಮಾರು ಐವತ್ತು ವರ್ಷಗಳಿಂದೀಚೆಗಿನ, ಪ್ರಗತಿಯ ಹಾದಿಯಲ್ಲಿರುವ ಒಂದು ಸಣ್ಣ ಹಳ್ಳಿಯ ಚಿತ್ರಣ. ಜೊತೆಗೆ ಬದಲಾವಣೆ ಬಯಸುವ ಯುವಜನಾಂಗದ ಅಭಿಲಾಷೆಯನ್ನು ಕೃತಿ ತೆರೆದಿಡುತ್ತದೆ. ದೈನಂದಿನ ಕೆಲಸಕಾರ್ಯಗಳ ಜೊತೆಯಲ್ಲೇ ಒಂದು ಸಮುದಾಯದ ಆಚಾರ ವಿಚಾರವನ್ನೂ ಪರಿಚಯಿಸುತ್ತ ಕ್ರಾಂತಿಕಾರಿ ನಿಲುವಿನ ಕಡೆಗೆ ಕಾದಂಬರಿ ಹೊರಳುತ್ತದೆ. ಸಮಾಜವಾದಿ ಪ್ರಗತಿಪರ ದಾರಿಯಲ್ಲಿ ಕ್ರಮಿಸುವಾಗ ಎದುರಾಗುವ ಐಷಾರಾಮಿ-ಆಧುನಿಕತೆಯ ಹೊಡೆತಕ್ಕೆ ತತ್ತರಿಸುವ ಸಂದರ್ಭಗಳು ಇಂದು ಯುವಜನತೆಗೆ ಶಾಪವಾಗಿವೆ. ಎಲ್ಲ ಪಾತ್ರಗಳೂ ಮಾತನಾಡುವ ವಿಶೇಷ ಧಾಟಿಯಿಂದ ಸಾವಿದನ್ನು ಇಲ್ಲಿ ಊಹಿಸಬಹುದು.




**ಅಗ್ನಿರಾಗ** (ಕವನ ಸಂಕಲನ)

*ಕೇಶವಶರ್ಮ ಕೆ.*

**ಪುಟ : ೫೬** **ಬೆಲೆ : ರೂ. ೩೦**

**ಬಂಡಾಯ ಪ್ರಕಾಶನ,** ಅರೇ ಅಂಗಡಿ, ಹೊನ್ನಾವರ, ಉತ್ತರ ಕನ್ನಡ - ೫೮೧ ೪೩೦

ಅತೃಪ್ತ ಮನಸ್ಸಿನ ಅನೇಕ ಅನಿಸಿಕೆಗಳನ್ನು ಧ್ವನಿಸುವ ಅಗ್ನಿರಾಗದ ಕವಿತೆಗಳು ಹಿಂಸೆಯ ನಾನಾ ರೂಪಗಳನ್ನು ಪರಿಚಯಿಸುತ್ತವೆ. ಪಂಚಭೂತಗಳಲ್ಲೊಂದಾದ ಅಗ್ನಿ ಇಂದಿನ ದಗ್ಧ ಮನಸ್ಸುಗಳಿಗೆ ರೂಪಕವಾಗಿ ಕಾಣುತ್ತದೆ. ಇಂದು ಬಂದೂಕಿನ ಬಾಯಿ, ಕೋಪೋದ್ರಿಕ್ತ ಕಣ್ಣು, ಹಸಿದವರ ಒಡಲು, ಎಲ್ಲೆಂದರಲ್ಲಿ ಅಗ್ನಿಯು ರೌದ್ರರಾಗ ಪ್ರಜ್ವಲಿಸುತ್ತದೆ. ಪರಿಣಾಮ ವಿನಾಶದತ್ತ ಹೊರಳುವುದೇ ಆಗಿದೆ. ಜ್ವಾಲೆಯಿಂದ ಹಣತೆಯನ್ನು ಹಚ್ಚಿ ಬೆಳಕು ಮಾತ್ರ ಪಡೆದು ತೃಪ್ತನಾಗದ ಮನುಷ್ಯನ ಅವಿವೇಕಕ್ಕಾಗಿ ಕವಿತೆಗಳು ಮರುಗುತ್ತವೆ. ಇತಿಹಾಸ ಪುರಾಣಗಳಲ್ಲಿ ಹೆಜ್ಜೆಹೆಜ್ಜೆಗೂ ಇರುವ ಇಂಥ ಅತಿರೇಕಗಳ ಉದಾಹರಣೆ ನೀಡುತ್ತ ಹಿಂಸೆಯಿಂದ ಮುಕ್ತವಾಗಲು ಕವಿ ಮನಸ್ಸು ಹಂಬಲಿಸುತ್ತದೆ. ಒಂದು ಸುಂದರ ಸಾಲು ಹೀಗಿದೆ : "ಅಗ್ನಿಯೇ – ಗುಡಿಸಲಿನಲ್ಲಿ ಮುದುಕಿ ಒಲೆ ಹಚ್ಚಿದ್ದಾಳೆ, ಗಂಜಿ ಬೇಯಿಸಿಕೊಡು." ಸಾಕಲ್ಲವೇ ?

**- ಇಂದಿರಾಕುಮಾರಿ**

**ಭಾ**ರತದ ಸಾಮಾಜಿಕ ಚರಿತ್ರೆಯಲ್ಲಿ ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧ ತ್ಯಂತ ಸಂಕೀರ್ಣವಾದ ಕಾಲಘಟ್ಟವಾಗಿದೆ. ವಿಶೇಷವಾಗಿ ಈ ಸಂದರ್ಭದಲ್ಲಿ ಜಾಗೃತಿ'ಯೆನ್ನುವ ನೆಪದಲ್ಲಿ ಮೂರು ಮುಖ್ಯ ಸಂಗತಿಗಳು ಅಂದಿನ ವಿಚಾರ ಂಥನದ ಪ್ರಮುಖ ಭಾಗವಾಗಿ ಸಮಾಜದ ಸಂಚಲನೆಯಲ್ಲಿ ಪ್ರಧಾನ ಪಾತ್ರ ಹಿಸಿದವು. ಅವೆಂದರೆ ರಾಷ್ಟ್ರೀಯತೆಯ ಉದಯ, ಹಿಂದೂ ಧರ್ಮ ಹಾಗೂ ಸ್ಕೃತಿಯ ಪುನರುತ್ಥಾನದ ಪ್ರಯತ್ನಗಳು, ಸಾಮಾಜಿಕ ಜೀವನದಲ್ಲಿ ಸಾಂಪ್ರದಾಯಿಕವಾಗಿ ಡೆದುಬಂದ ಕುರುಡು ಕಟ್ಟಳೆಗಳನ್ನು ಇಲ್ಲವಾಗಿಸಿ ಅದನ್ನು ನಿಜವಾದ ಅರ್ಥದಲ್ಲಿ ಧುನಿಕವಾಗಿಸಬೇಕೆಂಬ ಮನೋವೃತ್ತಿಯ ಬೆಳವಣಿಗೆ. ಈ ವಿಚಾರಗಳನ್ನು ಅಂದಿನ ೀಖಕರೂ ಸೃಜನಶೀಲ ನೆಲೆಯಲ್ಲಿ ಗ್ರಹಿಸಿದ ರೀತಿ ಸ್ವಾರಸ್ಯಕರವಾಗಿದೆ.

ಕನ್ನಡದ ಪ್ರಥಮ ಸಾಮಾಜಿಕ ಕಾದಂಬರಿಯೆಂದು ಗುರುತಿಸಲ್ಪಡುವ ಶ್ರೀ ಗುಲ್ವಾಡಿ ಂಕಟರಾಯರು ಬರೆದ 'ಇಂದಿರಾಬಾಯಿ' (೧೮೯೯) ಕಾದಂಬರಿಯಲ್ಲಿ ತಾರಾದಲ್ಲಿರುವ ಪಂಡಿತೆ ಆನಂದಿಬಾಯಿ ಸ್ಥಾಪಿಸಿದ ವಿಧವಾ ಶಿಕ್ಷಣದ ಸಂಸ್ಥೆಯ ಬಗೆಗಿನ ಸ್ತಾಪ ಬರುತ್ತದೆ. ಈ ಕಾದಂಬರಿಯ ಮುಖ್ಯ ಪಾತ್ರವಾದ ಇಂದಿರಾಬಾಯಿ ಲವಿಧವೆಯಾದವಳು ಮತ್ತು ಈ ಸಂಸ್ಥೆಯಲ್ಲಿಯೇ ಶಿಕ್ಷಣ ಪಡೆಯುತ್ತಾಳೆ ಮತ್ತು ರುಮದುವೆಯಾಗುತ್ತಾಳೆ. ಸ್ತ್ರೀ ಶಿಕ್ಷಣದ ಸಾಧ್ಯತೆ ಮತ್ತು ಸಫಲತೆಯ ಪರಿಣಾಮವಾಗಿ ಕಾದಂಬರಿಯ ಇಂದಿರಾ ಪಾತ್ರ ಮೂಡಿಬಂದಿದೆ. 'ಇಂದಿರಾಬಾಯಿ' ಕಾದಂಬರಿಗೆ ಸದ್ಧರ್ಮ ವಿಜಯ' ಎಂಬ ಪರ್ಯಾಯ ಶೀರ್ಷಿಕೆಯನ್ನೂ ಕಾದಂಬರಿಕಾರರು ೊಟ್ಟಿದ್ದಾರೆ. ಈ ಕಾಲದ ಸಮಾಜ ಸುಧಾರಣೆಯ ಧೋರಣೆಗಳಲ್ಲಿ ಪ್ರತಿಭಟನೆಯ ೊತೆಯಲ್ಲಿ ಪುನರುತ್ಥಾನದ ಆಕಾಂಕ್ಷೆಯ ಧೋರಣೆಗಳೂ ಇದ್ದವು. ಸಾಮಾಜಿಕ ೀವನದಲ್ಲಿಯ ಕುರುಡು ಕಟ್ಟಳೆಗಳು ಇಲ್ಲವಾಗಬೇಕು, ಎನ್ನುವ ಆಶಯದೊಂದಿಗೆ ಮಾಜ ಸ್ವಾಸ್ಥ್ಯಕ್ಕೆ ಏನಿರಬೇಕು, ಎಂಬುದರ ಧೋರಣೆಯೂ ಈ ಕಾದಂಬರಿಯಲ್ಲಿದೆ. ್ರಿಟಿಷ್ ರಾಜಕಾರಣಕ್ಕೂ, ಮಿಶನರಿ ಚಿಂತನೆಗೂ, ಸುಧಾರಕ ಚಿಂತನೆಗೂ ಂಘರ್ಷವಿರದ ಕಾಲವಿದು. ಧಾರ್ಮಿಕ ವಿಧಿ, ಕಂದಾಚಾರದ ಕಟ್ಟುನಿಟ್ಟುಗಳನ್ನು ಡೆಗಣಿಸಿ ಸುಧಾರಣೆಯತ್ತ ಸಾಗುವ ಸಮಾಜದ ಸಂಕ್ರಮಣಾವಸ್ಥೆಯ ಚಿತ್ರಣ ಈ ಾದಂಬರಿಯಲ್ಲಿದೆ.

ಸ್ತ್ರೀ ಸುಧಾರಣೆಯನ್ನು ಮತ್ತೊಂದು ದೃಷ್ಟಿಕೋನದಿಂದ ಅವಲೋಕಿಸುವ ಈ ಕಾಲದ ುತ್ತೊಂದು ಕಾದಂಬರಿ ಕೆರೂರು ವಾಸುದೇವಾಚಾರ್ಯರು ರಚಿಸಿದ 'ಇಂದಿರಾ' ೯೦೮). ಇದರಲ್ಲಿ ಹಿಂದೂ ಧರ್ಮದಲ್ಲಿ ಕೆಲವು ಬದಲಾವಣೆಗಳನ್ನು ಸ್ವಾಗತಿಸಿದರೂ ೂರ್ಣ ಬದಲಾವಣೆ ಅಗತ್ಯವಿಲ್ಲವೆಂದು ಮನಗಂಡ ಒಂದು ಪಂಥದ ವೈಚಾರಿಕ ಅಲೆಯೂ ಜನರ ನಡುವೆ ಇತ್ತು. ಈ ಕೃತಿಯು ಅಂದಿನ ಕಾಲದ ಸಮಾಜದ ಆಂತರಿಕ ಕ್ಷೋಭೆಗಳನ್ನು, ಪರಸ್ಪರ ವಿರುದ್ಧ ವಿಚಾರಗಳ ಸಂಘರ್ಷದ ಸ್ಥಿತಿಯನ್ನು ತೋರಿಸುತ್ತದೆ. ಈ ಕಾದಂಬರಿಯು ಮುಖ್ಯವಾಗಿ ಸ್ತ್ರೀ ಶಿಕ್ಷಣ, ವಿಧವಾ ವಿವಾಹಗಳಂತಹ ಸಮಸ್ಯೆಗಳನ್ನು ಕುರಿತ ಚರ್ಚೆ ಮತ್ತು ಸನ್ನಿವೇಶಗಳನ್ನೊಳಗೊಂಡಿದೆ. ಇಲ್ಲಿ ಬರುವ ಮುಖ್ಯ ಸ್ತ್ರೀ ಪಾತ್ರಗಳಲ್ಲಿ ಎರಡು ಗುಂಪುಗಳಿವೆ : ಸ್ತ್ರೀ ಶಿಕ್ಷಣ ಪಡೆದೂ ವಿದ್ಯಾವಂತ ಸುಸಂಸ್ಕೃತರಾದ ದೇವಯಾನಿ, ಇಂದಿರೆಯಂತಹ ಪಾತ್ರಗಳು; ಇನ್ನೊಂದು ಗುಂಪಿನಲ್ಲಿ ವಿಧವಾ ವಿವಾಹ, ಸ್ತ್ರೀ ಸ್ವಾತಂತ್ರ್ಯ ಮುಂತಾದವುಗಳನ್ನು ಘೋಷಿಸಿಕೊಳ್ಳುತ್ತ ವಿದ್ಯಾಭ್ಯಾಸದ ವಿಪರೀತಕ್ಕೆ, ವಿಫಲತೆಗೆ ನಿದರ್ಶನಗಳಾಗಿ ನಿಲ್ಲುವ ಕಮಲೆ ಮತ್ತು ಪಂಡಿತೆ ರಾಧಾಬಾಯಿ. ಆಧುನಿಕ ವಿದ್ಯಾಭ್ಯಾಸದ ಸಫಲತೆಯ ಪ್ರತೀಕವಾಗಿ ಮೂಡಿಬಂದಿರುವ ದೇವಯಾನಿ ಮತ್ತು ಇಂದಿರೆಯ ಪಾತ್ರ ಚಿತ್ರಣದಲ್ಲಿ ಕಾದಂಬರಿಯ ಒಲವನ್ನು ಗಮನಿಸಬಹುದು. ಆಧುನಿಕ ಶಿಕ್ಷಣವನ್ನು ಪಡೆದರೂ ಅದರ ಸತ್‌ಲಾಭವನ್ನು ಪಡೆಯದೆ ಅದನ್ನು ತಪ್ಪಾಗಿ ಪರಿಭಾವಿಸಿ ಸಮಾಜ ಸುಧಾರಣೆಯ ಹೆಸರಿನಲ್ಲಿ ಸ್ವೇಚ್ಛಾಚಾರದಲ್ಲಿ ತೊಡಗಿದ ಪಾತ್ರಗಳಾಗಿ ಕಮಲೆ ಮತ್ತು ಸಮಾಜ ಸುಧಾರಕಿ ರಾಧಾಬಾಯಿ ಕಾಣಿಸಿಕೊಳ್ಳುತ್ತಾರೆ. ಸಮಾಜ ಸುಧಾರಕಿ ಪಂಡಿತೆ ರಾಧಾಬಾಯಿ ಮೂರು ಬಾರಿ ವಿಧವೆಯಾದವಳು. ವಿಧವೆಯರ ಪುನರ್ವಿವಾಹ, ಸ್ತ್ರೀಶಿಕ್ಷಣ, ಸ್ವಾತಂತ್ರ್ಯ ಮುಂತಾದ ತತ್ವಗಳನ್ನು ಪ್ರಚಾರ ಮಾಡಿ ಸುಧಾರಣಾ ಕಾರ್ಯಗಳಿಗಾಗಿ ಸಂಸ್ಥೆಯೊಂದನ್ನು ಕಟ್ಟಿ ನಡೆಸುವ ಈಕೆಯೇ ಕಾದಂಬರಿಯಲ್ಲಿ ಅತಿ ಹೆಚ್ಚಿನ ವಿಡಂಬನೆಗೆ ಒಳಗಾಗುವ ಪಾತ್ರ.

'ಇಂದಿರಾಬಾಯಿ' ಕಾದಂಬರಿಯಲ್ಲಿ ಚಿತ್ರಿತವಾಗಿರುವ ಆನಂದಿಬಾಯಿ ಮತ್ತು 'ಇಂದಿರಾ' ಕಾದಂಬರಿಯಲ್ಲಿ ಚಿತ್ರಿತವಾಗಿರುವ ರಾಧಾಬಾಯಿ – ಈ ಎರಡೂ ಪಾತ್ರಗಳು ಆ ಕಾಲದ ಸಮಾಜ ಸುಧಾರಕಿಯರಲ್ಲೊಬ್ಬಳಾಗಿದ್ದ ಪಂಡಿತಾ ರಮಾಬಾಯಿಯನ್ನೇ ದೃಷ್ಟಿಯಲ್ಲಿಟ್ಟುಕೊಂಡು ರಚಿತವಾದಂತಹವು ಎನ್ನುವುದರಲ್ಲಿ ಸಂಶಯವಿಲ್ಲ. ಆ ಕಾಲದ ವೈಚಾರಿಕ ಚಿಂತನೆಯನ್ನು ಕೆಣಕಿದ ಮತ್ತು ಸೃಜನಶೀಲತೆಗೆ ಸವಾಲಾದ ಈ ಮಹಾನ್‌ವ್ಯಕ್ತಿ ಪಂಡಿತಾ ರಮಾಬಾಯಿಯ ಬದುಕು, ವ್ಯಕ್ತಿತ್ವಗಳು ಆ ಕಾಲದ ಜನಮನದಲ್ಲಿ ಎಷ್ಟೊಂದು ಪ್ರಭಾವೀಯುತ, ಚರ್ಚಾರ್ಹ ಸಂಗತಿಗಳಾಗಿದ್ದವು ಎಂಬುದು ಇಲ್ಲಿ ಕುತೂಹಲದ ಸಂಗತಿಯಾಗಿದೆ. ಇಷ್ಟಾದರೂ ಭಾರತದ ಸಾಮಾಜಿಕ ಚರಿತ್ರೆಯಲ್ಲಿ ಪಂಡಿತೆ ರಮಾಬಾಯಿ ಏಕೆ ಪ್ರಮುಖ ಸ್ಥಾನ ಪಡೆಯಲಿಲ್ಲ ಎಂಬುದು ಅಚ್ಚರಿಯುಂಟುಮಾಡಿದರೂ ಈ ದಿಕ್ಕಿನಲ್ಲಿ ವಿಶೇಷವಾದ ಅಧ್ಯಯನದ ಅಗತ್ಯವಿದೆ. ಈವರೆಗೆ ನಡೆದಿರುವ ಅಧ್ಯಯನಗಳು ಆ ಕಾಲದ ರಾಷ್ಟ್ರೀಯತಾ ರಾಜಕೀಯ ಮತ್ತು ಲಿಂಗ ರಾಜಕೀಯದ ಕ್ರೂರದೃಷ್ಟಿಗೆ ಪಂಡಿತೆ ರಮಾಬಾಯಿಯ ವ್ಯಕ್ತಿತ್ವ, ಸಾಧನೆಗಳು ಹೇಗೆ ಅವಕೃಪೆಗೆ ಒಳಗಾದವು ಎಂಬುದನ್ನು ಎತ್ತಿ ತೋರಿಸುತ್ತವೆ.

# ಮತೀಯ, ಪುರುಷಶಾಹಿಯ ಸಂಘರ್ಷ ಮತ್ತು ರಮಾಬಾಯಿ



**ರಮಾಬಾಯಿ ೧೮೮೨ರಲ್ಲಿ ರಚಿಸಿದ 'ಸ್ತ್ರೀಧರ್ಮ ನೀತಿ' ಕೃತಿಯನ್ನು ಆರೋಗ್ಯಕರವಾಗಿಯೇ ಸ್ವಾಗತಿಸಿದ ಅಂದಿನ ವಿದ್ವತ್‌ಲೋಕ ಅವರ ಕ್ರೈಸ್ತ ಮತಾಂತರದ ನಂತರ ಭಿನ್ನ ನಿಲುವನ್ನು ತಳೆಯಿತು. ಆರಂಭದಲ್ಲಿ ಬ್ರಹ್ಮೋಸಮಾಜ ಮತ್ತು ಪ್ರಾರ್ಥನಾ ಸಮಾಜಗಳತ್ತ ಒಲವು ಬೆಳೆಸಿಕೊಂಡ ಪಂಡಿತಾ ರಮಾಬಾಯಿ ಮಹಿಳಾ ಶಿಕ್ಷಣ ಮತ್ತು ಸುಧಾರಣೆಯತ್ತ ವಿಶೇಷ ಒಲವನ್ನು ತೋರಿದರು.**

**ಡಾ॥ ಎನ್. ಗಾಯತ್ರಿ**

ಪಂಡಿತಾ ರಮಾಬಾಯಿಯವರ ಬದುಕಿನ ಎರಡು ಬಹುದೊಡ್ಡ ಘಟ್ಟಗಳು - ಒಂದು ಅವರು ಸ್ತ್ರೀವಾದಿಯಾಗಿ ರೂಪುಗೊಂಡದ್ದು. ಮತ್ತೊಂದು ಕ್ರೈಸ್ತ ಧರ್ಮದಲ್ಲಿ ನಂಬಿಕೆಯಿರಿಸಿಕೊಂಡು ಮತಾಂತರಗೊಂಡದ್ದು. ಆ ಕಾಲದ ಬೇರೆ ಯಾವುದೇ ಮಹಿಳೆಗೆ ಅಲಭ್ಯವಾದ ಸಂಸ್ಕೃತ ಶಿಕ್ಷಣವನ್ನು ಗಳಿಸಿಕೊಂಡು ಪುರುಷರಿಗೆ ಸವಾಲೆಸೆಯುವಂತೆ ಅವರು ಪಾಂಡಿತ್ಯ ಬೆಳೆಸಿಕೊಂಡವರು. ಅವರು ಮಹಿಳಾ ಶಿಕ್ಷಣಕ್ಕೆ ನೀಡಿದ ಒತ್ತು ಮತ್ತು ಅದಕ್ಕಾಗಿ ಅವರು ಬೊಂಬಾಯಿಯಲ್ಲಿ ಸ್ಥಾಪಿಸಿದ 'ಆರ್ಯ ಮಹಿಳಾ ಸಮಾಜ' ಅಂದಿನ ಸಮಾಜ ಸುಧಾರಕರ ಗಮನ ಸೆಳೆಯಿತು ಮತ್ತು ಅವರಿಂದ ಮನ್ನಣೆಯನ್ನು ಗಳಿಸಿಕೊಂಡಿತು. ರಮಾಬಾಯಿ ೧೮೮೨ರಲ್ಲಿ ರಚಿಸಿದ **'ಸ್ತ್ರೀಧರ್ಮ ನೀತಿ'** ಕೃತಿಯನ್ನು ಆರೋಗ್ಯಕರವಾಗಿಯೇ ಸ್ವಾಗತಿಸಿದ ಅಂದಿನ ವಿದ್ವತ್‌ಲೋಕ ಅವರ ಕ್ರೈಸ್ತ ಮತಾಂತರದ ನಂತರ ಭಿನ್ನ ನಿಲುವನ್ನು ತಳೆಯಿತು. ಆರಂಭದಲ್ಲಿ ಬ್ರಹ್ಮೋಸಮಾಜ ಮತ್ತು ಪ್ರಾರ್ಥನಾ ಸಮಾಜಗಳತ್ತ ಒಲವು ಬೆಳೆಸಿಕೊಂಡ ಪಂಡಿತಾ ರಮಾಬಾಯಿ ಮಹಿಳಾ ಶಿಕ್ಷಣ ಮತ್ತು ಸುಧಾರಣೆಯತ್ತ ವಿಶೇಷ ಒಲವನ್ನು ತೋರಿದರು.

ರಮಾಬಾಯಿಯ ಪ್ರಸಿದ್ಧ ಸ್ತ್ರೀವಾದಿ ಕೃತಿ **'ಮೇಲುಜಾತಿಯ ಹಿಂದೂ ಮಹಿಳೆ'** (೧೮೮೯)ಯು ಅವರು ಅಮೆರಿಕಾ ಪ್ರವಾಸದಲ್ಲಿದ್ದಾಗ ರಚಿತವಾದ ಕೃತಿ. ಭಾರತದ ಮೇಲುಜಾತಿಯ ಹಿಂದೂ ವಿಧವೆಯರ ಕಲ್ಯಾಣಕ್ಕೆಂದೇ ಯೋಜನೆಯೊಂದನ್ನು ರೂಪಿಸಿ, ಅದರ ಅನುಷ್ಠಾನಕ್ಕಾಗಿ ಅಮೆರಿಕಾವಾಸಿಗಳ ಬೆಂಬಲ ಯಾಚಿಸಿದ ರಮಾಬಾಯಿ ಭಾರತದ ಮಹಿಳೆಯರ ಅಭ್ಯುದಯಕ್ಕಾಗಿ ದುಡಿದರು. ಹಾಗೆಯೇ ಬರಗಾಲದಲ್ಲಿ ಸಂತ್ರಸ್ತರಾದ ಮಹಿಳೆಯರ ಕ್ಷೇಮಕ್ಕಾಗಿ ಶ್ರಮಿಸಿದರು. ಹಿಂದೂ ವಿಧವೆಯರ ಪುನರ್ವಸತಿ ಮತ್ತು ಕಲ್ಯಾಣಕ್ಕಾಗಿ ೧೮೮೯ರಲ್ಲಿ ಪುಣೆಯಲ್ಲಿ **'ಶಾರದಾ ಸದನ'**ವನ್ನು ಸ್ಥಾಪಿಸಿದರು. ನಂತರ ೧೮೯೯ರಲ್ಲಿ ಖೇಡಗಾಂವ್‌ನಲ್ಲಿ ಮುಕ್ತಿ ಮಿಷನ್‌ಅನ್ನು ಸ್ಥಾಪಿಸಿದಾಗ ಶಾರದಾ ಸದನವು ಪುಣೆಯಿಂದ ಖೇಡಗಾಂವ್‌ಗೆ ವರ್ಗಾಯಿಸಲ್ಪಟ್ಟಿತು. ಕ್ರೈಸ್ತಮತ ಪ್ರಚಾರ ಮತ್ತು ಮಹಿಳೆಯರ ಉದ್ಧಾರ – ಇವೆರಡನ್ನೂ ಒಟ್ಟೊಟ್ಟಾಗಿಯೇ ಪರಿಭಾವಿಸಿದ ರಮಾಬಾಯಿ ೧೯೦೮ರಲ್ಲಿ ಬೈಬಲ್ಲನ್ನು ಮರಾಠಿಗೆ ಭಾಷಾಂತರಿಸಿದರು.

ರಮಾಬಾಯಿಯವರು **'ಸ್ತ್ರೀಧರ್ಮ ನೀತಿ'**ಯಿಂದ **'ಮೇಲುಜಾತಿಯ ಹಿಂದೂ ಮಹಿಳೆ'** ಕೃತಿಯನ್ನು ರಚಿಸುವ ವೇಳೆಗೆ ತಮ್ಮ ವಿಚಾರಗಳಲ್ಲಿ ಸಾಕಷ್ಟು ಬದಲಾಗಿದ್ದರು; ವಿರುದ್ಧ ನೆಲೆಯಲ್ಲಿಯೇ ನಿಂತಿದ್ದರು, ಎಂದರೂ ಆಶ್ಚರ್ಯವಿಲ್ಲ. ಸುಶಿಕ್ಷಿತಳೆಂಬ ಸವಲತ್ತು ಪಡೆದ ಮಹಿಳೆಯ ಸ್ಥಾನದಿಂದ ಅಜ್ಞಾನಿಗಳಾದ, ತಿಳುವಳಿಕೆಯಿಲ್ಲದ ಮಹಿಳೆಯರಿಗೆ ಬೋಧಿಸುವ ದೃಷ್ಟಿಕೋನದಿಂದ ರಚಿತವಾದ **'ಸ್ತ್ರೀಧರ್ಮ ನೀತಿ'**ಯಿಂದ **'ಮೇಲುಜಾತಿಯ ಹಿಂದೂ ಮಹಿಳೆ'** ಕೃತಿಯ ರಚನೆಯ ವೇಳೆಗೆ ಇಡೀ ಮನುಕುಲದೊಂದಿಗೆ ಸೋದರಿತ್ವದ ಭಾವನೆಯನ್ನು ಬೆಳೆಸಿಕೊಂಡಿದ್ದರು. ಲಿಂಗ ಅಸಮಾನತೆ ಮತ್ತು ಶಾಸ್ತ್ರ ಸಂಪ್ರದಾಯಗಳಲ್ಲಿ ಅಂತರ್ಗತವಾಗಿರುವ ಅನ್ಯಾಯ, ದ್ವಿಸ್ತರ ನೀತಿಯನ್ನು ಇದರಲ್ಲಿ ಖಂಡಿಸಿದ್ದಾರೆ. ನೇರವಾಗಿ ಪಿತೃ ಪ್ರಾಧಾನ್ಯತೆಯ ವ್ಯವಸ್ಥೆಯ ಬುಡಕ್ಕೇ ಕೈ ಹಾಕಿದ ರಮಾಬಾಯಿಯವರ ಚಿಂತನೆಗಳನ್ನೊಳಗೊಂಡ ಈ ಕೃತಿ ಭಾರತೀಯ ಸ್ತ್ರೀವಾದಕ್ಕೆ ಒಂದು ಮಹತ್ವದ ಕೊಡುಗೆ. ಸುಮಾರು ೧೮೮೦ರ ವೇಳೆಗೆ ರಮಾಬಾಯಿಯವರು ಸ್ತ್ರೀ ಸಂತತಿಯ ವಿನಾಶವನ್ನು ಕುರಿತು ಚರ್ಚಿಸಿದ್ದಾರೆ. ಮಹಿಳೆಯರ ಆರೋಗ್ಯವನ್ನು ಕುರಿತಂತೆ ನಮ್ಮ ಸಮಾಜದಲ್ಲಿರುವ ನಿರ್ಲಕ್ಷ್ಯ ಮತ್ತು ಸ್ತ್ರೀಶಿಶು ಮರಣಗಳಿಂದಾಗಿ ಹೆಂಗಸರ ಸಂಖ್ಯೆ ಗಂಡಸರದಕ್ಕಿಂತ ಕಡಿಮೆಯಾಗಿದೆಯೆಂದು ಆ ಕಾಲದಲ್ಲಿಯೇ ಗುರುತಿಸಿದ್ದರು.

ಆಧುನಿಕ ಭಾರತದ ಸಮಾಜ ಸುಧಾರಣೆಯ ಚಳುವಳಿಯಲ್ಲಿ ಅಗ್ರಪಂಕ್ತಿಯ... ಗುರುತಿಸಬೇಕಾದ ರಮಾಬಾಯಿಯವರ ವಿಚಾರ ಮತ್ತು ಸಾಧನೆಗಳನ್ನು ಕುರಿತ... ಅಂದಿನ ಸಮಾಜ ಸುಧಾರಕರು ಮೆಚ್ಚುಗೆಗಿಂತ ವಿರೋಧವನ್ನೇ ಬೆಳೆಸಿಕೊಂಡಿದ್ದು ... ದುರಂತ. ಕಂದಾಚಾರದ ಹಿಂದೂಶಾಸ್ತ್ರ ಸಂಪ್ರದಾಯಗಳಿಂದ ಬಿಡುಗಡೆಗಾಗಿ ... ಅಪ್ಪಿಕೊಂಡ ಕ್ರೈಸ್ತಧರ್ಮದ ಕೆಡಕುಗಳ ಬಗೆಗೂ ರಮಾಬಾಯಿ ಧ್ವನಿಯೆತ್ತಿದ್ದ ಜೊತೆಗೆ ... ಕ್ರಿಶ್ಚಿಯನ್ ಕಂದಾಚಾರಗಳಿಗೆ ಸಂಪೂರ್ಣವಾಗಿ ತಮ್ಮನ್ನು ಅರ್ಪಿಸಿಕೊಳ್ಳುವುದನ್ನು ನಿರಾಕರಿಸಿದರು. "ನಾವು ದೈವದತ್ತವಾಗಿ ಪಡೆದುಕೊಂಡ ವರವೆಂದರೆ **'ಸ್ವಇಚ್ಛೆ'**. ... ಇಷ್ಟಪಟ್ಟು ನಮ್ಮ ಬಗ್ಗೆ ನಿರ್ಧಾರ ತೆಗೆದುಕೊಳ್ಳುವುದಕ್ಕೆ ಸ್ವಾತಂತ್ರ್ಯವಿರಬೇಕು", ... ರಮಾಬಾಯಿಯವರ ಮಾತುಗಳು ಕ್ರೈಸ್ತ ಧರ್ಮೀಯರಿಗೆ ಅಪ್ರಿಯವಾಗಿದ್ದವು. ಬ್ರಿಟಿಷ್ ಸರ್ಕಾರದಿಂದ ಕೈಸರ್-ಎ-ಹಿಂದೂ ಪ್ರಶಸ್ತಿಯ ಸನ್ಮಾನಕ್ಕೂ ಪಾತ್ರರಾದ ರಮಾಬಾಯಿಯವರನ್ನು ಅವರ ನಿಧನದ ನಂತರ ಸರೋಜಿನಿ ನಾಯ್ಡುರವರು ಸ್ಮರಿಸಿಕೊಂಡಿದ್ದು ಹೀಗೆ: "ಹಿಂದೂ ಸಂತರ ಪಟ್ಟಿಯಲ್ಲಿ ದಾಖಲಾದ ಮೊದಲ ಕ್ರಿಶ್ಚಿಯನ್ ಮಹಿಳೆ."

ರಮಾಬಾಯಿಯವರ ಬದುಕು ಮತ್ತು ಸಾಧನೆಗಳು ಮತ್ತು ನಮ್ಮ ಸಮಾಜವನ್ನು ಕುರಿತ ಅವರ ವಿಮರ್ಶೆಗಳು ನಮ್ಮ ಚರಿತ್ರೆಯ ಪುಟಗಳಲ್ಲಿ ಪ್ರಮುಖ ಸ್ಥಾನ ಪಡೆಯದೆ ಏಕೆ ಅಂಚಿಗೆ ತಳ್ಳಲ್ಪಟ್ಟವು, ಎಂಬ ವಿಷಯವನ್ನು ಕುರಿತು ವ್ಯಾಪಕವಾಗಿ ಚರ್ಚೆ ನಡೆಸಿರುವ ಶ್ರೀಮತಿ ಉಮಾ ಚಕ್ರವರ್ತಿಯವರು ಹಲವಾರು ಸಕಾರಣಗಳನ್ನು ಕೊಡುತ್ತಾರೆ: ರಾಷ್ಟ್ರೀಯತೆಯನ್ನು ಹಿಂದೂಧರ್ಮಕ್ಕೆ ಸಂವಾದಿಯಾಗಿ ಕಾಣುತ್ತಿದ್ದ ಅಂದಿನ ದಿನಗಳಲ್ಲಿ ಬ್ರಾಹ್ಮಣ ಪಿತೃಪ್ರಾಧಾನ್ಯತೆಯನ್ನು ಉಗ್ರವಾಗಿ ಟೀಕಿಸಿ, ಶೋಷಕ ವ್ಯವಸ್ಥೆಯಿಂದ ಹೊರ ಬಂದು ಕ್ರೈಸ್ತ ಮತಾಂತರಗೊಂಡ ರಮಾಬಾಯಿಯವರ ವ್ಯಕ್ತಿತ್ವವನ್ನು ಪುರಸ್ಕರಿಸುವುದು ಅಂದಿನ ಸಮಾಜ ಸುಧಾರಕರಿಗೆ ನುಂಗಲಾರದ ತುತ್ತಾಗಿತ್ತು. ಅದ್ದರಿಂದಲೇ ರಮಾಬಾಯಿಯವರ ಚರಿತ್ರೆಯನ್ನು 'ಮರೆತುಹೋದ ಚರಿತ್ರೆ' ಎಂದು ಶ್ರೀಮತಿ ಉಮಾ ಚಕ್ರವರ್ತಿಯವರು ಕರೆಯದೆ, ಅದನ್ನು 'ತುಳಿದುಹಾಕಿದ ಚರಿತ್ರೆ'ಯೆಂದೇ ಕರೆಯುತ್ತಾರೆ. ಕ್ರೈಸ್ತಮತೀಯಳಾದರೂ ಭಾರತಕ್ಕೆ ಬಂದ ನಂತರ ಇಲ್ಲಿನ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಆ್ಯನಿ ಬೆಸೆಂಟ್‌ಳಿಗೆ ದೊರೆತ ಸ್ಥಾನಮಾನವೂ ರಮಾಬಾಯಿಗೆ ದಕ್ಕಲಿಲ್ಲ. ಆ್ಯನಿ ಬೆಸೆಂಟ್‌ರವರು ಎಂದೂ ಹಿಂದೂ ಧರ್ಮದ ಕೊಳಕುಗಳ ಬಗ್ಗೆ, ಪುರುಷಶಾಹಿಯ ದಮನಕಾರಿ ಪದ್ಧತಿಗಳ ಬಗ್ಗೆ ಸೊಲ್ಲೆತ್ತಲಿಲ್ಲ. ಇಂತಹ ದೃಷ್ಟಿಕೋನಕ್ಕೆ ಅಂದಿನ ರಾಷ್ಟ್ರೀಯತಾವಾದಿಗಳ ಮತೀಯಭಾವನೆಗಳ ಜೊತೆಗೆ ಪುರುಷಶಾಹಿಯೂ ಕಾರಣವಾಗಿರುವುದನ್ನು ಗಮನಿಸಬಹುದು.

ಇಂದಿಗೂ ಕೋಮುವಾದದ ಬೆಚ್ಚಗಿನ ಮಡಿಲಲ್ಲಿ ಸೇರಿಕೊಂಡಿರುವ ಪುರುಷಶಾಹಿ ಪ್ರವೃತ್ತಿಗಳು ಹೆಣ್ಣಿನ ಬದುಕನ್ನು ಹೇಗೆ ದುರಂತಮಯವಾಗಿಸಬಹುದು, ಎಂಬುದನ್ನು ಇತ್ತೀಚಿನ ರಾಜಕೀಯ ಘಟನೆಗಳು ಮತ್ತೆ ಮತ್ತೆ ಪ್ರಕಟಪಡಿಸುತ್ತಾ ಬಂದಿವೆ. ಇದು ಲಿಂಗ ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸುತ್ತಾ, ಸಂಕೀರ್ಣಗೊಳಿಸುತ್ತಾ ಸಾಗಿದೆ. ಅನ್ಯಮತೀಯ ಮಹಿಳೆಯರ ಮೇಲೆ ನಡೆಯುವ ದಬ್ಬಾಳಿಕೆಯ ಹಿಂದೆ ಅಡಗಿರುವ ಸೂತ್ರವಿದಾಗಿದೆ.

**ಡಾ॥ ಎನ್. ಗಾಯತ್ರಿ**

೧೦೮, 'ಸ್ಕೈಲೈನ್ ಸುರಭಿ', ೧೪ 'ಪಿ', ವಿದ್ಯಾಪೀಠ ರಸ್ತೆ, ೩ನೇ ಹಂತ, ಬನಶಂಕರಿ, ಬೆಂಗಳೂರು - ೮೫



ಪ್ರಭು ಎಸ್. ಕೂಡ್ಲಾಪುರ

# ಮಾಹಿತಿ ತಂತ್ರಜ್ಞಾನದಲ್ಲಿ ಕಾಣಿಸುವಷ್ಟು ಕಾಣದ ಮಾಹಿತಿಗಳು

ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನ ಅತೀ ಕಡಿಮೆ ಸಮಯದಲ್ಲಿ ಅತೀ ವೇಗವಾಗಿ ಬೆಳೆಯುತ್ತಿರುವ ಉದ್ಯಮ. ಇಂದಿಗೆ ಬರಿಯ ಒಂದು ಉದ್ಯಮವಾಗಿ ಉಳಿದಿಲ್ಲ. ನಮ್ಮ ಬದುಕಿನ ಎಲ್ಲ ಅವಶ್ಯಕತೆಯಲ್ಲಿಯೂ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಒಂದು ಕಡೆಗಣಿಸಲಾಗದ ಅಂಶವಾಗಿ ಮತ್ತು ಅಂಗವಾಗಿ ಸೇರುತ್ತಲಿದೆ. ಬದುಕು ಮತ್ತು ತಂತ್ರಜ್ಞಾನ ಇಂದು ಸುಲಭವಾಗಿ ತಿಳಿಹೇಳುವ ವಿಷಯವಾಗಿ ಉಳಿದಿಲ್ಲ, ನಾವು ತಂತ್ರಜ್ಞಾನದಲ್ಲಿ ಮೂಲಭೂತ ಸೌಕರ್ಯವನ್ನು ಸೃಷ್ಟಿಸಿ ನಿಧಾನವಾಗಿ ಜೀವ ತುಂಬುತ್ತಿರಬೇಕಾದರೆ, ತಂತ್ರಜ್ಞಾನವೇ ಬದುಕಾಗಬಹುದು ಅಥವಾ ನಮ್ಮ ಬದುಕೇ ತಂತ್ರಜ್ಞಾನದ ನೆರಳಾಗಬಹುದು.

ಮಾಹಿತಿ ತಂತ್ರಜ್ಞಾನ ಪ್ರಸ್ತುತದಲ್ಲಿ ಕಾಣುವ ದೃಷ್ಟಿಗಳಲ್ಲಿ, ಯೋಚನೆಗೂ ಮೀರಿ ಸುಳಿದಾಡುವ ವಿಷಯಗಳು ನೂರಾರು. ಈ ವಿಷಯಗಳು ದೃಷ್ಟಿಯನ್ನು ಅವಲಂಬಿತವಾಗಿರುವುದಕ್ಕಿಂತ, ಆ ವಿಷಯದ ನೈಜ ರೂಪದಲ್ಲಿ ನೋಡಿ ಬದಲಾಯಿಸುವ ಅಥವಾ ಬದಲಾವಣೆಯ ಹಾದಿಯನ್ನು ಪರಿಚಯಿಸುವ ಒಂದು ಯತ್ನ. ಅಂತಹ ಕೆಲವು ವಿಷಯಗಳು, ಸವಾಲುಗಳು ಸಾಮಾಜಿಕವಾಗಿ ಹಾಗೂ ನೈತಿಕವಾಗಿ ಮಾಹಿತಿ ತಂತ್ರಜ್ಞಾನ ದೃಷ್ಟಿಯಿಂದ ಮತ್ತು ಸಮಾಜದ ದೃಷ್ಟಿಯಿಂದ ಹೇಗೆ ಪ್ರತಿಬಿಂಬಿಸುತ್ತವೆ ಎಂದು ನೋಡೋಣ.

**ಸಮಾಜದ ಮತ್ತು ಸರಕಾರದ ಮುಂದೆ ಮಾಹಿತಿ ತಂತ್ರಜ್ಞಾನ**

ಮಾಹಿತಿ ತಂತ್ರಜ್ಞಾನ ಸಂಸ್ಥೆಗಳು ಹೀಗೆ ಕಳೆದ ಎರಡು ದಶಕಗಳಲ್ಲಿ ಎಣಿಕೆಯಲ್ಲಿ ಶುರುವಾಗಿ, ಇವತ್ತಿನ ಹೊತ್ತಿಗೆ ಹಲವು ಸಾವಿರ ಸಂಸ್ಥೆಗಳಾಗಿ, ಹಲವು ಲಕ್ಷ ಜನರಿಗೆ ನೇರವಾಗಿ ಮತ್ತು ಪರೋಕ್ಷವಾಗಿ ಉದ್ಯೋಗ ಕಲ್ಪಿಸಿವೆ. ಇಷ್ಟು ಹೊರತಾಗಿ ಇನ್ನೂ ಹಲವಾರು ಸಂಸ್ಥೆಗಳು ಬೆಳೆಯುತ್ತಲಿವೆ ಮತ್ತು ಉದ್ಯೋಗ ಸೃಷ್ಟಿಯಾಗುತ್ತಲಿದೆ. ಗಣಕೀಕರಣ ಎಂಬ ಹೆಸರಿನಲ್ಲಿ ಮಾಹಿತಿ ತಂತ್ರಜ್ಞಾನ ಹಲವು ಉದ್ಯಮಗಳಲ್ಲಿ ನುಸುಳಿ ಉದ್ಯೋಗಗಳನ್ನು ನಾಶಪಡಿಸುವ ಕಲ್ಪನೆಯನ್ನು ಹುಸಿಯಾಗಿಸಿ, ಸದ್ಯಕ್ಕೆ ಇನ್ನೂ ಹಲವಾರು ಉದ್ಯೋಗಗಳನ್ನು ಸೃಷ್ಟಿಸಿರುವುದು ಗಮನಾರ್ಹ. ದೂರಸಂಪರ್ಕ ನಾಗಾಲೋಟದ ಬೆಳವಣಿಗೆಯಲ್ಲಿ ರಿಲಯನ್ಸ್ ಸಂಸ್ಥೆ ಬೃಹತ್ ಕಾರ್ಯವೆಸಗಿದೆ. ೨೦೦೩ನೇ ಇಸವಿಯ ಕೆಲವೇ ತಿಂಗಳುಗಳಲ್ಲಿ ಇತರೆ ದೂರವಾಣಿ ಸಂಸ್ಥೆಗಳಿಗಿಂತ ಹೆಚ್ಚಾಗಿ, ಸಂಚಾರಿ ದೂರವಾಣಿಯ ಮಾರುಕಟ್ಟೆಯನ್ನು ಕಬಳಿಸಿದೆ. ಅದು ಕೈಗೆಟಕುವ ದರದಲ್ಲಿ ಸಂಚಾರಿ ತಂತ್ರಜ್ಞಾನವನ್ನು ಸಾಮಾನ್ಯ ಜನತೆಗೆ ತಲುಪಿಸಿತು. ಸಂಚಾರಿ ದೂರವಾಣಿ ಕ್ಷೇತ್ರದಲ್ಲಿ ಕೆಲವೇ ವರ್ಷಗಳಲ್ಲಿ ಜನಸಾಮಾನ್ಯರ ಜೀವನಕ್ಕೆ ಒಂದು ಹೊಸ ಆಯಾಮ ಕೊಟ್ಟಂತೆ ಮಾಹಿತಿ ತಂತ್ರಜ್ಞಾನ ಕೂಡ ನಿಧಾನ ಗತಿಯಲ್ಲಿ ಒಂದು ಹೊಸ ಆಯಾಮ ಸೃಷ್ಟಿಯಾಗುತ್ತಲಿದೆ.

ಗಣಕೀಕರಣವನ್ನು ೧೯೭೭ರಲ್ಲಿ ಪ್ರಾರಂಭಮಾಡಿ ಕೇಂದ್ರ ಸರ್ಕಾರ ನ್ಯಾಷನಲ್ ಇಂಫಾರ್ಮೆಟಿಕ್ಸ್ ಸೆಂಟರ್‌ಅನ್ನು ಸ್ಥಾಪಿಸಿತು. NICNETಎಂಬ ಯೋಜನೆಯಿಂದ ಕೇಂದ್ರೀಯ ಮಂತ್ರಿಗಳ ಮತ್ತು ಕಾರ್ಯದರ್ಶಿ ಕಚೇರಿಗಳ ಗಣಕೀಕರಣ ಯಶಸ್ವಿಯಾಯಿತು. ಇಂದಿಗೂ ಹಲವಾರು ಸರ್ಕಾರಿ ಸಂಸ್ಥೆಗಳಿಗೆ ತಂತ್ರಾಂಶ, ಯಂತ್ರಾಂಶ ಮತ್ತು ದತ್ತ ಸಂಸ್ಕರಣೆಯಲ್ಲಿ ಈ ಸಂಸ್ಥೆ ಸಹಾಯಮಾಡುತ್ತಲಿದೆ. ಕೇಂದ್ರ ಸರ್ಕಾರ ವಿದ್ಯುನ್ಮಾನ ಆಡಳಿತ ಕೇಂದ್ರದಿಂದ ತಂತ್ರಾಂಶಗಳ ಪರಿಚಯ, ತಂತ್ರಜ್ಞಾನ ಸಹಾಯ, ಪ್ರದರ್ಶನ, ಕಾರ್ಯಾಗಾರದಿಂದ ಮಾಹಿತಿ ತಂತ್ರಜ್ಞಾನದ ಪರಿಚಯಮಾಡಿಸಿ, ಕೇಂದ್ರ ಹಾಗೂ ರಾಜ್ಯ ಸರ್ಕಾರ ಅಧಿಕಾರಿಗಳು ಜಾರಿಗೊಳಿಸಲು ಸಹಾಯ ಹಸ್ತ ಚಾಚುತ್ತಿವೆ. ಸರ್ಕಾರವು ಪಾಸ್‌ಪೋರ್ಟ್ ಸೌಲಭ್ಯದ ಸಂಪರ್ಕ, ಅಂಚೆ ಮತ್ತು ಇತರೆ ಇಲಾಖೆಯ ಮಾಹಿತಿಗಳು ಅಂತರ್ಜಾಲದಲ್ಲಿ ಬಿಡುಗಡೆ ಮಾಡಿದೆ.

ಸಾರ್ವಜನಿಕರಿಗೆ ಹೆಚ್ಚು ಸಂಪರ್ಕ ಹೊಂದಿರುವ ರೈಲ್ವೆಯ ಗಣಕೀಕರಣದಿಂದ, ಪ್ರಯಾಣಿಕರ ಮುಂಗಡ ಕಾಯ್ದಿರಿಸುವ ತಂತ್ರಾಂಶ ಸೃಷ್ಟಿಮಾಡಿ ಇಂದು ಒಂದೇ ಕಿಟಕಿಯಲ್ಲಿ ಟಿಕೆಟ್ ಅನ್ನು ದೇಶದ ಎಲ್ಲಿಂದ ಎಲ್ಲಿಗಾದರೂ ಕೊಂಡುಕೊಳ್ಳಬಹುದು. ಪ್ರವಾಸೋದ್ಯಮದಲ್ಲಿಯೂ ಮುಂಗಡ

ಕಾಯ್ದಿರಿಸುವಿಕೆ ಮತ್ತು ಮಾಹಿತಿ ವಿನಿಮಯದಿಂದ ಸಾರಿಗೆ ಕ್ಷೇತ್ರವನ್ನು ಯಶಸ್ವಿಗೊಳಿಸಿದೆ.

ಮಾಹಿತಿ ತಂತ್ರಜ್ಞಾನ ಮುಖ್ಯ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯಗಳಲ್ಲಿ ಬಳಕೆಯಿಂದ ಬಹುತೇಕ ಅನಾನುಕೂಲಗಳನ್ನು ತಪ್ಪಿಸಿದಂತಾಗಿದೆ. ಕೆಲವು ನ್ಯಾಯಾಲಯಗಳು ದಿನದ ಆಜ್ಞೆಗಳನ್ನು ತೀರ್ಪುಗಳನ್ನು ಗಣಕಗಳಲ್ಲಿ ರಿಕಾರ್ಡ್ ಮಾಡುತ್ತಿವೆ. ಜೂಡಿಸ್ ಪರಿಯೋಜನೆಯಲ್ಲಿನ ವ್ಯಾಜ್ಯ ಮತ್ತು ಕಾನೂನು ಗ್ರಂಥಾಲಯ ತಂತ್ರಾಂಶ ೧೯೫೦ರಿಂದ ಉಚ್ಚ ನ್ಯಾಯಾಲಯದಲ್ಲಿ ವರದಿಯಾಗಿರುವ ತೀರ್ಪುಗಳನ್ನು ಹೊಂದಿದೆ.

ವಿದ್ಯುನ್ಮಾನ ಆಡಳಿತ ಅಂದರೆ, ಸರ್ಕಾರದ ಆಂತರಿಕ ವ್ಯವಹಾರಗಳಿಗೆ, ಜನಸಾಮಾನ್ಯರಿಗೆ ಮತ್ತು ವ್ಯಾಪಾರದ ವಹಿವಾಟುಗಳಿಗೆ ಅಗತ್ಯ ಮಾಹಿತಿ ತಂತ್ರಜ್ಞಾನ ಬಳಕೆ. ಕರ್ನಾಟಕ ಸರ್ಕಾರವು ವಿದ್ಯುನ್ಮಾನ ಆಡಳಿತದಲ್ಲಿ 'ಭೂಮಿ' ಮತ್ತು 'ಖಜಾನೆ' ಎಂಬ ಮಾಹಿತಿ ತಂತ್ರಜ್ಞಾನ ಅತ್ಯುತ್ತಮ ಯೋಜನೆ ಕೈಗೊಂಡಿದೆ.

ಭೂಮಿ ರೆವಿನ್ಯೂ ಇಲಾಖೆಯಲ್ಲಿ, ಭೂ ದಾಖಲೆಗಳನ್ನು ಗಣಕೀಕರಣ ಮಾಡುವ ಯೋಜನೆ. ಈಗ ಎಲ್ಲಾ ತಾಲ್ಲೂಕಿನ ಭೂಮಿ ಕೇಂದ್ರದಲ್ಲಿ ಸಾರ್ವತ್ರಿಕ ಗಣಕ ಕೇಂದ್ರ ಇದ್ದು, ಎಲ್ಲಾ ಭೂ ದಾಖಲೆಗಳ ನಕಲು ರೈತರಿಗೆ ನೇರವಾಗಿ ಸಿಗಲಿವೆ. ಈ ನಕಲುಗಳಿಂದ ಬ್ಯಾಂಕಿನಲ್ಲಿ ಸಾಲಪಡೆಯಲು ವ್ಯವಹರಿಸಬಹುದು. ಆಯಾ ಜಿಲ್ಲೆಯಲ್ಲಿ ತಾಲ್ಲೂಕಿನ ಭೂಮಿ ಕೇಂದ್ರಗಳಲ್ಲಿ ಸಂಪರ್ಕವಿದ್ದು, ಜಿಲ್ಲೆಯ ಹಿರಿಯ ಅಧಿಕಾರಿಗಳು ನಿಧಾನ ಗತಿಯಲ್ಲಿ ಕಾರ್ಯನಿರ್ವಹಿಸುವ ಬಗ್ಗೆ ಗಮನವಿಡಬಹುದಾಗಿದೆ. ಸರಕಾರಿ ವ್ಯವಹಾರಗಳು ನೇರವಾಗಿ ಪ್ರಜೆಗೆ ತಿಳಿಯುವುದರಿಂದ ಪಾರದರ್ಶಕತೆ ಮೂಡುತ್ತದೆ.

ಖಜಾನೆ ರಾಜ್ಯದ ಎಲ್ಲ ತಾಲ್ಲೂಕಿನ ಟ್ರೆಷರಿಗಳ ಗಣಕೀಕರಣ ಯೋಜನೆ. ಇದು ಹಣದ ವ್ಯವಹಾರಗಳನ್ನು ತಾಕ್ಷಣಿಕವಾಗಿ ದತ್ತಸಂಚಯಕ್ಕೆ ವರ್ಗಾಯಿಸಲಾಗುತ್ತದೆ. ತಾಕ್ಷಣಿಕ ಲೆಕ್ಕಾಚಾರದಿಂದ ದಿನನಿತ್ಯದ ಹಣದ ಬಾಕಿಯನ್ನು ನೇರವಾಗಿ ಸರ್ಕಾರ ತಿಳಿಯುತ್ತಿರುತ್ತದೆ.

ಇತ್ತೀಚೆಗೆ ಸಾರ್ವಜನಿಕರಿಗೆ ವಿದ್ಯುತ್, ನೀರಿನ ಹಣ ಪಾವತಿಸಲು ಸಾರ್ವತ್ರಿಕ ಗಣಕ ಸೌಲಭ್ಯಗಳ ವ್ಯವಸ್ಥೆ ಕಲ್ಪಿಸಿದ್ದಾರೆ. ಗಣಕಗಳಲ್ಲಿ ಚಿಹ್ನೆಗಳಲ್ಲಿ ಸ್ಪರ್ಶಗ್ರಹಣ ಮತ್ತು ಧ್ವನಿ ಅಡವಳಿಕೆಯಿಂದ ಇದು ಸಾಧಿಸಬಹುದಾಗಿದೆ. ಇದರಿಂದ ಮಾಹಿತಿ ಪರಿಚಯ ಇರುವವರಿಗೂ ಇಲ್ಲದವರಿಗೂ ಒಂದು ಕೊಂಡಿ ಬೆಸೆದಂತಾಗಿದೆ.

ಶಿಕ್ಷಣ ಕ್ಷೇತ್ರದಲ್ಲಿ ವಿಶ್ವವಿದ್ಯಾನಿಲಯಗಳು ಮಾಹಿತಿ ತಂತ್ರಜ್ಞಾನವನ್ನು ಉಪಯುಕ್ತಗೊಳಿಸಿ, ಶಿಕ್ಷಣದ ಮಾಹಿತಿ, ಪರೀಕ್ಷೆಗಳ ಮಾಹಿತಿ, ಫಲಿತಾಂಶ ಪ್ರಕಟಣೆ ಇತ್ಯಾದಿಗಳನ್ನು ಸಾರಗೊಳಿಸಿ, ಪ್ರಾದೇಶಿಕ ಶಿಕ್ಷಣ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದೆ. ವಿದ್ಯಾರ್ಥಿಗಳು ದೂರದಲ್ಲಿ ಇರುವ ತಜ್ಞ ಶಿಕ್ಷಕರಿಂದ ವಿಡಿಯೋ ಸಮ್ಮೇಳನ ಮತ್ತು ಇ-ಅಂಚೆ ಮೂಲಕ ಸಹಾಯ ಪಡೆಯಬಹುದು. ಈ ನಿಟ್ಟಿನಲ್ಲಿ ಎಜುಸ್ಯಾಟ್‌ನ ಮುಂದೆ ಸಾಕಷ್ಟು ಸವಾಲು ಹಾಗೂ ಅವಕಾಶಗಳು ಕೂಡ ಇವೆ.

ಸಂಸ್ಥೆಗಳ ವ್ಯಾವಹಾರಿಕ ಚಟುವಟಿಕೆಗಳಲ್ಲಿ ಮಾನವ ಸಂಪನ್ಮೂಲ, ಹಣಕಾಸು, ಪರಿಯೋಜನೆ ವ್ಯವಸ್ಥೆ, ವ್ಯವಹಾರ ಮತ್ತು ಸಂಪರ್ಕಕ್ಕೆ ಅನೇಕ ಅವಲಂಬಿತ ತಂತ್ರಾಂಶಗಳನ್ನೊಳಗೊಂಡು ಅಂತರ್ಜಾಲ (Internet), ಮತ್ತು ವಿದ್ಯುನ್ಮಾನ ಅಂಚೆಯನ್ನು ಅವಲಂಬಿಸಿದೆ. ಇಲ್ಲಿ ಅನಿವಾರ್ಯದಂತೆ ಮಾಹಿತಿ ತಂತ್ರಜ್ಞಾನಕ್ಕೆ ಮಾರುಹೋಗುವ ಈಗಿನ ಸಂದರ್ಭಗಳಲ್ಲಿ ಉದ್ಯಮಗಳ ವ್ಯವಹಾರದ ಅಂತರವನ್ನು ಭರ್ತಿಮಾಡುತ್ತಿವೆ. ಮಾಹಿತಿ ತಂತ್ರಜ್ಞಾನದ ಸೇವೆಗಳನ್ನು ಇಂದು ಬ್ಯಾಂಕ್, ವಿಮೆ, ಸೆಕ್ಯೂರಿಟಿಸ್, ದೂರಸಂಪರ್ಕ, ಆರೋಗ್ಯ, ಸಾರಿಗೆ, ಮನರಂಜನೆ ಮತ್ತು ಇತರೆ ಸೇವಾ ಕ್ಷೇತ್ರಗಳಲ್ಲಿ ಹೆಚ್ಚಾಗಿ ಬಳಸಲಾಗುತ್ತಿದ್ದು, ಮಾಹಿತಿಗಳ ಹರಿವು ಮತ್ತು ದತ್ತ ಸಂಸ್ಕರಣೆಯಲ್ಲಿ (Information flow and Data processing) ಉಪಯುಕ್ತವಾಗಿದೆ.

ಬ್ಯಾಂಕಿಂಗ್ ಕ್ಷೇತ್ರದಲ್ಲೂ ಹೇಳತೀರದ ಸಾಧನೆಯಾಗಿದೆ. ಬ್ಯಾಂಕಿಂಗ್ ತಂತ್ರಾಂಶದಿಂದ ಎಲ್ಲಾ ಶಾಖೆಗಳೊಂದಿಗೆ ಮತ್ತು ಇತರೆ ಬ್ಯಾಂಕುಗಳೊಂದಿಗೆ ನೇರ ವಿನಿಮಯ ಸಂಪರ್ಕ. ಇದರಿಂದ ಇಂದು ಒಂದೇ ಶಾಖೆಗೆ ಹೋಗಬೇಕೆಂದೇನೂ ಇಲ್ಲ. ಟೆಲ್ಲರ್ ಮುಂದೆ ಕ್ಯೂದ ಬದಲು ಸನಿಹ-ಸದಾ ನಿಮಗೆ ಹಣ ಯಂತ್ರದ (ATM) ಮುಂದೆ ಕಾಣಬಹುದು. ಹಣವನ್ನು ಒಂದು ಕಾರ್ಡ್ ಮೂಲಕ ಯಂತ್ರದಿಂದ ವಿಶ್ವಾಸದಿಂದ ಪಡೆಯುವುದು ಗಮನಾರ್ಹ. ಕೆಲವು ಬ್ಯಾಂಕಿನಲ್ಲಿ ಅಂತರ್ಜಾಲ ಮತ್ತು ದೂರವಾಣಿ ಬ್ಯಾಂಕಿಂಗ್ ಮತ್ತು ಸನಿಹದಲ್ಲೆ ವ್ಯವಹಾರ ವೃದ್ಧಿಗೋಸ್ಕರ ಶಾಖೆ ಕಚೇರಿಗೆ ಹೋದರೆ, ದಂಡ ವಿಧಿಸುವುದುಂಟು.

ಅಂತರ್ಜಾಲ ಇಂದಿನ ಸಂಸ್ಥೆಗಳ ಕಾರ್ಯೋನ್ಮುಖ ಚಟುವಟಿಕೆಗಳಿಗೆ ಹೆಚ್ಚಾಗಿ ಬಳಸಲಾಗುತ್ತಿದೆ. ಟೀವಿ, ಪತ್ರಿಕೆಗಳು, ಸಿನಿಮಾಗಳು ಅಂತರ್ಜಾಲದ ಮಾಧ್ಯಮದಿಂದ ಮಾಹಿತಿ ಮತ್ತು ಜಾಹೀರಾತುಗಳಿಂದ ಆದಾಯ ಗಳಿಸುತ್ತವೆ. ಹಲವು ಸಂಸ್ಥೆಗಳು ಅಂತರ್ಜಾಲದಲ್ಲಿ ವಿದ್ಯುನ್ಮಾನ ವಾಣಿಜ್ಯ (e-commerce) ಸೌಲಭ್ಯಗಳನ್ನು, ಉಚಿತ ವಿದ್ಯುನ್ಮಾನ ಅಂಚೆಯ ಸೌಲಭ್ಯಗಳನ್ನು ಒದಗಿಸುತ್ತಿದೆ.

ಇವಿಷ್ಟು ಪ್ರಸ್ತುತದಲ್ಲಿ ಹಳೆಯ ಸಂಗತಿಗಳಾದರೂ ಮಾಹಿತಿ ತಂತ್ರಜ್ಞಾನ ನೀಡುತ್ತಿರುವ ಬೇಡಿಕೆ ಮತ್ತು ಸಂಪರ್ಕದ ಮತ್ತು ಸಂಸ್ಕರಣೆಯ ಅವಧಿಯನ್ನು ಕಡಿಮೆ ಮಾಡಿರುವುದು ಶ್ಲಾಘನೀಯ.

**ಮಾಹಿತಿ ತಂತ್ರಜ್ಞಾನ ಸಂಸ್ಥೆಗಳ ಸುತ್ತ**

ಮಾಹಿತಿ ತಂತ್ರಜ್ಞಾನ ಸಂಸ್ಥೆಗಳಲ್ಲಿ ತಂತ್ರಾಂಶ (software) ಸಂಸ್ಥೆಗಳು ಪ್ರಮುಖವೆನಿಸಿದರೆ ಯಂತ್ರಾಂಶ (hardware) ಮತ್ತು ಇವೆರಡನ್ನು ಅವಲಂಬಿತ ಸಂಸ್ಥೆಗಳೂ ಮುಖ್ಯ ಪಾತ್ರವಹಿಸಿವೆ. ವ್ಯವಹಾರ ಸಂಸ್ಕರಣೆ ಕಾರ್ಯವನ್ನು ಕಡಿಮೆ ವೆಚ್ಚದಲ್ಲಿ ಒದಗಿಸುವ ಇತರೆ ದೇಶಗಳಿಗೆ ಸಾಗಿಸುವುದು, ಇಂತಹ ಸಂಸ್ಕರಣೆಯಲ್ಲಿ ತಂತ್ರಾಂಶ ಬೆಂಬಲ, ಉತ್ಪಾದನೆ, ಕಾಲ್ ಸೆಂಟರ್‌ಗಳು, ವಿಮೆ, ವಿದ್ಯುನ್ಮಾನ ವಾಣಿಜ್ಯ, ಹಣಕಾಸು ಸೇವೆಗಳು ಇತ್ಯಾದಿಗಳು ಮಾಹಿತಿ ತಂತ್ರಜ್ಞಾನ ಅವಲಂಬಿತ ಸಂಸ್ಥೆಗಳಾಗಿ ಸೇರುತ್ತವೆ.

ಮಾಹಿತಿ ತಂತ್ರಜ್ಞಾನ ತಯಾರಿಕೆ ಕ್ಷೇತ್ರದಲ್ಲೇ ಅನೇಕ ತಂತ್ರಾಂಶಗಳು ಒಳಗೊಂಡು ಹೊಸ ವಿನ್ಯಾಸಗಳಲ್ಲಿ, ಅಭಿವೃದ್ಧಿ ಪಡಿಸುವಲ್ಲಿ, ಸಂರಕ್ಷಿಸುವಲ್ಲಿ, ಪರೀಕ್ಷೆಯಲ್ಲಿ ಹೊಸ ಆವೃತ್ತಿಯಲ್ಲಿ, ಉಪಯುಕ್ತ ರೀತಿಯಲ್ಲಿ ತಂತ್ರಜ್ಞಾನ ಪ್ರಗತಿ ಹೊಂದುತ್ತಲಿದೆ.




ಗ್ರಾಹಕರ ಬೇಡಿಕೆಗೆ ತಕ್ಕ ಹಾಗೆ ತಂತ್ರಜ್ಞಾನಗಳು ಮತ್ತು ತಂತ್ರಜ್ಞಾನಕ್ಕೆ ತಕ್ಕ ಹಾಗೆ ಗ್ರಾಹಕರು. ವಿದ್ಯುನ್ಮಾನದ ಬೆಲೆ ಕಡಿಮೆಯಾಗುತ್ತಿರುವುದು ತಂತ್ರಜ್ಞಾನ ಬೆಳೆಯಲು ಮುಖ್ಯ ಕಾರಣ.

ಪ್ರಸ್ತುತ ಸನ್ನಿವೇಶದಲ್ಲಿ ಮಾಹಿತಿ ತಂತ್ರಜ್ಞಾನ ಸಂಸ್ಥೆಗಳ ಪ್ರಮುಖ ಕಾರ್ಯಗಳು ತಂತ್ರಾಂಶ ಅಭಿವೃದ್ಧಿ, ತಂತ್ರಾಂಶ ಪರೀಕ್ಷೆ, ತಂತ್ರಾಂಶ ನಿರ್ವಹಣೆ ಮತ್ತು ಉಪಯೋಗಿಸುವವರ ತಾಂತ್ರಿಕ ಬೆಂಬಲಗಳು (technical support) ಒಳಗೊಂಡಿವೆ. ಇಂತಹ ತಂತ್ರಾಂಶಗಳು ಬಹಳಷ್ಟು ಹೊರಗುತ್ತಿಗೆಯಿಂದ ಬಂದ ವಿದೇಶಿ ತಂತ್ರಾಂಶಗಳು. ಸ್ಥಳೀಯ ಮಾರ್ಕೆಟಿಗೆ ತಕ್ಕವಾದ ತಂತ್ರಾಂಶಗಳು ಬಹಳ ನಿಧಾನಗತಿಯಲ್ಲಿ ಸಾಗಿವೆ.

ಇಂದು ಭಾರತದಲ್ಲಿ ಮಾಹಿತಿ ತಂತ್ರಜ್ಞಾನ ಕ್ಷೇತ್ರಕ್ಕೆ ಸಂಬಂಧಪಟ್ಟ ಸಂಶೋಧನ ಕಾರ್ಯಗಳು ಬಹಳ ಕಡಿಮೆ ಪ್ರಮಾಣದಲ್ಲಿ ನಡೆಯುತ್ತಿವೆ. ಮಾಹಿತಿ ತಂತ್ರಜ್ಞಾನ ಸಂಸ್ಥೆಗಳಲ್ಲಿಯೆ ಸಂಶೋಧನೆಗಳಿಗೆ ಪ್ರೋತ್ಸಾಹ ದೊರಕಿದರೂ ಸಂಸ್ಥೆಗಳಿಗೆ ಸೀಮಿತವಾಗಿವೆ.

ಸ್ನಾತಕೋತ್ತರ ಪದವೀಧರರು ಅಗತ್ಯ ಪೂರೈಕೆಗೆ ಕೆಲವು ರಾಜ್ಯಗಳು ಮಾಹಿತಿ ತಂತ್ರಜ್ಞಾನಗಳ ಭಾರತೀಯ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸಿವೆ. ಈ ಪದವೀಧರರು ತಂತ್ರಜ್ಞಾನವನ್ನು ವಾಣಿಜ್ಯಕ್ಕೂ ಮೀರಿ ಮೌಲ್ಯಾಧಾರಿತ ಸೇವೆಗಳತ್ತ ಕೊಂಡೊಯ್ಯಬೇಕು.

ಮಾಹಿತಿ ತಂತ್ರಜ್ಞಾನ ಸಂಸ್ಥೆಗಳು ಗುಣಮಟ್ಟ ಕಾಪಾಡುವಲ್ಲಿ, ಗ್ರಾಹಕರ ಆಕರ್ಷಣೆಯಲ್ಲಿ ಬಹಳ ಮುಂದೆ ಸಾಗಿವೆ. ಈ ನಿಟ್ಟಿನಲ್ಲಿ ಭಾರತದಲ್ಲಿ ಐ.ಎಸ್.ಐ. ಇದ್ದ ಹಾಗೆ ಸಾಫ್ಟ್‌ವೇರ್ ಇಂಜಿನಿಯರಿಂಗ್ ಇನ್‌ಸ್ಟಿಟ್ಯೂಟ್ ಎಂಬ ಅಂತಾರಾಷ್ಟ್ರೀಯ ಸಮೂಹ ಸಿ.ಎಮ್.ಎಮ್. ಎಂಬ ಮಾರ್ಗದರ್ಶನ ರಚಿತವಾಗಿದೆ. ಈ ಮಾದರಿಯಲ್ಲಿ ಸಂಸ್ಥೆ ಸಂಸ್ಕರಿಸಿ ಸಿಗುವ ಪ್ರಮಾಣ ಪತ್ರ ಅನೇಕ ತಂತ್ರಾಂಶ ತಯಾರಕರಿಗೆ ಸಲ್ಲುವ ಒಂದು ಗೌರವ. ಈ ಸಂಸ್ಥೆಗಳ ತಂತ್ರಾಂಶ ತಯಾರಿಕೆಯ ಸಂಸ್ಕರಣೆಯಲ್ಲಿ ಗುಣಮಟ್ಟ ಅತ್ಯುತ್ತಮವಾಗಿರುತ್ತದೆ. ಇಂದು ಇಂತಹ ಸಂಸ್ಥೆಗಳಲ್ಲಿ ಅರ್ಧದಷ್ಟು ಭಾರತದಲ್ಲಿವೆ.

ಹಲವು ವರ್ಷಗಳನ್ನು ಆಳಿದ ತಂತ್ರಾಂಶ ಭಾಷೆಗಳಾದ ಕೋಬಾಲ್, ಪಾಸ್ಕಾಲ್, ಫೋಟ್ರಾನ್ ಇಂದ ಇಂದಿನ ಓಇಖಿ ಅಂತಹ ಉದ್ಯಮಶೀಲ ತಂತ್ರಾಂಶಗಳ ಮಟ್ಟಿಗೆ

ಬಳಿದಿದೆ. ತಂತ್ರಾಂಶಗಳನ್ನು ನಡೆಸುವ ಮತ್ತು ಲಿನಕ್ಸ್ ಕಾರ್ಯಕಾರಿ ವ್ಯವಸ್ಥೆಗಳು ಗ್ರಾಹಕರನ್ನು ಆಕರ್ಷಿಸಲು, ಗ್ರಾಹಕರಿಗೆ ಒಪ್ಪುವ ಮಾದರಿಯಲ್ಲಿ, ಅನೇಕ ಆವೃತ್ತಿಗಳಲ್ಲಿ ಲಭ್ಯ. ತಂತ್ರಜ್ಞರಿಗೂ ಪ್ರತಿ ನ್ಯೂ ತಂತ್ರಾಂಶಗಳ ಕಲಿತು, ವ್ಯವಹಾರ ಮತ್ತು ವಾಣಿಜ್ಯ ತಂತ್ರಾಂಶಗಳ ತಯಾರಿಕೆಯ ನಿಟ್ಟಿನಲ್ಲಿ ಗ್ರಹಿಸಿ, ನಿಪುಣರಾಗಿ ಮತ್ತೆ ಹೊಸ ಹೊಸ ತಂತ್ರಜ್ಞಾನವನ್ನು ಕಲಿಯುವುದೇ ಒಂದು ಸಾಹಸವಾಗಿಬಿಡುತ್ತದೆ ಮತ್ತು ಇದು ಅವರ ದಿನಚರಿ ಕೂಡ. ಒಂದು ಗಾದೆಮಾತಿನಂತೆ ಇಂದು ಪದವಿ ಪಡೆದು ನಾಳೆ ಏನೂ ಹೊಸದನ್ನು ಕಲಿಯದಿದ್ದರೆ ನಾಡಿದ್ದು ಅನಕ್ಷರಸ್ಥನಾಗುವುದು ಮಾಹಿತಿ ತಂತ್ರಜ್ಞಾನಕ್ಕೆ ಬಹಳ ಅನುಗುಣವಾಗುತ್ತದೆ. ಮಾಹಿತಿ ತಂತ್ರಜ್ಞಾನದ ಸಂಸ್ಥೆಯ ಆದಾಯಕ್ಕೆ ಬೌದ್ಧಿಕ ಆಸ್ತಿ ಅಮೂಲ್ಯವಾದದ್ದು. ಬೌದ್ಧಿಕ ಆಸ್ತಿ ಎಂದರೆ ಇಂದು ಪೇಟೆಂಟಿಗೂ ಮಿಗಿಲಾಗಿರುವ ಸಂಸ್ಥೆಯ ತಂತ್ರಜ್ಞರು. ಇಂದು ಸದ್ಯದ ಬಹು ದೊಡ್ಡ ಸಮಸ್ಯೆ attrition rate, ಅಂದರೆ ಸಂಸ್ಥೆಯಿಂದ ಸಂಸ್ಥೆಗೆ ಬಹಳ ವೇಗದಲ್ಲಿ ಬದಲಾಯಿಸುವ ತಂತ್ರಾಂಶ ತಂತ್ರಜ್ಞಾನಿಗಳು. ಇದಕ್ಕೆ ಒಂದು ಮುಖ್ಯ ಕಾರಣ, ಒಂದು ಸಂಸ್ಥೆಯಿಂದ ಇನ್ನೊಂದು ಸಂಸ್ಥೆಗೆ ಬರುವ ತಂತ್ರಜ್ಞಾನಿಗಳಿಗೆ, ಸದ್ಯಕ್ಕಿರುವುದಕ್ಕಿಂತ ಕನಿಷ್ಠ ಶೇ. ೧೫ರಿಂದ ೪೦ರಷ್ಟು ಹೆಚ್ಚಿನ ಹಣದ ಸಂಭಾವನೆ. ತಂತ್ರಜ್ಞರಿಗೆ ಒಳ್ಳೆಯ ಅಥವಾ ಹೊಸ ತಂತ್ರಜ್ಞಾನದ ಕೆಲಸಮಾಡುವ ಆಸೆ ಒಂದೆಡೆಯಾದರೆ, ವಿದೇಶ ಪ್ರಯಾಣ, ಸಂಸ್ಥೆಯ ಹೆಸರು ಒಂದೆಡೆಯಾಗಿರುತ್ತದೆ, ಆದರೂ ಹಣ ಮೂಲಭೂತವಾಗುತ್ತದೆ. ಇನ್ನು ಸಂಸ್ಥೆಗಳು ಹೊಸ ತಂತ್ರಜ್ಞರಿಗೆ ಉತ್ಪನ್ನ ಅಥವಾ ಪರಿಯೋಜನೆಗೆ ತರಬೇತಿ ಕೊಡುವ ವೆಚ್ಚವನ್ನು ಪರಿಗಣಿಸಿ, ಹೆಚ್ಚಿನ ಹಣದ ಆಸೆ ಅಥವಾ ಕಿರಿಯ ತಂತ್ರಜ್ಞರು ಅಥವಾ ಶೈಕ್ಷಣಿಕ ಪರಿಯೋಜನೆಯಾಗಿ ಕಾಲೇಜಿನ ವಿದ್ಯಾರ್ಥಿಗಳಿಗೆ ಕೊಡುವುದುಂಟು. ಬೆಳೆಯುತ್ತಿರುವ ಮಾಹಿತಿ ತಂತ್ರಜ್ಞಾನ ಮತ್ತು ಸಂಸ್ಥೆಗಳಿಗೆ ಮಾನವ ಸಂಪನ್ಮೂಲ ಕ್ರೋಡೀಕರಣ ಒಂದೆಡೆಯಾದರೆ ಅವರಿಗೆ ಬೇಕಾದ ಸವಲತ್ತುಗಳನ್ನು ಒದಗಿಸುವುದು ಒಂದು ದೊಡ್ಡ ಪರಿಶ್ರಮ. ಸಂಸ್ಥೆಯ ಮುಖಾಂತರ ವಿಮೆ, ವಾಹನ ಖರೀದಿಗೆ ಸಾಲ, ಕಡಿಮೆ ದರದಲ್ಲಿ ರುಚಿಯಾದ ಊಟ, ಕುಟುಂಬದವರ ಸಮೇತ ಒಂದು ಪ್ರವಾಸ ಇತ್ಯಾದಿ. ಇಷ್ಟೆಲ್ಲ ಸವಲತ್ತುಗಳು ವಿಸ್ತರಣೆ ಅವಧಿಗಳಲ್ಲಿ ಯಾಂತ್ರಿಕವಾಗಿ ಕೆಲಸಮಾಡಿ, ನೆಮ್ಮದಿಗೆ ವಾರಾಂತ್ಯಕ್ಕೆ ಕಾಯುವ ತಂತ್ರಜ್ಞಾನಿಗಳಿಗೆ ಅವಶ್ಯವೆನಿಸಿದರೂ, ಎಲ್ಲಾ ಸಂಸ್ಥೆಗಳು ಒಂದೆ ಮಟ್ಟದಲ್ಲಿ ಪೂರೈಸಲಾಗದ ಕಾರಣ ಘರ್ಷಣೆ ಅನಿವಾರ್ಯವಾಗುತ್ತದೆ. ಆಂತರಿಕ ಸಮಸ್ಯೆಯಾದ ಬಳಿಕ, ಬಾಹ್ಯ ಸಮಸ್ಯೆಗಳು ಎದುರಾಗುತ್ತವೆ, ಮಾರುಕಟ್ಟೆ ಒತ್ತಡ, ಕಡಿಮೆ ದರದಲ್ಲಿ ಅತ್ಯುತ್ತಮ ತಂತ್ರಜ್ಞಾನವನ್ನು ಗ್ರಾಹಕರಿಗೆ ಕೊಡುವುದೇ ಒಂದು ದೊಡ್ಡ ಸವಾಲು. ಈ ನಿಟ್ಟಿನಲ್ಲಿ ಸಂಸ್ಥೆಗಳ ವಿಲೀನದಿಂದ ಉತ್ತಮವಾಗಿ ಚಾಲ್ತಿಯಲ್ಲಿರುವ ಉತ್ಪನ್ನಗಳಿಗೆ ಪ್ರೋತ್ಸಾಹ, ಸಂಸ್ಥೆಗಳ ಜಂಟಿ ಉಪಕ್ರಮಗಳು ಸಣ್ಣ ಸಂಸ್ಥೆಗಳ ಕಬಳಿಕೆ ಮತ್ತು ದೊಡ್ಡ ಕೈಗಾರಿಕೆಗಳಿಂದ, ಮಧ್ಯಮ ಹಾಗೂ ಸಣ್ಣ ಕೈಗಾರಿಕೆಗಳಿಗೆ ಬಂಡವಾಳಶಾಹಿ ಶಕ್ತಿಯಿಂದ ತೀವ್ರ ಪೈಪೋಟಿ ಸರ್ವೇಸಾಮಾನ್ಯವಾಗಿದೆ.

ಇವೆಲ್ಲ ಇತರೆ ಸಂಸ್ಥೆಗಳಿಗೂ ಅನ್ವಯಿಸಬಹುದಾದರೂ ಇತ್ತೀಚೆಗೆ, ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಹೆಚ್ಚಾಗಿ, ವಿಶ್ವ ಮಾರುಕಟ್ಟೆ ಮತ್ತು ವಿಶ್ವದ ಆರ್ಥಿಕವಲಯದಲ್ಲಿ ಏರುಪೇರಿನ ಪರಿಣಾಮಕ್ಕೆ ಮಾಹಿತಿ ತಂತ್ರಜ್ಞಾನ ಸಂಸ್ಥೆಗಳದು ಮುಖ್ಯ ಪಾತ್ರವಾಗಿವೆ. ಎಲ್ಲಾ ಬೆಳವಣಿಗೆಯ ಕ್ಷೇತ್ರದಲ್ಲಿರುವ ಹಾಗೆ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲೂ ಸಂತೃಪ್ತತೆ ಇದ್ದೇ ಇದೆ. ಆದರೆ ಈ ಸಂತೃಪ್ತಿಯನ್ನು ಈಗಲೇ ಯೋಚಿಸಲೇಬೇಕಾದ ವಿಷಯವಲ್ಲದಿದ್ದರೂ ಅದು ಯಾವ ಹಂತದಲ್ಲಿ ತಲುಪಬೇಕು, ಯಾವ ಕ್ಷೇತ್ರದಲ್ಲಿ, ಯಾವ ದಿಕ್ಕಿನಲ್ಲಿ ತಲುಪಿದಾಗ, ಇನ್ನೂ ಯಾವ ಕ್ಷೇತ್ರ, ದಿಕ್ಕುಗಳಿಗೆ ತಂತ್ರಜ್ಞಾನ ಹರಿಯಬಹುದೆಂದು ಕಲ್ಪಿಸಬಹುದು. ಪ್ರಸ್ತುತ ಮಾಹಿತಿ ತಂತ್ರಜ್ಞಾನ ಸಮಸ್ಯೆಗಳು, ದ್ವಂದ್ವಗಳು, ಬೆಳವಣಿಗೆಯ ಕ್ಷೇತ್ರಗಳನ್ನು ಮುಂಬರುವ ಸ್ವರೂಪವನ್ನು ಗಮನಿಸಬಹುದು ಮತ್ತು ಕಾಣಿಸುವಷ್ಟು ಕಾಣದ ಮಾಹಿತಿಗಳನ್ನು ಗಮನಿಸಬಹುದು.

**ತಂತ್ರಜ್ಞಾನದೊಂದಿಗೆ ಬೆಳೆದ ಸಮಸ್ಯೆಗಳು ಮತ್ತು ಕಾಣಬೇಕಾದ ಪರಿಹಾರಗಳು**

ಬೆಳವಣಿಗೆಗೆ ಸಮಸ್ಯೆಗಳು ಸಹಜವಾದರೂ, ಉಚಿತ ಬೆಳವಣಿಗೆಯೇ ಒಂದು ಸಮಸ್ಯೆ ಎಂದರೆ ಆಶ್ಚರ್ಯವೆನಿಸಬಹುದು. ಹೌದು, ಈಗ ಇಂತಹ ಸಮಸ್ಯೆಗಳು ಒಂದು ಸಮಾಜದ ಮೇಲೆ ಸಾಮಾಜಿಕ ಸಮಸ್ಯೆಯನ್ನು ಸೃಷ್ಟಿಸಿದೆ. ಬೆಂಗಳೂರಿನಲ್ಲಿ ಮಾಹಿತಿ ತಂತ್ರಜ್ಞಾನ ಸಂಸ್ಥೆಗಳು ತಂತ್ರಾಂಶ ಪಾರ್ಕಿನಲ್ಲಿ, ವಿದ್ಯುನ್ಮಾನ ನಗರವನ್ನು ಮೀರಿ, ಇಂದಿಗೆ ವಸತಿ ಪ್ರದೇಶಗಳಲ್ಲೂ ನೆಲೆಸಿವೆ. ಆ ಪ್ರದೇಶಗಳ ಅನಿರೀಕ್ಷಿತ ತೀವ್ರ ಗತಿಯ ಬೆಳವಣಿಗೆಗೆ ನಾಂದಿಯಾಗುತ್ತದೆ. ತಡೆಹಿಡಿಯದ ಬೆಳವಣಿಗೆಗೆ ನಿರೀಕ್ಷಿಸದ ಪ್ರದೇಶ, ಏರು ಪೇರಿನಲ್ಲಿ ಬೆಳೆದು, ವಿದ್ಯುತ್ ಅಭಾವ, ವಸತಿ ನಿವಾಸಗಳ ಬೆಲೆ ಏರಿಕೆ, ದಿನನಿತ್ಯ ವಸ್ತುಗಳ ಬೆಲೆ ಏರಿಕೆ ಸಹಜವಾಗುತ್ತದೆ. ವಾಹನ ದಟ್ಟಣೆಯಿಂದ ಮತ್ತು ಅಧಿಕ ಜನಸಂಖ್ಯೆಯಿಂದ ಆ ಪ್ರದೇಶವನ್ನು ಮತ್ತು ಅಂತಹ ಪ್ರದೇಶದ ರಸ್ತೆಯನ್ನು ಚಿಕ್ಕದಾಗಿಸುತ್ತದೆ. ಇಂತಹ ಬೆಳವಣಿಗೆ ಮಾಹಿತಿ ತಂತ್ರಜ್ಞಾನೇತರ ಕಾರ್ಯನಿರ್ವಹಿಸುವ ಕೆಲ ವರ್ಗಕ್ಕೆ, ಆರ್ಥಿಕ ಹಾಗೂ ಸಾಮಾಜಿಕ ಬೆಳವಣಿಗೆಗೆ ಒತ್ತಡ ತರುತ್ತಿರುವುದು ಶೋಚನೀಯ. ಇಂದು ಹಳ್ಳಿಗಳಿಗೆ

ನೀಡಬಹುದಾದ ವಿದ್ಯುತ್ ನಗರದ ಬೀದಿಗಳ ಅಲಂಕಾರಕ್ಕಾಗಿ ಬಳಸಲಾಗುತ್ತಿದೆ. ವಿದ್ಯುತ್ ಸುಧಾರಣೆಯಾಗಬೇಕಾದರೆ, ತಂತ್ರಜ್ಞಾನದ ಕೊರತೆ ನೀಗಿಸಿ, ಸೋರಿಕೆ ತಡೆಗಟ್ಟಬೇಕಾಗಿದೆ ಮತ್ತು ಸಮರ್ಪಕ ಬಳಕೆಯ ನಿಯಮಗಳ ಅಗತ್ಯವಿದೆ. ವಿದ್ಯುತ್ ವ್ಯತ್ಯಯದಿಂದ ಪಂಪ್‌ಸೆಟ್ ಹಾನಿಯಾಗಿ, ಬೆಳೆ ಹಾನಿಯಾಗಿ ರೈತರಿಗೆ ನೇರವಾಗಿ ಹಣಹೂಡಿಕೆಯ ಹಾನಿಯಾದರೆ, ಇತರ ನಾಗರಿಕರಿಗೆ ಪರೋಕ್ಷವಾಗಿ ಬೆಲೆ ಏರಿಕೆಯಿಂದ ತೊಂದರೆ ಆಗುವುದುಂಟು. ಸಮಸ್ಯೆಗಳು ಸ್ವಲ್ಪ ಹೆಚ್ಚೆಂದರೂ, ನಗರೀಕರಣದ ಕೆಲವು ಸಮಸ್ಯೆಗಳಿಗೆ ತಕ್ಷಣವೆ ಸರ್ಕಾರದ ಕ್ರಮ ಅಗತ್ಯವಿದ್ದರೆ, ಕೆಲವು ಸಮಸ್ಯೆಗಳಲ್ಲೇ ಉತ್ತರ ಸಿಕ್ಕರೆ, ಇನ್ನು ಕೆಲವು ಹಾಗೆಯೆ ಉಳಿಯುತ್ತವೆ. ಇನ್ನು ಕೆಲವು ಸಮಸ್ಯೆಗಳು ವಿದೇಶದ ಆರ್ಥಿಕ ಬೆಳವಣಿಗೆಯನ್ನು ಅವಲಂಬಿಸಿದರೆ, ಇನ್ನೂ ಕೆಲವು ವರ್ಗದಲ್ಲಿ ಅಧಿಕ ಆರ್ಥಿಕ ಬೆಳವಣಿಗೆಯಿಂದಲೇ ಆಗಿರುತ್ತವೆ. ಇನ್ನು ಮಾಹಿತಿ ತಂತ್ರಜ್ಞಾನ ಬೆಳವಣಿಗೆಯಿಂದ ಸಮಸ್ಯೆಗಳ ಅನುಗುಣವಾಗಿ ಸಂತೃಪ್ತಿಯ ಮಟ್ಟವನ್ನು ಎಷ್ಟರಮಟ್ಟಿಗೆ ಏರಬಹುದುದೆಂದು ಪರಾಂಬರಿಸೋಣ.

ಬೆಂಗಳೂರಿನ ಅಜೆಂಡಾ ಟಾಸ್ಕ್ ಫೋರ್ಸ್‌ನಲ್ಲಿ ತಂತ್ರಜ್ಞಾನ ಉದ್ಯಮದ ಗಣ್ಯರು, ಸರಕಾರಿ ಸಂಸ್ಥೆಗಳಾದ ಬಿಡಿಎ, ಮಹಾನಗರ ಪಾಲಿಕೆ ರೂಪಿತವಾಗಿದೆ. ಇಂತಹ ಒಂದು ಸಮೂಹ, ನಗರ ಬೆಳವಣಿಗೆಯ ರೂಪುರೇಷೆಗಳನ್ನು ರಚಿಸಿ ಜಾರಿಗೊಳಿಸುತ್ತಿರುವಂತೆಯೇ ಇತರ ನಗರಗಳಾದ ಮೈಸೂರು, ಮಣಿಪಾಲ, ಮಂಗಳೂರು ಮತ್ತು ಹುಬ್ಬಳ್ಳಿಯಲ್ಲಿ ಬೆಳೆಯುತ್ತಿರುವ ಮಾಹಿತಿ ತಂತ್ರಜ್ಞಾನ ಹಾಗೂ ಇನ್ನಿತರ ಉದ್ಯಮಗಳಿಗೆ ಮತ್ತು ಹೆಚ್ಚಾಗಿ ನಾಗರಿಕರಿಗೆ ಉಪಯುಕ್ತವಾಗಬೇಕು.

ಬೆಂಗಳೂರಿನ ಹಲವಾರು ಸಂಸ್ಥೆಗಳು ನಗರದಲ್ಲಿ ಹಲವೆಡೆ ತಂತ್ರಾಂಶಗಳ ಅಭಿವೃದ್ಧಿ ಕೇಂದ್ರಗಳನ್ನು ಸ್ಥಾಪಿಸಿವೆ. ಇಂತಹ ಸಂಸ್ಥೆಗಳು ಭಾರತೀಯ ವಿಜ್ಞಾನ ಸಂಸ್ಥೆಯ ಆವರಣ ಮಾದರಿಯಲ್ಲಿ ಒಂದೇ ಆವರಣದಲ್ಲಿ ಕಾರ್ಯನಿರ್ವಹಿಸಿದರೆ, ಸಂಪರ್ಕ ತಂತ್ರಜ್ಞಾನದಲ್ಲಿ ಸಂಪರ್ಕದ ವೆಚ್ಚ ಕಡಿಮೆಯಾಗುವುದಲ್ಲದೆ, ಅವರಿಗೆ ಅಗತ್ಯ ಗ್ರಂಥಾಲಯಗಳು, ಮನರಂಜನೆ ಕೇಂದ್ರಗಳು, ಕಲಿಕಾ ಕೇಂದ್ರಗಳನ್ನು, ಎಟಿಎಂ, ಬ್ಯಾಂಕ್, ಹೋಟೆಲ್, ಸಿಬ್ಬಂದಿಗಳಿಗೆ ವಸತಿ, ಇತ್ಯಾದಿ ಮೂಲಭೂತ ಸೌಕರ್ಯಗಳನ್ನು ಒಂದೆಡೆ ಪೂರೈಸಬಹುದು.

ಮಾಹಿತಿ ತಂತ್ರಜ್ಞಾನ ಉದ್ಯಮದಲ್ಲಿ ಇಂದು ಅವಶ್ಯಕತೆಗೆ ತಕ್ಕಂತೆ ಕಾಂಟ್ರಾಕ್ಟ್ ಹುದ್ದೆಗಳು ಸೃಷ್ಟಿಯಾಗುತ್ತಿವೆ. ಸಂಸ್ಥೆಗಳ ಗುರಿ 'ಹೆಚ್ಚಿನ ಲಾಭಾಂಶ' ಎಂಬುದು ಮಾತ್ರವೇ ಆಗಿರುವುದರಿಂದ ಈ ಕಾಂಟ್ರಾಕ್ಟ್ ಮಾಲೀಕರಿಗೆ ಒಂದು ಉಪಯೋಗಿ ಅಸ್ತ್ರವಾಗಿ ಬಿಟ್ಟಿದೆ. ಇಂದು ಈ ಕಾಂಟ್ರಾಕ್ಟ್ ಎಂಬುದು ಕೇವಲ ಒಪ್ಪಬಹುದಾದ ಕಂಪನಿ - ಕಂಪನಿ ಮಟ್ಟವನ್ನು ಮೀರಿ ಕಂಪನಿಯ ಎಲ್ಲಾ ಅಥವಾ ಬಹುತೇಕ ಕೆಲಸಗಾರರು ಗುತ್ತಿಗೆ ಆಧಾರದ ಮೇಲೆ ಕೆಲಸಮಾಡುವ ಅನರ್ಥಕಾರಿ ಹಂತ ತಲುಪಿದೆ. ಆದಾಗ್ಯೂ, ಕೆಲವು ಸಂಸ್ಥೆಗಳು ಕಾರ್ಮಿಕರ ಪರ ನಿಲುವು ತಳೆದಿರುವುದುಂಟಾದರೂ ಅದೂ ಉತ್ಪಾದನೆ ಹೆಚ್ಚಿಸುವ ಮ್ಯಾನೇಜ್‌ಮೆಂಟ್ ತಂತ್ರವಾಗುತ್ತಿದೆ ! ಗಣಕೀಕರಣದಿಂದ ಕೌಶಲ್ಯಗಳನ್ನು ಗಣಕ ಯಂತ್ರಗಳಿಗೆ ವರ್ಗಾಯಿಸಿ, ಗಣಕಯಂತ್ರಗಳಿಗೆ ಕೌಶಲ್ಯ ತುಂಬುವವರಿಗೆ ಉದ್ಯೋಗ ಲಭಿಸಿದರೆ, ಕೌಶಲ್ಯ ಮೆರೆಯುತ್ತಿದ್ದವರು, ಇತರೇ ಕೆಲಸವನ್ನಾಧರಿಸಿ ಅಥವಾ ಇನ್ನೂ ಸಣ್ಣ ಪ್ರಮಾಣದ ಕೆಲಸ ಮಾಡುವುದುಂಟು. ಕೆಲಸದ ಅಭದ್ರತೆ ಇಂದು ಐಟಿ ಕ್ಷೇತ್ರದಲ್ಲಿ ಕಾರ್ಮಿಕ ಸಂಘಗಳು ಇಲ್ಲವಾದ್ದರಿಂದ, ಸಂಸ್ಥೆಗಳು ಲಾಭಾಂಶ ಹೆಚ್ಚಿಸುವತ್ತ ದೃಷ್ಟಿ ಹೆಚ್ಚಾಗಿದ್ದರಿಂದ, ಇತರೆ ಕೆಲವು ಕ್ಷೇತ್ರಗಳಲ್ಲಿ ಗಣಕೀಕರಣ ಹೆಚ್ಚಾಗಿ ಮಾನವ ಮಧ್ಯಸ್ಥಿಕೆ ಕಡಿಮೆಯಾಗಿರುವುದರಿಂದ ಇದೇ ಹಾದಿ ಹಿಡಿಯುತ್ತಿವೆ, ಹಾಗಾಗಿ ಕೆಲಸದ ಅಭದ್ರತೆ ಸರ್ವವ್ಯಾಪಿಯಾಗುತ್ತಿದೆ.

ತಂತ್ರಜ್ಞಾನದಿಂದ ಕೆಲಸದ ವೇಗ ಹೆಚ್ಚಾದಷ್ಟೂ ಇನ್ನೂ ಹೆಚ್ಚಿನ ಕೆಲಸವಾಗುವುದನ್ನು ನಿರೀಕ್ಷಿಸುತ್ತಿದ್ದೇವೆ ಮತ್ತು ಹೆಚ್ಚು ಮಾಡುತ್ತಲಿದ್ದೇವೆ.

ಮಾಹಿತಿ ತಂತ್ರಜ್ಞಾನ ಉದ್ಯೋಗಿಗಳು ಇತರ ಉದ್ಯೋಗಿಗಳಿಗಿಂತ ಕೆಲಸ ಸಂಬಂಧೀ ಒತ್ತಡದಿಂದ ಮಾನಸಿಕ ಒತ್ತಡಗಳಿಗೆ ಸಿಲುಕಿ ಇತರ ಹಲವು ಆರೋಗ್ಯ ಸಮಸ್ಯೆಗಳಿಗೆ ತುತ್ತಾಗುತ್ತಿದ್ದಾರೆ; ಮುಖ್ಯವಾಗಿ ರಕ್ತದೊತ್ತಡ, ಪಾರ್ಶ್ವವಾಯು, ಹೃದಯ ಸಂಬಂಧೀ ಕಾಯಿಲೆಗಳು ಇವರಲ್ಲಿ ಹೆಚ್ಚಾಗಿವೆ.

ಮಾಹಿತಿ ತಂತ್ರಜ್ಞಾನದ ಸುತ್ತಲಿನ ಸಮಾಜದ ಸಂತೃಪ್ತಿ ಬಳಿಕ ಆ ಸಮಾಜಕ್ಕೆ, ಮಾಹಿತಿ ತಂತ್ರಜ್ಞಾನದ ಅಗತ್ಯದ ಸಂತೃಪ್ತತೆ ಬಗ್ಗೆ ಗಮನಿಸಬೇಕು. ಆ ಅಗತ್ಯಗಳು ಪ್ರತಿಯೊಬ್ಬರಲ್ಲೂ ಬದಲಾದರೂ, ತೀರಾ ಅಗತ್ಯವಿರುವ ಕಡೆ ಗಮನ ಹರಿಸೋಣ. ದೂರವಾಣಿಯ ಸಂತೃಪ್ತಿಯನ್ನು ಸುಲಭವಾಗಿ ಹೇಳುವುದಾದರೆ, ಪ್ರತಿಯೊಬ್ಬ ನಾಗರಿಕನಿಗೆ ಸಂಚಾರಿ ದೂರವಾಣಿಯಲ್ಲೂ, ಸಾಮಾನ್ಯ ದೂರವಾಣಿಯಲ್ಲೂ ತತ್‌ಕ್ಷಣ ತನಗೆ ಬೇಕಾದ ಕಡೆ ವಿಚಾರ ವಿನಿಮಯ ಮಾಡುವುದು. ನೇರವಾಗಿ, ಕಡಿಮೆ ವೆಚ್ಚದಿಂದ ಮಾಹಿತಿ ತಂತ್ರಜ್ಞಾನ ತಲುಪಬೇಕಾದರೆ ಟಿವಿ ಕೇಬಲ್ ಸಹಾಯದಿಂದ, ಎಲ್ಲ ಜನರ ದಿನನಿತ್ಯದ ಕೆಲಸ ಕಾರ್ಯಕ್ಕೆ ನೇರವಾಗಿ ಉಪಯುಕ್ತವಾಗುವಂತೆ ಸಂಚಾರಿ ತಂತ್ರಜ್ಞಾನ ಅಳವಡಿಕೆಯಿಂದ ಮಾಹಿತಿ ತಂತ್ರಜ್ಞಾನ ಬಳಕೆಯಾಗಬೇಕು.

ವಿದ್ಯುನ್ಮಾನ ಆಡಳಿತದಿಂದ ಅರಿವು, ಅರಿವಿನಿಂದ ಆರ್ಥಿಕ ಚಟುವಟಿಕೆಗಳ ಬದಲಾವಣೆ ಮತ್ತು ಹೊಸ ಉದ್ಯೋಗ ಸೃಷ್ಟಿಯಾಗುತ್ತದೆ. ಆದರೆ ಮಾಹಿತಿ ತಂತ್ರಜ್ಞಾನ ಹೆಚ್ಚಾಗಿ ನಗರಗಳಲ್ಲಿ ಕೇಂದ್ರೀಕೃತವಾಗಿರುವುದರಿಂದ ಗ್ರಾಮ ಮತ್ತು ನಗರದ ನಡುವಿನ ಅಂತರ ಇನ್ನೂ ಹೆಚ್ಚಾಗಿದೆ. ಇಂದು ಪ್ರತಿ ನಾಗರಿಕನಿಗೂ ಮಾಹಿತಿ ತಂತ್ರಜ್ಞಾನದ ಕನಿಷ್ಠ ತಿಳುವಳಿಕೆಯ ಅಗತ್ಯವಿದೆ. ಗಣಕ ಕಲಿಕೆಯಲ್ಲಿ ವಯಸ್ಸಿನ ಅಡ್ಡಿ ಬರುವುದಿಲ್ಲ. ತರಬೇತಿ ಮತ್ತು ಅಭ್ಯಾಸದಿಂದ ಅವಶ್ಯವಾಗಿ ಕಲಿಯಬಹುದಾಗಿದೆ. ವಸ್ತುಸ್ಥಿತಿಗಳನ್ನು ಬದಲಿಸಿದರೆ, ಖಂಡಿತವಾಗಿಯೂ ಹೊಸ ಬದಲಾವಣೆಗೆ ಅಣಿಯಾಗುತ್ತಾರೆ. ಹಳ್ಳಿಗಳ ಮನಃಸ್ಥಿತಿಯನ್ನು ವೃದ್ಧಿಗೊಳಿಸುತ್ತದೆ ಕೂಡ.

ಸರಕಾರ ಇಂದು ರಾಜ್ಯದ ಎಲ್ಲಾ ಹಳ್ಳಿ ಮತ್ತು ಪಟ್ಟಣ ಪ್ರದೇಶದಲ್ಲೂ ಮಾಹಿತಿ ತಂತ್ರಜ್ಞಾನವನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸಿದರೆ ಸರಕಾರದಲ್ಲಿ ಗ್ರಾಮ ಪಂಚಾಯಿತಿವರೆಗೆ ಗಣಕೀಕರಣವಾದರೆ ಅದರ ಯೋಜನೆಗಳು ವ್ಯವಸ್ಥಿತವಾಗಿ ಎಲ್ಲಾ ಪ್ರದೇಶಗಳಲ್ಲಿ ತಿಳಿಯಬಹುದು. ಸದ್ಯದ ಪರಿಸ್ಥಿತಿ ಮತ್ತು ಮುಂದಿನ ಹಾದಿಗಳನ್ನು, ಹಣಕಾಸಿನ ಮಾಹಿತಿ, ಸಮಾಜ ಕಲ್ಯಾಣದ ಮಾಹಿತಿ, ಆರೋಗ್ಯ ಪರಿಸರ ಮತ್ತು ನೈರ್ಮಲ್ಯದ ವಿಷಯಗಳ ನೇರ ಮಾಹಿತಿ, ರೈತರಿಗೆ ವ್ಯವಸಾಯಕ್ಕೆ ಯೋಗ್ಯವಾದ ಉಪಕರಣಗಳನ್ನು ಹೊಸ ವಿಧಾನಗಳನ್ನು, ನೀರಾವರಿ, ಮಳೆನೀರು ಸಂರಕ್ಷಣೆ ಕಾರ್ಯಗಳನ್ನು, ಅಭಿವೃದ್ಧಿ ಹೊಂದಿದ ಹೊಂದುತ್ತಿರುವ ಗ್ರಾಮಗಳ ಪರಿಚಯ, ವಿಚಾರ ವಿನಿಮಯ ಅನುಕರಣೆಯನ್ನು ಮಾಡಬಹುದು. ಪ್ರಸ್ತುತ ಮಾರುಕಟ್ಟೆಯಲ್ಲಿ ಉತ್ಪನ್ನದ ಬೆಲೆಗಳನ್ನು ಆಧರಿಸಿ, ಸೂಕ್ತ ಸಮಯದಲ್ಲಿ ಉತ್ಪನ್ನಗಳನ್ನು ಬೆಳೆಯುವ ಮತ್ತು ಮಾರುಕಟ್ಟೆಗೆ ಸರಬರಾಜು ಮಾಡುವ ಬಗ್ಗೆ ಮಾಹಿತಿ ಇದ್ದರೆ ಟೊಮಾಟೊ, ಈರುಳ್ಳಿಗಳನ್ನು ರಸ್ತೆಗೆ ಚೆಲ್ಲುವುದನ್ನು ತಪ್ಪಿಸಬಹುದು. ವ್ಯವಸಾಯೋತ್ಪನ್ನಗಳ ಸಮಾನ ರೀತಿಯ ಬೆಳವಣಿಗೆಯನ್ನು ಕಾಣಬಹುದು. ಗ್ರಾಮಸ್ಥರು ವ್ಯವಸಾಯ ಮಾಡದ ಕಾಲವನ್ನು ಅನುಸರಿಸಿ ಸ್ವಯಂ ಅಭಿವೃದ್ಧಿ ಕಾರ್ಯಕ್ರಮದ ಮಾಹಿತಿ ಒದಗಿಸಬಹುದು. ಕೋಳಿಸಾಕಾಣಿಕೆ, ಹೈನುಗಾರಿಕೆ, ಮೀನುಗಾರಿಕೆಗೆ ಮಾಹಿತಿಗಳಿದ್ದರೂ ಸರಕಾರದಿಂದ ಅಗತ್ಯ ಉತ್ತೇಜನ, ಪ್ರೋತ್ಸಾಹ ಇಲ್ಲದ ಕಾರಣ ಸಮರ್ಪಕ ರೂಪದಲ್ಲಿ ಕಾರ್ಯರೂಪಕ್ಕೆ ತರಲಾಗುತ್ತಿಲ್ಲ. ಇಂತಹುಗಳನ್ನು ಸರಕಾರದ ಹೊರತಾಗಿ ಜಮೀನು ಉಳ್ಳವರ ಮತ್ತು ಹಣವಿರುವವರ ಜಂಟಿ ನಿರ್ವಹಣೆ ಆದಾಯ ಹೆಚ್ಚಿಸುವ ಮತ್ತು ಹಂಚಿಕೆಯ ಮಾಹಿತಿಯನ್ನು ರೂಪಿಸಬಹುದು. ಸರಕಾರಿ ಮತ್ತು ಸರ್ಕಾರೇತರ ಮಾಹಿತಿ ಕಾರ್ಯಾಗಾರ, ತಿಳುವಳಿಕೆ ಮತ್ತು ಅಗತ್ಯದ ಶಿಬಿರ, ಭಾಷೆಗಳ ಕೊರತೆ ನೀಗಿಸಲು ಕನ್ನಡ ಗಣಕ ಪರಿಷತ್ತು ಅಂತಹ ಸಂಸ್ಥೆಗಳಿಂದ ಅಗತ್ಯ ಕನ್ನಡ ತಂತ್ರಾಂಶ ಪೂರೈಕೆ ಮಾಡಬಹುದು. ಗ್ರಾಮಗಳಲ್ಲಿ ಪಿಸಿಗಳು, ಮಾಹಿತಿ ಕಿಯಾಸ್ಕ್ ಮತ್ತು ಸೈಬರ್ ಕೆಫೆಗಳಿಂದ ಇಂತಹ ಉಪಯೋಗವಾದರೆ, ಗ್ರಾಮಸ್ಥರಿಗೂ ಉದ್ಯೋಗ ಕಲ್ಪಿಸಿದಂತಾಗುತ್ತದೆ. ಬಡಹಳ್ಳಿಗಳ ಸುತ್ತಾ ಮಾಹಿತಿ ಮತ್ತು ಸಂಪರ್ಕಗಳ ಉಪಕರಣಗಳು ಅವರ ಹಕ್ಕು ಮತ್ತು ಅವಕಾಶಗಳಿಗೆ ಸ್ಪಂದಿಸದೆ ಇದ್ದರೆ ಅವರಿಗೆ ಅದರ ವ್ಯತ್ಯಾಸವೇ ಗೊತ್ತಿರುವುದಿಲ್ಲ. ಕರ್ನಾಟಕದ ಎಲ್ಲಾ ಸರಕಾರಿ ಪ್ರೌಢಶಾಲೆಗಳಲ್ಲಿ ಗಣಕಯಂತ್ರ ತರಬೇತಿ ಪ್ರಾರಂಭಿಸುವುದು, ಮಾಹಿತಿ ತಂತ್ರಜ್ಞಾನದಿಂದ, ಅಂತರ್ಜಾಲ ಸಂಪರ್ಕದಿಂದ, ಮಾಹಿತಿ ಸಂಗ್ರಹಣೆಯಿಂದ ಕನಿಷ್ಠ ನಗರ ಮತ್ತು ಹಳ್ಳಿ ವಿದ್ಯಾರ್ಥಿಗಳಲ್ಲಿ ಸಮತೋಲನ ಕಾಪಾಡಬಹುದು.

ವಿದ್ಯುನ್ಮಾನ ಆಡಳಿತದಿಂದ ಕರ್ನಾಟಕದ ಎಲ್ಲಾ ಸರಕಾರಿ ಸಂಸ್ಥೆಗಳು, ಇಲಾಖೆಗಳು, ಆರೋಗ್ಯ ಕೇಂದ್ರಗಳ ನಡುವೆ ಮಾಹಿತಿ ಸಂಪರ್ಕ ಕಲ್ಪಿಸಿದರೆ ಜನಸಾಮಾನ್ಯರಿಗೆ ನೇರ ಮಾಹಿತಿ ದೊರಕುತ್ತದೆ. ಇಲಾಖೆಗಳಲ್ಲಿ ವೀಡಿಯೋ ಕಾನ್‌ಫರೆನ್ಸಿಂಗ್‌ನಂತಹ ಸೌಲಭ್ಯವಿದ್ದರೆ ಗ್ರಾಮ ಪಂಚಾಯಿತಿವರೆಗೂ ಸಂಪರ್ಕಜಾಲ ಕಲ್ಪಿಸಿ ದಿನನಿತ್ಯ ಚಟುವಟಿಕೆಗಳ ನೇರ ಮಾಹಿತಿ ಸಂಗ್ರಹಣೆ ಮತ್ತು ಪರಿಷ್ಕರಣೆ, ಅಧಿಕಾರಿಗಳ ಧೋರಣೆಗಳನ್ನು ತಪ್ಪಿಸಿ ನಿರ್ಣಾಯಕ ಕ್ರಮಗಳನ್ನು ವೇಗವಾಗಿ ಜರುಗಿಸುತ್ತ ಒಂದು ಪಾರದರ್ಶಕ ಆಡಳಿತವನ್ನು ಹಳ್ಳಿಗಳಿಗೂ ತಲುಪಿಸುವ ನಿಟ್ಟಿನಲ್ಲಿ ಮಾಹಿತಿ ತಂತ್ರಜ್ಞಾನದ ಸಾಧನೆಯಿಂದ ಸರಕಾರ ಪ್ರಯೋಜನ ಪಡೆಯಬಹುದಾಗಿದೆ.

ತಂತ್ರಜ್ಞಾನದ ಪರಮಾವಧಿ ಸಾಧನೆಯನ್ನು ತತ್ಕಾಲದಲ್ಲಿ ಮಾಡಿದರೆ ಸೊಗಸಾಗಿ ಇರುತ್ತದೆ. ಅಂದರೆ, ಗಣಕಗಳು ಕೆಟ್ಟು ತಂತ್ರಾಂಶಗಳಿಂದ ನಾಶಪಡಿಸುವುದಾಗಲಿ ಸಂಪರ್ಕವನ್ನು ನಾಶ ಪಡಿಸುವುದಾಗಲಿ ಅಲ್ಲದಿದ್ದರೂ, ಕ್ರಮಬದ್ಧ ಮಾಹಿತಿಗಳನ್ನು ತಡೆಹಿಡಿಯುವುದು ಅಥವಾ ವರ್ಗಾಯಿಸದೆಯಿರುವುದು, ಅಧಿಕಾರಿಗಳ ವಿರುದ್ಧ ವಿದ್ಯುನ್ಮಾನ ಅಂಚೆಗಳಿಂದ ಎಲ್ಲಾ ವರ್ಗದ ಜನತೆಗೆ ತಿಳಿಸುವುದು, ಅಭಿಪ್ರಾಯ ಸಂಗ್ರಹಣೆ, ವಿರೋಧ ವ್ಯಕ್ತಿಪಡಿಸುವಿಕೆ ಮತ್ತು ಅಗತ್ಯ ಕ್ರಮಗಳ ಜರುಗಿಸುವುದರ ಬಗ್ಗೆ ವಿದ್ಯುನ್ಮಾನ ಅಂಚೆಗಳಿಂದ ಒತ್ತಡ ತರುವುದು.

ಇಷ್ಟೆಲ್ಲ ಅಭಿವೃದ್ಧಿಯನ್ನು ವೇಗವಾಗಿ, ಸರಕಾರ ಮತ್ತು ಮಾಹಿತಿ ತಂತ್ರಜ್ಞಾನ ಸಂಸ್ಥೆಗಳ ಸಹಕಾರದಿಂದ ಕೆಲಸ ಮಾಡಿದರೆ, ಭಾರತದಲ್ಲಿ ಒಂದು ನಿಜವಾದ ಮಾಹಿತಿ ತಂತ್ರಜ್ಞಾನ ಕ್ರಾಂತಿಯಾಗುತ್ತದೆ ಎಂದರೆ ತಪ್ಪಾಗಲಾರದು.

**ನೈತಿಕತೆ**

ಟಾಟಾ, ಬಿರ್ಲಾ ಸಂಸ್ಥೆಗಳು ಸಮಾಜದ ಉದ್ಧಾರದ ಕಾರ್ಯಗಳಲ್ಲಿ– ಅದರ ಹಿಂದಿನ ಉದ್ದೇಶ ಏನೇ ಇದ್ದರೂ – ಗಣನೀಯ ಸಾಧನೆ ಮಾಡಿವೆ. ವ್ಯವಹಾರದ ನೀತಿ ಸಂಹಿತೆ ಜೊತೆಗೆ ಸಮಾಜದ ನೀತಿ ಸಂಹಿತೆಯಲ್ಲಿ ಇಂದಿಗೆ ಮಾಹಿತಿ ತಂತ್ರಜ್ಞಾನ ಸಂಸ್ಥೆಗಳು ಅಂತಹ ಸಹಾಯ ಮಾಡುವ ಅವಶ್ಯಕತೆ ಎಂದಿಗೂ ಇರುತ್ತದೆ. ಮಾಹಿತಿ ತಂತ್ರಜ್ಞಾನ ಸಂಸ್ಥೆಗಳು ಅತೀ ವೇಗದ ನಗರೀಕರಣಕ್ಕೆ ಉನ್ನತಿಗಾಗಿ ಮೇಲ್‌ಸೇತುವೆ, ಮೆಟ್ರೋ ರೈಲುಗಳಿಗೆ ಧನ ಸಹಾಯ ಹಾಗೂ ಇನ್ನಿತರ ಮೂಲಭೂತ ಸೌಕರ್ಯವನ್ನು ಒದಗಿಸಿದರೆ ನಗರೀಕರಣಕ್ಕೆ ಉತ್ತಮ ಕೊಡುಗೆ ಆಗುತ್ತದೆ.

ಆರ್ಥಿಕವಾಗಿ ಹಿಂದುಳಿದ ಹಳ್ಳಿಗಳನ್ನು ದತ್ತು ತೆಗೆದು, ಶಾಲೆಗಳ ಗಣಕೀಕರಣ, ಮಾಹಿತಿ ತಂತ್ರಜ್ಞಾನ ಮತ್ತು ವಿಶ್ವದ ಆಗು-ಹೋಗುಗಳ ಪರಿಚಯ ಮಾಡಿಸುವುದು, ಬರಪೀಡಿತ ಪ್ರದೇಶಗಳಲ್ಲಿ ನೀರಿನ ಬಳಕೆಯಲ್ಲಿ ಮತ್ತು ಸಂರಕ್ಷಣೆಯಲ್ಲಿ ಪರಿಸರ ಕಾಪಾಡುವಲ್ಲಿ ಮಾಹಿತಿ ವಿನಿಮಯ, ಅಗತ್ಯವಾದ ಸ್ವಾವಲಂಬನೆ ಬದುಕಿಗೆ ಆರ್ಥಿಕ ನೆರವು. ಕನಿಷ್ಠವಾಗಿ ಮಾಹಿತಿ ತಂತ್ರಜ್ಞಾನ ಆವರಣ ವೃದ್ಧಿಯಿಂದ, ಹಳ್ಳಿಗಳ ಜಮೀನು ಸವಲತ್ತು ಪಡೆದಿದ್ದರ ಸಲುವಾಗಿ ಲಾಭಾಂಶದ ಶೇಕಡವನ್ನು ಅಥವಾ ರಫ್ತು ತೆರಿಗೆಯನ್ನು ಹಳ್ಳಿಗಳ ಉದ್ಧಾರಕ್ಕೆ, ಶಾಲೆ-ಕಾಲೇಜುಗಳಿಗೆ ಕಡಿಮೆ ದರದಲ್ಲಿ ತಂತ್ರಜ್ಞಾನ ಅಳವಡಿಕೆ, ಮಾಹಿತಿ ತಂತ್ರಜ್ಞಾನ ಕಾರ್ಯಾಗಾರ, ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಒದಗಿಸಿದರೆ ಸಮಾಜಕ್ಕೆ ಇಂತಹ ಸಂಸ್ಥೆಗಳು ಗಣನೀಯ ಸೇವೆ ಸಲ್ಲಿಸಿದಂತಾಗುತ್ತದೆ. ಇತರರಿಗೂ ಬುನಾದಿಯಾಗಲಿ ಎಂದು ಹರಸುವ ಕೈಗಳು ನೂರಾರಿವೆ. ಮನುಷ್ಯನಿಂದ ಮನುಷ್ಯನಿಗೆ ಅಂತರವನ್ನು ಕಡಿಮೆ ಮಾಡಿದಂತೆ ಮಹತ್ ಕಾರ್ಯವಾಗುತ್ತದೆ.

ನೈತಿಕತೆ ಹಂತ ತಲುಪದೆ ಅಥವಾ ಸಂತೃಪ್ತತೆಯ ಹಂತ ತಲುಪದೆ, ಜಾಗತೀಕರಣದ ನೆರಳಲ್ಲಿ, ಬಂಡವಾಳ ಸುಲಭವಾಗಿ ಸಂಚರಿಸಬಲ್ಲ ಇಂದಿನ ಲೋಕದಲ್ಲಿ, ತಂತ್ರಜ್ಞರು ಇನ್ನೂ ಹೆಚ್ಚು ಸಂಭಾವನೆ ಕೊಡುವ ದೇಶಗಳಾದ ಅಮೆರಿಕಾಗೆ ಹೋಗುವ ಹಾಗೆ, ಇಂದಿನ ಸಂಸ್ಥೆಗಳು ಇನ್ನೂ ಕಡಿಮೆ ವೆಚ್ಚ ತಗಲುವ ಇಂಗ್ಲಿಷ್ ಮಾತನಾಡದ ಇತರೆ ದೇಶಗಳಾದ ಚೀನಾ, ಮಲೇಶಿಯಾ, ಫಿಲಿಪೈನ್ಸ್‌ಗಳಿಗೆ ಹೋಗಬಹುದು ಮತ್ತು ಹೋಗುತ್ತಲಿವೆ.

**ಮಾಹಿತಿ ತಂತ್ರಜ್ಞಾನದೊಂದಿಗೆ ನಮ್ಮ ಬೆಳವಣಿಗೆಯ ಮುನ್ನೋಟ**

ಭವಿಷ್ಯದಲ್ಲಿ ಅನ್ನುವುದಕ್ಕಿಂತ ಮುಂದಿನ ೫-೧೦ ವರ್ಷಗಳಲ್ಲಿ ಸರಕಾರಿ ಕಾರ್ಖಾನೆ ಅಥವಾ ಪೀಣ್ಯದಲ್ಲಿರುವ ಕಾರ್ಖಾನೆಗಳಿಂದ ಹೆಚ್ಚಿನದನ್ನು ಬಯಸಲು ಕಷ್ಟವಾಗಬಹುದು. ಆದರೆ, ಮಾಹಿತಿ ತಂತ್ರಜ್ಞಾನ ಯುಗದಲ್ಲಿ, ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ, ವೇಗದ ತಾಂತ್ರಿಕ ಬೆಳವಣಿಗೆಗೆ ಅವು ನೇರವಾಗಿ ಅವಲಂಬಿತವಾಗಿರುವುದರಿಂದ ನಾವು ಇನ್ನೂ ಹೆಚ್ಚಿನದನ್ನು ಬಯಸಬಹುದು.

ಭಾರತದ ನೂರಾರು ನಗರಗಳಲ್ಲಿ, ಸಾವಿರಾರು ಕಂಪನಿಗಳು, ಲಕ್ಷಗಳಲ್ಲಿ ಉದ್ಯೋಗ ಕಲ್ಪಿಸಿ, ವಿದೇಶಕ್ಕೆ ನೇರವಾಗಿ ಅವಲಂಬಿತವಾಗಿರುವುದಕ್ಕಿಂತ ಸ್ವಾವಲಂಬನೆಯಿಂದ ಬೆಳೆಯುವುದನ್ನು ಬಯಸಬಹುದು. ವಿಶ್ವದೊಂದಿಗೆ ತೀರ ಹತ್ತಿರದ ಸಂಪರ್ಕ ಮತ್ತು ಸಂಬಂಧ, ಅಂದರೆ, ಅಮೆರಿಕದೊಂದಿಗೆ ಒಡನಾಟದಂತೆ, ಇನ್ನೂ ಹೆಚ್ಚಿನ ದೇಶಗಳೊಡನೆ ಒಡನಾಟ, ಇನ್ನೂ ಹೆಚ್ಚಿನ ವಿದೇಶದ ನೇರ ಹೂಡಿಕೆ ಮತ್ತು ಆರ್ಥಿಕ ಬೆಳವಣಿಗೆಯೊಂದಿಗೆ, ಸರಕಾರದಲ್ಲಿ ಸಂಪೂರ್ಣ ವಿದ್ಯುನ್ಮಾನ ಆಡಳಿತ ಸಾಧಿಸಬಹುದು.

ಮಾಹಿತಿ ತಂತ್ರಜ್ಞಾನದಲ್ಲಿ ಇಂದು ಸಂಶೋಧನೆ ಮತ್ತು ಅಭಿವೃದ್ಧಿಯಲ್ಲಿ ಮುಖ್ಯವಾಗಿ ತೊಡಗಿಸಿಕೊಂಡು, ಉದ್ಯಮ ಸೇವೆಗಳು ಮತ್ತು ತಯಾರಿಕ ಉದ್ಯಮದಲ್ಲಿ ಹೆಚ್ಚಾಗಿ ತೊಡಗಿಸಿಕೊಳ್ಳುವವರೆಗೆ ಉದ್ಯೋಗಾವಕಾಶಗಳು ನಿಯಮಿತವಾಗಿರುತ್ತವೆ. ಅನೇಕ ಕಡೆ ಪ್ರಸ್ತುತ ಸೇವೆಯನ್ನು ಯಾಂತ್ರೀಕರಿಸುವುದು ಮೊದಲ ಹೆಜ್ಜೆಯಾದರೆ, ಕ್ರಮೇಣ ವ್ಯವಸ್ಥಿತ ಅಭಿವೃದ್ಧಿಯನ್ನು ಸಾರ್ವಜನಿಕರ ಒತ್ತಡದಿಂದ ಮುಂದುವರಿಸಬೇಕಾಗುತ್ತದೆ. ಬಹು ಭಾಷಾದೇಶವಾದ ಭಾರತದಲ್ಲಿ ಒಂದು ಬೃಹತ್ ವರ್ಗಕ್ಕೆ ಸುಲಭವಾಗಿ ತಲುಪಬಲ್ಲ ಭಾರತೀಯ ಭಾಷೆಗಳಲ್ಲಿಯೂ ಅನೇಕ ವಾಣಿಜ್ಯ ಮತ್ತು ಉಪಯುಕ್ತ ಮಾಹಿತಿ ತಂತ್ರಾಂಶ ತಯಾರಿಸುವ ಅವಕಾಶವಿದೆ.

**ಸವಾಲುಗಳು**

ಈ ಎಲ್ಲಾ ಸಮಾಜದ ಮಾಹಿತಿ ತಂತ್ರಜ್ಞಾನ ವಲಯದ ವಿಷಯಗಳು, ಸಮಸ್ಯೆಗಳ ನಡುವೆ ಅನೇಕ ಸವಾಲುಗಳನ್ನು ಹೊರತುಪಡಿಸುವ ಹಾಗಿಲ್ಲ. ಎಲ್ಲ ಮಟ್ಟದಲ್ಲೂ ಸಮಗ್ರವಾಗಿ ಬೆಳೆಯಲು ಈ ಸವಾಲುಗಳನ್ನು ಎಲ್ಲ ದೃಷ್ಟಿಕೋನದಿಂದ ಎದುರಿಸಿ ನೀಗಿಸಬೇಕಾಗಿದೆ. ಮಾಹಿತಿ ತಂತ್ರಜ್ಞಾನ ಸಂಸ್ಥೆಗಳು ಸೆಪ್ಟೆಂಬರ್ ೧೧ರ ಅಮೆರಿಕಾದ ಮೇಲೆ ಬಾಂಬ್ ದಾಳಿ ಪರಿಣಾಮದಿಂದ ಧಕ್ಕೆಯಾಗದೆ ಹಾಗೂ ೨೦೦೦ದ ಡಾಟ್ ಕಾಮ್ ದಿವಾಳಿಯಲ್ಲಿ ಕಲಿತ ಪಾಠದಿಂದ ಬೆಳೆಯಬೇಕಾಗಿದೆ.

ಅಂತರ್ಜಾಲದಲ್ಲಿ ಕ್ರಮಬದ್ಧ ಮಾಹಿತಿಯನ್ನು ಸೂಕ್ತ ಸಮಯದಲ್ಲಿ ಜೋಡಣೆ, ಪರಿಷ್ಕರಣೆ ಮತ್ತು ಸಂರಕ್ಷಣೆ ಮಾಡುವುದು ಒಂದು ಬಹು ಮುಖ್ಯ ಕಾರ್ಯ. ತಪ್ಪು ಮಾಹಿತಿಗಳು ಅಥವಾ ಭ್ರಷ್ಟತೆ ಹೊಂದಿದ ಮಾಹಿತಿಗಳು ತಪ್ಪುವುದಿಲ್ಲವಾದರೂ ಇವುಗಳನ್ನು ಮನ್ನಿಸದೆ ಅಗತ್ಯ ಕಾನೂನು ರೂಪಿಸಬೇಕಾಗುತ್ತದೆ. ಮಾಹಿತಿ ತಂತ್ರಜ್ಞಾನಕ್ಕೆ ಸಂಬಂಧಿಸಿದ ಸೈಬರ್ ಅಪರಾಧಗಳನ್ನು ನಿಯಂತ್ರಿಸುವ ಕಾಯಿದೆಗಳನ್ನು ಯಶಸ್ವಿಯಾಗಿ ಜಾರಿ ಮಾಡಬೇಕು. ೨೦೦೦ದಲ್ಲಿ ಮಾಹಿತಿ ತಂತ್ರಜ್ಞಾನ ಕಾಯಿದೆ ಅಡಿಯಲ್ಲಿ, ವಿದ್ಯುನ್ಮಾನ ದಾಖಲೆ ಹಾಗೂ ಚಟುವಟಿಕೆಗಳಿಗೆ ಮಾನ್ಯತೆ ನೀಡಲಾಗಿದೆ. ಇಂಡಿಯನ್ ಕಾಪಿರೈಟ್ ಕಾಯಿದೆಯಲ್ಲಿ ಬೌದ್ಧಿಕ ಆಸ್ತಿ ಹಕ್ಕನ್ನು ೧೯೯೫ರಲ್ಲಿ ಸೇರಿಲಾಗಿದೆ. ಇದು ಈ ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಕಾನೂನಿಗೆ ಬಹುದೊಡ್ಡ ಹೆಜ್ಜೆಯಾಗಿದೆ. ಆದರೂ ಇಂದು ತಂತ್ರಾಂಶ ಚೌರ್ಯ ತಡೆಯುವುದು ಬಹುದೊಡ್ಡ ಸವಾಲಾಗಿ ಉಳಿದಿವೆ. ಅಗ್ಗದ ವಿದ್ಯುನ್ಮಾನ ಯಂತ್ರಗಳಿಂದ ತಂತ್ರಾಂಶವನ್ನು ಅನೇಕ ನಕಲು ಪ್ರತಿಗಳನ್ನು ಮಾಡಿ, ಒಂದು ಗಣಕಯಂತ್ರದಿಂದ ಇನ್ನೊಂದು ಗಣಕಯಂತ್ರಕ್ಕೆ ಸುಲಭವಾಗಿ ಸಾಗಿಸಬಹುದು. ತಂತ್ರಾಂಶ ಒಂದೇ ಆಗಬೇಕಿಲ್ಲ. ಇಂದು ಆಡಿಯೋ ಮತ್ತು ವಿಡಿಯೋಗಳನ್ನು ಹೆಚ್ಚಾಗಿ ನಕಲು ಮಾಡಲಾಗುತ್ತಿದೆ. ಹಲವು ಸಂಗೀತಕ್ಕೆ ಸಂಬಂಧಪಟ್ಟ ಅಂತರ್ಜಾಲಗಳಿಂದಲೂ ಸುಲಭವಾಗಿ ಗಣಕಯಂತ್ರಕ್ಕೆ ವರ್ಗಾಯಿಸಬಹುದಾಗಿದೆ. ಅಸಲಿ ಪ್ರತಿಯಿಂದ ನಕಲು ಮಾಡುವುದನ್ನು ತಂತ್ರಜ್ಞಾನದಿಂದಲೇ ತಡೆಗಟ್ಟಿದರೂ ಅನೇಕ ಮಾರ್ಗೋಪಾಯದಿಂದ ಭೇದಿಸುವುದುಂಟು. ಇಲ್ಲಿ ನಕಲು ಮಾಡಿ ಸಿಕ್ಕಿಹಾಕಿಕೊಳ್ಳುವವರಿಗೂ ಅದು ಅಪರಾಧವಲ್ಲ. ಅನೇಕ ಸರಕಾರಿ ಸ್ವಾಮ್ಯದ ಅಂತರ್ಜಾಲಗಳು, ಗಣಕಯಂತ್ರಗಳಿಗೆ ರಕ್ಷಣೆ ಅಗತ್ಯವಿದೆ. ಹಲವು ಗಣಕಗಳನ್ನು ನಾಶಪಡಿಸುವ ವೈರಸ್ ತಂತ್ರಾಂಶಗಳನ್ನು ಅಳವಡಿಸಬಹುದು ಅಥವಾ ಗೌಪ್ಯ ಮಾಹಿತಿಯನ್ನು ಕದಿಯಬಹುದು. ಇತ್ತೀಚೆಗೆ ಬಹುರಾಷ್ಟ್ರೀಯ ಸಂಸ್ಥೆಗಳು ವ್ಯವಹಾರ ಕಬಳಿಕೆಗೆ ಭ್ರಷ್ಟತೆಯ ದಾರಿಯಲ್ಲೂ ಮುಂದುವರಿದು ಮತ್ತು ಆಡಳಿತ ಧೋರಣೆಯಿಂದ ಕೆಲವು ದಿವಾಳಿಯಾಗಿವೆ. ಇದನ್ನರಿತ ಅನೇಕ ಸಂಸ್ಥೆಗಳು ಈಗಾಗಲೇ ಹಲವು ನೀತಿ ಸಂಹಿತೆಗಳನ್ನು ಜಾರಿಗೊಳಿಸಿ, ಕಡ್ಡಾಯವಾಗಿ ತಂತ್ರಾಂಶದ ಮತ್ತು ಸಂಸ್ಥೆಯ ವ್ಯವಸ್ಥೆಯ ಪರಿಶೋಧನೆಯನ್ನು ಮಾಡಿಸುತ್ತಿವೆ.

ತಂತ್ರಜ್ಞಾನ ಇಂದು ಯಾರಿಗೂ ಸೀಮಿತವಾಗಿಲ್ಲ. ವಿಶ್ವದ ಅನೇಕ ಉಗ್ರಗಾಮಿ ಸಂಘಟನೆಗಳು ಇಂದು ಉತ್ತಮವಾದ ತಂತ್ರಜ್ಞಾನ ಜಾಲ ಹೊಂದಿವೆ. ವಿಶ್ವದ ಯಾವುದೇ ಮೂಲೆಯಿಂದ ಅಥವಾ ನಾನಾ ಕಡೆಯಿಂದ ಉಗ್ರಗಾಮಿಗಳು ವಿಧ್ವಂಸಕ ಚಟುವಟಿಕೆಗಳನ್ನು ಕೈಗೊಳ್ಳಬಹುದಾಗಿದೆ. ಅಮೆರಿಕದ ಮೇಲಿನ ದಾಳಿ ಇತ್ತೀಚಿನ ಉದಾಹರಣೆ. ಒಸಾಮ ಬಿನ್ ಲಾಡೆನ್ ಉಪಗ್ರಹ ದೂರವಾಣಿ ಬಳಸಿದ್ದು ಇಂದು ಗುಟ್ಟಾಗಿ ಉಳಿದಿಲ್ಲ. ಇಂಥ ಸಂಪರ್ಕವನ್ನು ಭೇದಿಸಿ, ಕಾರ್ಯೋನ್ಮುಖರಾಗಿ ವೇಗವಾಗಿ ನಿಯಂತ್ರಿಸುವುದರಲ್ಲಿ ಸಾಮರ್ಥ್ಯ ಹೊಂದಬೇಕು.

ಇಂದಿನ ನಗರದ ಮಕ್ಕಳು ಟೀವಿ ಮತ್ತು ಗಣಕಯಂತ್ರದ ಮುಂದೆ ಹೆಚ್ಚು ಸಮಯ ಕಳೆಯುತ್ತಿದ್ದಾರೆ. ವಯಸ್ಸಿಗೆ ಮೀರಿದ ವಿಷಯಗಳ ನಿಯಂತ್ರಣ, ಉದಾಹರಣೆಗೆ ಭಯೋತ್ಪಾದನೆ ಮತ್ತು ಕಾಮ ಪ್ರಚೋದಕ ಅಂತರ್ಜಾಲಗಳು, ಇಂದಿನ ಮಕ್ಕಳಿಗೆ ಸೈಬರ್ ಕೆಫೆಗಳಲ್ಲಿ ಕಾಮ ಪ್ರಚೋದಕ ಜಾಲತಾಣಗಳೂ ನಿಯಂತ್ರಣವಿಲ್ಲದೆ ಲಭ್ಯವಾಗುತ್ತಿವೆ. ಹಿರಿಯರೊಡನೆ ಒಡನಾಟ, ಜೊತೆಯವರೊಂದಿಗಿನ ಆಟ ಎಂಬುದು ಕಣ್ಮರೆಯಾಗುತ್ತಿವೆ. ಅವರಲ್ಲಿ ಸ್ವಾರ್ಥ ಭಾವನೆ ಬಲಿಯುತ್ತಿದ್ದು ಅವರು ಸಂಪೂರ್ಣ ಸ್ವಕೇಂದ್ರೀಕೃತ ವ್ಯಕ್ತಿಗಳಾದಲ್ಲಿ ಆಶ್ಚರ್ಯವಿಲ್ಲ. ಇದರ ಸಾಮಾಜಿಕ ಪರಿಣಾಮ ಏನಾಗಬಹುದು ಎಂಬುದನ್ನು ಮನಃಶಾಸ್ತ್ರಜ್ಞರು ಯೋಚಿಸಬೇಕಿದೆ. ಮುಂದುವರೆದ ದೇಶದ ಸಮಸ್ಯೆಯಾಗಿದ್ದ ಇದು ಇಂದು ನಮ್ಮಲ್ಲೂ ಕಾಣಸಿಗುತ್ತಿದೆ. ಇಂದು ಗಣಕಯಂತ್ರ ಶಿಕ್ಷಣ ಬಹಳ ಅಮೂಲ್ಯವೆಂದು ಚಿಕ್ಕಂದಿನಿಂದಲೇ ಹೇರಲಾಗುತ್ತಿರುವುದು ಅಸಮಂಜಸ. ಗಣಕಯಂತ್ರ ಶಿಕ್ಷಣ ಮುಂದೆ ಶಿಕ್ಷಣದಲ್ಲಿ ಸೇರಬೇಕೇ ಹೊರತು ಗಣಕವೇ ಪ್ರಧಾನವಾಗಬಾರದು. ಸೃಜನಶೀಲತೆ ಬೆಳೆಯಲು ಅವಕಾಶವೀಯಬೇಕು. ಇಂದಿನ ಸಾವಿರಾರು ಭಾರತೀಯ ತಂತ್ರಜ್ಞರು ಶಾಲೆಯ ಮಟ್ಟದಲ್ಲಿ ಗಣಕಯಂತ್ರ ಶಿಕ್ಷಣ ಪಡೆದಿಲ್ಲವೆಂಬುದನ್ನು ಗಮನಿಸಬೇಕು.

ಈಗಿನ ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಮಾಹಿತಿ ತಂತ್ರಜ್ಞಾನದಿಂದ ಮಾತ್ರ ಬೆಳೆದಿಲ್ಲ. ಇತರೆ ಉದ್ಯಮಗಳಿಗೆ ಮಾಹಿತಿ ತಂತ್ರಜ್ಞಾನ ಒಂದು ಬೆನ್ನೆಲುಬಾಗಿದೆ ಅಥವಾ ಅದರ ಬೆಳವಣಿಗೆಗೆ ಮುಖ್ಯ ಪಾತ್ರವಾಗಿದೆ. ಹಾಗೆಯೇ ಭಾರತದಲ್ಲೂ ಕೂಡ ಮಾಹಿತಿ ತಂತ್ರಜ್ಞಾನ ಮಾತ್ರ ಬೆಳೆದರೆ ಸಾಲದು ಅದರ ಉಪಯುಕ್ತತೆ, ಇತರೆ ಎಲ್ಲಾ ಉದ್ಯಮಗಳಿಗೆ ಅವಲಂಬಿತ ಉದ್ಯಮಗಳಿಗೆ ಪೂರಕವಾಗಬೇಕು. ಇವತ್ತಿನ ದೂರವಾಣಿ ಸಾಂದ್ರತೆ ಪ್ರತಿ ನೂರು ಜನಸಂಖ್ಯೆಗೆ ಶೇಕಡ ೪.೫ರಷ್ಟು ಮತ್ತು ಮಾಹಿತಿ ತಂತ್ರಜ್ಞಾನ ಸಾಂದ್ರತೆ ಪ್ರತಿ ನೂರು ಜನಸಂಖ್ಯೆಗೆ ೦.೬ರಷ್ಟು ಲಭ್ಯವಿದೆ. ಇವು ಇನ್ನೂ ಹೆಚ್ಚಾಗಿ ಸಂತೃಪ್ತಿಯ ಮಟ್ಟವನ್ನು ತಲುಪಬೇಕು. ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನ ಸಮಾಜ ಮತ್ತು ಸರಕಾರದ

ನರಮಂಡಲವಾಗಿ ಬೆಳೆಯಬೇಕು. ತಯಾರಿಕಾ ಘಟಕಗಳಲ್ಲಿ ಹೆಚ್ಚಾಗಿ ಮಾಹಿತಿ ತಂತ್ರಜ್ಞಾನ ಬಳಕೆಯಾಗಬೇಕು. ಆದಾಯ ಹೆಚ್ಚುವ ದಕ್ಷಿ ಮತ್ತು ಕಾರ್ಯದಕ್ಷತೆಗೆ ಯಂತ್ರಾಂಶ ವರ್ಗದಲ್ಲಿ ಹೆಚ್ಚು ಪ್ರಾಧಾನ್ಯತೆ ಕೊಡಬೇಕಾಗಿದೆ. ಮಾಹಿತಿ ತಂತ್ರಜ್ಞಾನ ವ್ಯವಸಾಯ, ಆಹಾರ, ಶಿಕ್ಷಣ, ಉದ್ಯೋಗ, ಹಣಕಾಸು, ಮಾನವ ಅಭಿವೃದ್ಧಿ ಮತ್ತು ಪ್ರಾದೇಶಿಕ ಸಮತೋಲನೆ ಕಾಪಾಡುವಲ್ಲಿ ಮಹತ್ವದ ಒತ್ತು ನೀಡಬೇಕು. ಬೆಳೆಯುತ್ತಿರುವ ಜನಸಂಖ್ಯೆಗೆ, ನಿರುದ್ಯೋಗ ಸಮಸ್ಯೆಗೆ ಸ್ವಲ್ಪಮಟ್ಟಿಗೆ ನಗರಗಳಿಗೆ ಒಳ್ಳೆಯದಾಗಿದ್ದರೂ ಗ್ರಾಮಾಂತರ ಪ್ರದೇಶ ಹಾಗೆಯೇ ಉಳಿದಿದೆ. ಸಂಸ್ಥೆಗಳು ಮುಖ್ಯವಾಗಿ ಮಹಾನಗರಗಳಿಗೆ ಕೇಂದ್ರೀಕೃತವಾಗಬಾರದು; ಇತರೆ ಪ್ರಮುಖ ಪಟ್ಟಣಗಳಲ್ಲಿ ನೆಲಸಿದರೆ ಸ್ಥಳೀಯ ವಿದ್ಯಾರ್ಥಿಗಳಿಗೆ ಉದ್ಯೋಗಾವಕಾಶ, ಸ್ಥಳೀಯ ಜನಾಂಗದ ಅಭಿವೃದ್ಧಿಯಲ್ಲಿ ಸಮತೋಲನ ಕಾಪಾಡಬಹುದು. ಗ್ರಾಮಾಂತರ ಪ್ರದೇಶಗಳಿಗೆ ನೇರವಾಗಿ ಮತ್ತು ಪರೋಕ್ಷವಾಗಿ ಉದ್ಯೋಗ ಸೃಷ್ಟಿಯಾಗುವಂತಾಗಿರಬೇಕು. ಹಾಗಿದ್ದಲ್ಲಿ ಮಾತ್ರ ತಂತ್ರಜ್ಞಾನ ಅವಶ್ಯಕತೆಯ ಮಾಹಿತಿ ಇತರೆ ಪಟ್ಟಣಗಳಿಗೂ ಅಗತ್ಯವೆನಿಸುತ್ತದೆ.

ಪ್ರಾದೇಶಿಕ, ಪರಿಸರ ಮತ್ತು ಜನಾಂಗದ ಮೌಲ್ಯವನ್ನು ಅರಿತು ಮೌಢ್ಯಗಳಿಗೆ ಮಂಗಳ ಹಾಡುವಲ್ಲಿ ಒಂದು ಹೊಸ ಸುಸಂಸ್ಕೃತ ಸಮಾಜದತ್ತ ದೃಷ್ಟಿಹಾಯಿಸಬೇಕು. ತಂತ್ರಜ್ಞಾನ ಬಡತನ ನಿರ್ಮೂಲನೆ, ಆರೋಗ್ಯ ಸುಧಾರಣೆ, ಸಾಕ್ಷರತೆ ಹೆಚ್ಚಿಸುವಿಕೆ, ಎಲ್ಲ ಮಟ್ಟದಲ್ಲೂ ಭ್ರಷ್ಟತೆ ನಿರ್ಮೂಲನೆ, ಆಡಳಿತ ಸುಧಾರಣೆ ಕೆಲಸಗಳಲ್ಲಿ ಬಳಕೆಯಾಗಬೇಕು. ಆಗಲೇ ಮಾನವನ ಸಮಗ್ರ ಅಭಿವೃದ್ಧಿಗೆ ನಾಂದಿಯಾಗುತ್ತದೆ.

ವಿಶ್ವದ ಅಥವಾ ಭಾರತದ ಅತಿ ಶ್ರೀಮಂತ ಒಬ್ಬ ಮಾಹಿತಿ ತಂತ್ರಜ್ಞಾನ ಉದ್ಯಮಿ ಎನಿಸಿದರೆ ಸಂತೋಷವನ್ನುಂಟುಮಾಡಬಹುದು. ಆದರೆ, ಅದು ಅರ್ಥ ಪೂರ್ಣವಾಗುವುದು, ಪ್ರತಿ ನಾಗರಿಕ ಕನಿಷ್ಠ ಸ್ವಾವಲಂಬಿಯಾಗಿದ್ದರೆ ಮಾತ್ರ. ಆದರೆ ಅಂತೆಯೇ ನಿಧಾನಗತಿಯಲ್ಲಿ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರದಲ್ಲಿ ಇನ್ನೂ ತೀರಾ ಹೆಚ್ಚು ಕಡು ಬಡವರಿದ್ದಾರೆ ಎಂದರೆ ಅದು ಶೋಚನೀಯ. ಮೌಲ್ಯಾಧಾರಿತ ಬದುಕನ್ನು ರೂಪಿಸಬೇಕಾದ ಕಾಲದಲ್ಲಿ, ಕಾಣಿಸುವ ಮಾಹಿತಿ ತಂತ್ರಜ್ಞಾನ ಮೌಲ್ಯಗಳೊಂದಿಗೆ ಕಾಣದಿರುವ ಮಾನವ ಮೌಲ್ಯಗಳು ಬೆಳೆಯಬೇಕು. ಇದು ಈಗಿನ ಮಾನವ ಜನಾಂಗದ ಗುರಿಯಾಗಬೇಕು.

ಪ್ರಭು ಎಸ್. ಕೂಡ್ಲಾಪುರ
೧೦, ೮ನೇ ಅಡ್ಡರಸ್ತೆ, ಚೋಳೂರು ಪಾಳ್ಯ, ಮಾಗಡಿ ರಸ್ತೆ ಬೆಂಗಳೂರು - ೫೬೦ ೦೨೩.



## ಕಾಯಾ - ಮಾಯಾ



ನಿನ್ನ ಕೂಡೆ ಮಾತಾಡುವುದೆಂದರೆ ತಾಯಿ
ಏಸೋ ಜನ್ಮದ ಅಂಟಿನ ನಂಟಿಗೆ ಬಾಯಿ
ಬಂದಂತೆ ಒಳಗಿನೊಳಗಿನ ಬೆಳಗು
ಬಯಲ ತುಂಬಿದ ಹಾಗೆ ನೆನಪು ಮಲ್ಲಿಗೆ

ಗೊತ್ತಾಗುವುದಿಲ್ಲ ನಾಭಿಮೂಲದ ನಾದ
ಪದವಾಗಿ ಪಡಿ ಪದಾರ್ಥವಾಗಿ ಹರಿವ ಬಗೆ
ಮನೆದೇವರೆದುರಿನ ಜೋಡಿ ನಂದಾದೀಪ
ತಲೆತಲಾಂತರದಿಂದ ಮನವ ಬೆಳಗಿದೆ ಹೀಗೆ

ನಿನ್ನ ಜೊತೆ ಮಾತಾಡುವುದೆಂದರೆ ಗುಹೇಶ್ವರ
ಲಿಂಗವ ಅಂಗೈಯಲ್ಲಿ ಧರಿಸಿ ಹರಿದಂತೆ
ಗಣೆಯ ನಾದದಲಿ ಜುಂಜಪ್ಪ ಜೀವ ತಳೆದಂತೆ
ಸಾಲು ಮರದಕ್ಕನಲಿ ಜೀವ ಜಂಗಮವೆಲ್ಲ ಉಲಿದಂತೆ

ಅನುಬಂಧವೆಂಬುದಕೆ ಅರ್ಥ ಹೇಳಲುಬಹುದೆ ?
ಹೇಳಿದರ್ಥದ ಮಿತಿಗೆ ಬಯಲ ಬಂಧಿಸಲಹುದೆ ?
ಪಂಚಭೂತವನುಂಡು ಬೀಜಮೊಳೆಯುವ ಹಾಗೆ
ಮಂದಾಗ್ನಿ ಮರದೊಳಗೆ ಪರಿಮಳದ ಸೋಗೆ

ಹಗಲು ಇರುಳಿನ ಪರಿವೆ ಕಳೆದು ಮಾತು ಬೆಳೆದು
ಮಾತು ಮಾತು ಮಾತು ಹೂತು ಮೌನಗಂಧ ಬಯಲು
ಅಕ್ಕ ಹೊಕ್ಕ ಕದಳಿಯೊಳಗೆ ಕಾಯ ಮಾಯ
ಉರಿವ ಉಯ್ಯಾಲೆಯೊಳಗೆ ಜೀವಜಗಂಜ್ಯೋತಿ

ಎಸ್. ಜಿ. ಸಿದ್ದರಾಮಯ್ಯ, ಹೊಂಬೆಳಗು, ನಲಂದ ಶಾಲೆ ಪಕ್ಕ
ರಾಘವೇಂದ್ರನಗರ ಬಡಾವಣೆ, ತುಮಕೂರು - ೫೭೨ ೧೦೩.

ಏಕಾಂಕ

# ಬಾಗಿಲು

ಚಿ. ಶ್ರೀನಿವಾಸರಾಜು

*(ಮಧ್ಯಮ ವರ್ಗದ ಮನೆ. ರಾತ್ರಿ ಸುಮಾರು ಹತ್ತರ ಸಮಯ. ಇಳಿವಯಸ್ಸಿನ ವ್ಯಕ್ತಿಯೊಬ್ಬ ತೂಗು ಕುರ್ಚಿಯಲ್ಲಿ ಕುಳಿತಿದ್ದಾರೆ. ಹೊರಗೆ ಮಳೆ ಸುರಿಯುತ್ತಿದೆ. ಇದ್ದಕ್ಕಿದ್ದಂತೆ ಹೊರಗಡೆಯಿಂದ ಜೋರಾಗಿ ಬಾಗಿಲು ಬಡಿವ ಸದ್ದು)*

**ವ್ಯಕ್ತಿ**: *(ನಿಧಾನವಾಗಿ ಏಳುತ್ತಾ)* ಇಷ್ಟು ಹೊತ್ತಿನಲ್ಲಿ ಯಾ...ರಪ್ಪಾ?

**ಹೆಣ್ಣು**: *(ಒಳಗಿನಿಂದ ಇಳಿವಯಸ್ಸಿನ ಹೆಣ್ಣುಧ್ವನಿ)* ನೋಡ್ರೀ... ಸರಿರಾತ್ರೀಲಿ ಯಾರೋ ಬಾಗಿಲು ಬಡಿತಾ ಇದಾರೆ...

**ವ್ಯಕ್ತಿ**: ನಮ್ಮ ಮನೆಗೆ?... ಸುರಿಯೋ ಮಳೆಯಲ್ಲಿ?... ಬೀಸೊ ಗಾಳಿಯಲ್ಲಿ? *(ಬಾಗಿಲಕಡೆ ಮರೆಯಾಗುವರು)*

*(ಬಾಗಿಲ ಕಡೆಯಿಂದ ಮಳೆಯಲ್ಲಿ ಒದ್ದೆಯಾದ ಯುವಕ ನುಗ್ಗಿ ಬರುತ್ತಾನೆ. ಹಾಕಿಕೊಂಡಿದ್ದ ಜರ್ಕಿನ್‌ನಿಂದ ನೀರು ತೊಟ್ಟಿಕ್ಕುತಿದೆ. ಹೊರಗಡೆ ನಾಯಿ ಬೊಗಳುವ ಸದ್ದು)*

**ವ್ಯಕ್ತಿ**: *(ಗಾಬರಿಯಿಂದ)* ಯಾರಪ್ಪ ನೀನು?.... ಎಲ್ಲಿಂದ ಬಂದೆ? ಯಾರು ಬೇಕಿತ್ತು?....

**ಯುವಕ**: ನಿಮ್ಮನ್ನ ನೋಡಬೇಕು ಅಂತಾನೆ ಬಂದೆ.... *(ನಗು)* ನಿಮಗೆ ನನ್ನ ಗುರ್ತು ಸಿಕ್ಕಲಿಲ್ಲವಾ?... ಸರಿಹೋಯ್ತು ಬಿಡಿ... ಅತ್ತೆ ಎಲ್ಲಿ? ಹೇಗಿದ್ದಾರೆ?... *(ಜೋರಾಗಿ)* ಅತ್ತೇಽಽಽ...

**ವ್ಯಕ್ತಿ**: *(ಏನೇನು ಅರ್ಥವಾಗದೆ ಅಡಿಗೆಮನೆ ಕಡೆ ನೋಡುತ್ತಾ)* ಬೇಗ ಬರ್ತೀಯಾ... ಯಾರೋ ಬಂದಿದಾರೆ... ನಿನ್ನ ಕೇಳ್ತಾ ಇದಾರೆ...

**ಯುವಕ**: ಯಾರೋ ಬಂದಿದಾರೆ?... ನಾನು ಯಾರೋ ಅಲ್ಲ, ನಿಮ್ಮ ಅಳಿಯ... ದೂರದ ಅಳಿಯ.... ನಿಮ್ಮ ಮನೆ ಹುಡುಕಿಕೊಂಡು ಬರೋದ್ರಲ್ಲಿ ಒಂದು ಥ್ರಿಲ್ ಇದೆ.... ನಿಮಗೊಂದು surprise ಕೊಡೋಣ ಅಂತಾನೆ ಬಂದೆ... ನಾನು ನಿಮ್ಮ ಹತ್ತಿರದ, ಹತ್ತಿರದ, ಸಂಬಂಧಿ... ಈ ಜರ್ಕಿನ್ ಇಲ್ಲಿ ಹಾಕಬಹುದೆ? *(ಸದಾ ಲವಲವಿಕೆಯಿಂದ, ಉತ್ಸಾಹದಿಂದ ಇರುತ್ತಾನೆ)*

**ವ್ಯಕ್ತಿ**: ಹಾಕಿ ಹಾಕಿ... ಪರವಾಗಿಲ್ಲ... ನೀರು ಸುರಿದೋಗುತ್ತೆ

**ಹೆಣ್ಣು**: *(ಒಳಗಿನಿಂದ ಬರುತ್ತಾ)* ಯಾರು?... ಯಾವೂರು?... ಯಾರ ಕಡೆ ಸಂಬಂಧ?

**ಯುವಕ**: ನಿಮ್ಮ ಪ್ರಶ್ನೆಗಳು ಸಿಟ್ಟು ಬರಿಸುತ್ತೆ?... ಯಾರು ಅನ್ನೋದಕ್ಕೆ ಒಂದು ಕೊನೇನೇ ಇಲ್ಲವೆ?... ನಿಮ್ಮ ಪ್ರಶ್ನೆಗಳಿಗೆಲ್ಲ ಒಂದು full stop ಹಾಕ್ತೀನಿ.... ಹೋಗ್ಲಿ, ಮೊದಲು ಒಂದು ಟವಲ್ ಕೊಡಿ.... ತಲೆ ಒರೆಸಿಕೊಳ್ಳೋಕೆ... ಹಾಗೇ ಒಂದು ಲೋಟ ಬಿಸಿಬಿಸಿ ಕಾಫಿ ರೆಡಿಮಾಡಿ ಅತ್ತೆ.... ನಿಧಾನವಾಗಿ ಊಟ ಮಾಡಿದ್ರಾಯ್ತು...

**ಹೆಣ್ಣು**: *(ಸ್ವಗತ)* ಯಾರು ಅಂತ ಗೊತ್ತಾಗತಾನೆ ಇಲ್ವೆ?... ಇವರ ಕಡೆ ಹುಡುಗನೇ ಇರಬೇಕು...! ಇಷ್ಟು ಸಲೀಸಾಗಿ ಮನೆಗೆ ನುಗ್ಗಿ, ಎಷ್ಟೋ ವರ್ಷಗಳಿಂದ ಕಂಡವನಂತೆ ಮಾತು ಹುರಿತಾನೆ...! ...ಒಂದೂ ಅರ್ಥವಾಗ್ತಿಲ್ಲ... *(ಪ್ರಕಾಶ)* ಮಳೇಲ್ಲಿ ಬಂದಿದಿರಾ... ಸುಧಾರಿಸಿಕೊಳ್ಳಿ... ಕಾಫಿ ತಂದುಕೊಡುತ್ತೇನೆ. *(ಅಡಿಗೆ ಮನೆ ಕಡೆ ಹೊರಡುವಳು)*

**ವ್ಯಕ್ತಿ**: ನಮಗೂ ವಯಸ್ಸಾಯಿತು ನೋಡಿ... ಸಂಬಂಧಗಳು ಮರೆತು ಹೋಗಿರುತ್ತೆ... ನೀವು ನಮ್ಮ ಮನೆ ಕಡೆಯವರೊ? ಅಥವಾ... ನಮ್ಮ ಮನೆಯವರ ಕಡೆಯವರೊ?... ಗೊತ್ತಾಗಲಿಲ್ಲ... ಏನೂ ತಿಳಿದುಕೊಳ್ಳಬೇಡಿ...

**ಯುವಕ**: *(ನಗು)* ನಾನು ಎಲ್ಲರ ಕಡೆಯವನು.... ನಾನು ನಿಮಗೆ ಸಂಬಂಧ ಅಂದಮೇಲೆ, ಅತ್ತೆಗೂ ಸಂಬಂಧಿಯಾದೆ... ನೋಡಿ ಮಾವ... ನಿಮ್ಮ ತಾತನೂ ಮತ್ತು ನಮ್ಮ ಮುತ್ತಾತನೂ ಅಣ್ಣತಮ್ಮಂದಿರು.... ನಮ್ಮ ತಂದೆ ಇದನ್ನ ಆಗಾಗ ಹೇಳ್ತಾನೆ ಇರ್ತಾರೆ.... ಈಗ ನಾನು ಮತ್ತು ನಮ್ಮಪ್ಪ ಇರೋದು ಚಿದಂಬರದಲ್ಲಿ.... ಈ ಊರಿನಲ್ಲಿ ಕೆಲಸ ಬಿತ್ತು... ನಿಮ್ಮನ್ನ ತಲಾಸ್‌ಮಾಡಿಕೊಂಡು ಬಂದೇಬಿಟ್ಟೆ... ನಿಮ್ಮ ಅಡ್ರೆಸ್‌ನ, ನಮ್ಮ ಅಪ್ಪನ ಹತ್ತಿರ ಕೇಳಿದೆ... ನಮ್ಮ ಅಮ್ಮನ ಹತ್ತಿರ ಕೇಳಿದೆ... ಅವರಿಗೆ ಸರಿಯಾಗಿ ಗೊತ್ತಿರಲಿಲ್ಲ... ಅಲ್ಲಿರಬಹುದು, ಇಲ್ಲಿರಬಹುದು ಅಂತ ಲೆಕ್ಕಾಚಾರ ಹಾಕಿದ್ರು, ಅಡ್ರೆಸ್ ಪತ್ತೆಯಾಗಲಿಲ್ಲ.... ಈ ಊರು ಅಂತ ಗೊತ್ತಿತ್ತು..... ಹೇಗೋ... ಅವರಿವರನ್ನ ಕೇಳಿಕೊಂಡು... ಅಲ್ಲಿ ಇಲ್ಲಿ ಹುಡುಕಿಕೊಂಡು.... ಮಳೇಲಿ ನೆನೆಕೊಂಡು... ಬಂದೇಬಿಟ್ಟೆ... ಈ ರಾತ್ರೀಲಿ ನಿಮ್ಮ ಮನೆಗೆ ನುಗ್ಗೇಬಿಟ್ಟೆ

**ವ್ಯಕ್ತಿ**: ಬಂದದ್ದು ಒಳ್ಳೇದೇ ಆಯ್ತು.... ಅಂದಹಾಗೆ ನಿಮ್ಮ ತಂದೆ?!... ನಿಮ್ಮ ತಾಯಿ?!

**ಯುವಕ**: ಅವರಿಗೇನು?... ಜುಂ ಅಂತ ಇದ್ದಾರೆ... ನೋಡಿ ಮಾವ, ನಮ್ಮ ತಾತ ಇಲ್ಲಿಂದ ವ್ಯಾಪಾರಕ್ಕೇ ಅಂತ ಹೋಗಿ ಅಲ್ಲೇ ನಿಂತುಬಿಟ್ಟರು. ....ನಮ್ಮಪ್ಪನೂ ಅಲ್ಲೇ ಇದ್ದುಬಿಟ್ಟರು.... ನಂದೀಗ, ಸುತ್ತಾಡೊ ಕೆಲಸ... ಇವತ್ತು ಇಲ್ಲಿ, ನಾಳೆ ಅಲ್ಲಿ....

**ವ್ಯಕ್ತಿ**: ನಮ್ಮದು ತಮ್ಮದು ಅಂತ ಬಂದೆಯಲ್ಲಾ..... ಅದೇ ದೊಡ್ಡ ಸಂತೋಷ. ......ಅಂದಹಾಗೆ ನಿಮ್ಮಪ್ಪನ ಹೆಸ್ರು?

**ಯುವಕ**: ನಮ್ಮ ತಾತ, ನಮ್ಮಪ್ಪನಿಗೆ 'ಚಿದಂಬರ' ಅಂತ ಹೆಸರು ಇಟ್ಟಿದ್ದಾರೆ.

**ವ್ಯಕ್ತಿ**: ಒಳ್ಳೆ ಹೆಸರೇ ಆಯ್ತಲ್ಲ.... ಸ್ಥಳ ಮಹಿಮೆ ಬೇರೆ....

**ಯುವಕ**: ಅತ್ತೇಽಽಽ... ಕಾಫಿ ಆಯ್ತಾ?



**ಹೆಣ್ಣು**: *(ಒಳಗಿನಿಂದ)* ತಂದೆ ಕಣೋ... ತಂದೆಯಪ್ಪಾ...

**ಯುವಕ** : ಈ ಮನೆಯಲ್ಲಿ toilet ಎಲ್ಲಿದೆ ಮಾವ ?... ಅತ್ತೆ ಕಾಫಿ ತರೋದ್ರಲ್ಲಿ fresh ಆಗಿ ಬರ್ತೀನಿ... ಅತ್ತೇೇೇ... ಊಟಕ್ಕೂ ಹಂಗೇ ರೆಡಿಮಾಡಿಬಿಡಿ.... ಸಿಕ್ಕಾಪಟ್ಟೆ ಹಸಿತಾ ಇದೆ... ಈ ರಾತ್ರೀಲಿ ನಿಮ್ಮನೆ ಹುಡುಕೋದ್ರಲ್ಲಿ ತಿಂದಿದ್ದೆಲ್ಲಾ ಜೀರ್ಣವಾಗಿ ಹೋಯ್ತು.... *(ಹಿಂದಕ್ಕೆ ಹೋಗುವನು)*

**ಹೆಣ್ಣು**: *(ಕಾಫಿಯನ್ನು ಟ್ರೇನಲ್ಲಿ ತರುತ್ತಾ, ಸುತ್ತಲೂ ನೋಡಿ ಮೂಕಸನ್ನೆಯಿಂದಲೇ, ಯುವಕ ಎಲ್ಲೆಂದು ಕೇಳುವಳು. ಮೂಕಸನ್ನೆಯಿಂದಲೇ ಅವನು ಹೋದ ದಿಕ್ಕನ್ನು ವ್ಯಕ್ತಿ ತೋರಿಸುವನು)*... ಯಾರ್ರಿ ಈ ಹುಡುಗ ?... ನಾನು ನೋಡಿದ್ದು ಇದೇ ಮೊದಲ್ನೆ ಸಲ... ಎಷ್ಟೋ ವರ್ಷಗಳಿಂದ ಸಂಬಂಧವಿದ್ದ ಹಾಗೆ ಮಾತಾಡ್ತಾನೆ... ಹುಷಾರ್... ಸುಮ್ಮನೆ ನಂಬಿಬಿಡಬೇಡಿ... ಕಳ್ಳರು ಯಾವಯಾವ ವೇಷದಲ್ಲಿ ಬರ್ತಾರೊ ಗೊತ್ತಾಗಲ್ಲ... ನಿಮ್ಮ ಎಚ್ಚರಿಕೆ ನಿಮಗಿರಲಿ. ...ನಿಮ್ಮ ಕಡೆಯವನಂತೆ ?...

**ವ್ಯಕ್ತಿ**: ಅದನ್ನ ಅವನೇ ಹೇಳಿದ... ನನಗಂತೂ ಏನೂ ಗೊತ್ತಾಗಲಿಲ್ಲ... ಹಿಂದೆ, ಇವನ್ನ ನೋಡಿಲ್ಲ, ಮಾತಾಡಿಸಿಲ್ಲ... ಅವನು ಸಂಬಂಧಗಳನ್ನ ಬಿಚ್ಚೋದು ನೋಡಿದ್ರೆ ತಲೆ-ಬುಡ ಅರ್ಥವಾಗಲಿಲ್ಲ... ಎಲ್ಲಾ ದೊಡ್ಡ ಗೊಂದಲ... ಹಿಂದು ಗೊತ್ತಿಲ್ಲ, ಮುಂದು ಗೊತ್ತಿಲ್ಲ... ನಿಜವಾಗಲೂ ಇದೊಂದು ಚಿದಂಬರ ರಹಸ್ಯವೇ ಆಗಿಬಿಟ್ಟಿದೆ. *(ನಗು)*

**ಹೆಣ್ಣು**: ಅವನು ಮಾತಾಡೋದು ನೋಡಿದ್ರೆ ಸಂಬಂಧಾನೇ ಅನ್ನಿಸುತ್ತೆ... ಆದ್ರೆ ಎಲ್ಲಿ? ಯಾವುದು ? ಗೊತ್ತಾಗುತ್ತಿಲ್ಲ... ಸ್ವಲ್ಪ ಸರಿಯಾಗಿ ವಿಚಾರಿಸಿ... ನಮ್ಮ ಪೈಕಿ ಯಾರಾದ್ರೂ ಚಿದಂಬರದಲ್ಲಿ ಇದ್ದಾರೆಯೇ ?... *(ಯುವಕ ಬರುವ ಸದ್ದಾಗುವುದು. ಗಂಡ-ಹೆಂಡತಿ ಮಾತು ಬದಲಾಯಿಸಿ ಹುಷಾರಾಗುವರು)*... ಕಾಫಿ ರೆಡಿ... ಇದು ನಿಮ್ಮ ಕಾಫಿ, ಸಕ್ಕರೆ ಇಲ್ಲದ್ದು, ಇದು ಆ ಹುಡುಗನ ಕಾಫಿ... ನೀವು ಕಾಫಿ ಕುಡಿಯೋದ್ರಲ್ಲಿ, ಊಟ ರೆಡಿ ಮಾಡ್ತೇನೆ...

**ಯುವಕ** : *(ಮುಖ ಒರೆಸಿಕೊಳ್ಳುತ್ತಾ)* Thank you ಅತ್ತೆ... ಇವತ್ತು ನಮಗಾಗಿ ಏನ್ ಹುಳಿ ಮಾಡಿದ್ದೀರಿ ?... ನಿಮ್ಮ ರುಚಿ ಎಲ್ಲಾ ನನಗೆ ಗೊತ್ತಿದೆ...

**ಹೆಣ್ಣು**: ನಮ್ಮ ರುಚಿ ನಿಮಗೆ ಗೊತ್ತಿಲ್ಲ... ನೀನು ನಮ್ಮನ್ನ ನೋಡ್ತಾ ಇರೋದೇ ಮೊದಲು... ಅದು ಹೇಗೆ ಗೊತ್ತಾಗುತ್ತೆ ?

**ಯುವಕ** : *(ನಕ್ಕು)* ನೋಡಿ ಅತ್ತೆ, ನಿಮಗೆ ಬೆಂಡೇಕಾಯಿ ಗೊಜ್ಜು ಇಷ್ಟ ಅಲ್ಲವಾ ?

**ಹೆಣ್ಣು**: ಹೌದೂ...!?

**ಯುವಕ** : ಮಾವನಿಗೆ, ಸೊಪ್ಪಿನ ಹುಳಿ ಇಷ್ಟ ಅಲ್ಲವಾ ?

**ವ್ಯಕ್ತಿ**: ಹೌದೂ...!?

**ಯುವಕ** : ಇವತ್ತು ಯಾವ ಹುಳಿ ತಯಾರುಮಾಡಿದ್ದೀರಾ ?

**ಹೆಣ್ಣು**: ಅಲ್ಲಪ್ಪ... ಇದೆಲ್ಲಾ ನಿನಗೆ ಹ್ಯಾಗೆ ಗೊತ್ತು ?

**ಯುವಕ**: ನನಗೆ ಎಲ್ಲರ ವಿಷಯನೂ ಗೊತ್ತು... ನೋಡಿ, ಮಾವನಿಗೆ ಬಿಸಿಬೇಳೆಬಾತ್ ಇಷ್ಟ, ನಿಮಗೆ ತೆಳ್ಳಗಿರೊ ಖಾರ ಪೊಂಗಲ್ ಇಷ್ಟ... ಅಲ್ಲವಾ ? *(ನಗು)*

**ಹೆಣ್ಣು**: ಅಯ್ಯೊ ದೇವರೇ... ನೀನೇನ್ ಮಂತ್ರವಾದೀನಾ ?... ಅಂಜನಾ ಹಾಕೋದು ಬರುತ್ತಾ ?... ಅಯ್ಯೊ ನನ್ನ ಬುದ್ಧಿಗೆ... ಮರತೆಬಿಟ್ಟೆ... ಕಾಫಿ ತಕೋಪ್ಪ...

**ಯುವಕ**: ಇನ್ನೂ ಸಾಕಮ್ಮನ ಕಾಫಿಪುಡಿನೇ ಉಪಯೋಗಿಸ್ತಿರೋ ?... ಅಥವಾ ಬೇರೆನೊ ?

**ಹೆಣ್ಣು**: ಈಗ ಅದೆಲ್ಲಿ ಸಿಕ್ಕುತ್ತಪ್ಪಾ ... ನಿನಗೆ ಎಲ್ಲಾ ನೆನಪಿದೆಯಲ್ಲಾ ?... ಆಶ್ಚರ್ಯ... ಆಶ್ಚರ್ಯ...

**ಯುವಕ** : ಅದೇ ನನ್ನ ಸ್ಪೆಷಾಲಿಟಿ ಅತ್ತೆ... ಒಟ್ಟಿನಲ್ಲಿ ಕಾಫಿ ಚೆನ್ನಾಗಿದೆ... ಫಿಲ್ಟರ್ ಕಾಫಿ ರುಚೀನೇ ರುಚಿ... ನನ್ನ ಈ ವದ್ದೆ ಬಟ್ಟೇನ ಬದಲಾಯಿಸ್ತೇನೆ... ರೂಂ ಎಲ್ಲಿದೆ ಮಾವ ?

**ವ್ಯಕ್ತಿ**: ಆ ಬಲಗಡೆ ಕಾಣೋದೆ ರೂಮು. ...ಹಿಂದೆ, ಅದು ನಮ್ಮ ಹುಡುಗನ ರೂಮಾಗಿತ್ತು... ಈಗ ಖಾಲೀನೇ ಬಿದ್ದಿದೆ. ...ಮೊದಲು ವದ್ದೆ ಬಟ್ಟೆ ಬದಲಾಯಿಸು...

**ಯುವಕ** : *(ಯುವಕ ವದ್ದೆಯಾಗಿದ್ದ ಕಪ್ಪು ಜರ್ಕಿನ್ ಮತ್ತು ಚಿಕ್ಕ ಸೂಟ್‌ಕೇಸ್ ಎತ್ತಿಕೊಂಡು, ವ್ಯಕ್ತಿ ತೋರಿಸಿದ ದಿಕ್ಕಿನ ಕಡೆ ಹೋಗುವನು. ಹೋಗುವಾಗ-)* ಬೇಗ ಅಡಿಗೆ ರೆಡಿಯಾಗಲಿ ಅತ್ತೇೇೇ...

**ಹೆಣ್ಣು**: *(ಯುವಕ ಹೋದ ಮೇಲೆ)* ಇದೇನ್ರಿ ಇದು... ಸಂಬಂಧ ಸಂಬಂಧ ಅಂದುಕೊಂಡು ತಳ ಊರೋಹಾಗೆ ಕಾಣುತ್ತೆ?... ಅತ್ತೆ-ಮಾವ ಅಂತ ಶುರುಮಾಡಿ, ಈಗ order ಮಾಡೋಕೆ ಪ್ರಾರಂಭಿಸಿದ್ದಾನೆ... ಅರಬರ ಒಂಟೆ ಕಥೆಯಾಯ್ತು... ದಿಕ್ಕು-ದೆಸೆ ಗೊತ್ತಾಗೂ ಮೊದ್ಲು ನುಗ್ಗೇಬಿಟ್ಟ..

**ವ್ಯಕ್ತಿ**: ಅವನ ಮಾತುಗಳು ಕೇಳಿದ್ರೆ, ನಮ್ಮೋನು ಅನ್ನಿಸುತ್ತೆ; ಅವನು ಆಡೋದನ್ನ ನೋಡಿದ್ರೆ, ಹುಚ್ಚು ಹಿಡಿಯುತ್ತೆ ...ನಮ್ಮ ಅವಿನಾಶ್ ಕೂಡ ಹೀಗೆ ಮಾತಾಡ್ತ ಇರಲಿಲ್ಲ ಎಲ್ಲಾ ಗೊಂದಲ... ಗೋಜಲು, ಗೋಜಲು...

**ಹೆಣ್ಣು**: ನಮಗೆ ಇಷ್ಟವಾಗೋ ತರಕಾರಿಗಳ ಬಗ್ಗೆನೂ, ಸರಿಯಾಗೇ ಹೇಳ್ದ... ನಮಗೆ ಇಷ್ಟವಾಗೋ ತಿಂಡಿಗಳ ಬಗ್ಗೆನೂ, ಸರಿಯಾಗೇ ಹೇಳ್ದ... ಹೋಗ್ಲಿ ಅಂದ್ರೆ... ಕಾಫಿಪುಡಿ ಬಗ್ಗೆನೂ ಸರಿಯಾಗೇ ಹೇಳ್ದ... ಅಲ್ವೇನ್ರಿ ?!

**ವ್ಯಕ್ತಿ**: ಅಡಿಗೇಗೆ order ಮಾಡಿದ್ನಲ್ಲ?... ಅಂದ ಹಾಗೆ ಏನ್ ಮಾಡ್ತಾ ಇದ್ದೀಯಾ ?...

**ಹೆಣ್ಣು**: ಆಲೂಗಡ್ಡೆ-ಈರುಳ್ಳಿ ರೆಡಿಯಾಗ್ತಾ ಇದೆ... ಕುಕ್ಕರ್ ಕೂಗಿದ್ರೆ ಅಡಿಗೆ ಮುಗಿದಂಗೆ... ಇವನು ಸಂಬಂಧಿನೊ ?... ಕಳ್ಳನೋ ?... ಕೊಲೆಗಾರನೋ ?... ಒಂದೂ, ಅರ್ಥವಾಗ್ತಾ ಇಲ್ಲ...

**ವ್ಯಕ್ತಿ**: ಯಾರಾದ್ರು ಆಗ್ಲಿ ಬಿಡೆ... ನಮ್ಮ ಮನೇಲ್ಲಿ ಬೆಳ್ಳಿ ಇಲ್ಲ, ಬಂಗಾರ ಇಲ್ಲ... ದುಡ್ಡು ಮೊದಲೇ ಇಲ್ಲ... ಎಲ್ಲಾ ಬ್ಯಾಂಕ್‌ನಲ್ಲಿ ಭದ್ರವಾಗಿದೆ... ನೋಡು, ಇವತ್ತು ರಾತ್ರಿ ಒಂದು ಊಟ, ನಾಳೆ ಬೆಳಗ್ಗೆ ಒಂದು ಟಿಫಿನ್ ಕೊಟ್ರೆ... ನಮ್ಮ ಕೆಲಸ ಮುಗೀತು... ನಾವು ಚಿದಂಬರಕ್ಕೆ ಹೋಗೋದು ದೂರದ ಮಾತು... ಮತ್ತೆ ಅವನು ಬರೋದು... ಎಂದೋ, ಯಾವ ಕಾಲಕ್ಕೊ...

*(ಗಂಡ-ಹೆಂಡತಿ ಇಬ್ಬರೂ ಅಡಿಗೆಮನೆ ಕಡೆ ಹೆಜ್ಜೆ ಹಾಕುತ್ತಾರೆ. ಅಷ್ಟರಲ್ಲಿ ರಂಗಸ್ಥಳ ಸಂಪೂರ್ಣವಾಗಿ ಕತ್ತಲು ಆವರಿಸಿಕೊಳ್ಳುತ್ತದೆ. ನಾಯಿ ಬೊಗಳುವ ಸದ್ದಾಗುತ್ತದೆ. ರಂಗದ ಮೇಲೆ ನಿಧಾನವಾಗಿ ಬೆಳಕು ಆವರಿಸುತ್ತದೆ. ಅಡಿಗೆಮನೆ ಕಡೆಯಿಂದ ವ್ಯಕ್ತಿ ಬರುತ್ತಾ-)*

**ವ್ಯಕ್ತಿ**: *(ಮತ್ತೆ ಮತ್ತೆ ಜೋರಾಗಿ ಬಾಗಿಲು ಬಡಿಯುವ ಸದ್ದು)* ಯಾರ್ರೀ ಅದು ?... ಯಾರ್ರೀ ?... ನೆಮ್ಮದಿಯಿಂದ ಇರೋಕೆ ಬಿಡೊಲ್ಲ... *(ಬಾಗಿಲು ಕಡೆ ಹೋಗುವನು)* *(ಒಳಗೆ, ವದ್ದೆಯಾದ ಪೊಲೀಸ್ ಇನ್‌ಸ್ಪೆಕ್ಟರ್ ಬರುತ್ತಾ)*

**ಪೊ.ಇ** : ನಿಮ್ಮ ಮನೆಗೆ ಯಾರಾದ್ರು ಬಂದ್ರಾ ?... ಹೊಸಬರು ಯಾರಾದ್ರು ಬಂದ್ರಾ ?

**ಹೆಣ್ಣು**: *(ಅಡಿಗೆ ಮನೆಯಿಂದ ಬರುತ್ತಾ)* ಏನಂತೆ ?!... ಏನಂತೆ ?!

**ಪೊ.ಇ** : ಸ್ವಲ್ಪ ಹೊತ್ತಿಗೆ ಮುಂಚೆ, ಇಲ್ಲಿಗೆ ಯಾರಾದ್ರು ಬಂದ್ರಾ ?

*(ಗಂಡ-ಹೆಂಡಿರು ಪರಸ್ಪರ ಮುಖ ನೋಡಿಕೊಂಡು ಗಾಬರಿಯಿಂದ)*

**ಹೆಣ್ಣು**: ಇನ್‌ಸ್ಪೆಕ್ಟರೇ... ಇಷ್ಟೊತ್ತಿನಲ್ಲಿ ನಮ್ಮ ಮನೆಗೆ ಯಾರು ಬರ್ತಾರೆ ?... ಹಾಕಿದ ಬಾಗಿಲು ಹಾಕಿದಂಗೇ ಇದೆ... ನಮ್ಮ ಹುಡುಗ ಅಮೆರಿಕಾದಲ್ಲಿದ್ದಾನೆ...

**ಪೊ.ಇ** : ಮೇಡಂ, ಆ ಕಳ್ಳ ಇತ್ತಕಡೇನೆ ಬಂದ... ಅದಕ್ಕೆ, ನಾವು ಬಂದೆವು...

**ವ್ಯಕ್ತಿ**: ಒಳಗೆ ಬಂದಿದ್ರೆ, ಎಲ್ಲಿ ಹೋಗ್ತಾನೆ ಇನ್‌ಸ್ಪೆಕ್ಟರ್ ? ಕೂತುಕೊಳ್ಳಿ, ಕೂತುಕೊಳ್ಳಿ... ನೀವು ಬಂದದ್ದು ಒಳ್ಳೆಯದೇ ಆಯ್ತು... ಈ ಕಾಲದಲ್ಲಿ, ಯಾರು ಯಾವ ಹೊತ್ತಿನಲ್ಲಿ?... ಯಾವ ವೇಷದಲ್ಲಿ?... ಬರ್ತಾರೆ ಅಂತ ಹೇಳೋಕೆ ಬರೊದಿಲ್ಲ... ಬೆಳಿಗ್ಗೆ ಎದ್ದು ಪೇಪರ್ ನೋಡಿದ್ರೆ ಬರೀ ಕೊಲೆಗಳು, ಕಳ್ಳತನಗಳು...

*(ಪೊಲೀಸ್ ಕಾನ್‌ಸ್ಟೆಬಲ್ ಪ್ರವೇಶಿಸುತ್ತಾ -)*

**ಪೊ.ಕಾ** : ಮನೆ ಸುತ್ತಾ ನೋಡ್ದೆ ಸಾರ್... ಯಾರೂ ಕಾಣಲಿಲ್ಲ... ಈ ಮಳೇಲಿ ಅವನು ಬೇರೆಲ್ಲೂ ಹೋಗಲು ಸಾಧ್ಯವಿಲ್ಲ... ಎಲ್ಲಾ ದಾರಿನೂ ಬಂದ್ ಆಗಿದೆ... ಸಾರ್, ಇವರಿಗೆ ಗೊತ್ತಿಲ್ಲದೆ, ಮನೇಲ್ಲಿ ಅವಿತುಕೊಂಡಿರಬಹುದು...

**ಪೊ.ಇ** : ಹೌದೌದು... ಒಂದ್ಸಾರಿ ಮನೇನ ನೋಡಿದ್ರೆ... ನಿಮಗೂ ಒಳ್ಳೇದು, ನಮಗೂ ಒಳ್ಳೇದು... ಕತ್ತಲೆ ಹೊತ್ತು... ಮಳೆ ಬೇರೆ ಸುರಿತಾ ಇದೆ... ಏ.. ೭೮೬

**ಪೊ.ಕಾ** : ಸಾರ್.

**ಪೊ.ಇ** : ಒಂದ್ಸಾರಿ ಮನೆ ಜಾಲಾಡಿಸಿಬಿಡು... ಅನುಮಾನ ದೂರವಾಗುತ್ತೆ

**ಹೆಣ್ಣು**: ಇನ್‌ಸ್ಪೆಕ್ಟರೆ... ನಮಗೆ ವಯಸ್ಸಾದ್ರೇನಂತೆ, ಕಣ್ಣು ಕಾಣೋದಿಲ್ವೆ ?... ಸೊಳ್ಳೆ-ಗಿಳ್ಳೆ ಬಂದ್ರೆ ಕಾಣಿಸೊಲ್ಲ, ನಿಜ... ಒಂದಾಳು ಒಳಗೆ ಬಂದ್ರೆ ಕಾಣಿಸೊಲ್ಲವೆ ?

**ವ್ಯಕ್ತಿ**: ನೀನು ಹೇಳಿದ್ದು ನಿಜ... ಹಾಗೇನಾದ್ರು ಬಂದಿದ್ರೆ, ನಾವೇ ನಿಮಗೆ ಹಿಡಿದುಕೊಡ್ತಾ ಇದ್ದೆವು... ನಿಮಗಲ್ಲದೆ, ನಾವು ಇನ್ನಾರಿಗೆ ಹೇಳೋಣ ?

**ಪೊ.ಇ** : *(ಅಲ್ಲಿನ ಎರಡು ಕಾಫಿ ಕಪ್ಪುಗಳನ್ನು ಗಮನಿಸಿ, ಅಲ್ಲಲ್ಲಿ ನೀರು ನಿಂತಿರುವುದನ್ನು ಗಮನಿಸಿ, ಅನುಮಾನದಿಂದ)* ಇಲ್ಲಿಗೆ ಯಾರೂ ಬಂದಿರಲಿಲ್ಲವೆ ?... ...ಏ ೭೮೬, ಮನೆ ಜಾಲಾಡೊ ಎಂದ್ರೆ, ಇಲ್ಲೇ ನಿಂತಿದ್ದೀಯಾ...

**ಪೊ.ಕಾ** : ಆಗ್ಲಿ ಸಾರ್... *(ಮನೆಯನ್ನು ಶೋಧಿಸಲು ಪ್ರಾರಂಭಿಸುವನು, ಗಂಡ-ಹೆಂಡತಿ ಪರಸ್ಪರ ಮುಖ ನೋಡಿಕೊಳ್ಳುವರು)*

**ವ್ಯಕ್ತಿ**: ಅವರು ಹುಡುಕಲಿ... ನೀವು ಕುಂತುಕೊಳ್ಳಿ ಸಾರ್.

**ಪೊ.ಇ** : *(ಕೂತುಕೊಳ್ಳುತ್ತಾ, ಅಲ್ಲಿ ವದ್ದೆಯಾಗಿರುವುದನ್ನು ಗಮನಿಸುತ್ತಾನೆ)* ಏನ್ರೀ ಇದು... ಈಪಾಟಿ ವದ್ದೆ ?!

**ಹೆಣ್ಣು**: ಇವರು ಹೊರಗೆ ಹೋಗಿದ್ರು... ಹೊರಗಡೆ, ಮಳೆಗೆ ಮಲ್ಲಿಗೆ ಬಳ್ಳಿ ಬಿದ್ದೋಗಿತ್ತು... ಅದನ್ನ ಸರಿಮಾಡಿ ಬಂದು, ಇಲ್ಲೇ ಕೂತಿದ್ದರು. ...ಅದಕ್ಕೇ ವದ್ದೆಯಾಗಿದೆ.

**ವ್ಯಕ್ತಿ**: ಏನ್ ಮಳೆ ಸಾರ್ !... ಬರೋವಾಗ ಬರೊಲ್ಲ.. ಬೇಡವಾದಾಗ ಬರುತ್ತೆ... ಹುಚ್ಚು ಮಳೆ ಸಾರ್, ಹುಚ್ಚು ಮಳೆ ಸಾರ್...

**ಪೊ.ಕಾ** : ಒಳಗೆ ಯಾರೂ ಇಲ್ಲಾ ಸಾರ್... ಎಲ್ಲಾ ಕಡೆ ನೋಡ್ದೆ ಸಾರ್...

**ಪೊ.ಇ** : ಎಲ್ಲಾ ಕಡೆ ಸರಿಯಾಗಿ ನೋಡಿದಾ ?

**ಪೊ.ಕಾ** : ನೋಡ್ದೆ ಸಾರ್... ಯಾರೂ ಇಲ್ಲ ಸಾರ್... ಹಿಂದಗಡೆ ಬಾಗಿಲೂ ತೆಗೆದಿಲ್ಲ ಸಾರ್... ಅಲ್ಲಲ್ಲಿ ವದ್ದೆಯಾಗಿದೆ... ರೂಮಿನಲ್ಲಿ ವದ್ದೆಯಾದ ಒಂದು ಜರ್ಕಿನ್ ಇದೆ ಸಾರ್... ಅದನ್ನು ಹುಡುಕಾಡಿದೆ ಸಾರ್... ಅದರಲ್ಲಿ ಏನು ಇರಲಿಲ್ಲ ಸಾರ್.

**ಪೊ.ಇ** : ಜರ್ಕಿನ್...? *(ವ್ಯಕ್ತಿಯ ಕಡೆ ನೋಡಿ)*... ನೀವು ಜರ್ಕಿನ್ ಹಾಕ್ತಿರಾ ?

**ವ್ಯಕ್ತಿ**: ಓ... ಅದಾ... *(ನಕ್ಕು)* ಅದು ನನ್ನ ಮಗನದು... ಗಿಡ ಸರಿಮಾಡೋಕೆ, ತಲೆಮೇಲೆ ಹಾಕಿಕೊಂಡು ಹೋಗಿದ್ದೆ, ಅಷ್ಟೆ.

**ಪೊ.ಇ** : ಸರಿ, ಸರಿ... *(ಮೇಲೆದ್ದು)* ಯಜಮಾನ್ರೆ, ಬಾಗಿಲು ಭದ್ರವಾಗಿ ಹಾಕಿಕೊಂಡು ಮಲಗಿಕೊಳ್ಳಿ... ಭಾರಿ ಕಳ್ಳ ತಪ್ಪಿಸಿಕೊಂಡಿದ್ದಾನೆ... ಹುಷಾರ್, ಮನೆಯಲ್ಲಿ ನೀವಿರೋದು ಇಬ್ಬರೆ. *(ಹೊರಡುವಾಗ)* ಹೊಸಬರು ಯಾರು ಬಂದ್ರೂ ಬಾಗಿಲು ತೆಗೆಯಬೇಡಿ...

**ಪೊ.ಕಾ** : ಅವನು ಈ ಏರಿಯಾದಲ್ಲೇ ಇರಬೇಕು.

**ವ್ಯಕ್ತಿ**: Thank you, Sir.

**ಪೊ.ಇ** : ಬಾಗಿಲು ಹಾಕಿಕೊಳ್ಳಿ... ಯಾರು ಕೂಗಿದ್ರೂ, ಯಾರು ಬಂದ್ರೂ ಬಾಗಿಲು ತೆಗಿಬೇಡಿ.

**ವ್ಯಕ್ತಿ**: ಸರಿ ಸಾರ್... Thank you Sir. *(ವ್ಯಕ್ತಿ ಬಾಗಿಲು ಹಾಕಿಕೊಂಡು ಬಂದು, ಹೆಂಡತಿಯನ್ನು ನೋಡುವನು)*

**ಹೆಣ್ಣು**: ಏನ್ರಿ ಇದು ಅನ್ಯಾಯ?... ಅವನು ನಿಮ್ಮ ಸಂಬಂಧಿ, ಸಂಬಂಧಿ ಅನ್‌ತಾನೆ... ಇವರು ಕಳ್ಳ, ಕಳ್ಳ ಅಂತಾರೆ... ನನಗೆ ಏಕೊ ಭಯವಾಗ್ತಾ ಇದೆ... ಅವನು ಕಳ್ಳನೇ ಇರಬೇಕು... ಪೊಲೀಸ್ ಇನ್‌ಸ್ಪೆಕ್ಟರ್‌ನ ಕರೆದುಬಿಡಿ, ನಿಜ ಹೇಳಿಬಿಡಿ... ಮಿಕ್ಕಿದ್ದು ಅವರು ವಿಚಾರಿಸಿಕೊಳ್‌ತಾರೆ...

**ವ್ಯಕ್ತಿ**: ಈಗ ಏನು ಮಾಡೋದು ಅಂತ ಗೊತ್ತಿಲ್ಲ... ಯಾರು ನಿಜ, ಯಾರು ಸುಳ್ಳು... ಒಂದೂ ಅರ್ಥವಾಗ್ತಾ ಇಲ್ಲ.. ಅವನ್ನ ನೋಡಿದ್ರೆ ಅತ್ತೆ, ಮಾವ ಅಂತ ಮಾತಾಡ್ತಾನೆ... ಪೊಲೀಸರು ಹುಡುಕುತಿರೋದು ಬೇರೆ ಯಾರೋ ಇರ್ಬೇಕು...

**ಹೆಣ್ಣು**: ಕಳ್ಳನಾದೋನು 'ನಾನು ಕಳ್ಳ' ಅಂತ ಹೇಳಿಕೊಂಡು ಬರ್ತಾನ?... ಒಬ್ಬಬ್ಬರದು ಒಂದೊಂದು ವೇಷ... ಅತ್ತೆ, ಮಾವ ಅಂತಾನು ಅಂತಾರೆ, ಅಪ್ಪ, ಅಮ್ಮ ಅಂತಾನು ಅಂತಾರೆ... ಒಟ್ಟಿನಲ್ಲಿ ನನಗೆ ಭಯವಾಗ್ತಾ ಇದೆ...

**ವ್ಯಕ್ತಿ**: ಈಗ ಏನು ಮಾಡೋಣ ?

**ಹೆಣ್ಣು**: ಅದು ಸರಿ... ಆ ಪೊಲೀಸ್ ಕಾನ್‌ಸ್ಟೆಬಲ್ ಹುಡುಕಾಡುವಾಗ, ಈ ಹುಡುಗ ಎಲ್ಲಿ ಹೋಗಿದ್ದ ?... ಆ ಕಾನ್‌ಸ್ಟೆಬಲ್ ವದ್ದೆ ಜರ್ಕಿನ್ ಇದೆ ಅಂದ... ಎಲ್ಲಾ ನೋಡ್ದೆ ಅಂದ... ಆಗ ಇವನು ಎಲ್ಲಿ ಹೋಗಿದ್ದ ?

**ವ್ಯಕ್ತಿ**: ಹೌದಲ್ಲಾ!?... ಪೊಲೀಸ್‌ನೋರು ಹುಡುಕಾಡಿದಾಗ ಇವನು ಎಲ್ಲಿ ಹೋಗಿದ್ದ ?... ಅವನು ಸರಿಯಾಗಿ ಹುಡುಕಿದನೋ, ಇಲ್ಲವೋ ? *(ನಗು)*

**ಹೆಣ್ಣು**: ಒದ್ದೆ ಜರ್ಕಿನ್ ಅವನ್ ಕಣ್ಗೆ ಬಿದ್ದಿದೆ... ಈ ಹುಡುಗ ಕಣ್ಣಿಗೆ ಬಿದ್ದಿಲ್ಲ ಅಂದ್ರೆ ?... ನಿಜವಾಗ್ಲೂ ನನಗೆ ಈಗ ಭಯ ಪ್ರಾರಂಭವಾಗಿದೆ... ಆ ಭಗವಂತನೇ ಕಾಪಾಡಬೇಕು... ಆ ಹುಡುಗನ ಹೆಸರೇನ್ರಿ ?

**ವ್ಯಕ್ತಿ**: ಅವನ ಊರು ಹೇಳ್ದ... ಅವರ ಅಪ್ಪನ ಹೆಸರು ಹೇಳ್ದ... ಸಂಬಂಧ ಹೇಳ್ದ... ಅವನ ಹೆಸರೂ ಹೇಳಲಿಲ್ಲ... ಈ ಊರಿಗೆ ಯಾಕೆ ಬಂದೆ ಅಂತಾನೂ ಹೇಳಲಿಲ್ಲ...

**ಹೆಣ್ಣು**: ದೇವರೇ, ನೀನೇ ಕಾಪಾಡಬೇಕಪ್ಪ.... ಹೋಗ್ಲಿ, ಆ ಹುಡುಗನ್ನ ಕರೀರಿ... ಊಟ ರೆಡಿಯಾಯ್ತು... ಸದ್ಯ, ಬೇಗ ಬೆಳಕುಹರಿದ್ರೆ ಸಾಕಾಗಿದೆ... ಒಂದು ಕಡೆ ಮಳೆ ಕಾಟ, ಇನ್ನೊಂದು ಕಡೆ ಕಳ್ಳನ ಕಾಟ... ಈ ಹುಡುಗನ ಹುಡುಗಾಟಿಕೆ ಬೇರೆ... ಯಾರನ್ನ ನಂಬೋದು ? ಯಾರನ್ನ ಬಿಡೋದು ?... ಒಂದೂ ಅರ್ಥವಾಗ್ತ ಇಲ್ಲ... ಮೊದ್ಲೆ ನಿದ್ದೆ ಬರೊಲ್ಲ, ಇವತ್ತು ರಾತ್ರಿ ಎಲ್ಲಾ ಜಾಗರಣೇನೆ ಗತಿ...

**ವ್ಯಕ್ತಿ**: ಈ ಹುಡುಗ ಕಳ್ಳನ ಹಾಗೆ ಕಾಣೋದಿಲ್ಲ... *(ರೂಮಿನ ಕಡೆ ತಿರುಗಿ)* ಏನಪ್ಪಾ... *(ಒಂದೆರಡು ಹೆಜ್ಜೆ ಮುಂದಿಟ್ಟು)* ಏನಪ್ಪಾ... ಏನಪ್ಪಾ.... ಊಟಕ್ಕೆ ಬರ್‍ತಿಯಾ... ಊಟ ರೆಡಿಯಾಗಿದೆ...

**ಹೆಣ್ಣು**: *(ಸ್ವಗತ)* ಈ ಹುಡುಗ ಬಂದಕೂಡ್ಲೆ ಪೊಲೀಸ್‌ನೋರು ಬರೋದು... ಅವರು ಹುಡುಕುದ್ರು ಕಣ್ಣಿಗೆ ಬೀಳ್ದೆ ಇರೋದು... ಇವನು ಕಳ್ಳನೊ, ಸಂಬಂಧಿನೊ ಒಂದೂ ಗೊತ್ತಾಗುತ್ತಿಲ್ಲ... ಇವರು ನೋಡಿದ್ರೆ, ಸಂಬಂಧ ಅಂತ ನಂಬಿಬಿಟ್ಟಿದ್ದಾರೆ... ಆ ಭಗವಂತನೇ ಕಾಪಾಡಬೇಕು.

**ಯುವಕ** : *(ಉತ್ಸಾಹದಿಂದ)* ಬಂದೆ... ಬಂದೆ... ಹೊಟ್ಟೆಬಾಕ ಬಂದೇಬಿಟ್ಟೆ... *(ಹಾಡಲು ಪ್ರಾರಂಭಿಸಿ)*

ಅತ್ತೆ ಕೊಟ್ರು ಅನ್ನ-ಹುಳಿ-ಮೊಸರು
ಬಂದೇ ಬಂತು ಹಾರಿ ಹೋಗಿದ್ದ ಉಸಿರು
ಮಾವ ಕೊಟ್ರು ಬೆಚ್ಚಗಿರೋ ರೂಮು
ಇಲ್ಲದೆ ಇದ್ರೆ ಫ್ರೀಜಾದ ಐಸ್‌ಕ್ರೀಮು

*(ತಟ್ಟನೆ ನಿಲ್ಲಿಸಿ)* ಮಾವ... ನಿಮ್ಮೇಲೆ ನನಗೆ ತುಂಬಾ ಕೋಪ ಬಂದಿದೆ...

**ವ್ಯಕ್ತಿ** : ಏಕಪ್ಪ ?... ನಾನೇನು ಮಾಡ್ದೆ ?

**ಹೆಣ್ಣು** : ಅವರೇನು ಮಾಡಿದ್ರೊ ಹುಡುಗ ?

**ಯುವಕ** : ನೀವು ನನಗಿಂತ ದೊಡ್ಡೋರೊ ? ಚಿಕ್ಕೋರೊ ?

**ವ್ಯಕ್ತಿ-ಹೆಣ್ಣು** : ಏಕೆ ?

**ಯುವಕ** : ನೀವು ನನ್ನ ಅತ್ತೆ-ಮಾವ ಅಲ್ಲವಾ ?

**ಹೆಣ್ಣು-ವ್ಯಕ್ತಿ**: *(ಪರಸ್ಪರ ಮುಖ ನೋಡಿಕೊಂಡು)* ಹ...ಹ...ಹ *(ನಗು)* ಹೌದು, ಹೌದು...

**ಯುವಕ** : ನೀವು ನನ್ನನ್ನು 'ಏನಪ್ಪಾ' 'ಬಾರಪ್ಪಾ' ಅಂತ ಕರೆಯೋದು ಏಕೆ ?... ಈ ಬಹು ವಚನ ನನಗೆ ಸುತರಾಂ ಇಷ್ಟವಿಲ್ಲ... 'ಹೋಗೋ' 'ಬಾರೋ' ಅಂತ, ಏಕವಚನದಲ್ಲಿ ಕರೀ ಬೇಕು... 'ಏನಪ್ಪಾ' 'ಬಾರಪ್ಪಾ' ಅಂತ ನನ್ನ ಕರೆದರೆ, ನನಗೆ ನಿಮ್ಮ ಊಟಾನೇ ಬೇಡ...

**ವ್ಯಕ್ತಿ** : ಸರಿಯಪ್ಪ...

**ಯುವಕ** : ಮತ್ತೆ ಅದೇ ಅಪ್ಪ, ಅಪ್ಪ, ಅಪ್ಪ....

**ಹೆಣ್ಣು** : ಹೋಗ್ಲಿ... ನಿನ್ನ ಹೆಸರೇನು ?...

**ಯುವಕ** : ನಮ್ಮಪ್ಪ ನನಗೆ ಅಭಯ ಅಂತ ಹೆಸರಿಟ್ಟಿದ್ದಾರೆ... ಆದ್ದರಿಂದ ನಾನು ಮಿಸ್ಟರ್ ಅಭಯ್... ಮಿಸ್ಟರ್ ಚಿದಂಬರಂ ಅಭಯಕುಮಾರ್...

**ಹೆಣ್ಣು** : ಅಭಯ... ನಿಮ್ಮಪ್ಪ ಒಳ್ಳೇ ಹೆಸರೇ ಇಟ್ಟಿದ್ದಾರೆ...

**ಯುವಕ** : ನಮ್ಮ ಅಪ್ಪನಿಗೆ ಕರ್ನಾಟಕ ಸಂಗೀತದ ಹುಚ್ಚು... ಮಹಾಹುಚ್ಚು... ಅದಕ್ಕೆ ತಕ್ಕಂತೆ ನನಗೆ 'ಲಯಾನಂದ' ಅಂತಲೋ... 'ರಾಗಾನಂದ' ಅಂತಲೋ ಹೆಸರು ಇಡಲಿಲ್ಲವಲ್ಲಾ... ಹಾಗೇನಾದ್ರು ಇಟ್ಟಿದ್ದರೆ, ಕೋರ್ಟಿಗೆ ಒಂದು affidavit ಕೊಟ್ಟು, ಹೆಸರು ಬದಲಾಯಿಸಿಕೊಂಡು ಬಿಡುತ್ತಿದ್ದೆ... *(ನಗು)*... ಅಪ್ಪ, ಅಮ್ಮಂದಿರು ಹುಟ್ಟಿದ ಮಗುವಿಗೆ, ತಮಗೆ ಇಷ್ಟವಾದ ಹೆಸರು ಇಡುತ್ತಾರೆ... ಮಕ್ಕಳು ದೊಡ್ಡೋರಾದ ಮೇಲೆ, ಆ ಹೆಸರು, ಏನೇನು ಆಗುತ್ತೆ ಅಂತ ಯೋಚನೇನೆ ಮಾಡಿರೋದಿಲ್ಲ.... *(ನಗು)*...

**ಹೆಣ್ಣು**: ನಿನ್ನ ಹೆಸರೇನೋ ದಿವ್ಯವಾಗಿದೆ... ಚನ್ನಾಗಿದೆ... ಅಭಯಾ... ನೀನು ಆಗ್ಲೆ ರೂಂನಲ್ಲಿ ಇರಲಿಲ್ಲವಾ ?... ಎಲ್ಲಿ ಹೋಗಿದ್ದೆ ?...

**ಯುವಕ** : ಅತ್ತೆ, ಎಲ್ಲಿ ಹೋಗ್ಲಿ ಈ ದರಿದ್ರ ಮಳೇಲ್ಲಿ?... ರೂಂನಲ್ಲಿ ಬಟ್ಟೆ ಬದಲಾಯಿಸ್ತಾ ಇದ್ದೆ.... ಈ ವಿಷಯದಲ್ಲಿ ನಿಮ್ಗ್ಯಾಕೆ ಅನುಮಾನ ಬಂತು ?... ನೋಡಿ, ಇದು ಬೇರೆ ಬಟ್ಟೆ ಅಲ್ವೆ ?

**ವ್ಯಕ್ತಿ-ಹೆಣ್ಣು** : ಹೌದು ! ಹೌದು !

**ಹೆಣ್ಣು** : ರೂಮಿಗೆ ಯಾರಾದ್ರು ಬಂದಿದ್ರಾ ?

**ಯುವಕ** : ಯಾಕೆ ಅತ್ತೆ? ಇಷ್ಟು ಅನುಮಾನ ? *(ನಗು)*... ಸೊಳ್ಳೆ-ಹಲ್ಲಿ ಬಂದಿದ್ರೆ ನನಗೆ ಗೊತ್ತಿಲ್ಲ... ಮನುಷ್ಯರಂತೂ ಬಂದಿಲ್ಲ...

**ವ್ಯಕ್ತಿ-ಹೆಣ್ಣು** : *(ಪರಸ್ಪರ ಮುಖ ನೋಡಿಕೊಂಡು)* ಅಭಯಾ...!?

**ಯುವಕ** : ನೀವೇನಾದ್ರೂ ಬಂದಿದ್ರಾ ?

**ವ್ಯಕ್ತಿ-ಹೆಣ್ಣು** : ಇಲ್ಲ, ಇಲ್ಲಾ... *(ನಾಯಿ ಬೊಗಳಿದ ಸದ್ದು)*

**ಹೆಣ್ಣು**: ನಾಯಿ ಏಕೋ ಒಂದೆ ಸಮನೆ ಬೊಗಳ್ತಾ ಇದೆ...! ಅದರ ಊಟಾನೂ ಆಯ್ತು !?

**ವ್ಯಕ್ತಿ**: ಸುಮ್ಮಸುಮ್ಮನೆ ನಾಯಿ ಬೊಗೊಳೋದಿಲ್ಲ! ಇವತ್ತು ಯಾಕೆ ಹೀಗೆ ಬೊಗಳ್ತಾ ಇದೆ ?

**ಯುವಕ** : ಮಾವ, ನಾನೊಬ್ಬ ಹೊಸಬ ಬಂದಿದೇನಲ್ಲ.. ಅದಕ್ಕೇ ಇರಬೇಕು..

ನಾಳೆ ನನ್ನ ಕೆಲಸ ಮುಗಿಯುತ್ತೆ... ನಾನು ಹೊರಟ್‌ಬಿಡ್ತೇನೆ... ಆಗ ನಾಯಿ ಬೊಗಳೋದೂ ಇಲ್ಲ... ನಿಮಗೆ ಕಷ್ಟನೂ ಇಲ್ಲ...

**ಹೆಣ್ಣು**: ಎಲ್ಲೋ... ಮಳೆ ಎರಚ್ಲು ಹೊಡಿತಾ ಇರಬೇಕು...

**ವ್ಯಕ್ತಿ**: ಇಲ್ಲ ಇಲ್ಲ... ಅದಕ್ಕೆ ಒಂದು ಮಳೆಹನಿ ಬೀಳೊಲ್ಲ... ಯಾರೋ ನಮಗೆ ಆಗದವರು, ಈ ಫಾಸ್ಲೆಯಲ್ಲಿ ಇರಬೇಕು... ಪೊಲೀಸ್‌ನೋರೇ ಹೇಳಿದ್ರಲ್ಲಾ...

**ಯುವಕ** : ಪೊಲೀಸ್‌ನೋರು ?!... ಪೊಲೀಸ್‌ನೋರು ಇಲ್ಲಿಗೆ ಏಕೆ ಬಂದಿದ್ರು ?... ನಾನು ಒಳಗೆ ಇದ್ದಾಗ ಏನೇನೋ ನಡೆದುಹೋಗಿದೆ...

**ವ್ಯಕ್ತಿ**: ಯಾರೋ ಭಾರಿ ಕಳ್ಳ ತಪ್ಪಿಸಿಕೊಂಡಿದ್ದಾನಂತೆ... ಇದುವರೆಗೂ ಯಾರ ಕೈಗೂ ಸಿಕ್ಕಿಲ್ಲವಂತೆ... ಈ ಮನೆ ಕಡೇನೇ ಬಂದನಂತೆ...

**ಹೆಣ್ಣು**: ಪೊಲೀಸ್ ಇನ್‌ಸ್ಪೆಕ್ಟರ್ ಜೊತೆಗೆ, ಒಬ್ಬ ಪೊಲೀಸ್ ಕಾನ್‌ಸ್ಟೆಬಲ್ಲೂ ಬಂದಿದ್ದ... ಆ ಕಳ್ಳನೂ ಸಿಕ್ಕಲಿಲ್ಲ... ಅವರ ಕಣ್ಣಿಗೆ ನೀನೂ ಬೀಳಲಿಲ್ಲ...

**ಯುವಕ** : ನಾನು ನಿಮ್ಮ ಕಣ್ಣು ಮುಂದೇನೆ ಇದ್ದೇನಲ್ಲ ಅತ್ತೆ, ...ಆ ಕಳ್ಳ, ನಾನೆ ಅಂತ ನಿಮಗೆ ಅನುಮಾನ ಬಂದಿರೋ ಹಾಗಿದೆ...

**ಹೆಣ್ಣು**: ಇಲ್ಲಪ್ಪ, ಇಲ್ಲ

**ವ್ಯಕ್ತಿ**: ನಾವು, ಹಾಗೆ ತಿಳಿದೇ ಇಲ್ಲ

**ಯುವಕ** : ಮತ್ತೆ ಇಲ್ಲಪ್ಪ... ನಾನು ಹೊರಟೆ

**ಹೆಣ್ಣು**: ಅಭಯಾ... ಅಭಯಾ...

**ಯುವಕ** : ಹೂ... ಹೀಗೆ ಕೂಗಬೇಕು ನನ್ನ... ಪೊಲೀಸ್‌ನೋರೇ ಹಾಗೆ, ಕಳ್ಳರು ಇರೋ ಜಾಗದಲ್ಲಿ ಹುಡುಕಲ್ಲ, ಕಳ್ಳರು ಇಲ್ಲದ ಜಾಗದಲ್ಲಿ ಹುಡುಕ್ತಾರೆ... *(ನಗು)* ಕೈ ಬೆಚ್ಚಗೆ ಮಾಡಿದ್ರೆ, ಅವರಿಗೆ ಕಳ್ಳ ಸಿಕ್ಕೋದೇ ಇಲ್ಲ

**ಹೆಣ್ಣು**: ಪೊಲೀಸ್‌ನೋರ್ ಬಗ್ಗೆ ಹಾಗೆಲ್ಲ ಮಾತಾಡಬೇಡಪ್ಪ... ಅವರು ಆಗ್ಲೆ ಬಂದು... ಹುಷಾರಾಗಿರಿ... ಯಾರಿಗೂ ಬಾಗಿಲು ತೆಗಿಬೇಡಿ ಅಂತ ಹೇಳಿದ್ರು...

**ಯುವಕ** : ಅವರಿಗೆ 'ಹುಷಾರ್, ಹುಷಾರ್' ಅಂತ ಹೇಳೋದು ಅಭ್ಯಾಸ ಆಗಿಬಿಟ್ಟಿದೆ ಅಷ್ಟೆ... ಇಷ್ಟು ದೊಡ್ಡ ದೇಹಾನೇ ಅವರ ಕಣ್ಗೆ ಬೀಳಲಿಲ್ಲ ಅಂದ್ರೆ, ಅವರು ಇನ್ನೆಷ್ಟು ಚೆನ್ನಾಗಿ ಹುಡುಕಿರಬೇಕು ?... ನೀವೆ ಹೇಳಿ ?

**ಹೆಣ್ಣು**: ಪೊಲೀಸ್‌ನೋರು ಎಲ್ಲಾ ಒಂದೇ ಥರಾ ಇರೊಲ್ಲ... ಅಭಯಾ... ನೋಡು, ಅಂಥ ಕಂಚಿ ಶಂಕರಾಚಾರ್ಯರನ್ನೇ ಬಿಡಲಿಲ್ಲ... ಇಂದಿರಾ ಗಾಂಧೀನೇ ಬಿಡಲಿಲ್ಲ...

**ಯುವಕ** : ಮೇಲ್ನೋರು ಹೇಳ್ತಾರೆ, ಇವರು ಹಿಡಿತಾರೆ... ಅವರು ಹಿಡಿ ಅಂದ್ರೆ ಹಿಡಿತಾರೆ, ಬಿಡು ಅಂದ್ರೆ ಬಿಡ್ತಾರೆ... ಏನತ್ತೆ? ಈ ಜಗದ್ಗುರುಗಳ ಬಗ್ಗೆ ಭ್ರಮೆ ಹೋಗಿಲ್ವೆ ?... ನೋಡಿ ಈಗ, ಜಗದ್ಗುರುಗಳಿಗೆ ಜೈಲೇ ಜಗತ್ತು... ನಮ್ಮ ದೇಶದಲ್ಲಿ ಜಗದ್ಗುರುಗಳಿಗೇನು ಕಡಿಮೆ... ಜಾತಿಗೆ ಒಬ್ಬಬ್ಬ ಜಗದ್ಗುರು... ಹೇಳೋರಿಲ್ಲ, ಕೇಳೋರಿಲ್ಲ.... ಇವರೆಲ್ಲ black money lockers ಅತ್ತೆ... ಈ ವಿಷಯದಲ್ಲಿ ನನ್ನದೊಂದೇ ಪಾಲಿಸಿ... ಅವನು ಜಗದ್ಗುರುನೇ ಆಗಿರ್‌ಬೋದು, ಕಲಾಸಿಪಾಳ್ಯದ ಕೂಲಿನೇ ಆಗಿರ್‌ಬೋದು... ಟೈಂ ಬಂದ್ರೆ ಮುಗಿತು... ಎಲ್ಲಾ ಒಂದೆ, ಅಷ್ಟೆ.

**ವ್ಯಕ್ತಿ**: ಅಂದ್ರೆ ನೀನು ಪೊಲೀಸಾ ?

**ಯುವಕ** : *(ನಗು)* ನಾನಾ... ನನ್ನ ಮೈಮೇಲೆ ಖಾಕಿ ಬಟ್ಟೇನೆ ಇಲ್ಲ... ಕರಿಬಟ್ಟೆ ಇದೆ. *(ನಗು)*

**ವ್ಯಕ್ತಿ**: ಸಿ.ಐ.ಡಿ.ಗಳು; ಸಿ.ಓ.ಡಿಗಳು; ಸಿ.ಬಿ.ಐಗಳು; ಖಾಕಿ ಬಟ್ಟೆ ಹಾಕೋದಿಲ್ಲವಂತೆ !

**ಯುವಕ** : *(ನಗು)* ನಾನು ಯಾರೂ ಅಲ್ಲ... ನಾನು ನಿಮ್ಮ ಅಭಯಾ... ನನಗೆ ಇಷ್ಟವಾದವರ ಹತ್ರ ಬರ್‍ತೀನಿ, ಹೋಗ್ತೀನಿ... ನೀವು ನನಗೆ ಅತ್ತೆ-ಮಾವ... ಇಂದು ಬಂದೆ, ನಾಳೆ ಹೊರಟೆ...

**ವ್ಯಕ್ತಿ**: ನೀನು ಇಲ್ಲಿಗೆ ಬಂದ ಕೆಲಸ ?

**ಯುವಕ** : ಹೇಳ್ತೀನಿ, ಹೇಳ್ತೀನಿ... ಊಟಮಾಡಿ, ಸುಧಾರಿಸಿಕೊಂಡು ಹೇಳ್ತೀನಿ.... ಅದೊಂದು ದೊಡ್ಡ ಕಥೆ... ಆಗ ನಿಮ್ಗೇ ಗೊತ್ತಾಗುತ್ತೆ... ಕೆಲಸ ಮುಗಿದ ಮೇಲೆ ನಾನು ಎಲ್ಲೂ ನಿಲ್ಲೋನಲ್ಲ...



**ಹೆಣ್ಣು** : ನಿನ್ನ ಕೆಲಸದ ಕಥೇನ, ಊಟ ಮುಗಿದ ಮೇಲೇ ಹೇಳು...

**ಯುವಕ** : ಒಟ್ನಲ್ಲಿ, ನನ್ನ ಕೆಲಸದಲ್ಲಿ ನನಗೆ ಖುಷಿಯಿದೆ... ನನಗೆ ಎಲ್ಲಾ ಒಂದೆ, ಎಲ್ಲರೂ ಒಂದೆ... *(ನಗು)* ತಮಾಷೆ ಅಂದ್ರೆ, ನನಗೆ ಎಲ್ಲರ ಪರಿಚಯವಿರುತ್ತೆ, ಆದ್ರೆ ನನ್ನ ಪರಿಚಯ ಯಾರಿಗೂ ಇರಲ್ಲ... *(ನಗು)* ನೀವೇ ಒದ್ದಾಡಿದಿರಲ್ಲಾ ?

**ಹೆಣ್ಣು**: ಅಭಯ... ನಿನ್ನ ಮಾತೇ ಒಂದು ಒಗಟು... ಬಿಡಿಸಿ ಹೇಳು ಅಭಯಾ... ಈ ವಯಸ್ಸಾದ ಮುದುಕಿಗೆ ಅರ್ಥವಾಗಲ್ಲ...

**ವ್ಯಕ್ತಿ**: ಹೌದು ಅಭಯ, ಹೌದು.

**ಯುವಕ** : ಹೇಳ್ತೀನಿ, ಹೇಳ್ತೀನಿ... ನಾನು, ನಿಮಗೆ ಹೇಳ್‌ದಿರಾ ಇನ್ನು ಯಾರಿಗೆ ಹೇಳ್‌ಬೇಕು... ನೀವು ಮಾಡಿರೋ ಬಿಸಿಬಿಸಿ ಊಟಮಾಡ್ತಾ, ಎಲ್ಲ ಬಿಡಿಸಿ ಹೇಳ್ತೀನಿ... ಊಟ ರೆಡಿನಾ ಅತ್ತೆ ?...

**ಹೆಣ್ಣು**: ಏನು ಊಟನೋ, ಏನೋ ?... ನೀವು ಮಾತ್ರೆ ತಕೊಳ್ಳಿ... ಅಭಯ... ನೀನು ಬಂದೆ ಅಂತ, ಇದುವರೆಗೂ ಎದ್ದಿದ್ದೇವೆ, ಇಲ್ಲದಿದ್ದರೆ ಊಟದ ಶಾಸ್ತ್ರ ಮುಗಿಸಿ ಮುದುಡಿಕೊಳ್ತಿದ್ದೆವು...

**ವ್ಯಕ್ತಿ**: ವಯಸ್ಸು ಆಗ್ತಾ ಆಗ್ತಾ, ಖಾಯಿಲೆಗಳು ಬೇರೆ, ಮುತ್ತಿಗೆ ಹಾಕ್ತವೆ... ಏನೋ.. ಬದುಕಿದ್ದೇವೆ.

**ಹೆಣ್ಣು**: *(ವ್ಯಕ್ತಿ ಮಾತ್ರೆಗಳನ್ನು ತೆಗೆದುಕೊಳ್ಳಲು ಓಡಾಟ)* ಇರೋನೊಬ್ಬ ಮಗ ಅವಿನಾಶ್, ಅಮೆರಿಕಾದಲ್ಲಿದ್ದಾನೆ... ನಮ್ಮ ಮೊಮ್ಮಗನನ್ನು ನಾವಿನ್ನೂ ನೋಡೇ ಇಲ್ಲ... ವಯಸ್ಸಾದ ಮೇಲೆ ಒಂಟಿಯಾಗಿಬಿಟ್ಟಿದ್ದೀವಿ... ನನಗೆ ಅವರು, ಅವರಿಗೆ ನಾನು... ದುಡ್ಡು ಇದ್ದರೂ ನೆಮ್ಮದಿಯಿಲ್ಲ... ಹೊರಗೆ ಓಡಾಡಕ್ಕೆ ಆಗೊಲ್ಲ, ಒಳಗೆ ಕೂರೋಕೆ ಆಗೊಲ್ಲ.... ನಮ್ಮ ಹುಡುಗ Green card holder.... ಹೂ *(ನಿಟ್ಟುಸಿರು)* ನಾವು Black card holders... *(ಹೊರಗೆ ಪೊಲೀಸರು ಲಾಠಿ ಬಡಿಯುವ ಸದ್ದು, ನಾಯಿ ಬೊಗಳುವ ಸದ್ದು)*... ಇನ್ನೂ ಕಳ್ಳ ಸಿಕ್ಕಿಲ್ಲ ಅಂತ ಕಾಣುತ್ತೆ... ಇಲ್ಲೇ ಗಸ್ತು ತಿರುಗುತ್ತಾ ಇದ್ದಾರೆ...

**ವ್ಯಕ್ತಿ**: ಅವರ ಕೆಲಸ ಅವರು ಮಾಡ್ತಾ ಇದ್ದಾರೆ.... ಊಟದ ಕೆಲಸ ನಾವು ಮಾಡೋಣ...

**ಯುವಕ**: ನಿಮ್ಮ ಮಗ ಅಮೆರಿಕಾಕ್ಕೆ ಹೋಗಿ ಎಷ್ಟು ವರ್ಷ ಆಯ್ತು?... ನಿಮ್ಮ ಖಾಯಿಲೆ ?...

**ವ್ಯಕ್ತಿ**: ಅವನು ಹೋಗಿ, ಆಗ್ಲೆ ಎಂಟತ್ತು ವರ್ಷ ಆಯ್ತು... ನಾನು ಖಾಯಿಲೆಯ ಅಕ್ಷಯ ಪಾತ್ರೆ... ಒಂದೇ ಎರಡೇ... ಸಾಯೋವರೆಗೂ ತಪ್ಪಿದ್ದಲ್ಲ ಸೂಜಿ, ಗುಳಿಗೆ...

**ಹೆಣ್ಣು**: ನಮ್ಮ ಅವಿನಾಶ್ ಅಲ್ಲೆ, ನಾವು ಇಲ್ಲೇ... ಬೇಕಾದಷ್ಟು ಹಣ ಕಳಿಸ್ತಾನೆ... ಫೋನ್ ಮಾಡ್ತಾನೆ... ಇ-ಮೇಯಿಲ್ ಮಾಡ್ತಾನೆ... ಚಾಟ್ ಮಾಡ್ತಾನೆ... ಅಭಯಾ... ಹತ್ತಿರ ಇದ್ದಷ್ಟು ಬರ್‍ತದಾ ?... ಈಗ ನಮ್ಮ ಪಾಲಿಗೆ ನಾವೇ. ಬಂದ ನೆಂಟರು-ಇಷ್ಟರು ಎಷ್ಟು ದಿನ ತಾನೆ ಇರ್‍ತಾರೆ ? *(ಸೆರಗಿನಿಂದ ಕಣ್ಣೀರು ಒರೆಸಿಕೊಳ್ಳುವಳು)*

**ಯುವಕ**: ಏಕೆ ಅಷ್ಟು ಬೇಜಾರು ಪಟ್ಟುಕೋತಿರಾ ?... ಜಗತ್ತೆ ಬದಲಾಗಿದೆ.... ಈಗ ದೂರ ಇದ್ದೋರೇ ನೆಂಟರು, ಹತ್ತಿರ ಇದ್ದೋರೇ ಆಪ್ತರು... ಇವತ್ತು ನಿಮ್ಮ ಅಭಯ ಬಂದ, ಜೊತೆಯಲ್ಲಿ ಊಟ ಮಾಡಿದ... ಇವತ್ತಿಗಂತೂ ನಾನೇ ನಿಮ್ಮ ಮಗ... ಎಲ್ಲಕ್ಕೂ ಒಂದು ಕೊನೆ ಇದೆಯಲ್ಲ...

**ವ್ಯಕ್ತಿ**: ಅಭಯಾ... ನೀನು ಬಂದೆ, ಬಂದ ಗಳಿಗೇಲೇ ಹತ್ತಿರವಾಗಿಬಿಟ್ಟೆ... ನಾವು ಕೇಳಿಕೊಂಡು ಬಂದದ್ದು ಇಷ್ಟು... ನಮ್ಮ ಹಣೇಬರಹ... ಇವಳಿಗೆ ಇಪ್ಪತ್ತನಾಲ್ಕು ಗಂಟೆ ಮಗನ ಯೋಚನೆ... ಮಗ ಬರೊಲ್ಲ... ಇವಳು ಬಿಡೊಲ್ಲ... ಈ ಇದ್ದೂ ಇಲ್ಲದ ಸ್ಥಿತಿನೇ, ನಮ್ಮ ನೆಮ್ಮದಿ ಹಾಳ್‌ಮಾಡಿರೋದು...

**ಯುವಕ** : ಚಿಯರ್‌ಅಪ್... ಚಿಯರ್‌ಅಪ್... ಊಟಕ್ಕೆ ರೆಡಿ ತಾನೆ ?... *(ವ್ಯಕ್ತಿಯ ಹಲ್ಲುಗಳನ್ನು ಗಮನಿಸಿ)* ನಿಮ್ಮ ಹಲ್ಲುಸೆಟ್ ಹೊಸದೊ ? ಹಳೆಯದೊ ?.... ಇನ್ನೂ ಸೆಟ್ ಆಗಿಲ್ಲ.. ಮಲಗೋವಾಗ ತೆಗೆದಿಟ್ಟು ಮಲಕ್ಕೊಂತಿರೊ ? ಹಾಕ್ಕೊಂಡೇ ಮಲಕ್ಕೊಂತಿರೋ ?....

**ವ್ಯಕ್ತಿ**: ಹೊಸದೇ... ಇನ್ನೂ ಸೆಟ್ ಆಗಿಲ್ಲ.... ಒಂದೆರಡು ತಿಂಗಳಲ್ಲಿ ಸೆಟ್ ಆಗುತ್ತೆ ಅಂತ ಡಾಕ್ಟರ್ ಹೇಳಿದ್ದಾರೆ.

**ಯುವಕ** : ಹೋಗ್ಲಿ ಬಿಡಿ, ಹೋಗ್ಲಿ ಬಿಡಿ.... ಊಟ ಮಾಡ್ತಾ ಮಾಡ್ತಾ ಹಲ್ಲುಸೆಟ್ ಸರಿಹೋಗುತ್ತೆ.... ಅತ್ತೆ ಊಟಕ್ಕೆ ರೆಡಿಮಾಡಿ....

**ವ್ಯಕ್ತಿ**: ನಮಗೆ ಸಾವಿಗೆ, ಬದುಕಿಗೆ ಅರ್ಥವೇ ಗೊತ್ತಾಗುತ್ತಿಲ್ಲ.. ಇವಳಿಗೆ ಆತಂಕವೇ ಆನಂದ... ಅದನ್ನೇ enjoy ಮಾಡ್ತಾಳೆ... *(ನಿಟ್ಟುಸಿರು)*

**ಯುವಕ** : ಚಿಯರ್‌ಅಪ್ ಮಾವ, ಚಿಯರ್‌ಅಪ್.... ಅತ್ತೆ ಮೊದಲು ನೀವು ಊಟರೆಡಿ ಮಾಡಿ... ಇವತ್ತು ಏನು ಹುಳಿ ಅತ್ತೆ ?...

**ಹೆಣ್ಣು**: ಆಲೂಗಡ್ಡೆ-ಈರುಳ್ಳಿ ಹುಳಿ...

**ಯುವಕ** : Wonderful.... ಹೊಟ್ಟೆ ತುಂಬಾ ಚನ್ನಾಗಿ ಊಟಮಾಡ್ಬೇಕು... ಅಲ್ಲಿಗೆ ಇವತ್ತಿನ ಕೆಲಸ ಮುಗೀತು.... ನಾಳೆ ಮಾತು ನಾಳೆ...

**ವ್ಯಕ್ತಿ**: ನಾಳೆ ?

**ಯುವಕ** : *(ನಗು)* ನಾಳೆ ಯಾರಿಗೂ ಇಲ್ಲ.. ಸತ್ಯ ಅಂದರೆ, ಆಲೂಗಡ್ಡೆ-ಈರುಳ್ಳಿ ಹುಳಿನೇ ವಾಸ್ತವ... ಮೊದಲು ಅದನ್ನ ಮುಗಿಸೋಣ... ನಾನು ಬಂದಿದ್ದರಿಂದ, ನಿಮಗೆ ತೊಂದರೆ ?

**ಹೆಣ್ಣು**: *(ಅಡಿಗೆ ಮನೆ ಕಡೆ ಹೊರಡುತ್ತಾ)* ಇಲ್ಲ, ಇಲ್ಲ.... ಮನಸ್ಸಿಗೆ ಒಂದಿಷ್ಟು ಸಂತೋಷವಾಯ್ತು.... ಅಭಯಾ...

**ವ್ಯಕ್ತಿ**: ದಿನಾ, ನನ್ನ ಮುಖ ಅವಳು, ಅವಳ ಮುಖ ನಾನು ನೋಡ್ತಾ, ಮಾತಾಡ್ತಾ ಇದ್ದಿವಿ... ನೀನು ಬಂದಿದ್ದು ನಮಗೊಂದು change. ....ಮೊದಲು ಮೊದಲು ಮಕ್ಕಳ progress ಬಗ್ಗೆ ಖುಷಿಯಾಗುತ್ತೆ, ಆಮೇಲೆ, ಬರ್ತಾ ಬರ್ತಾ ಏನೂ ಅನ್ನಿಸೋದೇ ಇಲ್ಲ.... ಕೆಲವು ಸಲ, ಅವರಿವರ ಮುಂದೆ ಮಕ್ಕಳ ಬಗ್ಗೆ, progress ಬಗ್ಗೆ, ನಾಟಕ ಆಡ್ತೇವೆ.... ಎಲ್ಲಾ ಖಾಲಿ, ಖಾಲಿ....

**ಯುವಕ** : ಈ ಸಂಬಂಧಗಳೇ ಹೀಗೆ... ಹತ್ತಿರ ಇದ್ದಾಗ ಹತ್ತಿರ ಅಂತೀವಿ, ದೂರ ಇದ್ದಾಗ ದೂರ ಅಂತೀವಿ... ಊಟಕ್ಕೆ ಏಳರಿ ಮಾವ... ನಾನಂತು ನಿಂತಕಡೆ ನಿಲ್ಲೋದಿಲ್ಲ, ಕೂತಕಡೆ ಕೂಡೋದಿಲ್ಲ.. ನಡೀರಿ, ನಡೀರಿ...

**ವ್ಯಕ್ತಿ**: ಮಾತು ಎಲ್ಲಿ ಎಲ್ಲೊ ಹೋಗ್ತಾ ಇದೆ.... ಬಹಳ ಹೊತ್ತಾಯ್ತು... ಅಭಯಾ... ಹೊಟ್ಟೆ ಚೆನ್ನಾಗಿ ಹಸಿದಿರ್‌ಬೇಕು ಅಲ್ಲವಾ ?

**ಯುವಕ** : ಹೌದು ಮಾವ.... double ಹಸಿವಾಗಿದೆ... ಅತ್ತೆ ಮಾಡಿದ ಅಡಿಗೆಯಲ್ಲಿ ನಿಮಗೆ sample ಸಿಕ್ಕುತ್ತೊ ಇಲ್ಲವೊ ಹೇಳಲಾರೆ *(ನಗು)*... *(ಎಲ್ಲರೂ ಅಡಿಗೆ ಮನೆ ಕಡೆ ಹೆಜ್ಜೆ ಹಾಕುವರು)* ಅಂತೂ, ಎಲ್ಲಕ್ಕೂ ಒಂದು ಕೊನೆ ಇದ್ದೇ ಇದೆಯಲ್ಲ..

ಅತ್ತೆ ಕೊಟ್ರು ಅನ್ನ-ಹುಳಿ-ಮೊಸರು
ಬಂದೇ ಬಂತು ಹಾರಿಹೋಗಿದ್ದ ಉಸಿರು
ಮಾವ ಕೊಟ್ರು ಬೆಚ್ಚಗಿರೋ ರೂಮು
ಇಲ್ಲದೆ ಇದ್ರೆ ಫ್ರಿಜ್‌ನ ಐಸ್‌ಕ್ರೀಮು

*(ಧ್ವನಿ ನಿಧಾನವಾಗಿ ಕ್ಷೀಣಿಸುತ್ತದೆ. ನಾಯಿ ಜೋರಾಗಿ ಬೊಗಳುತ್ತದೆ. ರಂಗಸ್ಥಳದಲ್ಲಿ ಪೂರ್ಣ ಕತ್ತಲೆ)*

ವಿಷಾದದ ಸಂಗೀತ ಮೇಲುದನಿಯಲ್ಲಿ ಮೂಡಿದಂತೆ, ರಂಗಸ್ಥಳದಲ್ಲಿ ಬೆಳಕು ತೂಗುಕುರ್ಚಿಯ ಮೇಲೆ ಬೀಳುತ್ತದೆ. ತೂಗುಕುರ್ಚಿಯ ತಲೆಯ ಭಾಗದಲ್ಲಿ, ಒಂದು ಹಣತೆ ಉರಿಯುತ್ತಿದೆ. ಅದರ ಸುತ್ತಾ ಹೂಗಳನ್ನು ಇಡಲಾಗಿದೆ. ತೂಗು ಕುರ್ಚಿಯ ಕೆಳ ಭಾಗದಲ್ಲಿ 'ಹೆಣ್ಣು' ತಲೆತಗ್ಗಿಸಿ ಕುಳಿತಿದೆ. ಹಿನ್ನೆಲೆಯ ವಿಷಾದ ಸಂಗೀತ ಕ್ಷೀಣಗೊಳ್ಳುತ್ತಿದ್ದಂತೆ, ಬೆಳಕು ಕ್ಷೀಣಗೊಂಡು, ರಂಗಸ್ಥಳದಲ್ಲಿ ಸಂಪೂರ್ಣ ಕತ್ತಲೆ ಆವರಿಸುತ್ತದೆ.

*(ತೆರೆ)*

**ಚಿ. ಶ್ರೀನಿವಾಸರಾಜು**
೨೧(ಲ) 'ಚಿರಂಜೀವಿ', ಹಳೇ ಈಜುಕೊಳದ ರಸ್ತೆ, ಕೋದಂಡರಾಮಪುರ, ಮಲ್ಲೇಶ್ವರ
ಬೆಂಗಳೂರು - ೫೬೦ ೦೦೩



# ಲೋಕಾಯುಕ್ತರ ಕಾರ್ಯವ್ಯಾಪ್ತಿ ಮತ್ತು ಪರಿಣಾಮ

ಾಗ್ಗೆ ಪತ್ರಿಕೆಗಳಲ್ಲಿ ಸಮಾಚಾರ ಮಾಡುವ ರಾಜ್ಯ ಲೋಕಾಯುಕ್ತರ ಕಾರ್ಯವ್ಯಾಪ್ತಿ ಮತ್ತು ಪರಿಣಾಮಗಳನ್ನು ುರಿತಂತೆ ತಮ್ಮ ಅನಿಸಿಕೆಗಳನ್ನು ತಿಳಿಸಲು ನಮ್ಮ ಓದುಗರನ್ನು ಕೇಳಿಕೊಳ್ಳಲಾಗಿತ್ತು. ಅವರಿಗೆ ಸೂಚಿಸಲಾಗಿದ್ದ ಪ್ರಶ್ನೆಗಳು ಇವು:

ಲೋಕಾಯುಕ್ತರು ಸುದ್ದಿ ಮಾಡಿದಾಗ ನಿಮ್ಮ ತಕ್ಷಣದ ಅನಿಸಿಕೆಗಳೇನು ?

. ತಮ್ಮ ಕಾರ್ಯಾಚರಣೆಯು ಫಲಪ್ರದವಾಗಲು ಲೋಕಾಯುಕ್ತರು ಅನುಸರಿಸಬಹುದಾದ ವಿಧಾನಗಳು ಯಾವುವು ?

೩. ನಿಮ್ಮ ಪ್ರಕಾರ ಭ್ರಷ್ಟಾಚಾರಕ್ಕೆ ಮೂಲಕಾರಣಗಳೇನು ಮತ್ತು ಅದನ್ನು ತಡೆಗಟ್ಟಲು ಜನರು ಏನು ಮಾಡಬಹುದು ?

೪. ನೀವು ನೀಡುವ ಸಲಹೆಯನ್ನು ಕಾರ್ಯಗತಗೊಳಿಸುವುದರಲ್ಲಿ ಸ್ವತಃ ನೀವು ಹೇಗೆ ಭಾಗಿಗಳಾಗಬಲ್ಲಿರಿ ?

೫. "ಭ್ರಷ್ಟರನ್ನು ಹಿಡಿದು ಬಡಿಯಿರಿ" ಎಂದು ಒರಿಸ್ಸಾದ ಮಾಜಿ ಮುಖ್ಯಮಂತ್ರಿ ಬಿಜೂ ಪಟ್ನಾಯಕ್ ಹೇಳಿದ್ದರು. (ಆದರೆ ಯಾರೂ ಯಾರನ್ನೂ ಬಡಿಯಲಿಲ್ಲ.) ಇಂತಹ ಕ್ರಮಗಳು ಯಾವುವು ಮತ್ತು ಅವು ಪರಿಣಾಮಕಾರಿಯೆ ? ಹೇಗೆ ?

೬. ರಾಜಕಾರಣಿ ಮತ್ತು ರಾಜಕಾರಣಿಯಲ್ಲದ ವ್ಯಕ್ತಿ, ಇಬ್ಬರೂ ಒಬ್ಬರಿಗೊಬ್ಬರು ಆಸರೆಯಾಗಿ ಭ್ರಷ್ಟತೆಯನ್ನು ಬಲಿಷ್ಠಗೊಳಿಸುತ್ತಾರೆಯೇ ? ನಿಮ್ಮ ಉತ್ತರಕ್ಕೆ ಸಮರ್ಥನೆ ಏನು ?

ಇದಕ್ಕೆ ಪ್ರತಿಕ್ರಿಯೆಗಳು ಹಲವು ಬಂದಿದ್ದುವಾದರೂ ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಪ್ರಕಟಿಸಲಾಗಿದೆ. ಪ್ರತಿಕ್ರಿಯಿಸಿದ ಎಲ್ಲ ಓದುಗರಿಗೂ 'ಹೊಸತು' ಕೃತಜ್ಞತೆ ಸಲ್ಲಿಸುತ್ತದೆ.

– ಸಂಪಾದಕ

## ಲೋಕಾಯುಕ್ತರ ಕಾರ್ಯವ್ಯಾಪ್ತಿ

*– ಪ್ರೊ|| ಎಚ್. ಜಿ. ಸಣ್ಣಗುಡ್ಡಯ್ಯ*

**ಲೋ**ಕಾಯುಕ್ತರ ಧಾಳಿಯ ವರದಿಗಳು, ಲೋಕಾಯುಕ್ತದ ಕಾರ್ಯವಿಧಾನದ ಬಗೆಗೆ ನೌಕರರ ಸಂಘದ ಮುಖಂಡರ ಪ್ರತಿಧಾಳಿ, ಅಧಿಕಾರಿಗಳು ಮುಖ್ಯ ಕಾರ್ಯದರ್ಶಿಯವರಿಗೆ ದೂರು ಕೊಟ್ಟಿರುವ ಸುದ್ದಿಗಳು – ಇದನ್ನೆಲ್ಲ ಓದಿದಾಗ ಎದುರು ನಿಲ್ಲುವ ಒಂದು ಪ್ರಶ್ನೆ: 'ಹಾಲಿ ಲೋಕಾಯುಕ್ತರ ನಿವೃತ್ತಿಯ ಅನಂತರ ಆ ಸ್ಥಾನದ ಗತಿ ಏನು ? ಮುಂದಿನ ಲೋಕಾಯುಕ್ತರೂ ಇದೇ ಕಾರ್ಯವೈಖರಿಯನ್ನೇ ಮುಂದುವರಿಸುವರೇ ?'

ಹೋದ ವರ್ಷ ರಾಜ್ಯಪಾಲ ಚತುರ್ವೇದಿಯವರು ಭ್ರಷ್ಟಾಚಾರದ ವಿರಾಡ್ರೂಪ ಕುರಿತು ನ್ಯಾ. ವೆಂಕಟಾಚಲ ಅವರ ಹೇಳಿಕೆಗೆ 'ಸ್ವಚರಿತ' ಎಂದು ಹೆಸರಿಟ್ಟು, ಸಮಜಾಯಿಷಿ ಹೇಳಲು ಪ್ರಯತ್ನಿಸಿದ್ದರು. ಆಗ ಸರ್ಕಾರವೇ ಲೋಕಾಯುಕ್ತದ ತೋಳುಗಳನ್ನು ಕತ್ತರಿಸುವ ಸನ್ನಾಹದಲ್ಲಿದೆ ಎನಿಸಿತ್ತು. ಕಾರ್ಯವ್ಯಾಪ್ತಿಯನ್ನು ಗುತ್ತಗೊಳಿಸುವುದೆಂದರೆ ವ್ಯಾಪ್ತಿಯೇ ಬೇಡ ಎಂದರ್ಥವಲ್ಲವೇ ? ಏಕೆಂದರೆ ಈಗಿರುವ ಅದರ ಕಾರ್ಯವ್ಯಾಪ್ತಿ ತೀರ ಕಡಿಮೆ. ಕಾರ್ಪೊರೇಷನ್ ಒಂದರ ಕಮೀಷನರ್ ಗಳಿಸಿದ ಅಕ್ರಮ ಆಸ್ತಿಯ ಮೌಲ್ಯ ಎಂಟು ಕೋಟಿ, ಮತ್ತೆ ಕೆಲ ಅಧಿಕಾರಿಗಳ ಗಳಿಕೆ ಎರಡು-ಮೂರು ಕೋಟಿ ರೂ.ಗಳಿಗೆ ಕಡಮೆಯಿಲ್ಲದಷ್ಟು! ಆಯಾ ವರ್ಷದ ಇಂಥ ಪ್ರಕರಣಗಳ ಒಟ್ಟು ಮಾಹಿತಿ ಕೊಟ್ಟು ಶ್ವೇತಪತ್ರಗಳನ್ನು ಹೊರಡಿಸಿದರೆ ನೆನಪಿಟ್ಟುಕೊಳ್ಳುವ ಕಷ್ಟ ತಪ್ಪುತ್ತದೆ.



ವೈದ್ಯ ಕಾಲೇಜೊಂದರ ಪ್ರೊಫೆಸರ್ ಹೆಚ್ಚುವರಿ ಅಂಕಗಳ ವಾಗ್ದಾನಕ್ಕೆ ಪ್ರತಿಯೊಬ್ಬ ವಿದ್ಯಾರ್ಥಿಯಿಂದ ಎರಡು ಸಾವಿರ ರೂ.ಗಳನ್ನು ಸಂಗ್ರಹಿಸಿ ವಿಷಯ ಬಯಲಾದಾಗ ಲೋಕಾಯುಕ್ತರ ಎದುರೇ ಹಣ ಮರು ಪಾವತಿಸಿದ ಪ್ರಸಂಗ, ಆಸ್ಪತ್ರೆಗಳಿಗೆ ಔಷಧಿ ಕೊಳ್ಳುವಾಗಿನ ನೂರಾರು ಕೋಟಿ ಮೊತ್ತದ ಅಕ್ರಮ ಕುರಿತು ಮಾಹಿತಿ ಕೊಟ್ಟ ನೌಕರರನ್ನು ಇಲಾಖೆಯ ವರಿಷ್ಠರು ಶಿಕ್ಷಿಸಿದ ಪ್ರಕರಣ, ದಿಗ್ಭ್ರಾಂತಿ ತರುವಂಥವು. ಪ್ರತ್ಯಕ್ಷ ತಪ್ಪೊಪ್ಪಿಕೊಂಡ ಭ್ರಷ್ಟರನ್ನು ದಂಡಿಸುವ ಬದಲು ಅಕ್ರಮ ಗಳಿಕೆಯನ್ನು ಹಿಂದಿರುಗಿಸಿ ಕ್ಷಮಾದಾನ ಪಡೆಯುವ ವಿಧಾನ ಯುರೋಪಿನ ಚರ್ಚುಗಳಲ್ಲಿ ಹಣ ಕೊಟ್ಟು ಕ್ಷಮಾದಾನಪತ್ರ ಕೊಳ್ಳುವ ರೂಢಿ ಇದ್ದುದನ್ನು ನೆನಪಿಸುವುದಿಲ್ಲವೆ ? ಇದು ನ್ಯಾಯ ವ್ಯವಸ್ಥೆಗೆ ಅನುಗುಣವಾದದ್ದೇ ?

ಎಷ್ಟೊಂದು ಸಾರ್ವಜನಿಕ ಇಲಾಖೆಗಳು ! ಒಂದು ಇಲಾಖೆಗೆ ವರ್ಷಕ್ಕೆ ಒಂದು ಭೇಟಿ ಸಾಕೆ ? ತನಿಖೆ ಮುಗಿಯಿತೆಂದರೆ ಮರುದಿನವೇ ಭ್ರಷ್ಟರ ಲೈಸನ್ಸ್ ಪುನರ್‌ನವೀಕೃತವಾದಂತಲ್ಲವೇ ? ಎಲ್ಲ ಇಲಾಖೆಗಳನ್ನೂ ಮತ್ತೆ ಮತ್ತೆ ತನಿಖೆಗೆ ಒಳಪಡಿಸಲು ಜಿಲ್ಲೆಗೊಬ್ಬ ಲೋಕಾಯುಕ್ತ ಕೂಡ ಸಾಲರು. ತಾಲ್ಲೂಕಿಗೊಬ್ಬ ರಾದರೂ ಬೇಕು.

ಲೋಕಾಯುಕ್ತರಿಗೆ ಇರುವ ಅಧಿಕಾರ ಏನೂ ಅಲ್ಲ. ಮಹಾಭ್ರಷ್ಟರಿಂದ ಅಲ್ಪ ಭ್ರಷ್ಟರವರೆಗೆ, ಅಪರಾಧ



## ಲೋಕಾಯುಕ್ತರ ಕಾರ್ಯವ್ಯಾಪ್ತಿ ಮತ್ತು ಪರಿಣಾಮ

ನಿರ್ವಿವಾದವಾಗಿ ಸಾಬೀತಾದಾಗ ಅಂಥವರಿಗೆ 'ತಲೆದಂಡ' ವಿಧಿಸದೆ ಹೋದರೆ ಭ್ರಷ್ಟರಾಗಲು ಅವಕಾಶಕ್ಕಾಗಿ ಕಾಯುತ್ತಿರುವವರನ್ನು ಯಾರು ತಡೆಯಬಲ್ಲರು? ಕಾರ್ಯವ್ಯಾಪ್ತಿ ಸಾಲದು, ಶಿಕ್ಷೆಗೆ ಅಧಿಕಾರವಿಲ್ಲ ಎನ್ನುವುದಾದರೆ ಲೋಕಾಯುಕ್ತವಾದರೂ ಏಕಿರಬೇಕು? ಉತ್ತರಕ್ಕಾಗಿ ತಿಣುಕಬಾರದು.

**ಪ್ರೊ|| ಎಚ್. ಜಿ. ಸಣ್ಣಗುಡ್ಡಯ್ಯ**, ೧ 'ಎ' ಅಡ್ಡರಸ್ತೆ
ಸಿದ್ಧಗಂಗಾ ಬಡಾವಣೆ, ತುಮಕೂರು - ೫೭೨ ೧೦೨

### ಭ್ರಷ್ಟಾಚಾರದ ವ್ಯಾಪ್ತಿ

—ಎಂ. ವಿ. ಭಟ್

೧. ಲೋಕಾಯುಕ್ತರಾದ ನ್ಯಾಯಮೂರ್ತಿ ಮಾನ್ಯ ಶ್ರೀ ವೆಂಕಟಾಚಲರಿಗೆ ಬೇರೇನೂ ಕೆಲಸವಿಲ್ಲವೆಂದು ಅನಿಸುತ್ತಿದೆ. ಯಾಕೆಂದರೆ ಲೋಕಾಯುಕ್ತರ ದಾಳಿಯಿಂದ ಈವರೆಗಿನ ಪರಿಣಾಮ ಶೂನ್ಯ. 'ಯಥಾಪೂರ್ವಮಕಲ್ಪಯತ್' ಎಂಬಂತೆ ರಾಜ್ಯದ ಎಲ್ಲಾ ಕಾರ್ಯಾಲಯಗಳಲ್ಲೂ ಭ್ರಷ್ಟಾಚಾರ ಎಂದಿನಂತೆ ನಡೆಯುತ್ತಲೇ ಇದೆ. ಅಲ್ಲ, ದಾಳಿಯ ಮೇಲೆ ಸಿಕ್ಕಿಬಿದ್ದ ಅಧಿಕಾರಿಗಳಿಗೆ, ನೌಕರರಿಗೆ ಇನ್ನು ಮುಂದೆ ಹೀಗೆ ಮಾಡಬೇಡಿ, ಎಂದು ಉಪದೇಶ ಮಾಡಿ, ಕಕ್ಕಿಸಿದ ಹಣವನ್ನು ಹಿಡಕೊಂಡು ಹೋಗುವುದಾದರೆ, 'ಇಂತಹ ದಿವಸ ನಿಮ್ಮ ಆಫೀಸಿಗೆ ಬರುತ್ತೇವೆ' ಎಂದು ಪೂರ್ವಸೂಚನೆ ಹೋದರೆ ಯಾವ ಭ್ರಷ್ಟನನ್ನೂ ಬಗ್ಗುಪಡಿಸಲು ಸಾಧ್ಯವಾಗದು.

೨. ಭ್ರಷ್ಟ ಖದೀಮರನ್ನು ಉಪದೇಶದಿಂದ ಸರಿದಾರಿಗೆ ತರಲು ಸಾಧ್ಯವಾಗದು. ಅದು ನೀರ ಮೇಲಿನ ಹೋಮವೇ ಸರಿ. ಕಾರ್ಯಾಚರಣೆ ಫಲಪ್ರದವಾಗಬೇಕಿದ್ದರೆ ಅವರಿಗೆಲ್ಲಾ ದಯಾದಾಕ್ಷಿಣ್ಯವಿಲ್ಲದೆ ಶಿಕ್ಷೆ ವಿಧಿಸುವುದೇ ಅನುಸರಿಸಬಹುದಾದ ವಿಧಾನ.



೩. ಭ್ರಷ್ಟಾಚಾರಕ್ಕೆ ಮೂಲಕಾರಣ ರಾಜಕೀಯ ಪಕ್ಷಗಳು ಮತ್ತು ಭ್ರಷ್ಟ ರಾಜಕೀಯ ಮುಖಂಡರು. ಪಕ್ಷಗಳು ಪಾರ್ಟಿಯ ಫಂಡಿಗೆಂದು, ರಾಜಕಾರಣಿಗಳು ಚುನಾವಣೆಯಲ್ಲಿ ಹೋರಾಡಲೆಂದು ಅಧಿಕಾರಿಗಳಿಂದ, ನೌಕರರಿಂದ ದೊಡ್ಡ ಪ್ರಮಾಣದಲ್ಲಿ ಹಣ ಕೀಳುವುದೇ ಕಾರಣವಾಗಿದೆ. ನಾಲ್ಕು ಸಾವಿರ ಸಂಬಳದ ಒಂದು ನೌಕರಿಗೂ ಒಂದು ಲಕ್ಷ ಲಂಚ ಕೇಳುವುದಾದರೆ, ಬಯಸಿದ ಸ್ಥಳಕ್ಕೆ ವರ್ಗವಾಗಿ ಹೋಗಬೇಕಾದರೆ ೫-೬ ಲಕ್ಷ ಪೀಕಿಸುವುದಾದರೆ ಪ್ರಯೋಜನ ಪಡೆದ ಆ ನೌಕರ, ಆ ಅಧಿಕಾರಿ ಖಾಲಿಯಾದ ತನ್ನ ಜೇಬು ತುಂಬಲು ಭ್ರಷ್ಟಾಚಾರಕ್ಕೆ ಕಾಲಿಟ್ಟೇತೀರುತ್ತಾನೆ. ಜೇಬನ್ನು ಖಾಲಿ ಮಾಡಿಕೊಂಡು ಅವನೇನೂ ಸಂಸಾರ ನಿರ್ವಹಣೆ ಮಾಡಿಕೊಳ್ಳುವುದಿಲ್ಲ.

೪. ಏನೇ ಆಗಲಿ, ಎಷ್ಟೇ ಕಷ್ಟವಾಗಲಿ, ಭ್ರಷ್ಟಾಚಾರಕ್ಕೆ ಆಸ್ಪದ ಕೊಡಬಾರದು. ನಮ್ಮ ಗೆಳೆಯರೊಬ್ಬರು ಜಮೀನಿನ ಖಾತಾ ಬದಲಾವಣೆಗೆ ಅರ್ಜಿ ಸಲ್ಲಿಸಿ, ಮತ್ತೆ ಮತ್ತೆ ನೆನಪು ಹುಟ್ಟಿಸಿ ಎರಡು ವರ್ಷಗಳೇ ಸಂದುಹೋದುವು. ಎರಡು ಸಾವಿರ ಲಂಚ ಕೇಳುತ್ತಾರಂತೆ. ಕೊಡಲಿಲ್ಲ, ಕೆಲಸವೂ ಆಗಲಿಲ್ಲ, ಆದರೆ ಇದೆಲ್ಲಾ ಸಾಮೂಹಿಕವಾಗಿ ಆಗಬೇಕಲ್ಲದೆ, ಒಬ್ಬನಿಂದ, ಇಬ್ಬರಿಂದ ಆಗುವ ಕೆಲಸವಲ್ಲ.

೫. ''ಭ್ರಷ್ಟರನ್ನು ಹಿಡಿದು ಬಡಿಯಿರಿ'', ''ಗಲ್ಲಿಗೇರಿಸಿ'' ಇತ್ಯಾದಿ ಸಲಹೆಗಳು ಪ್ರಾಯೋಗಿಕಗಳಲ್ಲ, ಊಟಕ್ಕೆ ಬಾರದ ಉಪ್ಪಿನಕಾಯಿಗಳು. ಚೀನಾದಲ್ಲಿರುವಂತೆ, ಸಿಂಗಾಪುರದಲ್ಲಿ ಇರುವಂತೆ ಭ್ರಷ್ಟನಿಗೆ ವಿಳಂಬವಿಲ್ಲದ ಶಿಕ್ಷೆಯೇ ಸಿದ್ಧೌಷಧ.

೬. ಇಂದಿನ ದಿನಗಳಲ್ಲಿ ರಾಜಕಾರಣಿಯಲ್ಲದ ವ್ಯಕ್ತಿಯೂ ಪ್ರಯೋಜನ ಪಡೆಯುವುದಕ್ಕಾಗಿ ರಾಜಕಾರಣಿಯೊಂದಿಗೆ ಸೇರಿಕೊಂಡು ಭ್ರಷ್ಟತೆಯನ್ನು ಬಲಿಷ್ಠಗೊಳಿಸುತ್ತಲೇ ಇರುತ್ತಾನೆ. ರಾಜ್ಯದಲ್ಲಿ ಕೃಷಿ ಭೂಮಿಯಲ್ಲಿ, ಗೋಮಾಳ ಪ್ರದೇಶದಲ್ಲಿ ಮನೆ ಕಟ್ಟಿ ಕುಳಿತುಕೊಳ್ಳಬಾರದೆಂದಿದ್ದರೂ ಜನರು ಸಾರಾಸಗಟು ಮನೆ ಕಟ್ಟುತ್ತಲೇ ಇದ್ದಾರೆ. ಯಾರು ಕಾರಣರು? ಯಾಕೆ? ಪರಿಣಾಮವೇನಾಗಿದೆ? ಸಾವಿರ, ಸಾವಿರ ಸಂಖ್ಯೆಯಲ್ಲಿ ಹೊರ ಪ್ರಾಂತದವರು ಬಂದು ಮನೆ ಕಟ್ಟಿ ಕುಳಿತುಕೊಳ್ಳುತ್ತಲೇ ಇದ್ದಾರೆ. ನಾವು ಬೆಂಗಳೂರಲ್ಲಿ ಕನ್ನಡಿಗರ ಸಂಖ್ಯೆ ಕಡಿಮೆಯಾಗುತ್ತಲೇ ಇದೆ ಎಂದು ಬೊಬ್ಬೆ ಹೊಡೆಯುತ್ತಲೇ ಇದ್ದೇವೆ. ಬಡ ಬೋರೇಗೌಡ ತನ್ನ ಬಳಿ ಇದ್ದ ಅಲ್ಪಸ್ವಲ್ಪ ಜಮೀನನ್ನು ಮೂರು ಕಾಸಿಗೆ ಮಾರಿ ಬೀದಿ ಪಾಲಾದ. ರಾಷ್ಟ್ರೀಯ ಹೆದ್ದಾರಿ ೪೮ರಲ್ಲಿ ಮಿತಿಮೀರಿ ಕಬ್ಬಿಣದ ಅದಿರುಗಳನ್ನು ಹೇರಿಕೊಂಡು ಲಾರಿಗಳು ಕಾನೂನುಬಾಹಿರವಾಗಿ ಸಾಲುಸಾಲಾಗಿ ಹಗಲಿರುಳು ಓಡಾಡುತ್ತಲೇ ಇರುತ್ತವೆ. ರಸ್ತೆ, ಸಂಕ ನುಚ್ಚು ನೂರಾಗುತ್ತಾ ಇವೆ. ಶಿರಾಡಿ ಘಾಟಿಯಲ್ಲಿ ೨-೩ ಗಂಟೆ ವಾಹನ ಸಂಚಾರ ನಿಂತು, ವಾಹನಗಳಲ್ಲಿ ಕುಳಿತ ರೋಗಿಗಳು, ಮಕ್ಕಳು ಅಳುತ್ತಲೇ ಇರುತ್ತಾರೆ. ಯಾಕೆ ಅಧಿಕಾರಿಗಳು ಸುಮ್ಮನಿದ್ದಾರೆ? ರಾಜಕಾರಣಿ ಮತ್ತು ರಾಜಕಾರಣಿಯಲ್ಲದ ವ್ಯಕ್ತಿಗಳೊಂದಿಗಿನ ಒಳವ್ಯವಹಾರ ಕಾರಣವಲ್ಲವೇ? ಇಬ್ಬರೂ ಸೇರಿಕೊಂಡು ಭ್ರಷ್ಟತೆಯನ್ನು ಬಲಿಷ್ಠಗೊಳಿಸುತ್ತಲೇ ಇರುತ್ತಾರೆ. ಇದೊಂದೆರಡು ಉದಾಹರಣೆಗಳು. ಇಂತಹ ಸಾವಿರ ಉದಾಹರಣೆಗಳು ನಮ್ಮ ರಾಜ್ಯದಲ್ಲಿ ಸಿಗಬಹುದು.

**ಎಂ. ವಿ. ಭಟ್**, 'ಶ್ರೀಮಿತ್ತೂರು', ಮೇದರಹಳ್ಳಿ
ಚಿಕ್ಕಬಾಣಾವರ, ಬೆಂಗಳೂರು - ೫೬೦ ೦೯೦

### ಮದ್ದು ಎಲ್ಲಿದೆ?

ವಿ. ಹೆಚ್. ಶಿವಕುಮಾರ್

೧. ಲೋಕಾಯುಕ್ತರು ಮೊದಲು ಸುದ್ದಿ ಮಾಡಿದಾಗ ಸರ್ಕಾರ ಒಳ್ಳೆಯ ಕೆಲಸ ಮಾಡುತ್ತಿದೆ ಎಂಬ ಅನಿಸಿಕೆಯಿತ್ತು. ಭ್ರಷ್ಟಾಚಾರವು ಸ್ವಲ್ಪಮಟ್ಟಿಗಾದರೂ ಕಡಿಮೆಯಾಗುತ್ತಿದೆ ಎಂಬ ನಂಬಿಕೆ ಎಲ್ಲರಲ್ಲೂ ಮೂಡಿತ್ತು. ಭ್ರಷ್ಟಾಚಾರದ ಅನೇಕ ಪ್ರಕರಣಗಳು ಬೆಳಕಿಗೆ ಬರತೊಡಗಿದಾಗ ನಮಗನಿಸುತ್ತದೆ, ನ್ಯಾಯಮೂರ್ತಿಗಳ ಹೆಸರನ್ನು ಬಳಸಿಕೊಂಡು ಸರ್ಕಾರ ಒಳ್ಳೆಯ ಇಮೇಜ್, ವಿಶ್ವಾಸ ಸೃಷ್ಟಿಸಿಕೊಳ್ಳಲು ಬಳಸುತ್ತಿದೆ ಎಂದು.

೨. ತಮ್ಮ ಕಾರ್ಯಾಚರಣೆ ಫಲಪ್ರದವಾಗಬೇಕಾದರೆ ಲೋಕಾಯುಕ್ತರು ಮೊಟ್ಟ ಮೊದಲು ಭ್ರಷ್ಟಾಚಾರ ಯಾವ ಯಾವ ಇಲಾಖೆಯಲ್ಲಿ ಹೆಚ್ಚು ನಡೆಯುತಿದೆ ಎಂಬುದನ್ನು ವೈಜ್ಞಾನಿಕವಾಗಿ ಸಮೀಕ್ಷೆ ಮಾಡಬೇಕು. ಅದರಂತೆ ಹೆಚ್ಚು ಭ್ರಷ್ಟಾಚಾರ ನಡೆಯುವ ಇಲಾಖೆಯಿಂದ ಭ್ರಷ್ಟಾಚಾರ ನಿರ್ಮೂಲನೆ



ಕಾರ್ಯಕ್ರಮ ಆಯುದ್ಧಕೊಳ್ಳಬೇಕು. ಕಾರ್ಯಾಚರಣೆಯನ್ನು ಗುಪ್ತವಾಗಿಡಬೇಕು. ಅದನ್ನು ಸಹವರ್ತಿಗಳಿಗೂ ವಿವರಿಸಬಾರದು. ಕಾರ್ಯಾಚರಣೆ ಆ ದಿನವೇ ಯೋಜಿಸಿ ಅಂದೇ ಮುಗಿಸುವಂತಿರಬೇಕು.

೩. ಭ್ರಷ್ಟಾಚಾರಕ್ಕೆ ಮೂಲಕಾರಣ ವ್ಯಕ್ತಿಯ ಮಾಸಿಕ ಕಡಿಮೆ ಸಂಬಳ. ಹೊರಗಿನ ಹೆಚ್ಚಿನ ವೆಚ್ಚ ಇರುವಾಗ ಅದನ್ನು ಸರಿಪಡಿಸಲು ಲಂಚ ಕೇಳುವುದು ಅನಿವಾರ್ಯ. ಇನ್ನು ಹಲವರಲ್ಲಿ ಅತೀ ಆಸೆ. ಶೀಘ್ರವೇ ಮನೆ-ಮಠ-ಹಣ ಗಳಿಸಿ ಶ್ರೀಮಂತರಾಗಬೇಕೆನ್ನುವ ಬಯಕೆ. ಭ್ರಷ್ಟಾಚಾರವನ್ನು ಸರ್ಕಾರವೇ ಬೇರುಸಹಿತ ನಿರ್ಮೂಲನ ಮಾಡಬಹುದು.

(ಅ) ಸರ್ಕಾರ ಎಲ್ಲರಿಗೂ ಬಹೂಪಯೋಗಿ ಗುರುತಿನ ಪುಸ್ತಕ ನೀಡುವುದು. ಅದು ವ್ಯಕ್ತಿಯ ಹುಟ್ಟಿದ ದಿನಾಂಕ, ವಿದ್ಯಾಭ್ಯಾಸ, ಉದ್ಯೋಗ, ಮಾಸಿಕ ಸಂಬಳ, ಮಾಸಿಕ ಆದಾಯ, ಮನೆ ಬಾಡಿಗೆ, ಹೊಲ, ಬಾಂಡ್‌ಗಳು, ಷೇರುಗಳಿಂದ ಬರುವ ಆದಾಯ, ಆಸ್ತಿ ವಿವರ, ಅದರ ಮೌಲ್ಯ, ಪ್ರತಿವರ್ಷ ಸರ್ಕಾರವೇ ಪರಿಶೀಲಿಸಿ ನವೀಕರಿಸಬೇಕು.

(ಆ) ಯಾವುದೇ ಆದಾಯದ ಆಸ್ತಿಯ ವಿವರ ಪುಸ್ತಕದಲ್ಲಿ ನಮೂದಿಸದಿದ್ದಲ್ಲಿ ಅವರನ್ನು ದೇಶಭ್ರಷ್ಟರೆಂದು ಪರಿಗಣಿಸಿ ನಮೂದಿಸಲಾಗದ ಆದಾಯ ಹಾಗೂ ಆಸ್ತಿಯನ್ನು ಸರ್ಕಾರ ಮುಟ್ಟುಗೋಲು ಹಾಕಿ ಅದನ್ನು ತನ್ನ ವಶಕ್ಕೆ ತೆಗೆದುಕೊಳ್ಳಬೇಕು.

(ಇ) ಯಾವುದೇ ವ್ಯಕ್ತಿ ಲಂಚ ಪಡೆದು ಮಿತಿಮೀರಿ ಆದಾಯ, ಆಸ್ತಿಗಳಿಸಿದ್ದಲ್ಲಿ ಅವರನ್ನು ದೇಶಭ್ರಷ್ಟರೆಂದು ಪರಿಗಣಿಸಬೇಕು.

(ಈ) ಯಾವುದೇ ವ್ಯಕ್ತಿ ಭ್ರಷ್ಟಾಚಾರ ಪ್ರಕರಣಗಳಲ್ಲಿ ಭಾಗಿಯಾಗಿದ್ದಲ್ಲಿ ಅವರನ್ನು ಸಮಾಜದ್ರೋಹಿಯೆಂದು ಪರಿಗಣಿಸಿ, ಕೆಂಪು ಪಟ್ಟಿಗೆ ಸೇರಿಸಿ, ಕೆಲಸದಿಂದ ತೆಗೆದು, ಸರ್ಕಾರದಿಂದ ಪಡೆಯುತ್ತಿರುವ ಸಂಬಳ, ಪಿಂಚಣಿ, ಮನೆ ಬಾಡಿಗೆ – ಇತರ ಸರ್ಕಾರ ಸೌಲಭ್ಯಗಳನ್ನು ಕೂಡಲೇ ರದ್ದುಗೊಳಿಸುವುದು.

೪. ಕೇಂದ್ರ ಹಾಗೂ ರಾಜ್ಯ ಸರ್ಕಾರ ನನ್ನ ಸಹಾಯ ಬಯಸಿದ್ದಲ್ಲಿ ನನ್ನ ಸಂಪೂರ್ಣ ಸಹಕಾರವನ್ನು ನೇರವಾಗಿ ನೀಡಬಯಸುತ್ತೇನೆ.

೫. ಭ್ರಷ್ಟಾಚಾರ ನಿರ್ಮೂಲವಾಗಬೇಕಾದರೆ ಕಾನೂನು ಇನ್ನೂ ಬಿಗುವಾಗಬೇಕು. ಮೇಲಿನಂತೆ ಬಹೂಪಯೋಗಿ ಗುರುತಿನ ಪುಸ್ತಕದಲ್ಲಿ ಬ್ಯಾಂಕ್, ಬಾಂಡ್, ಷೇರುಗಳಿಂದ ಬರುವ ಆದಾಯ, ಮಾಸಿಕ ಸಂಬಳ, ಆಸ್ತಿ ವಿವರ ಎಲ್ಲವನ್ನು ವರ್ಷ ವರ್ಷ ಕಡ್ಡಾಯವಾಗಿ ನವೀಕರಿಸಬೇಕೆನ್ನುವ ಕಾನೂನು. ಇದೇ ಪುಸ್ತಕದಲ್ಲಿ ಆಸ್ತಿ ಕರ, ಆದಾಯ ಕರ, ಜಲ ಮತ್ತು ವಿದ್ಯುತ್ ಬಿಲ್ ಕಟ್ಟಿದ ವಿವರ ಒಳಗೊಂಡಿರಬೇಕು.

೬. ಖಂಡಿತ ರಾಜಕಾರಣಿ ಹಾಗೂ ಅವರ ನಿಕಟವರ್ತಿಗಳು ಭ್ರಷ್ಟತೆಯನ್ನು ಬಲಿಷ್ಠಗೊಳಿಸುತ್ತಾರೆ. ಉದಾಹರಣೆಗೆ: ನಿಕಟವರ್ತಿಗಳ ಯಾವುದಾದರೂ ಸರ್ಕಾರದಿಂದ ಕೆಲಸವಾಗಬೇಕಾದರೆ ರಾಜಕಾರಣಿಗಳ ಶಿಫಾರಸ್ಸಿನೊಂದಿಗೆ ಹಣ ಹಾಗೂ ಜನಬಲದಿಂದ ಸರ್ಕಾರದ ಕೆಲಸವನ್ನು ಮಾಡಿಸಿಕೊಳ್ಳುವುದು. ಸರ್ಕಾರಿ ಕಟ್ಟಡ, ಕಾಲುವೆ ನಿರ್ಮಾಣ ತಮ್ಮ ನಿಕಟವರ್ತಿಗಳಿಗೆ ನೀಡಿ ಸರ್ಕಾರದ ಹಣವನ್ನು ಕೊಳ್ಳೆಹೊಡೆದಿರುವ ಅನೇಕ ಪ್ರಕರಣಗಳಿವೆ.

**ವಿ. ಹೆಚ್. ಶಿವಕುಮಾರ್**, c/o ಹೆಚ್. ಹನುಮಂತರಾವ್
ನಂ. ೪೭೭, ಲಕ್ಷ್ಮಿ ವೆಂಕಟೇಶ್ವರ ನಿಲಯ, ರಾಮನಗರ -೫೭೧ ೫೧೧

## ಭ್ರಷ್ಟಾಚಾರ ನಿರ್ಮೂಲನ ಸಾಧ್ಯವೇ ? – ಜಿ. ಟಿ. ನಾರಾಯಣರಾವ್

ಭ್ರಷ್ಟಾಚಾರ, ಕೊಲೆ, ದರೋಡೆ ಮುಂತಾದ ಸಮಾಜವಿರೋಧೀ ಚಟುವಟಿಕೆಗಳು ದೇಶದ ಆರೋಗ್ಯ ಸುಸ್ಥಿತಿಯಲ್ಲಿಲ್ಲ ಎಂಬುದರ ಲಕ್ಷಣಗಳು ಮಾತ್ರ – ಹೇಗೆ ಕಜ್ಜಿ, ತಲೆಬೇನೆ, ವಾಂತಿ ಮುಂತಾದವು ದೇಹದ ಆಂತರಿಕ ಪರಿಸ್ಥಿತಿ ಕೆಟ್ಟಿದೆ ಎಂಬುದರ ಬಾಹ್ಯ ಸೂಚಕಗಳೋ ಹಾಗೆ. ರಾಷ್ಟ್ರದ ಸರಾಸರಿ ಶೀಲ ಅಭಿವೃದ್ಧಿಯಾದ ಹೊರತು ಈ ಲಕ್ಷಣಗಳು ಖಂಡಿತ ಮರೆಯಾಗವು – "ಹುತ್ತವ ಬಡಿದರೆ ಉರಗ ಸಾವುದೇ ?" ಸ್ವತಂತ್ರ ಭಾರತದ ಮಹಾಸಾಧನೆ ಸರಾಸರಿ ವರಮಾನದ ಏರಿಕೆ, ಜೊತೆಯಲ್ಲೇ ಸರಾಸರಿ ಶೀಲದ ಇಳಿಕೆ. ಎಂದೇ "ಸತ್ಯವಂತರಿಗಿದು ಕಾಲವಲ್ಲ! ದುಷ್ಟ ಜನರಿಗಿದು ಸುಭಿಕ್ಷ ಕಾಲ!" ಈ ಪಲ್ಲವಿಯನ್ನು ಆಧರಿಸಿ ನಿಮ್ಮ ೬ ಪ್ರಶ್ನೆಗಳಿಗೆ ಉತ್ತರ ಬರೆಯಲು ಪ್ರಯತ್ನಿಸುತ್ತೇನೆ:

೧. ಅವರಿಗಿರುವ ಕಾನೂನಿನ ಮಿತಿಯಲ್ಲಿ ಅವರು ಹುತ್ತ ಬಡಿದಿದ್ದಾರೆ. ೨. ಪ್ರಚಲಿತ ವ್ಯವಸ್ಥೆಯನ್ನು ಶೀಲ ಸುಧಾರಣೆಯ ದಿಶೆಯಲ್ಲಿ ಅಭಿವೃದ್ಧಿಗೊಳಿಸಲು ವ್ಯಾಪಕ ಜನಾಂದೋಲನವನ್ನು ಪ್ರಾರಂಭಿಸುವುದು. ೩. ಜನರಿಗಿಂತಲೂ ಹೆಚ್ಚಾಗಿ ಜನಪ್ರತಿನಿಧಿಗಳು ಸತ್ಯರಿಕ್ತರಾಗಿರುವುದು. ಜನರು ವೈಯಕ್ತಿಕವಾಗಿ ಸಚ್ಛೀಲವನ್ನು ಸದಾ ಪಾಲಿಸುತ್ತಿರಬೇಕು. ೪. ವೈಯಕ್ತಿಕವಾಗಿ ಮತ್ತು ಸಾಮಾಜಿಕವಾಗಿ ನಾನು ನಿಷ್ಠುರ ಸತ್ಯವ್ರತನಾಗಿರಲು ಬದ್ಧನಾಗಿದ್ದೇನೆ. ೫. ಇತರರಿಗೆ ಬೋಧಿಸುವುದಕ್ಕಿಂತ ನಾವು ವೈಯಕ್ತಿಕವಾಗಿ ಸತ್ಯವಂತರಾಗಿರುವುದು ಲೇಸು. ನನ್ನ ಅನುಭವದಲ್ಲಿ ಇಂಥ ಆಚರಣೆ ಸುದೀರ್ಘ ಅವಧಿಯಲ್ಲಿ ಖುದ್ದು ನನಗೇ ಪ್ರಯೋಜನಕಾರಿಯಾಗಿದೆ, ಆಗುತ್ತಿದೆ. ೬. ಇಬ್ಬರು ಅನೀತಿವಂತರ ಅಪವಿತ್ರ ಮೈತ್ರಿಯಿದು. ಫಲಿತಾಂಶ ದೇಶದ ಅಧಃಪತನ.

ಇಲ್ಲಿ ಕನ್‌ಫ್ಯೂಶಿಯಸ್ ವಾಣಿಯನ್ನು ಉಲ್ಲೇಖಿಸಬಯಸುತ್ತೇನೆ: "ನಮ್ಮ ಜಗದ್ಭವ್ಯ ಪ್ರಾಚೀನರು ಅತ್ಯುನ್ನತ ಸದ್ಗುಣಗಳನ್ನು ಸ್ಪಷ್ಟಪಡಿಸಿಕೊಳ್ಳಲು ಮತ್ತು ಪ್ರಪಂಚಾದ್ಯಂತ ಪ್ರಸಾರಗೈಯ್ಯಲು ಬಯಸಿದಾಗ ತಮ್ಮ ರಾಜ್ಯಗಳಿಗೆ ಯುಕ್ತ ವ್ಯವಸ್ಥೆಯನ್ನು ಆವಾಹಿಸಿದರು, ಆ ಮೊದಲು ತಮ್ಮ ಕುಟುಂಬಗಳನ್ನು ನಿಯಂತ್ರಿಸಿದರು, ಆ ಮೊದಲು ತಮ್ಮನ್ನು ತಿದ್ದಿಕೊಂಡರು, ಆ ಮೊದಲು ಸ್ವಂತ ಆತ್ಮಗಳನ್ನು ಪರಿಪೂರ್ಣಗೊಳಿಸಿದರು, ಆ ಮೊದಲು ತಮ್ಮ ಚಿಂತನೆಗಳಲ್ಲಿ ನೈಷ್ಠಿಕರಾಗಿರಲು ಪ್ರಯತ್ನಿಸಿದರು, ಆ ಮೊದಲು ತಮ್ಮ ಜ್ಞಾನವನ್ನು ಗರಿಷ್ಠತೆಗೆ ವಿಸ್ತರಿಸಿದರು. ಜ್ಞಾನದ ಇಂಥ ಶೋಧನೆ ಎಂದರೆ ವಸ್ತುಗಳ ಶೋಧನೆ ಮತ್ತು ಅವು ವಾಸ್ತವವಾಗಿ ಹೇಗಿದ್ದುವೋ ಹಾಗೆಯೇ ಅವನ್ನು ನೋಡುವುದು ಎಂದರ್ಥ. ವಸ್ತುಗಳನ್ನು ಹೀಗೆ ಶೋಧಿಸಿದಾಗ ಜ್ಞಾನ ಸಂಪೂರ್ಣವಾಯಿತು, ಆಗ ಚಿಂತನೆಗಳು ನೈಷ್ಠಿಕವಾದುವು, ಆಗ ಆತ್ಮಗಳು ಪರಿಪೂರ್ಣವಾದುವು, ಆಗ ವ್ಯಕ್ತಿಗಳು ನೇರ್ಪುಗೊಂಡರು, ಆಗ ಕುಟುಂಬಗಳು ನಿಯಂತ್ರಿತವಾದುವು, ಆಗ ರಾಜ್ಯಗಳು ಯುಕ್ತ ವ್ಯವಸ್ಥೆ ಪಡೆದುವು, ಆಗ ಸಮಸ್ತ ಪ್ರಪಂಚವೂ ಸುಖಶಾಂತಿಮಯವಾಯಿತು." ಇದು ವ್ಯಾವಹಾರಿಕವೇ ಎಂದು ಪ್ರಶ್ನಿಸುವ ಬದಲು "ನಾನು ಈ ಪ್ರಕಾರವೇ ಬಾಳುತ್ತೇನೆ" ಎಂದು ದೃಢ ಸಂಕಲ್ಪಿಸಿ ಅನುಷ್ಠಾನಿಸುವುದು ಸರ್ವಶ್ರೇಷ್ಠ.

**ಜಿ. ಟಿ. ನಾರಾಯಣರಾವ್**, ೮ ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ
ಸರಸ್ವತೀಪುರ, ಮೈಸೂರು-೫೭೦ ೦೦೯

## ಭ್ರಷ್ಟಾಚಾರದ ಹುಟ್ಟು - ಅಳಿವು – ಡಾ॥ ಎಂ. ಎಸ್. ರಘುನಂದನ

ಮಾನವನ ಮಿದುಳಿನಲ್ಲಿ ಆಸೆ ಎಂಬುದು ಎಂದು ಹುಟ್ಟಿತೋ ಬಹುಶಃ ಭ್ರಷ್ಟಾಚಾರವು ಅಂದೇ ಹುಟ್ಟಿರಬಹುದೇನೋ. ಭ್ರಷ್ಟಾಚಾರಿ ಎಂದು ಯಾರಾದರೊಬ್ಬನಿಗೆ ತಲೆಪಟ್ಟಿ ಅಂಟಿಸಿ, ಯಾವ ರೀತಿಯಲ್ಲೂ ಭ್ರಷ್ಟಾಚಾರ ಮಾಡಿಲ್ಲದವರು ಇವನಿಗೆ ಮೊದಲ ಕಲ್ಲು ಹೊಡೆಯಿರಿ ಎಂದು ಏಸುಕ್ರಿಸ್ತನಂತೆ ಯಾರಾದರೂ ನಿರ್ದೇಶಿಸಿದರೆ ಯಾವ ಕೈಯೂ ಮೇಲೇಳಲಾರದು. ಭ್ರಷ್ಟಾಚಾರವನ್ನು ನೀರುಗೊಬ್ಬರ ಹಾಕಿ ಬೆಳೆಸಿ ಅದರಡಿಯಲ್ಲಿ ನಿಂತು ಸುಖಪಡುವವರನ್ನು ಮಾತ್ರ ನಾವು "ಭ್ರಷ್ಟಾಚಾರಿ" ಎಂದು ಕರೆಯುತ್ತೇವೆ ಅಷ್ಟೆ. ಭ್ರಷ್ಟಾಚಾರದ ಮರ ಬೆಳೆಯಬಾರದಿತ್ತು, ಅದನ್ನು ಬೆಳೆಸಿದ್ದು ಸಮಾಜದ, ನಮ್ಮೆಲ್ಲರ ತಪ್ಪು ಎನ್ನುವ ಭಾವನೆಗಿಂತ ಅದರ ನೆರಳು ನನಗಿಲ್ಲವಲ್ಲಾ ಎಂಬ ಪರಿತಾಪವೇ ನಮಗೆ ಹೆಚ್ಚು. ಭ್ರಷ್ಟಾಚಾರಿಯ ಮೇಲಿನ ಜುಗುಪ್ಸೆ, ಕೋಪಕ್ಕಿಂತ ಅಸೂಯೆ ಹೆಚ್ಚು. ಅದಕ್ಕಾಗಿ ಅವನ ಮೇಲೆ ಕ್ರಮ ಕೈಗೊಳ್ಳಬೇಕೆಂದು ಬೊಬ್ಬೆಹೊಡೆಯುತ್ತೇವೆ.

ಫಿಲಾಸಫಿಯನ್ನು ಪಕ್ಕಕ್ಕಿಟ್ಟು ಲೋಕಾಯುಕ್ತರತ್ತ ನೋಡೋಣ. ಲೋಕಾಯುಕ್ತರು ಸರಕಾರಿ ನೌಕರರ ಭ್ರಷ್ಟಾಚಾರವನ್ನು ಬಯಲು ಮಾಡಿ ಸುದ್ದಿ ಮಾಡಿದಾಗ "ಭೇಷ್, ಲಂಚಕೋರರಿಗೆ ತಕ್ಕ ಶಾಸ್ತಿಯಾಯಿತು. ಇವರನ್ನು ಹಿಡಿಯುವವರೇ ಇರಲಿಲ್ಲ" ಎಂಬುದು ತಕ್ಷಣದ ಪ್ರತಿಕ್ರಿಯೆಯಾದರೂ ಇದರಿಂದ ಸಾಧಿಸಿದ್ದೇನು ? ಎಂಬ ಪ್ರಶ್ನೆ ಹಿಂದೆಯೇ ಎದ್ದಿತು. ತಾವು ಹಿಡಿದವರಾರ ಮೇಲೂ ಕ್ರಮಕೈಗೊಳ್ಳುವ ಅಧಿಕಾರ ಲೋಕಾಯುಕ್ತರಿಗೆ ಇಲ್ಲ. ಲೋಕಾಯುಕ್ತರು ತೋರಿಸಿದವರ ಮೇಲೆ ಕ್ರಮಕೈಗೊಳ್ಳಲೇಬೇಕೆಂಬ ನಿಬಂಧನೆ ಸರಕಾರಕ್ಕಿಲ್ಲ. ನಮ್ಮನ್ನಾಳುವವರು ನಮ್ಮನ್ನು ಮರುಳು ಮಾಡಲು



## ಲೋಕಾಯುಕ್ತರ ಕಾರ್ಯವ್ಯಾಪ್ತಿ ಮತ್ತು ಪರಿಣಾಮ

ನಿರ್ದೇಶಿಸಿರುವ ನಾಟಕಗಳಲ್ಲಿ ಇದೂ ಒಂದು. ತಮ್ಮ ಕಾರ್ಯಾಚರಣೆ ಫಲಪ್ರದವಾಗಲು ಲೋಕಾಯುಕ್ತರು ಮಾಡಬೇಕಾದದ್ದೇನೂ ಇಲ್ಲ. ಅವರು ಪ್ರಾರಂಭಿಸಿದ್ದನ್ನು ಸರಕಾರ ಮುಂದುವರೆಸಬೇಕಷ್ಟೇ. ಭ್ರಷ್ಟಾಚಾರಕ್ಕೆ ಕಡಿವಾಣ ಹಾಕಬೇಕೆಂಬ ಕಾಳಜಿ ನಿಜವಾಗಲೂ ಯಾರಿಗಾದರೂ ಇದೆಯಾದರೆ ಅವರೆಲ್ಲಾ ಒಟ್ಟಾಗಿ ಸರಕಾರದ ಮೇಲೆ ಯಾವ ರೀತಿಯಲ್ಲಾದರೂ ಒತ್ತಡ ತರಬಹುದೇನೋ? ನಿಜವಾಗಿಯೂ ಭ್ರಷ್ಟಾಚಾರವನ್ನು ನಿರ್ಮೂಲವಾಗಿಸಬೇಕೆನ್ನುವವರು, ಯಾವ ರೀತಿಯಲ್ಲೂ ಭ್ರಷ್ಟಾಚಾರದಲ್ಲಿ ಭಾಗಿಗಳಾಗಿಲ್ಲದವರು ಇದ್ದಾರೆಯೇ? ಒಂದು ವೇಳೆ ಇದ್ದರೆ, ಅವರೆಲ್ಲಾ ಒಂದುಗೂಡುವುದು ಹೇಗೆ? ಸರಕಾರ ಮಣಿಯುವಂತೆ ಮಾಡುವುದು ಹೇಗೆ? ಇಷ್ಟೆಲ್ಲಾ ಯೋಚಿಸಿ ತಿಳಿಸುವ ಶಕ್ತಿ ನನ್ನ ತಲೆಗಿಲ್ಲ.

ಇದನ್ನು ಬರೆಯುತ್ತಿರುವ ನಾನು, ಓದುತ್ತಿರುವ ನೀವು (ನನ್ನ ಬಗ್ಗೆ ನಾನು ಹೇಳಿಕೊಳ್ಳಬಹುದು. ನಿಮ್ಮ ಕಡೆ ಕೈತೋರಿಸಲು ನಾನ್ಯಾರು? ಕ್ಷಮೆ ಇರಲಿ) ಮತ್ತು ಕಣ್ಮುಚ್ಚಿ ಕುಳಿತಿರುವ ನಮ್ಮ ಇತರ ಬಾಂಧವರೆಲ್ಲರು ಒಂದಲ್ಲಾ ಒಂದು ರೀತಿಯಲ್ಲಿ ಭ್ರಷ್ಟಾಚಾರಿಗಳೇ ಆಗಿರುವಾಗ ಅದಕ್ಕೆ ಕಾರಣ ಹುಡುಕಿ ತಡೆಗಟ್ಟುವುದು ಹೇಗೆ? ನನ್ನ ಅನಿಸಿಕೆಯಂತೆ ಭ್ರಷ್ಟಾಚಾರಕ್ಕೆ ಮೂಲಕಾರಣ ನಮಗೆ ಸಲ್ಲದ್ದನ್ನು ಪಡೆಯಬೇಕೆಂಬ ಆಸೆ. ಅದನ್ನು ತಡೆಗಟ್ಟಲಾದೀತೆ?

ನಮಗೆ ಹತ್ತಿರದವರೊಬ್ಬರು ಯಾರಾದರೂ ಪ್ರಭಾವೀ ಅಧಿಕಾರಿಯೋ ಮಂತ್ರಿಯೋ ಆದರೆ ನಮ್ಮ ತಲೆಯಲ್ಲಿ ಏಳುವ ವಿಚಾರವೇನು? ಅವರಿಂದ ಸಮಾಜಕ್ಕೆ ಒಳಿತೇನಾದೀತೆಂದು ನಾವು ಯೋಚಿಸುತ್ತೇವೆಯೇ? ಅವರಿಂದ ನಮಗೇನು ಉಪಕಾರವಾದೀತೆಂಬುದು ನಮ್ಮ ತಲೆಯಲ್ಲಿ ಮೂಡುವ ಮೊದಲ ವಿಚಾರ. ಕಾನೂನು ಕಾಯಿದೆಗಳನ್ನು ಕೊಂಚ ಸಡಿಲಿಸಿ ನಮಗೆ ಆಗಬೇಕಾದ ಕೆಲಸ ಯಾವುದಾದರೊಂದನ್ನು ಹಣ ಪಡೆಯದೆ ಮಾಡಿಕೊಟ್ಟಾರೇನೋ ಎಂಬ ಆಶಯ.

ನಾವೀಗ ಭ್ರಷ್ಟಾಚಾರಕ್ಕೆ ಒಗ್ಗಿಹೋಗಿದ್ದೇವೆ. ಅದನ್ನು ಒಪ್ಪಿಕೊಂಡು ನಮ್ಮ ದೈನಂದಿನ ವ್ಯವಹಾರದಲ್ಲಿ ತಂದುಬಿಟ್ಟಿದ್ದೇವೆ. ರಿಜಿಸ್ಟ್ರೇಷನ್ ಮಾಡಲು ಐದು ಸಾವಿರ ಕೇಳಬೇಕಾದರೆ ಸಬ್ ರಿಜಿಸ್ಟ್ರಾರನು ಹತ್ತು ಸಾವಿರ ಕೇಳಿದರೆ ಅದು ನಮಗೆ ಭ್ರಷ್ಟಾಚಾರ. ಕಂಪನಿಯೊಂದು ಸರಕಾರಕ್ಕೆ ಹತ್ತು ಲಕ್ಷ ಮೋಸಮಾಡಬಹುದಾದೆಡೆ ಹತ್ತು ಕೋಟಿ ಮೋಸ ಮಾಡಿದರೆ ಅದು ಭ್ರಷ್ಟಾಚಾರ. ಚುನಾವಣೆಯಲ್ಲಿ ರಾಜಕಾರಣಿಯು ಹತ್ತಿಪ್ಪತ್ತು ಮತಗಟ್ಟೆಗಳಿಗೆ ಮುತ್ತಿಗೆ ಹಾಕಿ ತನ್ನ ಕಡೆಗೆ ಮತಗಳನ್ನು ಎಳೆದುಕೊಳ್ಳುವ ಬದಲು ನೂರಾರು ಮತಗಟ್ಟೆಗಳಲ್ಲಿ ಅದನ್ನು ಮಾಡಿದರೆ ಅದು ಸುದ್ದಿ, ಅವ್ಯವಹಾರ. ಅಂದರೆ ಭ್ರಷ್ಟಾಚಾರದ ಕಾಳಸಂತೆ ಮಾಡುವವರು ಮಾತ್ರ ಭ್ರಷ್ಟಾಚಾರಿಗಳು. ನಾವು ಭ್ರಷ್ಟಾಚಾರವನ್ನು ನಿರ್ಮೂಲ ಮಾಡುತ್ತೇವೆಯೇ?

ಇಂತಹ ಭ್ರಷ್ಟಾಚಾರವನ್ನು ತಡೆಗಟ್ಟಲು ನಾನೇನು ಸಲಹೆ ಕೊಟ್ಟೇನು? ಹೇಗೆ ಭಾಗಿಯಾದೇನು? ಭ್ರಷ್ಟರನ್ನು ಹಿಡಿದುಬಡಿಯಿರೆಂದು ಪಟ್ನಾಯಕರು ಹೇಳಿದರು. ತನ್ನನ್ನು ತಾನೇ ಬಡಿದುಕೊಳ್ಳಲು ಯಾವನಿಗೆ ಸಾಧ್ಯ?

ದೇವರು ಎಲ್ಲೆಲ್ಲೂ ಇದ್ದಾನೆಂದು ನಮ್ಮ ನಂಬಿಕೆ. ಆದರೆ ಇವನು ದೇವರೆಂದು ತೋರಿಸಲು ಒಂದು ಮೂರ್ತಿಯನ್ನು ಕಡೆಯುವುದಿಲ್ಲವೇ? ಹಾಗೆ ಭ್ರಷ್ಟಾಚಾರ ಮೂರ್ತಿವೆತ್ತಂತಿರುವುದು ನಮ್ಮ ಸರಕಾರಿ ನೌಕರರಲ್ಲಿ ಮತ್ತು ರಾಜಕಾರಣಿಗಳಲ್ಲಿ. ಅವರ ಭ್ರಷ್ಟಾಚಾರಕ್ಕೆ ನೀರು ಗೊಬ್ಬರ ಹಾಕುವವರು ನಾವೇ. ನಮ್ಮ ತಲೆಯಲ್ಲಿ ಇಣಿಕಿ ನೋಡಿ ಎಲ್ಲೆಲ್ಲಿ ಏನೇನಿದೆ ಎಂದು ತಿಳಿಸುವ ದರ್ಶಕವೊಂದನ್ನು ಯಾರಾದರೂ ತಯಾರಿಸಿದರೆ ಇದಕ್ಕೆ ಸಮರ್ಥನೆ ಕೊಡಲು ಸಾಧ್ಯವಾದೀತು.

# ಲೋಕಾಯುಕ್ತರ ಕಾರ್ಯವ್ಯಾಪ್ತಿ ಮತ್ತು ಪರಿಣಾಮ



ಭ್ರಷ್ಟಾಚಾರವನ್ನು ತಡೆಗಟ್ಟುವುದನ್ನು ಪಕ್ಕಕ್ಕಿಟ್ಟು ಅದರ ತತ್ವ, ಸಿದ್ಧಾಂತ, ವ್ಯವಹಾರ, ಆಚರಣೆಗಳನ್ನು ನಿರೂಪಿಸುತ್ತಾ ಇನ್ನಷ್ಟು ಕಾಲ ಕಳೆಯಬಹುದು. ಬರವಣಿಗೆ ಉದ್ದವಾದರೆ ಸಂಪಾದಕರು ತೆಗೆದು ಬುಟ್ಟಿಗೆಸೆದಾರು. ಆದ್ದರಿಂದ ಇಷ್ಟು ಸಾಕು. ಭಗವಂತನೊಬ್ಬನಿದ್ದರೆ ಅವ ನಮ್ಮನ್ನು ಕಾಪಾಡಲಿ.

ಡಾ|| ಎಂ. ಎಸ್. ರಘುನಂದನ, ಸಾಯಿದತ್ತಾ ಅಪಾರ್ಟ್‌ಮೆಂಟ್ಸ್, ಸಿಲ್ವಾನಗರ, ಪೋಂಡಾ, ಗೋವ

## ಭ್ರಷ್ಟಾಚಾರಕ್ಕೆ ಎಲ್ಲಿದೆ ಮದ್ದು ?

– ಈರಪ್ಪ ಎಂ. ಕಂಬಳಿ

ಅರವಿ ಹಾವು ಮೈಮೇಲೆ ಎಸೆದು ಒಂದು ಕ್ಷಣ ಬೆಚ್ಚಿ ಬೀಳುವಂತೆ ಮಾಡುವ ಪ್ರಹಸನವೇ ಥೇಟು. ಇಕ್ಕಿಸಿಕೊಂಡವರು ಹಿಂದೆಯೇ ಸುಧಾರಿಸಿಕೊಂಡು ಇದೆಲ್ಲ ಮಾಮೂಲಿ – ಏನೂ ಆಗೇ ಇಲ್ಲದಂತೆ ಮುಂದುವರಿಯುತ್ತಾರೆ. ಯಾಕೆಂದರೆ, ಲೋಕಾಯುಕ್ತರ ಕೈಗೆ ಸಿಕ್ಕು ಮಾನಕ್ಕೆ ಹೆದರಿ ಇದುವರೆಗೆ ನೇಣು ಹಾಕಿಕೊಂಡು ಸತ್ತವರ್‍ಯಾರೂ ಇಲ್ಲ, ದುಡ್ಡಿನ ಮುಂದೆ ಎಲ್ಲವೂ ಗೌಣ – ಮುಚ್ಚಿಹೋಗುತ್ತದೆ. ಪರೋಕ್ಷವಾಗಿ ಆಳುವವರ ಬೆಂಬಲವಿದ್ದರಂತು ಮುಗಿಯಿತು. ಯಾರನ್ನು ದೂರುವುದು ? ನಾನು ಹೊಡೆದಂತೆ ಮಾಡುತ್ತೇನೆ, ನೀನು ಅತ್ತಂತೆ ಮಾಡು !

ತಾವು ಯಾವ ಕಚೇರಿಗೆ ಹೊರಟಿದ್ದೇವೆಂಬ ಸುಳಿವು ತಮ್ಮ ವಾಹನ ಚಾಲಕನಿಗೂ ತಿಳಿದಿರಬಾರದು. ಇಂಥ ಕಡೆ ಅಕ್ರಮ ಸಂಪತ್ತಿನ ಶೇಖರಣೆ ಯಾಗಿದೆಯೆಂದು ಒಂದು ಮೂಗರ್ಜಿ ಬಂದರೂ ತಪಾಸಿಸಲು ಮುಂದಾಗ ಬೇಕು. ಆದರೆ, ಅದಕ್ಕೂ ಮೊದಲು ಕಾನೂನು ಬಿಗಿಯಿದೆಯೆ, ಹಲ್ಲು ಚೂಪಾಗಿದೆಯೇ ಅನ್ನುವುದೂ ಅಷ್ಟೇ ಮುಖ್ಯ.

ಇತ್ತಿತ್ತಲಾಗಿ ಹೆಚ್ಚುತ್ತಿರುವ ನೈತಿಕ ಮೌಲ್ಯಗಳ ಕುಸಿತ, ಕೊಳ್ಳುಬಾಕ ಸಂಸ್ಕೃತಿಯ ದುರಾಸೆಗಳು, ಅದಕ್ಕೆ ಪೂರಕವಾಗಿ ಆಡಳಿತದಲ್ಲಿ ಅನುಸರಿಸುತ್ತಿರುವ ವಿಳಂಬ ನೀತಿ, ಅಪಾರದರ್ಶಕತೆಗಳ ಕಾರಣಗಳಿಂದಾಗಿ ಭ್ರಷ್ಟತೆ ತಾನೇ ತಾನಾಗಿ ವಿಜೃಂಭಿಸ ಲಾರಂಭಿಸುತ್ತದೆ. ಹುಡುಕಿಕೊಂಡು ಬಂದು ಕೊಡುವವರಿರುವಾಗ ತೆಗೆದುಕೊಳ್ಳು ವವರಿಗೇನು ಬರವೆ ? ಎಂಥ ಕಠಿಣ ಪರಿಸ್ಥಿತಿಗಳಲ್ಲೂ ಲಂಚ ಕೊಡಲಾರೆವೆಂದು ಜನರೇ ಪ್ರತಿಜ್ಞೆಗೈಯಬೇಕು. ಲಂಚ ಕೊಡುವುದೂ ಅಪರಾಧವೆಂಬುದಾಗಿ ತಿಳಿಹೇಳಿ, ಅಂಥ ಮನಸ್ಸುಗಳನ್ನು ಸಜ್ಜುಗೊಳಿಸಬೇಕು. ಜೊತೆಗೆ, ಆಡಳಿತ ಯಂತ್ರವನ್ನೂ ಚುರುಕುಗೊಳಿಸಬೇಕು. ಆಗ ಪರಿಸ್ಥಿತಿ ಸುಧಾರಿಸುವತ್ತ ಹೋದೀತು.

ಕೆಲಸ ಬೇಗ ಆಗಲಿ ಎಂದು speed money ನೀಡುವಂತಹ ಅಡ್ಡ ಹಾದಿ ಹುಡುಕದೆ, ತಡವಾದರೂ ಚಿಂತೆಯಿಲ್ಲ ಸರಿಯಾದ ದಾರಿಯಲ್ಲಿಯೇ ಹೋಗುವ ಸಂಕಲ್ಪ ನನ್ನದು. ತಲೆ ಗಟ್ಟಿಯಿದೆಯೆಂದು ಗೋಡೆಗೆ ಹಾಯದಿದ್ದರೂ, ಅಲ್ಲವೆಂದ ಕಡೆ ಒಂದು ದೂರು ಸಲ್ಲಿಸುವ ಕಲ್ಲು ಎಸೆಯುತ್ತಲೂ ಇರಬೇಕೆನ್ನುವವ ನಾನು.

ಹಿಡಿದು ಬಡಿಯದಿದ್ದರೂ, ನಮ್ಮ ಜನ ಭ್ರಷ್ಟರ ಕೊರಳ ಪಟ್ಟಿ ಎಳೆದು ಕೇಳುವ ಧಾರ್ಷ್ಟ್ಯವನ್ನಾದರೂ ತೋರದಿದ್ದರೆ ಹೇಗೆ ? ಸಾರ್ವಜನಿಕರ ತೆರಿಗೆ ಹಣದಲ್ಲಿ ಬದುಕುತ್ತಿರುವ ನೌಕರರನ್ನು ಸರಿಯಾಗಿ ಕೆಲಸ ಮಾಡುವಂತೆ ಸಾರ್ವಜನಿಕರೇ ಜಡಿದು ಕೇಳಬೇಕು. ಮೇಲಕ್ಕೆ ದೂರು ನೀಡಬೇಕು.

ಹೌದು, ಪರೋಕ್ಷವಾಗಿ, ಪ್ರತ್ಯಕ್ಷವಾಗಿ ರಾಜಕಾರಣಿ ಮತ್ತು ಸಾರ್ವಜನಿಕರ ಬೆಂಬಲವಿರುವುದರಿಂದಾಗಿಯೇ ಭ್ರಷ್ಟತೆ ಇವತ್ತು ಇಷ್ಟೊಂದು ಅನಿವಾರ್ಯವಾಗಿ ಇರುವುದು; ಲಂಗುಲಗಾಮಿಲ್ಲದೆ ಹರಡುತ್ತಿರುವುದು. ಹಿಂದೆ ರಾಜ್ಯಪಾಲರೂ ಆಗಿದ್ದ ಆಂಧ್ರದ ರಾಜಕಾರಣಿ ಶ್ರೀಪ್ರಕಾಶಂ ''ನಾನು ಲಂಚವನ್ನು ತೆಗೆದು ಕೊಳ್ಳಲಾರೆ ಎಂದು ಬೇಕಾದರೆ ಪ್ರತಿಜ್ಞೆ ಮಾಡುತ್ತೇನೆ, ಆದರೆ, ಲಂಚ ಕೊಡುವುದಿಲ್ಲ ಎಂದು ಹೇಳಲಾರೆ'' ಎನ್ನುತ್ತಿದ್ದರು. ಪರಿಸ್ಥಿತಿ ಈ ಮಟ್ಟ ಮುಟ್ಟಿರುವಾಗ ಬೆಕ್ಕಿಗೆ ಗಂಟೆ ಕಟ್ಟುವವರು ಯಾರು ?

ವಿದ್ಯಾರ್ಥಿ ಸಮುದಾಯ – ಯುವ ಜನಾಂಗ ಎಚ್ಚತ್ತುಕೊಳ್ಳಬೇಕು, ಭ್ರಷ್ಟತೆ ಯನ್ನು ಸದೆಬಡಿಯುವುದೇ ಅವರ ಮುಂದಿರುವ ಆದರ್ಶವಾಗಬೇಕು. ವಾಸ್ತವ ವಾಗಿ ಈಗ ಹಾಗಾಗುತ್ತಿಲ್ಲ. ಯುವ ಜನಾಂಗವೂ ಭ್ರಷ್ಟ ವ್ಯವಸ್ಥೆಯ ಒಂದು ಅಂಗವಾಗುತ್ತಿರುವುದಕ್ಕೆ ವ್ಯಸನವಾಗುತ್ತಿದೆ. ಶಿಕ್ಷಣ ಪದ್ಧತಿ, ಸೂಕ್ತ ಉದ್ಯೋಗಾ ವಕಾಶಗಳೂ ಇಲ್ಲದೆ, ಅವರಿಗೆ ಭವಿಷ್ಯ ರೂಪಿಸಿಕೊಂಡು ಪ್ರಾಪ್ತ ವಯಸ್ಸಿನಲ್ಲಿ ದೇಶದ ಉತ್ಪಾದಕತೆಯಲ್ಲಿ ತೊಡಗಬೇಕಾದ ವಿಪುಲ ಅವಕಾಶಗಳೂ ಇಲ್ಲದೆ, ಜಣ ಆಕರ್ಷಣೆಗಳ ಹುಚ್ಚು ಹೊಳೆಯಲ್ಲಿ ಕೊಚ್ಚಿಕೊಂಡು ಹೋಗುತ್ತಿರುವಾಗ – ಮುಂದೊಂದು ದಿನ ದೇಶದೊಳಗಿನ ಅರಾಜಕತೆಗೆ ಅವರೇ ಅಣುಬಾಂಬು ಆದರೂ ಆಚ್ಚರಿಪಡಬೇಕಾಗಿಲ್ಲ, ಹೊರಗಿನ ಬಾಂಬ್ ಬೇಕಾಗಿಲ್ಲ !

ಈರಪ್ಪ ಎಂ. ಕಂಬಳಿ, ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ
ಕಾವೇರಿ ಭವನ 'ಎಫ್' ಬ್ಲಾಕ್, ಬೆಂಗಳೂರು - ೫೬೦ ೦೦೯

## ಇದೊಂದು ಹುಸಿ ಬಾಂಬ್

– ಡಾ|| ಎಚ್. ಗಿರಿಜಮ್ಮ

ಲೋಕಾಯುಕ್ತ ಗುಂಪಿನವರು ಸುದ್ದಿ ಮಾಡಿದಾಗ, ನನ್ನ ತತ್‌ಕ್ಷಣದ ಅನಿಸಿಕೆಗಳು ಹೀಗಿವೆ : ಮತ್ತೊಂದು ಹುಸಿ ಬಾಂಬ್ ಸಿಡಿಸಲು ಹೋಗಿದ್ದಾರೆ. ಏನಾದರೂ ದಾಖಲೆಗಳನ್ನು ತಾವು ಇನ್ನೂ ಕಾರ್ಯ ಮಾಡುತ್ತಿದ್ದೇವೆಂದು ಸ್ಪಷ್ಟ ಪಡಿಸಲು ಅವರಿಗೆ 'ಮೂಡ್' ಬಂದಾಗ ಹೋಗುತ್ತಾರೆ. ಆರಂಭದ ದಿನ ಗಳಿಂದಲೂ ಅವರು ಮಾಡಿದ್ದು ಬರೀ ಸುದ್ದಿ. ಲೋಕಾಯುಕ್ತರೆಂದರೆ 'ಸುದ್ದಿ ಪ್ರಿಯರು'. ಸದ್ದಿಲ್ಲದೇ ಸೇವೆ ಮಾಡಿ ಭ್ರಷ್ಟಾಚಾರ ನಿರ್ಮೂಲನ ಮಾಡುವುದು ಮುಖ್ಯ. ಜೊತೆಯಲ್ಲಿ ಟೀವಿ, ಕ್ಯಾಮೆರಾ, ಪತ್ರಿಕೆಯವರು, ಸುತ್ತಮುತ್ತಲಿನ ಜನರನ್ನು ಗುಂಪುಗೂಡಿಸಿಕೊಂಡು ಅವರ ಮಧ್ಯೆ 'ಪ್ರತ್ಯಕ್ಷ ದೇವರು'ಗಳ ತರಹ ನಿಂತು ಜನರ ಆಕ್ರೋಶದ ನೋವು, ಹತಾಶೆ, ಸಿಟ್ಟು ತುಂಬಿದ ಪ್ರಶ್ನೆಗಳನ್ನು ಕೇಳಿಸಿ ಕೊಳ್ಳುತ್ತಾರೆ. ಟೀವಿಯ ಪರದೆಯ ಮೇಲೆ ಪ್ರಸಾರ ಮಾಡಿ, ಪತ್ರಿಕೆಗೆ ಹೇಳಿಕೆ ನೀಡಿದರೆ ಅಂದಿನ ತಮ್ಮ ಕಾರ್ಯ ಮುಗಿಯಿತೆಂದುಕೊಳ್ಳುತ್ತಾರೆ. ವ್ಯಕ್ತಿ ಗೌರವದ ಬಗ್ಗೆ ಅರಿವಿಲ್ಲದೆ ಸದ್ದು ಮಾಡಿ, ಸುದ್ದಿ ಮಾಡಿ ಕೊನೆಗೆ ಸದ್ದಿಲ್ಲದೇ ಹೋಗಿ ಬಿಡುತ್ತಾರೆ. ವಿಶಲ್ ಊದುತ್ತಾ ಬರುವ ಪೊಲೀಸರಿಗೆ ಕಳ್ಳರು ಸಿಕ್ಕಿಬೀಳುತ್ತಾರೆಯೆ ? ಏನೋ ಒಂದು ಜವಾಬ್ದಾರಿಯುತ ಕೆಲಸವಿದೆ ಎಂದು ಬಂದು ಹೋಗುತ್ತಾರೆ.

ತಮ್ಮ ಕಾರ್ಯಾಚರಣೆಯ ರೂಪುರೇಷೆಗಳನ್ನು ಖಂಡಿತಾ ಬದಲಾಯಿಸಿ ಕೊಳ್ಳಬೇಕು. ಭ್ರಷ್ಟಾಚಾರ ಎಲ್ಲಿಲ್ಲ? ಅದೊಂದು ನೂರಾರು ವರುಷ ಗಳಿಂದಲೂ ಆಳವಾಗಿ ಬೇರುಬಿಟ್ಟು ಬೆಳೆದು ನಿಂತ ಆಲದ ಮರದ ಹಾಗೆ. ಅದರ ಬೇರುಗಳು ಎಲ್ಲಿಯವರೆಗೆ ನೆಲದಾಳದಲ್ಲಿ ಪಸರಿಸಿವೆಯೋ ಆ ಆಲದ ಮರಕ್ಕೇ ತಿಳಿಯಬೇಕೆ ಹೊರತು ಮತ್ತ್ಯಾರಿಗೂ ತಿಳಿಯಲಾರದು. ಲಂಚದ, ಭ್ರಷ್ಟಾಚಾರದ ಹಣವನ್ನು ಗೊಬ್ಬರದಂತೆ ಬುಡಕ್ಕೆ ಸುರಿದು ಬೆಳೆಸಿದ ಮರದ 'ಎಲೆಗಳನ್ನು' ಕೀಳುವ ಕೆಲಸ ಮಾಡುತ್ತಿದ್ದಾರೆ ಎಂದೆನಿಸುತ್ತದೆ. ಬೇರು ಸಮೇತ ಕಿತ್ತು ಹಾಕುವ ತಂತ್ರವನ್ನು ಅಳವಡಿಸಿಕೊಂಡರೆ ಸಾಧ್ಯವಾದಿತೇನೋ !

ಭ್ರಷ್ಟಾಚಾರಕ್ಕೆ ಮೂಲಕಾರಣವೇನು ? ಇತ್ತೀಚಿನ ದಿನಗಳಲ್ಲಿ ಲಂಚಕೊಟ್ಟು ನಮ್ಮ ನಮ್ಮ ಕೆಲಸಗಳನ್ನು ಮಾಡಿಸಿಕೊಳ್ಳುವುದು ಸಹಜ ಹಾಗೂ ಸಮ್ಮತವೆನ್ನಿಸಿದೆ. ಲಂಚ ತೆಗೆದುಕೊಂಡೂ ನಮ್ಮ ಕೆಲಸವಾಗದಿದ್ದಾಗ ಭ್ರಷ್ಟಾಚಾರವೆನ್ನುವಂತಹ ಕಾಲವಿದು. ''ಈಜುವಾಗ ನೀರು ಕುಡಿಯದೆ ಈಜಲು ಸಾಧ್ಯವೆ ?'' ಅಥವಾ ಎಣ್ಣೆ ವ್ಯಾಪಾರಿ ಕೈಗೆ ಎಣ್ಣೆ ತಾಕದಂತೆ ವ್ಯಾಪಾರ ಮಾಡಲಾದೀತೆ ? ಎಂದು ಕೇಳುತ್ತಾರೆ. ಹೌದು ಎನ್ನಿಸುತ್ತದೆ. ರಾಜ್ಯ ಸರ್ಕಾರದ ನೌಕರರಿಗೆ ನೀಡುವ ಮಾಸಿಕ ಸಂಬಳ ತೀರಾ ಕಡಿಮೆಯಿರುತ್ತದೆ, ಕೇಂದ್ರ ಸರ್ಕಾರದ ನೌಕರರಿಗೆ ಹೋಲಿಸಿದಾಗ. ಹೆಚ್ಚುತ್ತಿರುವ ಬೆಲೆಗಳು, ದೊರಕುವ ಸೌಲಭ್ಯಗಳು, ಆಯಾ ವ್ಯಕ್ತಿಯ ಆಸೆ ಆಮಿಷಗಳು, ಮಿತಿಮೀರುವುದು ಕಾರಣವಿರಬಹುದು.

ಯಾವುದೇ ವ್ಯಕ್ತಿಯ ಅಥವಾ ಸಂಸ್ಥೆಯ ಬಗ್ಗೆ ಭ್ರಷ್ಟಾಚಾರದ ಬಗ್ಗೆ ಮಾಹಿತಿಗಳು ಬಂದಾಗ ತಾಳ್ಮೆಯಿಂದ ಪರಿಶೀಲಿಸಬೇಕು. ದಿನವೂ ಲಂಚ ತೆಗೆದುಕೊಳ್ಳುವ ಅಧಿಕಾರಿ ಲೋಕಾಯುಕ್ತರ ಭೇಟಿಯನ್ನು ಅರಿತು 'ಮಹಾತ್ಮನ' ಸೋಗು ಹಾಕಬಹುದು. ಎಂದೂ ತೆಗೆದುಕೊಳ್ಳದವರು ಆ ದಿನ ಸಿಕ್ಕಿ ಹಾಕಿಕೊಳ್ಳಬಹುದು. ಲಂಚ ತೆಗೆದುಕೊಂಡು ಸಿಕ್ಕಿಬಿದ್ದವರು, ಸಿಕ್ಕಿಬಿದ್ದಿದ್ದು, ೧೧೦ರೂ, ೨೦೦ರೂ.ಗಳನ್ನು ತೆಗೆದುಕೊಂಡದ್ದಕ್ಕೆ. ಲಕ್ಷ ಗಟ್ಟಲೆ ನುಂಗುವ ತಿಮಿಂಗಿಲಗಳು ಬಾಯಿ ಮುಚ್ಚಿಕೊಂಡು ಮೌನವಾಗಿರುತ್ತವೆ. ಪುಟ್ಟ ಪುಟ್ಟ ಮೀನುಗಳು ಬಲೆಗೆ ಸಿಕ್ಕಿಹಾಕಿಕೊಳ್ಳುತ್ತವೆ. ಭ್ರಷ್ಟಾಚಾರ ನಿರ್ಮೂಲನಾ ಮಂಡಳಿ ಯವರಿಗೆ, ಅಷ್ಟಕ್ಕೇ ಏನನ್ನೋ ಸಾಧಿಸಿದ ಹೆಮ್ಮೆ. ಅದು ಅವರಿಗೂ ತಿಳಿದಿರುತ್ತದೆ. ತಿಮಿಂಗಿಲಗಳಿಗೆ ಬಲೆ ಹಾಕಿ ಎಳೆದರೆ, ಬಲೆಯೇ ಕಿತ್ತುಹೋದೀತೆಂಬ ಭಯ !

''ಭ್ರಷ್ಟರನ್ನು ಬಡಿಯಿರಿ, ಹಿಡಿಯಿರಿ'' ಎಂದು ಆರಂಭಿಸಿದರೆ ಗಾಳಿ ಗುದ್ದಿ



## ಲೋಕಾಯುಕ್ತರ ಕಾರ್ಯವ್ಯಾಪ್ತಿ ಮತ್ತು ಪರಿಣಾಮ

ಮೈ ನೋಯಿಸಿಕೊಂಡ ಹಾಗೆಯೇ ಹೊರತು ಬೇರೆ ಯಾವ ಲಾಭವೂ ಇಲ್ಲ. ತೆಹಲ್ಕಾ ಹಗರಣ ತಿಳಿಯದೆ ? ಭ್ರಷ್ಟತೆ ಎಲ್ಲಿಂದ ಹುಟ್ಟಿ ಎಲ್ಲಿಯವರೆಗೂ ಹರಿಯುತ್ತದೆ ಎಂಬುದು ನಿಚ್ಚಳವಾಗಿ ತೋರಿಸಿದ್ದಾಗಿದೆ. ಆದರೆ 'ಬೆಕ್ಕಿಗೆ ಗಂಟೆ ಕಟ್ಟುವವರ್‍ಯಾರು' ಎನ್ನುವಂತಹ ಸ್ಥಿತಿಯಲ್ಲಿದ್ದಾರೆ ಅಷ್ಟೆ. ಯಾರನ್ನೂ ಹಾಗೆ ಬಡಿಯಲಾರರು. ಅದಕ್ಕೂ ಮೊದಲು ಹಿಡಿಯಲಾರರು.

ರಾಜಕೀಯಕ್ಕೆ ಇಳಿಯುವುದೇ ಇಂದಿನ ರಾಜಕಾರಣದ ಮುಖ್ಯ ಉದ್ದೇಶವಾಗಿದೆ. ಯಾರ್‍ಯಾರು ಎಷ್ಟೆಷ್ಟು ಆಸ್ತಿ ಮಾಡಿದ್ದಾರೆ ? ತಾನೆಷ್ಟು ಮಾಡಬಹುದು ? ಹೇಗೆ ಮಾಡಬೇಕೆಂದು ಅಲ್ಲಿನ ಹಿರಿಯರು ಹಾಕಿದ ಹೆಜ್ಜೆ ಗುರುತುಗಳ ಮೇಲೆ ಇಂದಿನವರೂ ಜಾಗರೂಕತೆಯಿಂದ ಹೆಜ್ಜೆ ಹಾಕುತ್ತಾ ಹೋಗುತ್ತಾರೆ. ಬಡತನ ನಿರ್ಮೂಲನವಾದರೆ, ಬಡವರು ಸಶಕ್ತರಾದರೆ, ಬುದ್ಧಿವಂತರಾದರೆ, ಹಸಿವಿಲ್ಲದವರಂತಾದರೆ ರಾಜಕಾರಣಿಗಳಿಗೆ ಕೆಲಸವೆಲ್ಲಿಯದು ? ರೋಗಿಗಳೇ ಇಲ್ಲದಿದ್ದರೆ, ಆಸ್ಪತ್ರೆಗಳ್ಯಾಕೆ ? ವೈದ್ಯರಾದರೂ ಯಾಕೆ ಬೇಕು ? ರಾಜಕಾರಣಿ ಸೂತ್ರಧಾರನಾದರೆ, ರಾಜಕಾರಣಿಯಲ್ಲದ ವ್ಯಕ್ತಿ ಅತ್ಯಂತ ಅಪಾಯಕಾರಿ ಹಾಗೂ ನಿಷ್ಕರುಣಿ, ನಿರ್ಲಜ್ಜ ವ್ಯಕ್ತಿಯಾಗಿರುತ್ತಾನೆ. ರಾಜಕಾರಣಿಯ ಅಭಯಹಸ್ತ ಅವನನ್ನು ಬೆಂಬಲಿಸುವುದರಿಂದ ಆಯಾ ಊರಿನ, ಗ್ರಾಮಕ್ಕೆ ''ದುಷ್ಟ, ಭ್ರಷ್ಟ ಕೀಟ''ವಾಗಿ ಪರಿವರ್ತಿತನಾಗುತ್ತಾನೆ. ಮುಗ್ಧ ಜನರನ್ನು ಹಿಂಸಿಸುತ್ತಾನೆ. ಹೆದರಿ ಹತಾಶೆಯಿಂದ ಆ ರಾಜಕಾರಣಿಯ ಮೊರೆ ಹೋಗಲೇಬೇಕು. ಇದೊಂದು ತರಹದ ವ್ಯೂಹ ಅಷ್ಟೇ. ಎಲ್ಲಾ ಇಲಾಖೆಗಳಲ್ಲೂ, ಎಲ್ಲಾ ಕಾಲದಲ್ಲೂ, ಎಲ್ಲಾ ಜನರಲ್ಲಿಯೂ ಇದೆ. ಭ್ರಷ್ಟತೆ-ದುಷ್ಟತೆಯ ವ್ಯೂಹ ಹೀಗೆ ಬಲಿಷ್ಠವಾಗುತ್ತದೆ.

ನಿರ್ಮೂಲನೆ ಹೇಗೆ ಸಾಧ್ಯ ? ಬರೀ ನಾಟಕ ಅಷ್ಟೆ.

ಡಾ॥ ಎಚ್. ಗಿರಿಜಮ್ಮ ನಂ. ೧೦೩, ಪಲ್ಲವ ಟೆರೇಸ್, ಎಡೆಯೂರು ಕೆರೆ ಎದುರು,
ಜಯನಗರ ೬ನೇ ಬ್ಲಾಕ್, ಬೆಂಗಳೂರು-೫೬೦ ೦೮೨

### ಭ್ರಷ್ಟಾಚಾರ

– ಅಣ್ಣಾಸಾಗರ್ ಬಿ. ಆರ್.

೧. ಲೋಕಾಯುಕ್ತರು ವಿವಿಧ ಸರ್ಕಾರಿ ಕಾರ್ಯಾಲಯಗಳ ಕಾರ್ಯ ನಿರ್ವಹಣೆಯ ವೈಖರಿಯನ್ನು ಜಗಜ್ಜಾಹೀರು ಮಾಡಿದಾಗ ಅಸಹ್ಯಪಡುವಂಥ ಜನರ ಮಧ್ಯೆ ನಾವು ಇನ್ನೂ ಬದುಕಿರುವುದನ್ನು ಕಂಡು ನಾಚಿಕೆಯಾಗುತ್ತದೆ. ಶುಶ್ರೂಷೆ ಮಾಡಬೇಕಾದ ಡಾಕ್ಟರ್, ರಸ್ತೆ ನಿರ್ಮಿಸಬೇಕಾದ ಇಂಜನೀಯರ್, ವಿದ್ಯಾರ್ಥಿಗಳನ್ನು ರೂಪಿಸಬೇಕಾದ ಶಿಕ್ಷಕ, ಹಾಸ್ಟೆಲ್ ವಾರ್ಡನ್ ಇತ್ಯಾದಿ ಭ್ರಷ್ಟಾಚಾರಕ್ಕೆ ಇಳಿದು 'ಜೀವನ' ಸಾಗಿಸುತ್ತಿರುವುದು ಮಾತುಬಾರದ, ಮತಿಹೀನ ಪ್ರಾಣಿಗಳಿಗಿಂತ ಕನಿಷ್ಠವೆನಿಸದಿರದು.

೨. ಲೋಕಾಯುಕ್ತರು ಸದ್ಯ ಮಾನವೀಯ ದೃಷ್ಟಿಯಿಂದ ಉದಾರವಾಗಿ ವರ್ತಿಸುತ್ತಿದ್ದಾರೆ. ಕೈಗೆ ಸಿಕ್ಕ ಪ್ರತಿಯೊಬ್ಬ ತಪ್ಪಿತಸ್ಥನನ್ನು ಸಾರ್ವಜನಿಕಗೊಳಿಸಿ ಹೆಚ್ಚು-ಕಡಿಮೆ ಅವರ 'ಮರ್ಯಾದೆ' ಮಣ್ಣು ಪಾಲಾಗಿಸುತ್ತಿದ್ದಾರೆ. ದುರದೃಷ್ಟವಶಾತ್ ಲಂಚದ ತಿಮಿಂಗಿಲಗಳಿಗೆ ಈ ಮಂಗಳಾರತಿ ಮಾಮೂಲಾಗಿದೆ. ಅದಕ್ಕಾಗಿ ತಪ್ಪಿತಸ್ಥರಿಂದ ಬರೆಸಿಕೊಂಡು ಆಮೇಲೆ ಕಾರ್ಯಕ್ರಮ ಮುಂದುವರಿಸಿ ಇಲಾಖಾವತಿಯ ಕ್ರಮ ಕೈಗೊಂಡರೆ ಅಥವಾ ನಂತರ ಆ ದಿಶೆಯಲ್ಲಿ ಪ್ರಯತ್ನಿಸಿದರೆ ಪರಿಸ್ಥಿತಿ ಸ್ವಲ್ಪ ಬದಲಾಯಿಸಬಹುದೇನೋ. ಸಾರ್ವಜನಿಕರು ಈ ದಿಶೆಯಲ್ಲಿ ಸಹಕರಿಸಿದರೆ ಸುಧಾರಣೆ ಹೆಚ್ಚಾಗಿರುತ್ತದೆ.

೩. ನೌಕರ, ಗ್ರಾಹಕ, ಸಮಾಜ ಮತ್ತು ರಾಜಕಾರಣಿಗಳ ಸ್ವಾರ್ಥ ಸಾಧನೆ, ಯಾವುದೂ ಶೀಘ್ರ ಆಗಬೇಕು ಎನ್ನುವ ಒತ್ತಾಸೆ, ಯೋಚನೆ- ಯೋಜನಾ ರಾಹಿತ್ಯತೆ, ಮೌಲ್ಯಗಳ ಅಧಃಪತನ ಈ ದುರವಸ್ಥೆಗೆ ಮೂಲಕಾರಣ. ನೋವಿನ ಸಂಗತಿಯೆಂದರೆ, ನಮ್ಮ ಸಮಾಜ ಇಂಥ ಭ್ರಷ್ಟರಿಗೆ ಕುಮ್ಮಕ್ಕು ಕೊಡುವುದಷ್ಟೇ ಅಲ್ಲದೆ ಧಾರ್ಮಿಕವಾಗಿಯೂ 'ಸ್ವಾಭಾವಿಕ' ಎಂಬಂತೆ ದೇವರಿಗೆ 'ದಕ್ಷಿಣೆ'ಯ ರೀತಿಯಂಥದ್ದೇ ಎನ್ನಲಾಗುತ್ತದೆ. ಈ ರೀತಿಯ ಸಾಮಾಜಿಕ ಮಾನ್ಯತೆ ರದ್ದಾಗಬೇಕು.

## ಲೋಕಾಯುಕ್ತರ ಕಾರ್ಯವ್ಯಾಪ್ತಿ ಮತ್ತು ಪರಿಣಾಮ



೪. ಮೊದಲು ನಮ್ಮ ಕರ್ತವ್ಯವನ್ನು, ಜವಾಬ್ದಾರಿಯನ್ನು ಅರಿತು ನಿಭಾಯಿಸಲಾಗುತ್ತಿದೆ. ಸಾಮೂಹಿಕ ಪ್ರಯತ್ನಕ್ಕೆ ಸಹಕಾರ ನೀಡಿ ಅದೊಂದು ಜನಾಂದೋಲನ ಆಗುವಂತೆ ನೋಡಿಕೊಳ್ಳುವುದು. ಹಿಡಿದು ಬಡಿಯುವ ಸಂಸ್ಕೃತಿಯಾಗಲಿ ಕೆಲಸವಾಗಲಿ ಅದೊಂದು ತಾತ್ಕಾಲಿಕ ಪರಿಹಾರ ಒದಗಿಸುತ್ತದೆ. ಕೊಡುವವರು – ತೆಗೆದುಕೊಳ್ಳುವವರ ಒತ್ತಡ ಗುಂಪು ನಿರಂತರ ಇರುವುದರಿಂದ ವೈಷಮ್ಯ – ತಿಕ್ಕಾಟಗಳಿಗೆ ಹಾದಿಮಾಡಿಕೊಟ್ಟಂತಾಗುತ್ತದೆ. ಇದಕ್ಕಿಂತ ಈಗಿರುವ ವ್ಯವಸ್ಥೆಯ ಎಲ್ಲ ಭಾಗಗಳನ್ನು ಸಮರ್ಪಕವಾಗಿ ಉಪಯೋಗಿಸಿಕೊಂಡು ಉತ್ತಮ ರೀತಿಯಲ್ಲಿ ಕಾರ್ಯನಿರ್ವಹಿಸುವಂತೆ ಮಾಡಿದರೂ ಸಾಕು. ಪೊಲೀಸ್, ನ್ಯಾಯಾಂಗ, ಲೋಕಾಯುಕ್ತ ಹಾಗೂ ರಾಜಕಾರಣಿಗಳು ಈ ದಿಶೆಯಲ್ಲಿ ಸಕ್ರಿಯ ಸಹಕಾರ ನೀಡಬೇಕು.

೬. ರಾಜಕಾರಣಿ ಮತ್ತು ಅರಾಜಕಾರಣಿಗಳ ನಡುವೆ (ಗ್ರಾಹಕ, ನೌಕರ, ಕಂಪನಿ) ಒಬ್ಬರಿಗೊಬ್ಬರು ಜೈವಿಕ ಸಂಬಂಧ ಹೊಂದಿರುವಂತಿದೆ. ಒಬ್ಬರು ಮತ್ತೊಬ್ಬರಿಗೆ ಆಸರೆಯಾಗಿ ಭ್ರಷ್ಟತೆಯನ್ನು ಖಂಡಿತ ಘನಿಷ್ಠಗೊಳಿಸುತ್ತಿದ್ದಾರೆ.

ಇಲ್ಲಿವರೆಗೆ ಹತ್ತು ಪಂಚವಾರ್ಷಿಕ ಯೋಜನೆಗಳಲ್ಲಿ ಹರಿಸಿದ ಬಿಲಿಯನ್ – ಟ್ರಿಲಿಯನ್‌ಗಟ್ಟಲೆ ಹಣ ಎತ್ತ ಹರಿದಿದೆ ಎಂದು ಅವಲೋಕಿಸಿದಾಗ ಅದು ರಾಜಕಾರಣಿ-ನೌಕರ ವರ್ಗದ ಜೇಬು ಸೇರಿರುವುದು ಸುಸ್ಪಷ್ಟ. ಹಿಂದಿನ ಪ್ರಧಾನಿಯೊಬ್ಬರು ''ಸರ್ಕಾರಿ ಯೋಜನೆಗಳ ಮೊತ್ತದ ಕೇವಲ ಶೇಕಡಾ ೫ರಷ್ಟು ಉದ್ದೇಶಿತ ಜನರಿಗೆ ತಲುಪುತ್ತಿದೆ'' ಎನ್ನುವ ಮಾತು ಇನ್ನೂ ಹಚ್ಚ ಹಸುರಾಗಿದೆ. ಇತ್ತೀಚಿನ ಸಮೀಕ್ಷೆಗಳು ನಮ್ಮ ದೇಶ ಪ್ರಪಂಚದ ಅತಿ ಭ್ರಷ್ಟ ದೇಶಗಳ ಸಾಲಿಗೆ ಸೇರಿರುವುದನ್ನು ಸ್ಪಷ್ಟಪಡಿಸಿವೆ. ಸಾರ್ವತ್ರಿಕ ಕಡ್ಡಾಯ ಶಿಕ್ಷಣ ಇದಕ್ಕೆ ಉತ್ತಮ ಪರಿಹಾರವಾಗುತ್ತದೆ.

**ಅಣ್ಣಾಸಾಗರ್ ಬಿ. ಆರ್.**, 'ಅರುಣೋದಯ' ವಿದ್ಯಾನಗರ, ಸೇಡಂ - ೫೮೫ ೨೨೨

### ಭ್ರಷ್ಟಾಚಾರದ ಸುತ್ತು

*– ನರೇಂದ್ರ ಸಿರಕಜೆ*

ಭಾರತೀಯ ಜೀವನ ಪದ್ಧತಿಯಲ್ಲಿ ಎಲ್ಲವೂ ಸರಳ, ಪಾರದರ್ಶಕ ಹಾಗೂ ಸುಂದರವಾಗಿತ್ತು. ಕೊಳ್ಳುಬಾಕ ಸಂಸ್ಕೃತಿಯಿಂದ ಹೊರತಾಗಿದ್ದ ಇಲ್ಲಿನ ಜನರಲ್ಲಿ ಸಂತೃಪ್ತಿ ಇತ್ತು. ಹಾಗಾಗಿ ನ್ಯಾಯಯುತವಾದ ಬದುಕು ಎಲ್ಲರದಾಗಿತ್ತು. ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವದಿಂದಾಗಿ ಅವಶ್ಯಕತೆಗಳು ಹೆಚ್ಚಾಗಿ ಅದನ್ನು ಹೊಂದಿಸಲು ಕಂಡುಕೊಂಡ ಮಾರ್ಗವೇ ಭ್ರಷ್ಟಾಚಾರ. ಇದರಿಂದಾಗಿ ಸಾಮಾಜಿಕ ಬದುಕು ಮತ್ತು ಸಮಾಜ ಕೊಳಕಾಗುತ್ತಿರುವುದು ಸ್ಪಷ್ಟವಾಗುತ್ತಿರುವಾಗ ಲೋಕಾಯುಕ್ತರ ಕಾರ್ಯಗಳು ಕೆಲವು ವರ್ಗದ ಜನರಲ್ಲಿ ಸಂತಸವನ್ನು ಉಂಟುಮಾಡುತ್ತಿದೆ. ಸಮಾಜದ ಒಟ್ಟಾರೆ ನಾಶವನ್ನು ತಡೆವಲ್ಲಿ ಜನತೆ ಸೋತಿಲ್ಲ ಎಂಬುದು ಲೋಕಾಯುಕ್ತದ ಕೆಲಸದಿಂದ ಅರಿವಾಗುತ್ತಿದೆ.

ಲೋಕಾಯುಕ್ತರು ಸರಕಾರದ ಪ್ರತಿಯೊಬ್ಬ ಉದ್ಯೋಗಿಯು ಸಹ ತಮ್ಮ ಸ್ವತ್ತುಗಳ ಬಗ್ಗೆ ನೀಡುವ ಮಾಹಿತಿಗಳು ನಿಖರವಾಗಿರುವಂತಹ ವ್ಯವಸ್ಥೆಯೊಂದನ್ನು ನಿರೂಪಿಸಿ ಅದಕ್ಕೆ ತಪ್ಪಿದ್ದಲ್ಲಿ ಕಠಿಣ ಶಿಕ್ಷೆಯನ್ನು ನೀಡುವಂತಾಗಬೇಕು.

ಕೂಡಿಡುವಿಕೆ ಮತ್ತು ಸಂಪತ್ತಿನ ಒಡೆಯರಾಗುವ ಅತ್ಯಾಸೆಯಿಂದಾಗಿ ಭ್ರಷ್ಟಾಚಾರ ಭಾರತದಲ್ಲಿ ತುಂಬಿ ತುಳುಕಾಡುತ್ತಿದೆ. ಬದುಕಿನಲ್ಲಿ ಅಸಮಾನತೆ ಹಾಗೂ ಭದ್ರತೆ ಸಹ ಇದಕ್ಕೆ ಕಾರಣವಾಗಬಹುದು. ಜನರು ಸ್ವತಃ ಜೀವನ ಕ್ರಮವನ್ನು ರೂಪಿಸಿಕೊಂಡು ನೀತಿ ಸಂಹಿತೆಯನ್ನು ಅಳವಡಿಸಿಕೊಂಡು ಬಾಳಿದರೆ ಭ್ರಷ್ಟಾಚಾರಕ್ಕೆ ಅವಕಾಶವಿಲ್ಲ ಎನ್ನುವುದು ವೇದಾಂತವೆಂದೆನಿಸಿದರೂ ಸಹ ಇದೇ ಸರಿಯಾದ ಕ್ರಮ.

ಕೆಲಸಕ್ಕೆ ಅತೀ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುವುದರಿಂದ, ನಮ್ಮ ದಿನನಿತ್ಯದ ಜೀವನದಲ್ಲಿ ಕರ್ತವ್ಯದ ಅರಿವು ಮೂಡುವುದರಿಂದ ಶಿಸ್ತು ತಾನಾಗಿ ನಮ್ಮನ್ನು ಆವರಿಸಿಕೊಂಡಾಗ ಭ್ರಷ್ಟಾಚಾರಕ್ಕೆ ಅವಕಾಶವೇ ಇರುವುದಿಲ್ಲ. ಜೀವನದಲ್ಲಿ ಕೆಲಸ ಮೊದಲು, ನಂತರ ಗಳಿಕೆ ಎಂಬುದಾಗಿತ್ತು. ಇಂದು ಅದರ ವಿರುದ್ಧವಾದ ನಡವಳಿಕೆಯಿಂದಾಗಿ ಕೆಲಸವಿಲ್ಲದೆ ಸಂಪತ್ತನ್ನು ಪಡೆಯುವ ಆತುರ ನಮ್ಮದಾಗಿರುವುದನ್ನು ಮತ್ತೆ ಸರಿಪಡಿಸಿದಾಗ ನಾವು ಕೊಳಕು ವ್ಯವಸ್ಥೆಯನ್ನು ನಿವಾರಿಸಲು ಸಹಕರಿಸಬಹುದು.

ಹೇಳುವಿಕೆ ಮತ್ತು ಅದರಂತೆ ನಡೆಯುವಿಕೆ ಮಹಾತ್ಮಾ ಗಾಂಧಿಯವರೊಂದಿಗೇ ಈ ದೇಶದಿಂದ ನಿರ್ಗಮಿಸಿರುವುದರಿಂದ ಇಂದಿನ ರಾಜಕಾರಣಿಗಳ ಮತ್ತು ಮುಖಂಡರುಗಳ ಹೇಳಿಕೆಗಳು ಕೇವಲ ಘೋಷಣೆಗಳು ಮಾತ್ರ. ಶಿಕ್ಷಿಸುವ ವ್ಯವಸ್ಥೆಯು ಸಹ ಭ್ರಷ್ಟಾಚಾರದ ನೆರಳಿನಲ್ಲಿ ವಿರಮಿಸುತ್ತಿರುವಾಗ ಅಂತಹ ಕ್ರಮಗಳು ಯಾವುವೂ ಇಲ್ಲವಾಗಿದೆ. ಭಾರತದಲ್ಲಿ ಕೇವಲ ಭ್ರಷ್ಟಾಚಾರಕ್ಕಾಗಿ ಶಿಕ್ಷೆ ಅನುಭವಿಸುವ ಸಾಧ್ಯತೆಗಳು ಕಡಿಮೆ ಇರುವುದರಿಂದ ಯಾವುದೇ ಪರಿಣಾಮಕಾರಿ ಮಾರ್ಗಗಳನ್ನು ಅಳವಡಿಸುವುದು ಸಾಧ್ಯವಾಗದು.

ರಾಜಕಾರಣಿಗಳಾಗಲು ಇರುವ ಕೆಲವು ಅರ್ಹತೆಗಳಲ್ಲಿ ಭ್ರಷ್ಟಾಚಾರವು ಒಂದು ಎಂಬುದನ್ನು ನೆನೆಸಿಕೊಂಡರೆ ಸಾಕು. ಇಲ್ಲಿ ಎಲ್ಲಾ ವ್ಯಕ್ತಿಗಳು ಒಂದಲ್ಲ ಒಂದು ರೀತಿಯಲ್ಲಿ ಈ ವ್ಯವಸ್ಥೆಯ ನಡುವೆ ಬದುಕುತ್ತಿರುವವರೆ. ಇಂದು ಲೋಕಸಭೆಯಾಗಲಿ, ರಾಜ್ಯಸಭೆಯಾಗಲಿ ಕಾನೂನುಗಳನ್ನು ಹೊರತರುವಾಗ ಅದರ ವ್ಯಾಪಕತೆಯನ್ನು ಗಮನಿಸಿದಾಗ ಸಾಮಾನ್ಯ ಅನಿಸಿಕೆಗಳೆಂದರೆ ಇವುಗಳು ಭ್ರಷ್ಟಾಚಾರಗಳ ಪೂರಕಗಳೆಂದೆ. ಭ್ರಷ್ಟಾಚಾರವಿಲ್ಲದೆ ಕಾರ್ಯನಿರ್ವಹಿಸುತ್ತಿರುವ ಒಂದು ಸರಕಾರಿ ಕ್ಷೇತ್ರವನ್ನು ಹುಡುಕುವುದು ಸಮುದ್ರದಲ್ಲಿ ಕಳೆದುಹೋಗಿರುವ ಸಾಸಿವೆ ಕಾಳನ್ನು ಹುಡುಕಿದಂತೆ.

**ನರೇಂದ್ರ ಸಿರಕಜೆ**, ೧೨೬, ಹರಿನಿವಾಸ, ೪ನೇ ಮುಖ್ಯ
೧೧ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

### ಲೋಕಾಯುಕ್ತ – ಮತ್ತೊಂದು ಮುಖ

*– ಕೆ. ಎಸ್. ರೋಹಿಣಿ*

''ಸೀಝರನ ಹೆಂಡತಿ ಸಂಶಯಾತೀತಳಾಗಿರಬೇಕು'' – ಇದು, ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅನಾವರಣಗೊಳ್ಳುವ ಯಾವುದೇ ಕಾವಲು ಸಂಸ್ಥೆಯ ಮಟ್ಟಿಗೆ ಜನಸಾಮಾನ್ಯನಿಗಿರುವ ನಿರೀಕ್ಷೆ. ಸಿ.ಬಿ.ಐ., ಲೋಕಾಯುಕ್ತ ಇತ್ಯಾದಿ ವ್ಯವಸ್ಥೆಗಳ ಬಗ್ಗೆ ಈ ದೇಶದ ಸಾಮಾನ್ಯ ಪ್ರಜೆಗಳಿಗೆ ಇರುವ ಕಲ್ಪನೆಯೂ ಇದೇ – ಅವರೆಲ್ಲಾ ಪ್ರಾಮಾಣಿಕರು ಎಂಬುದು. ವ್ಯವಸ್ಥೆಗೆ ವ್ಯವಸ್ಥೆಯೇ ಭ್ರಷ್ಟವಾಗಿ ಕೂತಿರುವ ಮತ್ತು ಅಂತಹ ಭ್ರಷ್ಟಾಚಾರದ ಬಗೆಗೆ ಕಿಂಚಿತ್ತೂ ರೇಜಿಗೆಯೂ ಹೇಸಿಗೆಯೂ ಇಲ್ಲದ ಈ ಹೊತ್ತಿನಲ್ಲಿ, ತೊಂಬತ್ತೊಂಬತ್ತು ಶೇಕಡಾ ಪ್ರಾಮಾಣಿಕರೇ ಲೋಕಾಯುಕ್ತದಲ್ಲಿದ್ದಾರೆ ಅಂದುಕೊಂಡರೂ, ಇನ್ನುಳಿದ ಶೇಕಡಾ ಒಂದೇ ಒಂದು ಭಾಗ ಅಪ್ರಾಮಾಣಿಕವಾದರೂ ಏನಾಗಬಹುದು ಎಂಬ ಕಲ್ಪನೆ ಜನಸಾಮಾನ್ಯನಿಗೆ ಬರುವುದೇ ಇಲ್ಲ. ಬಟಾಬಯಲು ಅನ್ನಿಸುವ ಪೊಲೀಸ್ ಕ್ರೌರ್ಯಕ್ಕೆ ಸಿಲುಕಿ ಸಾಯುವವರ ಸಂಖ್ಯೆಯೇ ಈ ದೇಶದಲ್ಲಿ ಲೆಕ್ಕಕ್ಕೆ ಸಿಗುವುದಿಲ್ಲ ಅಂದ ಮೇಲೆ, ಪತ್ರಿಕೆಗಳಲ್ಲಿ ಕಾಣಸಿಗುವುದಕ್ಕಿಂತ ಹೆಚ್ಚಿನ ಪರಿಚಯವೇ ಇಲ್ಲದ ಲೋಕಾಯುಕ್ತದಲ್ಲಿ ಒಬ್ಬ ಭ್ರಷ್ಟ ಇನ್ಸ್‌ಪೆಕ್ಟರ್ ಯಾವುದೇ ಕಾರಣಕ್ಕಾಗಿ ಒಬ್ಬ ಪ್ರಾಮಾಣಿಕನನ್ನು ಆಟವಾಡಿಸಲು ಬಯಸಿದರೆ – ಅದರ ಪರಿಣಾಮ ಏನಾಗಬಹುದು ಎಂಬುದು ಸುಲಭ ಕಲ್ಪನೆಗೆ ದಕ್ಕುವುದಿಲ್ಲ. ಆದರೆ ಸ್ವತಃ ಅಂತಹುದೊಂದು ಜೀವವೊಂದನ್ನು ಕಣ್ಮುಂದೆ ನೋಡಿರುವ ನನಗೆ ಗೊತ್ತಿದೆ – ಆ ಪ್ರಾಮಾಣಿಕ ದಿನೇ ದಿನೇ ಆತ್ಮಹತ್ಯೆಗೊಳಗಾಗುತ್ತ ಒಂದು ದಿನ ಅಕಾಲ ಮರಣಕ್ಕೂ ತುತ್ತಾಗಿಬಿಡುತ್ತಾನೆ.

ಇದೊಂದು ಸತ್ಯ ಕತೆ. ಸತ್ಯವೆನ್ನುವುದು ಸತ್ತ ಕಥೆ !

ಆತ ಗಾಂಧಿವಾದಿ ತಂದೆಯ ಮಗ. ಸ್ವತಃ ತಾನೇ ಗಾಂಧಿ, ಲೋಹಿಯಾ, ಮಾರ್ಕ್ಸ್ ಇವರೆಲ್ಲರನ್ನೂ ಆಳವಾಗಿ ಓದಿದವನು. ಹಾಸನದ 'ಜನತಾಮಾಧ್ಯಮ' ಪತ್ರಿಕೆಯ ವರದಿಗಾರನಾಗಿ, ಉಪಸಂಪಾದಕನಾಗಿ ಕಾರ್ಯನಿರ್ವಹಿಸಿದವನು, ಆ ಮೂಲಕ ತನ್ನ ಸುತ್ತಲಿನ ಪರಿಸರದೊಂದಿಗೆ ನಿರಂತರ ಮುಖಾಮುಖಿಯಿಟ್ಟುಕೊಂಡವನು, ಇಂದಿರಾ ಗಾಂಧಿಯ ಆಳ್ವಿಕೆಯಿದ್ದಾಗಲೇ, ಆಕೆಯ ವಿರುದ್ಧವೇ ಇಂಟರ್‌ವ್ಯೂನಲ್ಲಿ ಮಾತಾಡಿಯೂ ಸರಕಾರಿ ಕೆಲಸ ಗಿಟ್ಟಿಸಿಕೊಂಡವನು. ನಡುವೆ ಸರಕಾರಿ ನೌಕರಿಗೆ ರಾಜೀನಾಮೆ ನೀಡಿ ಮಂಗಳೂರಿನಿಂದ ಆರಂಭಗೊಂಡ 'ಮುಂಗಾರು' ಪತ್ರಿಕೆಯ ಬಗ್ಗೆ ವಿಚಿತ್ರ ಕನಸುಗಳನ್ನು ಹೆಣೆದು ಅಲ್ಲಿಗೆ ಹಾರಿದವನು. ನಂತರ ಭ್ರಮನಿರಸನಗೊಂಡು ಹಿಂದಿರುಗಿದಾಗಲೂ, ಆ ಹೊತ್ತಿಗೂ, ಅವನ ಪ್ರಾಮಾಣಿಕತೆಗೆ ಹಿಡಿದ ಕನ್ನಡಿಯಾಗಿ, ಅವನ ರಾಜೀನಾಮೆಯೂ ಸ್ವೀಕಾರವಾಗದೆ ಮತ್ತೆ ಸರಕಾರಿ ನೌಕರಿಗೆ ಮರಳಿದವನು.

ಇಂತಹವನು ಮೈಸೂರಿನ ಕ್ರಾಫರ್ಡ್ ಭವನದ ಆಡಿಟರ್‌ಗಿರಿಯಿಂದ ಬಡ್ತಿ

# ಲೋಕಾಯುಕ್ತರ ಕಾರ್ಯವ್ಯಾಪ್ತಿ ಮತ್ತು ಪರಿಣಾಮ

ಪಡೆದು ಚಿಕ್ಕಮಗಳೂರಿಗೆ ವರ್ಗವಾದ. ಅಲ್ಲಿಯ ಡಿ.ಸಿ. ಆಫೀಸಿನಲ್ಲಿ ಆಹಾರ ವಿಭಾಗದಲ್ಲಿ ಅಕೌಂಟ್ಸ್ ಸೂಪರಿಂಟೆಂಡೆಂಟ್ ಆಗಿ ಕೆಲಸ ಮಾಡುತ್ತಿದ್ದ.

ಆಹಾರ ಇಲಾಖೆಯಲ್ಲಿನ್ನ ಹೆಗ್ಗಣಗಳಿಗೆ ಇವನ ಪ್ರಾಮಾಣಿಕತೆ ಅಪಥ್ಯವಾಯ್ತು. ಪ್ರತಿದಿನ ವ್ಯಾನಿಟಿ ಬ್ಯಾಗ್ ತುಂಬಿಸಿಕೊಳ್ಳುತ್ತಿದ್ದ ಹೆಣ್ಣುಮಗಳೊಬ್ಬಳ ಕ್ರಿಮಿನಲ್ ಬ್ರೈನ್ ಗ (ಅದಕ್ಕೆ ಅವಳ ಸಂಬಂಧಿಗಳು ಪೊಲೀಸ್ ಇಲಾಖೆಯಲ್ಲಿದ್ದದ್ದೂ ಕಾರಣವಾಗಿ) ಕೆಲಸ ಮಾಡಿತು. ಆಕೆ ತಾನು ತೆಗೆದುಕೊಂಡಿದ್ದ ೨೦೦ ರೂ.ಗಳ ಸಾಲ ಮರಳಿಸುವ ಸಂದರ್ಭದಲ್ಲಿ ಅವನನ್ನು ಲೋಕಾಯುಕ್ತ ಎಸ್.ಐ.ಗೆ ಹಿಡಿದು ಕೊಟ್ಟಳು. ಅವಳು ತಾನು ಕೊಡುತ್ತಿದ್ದ ಲಂಚಕ್ಕೆ ನೀಡಿದ ಕಾರಣ ತನ್ನ ರಜೆ ಮಂಜೂರಾತಿಗಾಗಿ ಆತ ಕೇಳಿದ್ದ ಎಂಬುದಾಗಿತ್ತು. ಭ್ರಷ್ಟಾತಿಭ್ರಷ್ಟವೆನಿಸುವ ಸಿಟಿ ಮುನಿಸಿಪಾಲಿಟಿಯಲ್ಲೇ ಪ್ರಾಮಾಣಿಕನೆನ್ನುವ ಹೆಸರು ಪಡೆದಿದ್ದ ಆತ, ಸಾರ್ವಜನಿಕರಿಂದ ಭ್ರಷ್ಟಾಚಾರದ ಆರೋಪವಿರದ ಆತ, ಸಹೋದ್ಯೋಗಿಯಿಂದ ಲಂಚ ಪಡೆದ ಕಥೆ ಹೆಣೆಯಲಾಯ್ತು ಮತ್ತು ಆತ ಲಂಚ ಪಡೆದುದಕ್ಕೆ ಸಾಕ್ಷಿಯಾದವರು ಅವನೊಂದಿಗೆ, ಅವನ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಇತರೆ ಸಹೋದ್ಯೋಗಿಗಳೂ ಆಗಿರಲಿಲ್ಲ, ಬೇರೆಬೇರೆ ಸ್ಥಳಗಳಲ್ಲಿದ್ದ, ಬೇರೆಬೇರೆ ಆಫೀಸುಗಳಿಂದ ಎರವಲು ಪಡೆದವರಾಗಿದ್ದರು. ಇಷ್ಟನ್ನು ಮೀರಿ ಈ ಕೇಸ್ ಡೀಲ್ ಮಾಡಿದ ಲೋಕಾಯುಕ್ತ ಇನ್ಸ್‌ಪೆಕ್ಟರ್ ಅದೇ ವಾರದಲ್ಲಿ ತಾನೇ ಸ್ವತಃ ಲಂಚ ಪಡೆಯುತ್ತಿದ್ದಾಗ ಸಿಕ್ಕುಬಿದ್ದಿದ್ದ.

ಇಷ್ಟೆಲ್ಲಾ ಲೂಪ್‌ಹೋಲ್‌ಗಳಿದ್ದ, ಮೇಲ್ನೋಟಕ್ಕೆ ಒಂದು ಖೆಡ್ಡವಾಗಿ ಕಾಣುತ್ತಿದ್ದ ಈ ಲೋಕಾಯುಕ್ತ ಕೇಸ್ ಸುಮಾರು ಹತ್ತು ವರ್ಷಗಳ ಕಾಲ ನಡೆದೇ ನಡೆಯಿತು.

ಆತ ಸ್ವತಃ ಕವಿಯಾಗಿದ್ದ, ಕತೆಗಾರನಾಗಿದ್ದ. ಅವನ 'ಹೆಣಗಳೆದ್ದು ಹಾಡಿದವು' ಕವನ ಸಂಕಲನ ಪ್ರಕಟವಾಗಿತ್ತು. ತನ್ನದೇ 'ಹೊಸದಿಕ್ಕು' ಪ್ರಕಾಶನದಿಂದ ಒಂದೆರಡು ಪುಸ್ತಕಗಳನ್ನು ಹೊರತಂದಿದ್ದ. ಅಂತಹ ಒಂದು ಬಡಪಾಯಿ ಪ್ರಾಣಿ ಒಂದು ದಿನ ಸುಳ್ಳು ಲೋಕಾಯುಕ್ತ ಕೇಸ್‌ಗೆ ಬಲಿಪಶುವಾಗಿ, ಅರೆ ಬೆತ್ತಲೆಯಾಗಿ ಪೊಲೀಸ್ ಠಾಣೆಯೊಳಗಿದ್ದ.

ಒಂದು ಸಂಕೋಚದ ಆದರೆ ಕ್ರಿಯಾಶೀಲವಾದ ಮನಸ್ಸಿಗೆ ಈ ಘಟನೆ ಎಂತಹ ಆಘಾತವಿತ್ತಿರಬಹುದು ? ಮೈಸೂರು ಮತ್ತು ಹಾಸನದ ಹಲವಾರು ವೇದಿಕೆಗಳಲ್ಲಿ ಆತ ಪರದೆಯ ಹಿಂದಿನ ಶಕ್ತಿಯಾಗಿ ಕೆಲಸ ಮಾಡಿದ್ದ. ಹಲವಾರು ಅಂತರ್ಜಾತೀಯ, ಪ್ರೇಮವಿವಾಹಗಳ ಪುರೋಹಿತನಾಗಿದ್ದ. ಹಲವರು ಸೋಕಾಲ್ಡ್ ಬುದ್ಧಿಜೀವಿಗಳ ಜೊತೆಗಾರನಾಗಿದ್ದ.

ಆದರೆ ಇವ್ಯಾವುವೂ ಆತನ ವಿಕಾಂಗಿ ಗಳಿಗೆಗಳಲ್ಲಿ ಪ್ರಯೋಜನಕ್ಕೆ ಬರಲೇ ಇಲ್ಲ. ಪೇಪರ್‌ಗಳಲ್ಲಿ ತಮ್ಮ ಹೇಳಿಕೆಗಳನ್ನು ಅಚ್ಚಾಗಿಸಿಕೊಳ್ಳುವತನಕದ ಸಾಮಾಜಿಕ ಕಾಳಜಿಗಳನ್ನು ಮಾತ್ರ ಇಟ್ಟುಕೊಂಡಿರುವ ಆತನ ಬುದ್ಧಿಜೀವಿ ಗೆಳೆಯರ್ಯಾರೂ ಅವನು ವ್ಯವಸ್ಥೆಯ ಇಂತಹ ಕ್ರೌರ್ಯಕ್ಕೆ ಬಲಿಯಾಗುವುದನ್ನು ತಪ್ಪಿಸಲಾಗಲೇ ಇಲ್ಲ. ಮಾತ್ರವಲ್ಲ, ಅದು ಅವನ ಹಣೆಪಾಡು ಎನ್ನುವಂತೆ ನೋಡಿಕೊಂಡು ತೆಪ್ಪಗಿದ್ದುಬಿಟ್ಟರು.

ದಿನವಿಡೀ ಕುಡಿತ ಅವನ ಸಂಗಾತಿಯಾಯ್ತು. ಸರಿಸುಮಾರು ಹತ್ತು ವರ್ಷಗಳ ಕಾಲ ನಡೆದರೂ ಮುಗಿಯದ ಕೇಸು ಅವನನ್ನು ಹೈರಾಣಾಗಿಸಿತ್ತು. ಊಟ, ತಿಂಡಿ, ಕಾಫಿ ಎಲ್ಲವನ್ನೂ ಬಿಟ್ಟು ಕುಡಿದ. ಹೊಟ್ಟೆ ತೂತಾಗುವಷ್ಟು ಕುಡಿದು ಹೀಗೆ ಕುಡಿಯುತ್ತಲೇ ಆತ ಹೊನ್ನಾಳಿಯ ತಾಲ್ಲೂಕು ಪಂಚಾಯಿತಿ ಆಫೀಸಿನಲ್ಲಿ ಆಫೀಸ್ ಸೂಪರಿಂಟೆಂಡೆಂಟ್ ಆಗಿ ಹಗಲೂರಾತ್ರಿ ದುಡಿಯುತ್ತಿದ್ದ.

ವಿಷಾದದ ಸಂಗತಿಯೆಂದರೆ ಈ ದಿನಗಳು ಅವನನ್ನು ಹೇಗೆ ಬದಲಾಯಿಸಿಬಿಟ್ಟಿತ್ತೆಂದರೆ, ಅವನ ಬದುಕಿನ ಕೊನೆಯ ದಿನಗಳ ಆ ಆಫೀಸಿನಲ್ಲಿ ಆತನೊಬ್ಬ ಕವಿಯಾಗಿದ್ದ, ಕತೆಗಾರನಾಗಿದ್ದ ಎಂದಾಗಲಿ ಯಾರಿಗೂ ಗೊತ್ತಿರಲಿಲ್ಲ. ಹೆಚ್ಚೆಂದರೆ ಹರಿದು ಬರುತ್ತಿದ್ದ ಹಣದ ಹೊಳೆಯಲ್ಲಿ ಕಿಂಚಿತ್ತೂ ಪಾಲು ಕೇಳದ ಒಳ್ಳೆಯ ಮನುಷ್ಯ. ಆದರೆ ತಾವೇ ಅವನಿಗೂ ಪಾಲು ಸಲ್ಲಿಸುತ್ತಿದ್ದರು. ಪ್ರಾಮಾಣಿಕತೆ ತನಗೆ ತಂದಿತ್ತಿದ್ದ ಪರಿಸ್ಥಿತಿಗಳಲ್ಲಿ ಜರ್ಜರಿತನಾಗಿದ್ದ ಅವನು ಈ ಪಾಪಿ ಹಣವನ್ನು ಕಳೆದುಕೊಳ್ಳಲೆಂಬಂತೆ ಕುಡಿದ. ತನ್ನನ್ನು ಮನೆಯಿಂದ ಆಫೀಸಿಗೆ ಆಫೀಸಿನಿಂದ

ಮನೆಗೆ ಕರೆತರುತ್ತಿದ್ದ ಆಟೋ ಡ್ರೈವರ್‌ಗಳಿಗೆ ಕುಡಿಸುತ್ತಿದ್ದ. ಕೈಗೆ ಸಿಕ್ಕಷ್ಟು ಹಣವನ್ನು ತೂರುತ್ತಿದ್ದ ಆ ಹೊತ್ತಿನ ಪರಿಸ್ಥಿತಿ ಹೇಗಿತ್ತೆಂದರೆ, ಈ ಪಾಟಿ ಕುಡಿಯುವವ, ಲಂಚ ತಿಂದಿರಲಾರ ಅಂತ ಯಾರೂ ಹೇಳುವಂತಿರಲಿಲ್ಲ.

ಲಿವರ್ ಪೂರ್ತಿಯಾಗಿ ಹಾಳಾಗಿ, ಜಾಂಡೀಸ್ ಆಗಿ, ಕೊನೆಗೆ ಹಾರ್ಟ್ ಅಟ್ಯಾಕ್ ಆಗಿ ಆತ ಶಿವಮೊಗ್ಗದ ಆಸ್ಪತ್ರೆಯೊಂದರಲ್ಲಿ ಕೊನೆಯುಸಿರೆಳೆದ. ಕೊನೆಯ ಬಾರಿ ಮುಚ್ಚುವ ತನಕವೂ ಅವನ ಕಣ್ಣುಗಳಲ್ಲಿದ್ದುದು ಏಕಾಂಗಿ ಗಳಿಗೆಗಳ ಅವನ ಜೊತೆಗಾರರಾಗಿದ್ದ ತುಂಟತನ ಮತ್ತು ವಿಷಾದ.

ಅಕ್ಷರಶಃ ಅದೊಂದು ಕೊಲೆಯಾಗಿತ್ತು – ಒಬ್ಬ ಭ್ರಷ್ಟ ಲೋಕಾಯುಕ್ತ ಇನ್ಸ್‌ಪೆಕ್ಟರ್ ಮಾಡಿದ ಒಬ್ಬ ಪ್ರಾಮಾಣಿಕನ ಕೊಲೆ, ಒಂದು ಕ್ಷಣದಲ್ಲಿ ನಡೆಯದ ಕೊಲೆ, ಹತ್ತು ವರುಷಗಳ ಕಾಲ ಜರುಗಿದ ಕೊಲೆ! ಆತನ ಸಾವಿನೊಂದಿಗೆ ಆ ಸುಳ್ಳು ಕೇಸ್‌ನ ಅಂತ್ಯವೂ ಆಯ್ತು. ಸತ್ಯದ ಸಾವಿನ ನಂತರ, ಸುಳ್ಳಿನ ಅಟ್ಟಹಾಸದಲ್ಲಿ ಆ ಹೆಂಗಸೂ ಇನ್ಸ್‌ಪೆಕ್ಟರನೂ ನಿಟ್ಟುಸಿರಿಟ್ಟಿರಬಹುದು.

ಪ್ರಶ್ನೆ ಇದಲ್ಲ, ಒಬ್ಬ ಪ್ರಾಮಾಣಿಕನನ್ನು ಕೊಲೆಗೈದ ಪಾಪವನ್ನು ನೂರು ಭ್ರಷ್ಟಾಚಾರಿಗಳಿಗೆ ನೀಡುವ ಮರಣದಂಡನೆ ತೊಳೆಯಬಹುದೇ ಎನ್ನುವುದು.

ಭ್ರಷ್ಟಾಚಾರಕ್ಕೆ ಮೈ,ಮನಸ್ಸು, ಹೃದಯ – ಎಲ್ಲವನ್ನೂ ಅಡವಿಟ್ಟು ಕೂತಿರುವ ವ್ಯವಸ್ಥೆಯಿಂದ ಕೊಲೆಯಾದವನ ಹೆಸರು ಕೆ. ಎಸ್. ಕೇಶವ ಅಲಿಯಾಸ್ ಕೇಶವಪ್ರಸಾದ್. ಈ ಪತ್ರಿಕೆಯ ಓದುಗರಲ್ಲಿ ಕೆಲವರಾದರೂ ಅವನನ್ನು ಬಲ್ಲವರಿರಬಹುದು.

ಆತ ನನ್ನ ಪ್ರೀತಿಯ ಅಣ್ಣ– ಚಾಚ.

ಈ ಕೇಸಿನಲ್ಲಿ ಸಿಲುಕುವ ಬಹಳ ಮೊದಲೇ ಬರೆದ ಅವನದೇ ಕವನ ಇದು–

ಸುಳ್ಳುಗಳು ಕುಣಿಯುತ್ತಿವೆ
ಕನಸುಗಳು ಉದುರಿಬಿದ್ದಿವೆ,
ಹಂಗಿನರಮನೆಯ ಜೀತಗಾರರೇ
ವಿಕಟ ನಗೆ ನಗಬೇಡಿರೋ.

**ಕೆ. ಎಸ್. ರೋಹಿಣಿ**, ಮ. ನಂ. ೨೫/೧, ವಿನೋಬಾ ರಸ್ತೆ
ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

## ಭ್ರಷ್ಟಾಚಾರ

**–ಹ. ಶ್ರೀ. ಆಡೂರ**

ಭ್ರಷ್ಟಾಚಾರ ಕ್ಯಾನ್ಸರ್ ರೋಗದಂತೆ ನಮ್ಮ ಸಮಾಜದ ಎಲ್ಲ ರಂಗಗಳಲ್ಲಿ ತ್ವರಿತಗತಿಯಿಂದ ವ್ಯಾಪಿಸುತ್ತಿದೆ. ೧೯೭೦ರ ನಂತರ ಅದರ ಬೆಳವಣಿಗೆ ಎಷ್ಟು ತೀವ್ರಗತಿಯಲ್ಲಿ ಆಯಿತೆಂದರೆ ಅದೊಂದು ಸಮಾಜಘಾತುಕ ಕೃತ್ಯ, ಭ್ರಷ್ಟಾಚಾರ ವನ್ನು ವಿರೋಧಿಸಬೇಕೆಂಬ ಭಾವನೆಯೇ ಸಮಾಜದಿಂದ ದೂರವಾಗಿದ್ದು ಅದೊಂದು ಸಾಮಾನ್ಯ ವಿಷಯವೆಂಬ ಭಾವನೆ ಸಮಾಜದ ಎಲ್ಲ ರಂಗಗಳಲ್ಲಿ ಹಾಗೂ ಎಲ್ಲ ಸ್ತರಗಳಲ್ಲಿ ನಿರಾತಂಕವಾಗಿ ನೆಲೆಯೂರಿದೆ.

೧. ಲೋಕಾಯುಕ್ತ ನ್ಯಾಯಮೂರ್ತಿ ಶ್ರೀ ವೆಂಕಟಾಚಲರು ಪೇಪರಿನಲ್ಲಿ ದಾಳಿ ಮಾಡಿದ ಸುದ್ದಿಯನ್ನೋದಿದಾಗ ಅವರ ಬಗ್ಗೆ ಕರುಣೆ ಬರುತ್ತಿದೆ, ಅವರು ವಿಶಾಲ ಭ್ರಷ್ಟಾಚಾರ ಎಂಬ ಸಮುದ್ರದಿಂದ ಒಂದೊಂದೆ ಮರಳ ಕಣವನ್ನು ಆರಿಸುತ್ತ, ಭ್ರಷ್ಟಾಚಾರ ನಿರ್ಮೂಲ ಮಾಡಲು ಪ್ರಯತ್ನಿಸುತ್ತಿದ್ದಾರೆಂದು.

೨. ಒಬ್ಬ ಲೋಕಾಯುಕ್ತರಿಂದ ಭ್ರಷ್ಟಾಚಾರ ನಿರ್ಮೂಲನೆ ಮಾಡುವದು ಅಶಕ್ಯ. ಆದರೆ ಲೋಕಾಯುಕ್ತರ ಕಾರ್ಯವನ್ನು ಮತ್ತಷ್ಟು ಪ್ರಭಾವಿಗೊಳಿಸಲು ಲೋಕಾಯುಕ್ತರಿಗೆ Judicial ಹಾಗೂ Executive powers ಗಳನ್ನು ಕೊಡಬೇಕು. ಅಲ್ಲದೆ, ಜಿಲ್ಲೆ ಹಾಗೂ ತಾಲೂಕು ಸ್ತರಗಳಲ್ಲಿ ಲೋಕಾಯುಕ್ತರ ಅಧೀನದಲ್ಲಿ ಕೆಲಸ ಮಾಡುವ ಸಮಿತಿಗಳನ್ನು ಲೋಕಾಯುಕ್ತರು ತಮಗೆ ಸರಿಕಂಡ ವ್ಯಕ್ತಿಗಳನ್ನು ಆರಿಸಿ, ಸಮಿತಿ ನಿರ್ಮಿಸುವ ಅಧಿಕಾರವಿರಬೇಕು.

೩. ಭ್ರಷ್ಟಾಚಾರಕ್ಕೆ ಮೂಲಕಾರಣ ಪರ್ಮಿಟ್-ಲೈಸೆನ್ಸ್-ಕಂಟ್ರೋಲ್ ರಾಜ್ಯ. ಜೊತೆಗೆ ಭಾರತದಲ್ಲಿರುವ ತೆರಿಗೆಯ ಭಾರ. ಸರಕಾರವು ತೆರಿಗೆಯ ದರವನ್ನು ಶೇ. ೧೫ ರಿಂದ ೨೦ರಷ್ಟು ಇಳಿಸಿ, ಮುಕ್ತ ಆರ್ಥಿಕ ವ್ಯವಸ್ಥೆಗೆ ಅನುವು ಮಾಡಿಕೊಟ್ಟಲ್ಲಿ ಬಹಳಷ್ಟು ಭ್ರಷ್ಟಾಚಾರ ಕಡಿಮೆಯಾದೀತು. ನಾಗರಿಕರು ಸರಕಾರದ ಯಾವುದೇ ವಿಭಾಗಕ್ಕಾಗಲಿ ಅಥವಾ ಸ್ವಾಯತ್ತ ಸಂಸ್ಥೆಗಳಿಗೆ, ಮನವಿ ಮಾಡಿ ನಿಶ್ಚಿತ ಸಮಯದಲ್ಲಿ ನಾಗರಿಕರಿಗೆ ಪರಿಹಾರವಾಗಲಿ ಅಥವಾ ಉತ್ತರವಾಗಲಿ ದೊರೆಯಬೇಕು. ಒಂದು ವೇಳೆ ಪೂರ್ವ ನಿರ್ಧಾರಿತ ವೇಳೆಯಲ್ಲಿ ಸರಕಾರ ಪರಿಹಾರ ಒದಗಿಸುವುದರಲ್ಲಿ ವಿಫಲವಾದರೆ ಸಂಬಂಧ ಪಟ್ಟ ಅಧಿಕಾರಿಗಳು ಅದಕ್ಕೆ ಜವಾಬ್ದಾರರಾಗುತ್ತಾರೆ. ನಾಗರಿಕರು ಕಾಯ್ದೆ ಕಾನೂನಿನ ಚೌಕಟ್ಟಿನಲ್ಲಿಯೇ ತಮ್ಮ ಅಧಿಕಾರವನ್ನು ಉಪಯೋಗಿಸಲು ನಿರ್ಧರಿಸಬೇಕು. **ಭ್ರಷ್ಟಾಚಾರದ ಮೂಲವೇ ಕಾಯ್ದೆಬಾಹೀರ ಕೃತ್ಯ.**

೪. ನನ್ನ ೩೮ ವರ್ಷಗಳ ಸರಕಾರಿ ಸೇವೆಯಲ್ಲಿ ಹಾಗೂ ಸಾಮಾಜಿಕ ಸೇವೆಯಲ್ಲಿ ನಾನು ನನ್ನ ಕರ್ತವ್ಯವನ್ನು ನಿಷ್ಠೆಯಿಂದ ಮಾಡಿದ್ದು, ಭ್ರಷ್ಟಾಚಾರಕ್ಕೆ ಬೇಕಾದಷ್ಟು ಅವಕಾಶಗಳಿದ್ದರೂ ಪ್ರಲೋಭನಕ್ಕೆ ಒಳಗಾಗದೆ ಈಗ ನಿಶ್ಚಿಂತೆಯಿಂದ ನಿವೃತ್ತಿ ಜೀವನ ಸಾಗಿಸುತ್ತಿರುವೆ. ಲಂಚ ಸ್ವೀಕರಿಸುವುದು ಅಪರಾಧವಾದರೆ ಲಂಚ ಕೊಡುವುದೂ ಅಪರಾಧ.

೫. ಭ್ರಷ್ಟರನ್ನು ಹಿಡಿದು ಬಡಿಯಿರಿ ಎಂಬ ಸಲಹೆ ಸಮಾಜದಲ್ಲಿ ಅರಾಜಕೀಯ (anarchic) ವ್ಯವಸ್ಥೆಗೆ ಎಡೆಮಾಡಿಕೊಟ್ಟಂತಾಗುವುದು. ಇದರಿಂದ ಸಮಾಜದಲ್ಲಿಯ ಶಾಂತತೆ ಹಾಗೂ ಭದ್ರತೆಗೆ ಅಪಾಯ ಒದಗಿ ಬರುವ ಸಂಭವವಿದೆ. ಕೆಲವು ತಿಂಗಳ ಹಿಂದೆ ನಾಗಪುರ ಜನತೆ, ಕಾನೂನನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ಅಪರಾಧಿಗಳನ್ನು ಶಿಕ್ಷಿಸಿದ್ದು ಎಲ್ಲರಿಗೂ ತಿಳಿದ ವಿಷಯ. ಇಂತಹ ಘಟನೆಗಳು ಭಾರತದ ಎಲ್ಲ ಶಹರ, ನಗರಗಳಲ್ಲಿ ಘಟಿಸಿದರೆ ನಮಗೆ ಸರಕಾರದ ನ್ಯಾಯಾಲಯದ ಅವಶ್ಯಕತೆ ಇರುವುದಿಲ್ಲ. ಇದರಿಂದ ನಾಗರಿಕ ಸಮಾಜದ ಬುನಾದಿಯೇ ಇಲ್ಲದಂತಾಗುವುದು.

೬. ಭ್ರಷ್ಟಾಚಾರ ಸಮಾಜದ ಎಲ್ಲ ಸ್ತರಗಳಲ್ಲಿದೆ ಎಂಬುದನ್ನು ಮೇಲೆ ಹೇಳಿದೆ. ರಾಜಕಾರಣಿ ಹಾಗೂ ರಾಜಕಾರಣಿಯಲ್ಲದ ವ್ಯಕ್ತಿ ಒಬ್ಬರಿಗೊಬ್ಬರು ಪೂರಕವಾಗಿ ಭ್ರಷ್ಟಾಚಾರವನ್ನು ಬಲಿಷ್ಠಗೊಳಿಸುತ್ತಿದ್ದಾರೆ ಎಂಬುದರಲ್ಲಿ ಸಂಶಯವಿಲ್ಲ. ಇದಕ್ಕೆ ಮೂಲಕಾರಣ ಈಗಿನ ನಮ್ಮ ಸಮಾಜದಲ್ಲಿಯ ಮೌಲ್ಯತೆಯ ಅಧಃಪತನ. ರಾಜಕಾರಣವು **ಸಮಾಜದ ಸೇವೆಯಾಗಿರದೆ ಒಂದು ಉದ್ಯೋಗವಾಗಿ ಪರಿವರ್ತನೆಗೊಂಡಿದೆ.** ಹೀಗಾಗಿ ಎಲ್ಲರೂ ಸಿಕ್ಕಷ್ಟು ದೋಚುವುದರಲ್ಲಿ ತೊಡಗಿದ್ದಾರೆ. ಪ್ರತಿಯೊಬ್ಬ ರಾಜಕಾರಣಿಯೂ ತನ್ನ ೫ ವರ್ಷಗಳ ಅವಧಿಯಲ್ಲಿ ಶಕ್ಯವಿದ್ದಷ್ಟು ಹಣ ಆಸ್ತಿ ಮಾಡುವುದರಲ್ಲಿ ವ್ಯಸ್ತನಾಗಿ ತನ್ನ ಕರ್ತವ್ಯವನ್ನೇ ಮರೆಯುತ್ತಾನೆ. ಇದು ಈಗ ಕಂಡುಬರುವ ರಾಜಕೀಯ ಚಿತ್ರ. ಇಲ್ಲಿ ಎಲ್ಲ ಪಕ್ಷಗಳೂ ಅಷ್ಟೇ ಸಮನಾಗಿ ಜವಾಬ್ದಾರರು.

**ಹ. ಶ್ರೀ. ಆಡೂರ**, ೧೦೩, ಆದಿತ್ಯ ಅಪಾರ್ಟ್‌ಮೆಂಟ್ಸ್
ಆಶಾನಗರ, ಠಾಕೂರ್ ಕಾಂಪ್ಲೆಕ್ಸ್, ಕಾಂದಿವಿಲಿ (ಪೂ), ಮುಂಬೈ - ೪೦೦ ೧೦೧

## ಭ್ರಷ್ಟಾಚಾರ ಹೇಗೆ ತೊಲಗೀತು ?

**–ಬಿ. ನಾ. ರಘುರಾಮ**

ಕಾಲೇಜ್ ಓದಿನ ಸಮಯದಿಂದಲೂ ನನ್ನ ಸ್ನೇಹಿತರಾಗಿರುವ ಶ್ರೀ ದೊರೆಸ್ವಾಮಿಯವರ ಲೇಖನ, ''ಭ್ರಷ್ಟಾಚಾರ ತೊಲಗಿಸಬೇಕು'' ಅದರ ಬಗೆಗಿನ ಜಿಗುಪ್ಸೆ, ಅದರ ವ್ಯಾಪಕತ್ವದ ಬಗ್ಗೆ ಆತಂಕ, ಅದು ಒಂದು ಬಗೆಯ ಆಚಾರ ಪದ್ಧತಿಯಾಗಿಯೇ ಹೋಗಿರುವ ಬಗ್ಗೆ ಅಸಹ್ಯ ಸಿಟ್ಟು, ಅದನ್ನು ನಿವಾರಿಸುವ ದಿಕ್ಕಿನಲ್ಲಿ ಸಮಾಜ ಸರಕಾರಗಳ ನಿಷ್ಕ್ರಿಯತೆ ಕಂಡು ರೋಸಿ ಹೋಗಿರುವುದು, ತಮ್ಮ ಅಸಹಾಯಕತೆ ಎಲ್ಲವನ್ನು ತೋರಿಸುತ್ತದೆ. ಈ ಪಿಡುಗು ನಮ್ಮ ದೇಶದಲ್ಲಿ ಮಾತ್ರವಲ್ಲ; ಭ್ರಷ್ಟತೆ ಎನ್ನುವುದು ಕಾಲದೇಶ ವ್ಯಾಪಕವಾದುದು. ಅದರ ಪ್ರಮಾಣ ಹೆಚ್ಚುಕಡಿಮೆಯಾದೀತು ಮಾತ್ರ. ಈಗಿನಕ್ಕಿಂತಲೂ ಕಡಿಮೆ ಇದ್ದ ಕಾಲವನ್ನು ಕಂಡಿದ್ದ, ಆ ಸ್ವಾತಂತ್ರ್ಯ ಹೋರಾಟ ಸಮಯದಲ್ಲಿ ಯುವಾವಸ್ಥೆಯಲ್ಲಿದ್ದು ಆದರ್ಶಗಳನ್ನು ಕನಸುಗಳನ್ನು ಕಟ್ಟಿಕೊಂಡು ಚಳವಳಿಯಲ್ಲಿ ಧುಮುಕಿದ್ದ, ಇನ್ನೂ ಬದುಕಿರುವ ಆ ಜಮಾನಾದವರಿಗೆ ದೊರೆಸ್ವಾಮಿಯವರಿಗನ್ನಿಸಿರುವಂತೆಯೇ ಅನ್ನಿಸುವುದು ನಿಜ, ಸಹಜ. ದೇಶದ ಸ್ವಾತಂತ್ರ್ಯದ ಜೊತೆಯಾಗಿಯೇ, ಅಲ್ಲಾವುದ್ದೀನ್‌ನ ಮಾಯಾದೀಪದಿಂದ ಹುಟ್ಟಿದ ಭೂತದಂತೆ, ಈ ಭ್ರಷ್ಟತೆ ಎಂಬ ಭೂತ ಬೃಹದಾಕಾರ ತಾಳಿ ದೇಶವ್ಯಾಪಿಯಾಗಿದೆ, ಆಳಕ್ಕೆ ಬೇರುಬಿಟ್ಟಿದೆ. ಅವರೇ ಹೇಳಿರುವಂತೆ ಮೂಲಕಾರಣ ನೈತಿಕ ಅಧಃಪತನವೇ ಎಂಬುದು ಸರಿಯೇ.

## ಲೋಕಾಯುಕ್ತರ ಕಾರ್ಯವ್ಯಾಪ್ತಿ ಮತ್ತು ಪರಿಣಾಮ

ಅಂಥ ಅಧಃಪತನವೇಕಾಯಿತು, ಈ ಭಯಂಕರ ರೋಗ ರಾಷ್ಟ್ರಕ್ಕೆ ಅಂಟಿತೇಕೆ, ವೃದ್ಧಿಯಾಯಿತೇಕೆ ? ಈ ಏಕೆಗಳಿಗೆ ಸಮರ್ಪಕ ಉತ್ತರ ಸಿಕ್ಕರೆ ರೋಗಕ್ಕೆ ಸೂಕ್ತ ಚಿಕಿತ್ಸೆ, ಭೂತವನ್ನೋಡಿಸಬಲ್ಲ ತಂತ್ರ ಪ್ರಯೋಗಿಸಬಹುದು. ಶ್ರೀ ವೆಂಕಟಾಚಲರೊಬ್ಬರು ಬೆವರು ಸುರಿಸಿದರೇನಾದೀತು ? ಅದು ಸವೆದು ಹರಕಲಾದ ಸೀರೆಗೆ ತೇಪೆ ಹಾಕುವಂತೆಯೇ, ಪ್ರಾಮಾಣಿಕ ಪ್ರಯತ್ನವೂ ನಿಷ್ಫಲ.

ಪ್ರತಿಯೊಂದು ರಾಷ್ಟ್ರಕ್ಕೂ ಒಂದು ವೈಶಿಷ್ಟ್ಯವಿರುತ್ತದೆ, ನಮ್ಮ ರಾಷ್ಟ್ರಕ್ಕೆ ಧಾರ್ಮಿಕತೆ, ಜ್ಞಾನದ ಬೆಳಕನ್ನು ಕಂಡ ಅಸಂಖ್ಯಾತ ಋಷಿ-ಮುನಿಗಳು ಜಗತ್ತಿನ ಒಳಿತಿನ ಬಗ್ಗೆ ದೀರ್ಘ ಚಿಂತನೆ ಮಾಡಿ 'ಧರ್ಮ' ಮಾತ್ರ ಅದನ್ನು ರಕ್ಷಿಸಬಲ್ಲುದೆಂದು ನಿರ್ಣಯಕ್ಕೆ ಬಂದಿರುವರು. ಸಮಾಜವನ್ನು ಧರ್ಮ ರಕ್ಷಿಸಲು ಅದಕ್ಕೆ ಶಕ್ತಿ ತುಂಬುವುದು ಸಮಾಜದ ಕರ್ತವ್ಯವೆಂದು, 'ಧರ್ಮೋ ರಕ್ಷತಿ ರಕ್ಷಿತಃ' ಎಂಬ ಸೂತ್ರವನ್ನಿತ್ತರು. ಧರ್ಮ ಎಂಬುದು ಅನೇಕಾರ್ಥಗಳ ಸಮುಚ್ಚಯ. ಒಟ್ಟಿನಲ್ಲಿ ಸಮಾಜದ ಸುಸ್ಥಿತಿಗೆ, ರಕ್ಷಣೆ ಪೋಷಣೆಗಳಿಗೆ ಏನೇನು ಅಗತ್ಯವೋ ಅವೆಲ್ಲವೂ ಹಿತ-ಮಿತವಾಗಿ ಕೂಡಿಕೊಂಡಿರುವುದೇ ಧರ್ಮ ಎಂದು ಹೇಳಬಹುದು. ಮನುಧರ್ಮ ಕೊಟ್ಟಿರುವ 'ದಶಕಂ ಧರ್ಮ ಲಕ್ಷಣಂ' ಪಟ್ಟಿ ಒಂದು ಭಾಗ. ''ಕಳಬೇಡ ಕೊಲಬೇಡ, ಹುಸಿಯ ನುಡಿಯಲುಬೇಡ, ಅನ್ಯರಿಗಸಹ್ಯ ಪಡಬೇಡ, ಇದಿರ ಹಳಿಯಲುಬೇಡ'' ಇತ್ಯಾದಿ 'ಬೇಡ-ಗಳು'. ''ಜಗದೀಶ್ವರನೆಂಬೊಬ್ಬ ಕರುಣಿ ಇದ್ದಾನೆ. ಅಚಲ ಸ್ವಭಾವದ ಜಡ ಪ್ರಕೃತಿಗೆ ಚಾಲನೆ ಕೊಡುವವನು ಅವನೇ. ಅವನು ಸರ್ವಸಾಕ್ಷಿ, ಅವನ ರಾಜ್ಯದಲ್ಲಿರುವವರು ಪ್ರಾಮಾಣಿಕವಾಗಿ ತಂತಮ್ಮ ಕರ್ತವ್ಯಗಳನ್ನು ಪೂರೈಸುತ್ತಲೇ ಬದುಕಬೇಕು. ಅವನಂತೆಯೇ ಕರುಣವಂತರಾಗಿ ಸುತ್ತಲಿನ ಇತರರ ಒಳಿತಿನ ಚಿಂತೆ ಮಾಡಬೇಕು. ತಮ್ಮ ಗಳಿಕೆಯಲ್ಲಿ ದೀನದುಃಖಿಗಳಾಗಿ ತ್ಯಾಗಶೀಲರಾಗಬೇಕು ('ತಿರಿದು ತಂದರೂ ಒಬ್ಬನ ಕರಕೊಂಡು ಉಣಬೇಕು' ಎಂದಿದ್ದಾನೆ ಸರ್ವಜ್ಞ). ತನ್ನದಲ್ಲದ ಅನ್ಯರ ಗಳಿಕೆಯನ್ನೆಂದಿಗೂ ಬಯಸಬಾರದು, ಅಪಹರಿಸುವುದು, ಶೋಷಿಸುವುದು ಸಲ್ಲದು, ಬೇಡಲೂಬಾರದು, ತನ್ನ ಗಳಿಕೆ ಸಮಾಜದ ದೇಣಿಗೆ ಎಂದು ತಿಳಿದು, ತನ್ನ ಕೇವಲ ಜೀವನಾವಶ್ಯಕ ಅಂಶಕ್ಕೆ ಮಾತ್ರ ತಾನು ಬಾಧ್ಯ, ಉಳಿದುದು ಸಂಗ್ರಹ ಯೋಗ್ಯವಲ್ಲ, ಸಂಗ್ರಹಿಸುವುದು ಕಳ್ಳತನ, ಶಿಕ್ಷಾರ್ಹ ಅಪರಾಧ. ಅದು ಸಮಾಜಕ್ಕೆ ಹಿಂದಿರುಗಿಸಬೇಕಾದುದು ಎಂದು ಅರಿಯಬೇಕು'' – (ಈಶಾವಾಸ್ಯ ಉಪನಿಷತ್ ಹಾಗೂ ಭಾಗವತದ ಕೆಲವು ಶ್ಲೋಕಗಳ ವಿವರಣೆ ಇದು).

ಸನ್ನಡತೆಗೆ ವ್ಯಕ್ತಿಯ ಸ್ವಭಾವಜನ್ಯ ಹಾಗು ಆನುವಂಶಿಕಗಳ ಜೊತೆಗೆ ಸುತ್ತಲಿನ ಸನ್ನಿವೇಶವೂ ಪ್ರಭಾವಿಯೇ. ಹಿಂದಿನ ತಲೆಮಾರಿನವರಿಗೆ ಸನ್ನಿವೇಶದ ಪ್ರಭಾವ ಸಹಾಯ ಮಾಡುತ್ತಿತ್ತು. ಮನೆಗಳಲ್ಲಿ ಹಿರಿಯರ ನಡೆವಳಿ ಮಾದರಿಯಾಗಿತ್ತು. ನೀತಿಬೋಧಕ ಜೀವನಧರ್ಮ ಪ್ರಚೋದಕ ಕತೆಗಳನ್ನು

## ಸಿಕಾಡ ಮತ್ತು ಪ್ರೇಯಿಂಗ್ ಮ್ಯಾಂಟಿಸ್



ತಲೆಯಿಲ್ಲದ ಜೀರುಂಡೆ ಮಿಡತೆಯ ಬಾಯಲ್ಲಿ
ನಿಲ್ಲದ ಸದ್ದು ಜೀರುಂಡೆಗೆ ಸಿಕಾಡ ಎಂದೇಕೆ ಹೇಳಬೇಕು ?
ಕೈ ಮುಗಿದೇ ತಲೆ ತಿನ್ನುವ ಈ ಪರಿ
ಪುರಾತನವಾದರೂ ನಿತ್ಯನೂತನ ಕ್ರೌರ್ಯ.

ಜೀರುಂಡೆ ಜೀರ್‌ಜಿರ್ರೋಂ ಕೇಳಿದಾಗೆಲ್ಲ
ಮುಸ್ಸಂಜೆಯ ಮುರುವಿನೊಲೆಯ ಧಗಧಗ ಜ್ವಾಲೆ
ಛಳಿ, ಕೊತಕೊತಿಸುವ ಹುರುಳಿಸಾರು
ಸೀತು, ಲಕ್ಷ್ಮೀ, ನಾಗು ಒಣಗಲಿಟ್ಟ ಗೊರಬುಗಳಂತೆ

ಜೀರುಂಡೆ ದನಿಯಲ್ಲಿ ಸೇರಿಹೋದ ನಾಗುವಿನ
ಕೀರಲುದನಿ, ಸಸಿನೆಟ್ಟಿಯ ಹಾಡಿನ ನಡುವೆ
'ಸೆಣ್ಣಮ್ಮಗೆ ಒಳ್ಳೆಯ ಗಂಡ ಸಿಗಲೀ ಪಾಪಣ್ಣ 'ಮೇಲ್‌ಶೆಟ್ರ'* ಆಯ್ಲೀ'

ಬೆಂದ ಹಲಸಿನ ಬಿತ್ತ ಕೆಂಡದಿಂದ ತೆಗೆವಾಗ
ಜೋರು ಜೀರುಂಡೆ ಸ್ವರಮೇಳ ಧೋಮಳೆಯಲ್ಲಿ ವಿಲೀನ
ಮುಸ್ಸಂಜೆ ರಾಜಕುಮಾರಿಯ ಕನಸು ಮಳೆಯಲ್ಲಿ ತೊಳೆದು
ಮಳೆಗಾಲ, ಒದ್ದೆನೆಲ, ಖಾಲಿಜೇಬು, ಒಂಟಿತನ ಜೀರುಂಡೆದನಿ
ಜೀರುಂಡೆಗೆ 'ಸಿಕಾಡ' ಎಂದೇಕೆ ಹೇಳುತ್ತಾರೆ ?

ಕೊಂದು ತಿನ್ನುವುದಲ್ಲ ತಿಂದು ಬದುಕುವುದು ಕೀಟ ಪ್ರಪಂಚ
ಇವರೋ ಬದುಕನ್ನೇ ನುಂಗುವ ಧಾರ್ಮಿಕರು
ಶತಮಾನಗಳಿಂದ ಮುಗಿಯದ ಧರ್ಮರಕ್ಷಣೆ
ಅಡಿಕೆತೋಟ ಗದ್ದೆಯ ನುಂಗಿ ಕೀಟನಾಶಕ ರೈತನ ನುಂಗಿ
ಮೆಲುಕು ಮೌನವಾಗುವ ಮೊದಲೇ ಮತ್ತದೋ ಜೀರುಂಡೆ ದನಿ
ಅಂದ ಹಾಗೆ ಜೀರುಂಡೆ ಜಗತ್ತಿನಲ್ಲೂ ಹೆಣ್ಣಿಗೆ ದನಿಯಿಲ್ಲ



* Magistrate

ಎಲ್. ಸಿ. ಸುಮಿತ್ರಾ, ಕೊಪ್ಪ ಗುಡ್ಡ ತೀರ್ಥಹಳ್ಳಿ - ೫೭೭ ೪೩೨



## ಲೋಕಾಯುಕ್ತರ ಕಾರ್ಯವ್ಯಾಪ್ತಿ ಮತ್ತು ಪರಿಣಾಮ

ಮಕ್ಕಳಿಗೆ ಹೇಳುತ್ತಿದ್ದುದು ಸಾಮಾನ್ಯವಿತ್ತು, ಹೆಣ್ಮಕ್ಕಳ ಜೋಗುಳ ಪದಗಳು, ಶಿವ ಶರಣ-ದಾಸರ ಹಾಡುಗಳು ಎಲ್ಲ ಮನೆಗೆಲಸ ಕಾರ್ಯಗಳುದ್ದಕ್ಕೂ ನಲಿಯುತ್ತಿದ್ದವು. ಸಣ್ಣಪುಟ್ಟ ತಪ್ಪುಗಳಿಗೆ ಸೂಕ್ತ 'ಶಿಕ್ಷೆ' (ಶಿಕ್ಷಣರೂಪಿ) ಇತ್ತು, ಉತ್ತಮ ನಡತೆಗೆ ಸೂಕ್ತ ಮೆಚ್ಚುಗೆ ಸಹ ಇರುತ್ತಿತ್ತು. ಶಾಲೆಗಳಲ್ಲಿ ಶಿಕ್ಷಕರು ಸಮಯಪಾಲನೆ, ಅನುಶಾಸನಗಳಿಗೆ ಮಾದರಿಯಾಗಿರುತ್ತ ಮಕ್ಕಳಿಗೆ ಅನುಕರಣೆ ಯೋಗ್ಯರಿದ್ದರು. ಕಲಿವ ಪಾಠಗಳಲ್ಲಿ ಸರ್ವಜ್ಞ ವಚನ, ಸೋಮೇಶ್ವರ ಶತಕ, ನೀತಿಸಾರದಿಂದ ಆಯ್ದ ಪದ್ಯಗಳು, ('ಇಟ್ಟರೆ ಸಗಣಿಯಾದೆ... ನೀನಾರಿಗಾದೆಯೋ ಎಲೆ ಮಾನವ'), ಗೋವಿನಹಾಡು, ಗೋವಿನ ಕತೆ (ಧರಣಿಮಂಡಲ), 'ಪ್ರಾಣಿಗಳೊಳು ದಯೆ ಇಡು' ಮುಂತಾದ ಪದ್ಯಗಳು, ನೀತಿಕಥೆಗಳು ಇದ್ದುವು. ಸ್ವತಂತ್ರ ಓದಿಗೆ ನೀತಿ ಚಿಂತಾಮಣಿ, ಸುಬೋಧ ಗ್ರಂಥಮಾಲೆಯ ಕಿರುಪುಸ್ತಕಗಳು ಸಿಗುತ್ತಿದ್ದುವು. ನಾವು ಪ್ರತ್ಯಕ್ಷ ನೋಡದಿದ್ದ ದಯಾನಂದ, ವಿವೇಕಾನಂದ, ಅರವಿಂದ, ಟಿಳಕ, ಲಜಪತ್‌ರಾಯ್, ಗಾಂಧೀ, ಸುಭಾಷ್, ನೆಹರು, ಭಗತ್‌ಸಿಂಗ್, ಸೂರ್ಯಸೇನ ಹಾಗೂ ಕೆಳದಿ ಚೆನ್ನಮ್ಮ, ಕಿತ್ತೂರ ಚೆನ್ನಮ್ಮ, ಚಾಂದ್‌ಬೀಬಿ, ಝಾನ್ಸಿರಾಣಿ, ಶಿವಾಜಿ, ಪ್ರತಾಪ್ – ಮುಂತಾದವರ ಜೀವನಿಗಳು, ಅವರ ತ್ಯಾಗ ಬಲಿದಾನಗಳು ಕಣ್ಣಿಗೆ ಕಟ್ಟುವಂತೆ ವಿವರಿಸುತ್ತಿದ್ದರು. ಗುಲಾಮ ಭಾರತವನ್ನು ಸ್ವತಂತ್ರಗೊಳಿಸಿ ವೈಭವ ದೇಶವನ್ನಾಗಿ ಮಾಡುವ ಕರ್ತವ್ಯ ಜಾಗ್ರತಿ ಗೈಯುತ್ತಿದ್ದರು. ಆಗಿನ ಸಿನಿಮಾಗಳು ನೀತಿಬೋಧಕ, ದೇಶ ಭಕ್ತಿ ಪ್ರಚೋದಕವಿರುತ್ತಿದ್ದವು. ಒಟ್ಟಿನಲ್ಲಿ ವಾತಾವರಣ ಶುದ್ಧವಿತ್ತು. ''ವಂದೇ ಮಾತರಮ್'' ನಮ್ಮೆಲ್ಲರ ಬಾಯಲ್ಲೂ ನಲಿಯುತ್ತಿತ್ತು, ನೇರಕ್ಕೆ ನಡೆಸುತ್ತಿತ್ತು.

ಸ್ವಾತಂತ್ರ್ಯ ಗಳಿಕೆಯೊಡನೆ, 'ಸ್ವಾತಂತ್ರ್ಯ' ಶಬ್ದದರ್ಥ 'ಸ್ವಚ್ಛಂದ' ವೆಂಬಂತಾಯಿತು. ಮನೆ-ಶಾಲೆ-ಹೊರಗಣ ಸಮಾಜಗಳ ವಾತಾವರಣವೇ ಬದಲಾಯಿತು. ನಾವು ನಂಬಿದ್ದ ಮುಖಂಡರು ತಮ್ಮ ತ್ಯಾಗ ಬಲಿದಾನಗಳಿಗೆ ಪ್ರತಿಫಲಕ್ಕಾಗಿ ಹಾತೊರೆಯತೊಡಗಿದರು. ದಿಢೀರ್ ಶ್ರೀಮಂತರಾಗಲು ಯತ್ನಿಸಿದರು. ಎಲ್ಲ ಹಂತಗಳ ಶಿಕ್ಷಣ ಪದ್ಧತಿಯಲ್ಲಿ ಏರು-ಪೇರುಗಳಾದವು. 'ಪ್ರಗತಿಪರತೆ' ಎಂದರೆ ಮೊದಲಿನ ಸಾಮಾಜಿಕ ನಂಬಿಕೆ ವಿಶ್ವಾಸಗಳು, ನೀತಿನಡವಳಿಗಳು ಮುಂತಾದುವನ್ನು ಪರಿಹಾಸ ಮಾಡುವುದು ಪ್ರಾರಂಭವಾಗಿ ಅವುಗಳ ಪ್ರಕಾರ ನಡೆಯಲು ಯುವಜನಕ್ಕೆ ಸಂಕೋಚಪಡುವಂತಾಗಿ ಕ್ರಮೇಣ ಅವು ನಶಿಸತೊಡಗಿದುವು. ಅವರ ಎದುರಿನ ಸದಾದರ್ಶಗಳು ವ್ಯತ್ಯಸ್ತ ಗೊಂಡವು. ಚಳವಳಿ ಸಮಯದ ವಾತಾವರಣದ ಬಿಗು, ಶಿಸ್ತು ಸಡಿಲಗೊಂಡು ಜನರ ನಡತೆ – ಮುಖ್ಯವಾಗಿ ನಗರಪ್ರದೇಶಗಳ – ಶಿಥಿಲಗೊಂಡಿತು, ಕ್ರಮೇಣ ಗ್ರಾಮಾಂತರಕ್ಕೂ ಶಿಥಿಲತೆ ಹರಡತೊಡಗಿತು. ಪಶ್ಚಿಮದ ಅಶುದ್ಧ ಪ್ರಭಾವ ಎಲ್ಲ ಬಗೆಯ ರೀತಿ-ನೀತಿ-ವರ್ತನೆಗಳಲ್ಲೂ ಬದಲಾವಣೆ ತರಲಿಟ್ಟಿತು.

ಈ ೩೦-೪೦ ವರ್ಷಗಳಿಂದೀಚೆಗಂತೂ ಹಣ-ಪ್ರಪಂಚ ಸೆಳೆಯ ತೊಡಗಿತ್ತು. ಪರದೇಶಗಳ ಸಾಲಗಳ ದುರುಪಯೋಗವನ್ನು ಸರಕಾರ ತಡೆಗಟ್ಟುವ ಜಾಗ್ರತೆ ವಹಿಸಲಿಲ್ಲ. ಭ್ರಷ್ಟತೆಯನ್ನು ಚಿಗುರಿನಲ್ಲಿಯೇ ಮೊಟಕಿ ಹಿಸುಕಲಿಲ್ಲ. ಶಿಕ್ಷಣಪದ್ಧತಿ ಕೆಳಗಿನಿಂದ ಮೇಲಿನವರೆಗೆ ಪ್ರಗತಿ ಎಂದರೆ ಭೌತಿಕ-ಆರ್ಥಿಕ ಉನ್ನತಿಯ ಕಡೆಗೆ ಚಲನೆ ಎಂದೇ ಬಿಂಬಿಸಿತು, ನೈತಿಕ-ಆಧ್ಯಾತ್ಮಿಕತೆಗಳಿಗೆ ಮನ್ನಣೆ ತಪ್ಪಿತು. ಸಿನಿಮಾ ಪ್ರಪಂಚವೂ ಕಲುಷಿತಗೊಂಡು, ಅಮೇರಿಕದ ಅಧ್ವಾನ ಚಿತ್ರಗಳನ್ನು ಅನುಕರಿಸತೊಡಗಿತು. ಯುವಜನ ಅಮೇರಿಕ-ಯುರೋಪ್ ಅವಗುಣಗಳನ್ನು 'ದಿವ್ಯ'ವೆಂದೇ 'ಏಪ್' ಮಾಡತೊಡಗಿದರು. ಯಾವುದಕ್ಕೂ ಅಡೆ-ತಡೆಯೇ ಇಲ್ಲದಾಯ್ತು.

''ಹಣದ ಬೆನ್ನು ಹತ್ತಿದವನು ಪ್ರಾಮಾಣಿಕತೆ, ಸತ್ಯಸಂಧತೆಗಳನ್ನು ಉಳಿಸಿಕೊಳ್ಳಲಸಮರ್ಥನಾಗುವ'' ಎಂಬ ನಾಣ್ನುಡಿ ನಿಜವಾಯಿತು. ಭೌತಿಕ-ಧಾರ್ಮಿಕವಾದ ಯಾವ ಕಟ್ಟುಪಾಡುಗಳಿಲ್ಲದೆ, ತಪ್ಪುಗಳಿಗೆ, ದೌರ್ಜನ್ಯ ಭ್ರಷ್ಟತೆಗಳಿಗೆ ಪ್ರಮಾಣಬದ್ಧ, ಕ್ಷಿಪ್ರ ಶಿಕ್ಷೆ ಇರದೆ, ಮೌಲ್ಯಗಳ ತೀವ್ರ ಕರಗುವಿಕೆಯೂ ಕಾರಣವಾಗಿ ಇಂದಿನ ದುಃಸ್ಥಿತಿಯ ತಳಕ್ಕಿಳಿದಿದ್ದೇವೆ. ದಂಡನೀತಿಯ ಪ್ರಯೋಗವೇ ನಿಂತುಹೋಗಿದೆ, 'ಶಾಸನ-ದಮನ-ಮರಣ' ಎಂಬ ಮೂರು ಹಂತದ ಶಿಕ್ಷೆಯ ಕಲ್ಪನೆಯೇ ಮರೆತಿದೆ. ಈ ದೇಶ ಮೊದಲಿನಿಂದ ಸಾರ್ವಜನಿಕ ಶಿಕ್ಷಣಕ್ಕೆ ಪ್ರಾಮುಖ್ಯ ನೀಡದೆ ೫೬ ವರ್ಷಗಳ ತರುವಾಯವೂ ನಿರಕ್ಷರಕುಕ್ಷಿಗಳ ಸಂಖ್ಯೆ ಏರುತ್ತಿದೆ. ಅವರ ಅಜ್ಞಾನವೇ ರಾಜಕೀಯಸ್ಥರಿಗೆ ಬಂಡವಾಳವಾಗಿ ಮತದಾನ ಕಲುಷಿತಗೊಂಡು ನಮ್ಮ ಪ್ರಜಾಸತ್ತೆ ಅಪಹಾಸ್ಯಕ್ಕೀಡಾಗಿದೆ. ಸಂವಿಧಾನ, ನ್ಯಾಯಾಲಯಗಳಿಗೆ ಮಾನ್ಯತೆ ಸಡಿಲಗೊಂಡು ಕುಕರ್ಮಿಗಳಿಗೆ ''ಬಾರಾಖೂನಿ ಮಾಫ್!'' ಎಂಬಂತಾಗಿದೆ. ಭ್ರಷ್ಟತೆ ಎಂಬ ಹೊಲಸು ಹಿಮಾಲಯದ ಎತ್ತರಕ್ಕೇರಿದೆ. ಯಾವ ಕಡೆಯಿಂದ ಹೇಗೆ ತೊಳೆಯತೊಡಗಬೇಕೆಂಬುದೇ ಸಮಸ್ಯೆಯಾಗಿದೆ.

ಈ ಸಮಸ್ಯೆ ಎದುರಿಸಲು ದ್ವಿಮುಖ ಕಾರ್ಯಾಚರಣೆ ಅವಶ್ಯಕವಾದೀತು; ಎರಡೂ ಸಹ 'ಶಿಕ್ಷೆ'ಯೇ :

೧. ಸಾರ್ವಜನಿಕ ಶಿಕ್ಷಣ ತ್ವರಿತಗೊಳಿಸುವುದು, ಶಾಲಾಕಾಲೇಜುಗಳಲ್ಲಿ ನೀತಿ-ಧರ್ಮಗಳ ತಳಹದಿಯ ಪುನರ್ ಪ್ರತಿಷ್ಠಾಪನೆ. ಶಿಕ್ಷಕ ಬಂಧುಗಳ ಸೂಕ್ತ ತಯಾರಿಕೆ. ಪಠ್ಯವಿಷಯಗಳ ಮೇಲ್ದರ್ಜೆ, ಸಮಾಜದ ನೀತಿವಂತರ ನಿಷ್ಠುರ ಮೇಲ್ವಿಚಾರಣೆ, ಮಾರ್ಗದರ್ಶನ.

೨. ನ್ಯಾಯದಾನ ಪದ್ಧತಿಯಲ್ಲಿ ಸೂಕ್ತ ಬದಲಾವಣೆ, ಅಗತ್ಯವಾದ ಸಂವಿಧಾನದ ತಿದ್ದುಪಡಿ, ಕ್ಷಿಪ್ರವಾದ ನ್ಯಾಯದಾನ, ಕ್ಷಿಪ್ರವಾದ ಶಿಕ್ಷೆ ನೀಡುವಲ್ಲಿ ದಯ-ದಾಕ್ಷಿಣ್ಯವಿಲ್ಲದಂಥ ನಿಷ್ಠುರತೆ.

೩. ಯುವಜನರಿಗೆ ಕಡ್ಡಾಯ ಸೈನಿಕ ಶಿಕ್ಷಣ.

೪. ಮತದಾನ ಪದ್ಧತಿಯ ಸುಧಾರಣೆ: ಅಶಿಕ್ಷಿತರು, ಕುಮಾರ್ಗ ಅವಲಂಬಿಗಳಿಗೆ ಲೋಕಸಭಾ, ವಿಧಾನಸಭೆಗಳಿಗೆ ಪ್ರವೇಶ ಕಡ್ಡಾಯ ನಿರಾಕರಣೆ, ವಿದೇಶ ಪ್ರಭಾವಗಳಿಗೆ ಪ್ರಬಲ ಕಡಿವಾಣ ಮುಂತಾದುವು ಮುಖ್ಯವೆನ್ನಿಸುತ್ತವೆ. ಇನ್ನೂ ಕೆಲವನ್ನು ಯೋಚಿಸಬಹುದು.

ಬ. ನಾ. ರಘುರಾಮ, ಹೌಸಿಂಗ್ ಬೋರ್ಡ್ ಕಾಲೊನಿ, ಸಾಗರ - ೫೭೭ ೪೦೧

## ನಿಮ್ಮ ಪ್ರಶ್ನೆಗಳಿಗೆ ಉತ್ತರ

– ಕೊ. ಸು. ನರಸಿಂಹಮೂರ್ತಿ

೧. ಲೋಕಾಯುಕ್ತರು ಸುದ್ದಿ ಮಾಡಿದಾಗ ತಕ್ಷಣಕ್ಕೆ ನನಗೆ ನಮ್ಮ ಜನಗಳು ಇನ್ನೂ ಸುಧಾರಿಸುತ್ತಿಲ್ಲವಲ್ಲ ಎಂದು ನಾಚಿಕೆ ಆಗುತ್ತದೆ, ಅಂತೆಯೇ ಅಂತಹ ಜನರ ಮೇಲೆ ರೋಷ ಉಕ್ಕುತ್ತದೆ.

೨. ಲೋಕಾಯುಕ್ತರು ಈಗ ಮಾಧ್ಯಮದವರೊಂದಿಗೇ ಹೋಗಿ ಧಾಳಿ ಮಾಡುತ್ತಿರುವುದೂ ಒಂದು ಉತ್ತಮ ವಿಧಾನ. ಅಂತೆಯೇ ಲಂಚ ಪಡೆಯುವ ನೌಕರನನ್ನು ಊರಲ್ಲೆಲ್ಲಾ ಮೆರವಣಿಗೆ ಮಾಡಿದರೆ ಪರಿಸ್ಥಿತಿ ಸುಧಾರಿಸಬಹುದು.

೩. ಭ್ರಷ್ಟಾಚಾರಕ್ಕೆ ಮೂಲಕಾರಣ ಆಸೆ. ಬರುವ ಸಂಬಳದಲ್ಲೇ ಏನುಬೇಕಾದರೂ ಮಾಡಬಹುದು. ಆದರೆ ಬಹಳಷ್ಟು ಮಂದಿ ಹಾಸಿಗೆಯಿದ್ದಷ್ಟು ಕಾಲು ಚಾಚುವುದಿಲ್ಲ. ಹೀಗಾಗಿ ಬರುವ ಸಂಬಳ ಸಾಲದೇ, ಸಾಲ ಮಾಡಿರುತ್ತಾರೆ, ಸಾಲಗಾರರ ಕಾಟ ತಡೆಯಲಾರದೇ ಸುಲಭವಾಗಿ ಹಣಗಳಿಸಲು ರೇಸ್ ಇತ್ಯಾದಿ ಚಟಕ್ಕಿಳಿದು, ಮತ್ತಷ್ಟು ಪಾತಾಳಕ್ಕಿಳಿಯುತ್ತಾರೆ. ಆದಕಾರಣ ಸುಲಭವಾಗಿ ಸಾಲ ಸಿಗುವ ದಾರಿಗಳನ್ನು ಮುಚ್ಚಬೇಕು. ಬರುವ ಸಂಬಳದಲ್ಲೇ ಜೀವನ ನಡೆಸುವಂತೆ ನೌಕರರ ಮನಃಪರಿವರ್ತಿಸುವ ಅಗತ್ಯವಿದೆ.

೪. ನನ್ನ ಪರಿಧಿಯಲ್ಲಿ ಬರುವ ನೌಕರ ಬಾಂಧವರಿಗೆ ಯದ್ವಾತದ್ವಾ ಹಣ ಖರ್ಚುಮಾಡದಂತೆ ಕಿವಿಮಾತನ್ನು ಹೇಳುತ್ತಿರುತ್ತೇನೆ. ಅದು ಪರಿಣಾಮಕಾರಿಯೂ ಆಗಿದೆ.

೫. ಭ್ರಷ್ಟರನ್ನು ಹಿಡಿದು ಬಡಿದರೆ ಏನೂ ಆಗುವುದಿಲ್ಲ. ಅದರ ಬದಲು ಭ್ರಷ್ಟ ನೌಕರರಿಗೆ ಮನಶ್ಶಾಸ್ತ್ರಜ್ಞರಿಂದ ಸೂಕ್ತ ನೆರವು ನೀಡಬೇಕು.

೬. ರಾಜಕಾರಣಿ ಹಾಗೂ ರಾಜಕಾರಣಿಯಲ್ಲದ ವ್ಯಕ್ತಿಗಳು ಇಂದು ಭ್ರಷ್ಟತೆಯನ್ನು ಬಲಿಷ್ಠಗೊಳಿಸುತ್ತಿರುವುದರಿಂದ (ಇದಕ್ಕೆ ಸಮರ್ಥನೆ ಬೇಕಾ?) ಸಮಾಜವು ಅನಾರೋಗ್ಯ ಪರಿಸ್ಥಿತಿಗೆ ನೂಕಲ್ಪಟ್ಟಿದೆ. ಬೋಫೋರ್ಸ್ ಹಗರಣ ಮೊದಲಾದವುಗಳಲ್ಲಿ ರಾಜಕಾರಣಿಗಳ ಜೊತೆ ರಾಜಕಾರಣಿಗಳಲ್ಲದವರೂ ಸೇರಿಲ್ಲವೇ? ದಿನನಿತ್ಯ ಕೇಳುವ, ಓದುವ ಉದಾಹರಣೆಗಳನ್ನು ಅನುಭವಿಸುತ್ತಲೇ ಇರುತ್ತೇವಲ್ಲ!

ಕೊ. ಸು. ನರಸಿಂಹಮೂರ್ತಿ, ೧೧೫೪/೨
ವಿಷ್ಣುವರ್ಧನ ರಸ್ತೆ ಹಿಂಭಾಗ, ಚಾಮರಾಜಪುರಂ, ಮೈಸೂರು - ೫೭೦ ೦೦೫



# ದಾರಿ ತಪ್ಪಿತು ಕಡಲು



ಕಡಲು ಉಕ್ಕಿ
ಜೀವ ನೆಕ್ಕಿ
ಬದುಕು ಖಾಲಿ ಖಾಲಿ

ಹೊಸ ವರುಷ
ಹೊಸ ಹರುಷ
ಕರಾಳ ಮೌನ ರಾಗ

ಶೋಕ ತುಂಬಿ
ಬದುಕು ಬಂಜೆ
ಕುರುಡು ಕಡಲ ಪಂಜ

ಕಡಲು ಹಮ್ಮು
ಭೂಮಿ ಬಿಮ್ಮು
ಹಸಿವು ನೋವು ಪರಿಸೆ

ಮಸಣಕವರು
ಅನಾಥರಿವರು
ದುಗುಡ ದುಃಖ ಸಾಗರ

ಅಲೆಯ ಮೇಲೆ ಅಲೆ
ಅಲೆಯ ಕೆಳಗೆ ಕೊಲೆ
ದಾರಿ ತಪ್ಪಿತು ಕಡಲು

ಜಾತಿ ಮತ
ಮೇಲು ಕೀಳು
ಸಾವಗುಂಡಿ ಹೆಣಗಳು

ಸುನಾಮಿ ಸುನಾಮಿ
ಸಾವಿನರಮನಿ
ಧಟ್ಟನೆರಗಿದ ಬೆನಾಮಿ




ಇಂದುಶ್ರೀ ಆರ್.
೪೧, ಟೈಪ್ ೩, ಸಿ.ಪಿ.ಆರ್.ಐ. ಕಾಲೋನಿ
ಹೊಸ ಬಿ.ಇ.ಎಲ್. ರಸ್ತೆ, ಬೆಂಗಳೂರು - ೫೬೦ ೦೯೪










"ಪ್ರಕೃತಿಯಿಂದ ಮನುಷ್ಯ ಕ್ರೌರ್ಯವನ್ನೆಂದೂ ಕಲಿಯುವುದಿಲ್ಲ"ವೆಂದು ಒಬ್ಬ ಆಂಗ್ಲ ಕವಿ ಬರೆದಿದ್ದಾನೆ. ಡಿಸೆಂಬರ್ ೨೬ರಂದು ಬೆಳಿಗ್ಗೆ ಸಮುದ್ರವು ಅತ್ಯಂತ ಕ್ರೂರವಾಗಿ ವರ್ತಿಸಿದ್ದನ್ನು ನೆನೆದರೆ ಪ್ರಕೃತಿಯ ವಿಸ್ಮಯವು ಗಾಢವಾಗಿ ತಟ್ಟುವಂತೆ ಅದರ ರೌದ್ರ ನರ್ತನವೂ ನಮ್ಮನ್ನು ಅಲ್ಲಾಡಿಸಿಬಿಟ್ಟಿದೆ. ಎಂದಾದರೂ ಈ ಮಹಾನ್ ವಿಶ್ವದ ಎಲ್ಲ ಕೌತುಕಗಳನ್ನೂ ಯಾರಾದರೂ ಅರ್ಥಮಾಡಿಕೊಳ್ಳಲು ಸಾಧ್ಯವೇ! ಒಂದು ಕಡೆ ಮಾನವ ನಿರ್ಮಿತ ಧ್ವಂಸಾಕೃತ್ಯಗಳು : ಇರಾಕ್, ಪ್ಯಾಲಿಸ್ಟೈನ್, ಸೂಡಾನ್, ಕಾಂಗೊ, ಕಾಶ್ಮೀರ, ಈಶಾನ್ಯ ಭಾರತ ಇತ್ಯಾದಿ ನೂರಾರು ಕಡೆಗಳಲ್ಲಿ; ಇನ್ನೊಂದೆಡೆ, ಸಮುದ್ರದ ಅಲೆಗಳ ಹೊಡೆತದಿಂದ ಹತ್ತಾರು ದೇಶಗಳಲ್ಲಿ ಕಂಗಾಲಾಗಿರುವ ಮಾನವ, ಸಹಸ್ರಸಂಖ್ಯೆಯಲ್ಲಿ ಪ್ರಾಣ ಕಳೆದುಕೊಂಡ ಅಶಕ್ತ ಮಾನವ. ತೆಂಗಿನಮರದೆತ್ತರದ ಅಲೆಗಳೆಂದು ಉತ್ಪ್ರೇಕ್ಷೆಯನ್ನು ಕಾವ್ಯದಲ್ಲಿ ಮಿನುಗಿಸಿದ ಮಾನವ ನಿಜಕ್ಕೂ ಏರಿಬಂದ ಅಂತಹ ಅಲೆಗಳಲ್ಲಿ ಕೊಚ್ಚಿಕೊಂಡುಹೋಗಿದ್ದಾನೆ. ವರ್ಣನೆಗೆ ಮತ್ತು ಭಾವನೆಗೆ ಅಸದಳವಾದ ಭಾರಿ ಆಘಾತವೊಂದನ್ನು ನೀಡಿ ಪ್ರಕೃತಿ ನಮಗೆ ನಾವೆಷ್ಟು ಚಿಕ್ಕವರು, ಅಸಹಾಯಕರು ಎಂಬುದನ್ನು ತೋರಿಸಿಕೊಟ್ಟಿದೆ. ನಂದಿಹೋದ ಜೀವಗಳ ಬಗ್ಗೆ ಯಾವ ಕನಿಕರದ ಮಾತುಗಳೂ ಕೇವಲ ಮಾತುಗಳೇನೋ ಎನಿಸುವಷ್ಟು ಅಗಾಧವಾದ ಹೊಡೆತ ಬಿದ್ದಿದೆ. ಇಡೀ ಮನುಕುಲದೊಂದಿಗೆ 'ಹೊಸತು' ಸಹ ತನ್ನ ಸಂತಾಪವನ್ನು ವ್ಯಕ್ತಪಡಿಸುತ್ತದೆ.

"ಋತಂ ಸಿಂಧವೋ ವರುಣಸ್ಯ ಯಂತಿ" ಎಂಬುದು ಋಗ್ವೇದದ ಒಂದು ಮಂತ್ರದಲ್ಲಿ ಬರುವ ಮಾತು. ವಿಶ್ವದ ಅನುಲ್ಲಂಘನೀಯ ನಿಯಮಗಳನ್ನು 'ಋತ' ಎಂಬ ಪರಿಕಲ್ಪನೆಯು ತನ್ನ ಕಕ್ಷೆಯಲ್ಲಿ ಹೊಂದಿದೆ. "ಋತಂ ಪರಮೇಷ್ಠೀ, ಋತಂ ನಾತ್ಯೇತಿ ಕಿಂಚನ" ಎಂಬ ಮಾತುಗಳಲ್ಲಿ ಇದನ್ನು ಸೂಚಿಸಲಾಗಿದೆ. ಪ್ರಕೃತಿಯಲ್ಲಿ ಚಲನೆ ಇದೆ, ಆದರೆ ಅದು ಯಾದೃಚ್ಛಿಕವಲ್ಲ. ಅದರ ನಡೆಯನ್ನು ಮಾನವ ಪೂರ್ಣವಾಗಿ ಗ್ರಹಿಸಿಲ್ಲ; ಪೂರ್ಣ ಪ್ರಮಾಣದಲ್ಲಿ ಬಹುಶಃ ಗ್ರಹಿಸಲೂ ಆರ. ಅವನೆಷ್ಟು ಗ್ರಹಿಸುತ್ತಾನೋ ಅಷ್ಟಕ್ಕೆ ಸೀಮಿತವಾದದ್ದು ಅವನ ಸ್ವಾತಂತ್ರ್ಯ. ಭೂಕಂಪದಿಂದುಂಟಾದ ಸಮುದ್ರದ ಮಹಾನ್ ಅಲೆಗಳು ಭೂಮಿಯನ್ನು ಅಪ್ಪಳಿಸಿದಾಗ ಎಷ್ಟೋ ಜನ ಸಮುದ್ರದೊಳಕ್ಕೆ ಹೋಗಿಬಿಟ್ಟರು ಮತ್ತು ಇನ್ನಷ್ಟು ಜನ ಭೂಮಿಯ ಮೇಲೆಯೇ ಅಸು ನೀಗಿದರು. ಎಲ್ಲೋ ಒಬ್ಬ ಹುಡುಗನನ್ನು ಅಲೆಯು ಬಹುಮಹಡಿ ಕಟ್ಟಡದ ಮೇಲಕ್ಕೆ ಎತ್ತೆಸೆಯಿತಂತೆ; ಅವನು ಜೀವಂತವಾಗಿದ್ದಾನೆ. ಆ ಭಾಗ್ಯ ಬಾಕಿ ಸಾವಿರಾರು ಮಂದಿಗೆ ಲಭಿಸಲಿಲ್ಲ. ಜೀವಂತವಾಗಿ ಉಳಿಯುವ ಸ್ವಾತಂತ್ರ್ಯವನ್ನವರು ಕಳೆದುಕೊಂಡುಬಿಟ್ಟರು. ಇಂತಹ ವೇಳೆಯಲ್ಲಿಯೇ ಭೂಕಂಪ ಸಂಭವಿಸುತ್ತದೆಂಬ ಜ್ಞಾನವನ್ನು ಮಾನವ ಪಡೆದಾಗ ಅದರ ಭೀಕರತೆಯ ಮಟ್ಟ ಸ್ವಲ್ಪ ಕಡಿಮೆಯಾಗಬಹುದು. ಜ್ಞಾನವನ್ನು ಪಡೆದಾಗ ಕೂಡ ಜೀವಗಳನ್ನು ರಕ್ಷಿಸಲು ಬೇಕಾದ ಸಾಮಾಜಿಕ ಸಂರಚನೆಯ ಅಗತ್ಯವಿರುತ್ತದೆ. ಈಗ ಬದುಕುಳಿದಿರುವ ಸಂತ್ರಸ್ತರಿಗೆ ನಮ್ಮ ಸಂರಚನೆ ಎಂತಹ ಬೆಂಬಲ ನೀಡುತ್ತದೆಂಬುದಷ್ಟೇ ಪ್ರಮುಖವಾದ ಪ್ರಶ್ನೆ. 'ಹೊಸತು' ಮತ್ತು 'ನವಕರ್ನಾಟಕ ಪ್ರಕಾಶನ' ಇದರಲ್ಲಿ ತಮ್ಮ ಪಾತ್ರವನ್ನು ಕೈಲಾದಷ್ಟು ಮಟ್ಟಿಗೆ ನಿರ್ವಹಿಸುತ್ತವೆಂಬ ಭರವಸೆ ಇದೆ.

ಪ್ರಾಚೀನ ಪರ್ಷಿಯಾದಲ್ಲಿ ಮತ್ತು ಏಷ್ಯದ ಇತರ ಭಾಗಗಳಲ್ಲಿ ಸದಾ ಇರುತ್ತಿದ್ದ ಯುದ್ಧದ ಬಿಗುವನ್ನು ಕಂಡು ಒಬ್ಬ ತತ್ತ್ವಜ್ಞಾನಿ ನುಡಿದಿದ್ದನಂತೆ : "ಅಯ್ಯಾ ಜನರೇ, ಆಕಾಶದತ್ತ ನೋಡಿ ಏನನ್ನೂ ಕಲಿಯುವುದಿಲ್ಲವೇಕೆ ? ಅದೆಷ್ಟು ಗ್ರಹಗಳು, ನಕ್ಷತ್ರಗಳು ಅಲ್ಲಿ ಪರಸ್ಪರ ವಿನಾಶಕ್ಕೆ ಹಾತೊರೆಯದೆ ಜೀವಿಸುತ್ತಿವೆ, ನೀವೇಕೆ ಹಾಗೆ ಮಾಡಲೊಲ್ಲಿರಿ ?" ಗ್ರಹಗಳೂ ಡಿಕ್ಕಿ ಹೊಡೆಯುವ ಪದ್ಧತಿ ಇದೆಯೇನೋ! ಭೂಮಿಯಂತೂ ಮಾನವನನ್ನು ನಡುಗಿಸುತ್ತದೆ. ನಡುಗಿದ್ದಾದ ಮೇಲೆ ನಾವೆಲ್ಲಾ "ಆ ಪ್ಲೇಟ್‌ಗೆ ಅಂತರಾಳದಲ್ಲಿ ಹೀಗಾಯಿತು, ಅದು ಇನ್ನೊಂದರ ಮೇಲಕ್ಕೆ ಚಲಿಸಿತು" ಎಂದು ಹಲವು ವಿವರಣೆಗಳನ್ನು ನೀಡಿ ನಾಳೆಗಳನ್ನು ಇನ್ನು ಸ್ವಲ್ಪ ಕ್ಷೇಮಕರವಾಗಿ ಮಾಡಲು ಯತ್ನಿಸುತ್ತಿದ್ದೇವೆ. ಆಕಾಶಕಾಯಗಳನ್ನು ನೋಡಿದ್ದಾರೆನ್ನಲಾದ ಜ್ಯೋತಿಷಿಗಳು ಬಹುಶಃ ಭೂಮಿಯ ಅಂತರಾಳವನ್ನು ಬಗೆದು ನೋಡಲಾರರು. ಅದಕ್ಕೇ ಅವರು ವರ್ಷಫಲವನ್ನು ಹೇಳುವಾಗ ಇಂತಹ ಭೀಕರ ಅನಾಹುತದ ಬಗ್ಗೆ ಸಾಸಿವೆ ಕಾಳಿನ ಪ್ರಮಾಣದಷ್ಟು ಜ್ಞಾನವನ್ನೂ ನೀಡಲು ಅಸಮರ್ಥರಾದರು. ಅಷ್ಟಾಗಿಯೂ ಜ್ಯೋತಿಷ್ಯದ ಬಗ್ಗೆ ಮೌಢ್ಯವನ್ನು ಬೆಳೆಸಿಕೊಳ್ಳುವ ಮನುಷ್ಯರ ಬಗ್ಗೆ ಏನೆನ್ನಬೇಕು ! ಸಾವಿರಾರು ಜನ ನಷ್ಟವಾದ ಮೇಲೆ ಅವರೂ ಗ್ರಹಗತಿಗಳನ್ನು ಗುಣಿಸಿ ಏನೋ ಸಮಜಾಯಿಷಿ ಹೇಳುತ್ತಾ ಒಂದಷ್ಟು ವ್ರತಗಳನ್ನೋ ಯಜ್ಞಗಳನ್ನೋ ಮಾಡಿಸಲು ಮುಂದಾಗಬಹುದು.

ಏನೇ ಆದರೂ ಅದ್ಭುತವಾದ ಪ್ರಕೃತಿಯು ನಮಗೆ ವಿಪುಲವಾದ ರತ್ನಗಳನ್ನು ನೀಡುವ ವಸುಂಧರೆಯನ್ನು ಕರುಣಿಸಿದೆ, ಆದರೆ ಅದರ ಇನ್ನೊಂದು ಕರಾಳದ ಮುಖವಿದೆ. ಅದರ ಮುಂದೆ ನಾವು ಕೇವಲ ನಿಸ್ಸಹಾಯಕರು.

ಅದೊಂದು ರಾತ್ರಿ. ನಮ್ಮೂರು ಸಾಗರದ ಹೋಟೆಲ ಒಂದರಲ್ಲಿ, ಕನ್ನಡದ ಪ್ರಸಿದ್ಧ ಟಿ. ವಿ. ಕಲಾವಿದ ಎಚ್.ಜಿ. ಸೋಮಶೇಖರ ಅವರನ್ನು ಕಾಣಬೇಕೆಂದು ಹೋಗಿದ್ದೆ. ಅವರ ಜೊತೆಯಲ್ಲಿ ಇನ್ನೊಂದು "ವ್ಯಕ್ತಿ" ಕೂತಿತ್ತು. ನಮ್ಮ ಅವಾಂತರದಲ್ಲೋ ಅಥವಾ ಸೋಮಣ್ಣನ ಗಡಿಬಿಡಿಯಲ್ಲೋ ಆ ವ್ಯಕ್ತಿಯ ಪರಿಚಯ ನನ್ನನ್ನು ಸರಿಯಾಗಿ 'ತಟ್ಟಲೇ' ಇಲ್ಲ! ಹಾಗೇ ರಾತ್ರಿ ಬೆಳೆಯುತ್ತಾ ಹೋದಂತೆ... ಮಾತುಗಳು ನಿಕಟವಾಗುತ್ತಾ.... ಮಾತುಗಳ ಲಯ ಬದಲಾಗಿ ಹಾಡುಗಳಾಗುತ್ತಾ... ಹಾಡುಗಳು ವರ್ತಮಾನವನ್ನು ಕಳಚಿಕೊಂಡು... ಕಾಲದ ಪದರಪದರ ತೆರೆದುಕೊಂಡು ಹಿಂದಕ್ಕೆ ಜಾರುತ್ತಾ... ಜಾರುತ್ತಾ... ನನ್ನ ಅತ್ಯಂತ ಖಾಸಗಿಯಾದ ಆತ್ಮೀಯವಾದ ಹಾಡೊಂದರ 'ಗುನುಗು' ಎದೆಯ ಕದ ತಟ್ಟಲು ಶುರುವಿಟ್ಟಿತು. ಕನಸುಗಳಲ್ಲಿ ಕಾಣುವ ನೂರಾರು ಬಾಗಿಲ ಫ್ರೇಮುಗಳು!... ಒಂದರೊಳಗೊಂದೊಂದು ಫ್ರೇಮುಗಳಲ್ಲಿ 'ಈ ಗುನುಗಿ'ನ ಬೆನ್ನುಹತ್ತಿ ಹೊರಟಿದ್ದಾಯ್ತು! ಛೇ.. ಎಂಥಾ ಇನಿದನಿ... ತೆರೆದ ಬಾಗಿಲ ಫ್ರೇಮುಗಳಲ್ಲಿ... ಹೀಗೊಮ್ಮೆ ಹಾಗೊಮ್ಮೆ! ಒಮ್ಮೆ ಹೊರಗೆ.. ಒಮ್ಮೆ ಒಳಗೆ.. ನಿರಂತರ ಹುಡುಕಾಟಕ್ಕಿಟ್ಟುಕೊಂಡಿತು ಮನ. ...ಇನಿದನಿ! ...ವರ್ಷಾಂತರಗಳ ನವಿರು ನೆನಪು! ...ರೇಷ್ಮೆ ಪಲುಕು! ...ಆ ಹಾಡು ಹೊಟೇಲಿನ ಪುಟ್ಟ ರೂಮಿನೊಳಗೆ... ನನ್ನ ಎದುರಿನಿಂದಲೇ ಬರುತ್ತಿದ್ದರೂ ಪತ್ತೆಯಾಗಲು ಬಾಗಿಲ ಫ್ರೇಮುಗಳಲ್ಲಿ ನುಸುಳಿ ನುಸುಳಿ... ೩೫ ವರ್ಷಗಳು ಜಾಲಾಡಿ, ನನ್ನೊಳಗಿನದೆಲ್ಲವ ಸೋಸಿ ತೆಗೆಯಬೇಕಾಯ್ತು! ಅರೆಗಳಿಗೆಯಲ್ಲಿ ಮೈಮನವನೆಲ್ಲ ಮುತ್ತಿಕೊಂಡು ತೇಲಿಸಿದ ಕಲಾವತಿ ರಾಗದ ಆಲಾಪಕ್ಕೆ ಬೆಚ್ಚಿ ಬೆರಗಾದೆ!

*"ಮನವೇ ಮಂದಿರ ನ್ಯಾಯ ದೇಗುಲ*
*ಚೆಲುವೇ ದೇವರು ಒಲವೇ ದೀವಿಗೆ.."*

ಎದುರಿಗಿದ್ದ ಆ ಡೀಸಲ್ ಡ್ರಮ್ಮೇ ಹಾಡುತ್ತಾ ಇದ್ದಿದ್ದು! No doubt... ಯಾರಪ್ಪ ಈ ಮಹಾಶಯ?... ಪಿ.ಬಿ. ಶ್ರೀನಿವಾಸಂತೂ ಅಲ್ಲ, ತೂಗುದೀಪ ಶ್ರೀನಿವಾಸ ಆಗಕ್ಕೂ ಸಾಧ್ಯವಿಲ್ಲ! ಛೇ ಛೇ 'ಪರಿಚಯ' ಸರಿಯಾಗಿ ಆಗದೇ ತುಂಬ ಪೇಚಾಟವಾಯ್ತು.

"ಸ್ವಾಮಿ... ಈ ಹಾಡು ತೂಗುದೀಪದ್ದು, ನಾನೆಂದೆ. "ಹೌದು". ಆ ವ್ಯಕ್ತಿ ನುಡಿಯಿತು. "ಆ ಚಿತ್ರ ತೆಗೆದವನು ನಾನು ಸ್ವಾಮಿ. KSL ಸ್ವಾಮಿ ಅಂತ ನನ್ನ ಹೆಸರು. ರವೀ ಅಂತ ಕೂಡ ಕರೀತಾರೆ!"

ಈ 'ಪರಿ'ಯ ಪರಿಚಯಕ್ಕೆ ಏನನ್ನಬೇಕು? ಯಾ ಈ 'ಪರಿಚಯ'ದ 'ಪರಿ'ಯನ್ನ ಹೇಗೆ ಬಣ್ಣಿಸಬೇಕು?

ಆ ವ್ಯಕ್ತಿ ಕನ್ನಡ ಚಿತ್ರ ಪ್ರಪಂಚದ Avant Garde ನಿರ್ದೇಶಕ KSL ಸ್ವಾಮಿ ಯಾನೇ ರವೀ ಯಾನೇ 'ಮೂಡಲ ಮನೆಯ' ಅಜ್ಜ ದೇಶಮುಖ! ೧೯೮೬ರಲ್ಲಿ 'ಮಲಯ ಮಾರುತ'ಕ್ಕೆ ಸುರಸಿಂಗರ್ 'ಸಂಸದ' ಪ್ರಶಸ್ತಿ, ೧೯೯೦ರಲ್ಲಿ 'ಜಂಬೂಸವಾರಿ' ಚಿತ್ರಕ್ಕೆ ಸ್ವರ್ಣಕಮಲ, ೧೯೯೩ರಲ್ಲಿ 'ಹರಕೆಯ ಕುರಿ' ಚಿತ್ರಕ್ಕೆ ರಜತಕಮಲ, ೧೯೭೫ರಲ್ಲಿ ಉತ್ತಮ ಹಿನ್ನೆಲೆ ಗಾಯಕ ಪ್ರಶಸ್ತಿ ಮುಂತಾದ ಪ್ರಶಸ್ತಿಗಳ ಮಾಲೆ ಹಾಕಿಕೊಂಡು ಮೊನ್ನೆ ಮೊನ್ನೆ ೨೦೦೪ರಲ್ಲಿ ಕನ್ನಡ ರಾಜ್ಯೋತ್ಸವ ಪ್ರಶಸ್ತಿಯನ್ನೂ ಬಾಚಿಕೊಂಡ ಕನ್ನಡದ ಹೆಮ್ಮೆಯ ನಿರ್ದೇಶಕ-ನಿರ್ಮಾಪಕ ರವೀ.

ಅದೇ ಥರದ ಇನ್ನೊಂದು ನೀಳ ರಾತ್ರಿ. ಸಾಗರದ ಮಿತ್ರ ಕಿಟ್ಟಣ್ಣನ ತೋಟದಲ್ಲಿ ಕಳೆದದ್ದು. ಅಂದು ರಾತ್ರಿಯಿಡೀ ರವಿ ಹಾಡುತ್ತಿದ್ದರು. He is a fine singer! Campfireನ ಕಿಡಿಗಳು ಆಕಾಶದ ಚುಕ್ಕೆಗಳೊಂದಿಗೆ ಚಿನ್ನಾಟವಾಡುತ್ತಿದ್ದವು. ರವಿಯ ಕನ್ನಡ ಗಜ಼ಲ್‌ಗಳಿಗೆ ಇಳೆಗಿಳಿಯುತ್ತಿದ್ದ ಇಬ್ಬನಿ ಮೆತ್ತಿಕೊಳ್ಳುತ್ತಿತ್ತು. ಇಬ್ಬನಿ ಮುತ್ತಿಟ್ಟ ಹಾಡುಗಳು ಸುತ್ತಲಿನ ಗಿಡಮರ ಹೊಳೆ ಆಗಸವನ್ನೆಲ್ಲ ಸುತ್ತೀ ಸುತ್ತೀ ಸುಸ್ತಾಗಿ ಕಿಟ್ಟಣ್ಣನ ತೋಟದ ಹುಲ್ಲುಹಾಸಿನ ಮೇಲೆ ಅಂಗಾತ ಬಿದ್ದುಕೊಳ್ಳುತ್ತಿದ್ದವು! ನನ್ನ ಪರಿಸ್ಥಿತಿ –

"Now more than ever seems it rich do die
To cease upon the midnight with no pain."

ರವಿ ಕನ್ನಡ ಚಿತ್ರರಂಗದ ಭೀಷ್ಮ ಜಿ.ವಿ. ಅಯ್ಯರ್ ಅವರ ಶಿಷ್ಯ. ಸಿನಿಮಾ ಪರಿಭಾಷೆಯಲ್ಲಿ ಸಹನಿರ್ದೇಶಕ. ಪುಟ್ಟಣ್ಣ, ಲಕ್ಷ್ಮೀನಾರಾಯಣ್ ಮುಂತಾದವರ ಸಮಕಾಲೀನ. ಐದು ದಶಕಗಳ ಕಾಲ ಕನ್ನಡ ಚಿತ್ರರಂಗದ ಜೊತೆಗೆ ಬೆಸೆದುಕೊಂಡಿರುವ ಜೀವ. ಕನ್ನಡ ಚಿತ್ರರಂಗದ ಅತಿರಥ ಮಹಾರಥರನ್ನೆಲ್ಲ ಅತ್ಯಂತ ಸೂಕ್ಷ್ಮವಾಗಿ ಬಲ್ಲ ದಾಖಲೆಗಳ ವ್ಯಕ್ತಿರೂಪ!

# 'ಮೂಡಲಮನೆಯ... ವಾಡೆಯ ಅಜ್ಜನ.... ಎರಕಕವಾ ಹೊಯ್ದ್ಯಾ...?'

## ಕಿರುತೆರೆಯ ಹಿರಿಯ ನಟ ಶ್ರೀ ರವೀ ಅವರೊಂದಿಗೆ ಮಾತು-ಕತೆ

ಸಂದರ್ಶಕರು : ವಿಜಯವಾಮನ

'ಹೊಸತು'ಗಾಗಿ ಕಳೆದ ಬಾರಿ ಹಿಂದಿ ಚಿತ್ರರಂಗದ ಧೀಮಂತ ವ್ಯಕ್ತಿ ಮನ್ನಾ ಡೇಯವರ ಜೊತೆಗಿನ ಮಾತುಕತೆ ನಡೆಸಿದ್ದ ನಾನು ಈ ಬಾರಿ ರವಿಯನ್ನು ಮಾತನಾಡಿಸಲು ಅವರ ಮನೆಗೇ ಹೋದೆ. ಸಿನಿಮಾ ರಂಗದ ಯಾವ ಅಬ್ಬರ, ಬಡಿವಾರಗಳೂ ಇಲ್ಲದ ಬ್ರಾಹ್ಮಣ ಮಧ್ಯಮ ವರ್ಗದವರ ಮನೆ ಅದು. ಬೇರೆ ಯಾರದೋ ಜೊತೆಯಲ್ಲಿ ಮಾತನಾಡುತ್ತಾ ಇದ್ದ ಅವರನ್ನು ಮೌನವಾಗಿ ಗಮನಿಸುತ್ತಾ ಕುಳಿತೆ. ಸಡನ್ನಾಗಿ ನೋಡಿದರೆ ಬಂಧನದಲ್ಲಿರುವ ಸದ್ದಾಂ ಹುಸೇನನಂತೆ ಕಾಣುವ ಈತ ಸಂಸ್ಕೃತ ಶ್ಲೋಕಗಳನ್ನು ಉದುರಿಸಲು ಶುರು ಮಾಡಿದರೆ ನಗಬೇಕೋ ಅಳಬೇಕೋ ತಿಳಿಯುವುದಿಲ್ಲ. ರವೀ ಮಹಾ ಮಾತಿನ ಮಲ್ಲ! ಇದು ಸಂದರ್ಶನವಾಗಲೇ ಇಲ್ಲ, ಬದಲಿಗೆ ೬೦ರ ದಶಕದಿಂದ ಇಂದಿನವರೆಗಿನ ಕನ್ನಡ ಚಿತ್ರಪ್ರಪಂಚದ ದರ್ಶನವಾಯ್ತು. ಅದ್ಭುತ ಆಖ್ಯಾನಂ!



ವಿಜಯ ವಾಮನ : ಕನ್ನಡದ ರಾಜ್ಯೋತ್ಸವ ಪ್ರಶಸ್ತಿಗೆ ಅಭಿನಂದನೆಗಳು ಸಾರ್. How do you feel ? ತಡವಾಗಿ ಗುರ್ತಿಸಿದ್ದಾರೆ ಅಂತ ಅನ್ನಿಸುತ್ತಾ? ಇದೇ ರೀತಿಯ ಹೆಮ್ಮೆಯ ಗಳಿಗೆಗಳ ಬಗ್ಗೆ ಸ್ವಲ್ಪ ಹೇಳಬಹುದಾ ?

ರವಿ : ತುಂಬ Thanks. ಪ್ರಶಸ್ತಿ ಬಂದಿದ್ದು ತುಂಬ ಸಂತೋಷವಾಗಿದೆ. ಈ ಸಲ ಪ್ರಶಸ್ತಿ ಪಟ್ಟಿ ತುಂಬ ಗೊಂದಲಮಯವಾಗಿದ್ದು, ಯಾರ್‍ಯಾರೋ ಏನೇನೋ ಬಾಯಿಗೆ ಬಂದ ಹಾಗೆ ಮಾತಾಡಿಕೊಳ್ತಾ ಇದ್ದರು. ಇರಲಿ. ಏನೇ ನಡೆದರೂ ಇಂಥಾದ್ದು ಏನಾದ್ರೂ ಒಂದು ಇದ್ದೇ ಇರುತ್ತೆ. ಎಲ್ಲರನ್ನೂ ಎಲ್ಲ ಕಾಲಕ್ಕೂ ಸಂತೋಷಪಡಿಸಕ್ಕೆ ಆಗಲ್ಲವಲ್ಲ! ಗುರ್ತಿಸಿದ್ದು ತಡವಾಯ್ತಾ ಅಂತ ಕೇಳ್ತೀರಿ. ಎಲ್ಲದಕ್ಕೂ ಯೋಗ ಬೇಕೂ ಅಂತ ಹೇಳೋನು ನಾನು. ಅದೃಷ್ಟ ಬೇಕೂಂತ ಹೇಳೋನು ನಾನು. ಆದರೆ ಕನ್ನಡದ ಪ್ರಶಸ್ತಿ ನನಗೆ ದಕ್ಕಿದೆ. ಅದೇ ಸಂತೋಷ.

ವಿ.ವಾ. : ಇದೇ ರೀತಿಯ ಹೆಮ್ಮೆಯ ಗಳಿಗೆಗಳು...

ರವಿ : ಹೆಮ್ಮೆಯ ಗಳಿಗೆಗಳು ಬೇಕಾದಷ್ಟಿವೆ. 'ಸ್ವರ್ಣಕಮಲ', 'ರಜತಕಮಲ', ಉತ್ತಮ ಹಿನ್ನೆಲೆಗಾಯಕ ಪ್ರಶಸ್ತಿ ಇತ್ಯಾದಿ. ಆದರೆ ಅವೆಲ್ಲಕ್ಕಿಂತ ಮುಖ್ಯವಾಗಿ... ನನ್ನ ಕಾಲೇಜು ದಿನಗಳಲ್ಲಿ ನಡೆದ ಒಂದು ಘಟನೆ. ನಾನು ಆವಾಗ ತುಂಬ ಚೆನ್ನಾಗಿ ಹಾಡ್ತಾ ಇದ್ದೋನು. ಹಾಡುಗಾರನಾಗಬೇಕು ಅಂತಾನೇ ತುಂಬ ಆಸೆ ಇತ್ತು ನನಗೆ. ಆದರೆ ನಮ್ಮದು ತುಂಬ ಮಡಿವಂತ ಬ್ರಾಹ್ಮಣರ ಕುಟುಂಬ.... ಮನೆ ತುಂಬ ಮಕ್ಕಳು... ಬಡತನ. ಅಪ್ಪ ಪೌರೋಹಿತ್ಯ ಮಾಡ್ತಾ ಇದ್ದವರು. ಕರ್ಮಠ ಬ್ರಾಹ್ಮಣ. ನಾಟ್ಕ, ಸಿನೆಮಾ, ಹಾಡೂ ಇತ್ಯಾದಿ ಯಾವದೂ ಹಿಡಿಸದವರು. ಆಗೊಮ್ಮೆ ನನಗೆ ಮೈಸೂರು ಆಕಾಶವಾಣೀಲಿ ಭಾರತ ವಾಚನಕ್ಕೆ ಛಾನ್ಸು ಸಿಕ್ಕಿ, ಐದು ರೂಪಾಯಿ ಸಂಭಾವನೇನೂ ಸಿಕ್ತು. ನಾನು ಅದನ್ನ ತುಂಬ ಶ್ರದ್ಧೆಯಿಂದ ನಮ್ಮ ತಂದೆಯವರಿಗೆ ಒಯ್ದು ಕೊಟ್ಟೆ ಅವರು ಆವಾಗೇನೂ ಮಾತಾಡಲಿಲ್ಲ! ಮಾರನೇ ದಿನಾನೇ ನನ್ನ ಕರೆದು "ನಾಳೆ ನಿನ್ನ ಗೆಳೆಯರನ್ನೆಲ್ಲ ಕರಕೊಂಡು ಬಾರಯ್ಯ ಸ್ವಲ್ಪ ಮಾತಾಡೋದು ಇದೆ" ಅಂದ್ರು. ನನ್ನ ಸ್ನೇಹಿತರೆಲ್ಲ ಮನೆಗೆ ಬಂದಿದ್ದಾಗ, ನಮ್ಮ ತಂದೆ, ಅವರೆಲ್ಲರ ಸಮ್ಮುಖದಲ್ಲಿ ಕುಮಾರವ್ಯಾಸ ಭಾರತದ ಕಾಪಿಯೊಂದನ್ನ ಕೊಟ್ಟರು. ಹನುಮಂತಯ್ಯೋರ ಕಾಲ, ಎರಡು ರೂಪಾಯಿಗೆ ಕುಮಾರವ್ಯಾಸ ಭಾರತ! ನಾನು ಕೊಟ್ಟ ಐದು ರೂಪಾಯಿನಲ್ಲಿ ಎರಡು ರೂಪಾಯಿ ಪುಸ್ತಕ, ಮಿಕ್ಕಿದ್ರಲ್ಲಿ ಅಮ್ಮನಿಗೆ ಹೇಳಿ ಸ್ವಲ್ಪ ಸಜ್ಜಿಗೆ ಮಾಡಿಸಿ ಗೆಳೆಯರಿಗೆಲ್ಲ ಪಾರ್ಟಿ! ಹೇಗಿದೆ ? ಇದು ನನಗೆ ಸಿಕ್ಕ ಮೊದಲ ಸನ್ಮಾನ! ಮೊದಲ ಪ್ರಶಸ್ತಿ!! ಆಮೇಲೆ ನನ್ನ ಕೈಲಿ ಭಾರತ ವಾಚನವೂ ಆಯ್ತು!

ಇನ್ನೊಂದು ಘಟನೆ. ಮೈಸೂರಿನ ಒಪೇರಾ ಟಾಕೀಸ್‌ನಲ್ಲಿ ನಡೆದದ್ದು. ಘಂಟಸಾಲ ಬಂದಿದ್ರು. ಘಂಟಸಾಲ ನನ್ನ ಬಹಳ ದೊಡ್ಡ ಆದರ್ಶ. ಅವರ ಎಲ್ಲ ಹಾಡುಗಳನ್ನೂ ಹೇಳ್ತೋವೆ. ಪರಿಚಯ ಆದಮೇಲೆ 'ಏಂ ಬಾಬೂ... ಏಂ ಮಾಡ್ಕೊಂಡಿದೀಯಾ ?' ಅಂತ ಕೇಳಿದ್ರು. ನಾನಂದೆ, "ಏನೂ ಇಲ್ಲ, ಅಲ್ಲಿ ಇಲ್ಲಿ Assistant ಆಗಿ ಕೆಲಸ ಮಾಡ್ತಾ ಇದೀನಿ. ನಾನು ನಿಮ್ಮ ಎದುರಿಗೆ ನಿಮ್ಮದೇ ಒಂದು ಹಾಡು ಹೇಳ್ತೀನಿ, ಕೇಳ್ತೀರಾ ?" 'ತಾಯಿ ತಂದೆಯ ಸೇವೆಯಾ ಯೋಗ' ಅನ್ನೋ ಹಾಡನ್ನ ಹೇಳ್ದೆ. ಘಂಟಸಾಲ ನನ್ನ ತಲೆ ಮೇಲೆ ಕೈ ಇಟ್ಟು ಆಶೀರ್ವಾದ ಮಾಡಿದ್ರು. ಯಾರಿಗೆ ಬಂದಿದೆ ಇಂಥಾ ಪ್ರಶಸ್ತಿ? ಲತಾ ಮಂಗೇಶ್ಕರ್ ಜೊತೇಲೂ ಇದೇ ಅನುಭವ ಆಗಿದೆ ನನಗೆ. ಹೆಳವನ ಕಟ್ಟೆ ಗಿರಿಯಮ್ಮ ಚಿತ್ರಕ್ಕಾಗಿ ಹೃದಯನಾಥ ಮಂಗೇಶ್ಕರ್ ಬಳಿ ಹೋಗಿದ್ದೆ. ಜೊತೇಲಿ ರಾಧಾನೂ ಬಂದಿದ್ದಳು. (ಬಿ.ವಿ.ರಾಧಾ, ಕನ್ನಡದ ಖ್ಯಾತ ತಾರೆ). ಪರಿಚಯವಾದ ನಂತರ ಇದ್ದಕ್ಕಿದ್ದಂತೆ ಲತಾ ಅವರು 'ಒಂದು ಹಾಡು ಹೇಳಿ ಕೇಳೋಣ' ಅಂತ ಮನವಿ ಮಾಡಿದರು. ಎಲ್ಲಿ ಲತಾ, ಎಲ್ಲಿ ರವೀ ? ಆ Queen of music ನನಗೆ ಹಾಡು ಹೇಳು ಅಂತ ಕೇಳ್ತಾ ಇದಾಳೆ! ಹಿಂದಿ ಅಥವಾ ಹಿಂದೂಸ್ತಾನಿ ಯಾವದೂ ಅವಳ ಮುಂದೆ ನಡೆಯಲ್ಲ! ಕೊನೆಗೆ ಬಿಲಹರಿ ರಾಗದಲ್ಲಿ ಪುರಂದರದಾಸರ ಪದವೊಂದನ್ನ ಹೇಳ್ದೆ. ಬಹಳ ಮೆಚ್ಚಿಕೊಂಡ್ರು. The Queen of music ಇಂದ ನನಗೆ ಶಭಾಷ್‌ಗಿರಿ ! What else do you want ?

ವಿ.ವಾ. : ಸರ್... ನಿಮ್ಮಂಥವರ ಹತ್ತಿರ ನನಗೆ ಯಾವಾಗಲೂ Rewind ಆಗಕ್ಕೆ ತುಂಬ ಇಷ್ಟ. ಅದು ಆಗಿನ ಕಾಲದ ಅಭಿರುಚಿ, ಮೌಲ್ಯಗಳು, ಜನಜೀವನ, ಅರ್ಥ ವ್ಯವಸ್ಥೆ, ಸಾಮಾಜಿಕ ಸ್ಥಿತಿಗತಿ ಇತ್ಯಾದಿಗಳ ಮೇಲೆ ಬೆಳಕು ಚೆಲ್ಲುತ್ತೆ. ಒಂದು ಪೀಳಿಗೆಯ ಬದುಕು ದಾಖಲಾಗುತ್ತೆ. ಭೂತ ವರ್ತಮಾನಗಳ ತುಲನೆಯಾಗತ್ತೆ. Let's rewind...

ರವಿ : ನಾವಿದ್ದಿದ್ದು ಮೈಸೂರಿನ ಲಷ್ಕರ್ ಮೊಹಲ್ಲದಲ್ಲಿ. ನಮ್ಮ ತಂದೆ ಕಡೆ ವೈದಿಕ ಪದ್ಧತಿಯವರು, ತಾಯಿ ಕಡೆಯವರು ಮೈಸೂರು ಅರಮನೇಲಿ ಕೆಲಸ ಮಾಡ್ತಾ ಇದ್ದವರು. ಹಳ್ಳಿ ಇಂದ ಪಟ್ಟಣಕ್ಕೆ ಬಂದವರು. ಇವರುಗಳಲ್ಲದೇ ನೂರಾರು ವಿದ್ವಾಂಸರು, ಕಲಾವಿದರು, ಪುಣ್ಯಾತ್ಮರುಗಳನ್ನು ನನ್ನ ಜೀವನದಲ್ಲಿ ಕಂಡಿದೀನಿ. ನಮ್ಮನೆ ಬೀದೀಲಿ ಮಂಡೀಪೇಟೆ ನರಹರಿ ಜೋಯಿಸರು ನನ್ನ ಮೇಲೆ ತುಂಬ ಪ್ರಭಾವ ಬೀರಿರುವ ವ್ಯಕ್ತಿ. ಇವರ ಮಗ ಪುಟ್ಟಣ್ಣ ನಮಗೆ ಹೆಡ್‌ಮಾಸ್ಟರ್ ಆಗಿದ್ದವರು. ನಮ್ಮ ಪಕ್ಕದ ಬೀದೀಲಿ ಮಿರ್ಲೆ ಸುಬ್ರಹ್ಮಣ್ಯ ಶಾಸ್ತ್ರಿಗಳು ಅಂತ ಇದ್ರು. ಭಾರತವಾಚನ ತುಂಬ ಚೆನ್ನಾಗಿ ಮಾಡ್ತಾ ಇದ್ರು. ಇವರೂ ನಂ ಮೇಷ್ಟ್ರು. ವೆಂಕಟಸುಬ್ಬಾ ಶಾಸ್ತ್ರಿ ಭಾರತಿ ಅಂತ ಇನ್ನೊಬ್ಬ ದೊಡ್ಡ ವ್ಯಕ್ತಿ. "ಆಶು ಕವಿರತ್ನ ಸರಸಕವಿ ವಾಗ್ಭೂಷಣ" ಅಂತ ಇವರಿಗೆ ಆ ಕಾಲದಲ್ಲಿ ಬಿರುದು ಇತ್ತು. ನನ್ನ ಮೊಟ್ಟಮೊದಲ ಸಾಹಿತ್ಯ ಸಂಗೀತದ ಗುರು ಅಂದ್ರೆ ಅವರೇನೆ. ಆ ಇಡೀ ಬೀದೀಲಿ ಮುದ್ದು ಮುದ್ದಾಗಿ, ಗುಂಡು ಗುಂಡಾಗಿ ಪುಟ್ಟ ರಾಜಕುಮಾರನ ಥರಾ ಆಡಿಕೊಂಡಿದ್ದವನು. ಕೇರಿಗೊಬ್ಬನೇ ಗಂಡು ಮಗು! ಭಾರತಿಗಳ ಮನೇಲಿ ಸಂಸ್ಕೃತ ಶ್ಲೋಕಗಳು, ಅಷ್ಟಕಗಳು, ರನ್ನನ ಗದಾಯುದ್ಧ ಇತ್ಯಾದಿ ಗಳನ್ನ ಕಲಿತೆ. ಇಂಥಾ ಒಬ್ಬ ಗುರು ಕಾರಣಾಂತರದಿಂದ ಬೆಳಕಿಗೆ ಬರಲೇ ಇಲ್ಲ. 'ಶಂಕರವಿಜಯ' ಬರೆದಿದ್ದಾರೆ ಚತುಷ್ಪದಿಯಲ್ಲಿ. ಆ ಪುಸ್ತಕವನ್ನು ಪ್ರಿಂಟ್ ಹಾಕಿಸ ಬೇಕೂಂತ ಆಸೆ ಇದೆ ನನಗೆ. 'ಕರ್ಣಾವಸಾನ' ಅಠಾಣ ರಾಗದಲ್ಲಿ ತುಂಬ ಚೆನ್ನಾಗಿ ಹೇಳಿಕೊಟ್ಟರು (ಹಾಡುತ್ತಾ...) "ಮನ್ಯೂದ್ಗತ ಕಂಠನುಂ ಧಾರಾಪೂರಿತ ಲೋಚನನುಂ ಆಗಿ"... "ವಿಯೋಗಂ ಎಂತಾದುದಯ್ಯಾ ಎನಗಂ ನಿನಗಂ ?" ಎಂಟನೇ ವಯಸ್ಸಿಗೇ ನನಗೆ ಉಪನಯನವಾಯ್ತು. ಅಶ್ವತ್ಥನಾರಾಯಣ ಶಾಸ್ತ್ರಿಗಳು ನನ್ನ ವೈದಿಕ-ಪೌರೋಹಿತ್ಯದ ಪಾಠಗಳನ್ನು ಹೇಳಿಕೊಟ್ಟೋರು. ನಮಗೆ ಸ್ಕೂಲು, ಮನೆ ಅಂತ ಭೇದವೇ ಇರ್ಲಿಲ್ಲ. ನಮ್ದು ಮೇಷ್ಟ್ರುಗಳದ್ದು ಸಂಬಂಧ ಹಾಗಿತ್ತು. ಈಗ ಅದನ್ನೆಲ್ಲ ಕಾಣಕ್ಕೆ ಕಷ್ಟ.

ವಿ.ವಾ. : ನೀವು ಹುಟ್ಟಿದ್ದು ೧೯೩೫ರಲ್ಲಿ. ನಿಮ್ಮ ಬಾಲ್ಯದಲ್ಲಿ ಶ್ಲೋಕ, ಸಾಹಿತ್ಯ, ಸಂಗೀತಗಳೇ ತುಂಬಿತ್ತಾ? ೧೯೪೮ರಲ್ಲಿ ಗಾಂಧಿ ಹತ್ಯೆ ಆಯ್ತಲ್ಲ... ನಿಮ್ಮ ಸ್ಕೂಲಿನಲ್ಲಿ ಆಗ ನೀವೆಲ್ಲ ಏನು ಮಾಡಿದಿರಿ ? ಏನಾದ್ರೂ ನೆನಪಿದೆಯಾ ನಿಮಗೆ ?

ರವಿ : ಗಾಂಧೀನ್ನ ನಾನು ನೋಡಿಲ್ಲ. ನಮ್ಮಪ್ಪ ಅವರನ್ನ ನೋಡಕ್ಕೆ ನನ್ನನ್ನೂ


ರವಿಯೊಂದಿಗೆ ಸಂದರ್ಶಕ ವಿಜಯವಾಮನ

ಕರದುಕೊಂಡು ಹೋಗಿದ್ರಂತೆ. ನನಗೆ ನೆನಪಿಲ್ಲ. ಗಾಂಧಿ... ಸ್ವಾತಂತ್ರ್ಯ... ಚಳುವಳಿ ಇತ್ಯಾದಿಗಳು ನಮ್ಮ ಮೈಸೂರಿಗೆ ಗೊತ್ತೇ ಇರ್ಲಿಲ್ಲ. ರೇಷನ್ ಅನ್ನೋದು ಮಾತ್ರ ಗೊತ್ತಿತ್ತು. ಸ್ವಾತಂತ್ರ್ಯ ಅಂದ್ರೆ ರೇಷನ್ ಹೋಗಿ ಅಕ್ಕಿ ಬೇಳೆ ಎಲ್ಲ Open ಆಗಿ ಸಿಗತ್ತೆ ಅಂತ ನಮ್ಮ ಭಾವನೆ. ಮಹಾರಾಜರಿದ್ದ ಮೈಸೂರಿಗೆ ಭಾರತ ವಿಭಜನೆ, ಹಿಂದೂ ಮುಸ್ಲಿಮ್ ಬಡಿದಾಟ ಯಾವದೂ ಗೊತ್ತೇ ಇರ್ಲಿಲ್ಲ. ಗಾಂಧಿ ಸತ್ತುಹೋದರು ಅಂದಾಗ ಶಾಲೇಲಿ ಅವರ ಫೋಟೋ ಇಟ್ಟು ನಮ್ಮ ಮೇಷ್ಟ್ರುಗಳೆಲ್ಲ ಕಣ್ಣೀರು ಹಾಕಿದ್ದು ನೆನಪಿದೆ. "ರಘುಪತಿ ರಾಘವ" ಹೇಳಿದ್ವಿ. ಗಾಂಧಿ ಫೋಟೋ ಆವಾಗಲೇ ನೋಡಿದ್ದು. ನಮಗೆಲ್ಲ ಮಹಾರಾಜರ ಫೋಟೋ ಮಾತ್ರ ಗೊತ್ತಿತ್ತು. ನಾವು ಹೇಳ್ತಾ ಇದ್ದ prayer "ಕಾಯೌ ಶ್ರೀಗೌರಿ" ಅಂತಾ. ಮಹಾರಾಜರ ವರ್ಧಂತಿಗೆ sweet ಕೊಡೋರು. ನಾಗರಾಜಾ ರಾಯ್ರು ಅಂತ ಒಬ್ಬ ಮೇಷ್ಟ್ರು. ಅವರು ಯಾವಾಗ್ಲೂ ಪೇಟ ಹಾಕ್ಕೊಂಡು ಬರ್ತಾ ಇದ್ರು. ಗಾಂಧಿ ಸತ್ತುಹೋಗಿದ್ದಕ್ಕೆ ಶೋಕ ಆಚರಿಸಬೇಕಾದ್ರೆ ಪೇಟ ತೆಗೆದು ಪಕ್ಕ ಇಟ್ಟಿದ್ದರು. ಆಗಲೇ ನಂ ಮೇಷ್ಟ್ರಿಗೆ ತಲೆ ಮೇಲೆ ಕೂದಲು ಇಲ್ಲ; ಒಂದು ಪಿಳಿ ಜುಟ್ಟು ಇದೆ. ಅಂತ ಗೊತ್ತಾಗಿದ್ದು! ನಗಬೇಕು, ಆದ್ರೆ ನಗೋ ಹಾಗಿಲ್ಲ!

ವಿ.ವಾ. : ನಿಮ್ಮ High School ವ್ಯಾಸಂಗ ಎಲ್ಲಿ ನಡೀತು ? ಆವಾಗ ನಾಟ್ಕ, ಡ್ಯಾನ್ಸು, ಸಂಗೀತ ಇತ್ಯಾದಿಗಳಲ್ಲಿ ನೀವು ಭಾಗವಹಿಸಿದ್ರಾ ?

## ಬದುಕಿನಲ್ಲಿ ಯಶಸ್ಸನ್ನು ಬಯಸುವ ಪ್ರತಿಯೊಬ್ಬರಿಗೂ ದಾರಿದೀಪವಾಗಬಲ್ಲ ಪುಸ್ತಕಗಳು



*ಡಾ|| ಬಿ. ವಿ. ಪಟ್ಟಾಭಿರಾಮ್ ಅವರ*

### ಗೆಲುವು ನಿಮ್ಮದೇ

**ಬೆಲೆ : ರೂ. 125/-**

ಕನ್ನಡಕ್ಕೆ : ಎಂ. ಎಲ್. ರಾಘವೇಂದ್ರರಾವ್

ಗೆಲುವು ನಿಮ್ಮದಾಗಿಸಿಕೊಳ್ಳಬೇಕಾದರೆ ಸಹಜ ವಿಧಾನದಲ್ಲಿ ಅಸಾಧ್ಯ. ಅದಕ್ಕೆ ಆತ್ಮವಿಶ್ವಾಸ, ದೃಢಸಂಕಲ್ಪ ಮತ್ತು ಪ್ರಯತ್ನ-ಪರಿಶ್ರಮದ ಜೊತೆಯಲ್ಲಿ ಸ್ವಯಂ ತರಬೇತಿ ಕೊಟ್ಟುಕೊಳ್ಳುವುದು ತೀರಾ ಅಗತ್ಯ. ಇದರ ಬಗ್ಗೆ ಉತ್ತಮ ಸಲಹೆ-ಸೂಚನೆಗಳನ್ನು ನೀಡುತ್ತದೆ ಈ ಪುಸ್ತಕ.

*ಕಲ್ಲೂರಿ ಶೈಲಬಾಲ ಅವರ*

### A to Z ಪರ್ಸನಾಲಿಟಿ ಡೆವಲಪ್‌ಮೆಂಟ್

**ವ್ಯಕ್ತಿತ್ವ ವಿಕಾಸ ಬೆಲೆ : ರೂ. 60/-**

ಕನ್ನಡಕ್ಕೆ : ಸ್ಪಂದನ

ವ್ಯಕ್ತಿತ್ವ ವಿಕಾಸ ಎಂದರೇನು ? ವ್ಯಕ್ತಿತ್ವ ವಿಕಸಿಸಲು ನಾವೇನು ಮಾಡಬೇಕು ? ಜೀವನದಲ್ಲಿ ಗೆಲುವು ಸಾಧಿಸಲು ನಮ್ಮ ವರ್ತನೆ ಹೇಗಿರಬೇಕು ? ನಮ್ಮನ್ನು ಎಲ್ಲರೂ ಪ್ರೀತಿಸಬೇಕೆಂದರೆ ನಮ್ಮ ವರ್ತನೆ ಹೇಗಿರಬೇಕು ? ಎಂಬುದನ್ನು ತಿಳಿಯಲು ಈ ಪುಸ್ತಕವು ನೆರವಾಗುತ್ತದೆ.

*ಕಂಠಂನೇನಿ ರಾಧಾಕೃಷ್ಣಮೂರ್ತಿ ಅವರ*

### ಸಕ್ಸೆಸ್ ಮ್ಯಾನೇಜ್‌ಮೆಂಟ್



**ಯಶಸ್ಸಿನ ನಿರ್ವಹಣೆ ಬೆಲೆ : ರೂ. 125/-**

ಕನ್ನಡಕ್ಕೆ : ಸ್ಪಂದನ

ನಿಮ್ಮ ಯಶಸ್ಸಿಗೆ ನಿಮ್ಮ ಕ್ಯಾರೆಕ್ಟರೇ ಇನ್‌ವೆಸ್ಟ್‌ಮೆಂಟ್ ಎಂದು ಹೇಳುವ ಲೇಖಕರು ಹೇಗೆ ಸೆಲ್ಫ್ ಎಸ್ಟೀಮ್, ಸೆಲ್ಫ್ ಕಾನ್ಫಿಡೆನ್ಸ್, ಸೆಲ್ಫ್ ಡಿಸಿಪ್ಲಿನ್, ಪಾಸಿಟೀವ್ ದೃಷ್ಟಿ, ವಿಲ್ ಪವರ್, ಗುರಿಗಳ ಪ್ಲಾನಿಂಗ್, ಮೋಟಿವೇಷನ್ ಎಂಬ ಹಲವು ಬೆಳವಣಿಗೆಯ ಮೆಟ್ಟಿಲುಗಳನ್ನು ಹತ್ತಿದರೆ ಕೊನೆಯಲ್ಲಿ ಸಕ್ಸೆಸ್ ಖಂಡಿತ ಎನ್ನುತ್ತಾರೆ.



*ಪಿ. ಸುರೇಶ್ ಕುಮಾರ್ ಅವರ*

### ಒಂದು ದಿನದಲ್ಲಿ ಇಂಗ್ಲಿಷ್

**English in One Day**

**ಬೆಲೆ : ರೂ. 75/-**

ಈ ಪುಸ್ತಕ ಆರಂಭದಲ್ಲಿ 19 Wonder Questions, 19 Wonder Tables, 5 Super Tenses, Verbs helicopter, ಆ ನಂತರ ಬರುವ Powerful Spoken English, 230 Spoken English Questions & Answers ಅನ್ನು ಕಲಿತುಕೊಂಡು ಯಶಸ್ಸು ಸಾಧಿಸಿರಿ.



*ಡಾ|| ಬಿ. ವಿ. ಪಟ್ಟಾಭಿರಾಮ್ ಅವರ*

### ಮಾಸ್ಟರ್ ಮೈಂಡ್

**ಬೆಲೆ : ರೂ. 125/-**

ಕನ್ನಡಕ್ಕೆ : ಎಂ. ಎಲ್. ರಾಘವೇಂದ್ರ ರಾವ್

ಒಬ್ಬ ವ್ಯಕ್ತಿ ಯಶಸ್ಸು ಸಾಧಿಸಬೇಕೆಂದರೆ ಮನಸ್ಸನ್ನು ನಾವು ಹೇಳಿದಂತೆ ಕೇಳುವ ಹಾಗೆ ಮಾಡಿಕೊಳ್ಳಬೇಕು. ಗೆಲವು ಎಂಬುದು ನಂಬರ್ ಲಾಕ್‌ನಂಥದ್ದು. ಅದನ್ನು ತೆರೆಯಬೇಕಾದರೆ, ಅದರ ರಹಸ್ಯ ಸಂಖ್ಯೆಗಳನ್ನು ಕಂಡುಕೊಳ್ಳಬೇಕು. ಆ ರಹಸ್ಯ ತಿಳಿದರೆ ಅದು ಸದಾ ನಿಮ್ಮ ಸೇವೆಯಲ್ಲಿರುತ್ತದೆ. ಆಗ ನೀವೇ ಮಾಸ್ಟರ್ ಮೈಂಡ್ ಆಗುತ್ತೀರಿ.

*ಆದೆಳ್ಳ ಶಿವಕುಮಾರ್ ಅವರ*

### ಪಾಸಿಟಿವ್ ಥಿಂಕಿಂಗ್



**ಬೆಲೆ : ರೂ. 60/-**

ಕನ್ನಡಕ್ಕೆ : ನಾಗರಾಜ

ಪಾಸಿಟಿವ್ ಆಗಿ ಆಲೋಚಿಸಲು ಪ್ರಾರಂಭಿಸಿದರೆ ನಿಮ್ಮ ಜೀವನ ಬದಲಾಗಿ ಹೋಗುತ್ತದೆ. ನಮ್ಮ 'ಮನೋನೇತ್ರ' ತೆರೆದುಕೊಳ್ಳುತ್ತದೆ. ಇತರರ ಬಗೆಗೆ ದ್ವೇಷ, ಅಸೂಯೆಗಳ ಬದಲು ಸಹಾನುಭೂತಿ ಬೆಳೆಯುತ್ತದೆ. ನಿಮಗೆ 'ಜೀವನದ ಪರಮಾರ್ಥ' ಅರ್ಥವಾಗಬೇಕಾದರೆ ಈ ಪುಸ್ತಕವು ಓದಿರಿ.

*ಎ.ಪಿ.ಜೆ. ಅಬ್ದುಲ್ ಕಲಾಂ ಮತ್ತು ವೈ. ಎಸ್. ರಾಜನ್ ಅವರ*

### ಭಾರತ 2020 ಹೊಸ ಯುಗಕ್ಕೆ ಮುಂಗಾಣ್ಕೆ



**ಬೆಲೆ : ರೂ. 125/-**

ಕನ್ನಡಕ್ಕೆ : ಡಾ|| ಪಿ. ವಿ. ನಾರಾಯಣ

ಬಾಹ್ಯಾಕಾಶ ತಂತ್ರಜ್ಞಾನದ ಕ್ಷೇತ್ರದಲ್ಲಿ ನಾವು ಶೂನ್ಯದಿಂದ ಆರಂಭಿಸಿ, ಉಪಗ್ರಹಾಧಾರಿತ ಸಂಪರ್ಕ ವ್ಯವಸ್ಥೆಯನ್ನು ಹೊಂದುವ ಸ್ಥಿತಿಯನ್ನು ಇಂದು ತಲುಪಿರುವುದು. ಇದೇ ಸಾಧನಾ ವಿಧಾನದಿಂದ ಮುನ್ನಡೆದರೆ ಸಮೃದ್ಧ ಭಾರತದ ಗುರಿಯನ್ನು ಸಾಧಿಸಲು, ಅನೇಕ ಕ್ಷೇತ್ರಗಳಲ್ಲಿಯೂ ಯಶಸ್ಸು ಗಳಿಸಬಹುದೆಂದು ಕಲಾಂ ಮತ್ತು ರಾಜನ್ ಅವರು ಒತ್ತಿ ಹೇಳಿದ್ದಾರೆ.



*ಅಡಾಲ್ಫ್ ಹಿಟ್ಲರ್‌ನ* **ಮೈನ್ ಕಾಂಫ್**

### ನನ್ನ ಹೋರಾಟ

**ಬೆಲೆ : ರೂ. 75/-**

ಕನ್ನಡಕ್ಕೆ : ಜಿ. ಎಂ. ಕೃಷ್ಣ ಮೂರ್ತಿ

*(ಹಿಟ್ಲರ್‌ನ 'ಮೈನ್ ಕಾಂಫ್'ನ ಸಂಕ್ಷಿಪ್ತ ಅನುವಾದ)* ಈ ಕೃತಿ ಕಳೆದ ಶತಮಾನದ ಭಾರಿ ದುಷ್ಟಶಕ್ತಿಯೆಂದು ಪರಿಗಣಿಸಲ್ಪಟ್ಟಿರುವ ದುಸ್ಸಾಹಸಿಯೊಬ್ಬನ ಅಂತರಂಗವನ್ನು ತೆರೆದು ತೋರಿಸುತ್ತದೆ. 'ಚರಿತ್ರೆ' ಎಂದರೇನು ? ಪ್ರಜಾಪ್ರಭುತ್ವದ ದೋಷಗಳೇನು ? ಇತಿಹಾಸವನ್ನು ಹೇಗೆ ಓದಬೇಕು ? ಮುಂತಾದ ಹಲವು ಪ್ರಶ್ನೆಗಳಿಗೆ ಹಾಗೂ ವಾಸ್ತುಶಿಲ್ಪ, ಕಲೆ, ಸಂಸ್ಕೃತಿ, ಭಾಷೆಗಳಿಗೆ ಆತನ ಸ್ಪಷ್ಟ ಅಭಿಪ್ರಾಯಗಳು ಓದುಗರನ್ನು ಚಿಂತನೆಗೆ ಹಚ್ಚುತ್ತದೆ.


ಪ್ರಕಾಶಕರು



**ವಾಸನ್ ಪಬ್ಲಿಕೇಷನ್ಸ್**

25, ವಾಸನ್ ಟವರ್ಸ್, ಡಾ|| ಟಿ. ಸಿ. ಎಂ. ರಾಯನ್ ರಸ್ತೆ, ಬೆಂಗಳೂರು 560 053. ದೂರವಾಣಿ : 080-2670 5679

ಈ ಪುಸ್ತಕಗಳು ಎಲ್ಲ ಪ್ರಮುಖ ಪುಸ್ತಕ ಮಾರಾಟಗಾರರಲ್ಲಿ ಹಾಗೂ ನವಕರ್ನಾಟಕ ಪ್ರಕಾಶನದ ಮಳಿಗೆ ಮತ್ತು ಪ್ರದರ್ಶನಗಳಲ್ಲಿ ಲಭ್ಯ.

ರವಿ: ವಿದ್ಯಾವರ್ಧಕ ಸ್ಕೂಲ್ ಅಂತಾ. ಮಿಷನ್ ಆಸ್ಪತ್ರೆ ಪಕ್ಕ. ಆಮೇಲೆ Exhibition Buildingಗೆ ಬಂತು. ದಸರಾ ಕಾಲದಲ್ಲಿ ರಜಾನೋ ರಜಾ ! ಆದರೆ no ನಾಟ್ಕ no dance, no ಹಾಡು. ನಮ್ಮ ಮನೇಲಿ ನಿಮಗೆ ಆಗಲೇ ಹೇಳಿದೆನಲ್ಲ... ಭಾಳಾ ವೈದಿಕ, ಪೌರೋಹಿತ್ಯದ ಬ್ರಾಹ್ಮಣ ಕುಟುಂಬ ಅಂತಾ. ಇದ್ಯಾವುದಕ್ಕೂ ಅವಕಾಶವಿರಲಿಲ್ಲ. ಸಂಧ್ಯಾವಂದ್ನೆ ಮಾಡದೇ ಇದ್ದರೆ ಒದೆ ಬೀಳ್ತಾ ಇತ್ತು! ಆದರೂ 'ಮಲ್ಲಮ್ಮನ ಪವಾಡ' ಅಂತಾ ನಾಟ್ಕದಲ್ಲಿ ದಿವಾನನ ಪಾತ್ರ ಮಾಡಿದ್ದೆ. ಆಗಲೇ ನಾನು ಮೊದಲಸಲ ಮುಖಕ್ಕೆ ಬಣ್ಣ ಹಚ್ಚಿದ್ದು. ಮನೇಲಿ ತುಂಬ ಬೈಸಿಕೊಂಡಿದ್ದಾಯ್ತು.

ವಿ.ವಾ. : ನಿಮ್ಮ ಕಾಲೇಜು ಜೀವನ ಹೇಗಿತ್ತು? ೫೬-೫೭ರಲ್ಲಿ ಅಂದ್ರೆ ಮೈಸೂರು life ತುಂಬಾ... ಬಣ್ಣಬಣ್ಣದ್ದಾಗಿರಬೇಕು.

ರವಿ : ಕಾಲೇಜು.... ಸೇಂಟ್ ಫಿಲೋಮಿನಾಸ್. ನಮಗೆ ಇಂಗ್ಲಿಷ್ ಹೇಳಿಕೊಡ್ತಾ ಇದ್ದವರು ಸೈಕಲ್ ಹತ್ತಾ ಇದ್ದಿದ್ದೇ ತುಂಬಾ ಮಜವಾಗಿತ್ತು. ಸೈಕಲ್ ಕಚ್ಚೆ ಹಾಕ್ಕೊಂಡು, ಸೈಕಲ್‌ನ ಹಿಂದಿನ ಚಕ್ರದ ಹತ್ತಿರ ಇರೋ ರಾಡ್ ಮೇಲೆ ಕಾಲಿಟ್ಟು ನೆಗೀತಾ ನೆಗೀತಾ ಠಣಕ್ ಅಂತಾ ಕುದುರೆ ಹತ್ತಿದ ಹಾಗೆ ಹತ್ತೋರು (ನಗು). ಕಾಲೇಜಿನಲ್ಲಿ 'ರೂಪಾಯಿ ಗಂಡ', 'ಅಳಿಯದೇವರು' ಮುಂತಾದ ನಾಟ್ಕಗಳನ್ನ ಮಾಡ್ದೆ. ಮಹಾರಾಜಾಸ್ ಹೈಸ್ಕೂಲ್‌ನಲ್ಲಿ 'ತಾಪತ್ರಯ್ಯಂಗಾರ್' ಅಂತ ಒಬ್ಬ ಮೇಷ್ಟ್ರು ಇದ್ರು. 'ನಿರುಪಮಾ' ಅಂತ ಒಂದು ನಾಟ್ಕ ಮಾಡಿ, ಅವರ ಹತ್ರ ಬೈಸಿಕೊಂಡಿದ್ದು ನೆನಪಿದೆ.

ವಿ.ವಾ. : ಮೈಸೂರು ಆ ಕಾಲದಲ್ಲಿ ಕಂಪನಿ ನಾಟ್ಕಗಳ ತಾಣವಾಗಿತ್ತು. ನಿಮಗೆ ಅದು ಯಾವದೂ ಹಿಡೀಲಿಲ್ಲವಾ ?

ರವಿ : ಅದ್ಯಾವ chance ಊ ಇರಲಿಲ್ಲ. ನಮ್ಮ ಮನೆ ವಾತಾವರಣವೇ ಹಾಗಿತ್ತು ಅಂತ ಹೇಳಿದ್ನಲ್ಲ. Pass ಗೀಸ್ ಸಿಕ್ರೆ ಹೋಗ್ತಾ ಇದ್ವಿ. ರಾಜಕಮಲ್ ಟಾಕೀಸ್ ಹಿಂದೆ ರತ್ನಾವಳಿ ಥಿಯೇಟರ್ಸ್ ಇತ್ತು. 'ರಾಜಾವಿಕ್ರಮ', ಗುಬ್ಬಿ ವೀರಣ್ಣನೋರ ನಾಟ್ಕಗಳು ಮುಂತಾದವನ್ನ ನೋಡಿದೀನಿ. ಟೌನ್‌ಹಾಲ್, ಜೀವನರಾಯನ ಕಟ್ಟೆ ಮುಂತಾದ ಕಡೆ ನಾಟ್ಕಗಳಾಗ್ತಾ ಇದ್ವು. ಸುಬ್ರಾಯನ ಕೆರೇಲೂ ಆಗ್ತಾ ಇತ್ತು. ನಮ್ಮ ಹತ್ರ ದುಡ್ಡೂಕಾಸು ಇರ್ತಾ ಇರ್ಲಿಲ್ಲ, ಅವಕಾಶಗಳೂ ಇರ್ತಾ ಇರ್ಲಿಲ್ಲ!

ವಿ.ವಾ. : ಸುಮಾರು ಅದೇ ಕಾಲದಲ್ಲಿ ಮೈಸೂರಲ್ಲಿ ಸಂಪತ್, ಬುಳ್ಳ, ನಟೇಶ್ ಅವರೆಲ್ಲ ಇದ್ರಲ್ಲ...

ರವಿ : Sampath was available only for Maharaja's College or Medical College. ಮತ್ತೆ ಬರೀ ಇಂಗ್ಲಿಷ್ ಡ್ರಾಮಾಗಳನ್ನ ಮಾಡ್ತಾ ಇದ್ದರು. ಅಲ್ಲಿ ನಮ್ಮನ್ನ ಕ್ಯಾರೇ ಅಂತಾ ಇರ್ಲಿಲ್ಲ. ಆದರೆ ನಾನು ಹಾಡು ಹೇಳ್ತಾ ಇದ್ದೆ ಅಂತ ಎಂ.ಪಿ.ಶಂಕರ್ ಅವರ 'ಭರಣೀ' ತಂಡದಲ್ಲಿ ಛಾನ್ಸು ಸಿಕ್ಕಿತ್ತು. ಇಂಥಾವರಿಗೆ Town Hall ನಲ್ಲಿ ಮಾತ್ರ ಜಾಗ. ಆದರೆ ಸಂಪತ್ ಬೇರೇನೆ ವರ್ಗಕ್ಕೆ ಸೇರಿದ್ದ ವ್ಯಕ್ತಿ.

ವಿ.ವಾ. : ಹಾಗಾದ್ರೆ ಈ ಚಿತ್ರ-ಪ್ರಪಂಚಕ್ಕೆ ಕಾಲಿಟ್ಟಿದ್ದು ಹೇಗೆ ?

ರವಿ : ನಾನು ಕಾಲೇಜಿನಲ್ಲಿ ಓದುತ್ತಾ ಇದ್ದಾಗಲೇ ಮೈಸೂರು ದಸರಾ ಎಗ್ಸಿಬಿಷನ್ ಕಾರ್ಯಕ್ರಮಗಳಿಗೆ ವಾಲಂಟಿಯರ್ ಆಗಿ ಕೆಲಸಮಾಡಕ್ಕೆ ಪ್ರಾರಂಭಮಾಡ್ದೆ. ಅದರಲ್ಲೂ Entertainment ವಿಭಾಗಕ್ಕೆ. ನಾನು ಅಲ್ಲೇ ಅದೇ ವಿದ್ಯಾವರ್ಧಕ student ತಾನೇ ? School ಅದೇ building ನಲ್ಲಿ ನಡೀತಾ ಇತ್ತು. Entertainment ಕಾರ್ಯಕ್ರಮಗಳು ಆವಾಗ ಮೂರು ಕಡೆ ನಡೀತಾ ಇದ್ವು. ರೇಡಿಯೊ ರೂಮ್, ಲೇಡಿಸ್ ಸೆಕ್ಷನ್, ಜೀವಣ್ಣರಾಯನ ಕಟ್ಟೆ. ಆಗ M.C. ಮಹದೇವಸ್ವಾಮಿ ಅಂತಾ ಛೇರ್‌ಮನ್. ಅವರು ನನಗೆ ವಹಿಸಿಕೊಟ್ಟ ಕೆಲಸಾ ಏನಪ್ಪ ಅಂದ್ರೆ, ಅಲ್ಲಿಗೆ ಬರ್ತಾ ಇದ್ದ Artist ಗಳಿಗೆಲ್ಲ ಸಂಭಾವನೆ ರಿಲೀಸ್ ಮಾಡೋದು! ನನಗೆ ದಿನಕ್ಕೆ ೨-೩ ರೂಪಾಯಿ ಸಂಬಳ ಸಿಗ್ತಾ ಇತ್ತು! ಒಂದು ೨೦-೨೫ ದಿವಸಗಳ ಕಾರ್ಯಕ್ರಮ. Special programmeಗಳ ಪೈಕಿ ಕಲ್ಯಾಣಕುಮಾರ್ ತಂಡಕ್ಕೆ ಅವಕಾಶ ಸಿಕ್ತಾ ಇತ್ತು. ಸದಾರಮೆ ಆಡೋರು. ರಾಜಕುಮಾರ್ ಅವರೂ ಆಗಾಗ್ಗೆ ಬರೋರು. ಬೇಡರ ಕಣ್ಣಪ್ಪ ಆಡೋರು. ಜೊತೇಲಿ ನರಸಿಂಹರಾಜು, ಬಾಲಕೃಷ್ಣ ಜಿ.ವಿ. ಅಯ್ಯರ್ ಅವರೆಲ್ಲ ಬರ್ತಾ ಇದ್ರು. ಹೀಗೆ ನಿಧಾನವಾಗಿ ಕನ್ನಡ ಚಿತ್ರರಂಗದ ಜೊತೆ ನಂಟು ಬೆಳೀತು. ನನಗೂ-ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೇ ?) ಪದ್ಮಿನಿ ಪ್ರಿಯದರ್ಶಿನಿ, ಪೊಲ್ಲಾಚಿ ಕಮಲ, ವಸಂತಕುಮಾರಿ, ಬಿಸ್ಮಿಲ್ಲಖಾನ್, ರಾಧಾ ಜಯಲಕ್ಷ್ಮಿ, ಸೂಲಮಂಗಲಂ ಸೋದರಿಯರು ಮುಂತಾದ ಖ್ಯಾತನಾಮರಿಗೂ ಕೂಡ payment ಕೊಡ್ತಿದೀನಿ ! College ನಲ್ಲಿ ಓದಬೇಕೂಂತ ಮನಸ್ಸಿದ್ದರೂ ಮನೆ ಸ್ಥಿತಿ ಚೆನ್ನಾಗಿರ್ಲಿಲ್ಲ. ಸಂಜೆ ೫.೩೦ಕ್ಕೆ ಕಾಂಪಿಟೇಷನ್ ಮೇಲೆ ನಾನೂ, ನನ್ನ ತಮ್ಮ ಮನೇಗೆ ಓಡಿಹೋಗ್ತಾ ಇದ್ವು. ಯಾಕೇಂದ್ರೆ ಮೊದಲು ಹೋದವನಿಗೆ ಮಾತ್ರ ಬೇಳೆ ಚರಟ ಸಿಕ್ತಾ ಇತ್ತು! ರೊಟ್ಟಿ ಜೊತೆಗೆ. Bad days for us. ಈ Artistಗಳ ಕನೆಕ್ಷನ್ ಮೂಲಕ ಚಿತ್ರರಂಗಕ್ಕೆ ಹೊರಟುಬಿಡೋಣ ಅಂತ ನಿರ್ಧಾರ ಮಾಡ್ದೆ.

ವಿ.ವಾ. : ನೀವು ಕನ್ನಡ ಚಿತ್ರರಂಗಕ್ಕೆ ಕಾಲಿಡುವಾಗ ಅದರ ಪರಿಸ್ಥಿತಿ ಹೇಗಿತ್ತು? ಎಂಥಾ ನಿರ್ದೇಶಕರು, ನಿರ್ಮಾಪಕರು, ಸಂಗೀತಗಾರರು, ಕ್ಯಾಮರಾಮನ್‌ಗಳು, ನಟರು ಇದ್ದರು ? ನೀವು ಯಾವ ರೀತಿ ಅವಕಾಶಗಳ ನಿರೀಕ್ಷಣೆ ಮಾಡಿದ್ದಿರಿ ?

ರವಿ : ನಿಜ ಹೇಳಬೇಕೂಂದ್ರೆ... ನಾನು ಯಾವ ಖಾಸಗಿ ಕಾರಣದ ಮೇಲೆ ಮನೆ ಬಿಡಬೇಕಾಗಿ ಬಂತೋ... ಸ್ವಲ್ಪ ಹೆಚ್ಚೂ ಕಡಿಮೆ ಅದೇ ಪರಿಸ್ಥಿತಿ ಕನ್ನಡ ಚಿತ್ರಲೋಕದಲ್ಲೂ ಇತ್ತು. ಬಡತನ ! Kannada film world was very poor. ಹುಣಸೂರು ಕೃಷ್ಣಮೂರ್ತಿ, ವಿಠ್ಠಲಾಚಾರ್, ಪಂತುಲು, ಬಿ.ಎಸ್. ರಂಗಾ, ಜಿ.ವಿ. ಅಯ್ಯರ್ ಥರದವರು ಇದ್ರು. ೬೦,೦೦೦ದಿಂದ ೧ಲಕ್ಷದ ಬಜೆಟ್‌ನಲ್ಲಿ ಚಿತ್ರ ತೆಗೀಬೇಕಾಗಿತ್ತು. ತಮಿಳು, ತೆಲುಗು ಚಿತ್ರರಂಗಗಳಲ್ಲಿ ಬೇಕಾದಷ್ಟು ದುಡ್ಡು ಇತ್ತು. ಮಲಯಾಳಂನವರದ್ದು ನಮಗಿಂತ ಹೀನಾಯ ಸ್ಥಿತಿ. ನಮ್ಮಲ್ಲಿ ಬಹಳಷ್ಟು ನಿರ್ಮಾಪಕರು ಮೈಸೂರಿನ ಹಳ್ಳದಕೇರಿಯ ಬೂದುಗುಂಟೆ ಅಶ್ವತ್ಥನಾರಾಯಣ ಶೆಟ್ಟಿ ಅಂತಾ... ಅವರ ಬಳಿ ತಂತಮ್ಮ ಚಿತ್ರಕ್ಕಾಗಿ ಸಾಲ ತೆಗೆಯೋರು. ಚಿತ್ರದಲ್ಲಿ BLA ಶೆಟ್ಟಿ ಕಾಣಿಕೆ ಅಂತಾ ಹಾಕಿಸಬೇಕಾಗಿತ್ತು. ಹುಣಸೂರ್, ವಿಠ್ಠಲಾಚಾರ್ ಅವರೆಲ್ಲ ಅಲ್ಲಿಗೆ ಬರೋರು. ನಾನು ಶೆಟ್ಟರ ಜೊತೇಲಿ ಆಗಾಗ್ಗೆ ಚೆನ್ನೈಗೆ ಹೋಗ್ತಾ ಇದ್ದೆ. ಸಿನೆಮಾದಲ್ಲಿ ಹಾಡು ಹೇಳಬೇಕು ದೊಡ್ಡ playback singer ಆಗಬೇಕೂ ಅನ್ನೋ ಚಟ! ಹುಣಸೂರ್ ಅವರ 'ರತ್ನಮಂಜರಿ' ಅನ್ನೋ ಚಿತ್ರದಲ್ಲಿ ಒಂದು ವೈದ್ಯನ ಪಾತ್ರ. ಪುಟ್ಟದು. This Ravee became an actor ! ೧೯೬೦ರಲ್ಲಿ. ಆವಾಗಾವಾಗ ಚೆನ್ನೈಗೆ ಹೋಗ್ತಾ ಇದ್ನಲ್ಲ... ಅಲ್ಲಿ ಉದಯಕುಮಾರ್ ಸಿಕ್ಕರು. ಆತ್ಮೀಯತೆ ಬೆಳೆಯಿತು. ಅಣ್ಣತಮ್ಮಂದಿರಂತೆ ಇದ್ವಿ. ಒಂದು ದಿನ ಅಲ್ಲಿಗೆ ದಿಢೀರ್ ಅಂತಾ ಜಿ.ವಿ. ಅಯ್ಯರ್ ಅವರ ಪ್ರವೇಶ ಆಯ್ತು. ಉದಯಕುಮಾರ್ ಜೊತೇಲಿ ಇದ್ದೆ... ''ಯಾರಯ್ಯ ಈ ಹುಡ್ಗಾ ?'' ಅಂತ ಐಯ್ಯರ್ ಉದಯಕುಮಾರನ್ನ ಕೇಳಿದ್ರು. ''ಇವನು ರವಿ ಅಂತಾ. ನನ್ನ ತಮ್ಮನ ಥರಾ'' ಅಂತೇನೋ ಹೇಳಿದ್ರು. ಆಮೇಲೆ ಈ ಅಯ್ಯರ್ ಮಹಾಶಯ ''ನಾಳೆ ಇಂದಾ ನನ್ನ ಜೊತೇಲಿ ಕೆಲಸಾ ಮಾಡ್ತೀ ಏನಯ್ಯಾ'' ಅಂತ ಕೇಳಿಬಿಡೋದೆ ? ''ಸಾರ್, ನಾನಿನ್ನೂ inexperiencedಊ... ಚಿಕ್ಕೋನು. ಏನೂ ಗೊತ್ತಿಲ್ಲ. ಬ್ಬೆಬ್ಬೆ...ಬ್ಬೇ'' ಅಂತಂದೆ.



''ಅದೆಲ್ಲ ಇರಲಿ ಇರಲೀ... ಯಾರೂ ಎಲ್ಲಾನೂ ಕಲಿತು ಬಂದಿರಲ್ಲ. ನಾಳೆಯಿಂದ ಬಂದುಬಿಡು.'' ಅಯ್ಯರ್ ಅವರ ಮೊದಲ ಚಿತ್ರ 'ತಾಯಿ ಕರುಳು' – ನಾನು ಅವರ ಮೊದಲ ಸಹನಿರ್ದೇಶಕ !!

ವಿ.ವಾ. : ಸಹನಿರ್ದೇಶಕ !... Asst Director... ಅದೂ G.V. ಅಯ್ಯರ್ ಅವರಿಗೆ ? ಅಲ್ಲ ರವೀ... ನೀವು playback singer ಆಗಬೇಕಾಗಿದ್ದವರು... ಅದೇ ನಿಮ್ಮ ಕನಸು.

ರವಿ : ಕನಸು... yes... ಮೈಸುರಿನ ಬಿಡಾರಂ ರಾಮಮಂದಿರಲ್ಲಿ ಎಂತೆಂಥಾ ಘಟಾನುಘಟಿಗಳ ಸಂಗೀತ ಕೇಳ್ತಾ ಇದ್ದೆ. ಅವರ ಥರಾ ನಾನೂ ದೊಡ್ಡ ಗಾಯಕನಾಗಿ... ಅವರ ಥರಾ ಕಾರ್‌ನಲ್ಲಿ ಕೂತ್ಕೊಂಡು, ಇದೇ ಬಿಡಾರಂ ರಾಮಮಂದಿರಲ್ಲಿ... ಚೌಡಯ್ನೋರ ಥರಾ, ಶೆಮ್ಮಂಗುಡೀ ಥರಾ... ಜಿಎನ್‌ಬಿ ಥರಾ... ಜರ್ಬಾಗಿ ಬಂದು ಶ್ರೋತೃಗಳ ಮೆಚ್ಚುಗೆ ಗಳಿಸಬೇಕೂ ಅನ್ನೋದು... ಭಾಳಾ ದೊಡ್ಡ ಕನಸು. ಆದರೆ ಎಲ್ಲ ಕನಸುಗಳೂ ಸಾಕಾರವಾಗಬೇಕಲ್ಲ! ದೇವರ ಕೃಪೆ ಬೇಕಲ್ಲ ?... ಆದರೂ ಮದ್ರಾಸಿನಲ್ಲಿ ಕೆಲಸಮಾಡೋವಾಗ actingಊ, singingಊ ಅದ್ಯಾವುದೂ important ಅಲ್ಲ, ಎಲ್ಲಕ್ಕಿಂತ ಮಿಗಿಲಾದದ್ದು 'ನಿರ್ದೇಶಕ' ಅನ್ನೋ ಸತ್ಯ 'ಫಳ್' ಅಂತ ಹೊಳೀತು. ೪೫ ವರ್ಷಗಳಲ್ಲಿ 'ತೂಗುದೀಪ', 'ಲಗ್ನಪತ್ರಿಕೆ', 'ಗಾಂಧಿನಗರ', 'ಭಾಗ್ಯದಬಾಗಿಲು', 'ಅರಿಶಿನ ಕುಂಕುಮ', 'ದೇವರು ಕೊಟ್ಟ ತಂಗಿ', 'ಜಿಮ್ಮಿಗಲ್ಲು',

'ಮಲಯಮಾರುತ', 'ಮಿಥಿಲೆಯ ಸೀತೆಯರು' ಇತ್ಯಾದಿ ಚಿತ್ರಗಳನ್ನು ಮಾಡ್ದೆ.

ವಿ.ವಾ. : Wonderful... ಇಷ್ಟೆಲ್ಲ ಯಶಸ್ವಿ ಚಿತ್ರಗಳಿಗೆ ದುಡ್ಡು ಹೇಗೆ ಹೊಂದಿಸಿದಿರಿ ?

ರವಿ : ಆವಾಗ ಕನ್ನಡ ಚಿತ್ರರಂಗ ಈಗಿನಂತೆ ಇರ್ಲಿಲ್ಲ ವಾಮನ್. ಈಗ ದುಡ್ಡು ಮಾಡೋದಕ್ಕೆ ಈ Industry ಲಿ cutthroat ಕಾಂಪಿಟೇಷನ್ ಇದೆ. ಆಗ ಒಳ್ಳೊಳ್ಳೆ ಸಿನೆಮಾಗಳನ್ನ ನೀಡಕ್ಕೆ ಮಾತ್ರ ಪೈಪೋಟಿ ಇರ್‍ತಾ ಇತ್ತು. ಎಂತೆಂಥಾ ಚಿತ್ರಗಳು ! ಸತೀಶಕ್ತಿ, ರಣಧೀರ ಕಂಠೀರವ, ಸ್ಕೂಲ್ ಮಾಸ್ಟರ್, ಇವತ್ತಿನ Actorಗಳ ಸಿಗರೇಟ್ ಬೆಲೆ ಆವಾಗ ಅವರಿಗೆ ಸಂಭಾವನೆ ಆಗಿ ಸಿಕ್ತಾ ಇತ್ತು. ನೀವು ನಂಬಲ್ಲ ರಾಜಕುಮಾರ್ ರೂ. ೬,೦೦೦ಕ್ಕೆ ಬರ್‍ತಾ ಇದ್ರು, ಲೀಲಾವತಿಗೆ ರೂ. ೩,೦೦೦, ಪಿ.ಬಿ. ಶ್ರೀನಿವಾಸ್‌ಗೆ ಕೇವಲ ರೂ. ೧೦೦, ಜಾನಕೀಗೆ ರೂ. ೧೫೦, ವಿಜಯಭಾಸ್ಕರ್‌ಗೆ ರೂ. ೧೫೦೦. Can you believe this? ರಣಧೀರ ಕಂಠೀರವ ಇಡೀ ಚಿತ್ರಕ್ಕೆ ರೂ. ೧,೭೫,೦೦೦. ಈಗಿನ ಚಿತ್ರಗಳ ಒಂದು ದಿನದ ಬಜೆಟ್ ಅದು ! ಯಾರಾದ್ರೂ ಮತ್ತೆ ಆ ಚಿತ್ರ ತೆಗೆಯಕ್ಕೆ ಸಾಧ್ಯಾನಾ ? ಕರ್ನಾಟಕದಿಂದ ಮದ್ರಾಸಿಗೆ ಹೋದವರೆಲ್ಲ ಒಂದು ಕುಟುಂಬದ ರೀತಿ ಇರ್‍ತಾ ಇದ್ವಿ. ದುಡ್ಡಿಲ್ಲ, ಮಲಗಕ್ಕೆ ಜಾಗ ಇಲ್ಲ ಅಂದ್ರೆ 'ಗುಗ್ಗು ಮಹಲ್'ಗೆ ಹೋಗ್ತಾ ಇದ್ವಿ. ಕಮೆಡಿಯನ್ ಗುಗ್ಗು, Great man! ಎಂತೆಂಥಾ ಟೀಮ್‌ಗಳಿದ್ವು ಗೊತ್ತಾ ? ನಾಗೇಂದ್ರರಾಯರು ಅವರ ಮಕ್ಕಳು – ಜಯಗೋಪಾಲ, ಕೃಷ್ಣಪ್ರಸಾದ್, ಸುದರ್ಶನ; ಬಿ. ಆರ್. ಪಂತುಲು-ಟಿ. ಜಿ. ಲಿಂಗಪ್ಪ, ಕರ್ಣನ್; ಎ. ವಿ. ಎಂ., ವಾಹಿನಿ, ಕೆ. ಶಂಕರ್, ಹುಣಸೂರ್, ಜಿ.ಕೆ. ವೆಂಕಟೇಶ್, ಕುರ ಸೀತಾರಾಂಶಾಸ್ತ್ರಿ, ದೊರೈರಾಜು, ಜಿ.ವಿ. ಅಯ್ಯರ್, ಕರೀಮ್‌ಖಾನ್, ನರೇಂದ್ರ ಬಾಬು. ಒಬ್ಬರಿಗಿಂತ ಒಬ್ರು ಮೇಧಾವಿಗಳು. ೫,೦೦೦ ರೂಪಾಯಿನಲ್ಲಿ 'ಪೋಸ್ಟ್ ಮಾಸ್ಟರ್' ಸಿನೆಮಾದ ಅಷ್ಟೂ ಹಾಡುಗಳನ್ನ ರಿಕಾರ್ಡ್ ಮಾಡಿಕೊಂಡು – ದುಡ್ಡೂ ಉಳಿಸಿಕೊಂಡು ಬಂದಿದೀನಿ !

ವಿ.ವಾ. : Oh ! 'ಪೋಸ್ಟ್ ಮಾಸ್ಟರ್'ದು 'ಇಂದೇನು ಹುಣ್ಣಿಮೆಯೋ' ಹೇಳಿ ಸಾರ್. ಆಮೇಲೆ, 'ಕನ್ನಡದ ಕುಲದೇವಿ ಕಾಪಾಡು ಬಾ ತಾಯೇ' – Remarkable songs.

ರವಿ : (ಇಂದೇನು ಹುಣ್ಣಿಮೆಯೋ... ಹಾಡಿ) ಎಂಥಾ Beautiful Composition ಸಾರ್ ಇದು ! ಪಲ್ಲವಿಯ slow tempo; ನುಡಿಗಳದ್ದು fast tempo. ಮಲ್ಲಿ ಮದುವೆಯ 'ಆಡೋಣ ಬಾಬಾ ಗೋಪಾಲ' ಹ್ಯಾಗಿದೆ ? ಪ್ರಭಾಕರ ಶಾಸ್ತ್ರಿಗಳ ಲಿರಿಕ್ಸ್ ! ಇಂಥಾವರನ್ನೆಲ್ಲ ಹಾಕ್ಕೊಂಡು 'ತೂಗುದೀಪ' ಮಾಡ್ದೆ. ೬೦,೦೦೦ ರೂಪಾಯಿನಲ್ಲಿ! ನಾಗೇಂದ್ರರಾಯರು act ಮಾಡಿದ್ದರು, ಆರ್. ಎನ್. ಕೃಷ್ಣಪ್ರಸಾದ್‌ಗೆ ರೂ. ೧,೬೦೦ ಮಾತ್ರ ಕೊಟ್ಟಿದ್ದು! ೧೯೫೩ರಿಂದ ೧೯೬೩ರವರೆಗೆ ಕನ್ನಡ ಚಿತ್ರರಂಗದ ಎಲ್ಲ ಕಲಾವಿದರು ದಿನನಿತ್ಯದ ಹೋರಾಟ ನಡೆಸಿದಾರೆ ಸಾರ್. ೧೯೬೪ರಲ್ಲಿ ಸ... ಸರ್ಕಾರ ಸಬ್ಸಿಡಿ ಕೊಡಕ್ಕೆ ಪ್ರಾರಂಭ ಮಾಡ್ತು. ೫೦,೦೦೦ ರೂಪಾಯಿ. ಶೂಟಿಂಗ್ ಮಾತ್ರ ಕರ್ನಾಟಕದಲ್ಲಿ; ಉಳಿದಿದ್ದೆಲ್ಲ ಮದ್ರಾಸಿನಲ್ಲಿ! ಆಮೇಲೆ ನನ್ನಂಥವರು ಬಂದ್ವಿ : ಪುಟ್ಟಣ್ಣ, ಲಕ್ಷ್ಮೀನಾರಾಯಣ್, ನಾನು, ಗೀತಪ್ರಿಯ ಹೀಗೆ.

ವಿ.ವಾ. : ನಿಮ್ಮ ಚಿತ್ರಗಳೆಲ್ಲ ಯಶಸ್ವಿಯಾಗಿ ಓಡ್ತಾ ಇದ್ದವಾ ? ಹಾಕಿದ್ದ ದುಡ್ಡು ಸಿಕ್ತಾ ಇತ್ತಾ ?

ರವಿ : ಹಳೇ ಮೈಸೂರಲ್ಲಿ ಮಾತ್ರ success ಆಗ್ತಾ ಇದ್ವು. ಓಡಿದ್ರೆ ಇಲ್ಲೇ. ಹುಬ್ಬಳ್ಳಿ ಗದುಗು, ಉತ್ತರ ಕನ್ನಡದಲ್ಲೆಲ್ಲಾ ಬಂದರೆ ಬಂತು, ಇಲ್ಲದಿದ್ರೆ ಇಲ್ಲ. ಹೈದ್ರಾಬಾದ್ ಕರ್ನಾಟಕಕ್ಕೆ ೭,೦೦೦ ಅಥವಾ ೮,೦೦೦ ರೂಪಾಯಿಗೆಲ್ಲ running print ತೊಗೊಂಡು ಹೋಗ್ತಾ ಇದ್ರು! ಸಬ್ಸಿಡಿ ಬಂದ ಮೇಲೆ ಸ್ವಲ್ಪ ಉಸಿರುಬಿಟ್ವಿ. ೧೯೮೦ರಿಂದ ಈಚೆಗೆ ಯಾವಾಗ ಜಿಲ್ಲಾವಾರು ಹಂಚಿಕೆ ಬಂತೋ ಕನ್ನಡ ಚಿತ್ರರಂಗ ಕಿತ್ತುಕೊಂಡೋಯ್ತು. ದಲ್ಲಾಲಿಗಳು enter ಆದ್ರು. Producers-Buyers-ಥಿಯೇಟರ್ ಮಾಲೀಕರು ಇವರೆಲ್ಲ compartmentalise ಆಗೋದ್ರು. ಸಿನೆಮಾ ಮಾಡೋದು ಅಂದರೆ ಕೇವಲ ದುಡ್ಡು ಮಾಡೋದು ಅಂತ ಆಗೋಯ್ತು. ಕಲೆ, ಕಲಾವಿದರು, ಸೌಂದರ್ಯ ಪ್ರಜ್ಞೆ, ಸಾಹಿತ್ಯ, ಸಂಗೀತ ಎಲ್ಲ ಧೂಳೀಪಟವಾಗೋಯ್ತು!

ವಿ.ವಾ. : ಈಗ ನಡೀತಾ ಇರೋ ಗಲಾಟೆ ಇದೆಯಲ್ಲ, ಚಿತ್ರಮಂದಿರದಲ್ಲಿ ಕನ್ನಡ ಚಿತ್ರಗಳು ಮಾತ್ರ...

ರವಿ : ಅದೂ ಇದೇ ಕಾರಣದಿಂದ ಆಗ್ತಾ ಇರೋದು. ಅದರಲ್ಲಿ ಎಲ್ಲರದ್ದೂ ತಪ್ಪಿದೆ. ಪರಭಾಷಾ ಚಿತ್ರಗಳು ಬೇಡಾಂತ ಹೇಳಕ್ಕೆ ಬರಲ್ಲ, ಪರಭಾಷಾ ಚಿತ್ರಗಳಿಂದಲೇ

ನ್ನಡ ಚಿತ್ರರಂಗ ಮೊದಮೊದಲು ಬೆಳೆದಿದ್ದು, ಅದನ್ನ ನಾವು ಮರೀಬಾರ್ದು. ಆಮೇಲೇ ನಾವು ಬೆಳೆದಿದ್ದು. ಸಿನೆಮಾ Industry ದುಡ್ಡು ಪ್ರಿಂಟ್‌ಮಾಡೋ ಮಿಂಟ್ ಅಂತ ಳಕೊಂಡ್ರೆ ಹೀಗೆಲ್ಲ ಆಗತ್ತೆ.

ವಿ.ವಾ. : ಈಗ ಬರ್‍ತಾ ಇರೋ ಚಿತ್ರಗಳು... ಎಂಥಾ ಕೆಟ್ಟ, ಕೀಳು ಅಭಿರುಚಿಯವು ಅಲ್ಲವಾ ? ನಮಗೆಲ್ಲ ಏನಾಗ್ತಾ ಇದೆ ಸಾರ್ ? ಯಾಕೆ ಸೂಕ್ಷ್ಮಗಳನ್ನ, ನವಿರನ್ನ ಳಕೊಳ್ತಾ ಇದೀವಿ. ಯಾಕೆ ಹಿಂಸೆ ಕ್ರೌರ್ಯ ಅಶ್ಲೀಲಗಳೇ ಚಿತ್ರಗಳ ಜೀವಾಳ ಆಗ್ತಾ ಇದೆ ? ಇದಕ್ಕೆ ಯಾರು ಹೊಣೆ ? ಯಾರು ಸರಿಪಡಿಸಬೇಕು ? ಚಿತ್ರಗಳಿಗೆ ಸಾಮಾಜಿಕ ಜವಾಬ್ದಾರಿ ಅನ್ನೋದೇ ಇರಲ್ವ ?

ರವಿ : ಇದಕ್ಕೆ ಕೇವಲ ಚಿತ್ರರಂಗವನ್ನು ದೂಷಿಸಿದರೆ ಸಾಲದು, ಎಲ್ಲ ಕ್ಷೇತ್ರಗಳಲ್ಲೂ ಇದೇ ಪರಿಸ್ಥಿತಿ ಇದೆ ಅಲ್ಲವಾ ? ನಮ್ಮ ಸಮೂಹ ಮಾಧ್ಯಮಗಳನ್ನ ನೋಡಿ. ನಮ್ಮ ಪೇಪರುಗಳನ್ನ ನೋಡಿ. ನಮ್ಮ ರಾಜಕಾರಣ, ಶಿಕ್ಷಣ, ವ್ಯಾಪಾರ, ವ್ಯವಹಾರ ಎಲ್ಲವೂ ಹೀಗೇ ಇಲ್ಲವಾ ? ಹಾಗಂತ ಹೇಳಿ ಚಿತ್ರರಂಗವನ್ನ defend ಮಾಡಿಕೊಳ್ತಾ ಇಲ್ಲ ನಾನು. ನಿಜ. ನೀವು ಹೇಳ್ತಾ ಇರೋದು ನಿಜ. ಎಂಥಾ ಅಬ್ಬರದ ಬೀಭತ್ಸ ಸಂಗೀತ, ಎಂಥಾ ಕೆಟ್ಟಾಕೊಳಕ ನೃತ್ಯ ಸಂಯೋಜನೆ. ಎಷ್ಟು ಅಶ್ಲೀಲ, ಅಸಹ್ಯವಾಗತ್ತೆ, ಕಲಾಸಿಪಾಳ್ಯ ಅಂತ ಒಂದು ಸಿನೆಮಾ. 'ಜೋಗಿ' ಅಂತಾ ಒಂದರ ಹೆಸರು. ಕೈಲಿ ಮಚ್ಚು! ಕೊಡಲಿ, ಕತ್ತಿ ಮಚ್ಚು, ದೊಣ್ಣೆ, ಗನ್ನು ಇಲ್ಲದೇ ಚಿತ್ರ ತೆಗೆಯೊಕ್ಕೆ ಬರೋದೇ ಇಲ್ಲವಲ್ಲ ಇವರಿಗೆ! ಜನ ಕೇಳ್ತಾರೆ ನಾವು ಮಾಡ್ತೀವಿ ಅಂತ ಹೇಳೋರು ಪರಮನೀಚರು. ಜನ ಏನು ನನಗೆ ಇಂತಾ ಡಬಲ್ ಮೀನಿಂಗ್ ಸಿನೆಮಾ ಬೇಕೂಂತ ಕೇಳ್ತಾರಾ ? ಮೈಮೇಲೆ ಒಂದು ಸೆಂಟಿಮೀಟರು ಬಟ್ಟೆ ಇಲ್ದೆ ಕುಣಿಯೋ dance ಬೇಕೂಂತ ಜನ ಕೇಳ್ತಾರಾ ? ಇದೆಲ್ಲ humbug ! ಅಲ್ಲಿಗೆ ಚಿತ್ರರಂಗದ ಜವಾಬ್ದಾರಿ ಏನಾಯ್ತು? ಎಲ್ಲ ಭಾಷೆಗಳಲ್ಲೂ ಇದೇ ಅವಾಂತರ. ಹಾಗೆ ನೋಡಿದರೆ ಕನ್ನಡದವರೇ ವಾಸಿ. ಎಸ್. ಪಿ. ಬಾಲಸುಬ್ರಮಣ್ಯನ್ನ ಕೇಳಿ. ಕನ್ನಡದಲ್ಲಿ ಇನ್ನೂ melody ಅನ್ನೋದು ಇದೆ. ಕನ್ನಡ ಹಾಡುಗಳು ಸಮಾಧಾನ ತರ್‍ತವೆ ಅಂತಾನೆ!



ಪ್ರಶಸ್ತಿಗಳೊಂದಿಗೆ ರವೀ ದಂಪತಿಗಳು

ವಿ.ವಾ. : ನಿಮಗೆ ನೀವಂದುಕೊಂಡಂಥ ಚಿತ್ರ ತೆಗೆಯಕ್ಕೆ ಆಗಿದೆಯಾ ?

ರವಿ : ಭಾಳಾ ಮಾರ್ಮಿಕವಾದ ಪ್ರಶ್ನೆ ಇದು. ಸುಲಭಕ್ಕೆ ಉತ್ತರಿಸಕ್ಕೆ ಆಗಲ್ಲ. ಆದರೂ ಪ್ರಯತ್ನ ಪಡ್ತೀನಿ. ಹಾಗೆ ನೋಡಿದರೆ ಉತ್ತರ no ಅಂತಾನೇ. ಸಾಧ್ಯವಾಗಿಲ್ಲ. ಆದರೆ ಇದುವರೆಗೂ ನನ್ನ ಪ್ರಯತ್ನ ಆ ದಿಸೆಯಲ್ಲೇ ಆಗಿದೆ. ನಾವೆಲ್ಲ – ಅಂದ್ರೆ, ನಾನು, ಪುಟ್ಟಣ್ಣ, ಲಕ್ಷ್ಮೀನಾರಾಯಣ ಮುಂತಾದವರು ಮದ್ರಾಸಿನಲ್ಲಿದ್ದಾಗ ಒಟ್ಟಿಗೆ ಕೂತು ಈ ಬಗ್ಗೆ ಚರ್ಚೆ ಮಾಡ್ತಾ ಇದ್ವಿ. ಪುಟ್ಟಣ್ಣನಿಗೆ ಕಾದಂಬರಿಗಳನ್ನ ಚಿತ್ರಿಸೋದು ಇಷ್ಟವಾಗ್ತಾ ಇತ್ತು. ಲಕ್ಷ್ಮೀನಾರಾಯಣ್‌ಗೆ International level ಸಿನೆಮಾ ಮಾಡಬೇಕೂಂತ ಆಸೆ ಆಗ್ತಾ ಇತ್ತು. ನಾನು ಕುಟುಂಬದ ಎಲ್ಲ ಸದಸ್ಯರೂ ಕುಳಿತು ನೋಡುವಂಥಾ ಸಿನೆಮಾ ಮಾಡಬೇಕೂಂತ ಇಷ್ಟಪಟ್ಟೆ. ೩೫ ವರ್ಷಗಳ ನಂತರವೂ ನಾ ತೆಗೆದ 'ದೇವರು ಕೊಟ್ಟ ತಂಗಿ', 'ಮಲ್ಲಿಮದುವೆ', 'ಬನಶಂಕರಿ', 'ಲಗ್ನಪತ್ರಿಕೆ' ಮುಂತಾದವುಗಳನ್ನ ಜನ ನೋಡಕ್ಕೆ ಇಷ್ಟಪಡ್ತಾರಲ್ಲ! ನನ್ನ ಸಿನೆಮಾದ 'ತನ್ನಿರೆ ಹಾಲ ತನಿಯೆರೆಯೋಣ, ಪಂಕಜನೇತ್ರ ಮಧುಮಯ ರಾತ್ರಿ, ನಾನೂ ನೀನೂ ಜೊತೆಗಿರಲು, ಇಳಿದು ಬಾ ತಾಯೇ' ರೀತಿ ಹಾಡುಗಳು ಈಗಲೂ ಜನಪ್ರಿಯವಾಗಿವೆಯಲ್ಲ! 'ಮಲಯಮಾರುತ', 'ಮಿಥಿಲೆಯ ಸೀತೆಯರು' ಈಗಿನ ಕಾಲದಲ್ಲೂ ಯಶಸ್ವಿ ಆಗಿವೆಯಲ್ಲ! ಹಾಗಾದ್ರೆ ಜನಕ್ಕೆ ಏನು ಬೇಕು ? ಮೈಸೂರು ಮಹಾರಾಜರ ಜಂಬೂಸವಾರಿ ಲೈವ್‌ನ ಎರಡು ಸಿನೆಮಾಗಳಲ್ಲಿ ನೋಡಿ ಮೆಚ್ಚಿಕೊಂಡರಲ್ಲ? ಹಾಗಾದ್ರೆ ಜನಕ್ಕೇನು ಸೊಂಟ ಕುಣಿಸೋ dance ಬೇಕಾ ? ನಾವೇ ಈ ವಿಷ ಉಣಿಸ್ತಾ ಇರೋರು ಸಮಾಜಕ್ಕೆ.

ವಿ.ವಾ. : ರವೀ ಕನ್ನಡ ಚಿತ್ರರಂಗದಲ್ಲಿ ಇಷ್ಟೆಲ್ಲ ಸಾಧನೆ ಮಾಡಿದ್ದರೂ ಯಾಕೆ ಒಬ್ಬ ಪುಟ್ಟಣ್ಣನ ರೀತಿ ಹೆಸರು ಮಾಡಕ್ಕೆ ಆಗಲಿಲ್ಲ.

ರವಿ : ನೋಡಿ... ಆಕಾಶದಲ್ಲಿ ನಕ್ಷತ್ರಗಳು ಲಕ್ಷಾಂತರ. ಚಂದ್ರ ಒಬ್ನೇ. ಸೂರ್ಯ ಒಬ್ನೇ. ಅದು ಅವರವರು ಪಡೆದುಕೊಂಡು ಬಂದ ಯೋಗ. ಆಗಿನ ಕಾಲ ಹಾಗಿತ್ತು. ತ್ರಿವೇಣಿ ಕಾದಂಬರಿ, ಕಣ್ಣೀರು ಕಲ್ಪನಾ, ಆರತಿ ಎಲ್ಲವೂ ಕೂಡಿಕೊಂಡು ಬಂದಿತ್ತು. ಪುಟ್ಟಣ್ಣ ಗೆದ್ದ. ಇವತ್ತು ಯಾರು ಕೇಳ್ತಾರೆ ಪುಟ್ಟಣ್ಣನ್ನ? ಯಾರಿಗೆ ಬೇಕು ಆ ಭಾವಾತಿರೇಕಗಳು ? ಈಗ ಬದುಕಿದ್ರೆ ಪ್ರತಿದಿನಾ ನೇಣು ಹಾಕಿಕೊಳ್ತಾ ಇದ್ದ ಪುಟ್ಟಣ್ಣ. ಕೊನೆಕೊನೆಗೆ ಏನಾಯ್ತು? ಯಾವ ಚಿತ್ರ ಸಿಕ್ತು? ಎಂಥಾ ಬದುಕು ಸಿಕ್ತು? He was a shattered soul. ಅವನು ಈಗಿಲ್ಲ ಅಂತ ನಾನು ಮಾತಾಡ್ತಾ ಇಲ್ಲ. ಅವನ ಎದುರಿಗೇ ಈ ಮಾತುಗಳನ್ನ ಹೇಳಿದೀನಿ. 'ಶರಪಂಜರ'ದ ಹಾಡುಗಳನ್ನೆಲ್ಲ ಕಿತ್ತು ಹಾಕಿ. ಏನು ಉಳಿಯತ್ತೆ ಆ ಸಿನೆಮಾದಲ್ಲಿ? ನನ್ನ 'ಅರಿಶಿನ ಕುಂಕುಮ' ಅವನ 'ಗೆಜ್ಜೆಪೂಜೆ' ಒಂದೇ ಕಾಲದ ಚಿತ್ರಗಳು. ಗೆಜ್ಜೆಪೂಜೆ ಆಗ ಗೆಲ್ತು. ಏನು ಮಾಡಕ್ಕೆ ಆಗತ್ತೆ? All in the game. ಚರಿತ್ರೆ ಈ ವಿಷಯದಲ್ಲಿ ಭಾಳಾ ಕ್ರೂರಿ. ಎಷ್ಟೋ ಜನಕ್ಕೆ ಪುಟ್ಟಣ್ಣನಿಗಿಂತ ಲಕ್ಷ್ಮೀನಾರಾಯಣ Better Director ಅಂತಾ ಗೊತ್ತು. ಗುರ್ತಿಸಿದರೆ. ಆದರೂ ಪುಟ್ಟಣ್ಣನ ಹೆಸರೇ ನಿಲ್ತಿತ್ತೆ. ನಾನೂ ಬೇಕಾದಷ್ಟು ಜನಕ್ಕೆ indtroduce ಮಾಡ್ದೆ. Support ಮಾಡ್ದೆ. ಅವರೆಲ್ಲ ನನಗಿಂತ ಮುಂದೆ ಹೋದರು. I don't care. ಪ್ರೈಮರಿ ಸ್ಕೂಲ್ ಮೇಷ್ಟ್ರು ಎಲ್ಲಿ ರಿಟೈರ್ ಆಗ್ತಾರೆ ಹೇಳಿ ? ಶಿಷ್ಯರು ಮುಂದೆ ಮುಂದೆ ಹೋಗ್ತಾರೆ ಅಂದ್ರೆ ಪ್ರೈಮರಿ ಶಾಲೆ ಮೇಷ್ಟ್ರು ಹಾಗೆ ಹೋಗಕ್ಕೆ ಆಗತ್ತೇನು ? ನನಗೆ ಸಂಪೂರ್ಣ ತೃಪ್ತಿ ಇದೆ. ಸುಖ ಇದೆ. ಸಮಾಧಾನ ಇದೆ.

ವಿ.ವಾ : ನಾವೆಲ್ಲ... ಅಂದರೆ ನಿಮ್ಮ ಅಭಿಮಾನಿಗಳೆಲ್ಲ ನಿಮ್ಮನ್ನ ಒಂದು ಹಾಡಿನ ಜೊತೆ ಸಮೀಕರಿಸಿಕೊಂಡೆ ಮಾತಾಡಿಕೊಳ್ತಾ ಇರ್ತೀವಿ. ''ಸೂರ್ಯಂಗೂ ಚಂದ್ರಂಗೂ ಬಂದಾರೆ ಮುನಿಸು''

ರವಿ : (ನಗುತ್ತಾ) ಹೌದು. ಇವತ್ತಿಗೂ... 'ಮೂಡಲಮನೆ' ದಿನಗಳಲ್ಲೂ ನನ್ನನ್ನ ಜನ ಹಾಗೇ ಗುರ್ತಿಸೋದು! ಮೊದಲಿಂದ್ಲೂ ನನಗೆ ಹಾಡುಗಾರನಾಗಬೇಕೂಂತ ಆಸೆ ಇತ್ತೂ ಅಂತ ಹೇಳಿದ್ನಲ್ಲ... ಆಗ... ಏನಾಯ್ತು ಅಂದ್ರೆ...

(ನಮ್ಮ ಸಂದರ್ಶನದ ಉದ್ದಕ್ಕೂ ರವೀ ಯವರಿಗೆ ಅನೇಕಾರು ಟೆಲಿಫೋನ್ ಕರೆಗಳು ಬರ್‍ತಾನೇ ಇದ್ದವು. ರಾಜ್ಯೋತ್ಸವ ಪ್ರಶಸ್ತಿಗಾಗಿ ಅಭಿನಂದನೆಗಳು... ಇತ್ಯಾದಿ. ಆದರೆ ಈ ಹಂತದಲ್ಲಿ ಬಂದ ಕರೆ ಅವರಿಗಾದ್ರೂ, ನಾನೂ ಮೈಯೆಲ್ಲ ಕಿವಿಯಾದೆ! ರವೀ ಮಾತುಗಳು ಮಾತ್ರ ಕೇಳಿಸ್ತಾ ಇದ್ವು. ಆ ಕಡೆಯ ದನಿಯಾಗಲೀ, ರೂಪವಾಗಲೀ ನನ್ನ ಪಾಲಿಗಿಲ್ಲ. ಕರೆ ಬಂದಿದ್ದು ಕನ್ನಡದ ಖ್ಯಾತ ನಟಿ ಸರೋಜಾದೇವಿ ಇಂದ. ಗೊತ್ತಲ್ಲ... ರವೀ ಮಾತಾಡ್ತಾನೇ ಇದ್ರು. ನನಗೆ... ''ಏನೋ... ಎಂತೋ... ಝುಮ್ಮೆಂದಿತು ತನುವು!'' ''ತೇರೀ ಪ್ಯಾರೀ ಪ್ಯಾರೀ ಸೂರತ್‌ಕೋ... ಕಿಸೀಕಿ ನಜ಼ರ್ ನಾ ಲಗೇ'' ಎಲ್ಲ ಒಂದರ ಹಿಂದೆ ನೆನಪಾಗತೊಡಗಿದವು....)

ಸರೋಜಮ್ಮಂದು ಫೋನು... ಅಂದರೆ ನಮ್ಮ ಸರೋಜಾದೇವಿ...

ವಿ.ವಾ. : (ಮನಸ್ಸಿನಲ್ಲೇ) ಹಾಯ್... 'ಅಂಕದ ಪರದೆ ಜಾರಿದ ಮೇಲೆ...'

ರವಿ : Playback singer ಆಗಬೇಕು ಅನ್ನೋ ಆಸೆ ಸರಿಯಾಗಿ ಫಲಿಸಲೇ ಇಲ್ಲ. ಆದರೂ ೧೫-೧೬ ಹಾಡು ಹೇಳಿದೀನಿ. 'ಯೌವನದ ಹೊಳೆಯಲ್ಲಿ, ಇಲ್ಲೇ ಸ್ವರ್ಗ ಇಲ್ಲೇ ನರಕ ಇತ್ಯಾದಿ...' ಆಗ ಪುಟ್ಟಣ್ಣ ಚಿತ್ರದುರ್ಗದಲ್ಲಿ ನಾಗರಹಾವು ಸಿನೆಮಾದ ಹಿಂದಿ ವರ್ಷನ್ ತೆಗೀತಾ ಇದ್ದ. ನಾನೂ, ವ್ಯಾಸರಾವ್, ವಿಜಯಭಾಸ್ಕರ್ ಎಲ್ಲಾ ಅಲ್ಲೇ ಇದ್ವಿ... ವಿಜಯಭಾಸ್ಕರ್ ತುಂಬಾ catchy tune ಒಂದು ಮಾಡಿದ್ರು. ಆ ಹಿಂದಿ ಕಲಾವಿದರು... ರಿಷಿ ಕಪೂರ್ ಮುಂತಾದವರೆಲ್ಲ... ''ಅರೇ... ಕಿತ್ನಾ ಅಚ್ಛಾ ಬನಾಯಾ ಹೈ'' ಅಂತಾ ಹೊಗಳ್ತಾ ಇದ್ರು. ನನಗೆ 'ಶುಭಮಂಗಳಾ' ಯಾವಾಗ ರಿಲೀಸ್ ಆಗುತ್ತೋ.. ನಾನು ಯಾವಾಗ ಆ ಹಾಡನ್ನ ಕೇಳ್ತೀನೋ ಅಂತ ತುಂಬ ತವಕ! ರಿಕಾರ್ಡಿಂಗ್ ಮುಗಿದ ಮೇಲೆ ಎಲ್ಲರೂ congrats ಹೇಳೋರೆ. ಅದೇ ಸಮಯಕ್ಕೆ ಸರಿಯಾಗಿ ರಾಜ್‌ಕುಮಾರ್ ಅವರ 'ಎಮ್ಮೆ' ಹಾಡೂ ಬಂದಿತ್ತು. ಜನಗಳಿಗೆ ಈ ಎರಡೂ different voiceಗಳು ತುಂಬ ಇಷ್ಟವಾದ್ವು. ಇವತ್ತಿಗೂ... ಎಲ್ಲ ಕಡೆ... ಅಂದ್ರೆ... ಇಂಗ್ಲೆಂಡ್ ಪ್ರವಾಸದಲ್ಲೂ... ''ಸೂರ್ಯಂಗೂ ಚಂದ್ರಂಗೂ...'' ಹಾಡಿಗೇ ಡಿಮ್ಯಾಂಡ್ ಇರೋದು ! ಅದೊಂದು ನನ್ನ ಅದೃಷ್ಟದ ರೇಖೆ.

ವಿ.ವಾ. : ಈಗ 'ಮೂಡಲಮನೆ'... ಆದರೆ... ಇದಕ್ಕೂ ಮೊದಲು... ನಿಮ್ಮ future plansಗಳ ಬಗ್ಗೆ ಏನಾದ್ರೂ ಹೇಳಿ... ಮೂಡಲಮನೆ ಕೊನೇಗಿದ್ಲಿ.

ರವಿ : 'ಹೆಳವನಕಟ್ಟೆ ಗಿರಿಯಮ್ಮ'. ಕನ್ನಡದ ಮೀರಾ ಅವಳು. ಇವತ್ತಲ್ಲ ನಾಳೆ ಆ ಸಿನೆಮಾ ಮಾಡೇ ತೀರ್ತೀನಿ... ಚಿಂದೋಡಿ ಬಂಗಾರೇಶ್ ಅನ್ನೋರು ಇದರ ಬಗ್ಗೆ

ಸುಮಾರು ೮ ವರ್ಷಗಳ ಹಿಂದೆ ಐಡಿಯಾ ಕೊಟ್ರು... ಆಗಲೇ ತುಂಬ ಹಾಡುಗಳನ್ನು ರೆಕಾರ್ಡ್ ಮಾಡಿಬಿಟ್ಟಿದೀನಿ. All... All... remarkable songs. ಪಿ. ಬಿ. ಶ್ರೀನಿವಾಸ್ ಸಂಗೀತ ನಿರ್ದೇಶನ ಮಾಡಿದ್ದಾರೆ... ಹಾಡುಗಳನ್ನ ಬರೆದಿದಾರೆ. ನಾನೂ-ಅವರೂ ಬಾಳಾ ಆತ್ಮೀಯರು. ಹೋಗೋ-ಬಾರೋ ಫ್ರೆಂಡ್ಸು.. ಬಾಳಾ ದಿನಗಳ ಹಿಂದೆ... ಮದ್ರಾಸಿನ ಸ್ವಪ್ನ ಹೋಟೇಲಿನಲ್ಲಿ... ರಾತ್ರಿ ತುಂಬ ಹೊತ್ತು ನಾನು – ಪಿ. ಬಿ. ಮಾತಾಡ್ತಾನೇ ಇದ್ವಿ... ಹೋಟೇಲಿನ ಬಾಗಿಲೂ ಮುಚ್ತು. ಬೀಚ್‌ಗೆ ಬಂದ್ವಿ... ಅಲ್ಲೂ ಹರಟೆ ಹೊಡೆದ್ವಿ... ಮಾತಾಡ್ತಾ ಮಾತಾಡ್ತಾ... ''ನಾನೂ-ನೀನೂ ಜೊತೆಗಿದ್ರೆ... ಕಾಲ ಹೋಗಿದ್ದೇ ಗೊತ್ತಾಗಲ್ಲ'' ಅಂದ... ಕೊನೆಗೆ ಅದನ್ನೇ ಪಲ್ಲವಿ ಮಾಡಿ ಅರಿಶಿನ ಕುಂಕುಮದಲ್ಲಿ ಹಾಡಿಸಿದೆ... ''ನಾನೂ ನೀನೂ ಜೊತೆಯಿರಲು... ಕಾಲದ ನೆನಪೇ ಬೇಕಿಲ್ಲ..'' P.B. is a great human being... ''ಪಂಕಜನೇತ್ರೆ... ಮಧುಮಯ ರಾತ್ರಿ'' ಇದೂ ಅವರೇ ಬರೆದಿದ್ದು! 'ಗಿರಿಯಮ್ಮ'ನಿಗಾಗಿ ಅವರು ಕಂಪೋಸ್ ಮಾಡಿರೋ ಹಾಡುಗಳನ್ನ ಕೇಳಬೇಕು ನೀವು. ತುಂಬ ಜನಗಳ ಕೈಲಿ ಹಾಡ್ಸಿದೀನಿ. ಪಿ. ಬಿ., ಛಾಯಾ, ಜಾನಕಿ, ಸುಶೀಲ, ವಾಣೀಜಯರಾಂ, ಅನುರಾಧಾ ಪೌದ್ವಾಳ್, ಪರವೀನ್ ಸುಲ್ತಾನ, ಜೇಸುದಾಸ್, ಎಸ್. ಪಿ. ನನ್ನ ಗೆಳೆಯರು, ಆ ಹಾಡುಗಳನ್ನ ಕೇಳಿರೋರು ಹೇಳ್ತಾರೆ... ವಿಜಯಭಾಸ್ಕರ್ ಹಾಡುಗಳ ಪದ-ಪದಗಳಿಗೆ ರಾಗ ಜೋಡಿಸಿದರೆ.. ಪಿ. ಬಿ. ಶ್ರೀನಿವಾಸ್ ಅಕ್ಷರ-ಅಕ್ಷರಗಳಿಗೆ ರಾಗ ಜೋಡಿಸ್ತಾರಂತೆ! ಬಾಳಾ ಚೆನ್ನಾಗಿ music ಮಾಡಿದಾರೆ. ''ತೂಗಿರೇ ರಂಗನ ತೂಗಿರೇ'' ಹೊನ್ನು ತಾ ಗುಬ್ಬಿ. ಹಿಂದೀಲೂ ಬರೆದು ಪರವೀನ್ ಸುಲ್ತಾನಾ ಕೈಲಿ ಹಾಡ್ಸಿದಾರೆ. 'ತೇರೆ ದರುಷನ್ ಕಬ್ ಮೈ ಪಾವೂ..' 'ಗಿರಿಯಮ್ಮ' ಚಿತ್ರ should be a success.

ವಿ.ವಾ. : ಕನ್ನಡ ಚಿತ್ರರಂಗದಲ್ಲಿ ಗಂಭೀರವಾದ ವಿಮರ್ಶೆಗಳಿವೆಯಾ...?

ರವಿ : ಇಲ್ಲ, ಆದ್ರೆ ಇರಬೇಕು. ಚಿತ್ರ ತೆಗೆಯೋದು ಎಷ್ಟು ಕಷ್ಟ ಅಂತ ಗೊತ್ತಿರಬೇಕು. ಇಲ್ಲಿಯ ಆರ್ಥಿಕ ಪರಿಸ್ಥಿತಿ... Infrastructure.. market ಎಲ್ಲ ಗೊತ್ತಿರಬೇಕು. ಗಂಗಾನದೀನ್ನೂ... ನೇತ್ರಾವತೀನ್ನೂ ಹೋಲಿಸೋದಲ್ಲ. ಗಂಗಾನದಿಗೆ ಬೇಸಿಗೇಲೂ ಹಿಮ ಕರಗಿ ನೀರು ಸಿಕ್ಕತ್ತೆ. ಆದರೆ ಈ ಕಡೆ ನದಿಗಳಿಗೆ water source ಯಾವ್ದು? ನಾವೂ ನಿಮ್ಮ ಹಾಗೆ ಕಷ್ಟಸುಖ, ಉಪ್ಪುಖಾರ, ಸಾಲಸೋಲ, ರೋಗರುಜಿನಗಳ ಮಧ್ಯೇನೇ ಚಿತ್ರ ತೆಗೆಯೋರು. ತಪ್ಪುಗಳಾಗ್ತವೆ. ಒಳ್ಳೆ pointsನ್ನ highlight ಮಾಡಿ! ಯಾಕಾಗಲ್ಲ? Hollywood ಚಿತ್ರಗಳ ಜೊತೆ ನಮ್ಮ ಚಿತ್ರಗಳನ್ನ ಹೋಲಿಸಿದ್ರೆ ಹೇಗೆ ಸ್ವಾಮಿ? ಟೀಕೆ ಮಾಡಬೇಕಾದ್ರೂ ಒಂದು ಅರ್ಹತೆ ಬೇಡ್ವೆ. ಪುಟ್ಟಣ್ಣನ ಚಿತ್ರ 'ಮಸಣದ ಹೂ'ನ್ನ ನಾನು ಮುಗಿಸಿಕೊಟ್ಟೆ ವಿ.ಎನ್. ಸುಬ್ಬರಾವ್ ವಿಮರ್ಶೆ ಬರದ್ರು ''ಚಿತ್ರದ ಮೊದಲರ್ಧವನ್ನೇ ತೆಗೆದವರು ಉಳಿದರ್ಧವನ್ನೂ ತೆಗೆದಿದ್ರೆ...'' ಅಂತ. ಆ ಸಿನೆಮಾಲಿ ನಾನು ಷೂಟ್ ಮಾಡಿದ್ಯಾವ್ದು, ಪುಟ್ಟಣ್ಣ ಷೂಟ್ ಮಾಡಿದ್ಯಾವ್ದು ಅಂತ ನಿಮ್ಗೆ ತೋರಿಸಕ್ಕಾಗತ್ತಾ? ಮೊದಲರ್ಧ-ಎರಡನೇ ಅರ್ಧ ಅಂತ ಸಿನೆಮಾ ತೆಗೆಯಕ್ಕೆ ಆಗತ್ತಾ. You don't know the grammar of cinema. ಇಂಥಾ ವಿಮರ್ಶೆಗಳಿಂದಲೇ ಪೇಪರ್ ಟೈಗರ್‌ಗಳು ಹುಟ್ಟೋದು. ಪುಟ್ಟಣ್ಣ ಹಾಳಾಗಿದ್ದೂ ಹೀಗೇ. He never cared for small screen. 'You can tell whatever you want to your audience with a couple of beautiful songs' ಅಂತಾ ಪುಟ್ಟಣ್ಣ ಹೇಳ್ತಾ ಇದ್ದ. He was wrong. ಚಿತ್ರಗಳು ಸಾರ್ವಕಾಲಿಕವಾಗಿರಬೇಕು. ಶಾಂತಾರಾಮ್ ಚಿತ್ರಗಳನ್ನಾಗಲೀ, ಗುರುದತ್ ಚಿತ್ರಗಳನ್ನಾಗಲಿ ಹಾಗೆ ಬಿಸಾಡೋದಕ್ಕಾಗತ್ತಾ?

ವಿ.ವಾ. : ೪೫ ವರ್ಷಗಳ ಅನುಭವ... ತಪಸ್ಸು ನಿಮ್ಮ ಚಿತ್ರ-ಜೀವನದಲ್ಲಾದ್ರೆ... ಒಂದೆರಡು ವರ್ಷಗಳ 'ಮೂಡಲಮನೆ'ಯ ದೇಶಮುಖನ ವಿಚಿತ್ರ-ಜೀವನ ಇನ್ನೊಂದೆಡೆ. ಈ ಧಾರಾವಾಹಿ ನಿಮಗೆ ಅಪಾರವಾದ ಜನಪ್ರಿಯತೆಯನ್ನ ನೀಡಿದೆ. ೪೫ ವರ್ಷ ದೊಡ್ಡತೆರೆಯ ಮರೆಯಲ್ಲಿದ್ದವರು ಈ ೨ ವರ್ಷಗಳಲ್ಲಿ ಕಿರುತೆರೆಯ ಮೇಲೆ ಮೂಡಿದ್ದೀರಿ. ಮನೆಮಾತಾಗಿ ಹೋಗಿದ್ದೀರಿ. ನಿಮ್ಮ acting capabilitiesನ್ನ ತುಂಬ ಚೆನ್ನಾಗಿ ದುಡಿಸಿಕೊಳ್ತಾ ಇದ್ದಾರೆ. ಓಹ್... ನಿಮ್ಮದಲ್ಲದ ನಿಮ್ಮ ಉತ್ತರ ಕನ್ನಡ ಭಾಷೆಯ ಡೆಲಿವರಿ, ನಿಮ್ಮ ನಡಿಗೆ, ನಿಮ್ಮ ಗಡ್ಡ, ನಿಮ್ಮ ದನಿ, ನಿಮ್ಮ ಕಣ್ಣುಗಳು, ಅವುಗಳ ಪಕ್ವ-ದೃಷ್ಟಿ ವಾಡೆಯ ಜೀವನವನ್ನ ನೀವು ಗ್ರಹಿಸಿರುವ ರೀತಿ ಎಲ್ಲವೂ ಅಮೋಘ. ಹೇಗಾಯ್ತು ಇದು?

ರವಿ : (ಯೋಚಿಸಿ) ಹೇಗಾಯ್ತು?... ಹೇಗಾಯ್ತು ಅಂದ್ರೆ... It just happened. ಇನ್ಯಾವ... explanation ಕೂಡ ಸಾಧ್ಯ ಇಲ್ಲ. ಐದು ದಶಕಗಳ ಕಾಲ ಚಿತ್ರರಂಗದಲ್ಲಿ ಬದುಕಿದೀನಿ... ಆದರೆ 'ಮೂಡಲಮನೆ' ಗಳಿಸಿಕೊಟ್ಟ ಜನಪ್ರಿಯತೆ, ದುಡ್ಡು, ತೃಪ್ತೀನೇ ಬೇರೆ ಬಗೆಯದ್ದು. ವೈಶಾಲಿಯವರು ನನ್ನನ್ನ 'ಗೃಹಭಂಗ'ದಲ್ಲಿ ನೋಡಿ ನಿರ್ಧಾರ ಮಾಡಿದ್ದು. ಆದರೆ ಆಕೆಗೆ ನನ್ನ ಉತ್ತರ ಕನ್ನಡ ಭಾಷೆ ಬಗ್ಗೆ ಸ್ವಲ್ಪ ಅನುಮಾನ ಇತ್ತು. ಅದು ನಿರ್ದೇಶಕರಿಗೆ ಸಂಬಂಧಿಸಿದ್ದು. ನಾನು ಹಾಡ್ತಾ ಇರ್‍ಲಿಲ್ಲ, ನನ್ನ ಕೈಲಿ ಹಾಡಿಸಿದರು. ಹಾಗೇ ಡೈರೆಕ್ಟರ್ ನಮ್ಮ ಕೈಲಿ ಇಂಥವನ್ನ ಮಾಡಿಸಬೇಕು. Talent ಇತ್ತು, God given. ನಾನು ರವೀ ಆಗಿ ಇರೋದೇ ಇಲ್ಲ, ವಾಡೆ ಒಳಗೆ ಹೋದೆ ಅಂದ್ರೆ ದೇಶಮುಖನಾಗೇ ಇರ್ತೀನಿ. ವಾಡೆಯ ಯಜಮಾನನ ಗತ್ತು, ಶೀವಿ, ಪಕ್ವತೆ, ವಿನಯ, ಆರ್ದ್ರತೆ ಎಲ್ಲವನ್ನೂ ಮೈಗೂಡಿಸಿಕೊಂಡು ಅಭಿನಯ ನೀಡಕ್ಕೆ ಪ್ರಯತ್ನಿಸಿದೆ. ಅಪಾರವಾದ ಯಶಸ್ಸು ಸಿಕ್ತಾ ಇದೆ. ಗೌರವ ಸಿಕ್ತಾ ಇದೆ. ಜನಪ್ರಿಯತೆ ಇದೆ. ಮಾಸ್ಟರ್ ಹಿರಣ್ಣಯ್ಯನ ಥರದೋರು ಹೇಳ್ತಾರೆ – ''ಅಬ್ಬಬ್ಬ... ಏನಯ್ಯಾ ನಿನ್ನ Acting ಊ... ಎಲ್ಲಿಟ್ಟಿದೆಯ್ಯಾ ಈ Talentನ್ನಾ?'' ನನ್ನನ್ನ ಈಗ ಯಾರೂ ರವೀ ಅಂತ ಗುರ್ತಿಸೋದೇ ಇಲ್ಲ, ದೇಶಮುಖ ಅಂತಾರೆ, ಮೂಡಲಮನೆ ಅಜ್ಜ ಅಂತಾರೆ. ಈ ಒಂದು ವರ್ಷದ Popularityನ್ನೇ ನನ್ನ ಕೈಲಿ ತಡಕೊಳ್ಳಕ್ಕೆ ಆಗ್ತಾ ಇಲ್ಲ, ರಾಜಕುಮಾರ್ ಅವರಿಗೆ ಕೇಳ್ದೆ, ನೇರವಾಗಿ ''ಅಣ್ಣಾವ್ರೇ... ೫೦ ವರ್ಷ ಈ popularityನ ಹೇಗೆ ತಡಕೊಂಡಿದ್ದೀರಿ?'' ಅಂತ. 'ಮೂಡಲಮನೆ'ಯಿಂದ ಜನಗಳೆಲ್ಲ ೯.೩೦ಗೆ ಮನೆಗೆ ಬರೋ ಹಾಗಾಗಿದೆ. ಒಟ್ಟಿಗೆ ಕುಳಿತು ಊಟ ಮಾಡೋ ಹಾಗಾಗಿದೆ. ಮತ್ತೆ ಕೌಟುಂಬಿಕ ಜೀವನ ಸಾಧ್ಯ ಆಗ್ತಾ ಇದೆ! ಇದಕ್ಕಿಂತ ಇನ್ನೇನು ಸಾಧನೆ ಬೇಕು? ನಾನು ರಾಘವೇಂದ್ರ ಸ್ವಾಮಿಗಳ ಥರ ಕಾಣಿಸ್ತೀನಂತೆ! ಅಪ್ಪಾ, ಕಾಣಿಸ್ತೀನಿ ಅಷ್ಟೇ; ಆದರೆ ಅದು ಅಲ್ಲ. (ನಗು) ೨೨೪ನೇ ಎಪಿಸೋಡ್ ಇಂದ ೨೫೮ನೇ ಎಪಿಸೋಡ್‌ವರೆಗೂ 'ದೇಶಮುಖ' ಇರ್‍ಲಿಲ್ಲ, ಜನ ಮತ್ತೆ ಕರಕೊಂಡು ಬಂದರು! ವೈಶಾಲಿಯವರು ಇಲ್ಲದಿದ್ದರೂ ನಾನು ಇನ್ನೂ ಇದೀನಿ. ರವಿಶಂಕರ ಗುರೂಜಿ, ದೈವಜ್ಞ ಸೋಮಯಾಜಿ, ಮಠದ ಸ್ವಾಮೀಜಿಗಳೆಲ್ಲ 'ಮೂಡಲಮನೆ' ನೋಡಕ್ಕೆ ಶುರು ಮಾಡಿದಾರೆ.



ಮೊಮ್ಮಗಳು ಅಮ್ಮುಲುವೊಂದಿಗೆ ರವೀ ದಂಪತಿಗಳು

ವಿ.ವಾ. : ಅಂದ ಹಾಗೆ... ನೀವು ಮನೆ ಕಟ್ತಾ ಇದೀರಂತೆ... 'ಮೂಡಲಮನೆ' ಅಂತಾನೆ ಹೆಸರು...

ರವಿ : No no... ನಾನು ಯಾಕೆ ಸಾರ್ 'ಮೂಡಲಮನೆ' ಅಂತ ಹೆಸರಿಡಲಿ? ಅದೇನು ನಂಗೆ ಲಕ್ಷಗಟ್ಟಲೆ ಕೊಡ್ತಾ ಇದ್ಯಾ? ದುಡ್ಡು ತಂದಿದೆ, ಹೆಸರು ತಂದಿದೆ. ಇಲ್ಲ ಅಂತ ಹೇಳಲ್ಲ. ಮನೆಗೋಸ್ಕರ ವಿಜಯ ಬ್ಯಾಂಕ್‌ನಲ್ಲಿ ಸಾಲ ಮಾಡಿದೀನಿ ಸ್ವಾಮಿ. ನನ್ನ ಮನೆಗೆ ಶುದ್ಧ ಕನ್ನಡ ಹೆಸರು – 'ಇಂಗಡಲು' ಅಂತ ಕರೀಬೇಕೂಂತ ಇದೀನಿ. ಕ್ಷೀರಸಮುದ್ರ ಅನ್ನೋದೇ ಕನ್ನಡದಲ್ಲಿ ಹಾಗಾಗಿದೆ. ಮೊದಲಲ್ಲಿ ನನ್ನ ಗುರುಗಳು ಅಂತ ಹೇಳಿದ್ನಲ್ಲ, ಭಾರತಿಗಳು ಅಂತ? ಅವರು ಶಂಕರಾಚಾರ್ಯರ ಶ್ಲೋಕಗಳನ್ನ ಕನ್ನಡಕ್ಕೆ ಮಾಡಿದಾರೆ. ಅದರ ಪೈಕಿ ಒಂದು ಹೀಗಿದೆ :

*''ಇಂಗಡಲ ಮನೆಯವನೆ*
*ಕರದೊಳಭಂಗ ಚಕ್ರವ ಪಿಡಿದು ಮೆರೆವನೆ*
*ಕಂಗೊಳಿಪ ನಾಗೇಂದ್ರ ಪಡೆವೆಳೆ ಕಾಂತಿರಂಜಿತನೆ*
*ಮಂಗಳಪ್ರದಯೋಗಿ*
*ಭವಸಂಗಸಾಗರಪೋತ ನಿತ್ಯನೆ*
*ತುಂಗನರಹರಿ ಕರವ ಪಿಡಿಯುತಲೆನ್ನನುದ್ಧರಿಸು॥*

ನನ್ನನ್ನು ಉದ್ಧರಿಸಲಿ... ಎಲ್ಲರನ್ನೂ ಉದ್ಧರಿಸಲಿ... ನಮಸ್ಕಾರ.

ವಿಜಯವಾಮನ
'ಗುಲ್ ಮೊಹರ್, ನಂ.೧, ಕೆ.ಎಚ್.ಬಿ. ಕಾಲೋನಿ, ಗಾಂಧಿನಗರ, ಸಾಗರ-೫೭೭ ೪೦೧, ಶಿವಮೊಗ್ಗ ಜಿಲ್ಲೆ




# ಯೇನಕೇನ (ದುರ್)ದಾನ...

ನೀವು ದಕ್ಷಿಣ ಕನ್ನಡದ ಯಾವುದೇ ಪ್ರೇಕ್ಷಣೀಯ ಯಾತ್ರಾ ಸ್ಥಳಗಳಿಗೆ ಹೋಗಲು ನಗರ ಪ್ರದೇಶ ಬಿಟ್ಟು ಗ್ರಾಮೀಣ ರಸ್ತೆಗಳಲ್ಲಿ ಹೊರಟಿರೋ ಸಾಲು ತೆಂಗಿನ ಮರಗಳು, ನೀರು ತುಂಬಿದ ತೋಡುಗಳು, ಗದ್ದೆಗಳು ಎದುರಾಗತೊಡಗುತ್ತವೆ. ಗದ್ದೆಯಂಚಿನ ಹಂಚಿನ ಮನೆಗಳು ಇಲ್ಲಿಯ ಮಳೆಗೆ ಬೆವರಿಗೆ ಎರಡಕ್ಕೂ ಹೊಂದಿಕೊಳ್ಳುವ ದುಡಿಮೆಗಾರರು ಸಿಗುತ್ತಾರೆ. ಬಯಲು ಸೀಮೆಯ ಹಾಗೆ ಕಣ್ಣು ಚಾಚಿದಲ್ಲೆಲ್ಲ ರಾಚುವ ಒಣ ಬಯಲಾಗಲೀ, ಮೈಲುಗಟ್ಟಲೆ ಕಾಡು ಕಳೆದ ಬಳಿಕವೇ ಒಂದು ಮನೆ, ಕಾಣುವ ಮಲೆನಾಡಿನ ವಿರಳ ಜನಸಂಖ್ಯೆಯಾಗಲೀ ಇಲ್ಲಿಲ್ಲ.

ಇಲ್ಲಿನ ಹೆಚ್ಚಿನ ಹಳ್ಳಿಗಳಿಗೆ ವಿದ್ಯುತ್ತು, ಶಾಲೆ, ಬ್ಯಾಂಕು, ಪೋಸ್ಟಾಫೀಸು, ಆಸ್ಪತ್ರೆಗಳಂಥ ಮೂಲ ಭೂತ ಸೌಕರ್ಯಗಳಿರುತ್ತವೆ. 'ಬೊಂಬಾಯಿಗೆ ಬಸ್ ಟಿಕೆಟ್ ಮಾಡಿಕೊಡಲಾಗುತ್ತದೆ' ಎಂಬ ಬೋರ್ಡು ತೀರಾ ಸಣ್ಣ ಚಾ ಅಂಗಡಿಯಲ್ಲೂ ಕಾಣುತ್ತಿರುತ್ತದೆ. ಯಕ್ಷಗಾನ, ಭೂತದ ಕೋಲ, ಕಂಬಳ, ತಾಳಮದ್ದಲೆ, ಕೋಳಿಕಟ್ಟ... ಗಳಂಥ ಹೇರಳ ಮನರಂಜನೆಯ ರಾತ್ರಿಯಿಡೀ ಶ್ರದ್ಧೆಯಿಂದ ನಿದ್ದೆಗೆಡು(ಡಿಸು)ವ ಆಚರಣೆಗಳು ವರ್ಷವಿಡೀ ನಡೆಯುತ್ತಿರುತ್ತವೆ. ಒಂದು ಮೈಲಿ ದೂರದಿಂದ ಯಾವುದಾದರೂ ಹಳ್ಳಿಗೆ ರಸ್ತೆಯ ಎರಡೂ ಕಡೆ ಟ್ಯೂಬ್ ಲೈಟ್ ಕಟ್ಟಿದ್ದರೋ ಅಲ್ಲೆಲ್ಲೋ ಬ್ರಹ್ಮಕಲಶೋತ್ಸವ, ಅನ್ನಸಂತರ್ಪಣೆ ನಡೆಯುತ್ತಿದೆಯೆಂದರ್ಥ. ರಸ್ತೆಗೆ ತಾಗಿ ಕಟ್ಟಲ್ಪಟ್ಟ ಬಸ್ ಶೆಲ್ಟರ್‌ಗಳಿಗೆ 'ಗುಲಾಬಿ ಶೆಡ್ತಿ ಅವರ ಮಕ್ಕಳ ಕೊಡುಗೆ', 'ಮಿಜಾರಗುತ್ತು ಅಪ್ಪಣ್ಣ ಹೆಗಡೆ ಅವರ ನೆನಪಿಗೆ' ಎಂಬ ತುಳುಗನ್ನಡ ಬೋರ್ಡುಗಳು ಕಾಣತೊಡಗುತ್ತವೆ. ಕೊರಗ ತನಿಯಪ್ಪನ ಕಾಣಿಕೆ ಡಬ್ಬಿ 'ಗುನಗಜ್ಜನ ಹುಂಡಿ' ಎಂಬ ಬಣ್ಣದ ಡಬ್ಬಿಗಳೂ ಅಲ್ಲಲ್ಲಿ ನಿಲ್ಲಿಸಲ್ಪಟ್ಟಿರುತ್ತವೆ.

ಅನ್ನದಾನ, ವಿದ್ಯಾದಾನಗಳಿಗೆ ಪ್ರಸಿದ್ಧವಾದ ಈ ಜಿಲ್ಲೆಯಲ್ಲಿ ಕೆಲ ಬಾರಿ 'ಯೇನಕೇನ ದಾನ'ದ ಉಮೇದು ಕೆಲವರಿಗೆ ತಲೆಗೇರಿಬಿಡುತ್ತದೆ. ಮಂಗಳೂರಿನ ಪ್ರಸಿದ್ಧ ಜವಳಿ ವ್ಯಾಪಾರಿಯೊಬ್ಬರು ತನ್ನ ಮೃತ ತಾಯಿಗೆ ಸದ್ಗತಿ ಕಾಣಿಸಲು ಇಂಥದೊಂದು ದಾನದ ಮಾರ್ಗ ಹಮ್ಮಿಕೊಂಡರು.

''ನಾಳೆ ಬೆಳಿಗ್ಗೆ ನಮ್ಮ ಜವಳಿ ಅಂಗಡಿಯಲ್ಲಿ ಪ್ರತಿ ಆಗಮಿಸಿದ ವ್ಯಕ್ತಿಗೂ ಒಂದು ಸೀರೆ ಒಂದು ಧೋತಿ ಉಚಿತವಾಗಿ ನೀಡಲಾಗುವದು. ಮೃತರ ಆತ್ಮಕ್ಕೆ ಶಾಂತಿ ದೊರೆಯಲು ಏರ್ಪಡಿಸಲಾದ ಈ ಪುಣ್ಯ ಕಾರ್ಯ ದಲ್ಲಿ ತಾವೆಲ್ಲರೂ ಪಾಲ್ಗೊಳ್ಳಬೇಕಾಗಿ ಪ್ರಾರ್ಥನೆ.'' ಸಾಕ್ಷರತೆಯಲ್ಲಿ ಮುಂಚೂಣಿ ಸ್ಥಾನ ಹೊಂದಿದ ಜನ ಪೇಪರಂತೂ ನಿತ್ಯ ಓದದಿರುತ್ತಾರೆಯೆ? ಓದಿದರು, ಓಡಿದರು!

ಪರಿಣಾಮ ಮಾರನೆಯ ದಿನ ಬೆಳಿಗ್ಗೆ ಅದೆಲ್ಲಿಂದ ಜನ ಜಮಾಯಿಸಿದರೋ ನಗರದ ಹೃದಯ ಭಾಗದಲ್ಲಿರುವವರಿಗೆಲ್ಲ ಹೃದಯವೇ ಸ್ತಂಭನ ವಾಗುವಂಥ ದೃಶ್ಯ ನಿರ್ಮಾಣವಾಯ್ತು. ವಾಹನಗಳೆಲ್ಲ ಬ್ಲಾಕ್, ಟ್ರಾಫಿಕ್ ಪೊಲೀಸರು ಕೈಚೆಲ್ಲಿದರು. ಬಟ್ಟೆ ಅಂಗಡಿ ಬಾಗಿಲು ತೆಗೆಯಲು ಒತ್ತಾಯ ಕೂಗಾಟ ಚೀರಾಟ. ಮಹಿಳೆಯರ ಪುರುಷರ ಸಮಾನತೆ ಬೇರೆ. ಒಂದು ಕಡೆ ಐಸ್‌ಕ್ರೀಂ ಪಾರ್ಲರ್, ಇನ್ನೊಂದು ಕಡೆ ಬೇಕರಿ. ಅವೆರಡಕ್ಕೂ ಅನಿರೀಕ್ಷಿತ ಧನಲಾಭ ಯೋಗ. ದಾನದ ಕರ್ತೃ ನಾಪತ್ತೆ.

ಜನಸಂದಣಿ ನಿಯಂತ್ರಿಸಲಾಗದೆ ಕೊನೆಗೂ ಪೊಲೀಸರ ಪ್ರವೇಶವಾಯ್ತು. ಎಲ್ಲರಿಗೂ ತಲಾ ಎರಡೆರಡು ಬೆತ್ತದ ಚಟಾರ್ ಮುಟ್ಟಿಸಿದಾಗ ಜನ ಓಡಲು ಶುರುವಾಯ್ತು. 'ಲಾಠೀ ದಾನ'ದ ಪುಣ್ಯ ಪ್ರದರ್ಶನ ಹಂಪನಕಟ್ಟೆಯಿಡೀ ರೋಮಾಂಚನ! ಬೆತ್ತದ ಉರಿ ತಾಳಲಾಗದೆ ಪಕ್ಕದ ಐಸ್‌ಕ್ರೀಂ ಪಾರ್ಲರ್ (ಐಡಿಯಲ್ ಸೇಫ್ ಪ್ಲೇಸ್!)ಗೆ ನುಗ್ಗಿದವರಿಗೆಲ್ಲರಿಗೆ ಮಾಲಿಕರು ತಂಪು ಪಾನೀಯ ತಂಪಾದ ಐಸ್‌ಕ್ರೀಂ ನೀಡಿ ಬಿಸಿಬಿಸಿ ರೊಕ್ಕ ಸಂಪಾದಿಸಿದ್ದನ್ನು ನೋಡಿ ಒಬ್ಬರು ''ಈ ಜನ ಇಬ್ಬರೂ ಸೇರಿ ದಾನದ ಹೆಸರಿನಲ್ಲಿ ಮ್ಯಾಚ್ ಫಿಕ್ಸಿಂಗ್ ಮಾಡಿದ್ದರೋ ಹೇಗೆ ಮಾರಾಯ್ರೆ'' ಎಂದು ಕೇಳಿದಾಗ ಇಲ್ಲ ಎನ್ನಲು ಯಾರಿಗೂ ಧೈರ್ಯ ಬರಲಿಲ್ಲ. ಗಂಡನಿಗೆ ಹೇಳದೆ ಪೇಟೆಗೆ ಬಂದ ಅನೇಕ ಹೆಂಗಸರು ಮನೆಗೆ ಹೋದ ಮೇಲೆ ಬೆತ್ತದ ಬಾಸುಂಡೆ ನೋಡಿ ''ಅವು ಎಂಚಿನ?'' ಎಂದು ಯಾರೋ ಕೇಳಿದ್ದಕ್ಕೆ ''ಬಸ್ಸು ವಾನಮನಿ ಸ್ಪೀಡು ಮಾರಾಯ್ರೆ'' ಇಳಿಯುವಾಗ ಜಜ್ಜಿ ಬಾಸುಂಡೆ ಬಂತು ಎಂದು ಹೇಳಿ ಕಾಲಿಗೆ ಎಣ್ಣೆ ಬೆಣ್ಣೆ ಹಚ್ಚಿ ಉಫ್ ಎಂದೂದಿಕೊಂಡರಂತೆ.

'ದುರ್ದಾನ ತೆಗೆದುಕೊಳ್ಳುವದು' ಎಂದರೆ ಇದೇ ಇರಬಹುದೆ? ಯಾರಾದರೂ ದಾನವೀರರನ್ನು ಕಂಡು ಕೇಳಬೇಕೆಂದುಕೊಂಡಿದ್ದೇನೆ.

**ಭುವನೇಶ್ವರಿ ಹೆಗಡೆ**

ಭುವನೇಶ್ವರಿ ಹೆಗಡೆ
ನಂ.೧೦೧, ರತ್ನಾ ಅಪಾರ್ಟ್‌ಮೆಂಟ್, ಕದ್ರಿಮಾರ್ಕೆಟ್
ಮಂಗಳೂರು - ೨



''ಕ್ರೀಡೆಯಲ್ಲಿ ರಾಜಕೀಯ ಹಸ್ತಕ್ಷೇಪ ಮತ್ತು ಅವಕಾಶ ವಂಚಿತರಾದ ಬಹುಸಂಖ್ಯೆಯ ಗ್ರಾಮೀಣ ಯುವ ಕ್ರೀಡಾಳುಗಳು'' ಎಂಬುದರ ಬಗ್ಗೆ ಓದುಗರಿಂದ ಸಂಕ್ಷಿಪ್ತ ಲೇಖನಗಳನ್ನು ಆಹ್ವಾನಿಸಲಾಗಿತ್ತು. ಪತ್ರಿಕೆಗೆ ಬಂದ ಪ್ರತಿಕ್ರಿಯೆಗಳಲ್ಲಿ ಎರಡನ್ನು ಇಲ್ಲಿ ಪ್ರಕಟಿಸಲಾಗಿದೆ. ಪ್ರತಿಕ್ರಿಯಿಸಿದವರೆಲ್ಲರಿಗೂ 'ಹೊಸತು' ವಂದನೆ ಸಲ್ಲಿಸುತ್ತದೆ.

— ಸಂಪಾದಕ

## ಕ್ರೀಡೆಯಲ್ಲಿ ರಾಜಕೀಯ ಹಸ್ತಕ್ಷೇಪ ಮತ್ತು ಅವಕಾಶ ವಂಚಿತರಾದ ಬಹುಸಂಖ್ಯೆಯ ಗ್ರಾಮೀಣ ಯುವ ಕ್ರೀಡಾಳುಗಳು

ರಾಜಕೀಯ ಹಸ್ತಕ್ಷೇಪ ಕ್ರೀಡೆಯಲ್ಲಿ ಮಾತ್ರವೇ ಅಲ್ಲ; ಎಲ್ಲ ಕ್ಷೇತ್ರಗಳಲ್ಲೂ ಮೈದಾಳಿಕೊಂಡಿದೆ. ಕ್ರೀಡೆಯ ಗೊತ್ತುಗುರಿಗಳನ್ನು ಸರಿದಾರಿಯಲ್ಲಿ ಕೊಂಡೊಯ್ಯಬಲ್ಲಂತಹ ಮುಂಚೂಣಿಯ ಮಹನೀಯರ ಸ್ಥಿತಿ ಗೊಂದಲದ ಗೂಡಾಗಿರುವುದು ತಿಳಿದಿರುವ ಸಂಗತಿಯಾಗಿದೆ. ಇನ್ನೂ ಅಧೋಗತಿಗೆ ಒಯ್ಯಬಲ್ಲಂತಹವರೆಂದರೆ ಕ್ರೀಡೆಯೇ ಗೊತ್ತಿರದ ರಾಜಕಾರಣಿಗಳು. ಇವರಲ್ಲಿ ನೈತಿಕ ಸಾಮರ್ಥ್ಯವಿರದ ಕಾರಣ ಹಾಗೂ ತಾತ್ವಿಕ ನೆಲೆಗಟ್ಟಿನ ಆಯಾಮವಿರದ ಕಾರಣ ಏನೆಲ್ಲ ಪ್ರಗತಿಪರ ಹೆಜ್ಜೆಗಳನ್ನೂ ವಿಗತಿಯತ್ತ ಕೈ ಮಾಡುವರು. ಕ್ರೀಡೆ ಎಂದರೆ, ಮನರಂಜನೆಯಲ್ಲ; ಅದೊಂದು ಸಾಂಸ್ಕೃತಿಕ ಸಮುಚ್ಚಯ. ಈಗ ನಮ್ಮಲ್ಲಿ ಕ್ರೀಡೆ ಎಂದರೆ, ಕ್ರಿಕೆಟ್ ಮಾತ್ರ. ಅಲ್ಲದೆ ಕ್ರಿಕೆಟ್ ಶ್ರೀಮಂತರ ಹಾಗೂ ಉಳ್ಳವರ ಸ್ವತ್ತಾಗುತ್ತಿರುವುದರಿಂದ ಗ್ರಾಮೀಣ ಯುವ ಪ್ರತಿಭೆಗಳಿಗೆ ಇದರಲ್ಲಿ ಅವಕಾಶವಿಲ್ಲ. ಹಾಗೆಯೇ ದೈಹಿಕ ಸಾಮರ್ಥ್ಯಾಧಾರಿತ ಮತ್ತು ಮಾನಸಿಕ ಸಮತೋಲನದ ಆಧಾರದ ಮೇಲೆ ಕ್ರೀಡಾಳುವನ್ನು ಆಯ್ಕೆ ಮಾಡುವುದು ನ್ಯಾಯಯುತವಾದದು. ವಾಮಮಾರ್ಗವನ್ನು ಹಿಡಿದು ರಾಜಕೀಯ ಚದುರಂಗದಾಟದಲ್ಲಿ ಗೆಲ್ಲುವವ ಸೋಲನ್ನನುಭವಿಸಿ ಹತಾಶನಾಗಿ ನಿರುತ್ಸಾಹದಿಂದ ಕಮರಿಹೋಗಬಹುದು. ಕಬಡ್ಡಿ, ವಾಲಿಬಾಲ್, ಕೋ-ಕೋ ಮತ್ತಿತರ ಗ್ರಾಮೀಣ ಆಟಗಳನ್ನು ಕೂಡ ಸೀಮಿತ ಅವಧಿಯಲ್ಲಿ ನಡೆಸಿ ವಂಚಿತರನ್ನಾಗಿ ಮಾಡುವ ಹುನ್ನಾರವೂ ಜರುಗುತ್ತದೆ. ವಿಶ್ವವಿದ್ಯಾಲಯ ಮಟ್ಟದಲ್ಲೂ ಸಹ ಹೆಚ್ಚಾಗಿ ಮೇಲ್ವರ್ಗದವರು ಇಲ್ಲವೇ ಅಸಮರ್ಥರೇ ಆಯ್ಕೆಯಾಗುವುದರಿಂದ ಬಹುಸಂಖ್ಯೆಯ ಗ್ರಾಮೀಣ ಯುವ ಕ್ರೀಡಾಳುಗಳು ಅವಕಾಶವಂಚಿತರಾಗುವುದು ಸರ್ವೇಸಾಮಾನ್ಯ. ಇದು ನಮ್ಮ ದೇಶದ ಕ್ರೀಡಾವಲಯದ ಅಷ್ಟಿಷ್ಟು ಸಾಧನೆಗಳಿಗೆ ಶೋಭೆ ತರುವುದಿಲ್ಲ.

**ವಿಫಲತೆಗೆ ಕಾರಣ**

೧. ತಾಯಿ-ತಂದೆಯರು ಮಕ್ಕಳ ಲಾಲನೆ-ಪೋಷಣೆಗಷ್ಟೆ ಮೀಸಲಾಗಿದ್ದು ಕ್ರೀಡಾ ಜಗತ್ತಿನ ಪರಿಚಯವಿಲ್ಲದಿರುವುದು.
೨. ಮಾರ್ಗದರ್ಶನಗೈಯುವ ಹಿರಿಯರು, ಗುರುಗಳು ಕೂಡ ಆಟಗಳ ಕಾರ್ಯಕ್ಷಮತೆ ಮತ್ತು ಅದರ ಸಾಧಕ-ಬಾಧಕಗಳನ್ನು ಪರಿಚಯಿಸದಿರುವುದು.
೩. ಯುವಜನ-ಕ್ರೀಡಾ ಇಲಾಖೆಯು ಸರಿಯಾದ ಯೋಜನೆಗಳನ್ನು ತಯಾರಿಸದಿರುವುದು.
೪. ಸರ್ಕಾರೇತರ ಸಂಘಟನೆಗಳು ಕೆಲವರಿಗಷ್ಟೆ ತರಬೇತಿ ನೀಡಿ ಗ್ರಾಮೀಣ ಪ್ರತಿಭೆಗಳಿಗೆ ತಣ್ಣೀರೆರಚುವುದು.
೫. ರಾಜಕೀಯ ಹಸ್ತಕ್ಷೇಪವನ್ನು ತಡೆಯಲು ದೈಹಿಕ-ಮಾನಸಿಕ ಸಮತೋಲನೆಯ ಕರಾರುವಾಕ್ಕು ತಪಾಸಣೆ ಇಲ್ಲದಿರುವುದು.
೬. ಯುವ ಜನರು ಗುಟಖಾ ಇತ್ಯಾದಿ ದುಶ್ಚಟಗಳಿಗೆ ಬಲಿಯಾಗುತ್ತಿರುವುದು.

**ಸಲಹೆಗಳು**

೧. ಪೋಷಕರು ತಮ್ಮ ಮಕ್ಕಳ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಕ್ರೀಡೆಯ ಮಹತ್ವವನ್ನು ಅರಿತು ಅನುಷ್ಠಾನಗೊಳಿಸುವುದು.
೨. ಸರ್ಕಾರ-ಸರ್ಕಾರೇತರ ಸಂಘಗಳು ಪಾರದರ್ಶಕತೆಯನ್ನು ಆಯ್ಕೆ ಪ್ರಕ್ರಿಯೆಯಲ್ಲಿ ಕಾಯ್ದುಕೊಳ್ಳುವುದು.
೩. ಗ್ರಾಮೀಣ ಭಾಗದಲ್ಲಿ ಶಿಬಿರಗಳನ್ನು ನಡೆಸುವುದು. ಶೇಕಡಾವಾರುವಿನಂತೆ ಯುವ ಪ್ರತಿಭೆಗಳಿಗೆ ಅವಕಾಶ ಕಲ್ಪಿಸುವುದು.
೪. ಕ್ರೀಡಾ ಜಗತ್ತು ಐಕ್ಯತಾಭಾವವನ್ನುಂಟುಮಾಡುವುದಲ್ಲದೆ ವಿಶ್ವಪ್ರಜ್ಞೆಯನ್ನು ಆ ನೆಲೆಯಲ್ಲಿ ಸೃಷ್ಟಿಸುವ ಸೃಜನಶೀಲ ಸಾಂಸ್ಕೃತಿಕ ಒಳನೋಟವನ್ನು ಗುರುತಿಸುವಂತಾಗಬೇಕು.

ಕ್ರೀಡೆಯಲ್ಲಿ ಕ್ರೀಡಾಳುವಿಗೆ ಸೋಲು-ಗೆಲುವು ಇರುತ್ತವೆ. ಆದರೆ ಗೆದ್ದವನ ಹುಮ್ಮಸ್ಸು ಇಮ್ಮಡಿಯಾಗುವುದು. ಸೋತರೆ ಛಲವಂತಿಕೆಯಿಂದ ಸಾಧನಾಶೀಲ ಪ್ರವೃತ್ತಿಯನ್ನು ಕಾಣಬಹುದು. ಹಾಗೆಯೇ ಲಿಂಗತಾರತಮ್ಯವನ್ನು ಗೌಣವಾಗಿಸಿ, ಸಮಾನತೆಯನ್ನು ಎತ್ತಿ ಹಿಡಿಯಬೇಕು. ರಾಜಕೀಯ ಕರಿನೆರಳಿರದೆ, ಕಾಯುವ ಕ್ರಿಯಾಶೀಲ ಭೂಮಿಕೆಯಾಗಲಿ ಎಂಬುದು ನನ್ನ ಅಭಿಮತ.

ಕೆ. ಎಂ. ಪಂಚಾಕ್ಷರಯ್ಯ
'ಮಾನಸ ಕುಟೀರ' ಡೊ. ನಂ. ೧೯೬೫/೩೬ ಪಿ-೧
೩ನೇ ತಿರುವು, ವಿನಾಯಕ ಬಡಾವಣೆ, ವಿದ್ಯಾನಗರ, ದಾವಣಗೆರೆ - ೦೫

## ಕ್ರೀಡೆಯಲ್ಲಿ ರಾಜಕೀಯ ಹಸ್ತಕ್ಷೇಪ

ರಾಜಕೀಯ ಹಸ್ತಕ್ಷೇಪದಿಂದಾಗಿ, ಅನೇಕ ರೀತಿಯ ಸವಲತ್ತುಗಳು ಕ್ರೀಡಾಳುಗಳಿಗೆ ತಲುಪುತ್ತಿಲ್ಲ. ಪ್ರತಿಭಾವಂತ ಕ್ರೀಡಾಳುಗಳು ಅವಕಾಶದಿಂದ ವಂಚಿತರಾಗಿ, ನಿರಂಕುಶರಾಗಿ, ಆತ್ಮವಿಶ್ವಾಸದಿಂದ ವಂಚಿತರಾಗಿ ನಿಶ್ಯಕ್ತರಾಗಿದ್ದಾರೆ. ಇದು ದೇಶದ ಘನತೆ ಹಾಳುಮಾಡಿದೆ. ಕೇವಲ ವಕೀಲಿ ಮಾಡುವವರು, ರಾಜಕಾರಣಿಗಳ ಕೃಪಾಕಟಾಕ್ಷವಿರುವವರು, ಹಣವಿರುವವರು ಹಿಂಬಾಗಿಲಿನಿಂದ ಸ್ಥಾನ ಗಿಟ್ಟಿಸಿಕೊಳ್ಳುತ್ತಿದ್ದಾರೆ. ಬಡಬಗ್ಗರು ಕ್ರೀಡಾಪಟುಗಳಾಗುವ ಕನಸು ಕಾಣುವುದನ್ನೇ ನಿಲ್ಲಿಸಿದ್ದಾರೆ. ರಾಜಕೀಯ ಪ್ರವೇಶದಿಂದಾಗಿಯೇ ಇಂದು ಒಲಂಪಿಕ್ಸ್ ಕ್ರೀಡೆಯಲ್ಲಿ ನಮ್ಮ ದೇಶದ ಮಾನ ಹರಾಜು ಆಗಿರುವುದು. ರಾಥೋಡ್ ಒಬ್ಬರು ವಿಜೇತರಾಗದಿದ್ದರೆ ಭಾರತಕ್ಕೆ ಜಾಗವೇ ಇರಲಿಲ್ಲ. ಇದೇ ರೀತಿ ಕ್ರೀಡೆಯಲ್ಲಿ ಹಸ್ತಕ್ಷೇಪ ಮುಂದುವರೆಯುತ್ತಾ ಹೋದರೆ ಅವಕಾಶ ವಂಚಿತರಾದ ಅನೇಕ ಪ್ರತಿಭಾವಂತ ಹಳ್ಳಿಯ ಯುವ ಕ್ರೀಡಾಳುಗಳುಳ್ಳ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಬಹುಸಂಖ್ಯೆಯಲ್ಲಿ ಹಳ್ಳಿ ಕ್ರೀಡಾಳುಗಳೇ ಅವಕಾಶ ವಂಚಿತರಾಗುತ್ತಿದ್ದಾರೆ. ಇದಕ್ಕೆ ಅನೇಕ ಕಾರಣಗಳಿವೆ. ಅವುಗಳೆಂದರೆ :

- ಗ್ರಾಮೀಣ ಪ್ರದೇಶದಲ್ಲಿ ಕ್ರೀಡೆಯ ಬಗ್ಗೆ ಹೆಚ್ಚಿನ ಮಾಹಿತಿ ನೀಡುವ ಯಾವುದೇ ವಿಧವಾದ ಮಾಧ್ಯಮಗಳಿಲ್ಲ. ಅನಕ್ಷರಸ್ಥ ತಂದೆ-ತಾಯಿಗಳಿರುವುದು ಮತ್ತು ಶಿಕ್ಷಕರಲ್ಲಿ ಇತ್ತೀಚೆಗೆ ಅರ್ಪಣಾಮನೋಭಾವ ಕಡಿಮೆಯಾಗಿರುವುದು ಸಹ ಒಂದು ಕಾರಣ.
- ಯುವ ಕ್ರೀಡಾಳುಗಳು ದುಶ್ಚಟಕ್ಕೆ ಬಲಿಯಾಗುತ್ತಿರುವುದು; ಜೀವನದಲ್ಲಿ ಶಿಸ್ತು ಕಡಿಮೆಯಾಗುತ್ತಿರುವುದು.
- ಕ್ರೀಡೆಗೆ ಸಂಬಂಧಪಟ್ಟಂತೆ ಯುವಕರಲ್ಲಿ ಉತ್ಸಾಹ ತುಂಬುವಂತಹ ಹಿರಿಯರ ಕೊರತೆ. ಜೊತೆಗೆ ಮೈದಾನದ ಕೊರತೆ, ಉಪಕರಣಗಳ ಕೊರತೆ.

ಸರ್ಕಾರವು ಕ್ರೀಡಾ ಇಲಾಖೆಯಲ್ಲಿ ಭ್ರಷ್ಟತೆಯನ್ನು ತಡೆಗಟ್ಟಲು ವಿಫಲವಾಗಿದೆ. ಅದಕ್ಕಿಂತ ಕೆಟ್ಟದೆಂದರೆ, ಹಳ್ಳಿಯಲ್ಲಿನ ಯುವ ಕ್ರೀಡಾಳುಗಳಲ್ಲಿ ಕೀಳರಿಮೆ ಜಾಸ್ತಿಯಾಗಿದೆ. ಹಳ್ಳಿ ಯುವ ಕ್ರೀಡಾಳುಗಳಲ್ಲಿ ಮುಖ್ಯವಾಗಿ ಆರ್ಥಿಕ ಸಮಸ್ಯೆ ಎದ್ದು ಕಾಣುತ್ತದೆ. ಈ ರೀತಿಯಾಗಿ ಹಳ್ಳಿ ಯುವ ಕ್ರೀಡಾಳುಗಳು ಅವಕಾಶದಿಂದ ವಂಚಿತರಾಗುತ್ತಿದ್ದಾರೆ. ಇದಕ್ಕೆಲ್ಲಾ ಪರಿಹಾರವೆಂದರೆ, ಹಳ್ಳಿಗಳಲ್ಲಿ ಮೂಲಸೌಕರ್ಯವನ್ನು ಒದಗಿಸಬೇಕು, ಯುವ ಕ್ರೀಡಾಳುಗಳಲ್ಲಿ ಕೀಳರಿಮೆಯನ್ನು ನಿವಾರಿಸಬೇಕು. ಹಳ್ಳಿ ಯುವ ಕ್ರೀಡಾಳುಗಳಿಗೆ ಆರ್ಥಿಕ ಸಹಾಯ ನೀಡಬೇಕು, ದೈಹಿಕ ಶಿಕ್ಷಕರನ್ನು ನೇಮಿಸಬೇಕು, ಮೈದಾನಗಳನ್ನು ಹಾಗೂ ಉಪಕರಣಗಳನ್ನು ಸಜ್ಜುಗೊಳಿಸಬೇಕು. ಈ ರೀತಿಯಲ್ಲಿ ಸರ್ಕಾರ ಸ್ಪಂದಿಸಿದರೆ ಅವಕಾಶದಿಂದ ವಂಚಿತರಾಗುವ ಪ್ರತಿಭಾನ್ವಿತ ಕ್ರೀಡಾಳುಗಳನ್ನು ಕ್ರಮೇಣ ಕಡಿಮೆ ಮಾಡಬಹುದು.

ಶಿವರಾಮ. ಎಂ. ಎನ್, ಮಿಡಿಗೇಶಿ, ಮಧುಗಿರಿ ತಾಲ್ಲೂಕು
ತುಮಕೂರು ಜಿಲ್ಲೆ - ೫೭೨ ೧೩೩

## ನವಕರ್ನಾಟಕ ಪ್ರಕಾಶನದ ಕೆಲವು ಪ್ರಶಸ್ತಿ ಪುರಸ್ಕೃತ ಕೃತಿಗಳು

ಕೀಟಗಳು (ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1999) — ಪತ್ತ ಡಾ|| ಪಿ. ಶಿವರಾಮ ರೈ — 18.00

ಕಂದಾ ಒದುವೆಯಾ – ಭಾಗ 1 (ಸಚಿತ್ರ. 3ನೇ ಮುದ್ರಣ) — ಬಿ. ಕೆ. ತಿರುಮಲಮ್ಮ — 18.00
(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1995)

ಯಶವಂತನ ಯಶೋಗೀತ (ಮಕ್ಕಳ ಕಾದಂಬರಿ)
(ಕನ್ನಡ ಸಾಹಿತ್ಯ ಪರಿಷತ್ತಿನ 'ಸಿಸು ಸಂಗಮೇಶ' ಪ್ರಶಸ್ತಿ 2002. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 2002) — ಆರ್. ವಿ. ಭಂಡಾರಿ — 50.00

ಬದುಕುವ ಬಯಕೆ (ಎನ್.ಸಿ.ಇ.ಆರ್.ಟಿ. ರಾಷ್ಟ್ರೀಯ ಪ್ರಶಸ್ತಿ 1976) — ದು. ನಿಂ. ಬೆಳಗಲಿ — 12.00

ಜಾದೂಪಕ್ಷಿ (2ನೇ ಮುದ್ರಣ) — ದು. ನಿಂ. ಬೆಳಗಲಿ — 10.00
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1994)

ಸುಖ ನೀಡದ ಸಂಪತ್ತು (2ನೇ ಮು.) (ಕನ್ನಡ ಸಾಹಿತ್ಯ ಪರಿಷತ್ತಿನ 'ಮಕ್ಕಳ ಪುಸ್ತಕ ಪ್ರಶಸ್ತಿ' 1999) — ಪ. ರಾಮಕೃಷ್ಣ ಶಾಸ್ತ್ರಿ — 15.00

ಕುಂಭಕರ್ಣನ ನಿದ್ದೆ — ಎನ್. ಶ್ರೀನಿವಾಸ ಉಡುಪ — 12.00
(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1996-97, ಕರ್ನಾಟಕ ಸಾಹಿತ್ಯ ಅಕಾಡೆಮಿ ಶಿಶುಸಾಹಿತ್ಯ ಬಹುಮಾನ 1996)

ಚಕ್ರ (ಜನಪ್ರಿಯ ವಿಜ್ಞಾನ ಲೇಖನಗಳು. 3ನೇ ಮು.)(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1996) — ಜೆ. ಆರ್. ಲಕ್ಷ್ಮಣ ರಾವ್ — 50.00

ಪ್ರತಿಬಿಂಬ (ಮಕ್ಕಳಿಗಾಗಿ ಮನೋರಂಜಕ ವೈಜ್ಞಾನಿಕ ಚಟುವಟಿಕೆಗಳು) — ಪ್ರೊ|| ಡಿ. ಆರ್. ಬಳೂರಗಿ — 35.00
(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 2000)

ಸೃಜನಶೀಲ ಸಂಶೋಧಕ ಚಿಂತಕ – ಲೂಯಿ ಪಾಶ್ಚರ್ (3ನೇ ಮುದ್ರಣ)
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996) — ತುಮಕೂರು ನಾಗಭೂಷಣ — 28.00

ವಿಶ್ವವಿಖ್ಯಾತ ಸಂಶೋಧಕರು – ಸಾಧನೆಗಳು (7ನೇ ಮುದ್ರಣ)
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1991-92) — ಸೂರ್ಯಕಾಂತ — 40.00

ತೆಂಗು. ಸಸ್ಯ-ಸಂರಕ್ಷಣೆ (2ನೇ ಮು.) (ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಪ್ರಶಸ್ತಿ) — ಬಿ. ಮಹಂತೇಶ್ — 50.00

ಬಳ್ಳಿ ತರಕಾರಿಗಳು (5ನೇ ಮುದ್ರಣ) — ಡಾ|| ಪಿ. ನಾರಾಯಣಸ್ವಾಮಿ, ಡಾ|| ಎಲ್. ವಸಂತ — 25.00
(ಧಾರವಾಡ ಕೃಷಿ ವಿ.ವಿ. ಕನ್ನಡ ಸಂಘದ ಪಂಚವಾರ್ಷಿಕ 'ಕೃಷಿ ಸಾಹಿತ್ಯ ಶ್ರೀ' ಪ್ರಶಸ್ತಿ 1994-99)

ಕಾಯಿಲೆಯ ಕಾರಣಗಳು. ನಿಮ್ಮ ನಂಬಿಕೆ ಎಷ್ಟು ಸರಿ ? (2ನೇ ಮು.) — ಡಾ|| ಸಿ. ಆರ್. ಚಂದ್ರಶೇಖರ್ — 50.00
(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯ ಸಾಹಿತ್ಯ ಪ್ರಶಸ್ತಿ' 1998-99)

ಕ್ಯಾನ್ಸರ್ ಲೋಕ (2ನೇ ಮು.) (ಕನ್ನಡ ವೈದ್ಯ ಸಾಹಿತ್ಯ ಪರಿಷತ್ತಿನ 'ಕುವೆಂಪು ಪ್ರಶಸ್ತಿ' 1997) — ಡಾ|| ಎಚ್. ಡಿ. ಚಂದ್ರಪ್ಪ ಗೌಡ — 65.00

ಗಿಡಮೂಲಿಕೆಗಳಿಂದ ಸೌಂದರ್ಯ ಸಾಧನಗಳು (6ನೇ ಮುದ್ರಣ) — ಡಾ|| ಎಲ್. ವಸಂತ — 25.00
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸಕ್ಕಾಗಿ ಪ್ರಶಸ್ತಿ' 1994)

ಶ್ರೀಸಾಮಾನ್ಯ ಮತ್ತು ವೈದ್ಯ — ಡಾ|| ಸ. ಜ. ನಾಗಲೋಟಿಮಠ — 18.00
(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998; ಕನ್ನಡ ವೈದ್ಯಸಾಹಿತ್ಯ ಪರಿಷತ್ತಿನ 'ಕುವೆಂಪು ಪ್ರಶಸ್ತಿ' 1998)

ಆಪ್ತ ಸಲಹೆ ಸಮಾಧಾನ (4ನೇ ಮುದ್ರಣ) — ಡಾ|| ಸಿ. ಆರ್. ಚಂದ್ರಶೇಖರ್ — 35.00
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996)

ಮಡದಿ ಮತ್ತೊಬ್ಬ ಚೆಲುವಗೆ (ಈ ವರ್ತನೆಗಳು ನಿಮ್ಮಲ್ಲಿ ಎಷ್ಟಿವೆ ? ಭಾಗ - 2) — ಡಾ|| ಮೀನಗುಂಡಿ ಸುಬ್ರಮಣ್ಯ — 50.00
(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ವಿಶೇಷ ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2002)

ಮಾನಸಿಕ ಸಮಸ್ಯೆಗಳಿಗೆ 'ಮನಸ್ಸು' ಇಲ್ಲದ ಮಾರ್ಗ (5ನೇ ಮುದ್ರಣ) — ಡಾ|| ಮೀನಗುಂಡಿ ಸುಬ್ರಮಣ್ಯ — 160.00
(ವರ್ಧಮಾನ ಪ್ರಶಸ್ತಿ 1993)

ಲೈಂಗಿಕ ಆರೋಗ್ಯ (2ನೇ ಮುದ್ರಣ) — ಡಾ|| ಪದ್ಮಿನಿ ಪ್ರಸಾದ್ — 60.00
(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2003-04)

ನೀವು ಬಳಸುವ ಔಷಧಗಳು (3ನೇ ಮುದ್ರಣ)
(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2000) — ಡಾ|| ಸಿ. ಆರ್. ಚಂದ್ರಶೇಖರ್ — 75.00

ಹಿತ-ಅಹಿತ. ವೃತ್ತಿ ಜೀವನದ 25 ವರ್ಷಗಳು — ಡಾ|| ಸಿ. ಆರ್. ಚಂದ್ರಶೇಖರ್ — 125.00
(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಹಾ.ಮಾ.ನಾ. ಪ್ರಶಸ್ತಿ' 2002)

ನನಗೆ 'ಬೈ-ಪಾಸ್' ಆಯಿತು (ಸ್ವಾನುಭವದ ಕಥನ) — ಡಾ|| ಎಚ್. ಡಿ. ಚಂದ್ರಪ್ಪ ಗೌಡ — 65.00
(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2002)

ವೈದ್ಯಲೋಕದ ಕೌತುಕಗಳು (3ನೇ ಮುದ್ರಣ)
(ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ 1993) — ಡಾ|| ಎಚ್. ಡಿ. ಚಂದ್ರಪ್ಪ ಗೌಡ — 50.00

ಮನೋರೋಗ ಗೆಲ್ಲಬಹುದೇ ? (2ನೇ ಮುದ್ರಣ)
(ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ 1996; ಕರ್ನಾಟಕ ಲೇಖಕಿಯರ ಪರಿಷತ್ತಿನ ಪ್ರಶಸ್ತಿ 1996) — ಸ್ನೇಹಾ — 75.00

ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ (4 ಸಂಪುಟಗಳ ಸೆಟ್. 2ನೇ ಮುದ್ರಣ)
(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1998-99)
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1998-99) — (ಪ್ರ. ಸಂ.: ಎಂ. ಎ. ಸೇತುರಾವ್, ಕೆ. ಎಲ್. ಗೋಪಾಲಕೃಷ್ಣ ರಾವ್) — 1800.00

ಫಲಜ್ಯೋತಿಷ ನಂಬುವಿರಾ ? (2ನೇ ಮುದ್ರಣ)
(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ।। ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 2001) ಡಾ।। ಎಸ್. ಬಾಲಚಂದ್ರರಾವ್ 40.00

ಸಂಪ್ರದಾಯ, ವಿಜ್ಞಾನ ಮತ್ತು ಸಮಾಜ (5ನೇ ಮುದ್ರಣ)
(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ।। ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1988-89) ಡಾ।। ಎಸ್. ಬಾಲಚಂದ್ರರಾವ್ 28.00

ವೈಜ್ಞಾನಿಕ ಮನೋಧರ್ಮ (6ನೇ ಮುದ್ರಣ) ಜಿ. ಟಿ. ನಾರಾಯಣ ರಾವ್ 80.00
(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪುರಸ್ಕಾರ 1990, ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ।। ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1992)

ಭಗವದ್ಗೀತೆ. ಒಂದು ವೈಚಾರಿಕ ಒಳನೋಟ (2ನೇ ಮುದ್ರಣ)
(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ।। ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1997) ಪ್ರೊ।। ಬಿ. ವಿ. ವೀರಭದ್ರಪ್ಪ 50.00

ಮಹಿಳೆ – ಬಿಡುಗಡೆಯ ಹಾದಿಯಲ್ಲಿ (3ನೇ ಮುದ್ರಣ)
(ಬಿ.ಎಂ.ಶ್ರೀ. ಪ್ರತಿಷ್ಠಾನದ 'ಸಾವಿತ್ರಮ್ಮ ದತ್ತಿನಿಧಿ' ಪ್ರಶಸ್ತಿ 1992) ಎನ್. ಗಾಯತ್ರಿ 55.00

ಇದು ಮುಗಿಯದ ಕಥೆ (2ನೇ ಮುದ್ರಣ)
(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998) ದೇವಿಪ್ರಸಾದ್ ಚಟ್ಟೋಪಾಧ್ಯಾಯ 60.00

ಭಾರತೀಯ ದರ್ಶನಗಳು (2ನೇ ಮುದ್ರಣ) ದೇವಿಪ್ರಸಾದ್ ಚಟ್ಟೋಪಾಧ್ಯಾಯ 80.00
(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1994)

ಜಾಗತೀಕರಣ. ದಕ್ಷಿಣದ ದೃಷ್ಟಿಯಲ್ಲಿ (ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 2002) ಮ. ಮಹೇಶನ್ 95.00

ಕರ್ನಾಟಕ ಏಕೀಕರಣ ಇತಿಹಾಸ
(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1997) ಡಾ।। ಎಚ್. ಎಸ್. ಗೋಪಾಲ ರಾವ್ 200.00

ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು (ರಾಷ್ಟ್ರೀಯ ಚಳುವಳಿಯ ಸಮಗ್ರ ಪರಿಚಯ; 3ನೇ ಮುದ್ರಣ)
(ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪುರಸ್ಕಾರ 1991) ಎನ್. ಪಿ. ಶಂಕರನಾರಾಯಣ ರಾವ್ 140.00

ಪ್ರಾಚೀನ ಭಾರತ (3ನೇ ಮುದ್ರಣ) ಪ್ರೊ।। ಆರ್. ಎಸ್. ಶರ್ಮ
(ಉತ್ತಮ ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998) (ಅನು : ಎನ್. ಪಿ. ಶಂಕರನಾರಾಯಣ ರಾವ್) 160.00
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1998)

ಫ್ರೆಡರಿಕ್ ಎಂಗೆಲ್ಸ್: ಜೀವನ-ಚಿಂತನ (ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ 1987) ಬಿ. ವಿ. ಕಕ್ಕಿಲ್ಲಾಯ 25.00

ಕಲಾವಿದ ಹೆಬ್ಬಾರರ ರೇಖಾಲಾವಣ್ಯ
(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1999) ವ್ಯಾಸರಾಯ ಬಲ್ಲಾಳ 80.00

ಬೇಡಿ ಕಳಚಿತು ದೇಶ ಒಡೆಯಿತು (ಭಾರತ ಸ್ವಾತಂತ್ರ್ಯ ಸಂಗ್ರಾಮ ಕುರಿತ ರೋಮಾಂಚನಕಾರಿ ಬೃಹತ್ ಕಾದಂಬರಿ)
(ಉಗ್ರಾಣ ಪ್ರಶಸ್ತಿ 2003) ಕೋ. ಚೆನ್ನಬಸಪ್ಪ 600.00

ದಂಗೆ (ಕನ್ನಡ ಲೇಖಕಿಯರ ಪರಿಷತ್ತಿನ ಪ್ರಶಸ್ತಿ 1997)
(ಕನ್ನಡ ಸಾಹಿತ್ಯ ಪರಿಷತ್ತಿನ 'ಕೆ. ಎಸ್. ಭಾರತಿ ರಾಜಾರಾಮ ಮಧ್ಯಸ್ಥ ದತ್ತಿನಿಧಿ' ಪ್ರಶಸ್ತಿ 1997) ಗೀತಾ ನಾಗಭೂಷಣ 65.00

ಬದಿ (ಕನ್ನಡ ಲೇಖಕಿಯರ ಪರಿಷತ್ತಿನ ಪ್ರಶಸ್ತಿ 1997) ಇಂದಿರಾ ಹೆಗ್ಗಡೆ 50.00

ಮಯ್ಯಾದಾಸನ ವಾಡೆ ಹಿಂದಿ ಮೂಲ : ಭೀಷ್ಮ ಸಾಹನಿ 160.00
(ಕನ್ನಡ ಸಾಹಿತ್ಯ ಪರಿಷತ್ತಿನ 'ಶ್ರೀ ಆರ್. ಎನ್. ಹಬ್ಬು ದತ್ತಿನಿಧಿ ಪ್ರಶಸ್ತಿ 2003) (ಅನು: ದು. ನಿಂ ಬೆಳಗಲಿ)

ತಮಸ್ (3ನೇ ಮುದ್ರಣ) (ಮೂಲ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1975) ಹಿಂದಿ ಮೂಲ : ಭೀಷ್ಮ ಸಾಹನಿ 110.00

ಅಲೀಮಾ ಅಕ್ಷರ ಕಲಿತದ್ದು
(ಮುಸ್ಲಿಂ ಲೇಖಕರ ಸಂಘ ಮತ್ತು ಬ್ಲಡ್ ಬಯೋಮ್ ಬ್ಯಾಂಕಿಂಗ್ ಟ್ರಸ್ಟ್ ಪ್ರಶಸ್ತಿ 2001) ಫಕ್ರುದ್ದೀನ್ ಇರುವೈಲ್ 55.00

ಅಕ್ರಮ ಸಂತಾನ (2ನೇ ಮುದ್ರಣ) ಮರಾಠಿ ಮೂಲ : ಶರಣಕುಮಾರ ಲಿಂಬಾಳೆ 50.00
(ಅನುವಾದಕ್ಕಾಗಿ ಉಮಾಪತಿ ಚುಕ್ಕಿ ಪ್ರತಿಷ್ಠಾನದ ಪ್ರಶಸ್ತಿ 1993) (ಅನು: ದು. ನಿಂ ಬೆಳಗಲಿ)

ಕುಣಿಯೇ ಘುಮಾ ಮರಾಠಿ ಮೂಲ : ಮಾಧವಿ ದೇಸಾಯಿ 55.00
(ದಿ. ಶ್ರೀದೇವಿ ದಾಸಪ್ಪ ಶಾನಭಾಗ ಅನುವಾದ ದತ್ತಿ ಪ್ರಶಸ್ತಿ 1999) (ಅನು: ಚಂದ್ರಕಾಂತ ಪೋಕಳೆ)

ಉಚಲ್ಯಾ (2ನೇ ಮು.) (ಮೂಲ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1980) ಮರಾಠಿ : ಲಕ್ಷ್ಮಣ ಗಾಯಕವಾಡ 45.00

ಮುಂಬೈ ಡೈರಿ (ಕನ್ನಡ ಸಾಹಿತ್ಯ ಪರಿಷತ್ತಿನ ಅಂತರರಾಷ್ಟ್ರೀಯ ಮಹಿಳಾ ವರ್ಷ ಪ್ರಶಸ್ತಿ 2002) ಉಮಾ ರಾವ್ 60.00

ಅಂಡಮಾನ್ ಕನಸು (2ನೇ ಮು.)(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ 2002) ಡಾ।। ರಹಮತ್ ತರೀಕೆರೆ 60.00

ಹೊಕ್ಕಳಲ್ಲಿ ಹೂವಿದೆ (2ನೇ ಮುದ್ರಣ) ರಂಜಾನ್ ದರ್ಗಾ 25.00
(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996)

'ಹೊಸತು' ಮೂರು ವರ್ಷದ ಚಂದಾದಾರರಿಗೆ ನವಕರ್ನಾಟಕ ಪ್ರಕಟಣೆಗಳ ಮೇಲೆ ಶೇ. ೨೦ರ ವಿಶೇಷ ರಿಯಾಯಿತಿ


**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ 5159, ಬೆಂಗಳೂರು - 560 001
ದೂರವಾಣಿ/ಫ್ಯಾಕ್ಸ್: 22203580/81/82 e-mail: nkp@bgl.vsnl.net.in

— ಶಾಖೆಗಳು —
ಬೆಂಗಳೂರು ✆ 080-22251382 ○ ಮೈಸೂರು ✆ 0821-2424094
ಮಂಗಳೂರು ✆ 0824-2441016 ○ ಗುಲ್ಬರ್ಗಾ ✆ 08472-224302

## ವಿಶೇಷಾಂಕದ ಜಾಹಿರಾತುದಾರರು

